

ಆಳಿದ ಮಹಾಸ್ವಾಮಿಯವರಾದ ಶ್ರೀಮನ್ಮಹಾರಾಜ ಶ್ರೀಮನ್ನಾಲ್ವಡಿ
ಶ್ರೀಕೃಷ್ಣರಾಜೇಂದ್ರ ಒಡೆಯರವರು

# ಆಳಿದ ಮಹಾಸ್ವಾಮಿಯವರು

**ದಿವಂಗತರಾದ ಶ್ರೀಮನ್ಮಹಾರಾಜ**

**ಶ್ರೀಮನ್ನಾಲ್ವಡಿ ಶ್ರೀ ಕೃಷ್ಣರಾಜೇಂದ್ರ ಒಡೆಯರವರ**

**ಜೀವನ ಚರಿತ್ರೆ**


ಲೇಖಕ:

ಸಿ. ಕೆ. ವೆಂಕಟರಾಮಯ್ಯ, ಎಂ.ಎ., ಎಲ್‌ಎಲ್.ಬಿ.



ಬೆಂಗಳೂರು ಪ್ರೆಸ್

ಮೈಸೂರು ರೋಡ್, ಬೆಂಗಳೂರು ಸಿಟಿ

೧೯೪೧

ಮೈಸೂರು ಸಂಸ್ಥಾನದ

ಶ್ರೀಮನ್ಮಹಾರಾಜರವರಾದ

## ಶ್ರೀ ಜಯಚಾಮರಾಜೇಂದ್ರ

## ಒಡೆಯರ್ ಬಹದ್ದೂರ್

ಮಹಾಸ್ವಾಮಿಯವರ ಮಹಾಸನ್ನಿಧಾನದಲ್ಲಿ

ಮಹಾಪ್ರಭುಗಳವರ ಅನುಮತಿಯನ್ನು ಪಡೆದು

ಗ್ರಂಥಕರ್ತನು ವಿನಯನಮ್ರನಾಗಿ

ರಾಜಭಕ್ತಿ ವಿಶ್ವಾಸಗಳಿಂದ

ಸಮರ್ಪಿಸಿದ

## ಮೊಸಲು ಕಾಣಿಕೆ

## FOREWORD

IN the following pages of his book, Mr. C. K. Venkataramiah, a gifted scholar in Kannada and Sanskrit, has attempted a biographical memoir of His Highness Sri Krishnaraja Wadiyar, Maharaja of Mysore, who after a most successful and eventful reign for nearly four decades, passed away in August last. I feel that it is a great privilege to write a Foreword to this book.

Our late Sovereign was a Ruler of exceptional character and capacity, who, by his wise, progressive and benevolent reign and his unfaltering devotion to the good of his State, had conquered the hearts of his people and won the esteem and regard not only of his own countrymen in India but even of those across the seas. The death of few Rulers has caused such deep and universal sorrow among the people of their States as the passing of His late Highness.

In the annals of modern kingship there are to be found few instances of a Prince who was so genuinely loved and respected by the people during his life-time as His late Highness was, and so universally mourned and missed when he was gone. In regard to fewer Rulers, perhaps, could one venture to prophesy, as one can safely do in the case of the late Maharaja of Mysore, that the results of their constructive statesmanship will endure to posterity and that the memory of their kindly human deeds will linger through the corridor of time.

Of the statesmanship, the personality and the numerous acts of benevolence of His late Highness, Mr. Venkataramiah has written with a rare felicity and

B F

brilliance. It is altogether an eminently readable and a very worthy biography of our noble Ruler which he has produced. Mr. Venkataramiah has brought to bear upon his task literary gifts of a very high order. He is the master of a style and diction which have won for him a place of honour among contemporary Kannada men of letters. Above all, he possesses, in a more than adequate degree, the quality of true admiration for the subject and the element of deep understanding, without which a really successful biography is hardly ever written.

It has been truly said that the greatest monument to our great Maharaja is the very State which he has left behind him. In every phase of Mysore's activity to-day and in the history of the growth and development of every branch of the Administration is revealed the quiet, conscientious working of the mind of a Ruler who was incessantly thinking of the welfare of the millions whom Providence had entrusted to his care and who was inspired by a constant and unwearying endeavour to promote their highest good. Mr. Venkataramiah may well feel gratified that he has produced a biography of intense and abiding human interest. His book can be read for the sheer delight of a brilliant study, but it is also of special value as affording an intimate glimpse into the life of a great man and his real personality.

And not the least of the merits of this biography is the wealth of authentic anecdotes which the author has, through his personal contact with His late Highness, been able to bring together to illustrate what has often been said in regard to him—that he was verily " a Prince among men and a man among Princes ". In a word,

Mr. Venkataramiah has given us a living and vivid picture of our late Ruler.

It is superfluous for me to commend to the public a work of this kind. For the subject constitutes its own recommendation. The appeal of a true biography of His late Highness is bound to be as wide as the respect and admiration which he inspired when he was alive, and in the case of this book one can confidently say that it will be warmly welcomed and read in all parts where Kannada is understood and appreciated. By reason of its literary excellence and of the greatness of the hero of the biography the success of Mr. Venkataramiah's effort is doubly assured.

BANGALORE
18*th April* 1941

MIRZA M. ISMAIL
*Dewan of Mysore*

# ಪೀಠಿಕೆ

ಆಳಿದ ಮಹಾಸ್ವಾಮಿಯವರಾದ **ಶ್ರೀಮನ್ಮಹಾರಾಜ ಶ್ರೀಮನ್ನಾಲ್ವಡಿ ಶ್ರೀಕೃಷ್ಣರಾಜೇಂದ್ರ ಒಡೆಯರವರ** ಜೀವನ ಚರಿತ್ರೆಯನ್ನು ಬರೆಯಬೇಕೆಂಬ ಅಭಿಲಾಷೆಯಿಂದ ನಾನು ಈಗ್ಗೆ ಮೂರು ವರ್ಷಗಳ ಹಿಂದೆ ಅದಕ್ಕಾಗಿ ಅನುಮತಿಯಾಗಬೇಕೆಂದು ಮಹಾಪ್ರಭುಗಳವರನ್ನು ಪ್ರಾರ್ಥಿಸಿದೆ. ಆಳಿದ ಮಹಾಸ್ವಾಮಿಯವರು ಕೃಪೆಮಾಡಿ ಅನುಮತಿಯನ್ನು ದಯಪಾಲಿಸಿದರು. ಅವರ ಚರಿತ್ರೆಯನ್ನು ವಿಶದವಾಗಿ ಬರೆಯಬೇಕೆಂಬ ಆಶೆಯಿಂದಲೂ ಉತ್ಸಾಹದಿಂದಲೂ ಗ್ರಂಥರಚನೆಗಾಗಿ ದೀರ್ಘಕಾಲ ವಿಷಯವನ್ನು ಸಂಗ್ರಹಿಸಿದೆ. ದಿವಂಗತರಾದ **ಶ್ರೀಮದ್ಯುವರಾಜ ಶ್ರೀ ಕಂಠೀರವ ನರಸಿಂಹರಾಜ ಒಡೆಯರವರ** ಜೀವನಕ್ಕೆ ಸಂಬಂಧಪಟ್ಟ ಹಲವು ಸಂಗತಿಗಳನ್ನೂ ಗ್ರಂಥದಲ್ಲಿ ಸೇರಿಸಲು ಅವರಿಂದಲೂ ಅನುಮತಿಯನ್ನು ಪ್ರಾರ್ಥಿಸಿದೆ; ಅವರೂ ಕೃಪೆಮಾಡಿ ಅನುಮತಿಯನ್ನು ದಯಪಾಲಿಸಿದರು. ದಿವಂಗತರಾದ ಮಹಾಸ್ವಾಮಿಗಳವರಿಬ್ಬರೂ ಜೀವಂತರಾಗಿದ್ದಾಗಲೇ ಈ ಗ್ರಂಥವನ್ನು ಪ್ರಕಟಿಸಿ ಅವರ ಸನ್ನಿಧಿಯಲ್ಲಿ ಸಮರ್ಪಿಸುವ ಸುಯೋಗವು ನನಗೆ ಲಭಿಸದೆ ಹೋಯಿತಲ್ಲಾ—ಎಂದು ನನ್ನ ಮನಸ್ಸಿಗೆ ಅತ್ಯಂತ ವಿಷಾದವುಂಟಾಗಿದೆ.

ಆಳಿದ ಮಹಾಸ್ವಾಮಿಯವರದು ಬಹಳ ದೊಡ್ಡ ಚೇತನ; ಪರಮ ಸಾತ್ವಿಕವಾದ ಋಷಿಜೀವನ. ವರ್ಣನೆಯ ಹವ್ಯಾಸವನ್ನೇ ಬಿಟ್ಟು, ಅವರ ಜೀವಮಾನದಲ್ಲಿ ನಡೆದ ಘಟನೆಗಳನ್ನು ಮಾತ್ರವೇ ಬರೆದರೂ ಅವರ ಜೀವನ ಚರಿತ್ರೆಯು ಹಲವು ಸಂಪುಟಗಳಲ್ಲಿ ಪೂರೈಸಬೇಕಾಗುವ ಬಹಳ ದೊಡ್ಡ ಗ್ರಂಥವಾಗುತ್ತದೆ. ಸಾಮಾನ್ಯವಾಗಿ ನಮ್ಮ ಸಂಸ್ಥಾನದ ಪ್ರಜೆಗಳಾಗಲಿ ಅಥವಾ ಹೊರಗಿನವರಾಗಲಿ, ಅವರ ರಾಜ್ಯಭಾರ ಕೌಶಲ್ಯವನ್ನು ಮಾತ್ರವೇ ಬಲ್ಲರು. ಮೂವತ್ತೆಂಟು ವರ್ಷಗಳ ಕಾಲದ ಅವರ ಆದರ್ಶ ರಾಜ್ಯಭಾರದಲ್ಲಿ ಮೈಸೂರು ಸಂಸ್ಥಾನವು ಎಷ್ಟು ಮಟ್ಟಿಗೆ ಪ್ರಗತಿ ಹೊಂದಿ ಎಷ್ಟು ಮಟ್ಟಿಗೆ ಅಭಿವೃದ್ಧಿಸ್ಥಿತಿಗೆ ಬಂದಿದೆಯೆಂಬುದು ಜಗತ್ಪ್ರಸಿದ್ಧವಾಗಿರುವ ಹೆಮ್ಮೆಯ ಸಂಗತಿ. ಇದೇನೊ ಬಹು ಮುಖ್ಯವಾದುದು. ಆದಾಗ್ಗೂ ಇದನ್ನು ಬಿಟ್ಟರೂ ಸಹ, ಆಳಿದ ಮಹಾಸ್ವಾಮಿಯವರದು ಬಲು ದೊಡ್ಡ ಬದುಕು; ಅವರದು, ವೈಸ್ರಾಯಿಯವರಾದ ಲಾರ್ಡ್ ಲಿನ್‌ಲಿತ್ಗೋ ಅವರು (೧೯೪೧ನೆಯ ಇಸವಿ ಮಾರ್ಚಿ ೧೭ನೆಯ ತಾರೀಖಿನ ದಿನದ) ತಮ್ಮ ಭಾಷಣದಲ್ಲಿ ಸೂಚಿಸಿದಂತೆ ಜೀವನದ ಯಾವ ಕಾರ್ಯ

ಕ್ಷೇತ್ರದಲ್ಲಾದರೂ ಅಪ್ರತಿಮರೆನಿಸಿ ಅದನ್ನು ಬೆಳಗಬಲ್ಲಂತಿದ್ದ ಅದ್ಭುತ ಸಾಮರ್ಥ್ಯ. ಅವರು ಹೇಗೆ ನಾನಾ ಸದ್ಗುಣಗಳ ನೆಲೆಯಾಗಿದ್ದರು, ಅವರ ಚೇತನದ ಸಂಸ್ಕಾರ ಸಂಸ್ಕೃತಿಗಳೆಷ್ಟು, ಅವರ ಪ್ರತಿಭೆ ಪಾಂಡಿತ್ಯಗಳೆಷ್ಟು, ಅವರ ನಯವಿನಯಗಳ ಪರಿಪಾಟಿಯೆಂತಹದು — ಎಂಬೀ ಸಂಗತಿಗಳನ್ನು ನಮ್ಮ ಸಂಸ್ಥಾನದ ಪ್ರಜೆಗಳೇ ಅನೇಕರು ಅರಿಯರು.

ಮಹಾಪ್ರಭುಗಳವರು ತಮ್ಮ ತಂದೆಯವರನ್ನು ಕಳೆದುಕೊಂಡು ಪಟ್ಟಾಭಿಷಿಕ್ತರಾದಾಗ್ಗೆ ಅವರಿಗೆ ಇನ್ನೂ ಹತ್ತೇ ವರ್ಷ ವಯಸ್ಸು. ಮಹಾಮಾತೃಶ್ರೀ ವಾಣೀವಿಲಾಸ ಸನ್ನಿಧಾನದವರ ಮತ್ತು ಗುರುಹಿರಿಯರ ಬೋಧನೆಯನ್ನು ಗ್ರಹಿಸಿ ಆ ಎಳೆಯ ವಯಸ್ಸಿನಿಂದಲೇ ಅವರು ತಮ್ಮ ನಡೆನುಡಿಗಳನ್ನು ತಿದ್ದಿ ರೂಪಿಸಿಕೊಂಡು ಆದರ್ಶ ರೀತಿಯಲ್ಲಿ ಪ್ರಭುತ್ವ ಮಾಡಲು ತಕ್ಕಷ್ಟು ಸಾಮರ್ಥ್ಯವನ್ನು ಪಡೆಯಲು ಸರ್ವಪ್ರಯತ್ನವನ್ನೂ ಮಾಡಿದರು. ಆಗಿನಿಂದ ಎಂಟುವರ್ಷಗಳ ಅವಧಿಯಲ್ಲಿ ಒಂದು ಕ್ಷಣವನ್ನೂ ವ್ಯರ್ಥವಾಗಿ ಕಳೆಯದೆ ತಮ್ಮ ಜ್ಞಾನ ಭಂಡಾರವನ್ನು ವೃದ್ಧಿಪಡಿಸಿಕೊಂಡರು; ತಮ್ಮ ಶಕ್ತಿ ಸಾಮರ್ಥ್ಯವನ್ನು ಹೆಚ್ಚಿಸಿಕೊಂಡರು. ಬಾಲ್ಯ ವಯಸ್ಸಿನ ಅದೊಂದು ಸಾಧನೆಯೇ ಪ್ರಪಂಚಕ್ಕೆ ಆದರ್ಶದಂತಿದೆ. ಆಳಿದ ಮಹಾಸ್ವಾಮಿಯವರು ಪ್ರಾಪ್ತವಯಸ್ಕರಾಗಿ ರಾಜ್ಯಭಾರಸೂತ್ರಗಳನ್ನು ಸ್ವೀಕರಿಸಿದ ವೇಳೆಗೆ ಮೈಸೂರು ಸಂಸ್ಥಾನದ ಪ್ರಜೆಗಳ ಆಶೋತ್ತರಗಳೆಲ್ಲ ಅವರನ್ನು ಆಶ್ರಯಿಸಿದ್ದುವು. ಭಾರತೀಯರೆಲ್ಲರ ದೃಷ್ಟಿಯೂ ಅವರಲ್ಲಿ ಕೇಂದ್ರೀಭವಿಸಿದ್ದಿತೆಂದರೂ ಅತಿಶಯೋಕ್ತಿಯಲ್ಲ. ಆಗಿನ ಕಠಿನ ಸಮಯದಲ್ಲಿ ಮಹಾ ಪ್ರಭುಗಳವರು ತಾವು ಹೊತ್ತ ಗುರುತರವಾದ ಕರ್ತವ್ಯಗಳನ್ನು ತಮ್ಮ ಘನತೆ ಗೌರವಗಳಿಗೆ ತಕ್ಕಂತೆ ನೆರವೇರಿಸಿ ಸಾಧಿಸಿದರು.

ಆಳಿದ ಮಹಾಸ್ವಾಮಿಯವರಿಗೆ ತಮ್ಮ ಪ್ರಜೆಗಳನ್ನು ಕಂಡರೆ ಬಹಳ ಪ್ರೀತಿ. ಅದು ಬಹಳ ದೊಡ್ಡ ದೊಡ್ಡ ವಿಚಾರಗಳಿಂದ ಹಿಡಿದು ಕೇವಲ ಸಣ್ಣ ಸಣ್ಣ ವಿಚಾರಗಳಿಂದ ಕೂಡ ವ್ಯಕ್ತವಾಗುತ್ತಿದ್ದಿತು. ಒಂದುಸಲ ಅವರು ಶ್ರೀರಂಗಪಟ್ಟಣದ ದರಿಯಾಬಾಗ್ ತೋಟದಲ್ಲಿ ದಟ್ಟವಾಗಿ ಹೊರವಾಗಿ ಬೆಳೆದಿದ್ದ ಗುಲಾಬಿ ಗಿಡದಲ್ಲಿದ್ದ ದೊಡ್ಡದೊಂದು ಹೂವನ್ನು ದೃಷ್ಟಿಸಿ ನೋಡುತ್ತಿದ್ದು ಮುಂದೆ ದಯಮಾಡಿದರು. ದರೋಗರು ಆ ಹೂವನ್ನು ಕಿತ್ತುತಂದು ತಮಗೊಪ್ಪಿಸಿದಾಗ ಮಹಾಪ್ರಭುಗಳವರು, "ಹೀಗೆ ಮಾಡಬಹುದೆ? ಜನರೆಲ್ಲ ಬಂದು ನೋಡುತ್ತಿದ್ದುದು ತಪ್ಪಿ ಹೋಯಿತಲ್ಲಾ!" ಎಂದರು. ರಾಜಭಕ್ತಿ ವಿಶ್ವಾಸಗಳು ರಕ್ತಗತವಾಗಿ

ನಡೆದುಬಂದಿರುವ ಮೈಸೂರು ಸಂಸ್ಥಾನದ ಪ್ರಜೆಗಳು ಮಹಾಪ್ರಭುಗಳವರಲ್ಲಿ ಅತ್ಯಂತ ಹೆಚ್ಚಿನ ಪ್ರೀತಿ ಭಕ್ತಿಗಳನ್ನು ತೋರಿಸುತ್ತಿದ್ದರು. ಮಹಾಪ್ರಭುಗಳವರು ತಮ್ಮ ಪ್ರಜೆಗಳಲ್ಲಿ ಪ್ರತಿಯೊಬ್ಬರ ಹೃದಯದಲ್ಲಿಯೂ ಅತ್ಯಂತ ಉನ್ನತವಾದ ಸ್ಥಾನವನ್ನು ಕಲ್ಪಿಸಿಕೊಂಡಿದ್ದರು. ಅವರ ಇಳಿವಯಸ್ಸಿನ ವೇಳೆಗೆ ಪ್ರಜೆಗಳ ಮನಸ್ಸಿನಲ್ಲಿ ಅವರು ಪ್ರಭುವೆಂಬ ಭಾವನೆಗಿಂತ ಹೆಚ್ಚಾಗಿ ತಮ್ಮ ತಂದೆಯೆಂಬ ಭಾವನೆಯೇ ಬೇರೂರಿತು. ಮಹಾಮಾತೃಶ್ರೀಯವರ ವಿಯೋಗ ದುಃಖವೂ, ತಮ್ಮ ಸೋದರಿಯರ ವಿಯೋಗ ದುಃಖವೂ ಮಹಾಸ್ವಾಮಿಯವರ ಹೃದಯವನ್ನು ಹಿಂಡುತ್ತಿದ್ದುವು. ತಮ್ಮ ಸೋದರರಾದ ಶ್ರೀಮದ್ಯುವರಾಜ ಶ್ರೀ ಕಂಠೀರವ ನರಸಿಂಹರಾಜ ಒಡೆಯರವರ ವಿಯೋಗವಾದ ಮೇಲಂತೂ ಮಹಾಸ್ವಾಮಿಯವರಿಗೆ ಜೀವನವೇ ದುರ್ಭರವೆನಿಸಿತು. ತಮ್ಮ ಸೋದರರ ಪುತ್ರ ಪುತ್ರಿಯರ ಮೇಲಿನ ವಾತ್ಸಲ್ಯದ ಅವಲಂಬನದಿಂದ ಭ್ರಾತೃ ವಿಯೋಗ ದುಃಖವನ್ನು ಮರೆಯಲು ಮಹಾಪ್ರಭುಗಳವರು ಪ್ರಯತ್ನಿಸಿದರು; ಕರ್ತವ್ಯ ನಿಷ್ಠೆಯಿಂದ ಕೂಡಿ ಪ್ರಜೆಗಳನ್ನು ಮಕ್ಕಳಂತೆ ಕಾಪಾಡಲು ಯಥಾಪ್ರಕಾರ ಶ್ರಮಿಸುತ್ತಿದ್ದರು. ಆದಕಾರಣ, ಅಂತಹ ಮಹಾನುಭಾವರನ್ನು ಪ್ರಜೆಗಳು ಪ್ರೀತಿಸಿ ತಂದೆಯಂತೆ ಭಕ್ತಿ ಗೌರವಗಳನ್ನು ತೋರಿಸಿದುದರಲ್ಲಿ ಆಶ್ಚರ್ಯವೇನೂ ಇಲ್ಲ. ಮಹಾಪ್ರಭುಗಳವರು ಕಾಲವಶರಾದಾಗ ಪ್ರಜೆಗಳೆಲ್ಲರೂ ಗೋಳಿಟ್ಟರು. ಅವರ ಸೇವೆ ಮಾಡಿದವರೂ, ಅವರ ಸಂದರ್ಶನ ಭಾಗ್ಯವನ್ನು ಪಡೆದು ಅವರೊಡನೆ ಸಂಭಾಷಣಮಾಡುವ ಸಂತೋಷವನ್ನು ಅನುಭವಿಸಿದ್ದ ಇತರರೂ ಮತ್ತೂ ಹೆಚ್ಚಾಗಿ ದುಃಖಿಸಿದರು. "ತಾಯಿನಾಡು", "ದೇಶಬಂಧು", "ಪ್ರಜಾಮತ", "ವಿಶ್ವಕರ್ಣಾಟಕ", "ಸ್ವತಂತ್ರ ಕರ್ಣಾಟಕ", ಮುಂತಾದ ಪತ್ರಿಕೆಗಳ ಸಂಪಾದಕರು ರಾಜಭಕ್ತಿ ವಿಶ್ವಾಸಗಳಿಂದ ಕೂಡಿ ತಮ್ಮ ತಮ್ಮ ಪತ್ರಿಕೆಯ ವಿಶೇಷ ಸಂಚಿಕೆಗಳನ್ನು ಹೊರಡಿಸಿ ಬಾಷ್ಪಾಂಜಲಿಯನ್ನರ್ಪಿಸಿದರು. ಸಂಸ್ಥಾನದಲ್ಲೆಲ್ಲ ಸಂತಾಪ ಸೂಚಕ ಸಭೆಗಳು ನಡೆದುವು.

ಆಳಿದ ಮಹಾಸ್ವಾಮಿಯವರೂ, ದಿವಂಗತರಾದ ಶ್ರೀಮದ್ಯುವರಾಜ ಶ್ರೀ ಕಂಠೀರವ ನರಸಿಂಹರಾಜ ಒಡೆಯರವರೂ ನನ್ನಲ್ಲಿ ವಿಶೇಷ ಕೃಪೆಮಾಡಿ ಅನುಗ್ರಹಿಸಿದರು. ಆಳುವ ಮಹಾಸ್ವಾಮಿಯವರಾದ **ಶ್ರೀಮನ್ಮಹಾರಾಜ ಶ್ರೀ ಜಯ ಚಾಮರಾಜೇಂದ್ರ ಒಡೆಯರ್ ಬಹದ್ದೂರರವರ** ಬಾಲ್ಯದಲ್ಲಿ ಅವರ ವಿದ್ಯಾಭ್ಯಾಸ ನಡೆಯುತ್ತಿದ್ದಾಗ್ಗೆ

"ರಾಯಲ್ ಸ್ಕೂಲ್" ಪಾಠಶಾಲೆಯ ಬಾಲಕರಿಂದ ಆಡಿಸುವುದಕ್ಕಾಗಿ ನಾನು ಒಂದು ಚಿಕ್ಕ ನಾಟಕವನ್ನು ಬರೆಯಬೇಕೆಂದು ದಿವಂಗತರಾದ ಶ್ರೀಮದ್ಯುವರಾಜರವರು ಆಜ್ಞಾಪಿಸಿದರು. ಆಗ್ಗೆ ನಾನು "ನಮ್ಮ ಸಮಾಜ" ಎಂಬ ನಾಟಕವನ್ನು ಮಾತ್ರವೇ ಬರೆದಿದ್ದೆ. ನಾನು ಬರೆದ "ರಣಧೀರ" ಎಂಬ ಚಿಕ್ಕ ನಾಟಕವು ದಿವಂಗತರಾದ ಮಹಾಸ್ವಾಮಿಯವರುಗಳಿಬ್ಬರ ಮೆಚ್ಚಿಕೆಗೂ ಪಾತ್ರವಾಯಿತೆಂದು ಕೇಳಿದಾಗ ನಾಟಕಗಳನ್ನು ಬರೆಯಲು ನನಗೆ ಅಮಿತವಾದ ಉತ್ಸಾಹವುಂಟಾಯಿತು. ಆ ಬಳಿಕ ನಾನು ಬರೆದ "ಮಂಡೋದರಿ" ಎಂಬ ನಾಟಕವು ಬೆಂಗಳೂರಿನ "ಅಮೆಚೂರ್ ಡ್ರಮ್ಯಾಟಿಕ್ ಅಸೋಸಿಯೇಷನ್" ಸಂಘದವರಿಂದ ಮೈಸೂರು ಜಗನ್ಮೋಹನ ಪ್ರಾಸಾದದಲ್ಲಿ ಮಹಾಪ್ರಭುಗಳವರ ಆಜ್ಞೆಯ ಮೇರೆಗೆ ಪ್ರದರ್ಶಿತವಾಯಿತು. ಅನಂತರ ನಾನು ರಚಿಸಿದ "ನಚಿಕೇತ" ಎಂಬ ನಾಟಕವೂ ಅವರ ಆಜ್ಞೆಯಂತೆ ಅದೇ ಸಂಘದವರಿಂದ ಅಲ್ಲಿ ಪ್ರದರ್ಶಿತವಾಯಿತು. ಮಾರನೆಯ ದಿನ ರಾತ್ರಿ ಹತ್ತು ಘಂಟೆಗೆ ಅದೇ ನಾಟಕ ಪ್ರದರ್ಶನವೇ ಶ್ರೀಮದ್ಯುವರಾಜರವರ ಘನ ಸಮ್ಮುಖದಲ್ಲಿ ಮೈಸೂರಿನ "ರಂಗಾಚಾರ್ಲು ಮೆಮೋರಿಯಲ್ ಹಾಲ್" ನಾಟಕ ಮಂದಿರದಲ್ಲಿ ನಡೆಯಬೇಕೆಂದು ಗೊತ್ತಾಗಿದ್ದಿತು. ಮಹಾಸ್ವಾಮಿಯವರು ದೂರ ಪ್ರಯಾಣದಿಂದ ದಣಿದು ಅದೇ ದಿನ ಸಾಯಂಕಾಲದ ವೇಳೆಗೆ ತಮ್ಮ ಪ್ರವಾಸದಿಂದ ಮೈಸೂರು ನಗರಕ್ಕೆ ಹಿಂತಿರುಗಿದ್ದರು. ಹಾಗಿದ್ದೂ ಮಹಾಸ್ವಾಮಿಯವರು ನಾಟಕಾವಲೋಕನಕ್ಕೆ ದಯಮಾಡಿ, ನಾನು ರಾಜಭಕ್ತಿ ವಿಶ್ವಾಸಗಳಿಂದ ಸಮರ್ಪಿಸಿದ "ನಚಿಕೇತ" ನಾಟಕದ ಪ್ರತಿಗಳನ್ನು ಸ್ವೀಕರಿಸಿ, "ಈ ಗ್ರಂಥವನ್ನು ನಾವು ಆದರದಿಂದ ಓದಿದ್ದೇವೆ. ಈಗ ನಾಟಕ ಪ್ರದರ್ಶನವನ್ನು ನೋಡಲು ಮತ್ತಷ್ಟು ಆದರದಿಂದ ಬಂದಿದ್ದೇವೆ" ಎಂದು ಅರ್ಥವಾಗುವಂತೆ ಇಂಗ್ಲಿಷ್ ಭಾಷೆಯಲ್ಲಿ ಅಪ್ಪಣೆಕೊಡಿಸಿದರು. ನಾಟಕವು ಪ್ರಾರಂಭವಾದ ಮೇಲೆ ಮಹಾಸ್ವಾಮಿಯವರು ನನ್ನನ್ನು ತಮ್ಮ ಸಮಕ್ಷಮಕ್ಕೆ ಕರೆಯಿಸಿ, ಅನೇಕ ಪ್ರಶ್ನೆಗಳನ್ನು ಕೇಳಿ, ನಾನು ಶ್ರುತಪಡಿಸಿದ ಉತ್ತರಗಳಿಂದ ಹರ್ಷಿಸಿದರು. ನಾಟಕಶಾಲೆಯಿಂದ ಅರಮನೆಗೆ ಚಿತ್ತೈಸುವಾಗ್ಗೆ "ನೀವು ಬರೆದಿರುವ ಈ ನಾಟಕವು ಬಹಳ ಸ್ವಾರಸ್ಯವಾಗಿದೆ. ನಾವು ಅದನ್ನು ನೋಡಿ ಬಹಳ ಹರ್ಷಿಸಿದೆವು. ನಿಮಗೆ ಅಭಿನಂದನಗಳು. ಇಷ್ಟು ಸಾತ್ವಿಕ ಸ್ವರೂಪದಿಂದ ಕೂಡಿ ಇಷ್ಟು ಸ್ವಾರಸ್ಯವಾಗಿರುವ ನಾಟಕವನ್ನು ಬರೆದಿರುವುದು ನಮಗೆ ಬಹಳ ಸಂತೋಷವನ್ನುಂಟುಮಾಡಿದೆ. ನಾಟಕವು ವಿಶೇಷ ಯಶಸ್ವಿ

ಯಾಗಿರುವುದಕ್ಕಾಗಿ ನಿಮ್ಮನ್ನು ಅಭಿನಂದಿಸುವೆವು. ಪ್ರಾಚೀನ ಕಾಲದ ಪರಿಶುದ್ಧವಾದ ಭಾರತೀಯ ಜೀವನವನ್ನೂ ಭಾರತೀಯ ಧ್ಯೇಯಗಳನ್ನೂ ಚಿತ್ರಿಸುವ ಈ ಬಗೆಯ ಇನ್ನೂ ಅನೇಕ ನಾಟಕಗಳು ನಿಮ್ಮಿಂದ ರಚಿತವಾಗುವುವೆಂದು ನಾವು ಹಾರೈಸುವೆವು" ("Your play is very interesting I enjoyed it very much. I congratulate you. I am very glad that such a clean and interesting play has come from your pen. I congratulate you on the great success of the play and I hope many more plays like the one in question will come from your pen depicting Indian ideals and Indian life in its pristine purity") ಎಂದು ಅಪ್ಪಣೆ ಕೊಡಿಸಿ ಅನುಗ್ರಹಿಸಿದರು; ಆ ಬಳಿಕ ಒಟ್ಟು ಮೂರು ನಾರಿ ಸಂದರ್ಶನವನ್ನಿತ್ತು ವಿಶೇಷ ವಾತ್ಸಲ್ಯದಿಂದ ಬಹಳ ಹೊತ್ತು ಮಾತನಾಡಿ, ನಾನು ಸಮರ್ಪಿಸಿದ ನನ್ನ ಗ್ರಂಥಗಳ ಪ್ರತಿಗಳನ್ನು ಸ್ವೀಕರಿಸಿ ಕೃಪೆಮಾಡಿದರು. ಆಳಿದ ಮಹಾಸ್ವಾಮಿಯವರು ನಾನು ರಚಿಸಿದ "ಭಾಸ ಮಹಾಕವಿ" ಎಂಬ ಪುಸ್ತಕವನ್ನು ತಮಗೆ ಮೀಸಲು ಕಾಣಿಕೆಯಾಗಿ ಸಮರ್ಪಿಸಲು ಅನುಮತಿಯನ್ನಿತ್ತು ಪ್ರೋತ್ಸಾಹಿಸಿದರು; ಅದರಿಂದ ಆ ಗ್ರಂಥದ ಯೋಗ್ಯತೆಯು ಅತ್ಯಂತವಾಗಿ ಹೆಚ್ಚಿ ನನ್ನ ಪ್ರಯತ್ನವು ಪಾವನವಾಯಿತೆಂದು ನನ್ನ ಭಾವನೆ. ೧೯೩೭ನೆಯ ಇಸವಿಯಿಂದ ಮಹಾಪ್ರಭುಗಳವರು ಆಗಾಗ್ಗೆ ಬೆಂಗಳೂರು ಅರಮನೆಗೆ ಬರುವಂತೆ ಆಜ್ಞಾಪಿಸಿ ನನ್ನಿಂದ ಉಪನ್ಯಾಸ ಮಾಡಿಸುತ್ತಿದ್ದರು. ಮಹಾಪ್ರಭುಗಳವರು ತೋರಿಸಿದ ಪ್ರೀತಿವಾತ್ಸಲ್ಯಗಳು ಅಪರಿಮಿತವಾಗಿದ್ದುವು. ಅವರ ಸನ್ನಿಧಿಯಲ್ಲಿದ್ದಾಗ ಮನೋಹರವಾದ ಮಂದಹಾಸದಿಂದ ಕೂಡಿದ ಪ್ರಸನ್ನ ಗಂಭೀರವಾದ ಅವರ ಮುಖಮಂಡಲವನ್ನು ನೋಡಿದಾಗಲೆಲ್ಲ ಮನಸ್ಸಿಗೇ ಬೆಳದಿಂಗಳು ಬಂದಂತೆ ಬೋಧೆ ಯಾಗುತ್ತಿದ್ದಿತು. ಮಹಾಪ್ರಭುಗಳವರ ಕೃಪಾನ್ವಿತವಾದ ಕಣ್ಣುಗಳು ದಯಾಕರುಣೆಗಳ ಅಮೃತರಸವನ್ನೇ ಹೊರಸೂಸುತ್ತಿದ್ದುವು. ನಾನು ಮಹಾಸ್ವಾಮಿಯವರ ಸನ್ನಿಧಿಯಲ್ಲಿದ್ದಾಗ ತಂದೆಯ ಸಮೀಪದಲ್ಲಿದ್ದ ಮಗನಂತೆ ತೋರುತ್ತಿದ್ದಿತೇ ಹೊರತು, ಪ್ರಭು ಸನ್ನಿಧಿಯಲ್ಲಿದ್ದ ಪ್ರಜೆಯೆಂದಲ್ಲ; ಮಹಾಪ್ರಭುಗಳವರು ಅಲ್ಪನಾದ ನನ್ನಲ್ಲಿ ಕೂಡ ಅಷ್ಟುಮಟ್ಟಿನ ವಿಶ್ವಾಸದಿಂದ ಕೃಪೆತೋರುತ್ತಿದ್ದರು. ಆಗ ಅದನ್ನು ನೆನೆದು ನೆನೆದು ಅದೊಂದು ಪೂರ್ವ ಪುಣ್ಯವೆಂದು ಹಿಗ್ಗುತ್ತಿದ್ದವನೇ ಈಗ ಅದು ಸ್ಮರಣೆಗೆ ಬಂದಾಗಲೆಲ್ಲ ದುಃಖದಿಂದ ಕಂಬನಿಬಿಡುತ್ತಿದ್ದೇನೆ. ಆಳಿದ ಮಹಾಸ್ವಾಮಿಯವರು ಎಷ್ಟು ಮಟ್ಟಿನ ಆದಾರಾನುಗ್ರಹಗಳಿಂದ

"ರಾಯಲ್ ಸ್ಕೂಲ್" ಪಾಠಶಾಲೆಯ ಬಾಲಕರಿಂದ ಆಡಿಸುವುದಕ್ಕಾಗಿ ನಾನು ಒಂದು ಚಿಕ್ಕ ನಾಟಕವನ್ನು ಬರೆಯಬೇಕೆಂದು ದಿವಂಗತರಾದ ಶ್ರೀಮದ್ಯುವರಾಜರವರು ಆಜ್ಞಾಪಿಸಿದರು. ಆಗ್ಗೆ ನಾನು "ನಮ್ಮ ಸಮಾಜ" ಎಂಬ ನಾಟಕವನ್ನು ಮಾತ್ರವೇ ಬರೆದಿದ್ದೆ. ನಾನು ಬರೆದ "ರಣಧೀರ" ಎಂಬ ಚಿಕ್ಕ ನಾಟಕವು ದಿವಂಗತರಾದ ಮಹಾಸ್ವಾಮಿಯವರುಗಳಿಬ್ಬರ ಮೆಚ್ಚಿಕೆಗೂ ಪಾತ್ರವಾಯಿತೆಂದು ಕೇಳಿದಾಗ ನಾಟಕಗಳನ್ನು ಬರೆಯಲು ನನಗೆ ಅಮಿತವಾದ ಉತ್ಸಾಹವುಂಟಾಯಿತು. ಆ ಬಳಿಕ ನಾನು ಬರೆದ "ಮಂಡೋದರಿ" ಎಂಬ ನಾಟಕವು ಬೆಂಗಳೂರಿನ "ಅಮೆಚೂರ್ ಡ್ರಮ್ಯಾಟಿಕ್ ಅಸೋಸಿಯೇಷನ್" ಸಂಘದವರಿಂದ ಮೈಸೂರು ಜಗನ್ಮೋಹನ ಪ್ರಾಸಾದದಲ್ಲಿ ಮಹಾಪ್ರಭುಗಳವರ ಆಜ್ಞೆಯ ಮೇರೆಗೆ ಪ್ರದರ್ಶಿತವಾಯಿತು. ಅನಂತರ ನಾನು ರಚಿಸಿದ "ನಚಿಕೇತ" ಎಂಬ ನಾಟಕವೂ ಅವರ ಆಜ್ಞೆಯಂತೆ ಅದೇ ಸಂಘದವರಿಂದ ಅಲ್ಲಿ ಪ್ರದರ್ಶಿತವಾಯಿತು. ಮಾರನೆಯ ದಿನ ರಾತ್ರಿ ಹತ್ತು ಘಂಟೆಗೆ ಅದೇ ನಾಟಕ ಪ್ರದರ್ಶನವೇ ಶ್ರೀಮದ್ಯುವರಾಜರವರ ಘನ ಸಮ್ಮುಖದಲ್ಲಿ ಮೈಸೂರಿನ "ರಂಗಾಚಾರ್ಲು ಮೆಮೋರಿಯಲ್ ಹಾಲ್" ನಾಟಕ ಮಂದಿರದಲ್ಲಿ ನಡೆಯಬೇಕೆಂದು ಗೊತ್ತಾಗಿದ್ದಿತು. ಮಹಾಸ್ವಾಮಿಯವರು ದೂರ ಪ್ರಯಾಣದಿಂದ ದಣಿದು ಅದೇ ದಿನ ಸಾಯಂಕಾಲದ ವೇಳೆಗೆ ತಮ್ಮ ಪ್ರವಾಸದಿಂದ ಮೈಸೂರು ನಗರಕ್ಕೆ ಹಿಂತಿರುಗಿದ್ದರು. ಹಾಗಿದ್ದೂ ಮಹಾಸ್ವಾಮಿಯವರು ನಾಟಕಾವಲೋಕನಕ್ಕೆ ದಯಮಾಡಿ, ನಾನು ರಾಜಭಕ್ತಿ ವಿಶ್ವಾಸಗಳಿಂದ ಸಮರ್ಪಿಸಿದ "ನಚಿಕೇತ" ನಾಟಕದ ಪ್ರತಿಗಳನ್ನು ಸ್ವೀಕರಿಸಿ, "ಈ ಗ್ರಂಥವನ್ನು ನಾವು ಆದರದಿಂದ ಓದಿದ್ದೇವೆ. ಈಗ ನಾಟಕ ಪ್ರದರ್ಶನವನ್ನು ನೋಡಲು ಮತ್ತಷ್ಟು ಆದರದಿಂದ ಬಂದಿದ್ದೇವೆ" ಎಂದು ಅರ್ಥವಾಗುವಂತೆ ಇಂಗ್ಲಿಷ್ ಭಾಷೆಯಲ್ಲಿ ಅಪ್ಪಣೆಕೊಡಿಸಿದರು. ನಾಟಕವು ಪ್ರಾರಂಭವಾದ ಮೇಲೆ ಮಹಾಸ್ವಾಮಿಯವರು ನನ್ನನ್ನು ತಮ್ಮ ಸಮಕ್ಷಮಕ್ಕೆ ಕರೆಯಿಸಿ, ಅನೇಕ ಪ್ರಶ್ನೆಗಳನ್ನು ಕೇಳಿ, ನಾನು ಶ್ರುತಪಡಿಸಿದ ಉತ್ತರಗಳಿಂದ ಹರ್ಷಿಸಿದರು. ನಾಟಕಶಾಲೆಯಿಂದ ಅರಮನೆಗೆ ಚಿತ್ತೈಸುವಾಗ್ಗೆ "ನೀವು ಬರೆದಿರುವ ಈ ನಾಟಕವು ಬಹಳ ಸ್ವಾರಸ್ಯವಾಗಿದೆ. ನಾವು ಅದನ್ನು ನೋಡಿ ಬಹಳ ಹರ್ಷಿಸಿದೆವು. ನಿಮಗೆ ಅಭಿನಂದನಗಳು. ಇಷ್ಟು ಸಾತ್ವಿಕ ಸ್ವರೂಪದಿಂದ ಕೂಡಿ ಇಷ್ಟು ಸ್ವಾರಸ್ಯವಾಗಿರುವ ನಾಟಕವನ್ನು ಬರೆದಿರುವುದು ನಮಗೆ ಬಹಳ ಸಂತೋಷವನ್ನುಂಟುಮಾಡಿದೆ. ನಾಟಕವು ವಿಶೇಷ ಯಶಸ್ವಿ

..

ಯಾಗಿರುವುದಕ್ಕಾಗಿ ನಿಮ್ಮನ್ನು ಅಭಿನಂದಿಸುವೆವು. ಪ್ರಾಚೀನ ಕಾಲದ ಪರಿಶುದ್ಧವಾದ ಭಾರತೀಯ ಜೀವನವನ್ನೂ ಭಾರತೀಯ ಧ್ಯೇಯಗಳನ್ನೂ ಚಿತ್ರಿಸುವ ಈ ಬಗೆಯ ಇನ್ನೂ ಅನೇಕ ನಾಟಕಗಳು ನಿಮ್ಮಿಂದ ರಚಿತವಾಗುವುವೆಂದು ನಾವು ಹಾರೈಸುವೆವು" ("Your play is very interesting I enjoyed it very much. I congratulate you. I am very glad that such a clean and interesting play has come from your pen. I congratulate you on the great success of the play and I hope many more plays like the one in question will come from your pen depicting Indian ideals and Indian life in its pristine purity") ಎಂದು ಅಪ್ಪಣೆ ಕೊಡಿಸಿ ಅನುಗ್ರಹಿಸಿದರು; ಆ ಬಳಿಕ ಒಟ್ಟು ಮೂರು ನಾರಿ ಸಂದರ್ಶನವನ್ನಿತ್ತು ವಿಶೇಷ ವಾತ್ಸಲ್ಯದಿಂದ ಬಹಳ ಹೊತ್ತು ಮಾತನಾಡಿ, ನಾನು ಸಮರ್ಪಿಸಿದ ನನ್ನ ಗ್ರಂಥಗಳ ಪ್ರತಿಗಳನ್ನು ಸ್ವೀಕರಿಸಿ ಕೃಪೆಮಾಡಿದರು. ಆಳಿದ ಮಹಾಸ್ವಾಮಿಯವರು ನಾನು ರಚಿಸಿದ "ಭಾಸ ಮಹಾಕವಿ" ಎಂಬ ಪುಸ್ತಕವನ್ನು ತಮಗೆ ಮೀಸಲು ಕಾಣಿಕೆಯಾಗಿ ಸಮರ್ಪಿಸಲು ಅನುಮತಿಯನ್ನಿತ್ತು ಪ್ರೋತ್ಸಾಹಿಸಿದರು; ಅದರಿಂದ ಆ ಗ್ರಂಥದ ಯೋಗ್ಯತೆಯು ಅತ್ಯಂತವಾಗಿ ಹೆಚ್ಚಿ ನನ್ನ ಪ್ರಯತ್ನವು ಪಾವನವಾಯಿತೆಂದು ನನ್ನ ಭಾವನೆ. ೧೯೩೦ನೆಯ ಇಸವಿಯಿಂದ ಮಹಾಪ್ರಭುಗಳವರು ಆಗಾಗ್ಗೆ ಬೆಂಗಳೂರು ಅರಮನೆಗೆ ಬರುವಂತೆ ಆಜ್ಞಾಪಿಸಿ ನನ್ನಿಂದ ಉಪನ್ಯಾಸ ಮಾಡಿಸುತ್ತಿದ್ದರು. ಮಹಾಪ್ರಭುಗಳವರು ತೋರಿಸಿದ ಪ್ರೀತಿ ವಾತ್ಸಲ್ಯಗಳು ಅಪರಿಮಿತವಾಗಿದ್ದುವು. ಅವರ ಸನ್ನಿಧಿಯಲ್ಲಿದ್ದಾಗ ಮನೋಹರವಾದ ಮಂದಹಾಸದಿಂದ ಕೂಡಿದ ಪ್ರಸನ್ನ ಗಂಭೀರವಾದ ಅವರ ಮುಖಮಂಡಲವನ್ನು ನೋಡಿದಾಗಲೆಲ್ಲ ಮನಸ್ಸಿಗೇ ಬೆಳದಿಂಗಳು ಬಂದಂತೆ ಬೋಧೆ ಯಾಗುತ್ತಿದ್ದಿತು. ಮಹಾಪ್ರಭುಗಳವರ ಕೃಪಾನ್ವಿತವಾದ ಕಣ್ಣುಗಳು ದಯಾಕರುಣೆಗಳ ಅಮೃತರಸವನ್ನೇ ಹೊರಸೂಸುತ್ತಿದ್ದುವು. ನಾನು ಮಹಾಸ್ವಾಮಿಯವರ ಸನ್ನಿಧಿಯಲ್ಲಿದ್ದಾಗ ತಂದೆಯ ಸಮೀಪದಲ್ಲಿದ್ದ ಮಗನಂತೆ ತೋರುತ್ತಿದ್ದಿತೇ ಹೊರತು, ಪ್ರಭು ಸನ್ನಿಧಿಯಲ್ಲಿದ್ದ ಪ್ರಜೆಯೆಂದಲ್ಲ; ಮಹಾಪ್ರಭುಗಳವರು ಅಲ್ಪನಾದ ನನ್ನಲ್ಲಿ ಕೂಡ ಅಷ್ಟುಮಟ್ಟಿನ ವಿಶ್ವಾಸದಿಂದ ಕೃಪೆತೋರುತ್ತಿದ್ದರು. ಆಗ ಅದನ್ನು ನೆನೆದು ನೆನೆದು ಅದೊಂದು ಪೂರ್ವ ಪುಣ್ಯವೆಂದು ಹಿಗ್ಗುತ್ತಿದ್ದವನೇ ಈಗ ಅದು ಸ್ಮರಣೆಗೆ ಬಂದಾಗಲೆಲ್ಲ ದುಃಖದಿಂದ ಕಂಬನಿಬಿಡುತ್ತಿದ್ದೇನೆ. ಆಳಿದ ಮಹಾಸ್ವಾಮಿಯವರು ಎಷ್ಟು ಮಟ್ಟಿನ ಆದಾರಾನುಗ್ರಹಗಳಿಂದ

ಉಪನ್ಯಾಸಮಾಡಿಸುತ್ತಿದ್ದರು! ಮೊದಲನೆಯ ದಿನ ಎಷ್ಟು ಹೊತ್ತು ಉಪನ್ಯಾಸಮಾಡಬೇಕೆಂಬುದು ತಿಳಿಯದೆಹೋಯಿತು. ಮುಕ್ಕಾಲು ಘಂಟೆಯ ಕಾಲ ಉಪನ್ಯಾಸಮಾಡಿದಮೇಲೆ, ಸಮೀಪದಲ್ಲಿ ಒಂದು ದುಂಡು ಮೇಜಿನ ಮೇಲಿದ್ದ ದೊಡ್ಡ ಗಡಿಯಾರವನ್ನು ಪದೇ ಪದೇ ನೋಡುತ್ತ, ಆ ಬಳಿಕ ಸರಿಯಾಗಿ ಕಾಲು ಘಂಟೆಯ ವೇಳೆಗೆ ಉಪನ್ಯಾಸ ವನ್ನು ನಿಲ್ಲಿಸಿದೆ. ಸಮ್ಮುಖದ ಅಧಿಕಾರಿಗಳೂ ಮಹಾವಿದ್ವಾಂಸರೂ ಅಲ್ಲಿಂದ ತೆರಳಿದ ಬಳಿಕ ಮಹಾಪ್ರಭುಗಳವರು "ಚೆನ್ನಾಗಿ ಉಪನ್ಯಾಸಮಾಡಿದಿರಿ. ಬಹಳ ಚೆನ್ನಾಗಿ ಉಪನ್ಯಾಸ ಮಾಡಿದಿರಿ" ಎಂದು ಅಪ್ಪಣೆಕೊಡಿಸಿದರು. ಮಾರನೆಯ ದಿನದ ಮುಂದಿನ ದಿನ ಮತ್ತೆ ಉಪನ್ಯಾಸ ಮಾಡಬೇಕೆಂದು ಅಪ್ಪಣೆಯಾಯಿತು. ಅಂದು ಉಪನ್ಯಾಸ ಮಾಡತೊಡಗಿ ಸ್ವಲ್ಪ ಹೊತ್ತಾದ ಮೇಲೆ ಹಿಂದಿನ ದಿನ ಗಡಿಯಾರವಿದ್ದ ಕಡೆ ನೋಡಿದೆ. ಅಲ್ಲಿ ಗಡಿಯಾರವಿರಲಿಲ್ಲ. ಕೊರಳನ್ನು ಕೊಂಕಿಸಿ ಪಾರ್ಶ್ವದ ಕಡೆಗೆ ದೂರ ದೂರ ನಾನು ನೋಡಿದುದನ್ನು ಕಂಡು ಮಹಾಪ್ರಭುಗಳವರು, "ಗಡಿ ಯಾರವನ್ನು ನೋಡಬೇಕೆಂಬ ಪ್ರಯತ್ನವೇನು? ಗಡಿಯಾರ ಅಲ್ಲಿಲ್ಲ. ಉಪನ್ಯಾಸ ನಡೆಯಲಿ" ಎಂದು ಹೇಳಿ ನಕ್ಕರು. ಆ ದಿನ ಒಂದೂ ಮುಕ್ಕಾಲು ಘಂಟೆಯ ಹೊತ್ತು ಉಪನ್ಯಾಸವಾದಮೇಲೆ, ನಿಲ್ಲಿಸಬೇಕೆಂದು ಮಹಾಸ್ವಾಮಿಯವರ ಆಜ್ಞೆಯಾಯಿತು. ಆ ಬಳಿಕ ಮಹಾಪ್ರಭು ಗಳವರ ಸನ್ನಿಧಿಯಿಂದ ನಾನು ತೆರಳಲನುವಾದಾಗ "ಉಪನ್ಯಾಸಗಳು ಎರಡು ವಿಧ. ವಿಷಯ ಧೋರಣೆ ಹೇಗೆ ಹೋದರೆ ಹಾಗೆ ಮುಂದೆ ನುಗ್ಗಿ ಹೋಗುವುದೊಂದು ವಿಧ. ಕ್ಲುಪ್ತಕಾಲಕ್ಕೆ ಸರಿಯಾಗಿ ನಿಲ್ಲಿಸುವ ಉದ್ದೇಶದಿಂದ ಕಾಲದ ಅಳತೆಗೆ ವಿಷಯವನ್ನು ಕುಗ್ಗಿಸಿ ಸರಿಹೊಂದಿಸುವು ದೊಂದು ವಿಧ. ಇದನ್ನು ನೀವು ಅನುಸರಿಸುವಂತಿದ್ದ ಬಗೆಯನ್ನು ಕಂಡು ಈ ದಿನ ಗಡಿಯಾರವನ್ನು ತೆಗೆಸಿದೆವು. ಸಮುದ್ರದಲ್ಲಿ ಈಜುತ್ತಿದ್ದವರು ಕಾಲವನ್ನು ನೆನೆಸಿಕೊಂಡು ಕಾಲುವೆಗೆ ತಿರುಗುವುದೇಕೆ?" ಎಂದು ಮಹಾ ಸ್ವಾಮಿಯವರು ಅಪ್ಪಣೆ ಕೊಡಿಸಿದರು. ಅಂದು ನನಗುಂಟಾದ ಸಂತೋಷ ಕೃತಜ್ಞತೆಗಳನ್ನು ವರ್ಣಿಸಲಳವಲ್ಲ. ಆದಾಗ್ಯೂ, "ಮಹಾಸ್ವಾಮಿ! ಧನ್ಯನಾದೆ. ಆದರೆ ಮಹಾಸ್ವಾಮಿಯವರ ಕೃಪೆ ಲಭಿಸಿತೆಂದು ಮೈ ಮರೆತು ರಾಜಕಾರ್ಯಗಳಿಗೆ ವಿಘ್ನವನ್ನು ತಂದಿಟ್ಟು ಕಾಲಹರಣ ಮಾಡಿ ಮಾತು ಬೆಳೆಸಿಬಿಟ್ಟರೆ ಗತಿಯೇನೆಂದು ಭಯ" ಎಂದು ಭಕ್ತಿ ಯಿಂದ ಅರಿಕೆ ಮಾಡಿದೆ. ಆಗ ಮಹಾಪ್ರಭುಗಳವರು ನಕ್ಕು, "ಆ ಬಗೆಯ ಭಯವೇ ಬೇಡ. ನಿಲ್ಲಿಸಬೇಕೆಂದು ಹೇಳುವುದು ನಮ್ಮ ಕೆಲಸ. ನಾವು

ಹಾಗೆ ಹೇಳುವವರೆಗೂ ಉಪನ್ಯಾಸ ಮಾಡುವುದು ನಿಮ್ಮ ಕೆಲಸ. ಕಾಲದ ಯೋಚನೆಯೇ ನಿಮಗೆ ಬೇಡ" ಎಂದರು. ಅದಕ್ಕನುಸಾರವಾಗಿ ಹೆಚ್ಚು ಕಾಲ ಆಗಾಗ ಒಟ್ಟು ಇಪ್ಪತ್ತು ದಿನಗಳು ಮಹಾಸ್ವಾಮಿಯವರು ಉಪನ್ಯಾಸ ಮಾಡಿಸಿದರು; ಮತ್ತಿನಂತಹ ಮಾತುಗಳನ್ನಾಡಿ ತಮ್ಮ ಸಂತೋಷವನ್ನು ಸೂಚಿಸಿ ಕೃಪೆಮಾಡಿದರು; ಒಂದು ದಿನವಂತೂ, ಎರಡೂವರೆ ಘಂಟೆಗಳ ಕಾಲ ಉಪನ್ಯಾಸ; ಕೊನೆಯ ಉಪನ್ಯಾಸವಾದ ಮೇಲೆ "ಈ ಸಂಬಂಧ ಇನ್ನೂ ಬಹು ಕಾಲ ನಡೆದುಬರಬೇಕೆಂದು ನಮಗೆ ಆಶೆ. ನಾಳೆ ಇಲ್ಲಿಂದ ಪ್ರಯಾಣ. ಮತ್ತೆ ಇಲ್ಲಿಗೆ ಬಂದಾಗ ಹೇಳಿಕಳುಹಿಸುವೆವು" ಎಂದು ಮುಂತಾಗಿ ಅಪ್ಪಣೆ ಕೊಡಿಸಿದರು. ಅವೇ ನನ್ನೊಡನೆ ಅವರು ಅಪ್ಪಣೆ ಕೊಡಿಸಿದ ಕೊನೆಯ ಮಾತುಗಳು. ಏಕೆಂದರೆ, ಆ ಬಳಿಕ ಮಹಾಪ್ರಭುಗಳವರು ೧೯೪೦ನೆಯ ಇಸವಿ ಜೂನ್ ತಿಂಗಳು ೩ನೆಯ ತಾರೀಖಿನ ದಿನ ಬೆಂಗಳೂರಿಗೆ ಮತ್ತೆ ದಯಮಾಡಿ ಅದೇ ದಿನ ಮೈಸೂರಿಗೆ ಚಿತ್ತೈಸಿದರು; ಮತ್ತೆ ಜೂಲೈ ತಿಂಗಳಿನಲ್ಲಿ ದಯಮಾಡಿ ರೋಗಗ್ರಸ್ತರಾದರು. ಮುಂದಿನ ವಿಷಾದ ಪ್ರಕರಣವನ್ನು ತಿಳಿಸಬೇಕಾದುದೇ ಇಲ್ಲ. ಮಹಾಪ್ರಭುಗಳವರು ನನ್ನಲ್ಲಿ ಕ್ಷಮೆತೋರಿ ಅನುಗ್ರಹಿಸಿದ ಸನ್ನಿವೇಶವನ್ನೂ ಇಲ್ಲಿ ಸೂಚಿಸಬಹುದಾಗಿದೆ. ಅವರು ನನ್ನಿಂದ ರಚಿತವಾಗಿರುವ "ಬ್ರಹ್ಮವಾದಿನಿ" ಎಂಬ ನಾಟಕವನ್ನು ಆಡಿಸಿದಾಗ್ಗೆ — ಅದಕ್ಕೆ ಮುಂಚೆ ಕೆಲವು ದಿನಗಳ ಹಿಂದೆ ಕೊಂಚ ದೇಹಾಲಸ್ಯವಾಗಿದ್ದ ಕಾರಣ — ಎರಡೂವರೆ ಘಂಟೆಗಳ ಕಾಲದಲ್ಲಿ ನಾಟಕವು ಮುಗಿಯಬೇಕೆಂದು ಅಪ್ಪಣೆ ಮಾಡಿದರು. ನಾಟಕದ ಕೆಲಕೆಲವು ಭಾಗಗಳನ್ನು ಬಿಟ್ಟು ಬಿಡುವಂತೆ ಗೊತ್ತುಮಾಡಿದುದಾಯಿತು. ಒಂದು ಭಾಗವನ್ನೂ ಬಿಡದೆ ನಾಟಕವಾಡಿದರೇ ಸರಿಯಾಗಿ ಮೂರು ಘಂಟೆಗಳಿಗೇ ಮುಗಿಯುತ್ತಿದ್ದ ನಾಟಕ. ಹಾಗಿದ್ದೂ ಕೆಲಕೆಲವು ಭಾಗಗಳನ್ನು ಬಿಟ್ಟು ಆಡಿಯೂ ನಟರ ಉತ್ಸಾಹ ಮುಂತಾದ ಕಾರಣಾಂತರಗಳಿಂದ ನಾಟಕವು ಮುಗಿಯಲು ಮೂರೂವರೆ ಘಂಟೆಗಳಾದುವು. ಅಂದಿನಿಂದ ಮತ್ತೆ ಮಹಾಪ್ರಭುಗಳವರ ಸಂದರ್ಶನವಾದ ದಿನದವರೆಗೂ ನನಗುಂಟಾದ ಪಶ್ಚಾತ್ತಾಪ ಸಂತಾಪಗಳು ದುಸ್ಸಹವಾಗಿದ್ದುವು. ಮಹಾಪ್ರಭುಗಳವರು ಉಪನ್ಯಾಸಕ್ಕೆ ಮತ್ತೆ ಕರೆಯಿಸಿದ ದಿನ ನಾನು "ಮಹಾಸ್ವಾಮಿ! ಮುಖತೋರಿಸುವುದಕ್ಕೇ ನನಗೆ ನಾಚಿಕೆಯಾಗಿದೆ" ಎಂದು ಅರಿಕೆ ಮಾಡಿದೆ. ಮಹಾಸ್ವಾಮಿಯವರು ನಕ್ಕು, "ಅಂಥಾ ನಾಚಿಕೆಯ ಕೆಲಸ ಏನು ಮಾಡಿಬಿಟ್ಟರಿ?" ಎಂದು ಕೇಳಿದರು. ನಾನು, "ಮಹಾಸ್ವಾಮಿ! ನಾಟಕ ಎರಡೂವರೆ

ಘಂಟೆಗೆ ಮುಗಿಯಲಿಲ್ಲ. ಪ್ರಭುಸನ್ನಿಧಿಯಲ್ಲಿ ನಾಟಕ ಪ್ರದರ್ಶನದ ಭಾಗ್ಯ ದೊರೆಯಿತೆಂದು ನಟರು ಮೈಮರೆತು ಹಾಗಾಯಿತು. ಕ್ಷಮಿಸಿ ಉದ್ಧರಿಸಬೇಕು. ನಾಟಕವನ್ನು ಎರಡೂವರೆ ಘಂಟೆಗಳಿಗೆ ಮುಗಿಸಲಿಲ್ಲ ವಲ್ಲಾ ಎಂದು ನನಗೆ ಮನೋವ್ಯಥೆ" ಎಂದು ಬಿನ್ನೈಸಿದೆ. ಮಹಾಪ್ರಭು ಗಳವರು ಮಂದಸ್ಮಿತದಿಂದ, "ನಾಟಕ ಮೂರೂವರೆ ಘಂಟೆಗಳಿಗೇ ಮುಗಿದುಹೋಯಿತಲ್ಲಾ, ಇನ್ನೊಂದು ಘಂಟೆಯುವರೆಗಾದರೂ ನಡೆಯು ಲಿಲ್ಲವಲ್ಲಾ—ಎಂದು ನಮಗೂ ಮನೋವ್ಯಥೆ" ಎಂದು ಅಪ್ಪಣೆ ಕೊಡಿಸಿದರು. ನಾನು, "ಮಹಾಸ್ವಾಮಿಯವರು ಕ್ಷಮಾಮೂರ್ತಿ ಗಳಾದ ಪ್ರಜಾವತ್ಸಲರು. ಪರಮಾನುಗ್ರಹ, ಪರಮಾನುಗ್ರಹ" ಎಂದೆ; ಭಕ್ತಿನಮ್ರನಾಗಿ ಕೈಮುಗಿದೆ. ಮಹಾಸ್ವಾಮಿಯವರು ತಮ್ಮದೇ ಆದೊಂದು ಸರಳತೆಯಿಂದ, "ಹೀಗೇಕೆ ಮಾತನಾಡುತ್ತೀರಿ? ನಮಗೇನು ನಿಮ್ಮಲ್ಲಿ ದಾಕ್ಷಿಣ್ಯದ ಭಯವೆ? ನಾವು ಎದ್ದುಹೋಗಿದ್ದರೆ ನೀವು ಅಡ್ಡಿ ಬರುತ್ತಿದ್ದಿರಾ? ನಾಟಕ ಬಹಳ ಸ್ವಾರಸ್ಯವಾಗಿದೆ. ಉಪನ್ಯಾಸ ಪ್ರಾರಂಭವಾಗಲಿ" ಎಂದು ಅಪ್ಪಣೆ ಕೊಡಿಸಿ ನಕ್ಕರು. ಮಹಾಪ್ರಭು ಗಳವರು ನನ್ನಲ್ಲಿ ಕೃಪೆತೋರಿ ಆಡಿದ ಒಂದೊಂದು ಮಾತು ನೆನಪಿಗೆ ಬಂದಾಗಲೂ ದುಃಖವು ಉಕ್ಕಿಬರುತ್ತದೆ. ಮಹಾಪ್ರಭುಗಳವರು ಅಪ್ಪಣೆಕೊಡಿಸಿದ ಇತರ ಪಲವು ಮಾತುಗಳು ಅವರಿಗೆ ನನ್ನಲ್ಲಿ ಎಷ್ಟು ವಿಶ್ವಾಸ ವಾತ್ಸಲ್ಯಗಳಿದ್ದುವೆಂಬುದನ್ನು ವ್ಯಕ್ತಗೊಳಿಸುವುವಾದರೂ ಅವುಗಳನ್ನೆಲ್ಲ ಇಲ್ಲಿ ಸೂಚಿಸುವುದಾದರೆ, ಔಚಿತ್ಯದ ಎಲ್ಲೆಯನ್ನು ದಾಟಿ ಯೇನೆಂಬ ಶಂಕೆಯ ದೆಸೆಯಿಂದ ಅವುಗಳನ್ನು ಸೂಚಿಸಲಾರದವನಾಗಿ ದ್ದೇನೆ. ನಾನು ಬರೆದಿರುವ "ತೆನಾಲಿ ರಾಮಕೃಷ್ಣ" ಎಂಬ ನಾಟಕವೂ ಆಳಿದ ಮಹಾಸ್ವಾಮಿಯವರ ಸಮ್ಮುಖದಲ್ಲಿ ಪ್ರದರ್ಶಿತವಾಗಿ ಅವರ ಆದರಕ್ಕೆ ಪಾತ್ರವಾಯಿತು. ಅಲ್ಪನಾದ ನನ್ನಲ್ಲಿ ಅವರು ತೋರಿಸಿದ ಕೃಪಾವಾತ್ಸಲ್ಯಗಳಿಗಾಗಿ ನಾನು ಎಷ್ಟು ಮಟ್ಟಿನ ಭಕ್ತಿವಿಶ್ವಾಸಗಳಿಂದಿ ದ್ದರೂ ಸಾಲದಾಗಿದೆ.

ಆಳುವ ಮಹಾಸ್ವಾಮಿಯವರಾದ **ಶ್ರೀಮನ್ಮಹಾರಾಜ ಶ್ರೀ ಜಯ ಚಾಮರಾಜೇಂದ್ರ ಒಡೆಯರ್ ಬಹದ್ದೂರರವರು** ನನ್ನಲ್ಲಿ ವಿಶೇಷವಾಗಿ ಕೃಪೆಯನ್ನೂ ವಾತ್ಸಲ್ಯವನ್ನೂ ತೋರಿಸಿ ಅನುಗ್ರಹಿಸಿದ್ದಾರೆ. ಈ ಗ್ರಂಥವನ್ನು ಪ್ರಾಸಲು ಕಾಣಿಕೆಯಾಗಿ ಮಹಾಪ್ರಭುಗಳವರ ಮಹಾ ಸನ್ನಿಧಾನದಲ್ಲಿ ಸಮರ್ಪಿಸಲು ನಾನು ಅನುಮತಿಯನ್ನು ಬೇಡಿದೆ. ಮಹಾಸ್ವಾಮಿಯವರು ಅದಕ್ಕೆ ನನಗೆ ಅನುಮತಿಯನ್ನು ಕೊಟ್ಟು

ಪ್ರೋತ್ಸಾಹಿಸಿದ್ದಾರೆ. ಆಳಿದ ಮಹಾಸ್ವಾಮಿಯವರೂ, ದಿವಂಗತರಾದ ಶ್ರೀಮದ್ಯುವರಾಜ ಶ್ರೀಕಂಠೀರವ ನರಸಿಂಹರಾಜ ಒಡೆಯರವರೂ ಜೀವಂತರಾಗಿದ್ದಾಗಲೇ ಈ ಗ್ರಂಥವನ್ನು ರಚಿಸುವ ಕೆಲಸವು ಮುಗಿಯದೆ ಹೋಯಿತಲ್ಲಾ— ಎಂದು ವ್ಯಥೆಪಡುತ್ತಿರುವ ನನಗೆ, ಆಳುವ ಮಹಾಸ್ವಾಮಿಯವರಿಗೆ ಈ ಗ್ರಂಥವನ್ನು ಮಿಾಸಲು ಕಾಣಿಕೆಯಾಗಿ ಸಮರ್ಪಿಸುವಂತೆ ಅಪ್ಪಣೆಯಾಗಿ ಮಹಾಪ್ರಭುಗಳವರ ಕೃಪಾವಲಂಬನದ ಸುಯೋಗ ಲಭಿಸಿತಲ್ಲಾ — ಎಂಬುದೊಂದೇ ದೊಡ್ಡ ಸಮಾಧಾನ. ಈ ಗ್ರಂಥವನ್ನು ಮಹಾಪ್ರಭುಗಳವರಿಗೆ ಮಿಾಸಲು ಕಾಣಿಕೆಯಾಗಿ ಸಮರ್ಪಿಸುವುದಕ್ಕೆ ಅನುಮತಿಯು ಲಭಿಸಿ ನನ್ನ ಪ್ರಯತ್ನಕ್ಕೆ ಧನ್ಯತೆಯೊದಗಿತಲ್ಲಾ— ಎಂಬುದು ನನ್ನ ಮನಸ್ಸಿನ ತೃಪ್ತಿ. ನನ್ನ ಇತರ ಗ್ರಂಥಗಳ ಪ್ರತಿಗಳನ್ನು ಮಹಾಪ್ರಭುಗಳವರ ಮಹಾಸನ್ನಿಧಾನದಲ್ಲಿ ಒಪ್ಪಿಸಬೇಕೆಂಬ ನನ್ನ ಪ್ರಾರ್ಥನೆಯನ್ನು ಲಾಲಿಸಿ, ಆದರದಿಂದ ನನಗೆ ಸಂದರ್ಶನವನ್ನು ಕರುಣಿಸಿ, ಮಹಾಸ್ವಾಮಿಯವರು ವಿಶೇಷ ವಾತ್ಸಲ್ಯ ವಿಶ್ವಾಸಗಳನ್ನು ಸೂಚಿಸಿ ಕೃಪೆಮಾಡಿದರು. ಮಹಾಪ್ರಭುಗಳವರ ಈ ಅನುಗ್ರಹಗಳಿಗಾಗಿ ನಾನು ಅತ್ಯಂತ ರಾಜಭಕ್ತಿ ವಿಶ್ವಾಸಗಳಿಂದ ನನ್ನ ಪ್ರೀತಿ ಕೃತಜ್ಞತೆಗಳನ್ನು ಸಮರ್ಪಿಸುವೆನು.

ಈ ಗ್ರಂಥವನ್ನು ರಚಿಸಲು ನನಗೆ ಮೈಸೂರು ಸಂಸ್ಥಾನದ ದಿವಾನ್ ರವರಾದ ಅಮಿಾನ್-ಉಲ್-ಮುಲ್ಕ್ ಸರ್ ಮಿರ್ಜಾ ಎಂ. ಇಸ್ಮಾಯಿಲ್, ಕೆ.ಸಿ.ಐ.ಇ., ಓ.ಬಿ.ಇ. ಅವರಿಂದಲೂ, ಶ್ರೀಮನ್ಮಹಾರಾಜರವರ ಹುಜೂರು ಸೆಕ್ರೆಟರಿಯವರಾದ ರಾಜಸಭಾ ಭೂಷಣ ಟಿ. ತಂಬೂಚೆಟ್ಟಿ, ಓ.ಬಿ.ಇ. ಅವರಿಂದಲೂ, ರಾಜಮಂತ್ರಪ್ರವೀಣ ದಿವಾನ್ ಬಹದ್ದೂರ್ ಪೂರ್ಣ ರಾಘವೇಂದ್ರರಾಯರವರಿಂದಲೂ, ರಾಜಸೇವಾಸಕ್ತ ಎಂ. ರಾಮರಾಯರವರಿಂದಲೂ ಮತ್ತು ಸಿದ್ದಿಕ್-ಉಲ್-ಮುಲ್ಕ್ ಸಡೆಗ್ ಸಡ್ ಷಾ ಅವರಿಂದಲೂ ದೊರೆತಿರುವ ಪ್ರೋತ್ಸಾಹವು ಅಷ್ಟಿಷ್ಟಲ್ಲ. ಈ ಮಹನೀಯರುಗಳು ನನ್ನಲ್ಲಿ ಬಹಳ ವಿಶ್ವಾಸವನ್ನು ತೋರಿಸಿಯೂ ಅಮೂಲ್ಯವಾದ ಅನೇಕ ಸಂಗತಿಗಳನ್ನು ತಿಳಿಸಿಯೂ ಉಪಕಾರ ಮಾಡಿದ್ದಾರೆ. ಇದಕ್ಕಾಗಿ ಅವರೆಲ್ಲರಿಗೂ ನನ್ನ ಕೃತಜ್ಞತಾಪೂರ್ವಕವಾದ ವಂದನೆಗಳನ್ನು ಸಮರ್ಪಿಸುವೆನು. ಶ್ರೀಮನ್ಮಹಾರಾಜರವರ ಹುಜೂರು ಸೆಕ್ರೆಟರಿಯವರಾದ ರಾಜಸಭಾಭೂಷಣ ಟಿ. ತಂಬೂಚೆಟ್ಟಿ, ಓ.ಬಿ.ಇ. ಅವರು ಈ ಪುಸ್ತಕದಲ್ಲಿ ಮುದ್ರಣವಾಗಿರುವ ಅನೇಕ ಪಡಿಯಚ್ಚುಗಳಿಗಾಗಿ ಅರಮನೆಯಿಂದ ಭಾವಚಿತ್ರಗಳನ್ನು ಕೊಡಿಸಿ ಸಹಾಯ ಮಾಡಿದ್ದಾರೆ.

ಸರ್ ಮಿರ್ಜಾ ಇಸ್ಮಾಯಿಲ್‌ರವರ ಮತ್ತು ಶ್ರೀಮಾನ್ ತಂಬೂಚೆಟ್ಟಿ ಯವರ ಪ್ರೋತ್ಸಾಹ ಬಲವೂ, ಅಮೂಲ್ಯವಾದ ಸಲಹೆ ಸಹಾಯಗಳೂ ಲಭಿಸದೆಹೋಗಿದ್ದರೆ ನಾನು ಈ ಗ್ರಂಥವನ್ನು ಬರೆಯುವುದು ಸಾಧ್ಯವಿರು ತ್ತಿರಲಿಲ್ಲ. ಸರ್ ಮಿರ್ಜಾ ಇಸ್ಮಾಯಿಲ್‌ರವರು ಅಮೋಘವಾದ ಮುನ್ನುಡಿಯನ್ನು ಬರೆದು ಉಪಕರಿಸಿದ್ದಾರೆ; ಆ ಮುನ್ನುಡಿಯ ಭಾಗ್ಯ ವನ್ನು ಪಡೆದುದರಿಂದ ನನ್ನ ಗ್ರಂಥದ ಬೆಲೆಯು ಬಹುವಾಗಿ ಹೆಚ್ಚಿದೆ; ಅವರ ಪ್ರೀತಿವಿಶ್ವಾಸಗಳಿಂದ ನನ್ನ ಉತ್ಸಾಹ ಸಂತೋಷಗಳು ವಿಶೇಷವಾಗಿ ಹೆಚ್ಚಿವೆ. ಅವರನ್ನು ಸೇವಿಸುವ ಸುಯೋಗವು ನನಗೆ ಲಭಿಸಿದಾಗಿ ನಿಂದಲೂ ಅವರು ನನ್ನಲ್ಲಿ ಅತ್ಯಂತ ಮಮತೆಯನ್ನು ತೋರಿಸಿ ಅಕ್ಕರೆ ಯಿಂದ ಕಂಡಿದ್ದಾರೆ. ಈ ಮಹನೀಯರಿಬ್ಬರೂ ನನ್ನಲ್ಲಿ ಇಷ್ಟು ವಿಶ್ವಾಸ ವನ್ನು ತೋರಿಸಿ ಸಹಾಯ ಮಾಡಿರುವುದನ್ನು ನನ್ನ ಜೀವನದ ದೊಡ್ಡ ದೊಂದು ಸುಯೋಗವೆಂದು ಭಾವಿಸಿದ್ದೇನೆ; ನಾನು ಅವರಿಬ್ಬರಿಗೂ ಮತ್ತೊಮ್ಮೆ ನನ್ನ ಕೃತಜ್ಞತಾಪೂರ್ವಕವಾದ ವಂದನೆಗಳನ್ನು ಸಮರ್ಪಿ ಸುತ್ತೇನೆ.

ಗ್ರಂಥ ರಚನೆಗೆ ಅವಶ್ಯವಾಗಿದ್ದ ನಾನಾ ಸಂಗತಿಗಳನ್ನು ತಿಳಿಸು ವುದೇ ಮುಂತಾದ ರೀತಿಗಳಲ್ಲಿ ಇತರ ಮಹನೀಯರನೇಕರೂ ನನಗೆ ವಿಶ್ವಾಸದಿಂದ ಸಹಾಯ ಮಾಡಿದ್ದಾರೆ. ಅವರುಗಳ ಉಪಕಾರವನ್ನೂ ಸ್ಮರಿಸಿ ಅವರುಗಳಿಗೂ ನನ್ನ ಕೃತಜ್ಞತಾಪೂರ್ವಕವಾದ ವಂದನೆಗಳನ್ನರ್ಪಿ ಸುವೆನು. ಅವರುಗಳು ಯಾರು ಯಾರೆಂದರೆ: ರಾಜಸೇವಾಸಕ್ತ ಎಸ್. ಹಿರಿಯಣ್ಣಯ್ಯನವರು, ಶಸ್ತ್ರವೈದ್ಯ ಪ್ರವೀಣ ಡಾಕ್ಟರ್ ಎಸ್. ಸುಬ್ಬ ರಾಯರವರು, ಶ್ರೀ ಶ್ರೀವಾಸಾನಂದ ಸ್ವಾಮಿಯವರು, ರಾಜಸೇವಾಸಕ್ತ ಡಾಕ್ಟರ್ ಎನ್. ರಂಗಾಚಾರ್ಯರವರು, ಬ್ರಹ್ಮಶ್ರೀ ಗುರುಸೇವಾಪ್ರವೀಣ ನಂಜನಗೂಡು ಶ್ರೀಕಂಠಶಾಸ್ತ್ರಿಗಳು, ಬ್ರಹ್ಮಶ್ರೀ ಧರ್ಮಾಧಿಕಾರಿಗಳಾದ ವಿದ್ಯಾವಿಶಾರದ ಕುಣಿಗಲು ರಾಮಶಾಸ್ತ್ರಿಗಳು, ಬ್ರಹ್ಮಶ್ರೀ ಪಂಡಿತರತ್ನಂ ಕಾನಕಾನಹಳ್ಳಿ ನಾರಾಯಣಶಾಸ್ತ್ರಿಗಳು, ಬ್ರಹ್ಮಶ್ರೀ ಪೌರಾಣಿಕರತ್ನಂ ಹೊಳವನಹಳ್ಳಿ ಶೇಷಾಚಾರ್ಯರವರು, ಬ್ರಹ್ಮಶ್ರೀ ತಿರುವಳ್ಳೂರು ಶ್ರೀನಿವಾಸ ರಾಘವಾಚಾರ್ಯರು, ರಾಜಸೇನಾಭೂಷಣ ಲೆಫ್ಟಿನೆಂಟ್ ಕರ್ನಲ್ ಎ. ವಿ. ಸುಬ್ರಹ್ಮಣ್ಯರಾಜ ಅರಸಿನವರು, ರಾಜಸೇನಾತಿಲಕ ಲೆಫ್ಟಿನೆಂಟ್ ಕರ್ನಲ್ ಎಸ್. ಗೋಪಾಲರಾಯರು, ಶ್ರೀಮಾನ್ ಕೆ. ಬಸವರಾಜ ಅರಸಿನವರು, ಶ್ರೀಮಾನ್ ಡಿ. ಶ್ರೀಕಂಠ ಲಕ್ಷ್ಮೀಕಾಂತರಾಜ ಅರಸಿನವರು, ಶ್ರೀಮಾನ್ ಎಚ್. ಎಲ್. ದೇವರಾಜ ಅರಸಿನವರು,

ಶ್ರೀಮಾನ್ ಎಂ. ಪಿ. ಸುಬ್ರಹ್ಮಣ್ಯರಾಜ ಅರಸಿನವರು, ಶ್ರೀಮಾನ್ ಎಚ್. ಮುದ್ದರಾಜ ಅರಸಿನವರು, ಶ್ರೀಮಾನ್ ಡಿ. ರಾಮಯ್ಯನವರು, ಶ್ರೀಮಾನ್ ಡಿ. ಎನ್. ನೀಲಕಂಠರಾಯರು, ಶ್ರೀಮಾನ್ ಎ. ವೆಂಕಟ ಸುಬ್ಬಯ್ಯನವರು, ಶ್ರೀಮಾನ್ ಸಿ. ವಿ. ಸುಬ್ರಹ್ಮಣ್ಯರಾಜ ಅರಸಿನವರು, ಶ್ರೀಮಾನ್ ಎಫ್. ಸಿ. ದೇವರಾಜ ಅರಸಿನವರು, ಮೇಜರ್ ಎಂ. ಸಿ. ಸುಬ್ಬರಾಜ ಅರಸಿನವರು, ಶ್ರೀಮಾನ್ ಎಚ್. ಸಿದ್ದರಾಜ ಅರಸಿನವರು, ಶ್ರೀಮಾನ್ ಎಂ. ಜಿ. ವ್ಹೀಕ್ರಿಯವರು, ಶ್ರೀಮಾನ್ ಎಸ್. ಗರಳಪುರಿ ಶಾಸ್ತ್ರಿಯವರು, ಶ್ರೀಮಾನ್ ವಿ. ಸುಬ್ರಹ್ಮಣ್ಯ ಐಯರವರು, ಡಾಕ್ಟರ್ ಎಂ. ಎಚ್. ಕೃಷ್ಣ ಅವರು, ಶ್ರೀಮಾನ್ ಎ. ಸಿ. ಲಿಂಗರಾಜ ಅರಸಿನವರು, ಶ್ರೀಮಾನ್ ಎಚ್. ನಿರಂಜರಾಜ ಅರಸಿನವರು, ಶ್ರೀಮಾನ್ ಡಿ. ಸಿ. ನಂಜರಾಜ ಬಹದ್ದೂರ್ ಅವರು, ಶ್ರೀಮಾನ್ ಹುಮಾಯೂನ್ ಮಿರ್ಜಾ ಅವರು, ಶ್ರೀಮಾನ್ ಟಿ. ಸುಬ್ರಹ್ಮಣ್ಯರಾಜ ಅರಸಿನವರು, ಶ್ರೀಮಾನ್ ಟಿ. ರಾಮಯ್ಯನವರು, ಶ್ರೀಮಾನ್ ರಾವ್ ಬಹದ್ದೂರ್ ಎನ್. ಎಸ್. ನಂಜುಂಡಯ್ಯನವರು, ಶ್ರೀಮಾನ್ ಜಿ. ದೇವಾಜಿರಾಯರು, ಶ್ರೀಮಾನ್ ಟಿ. ಎಸ್. ಅಲೀಖಾನ್‌ರವರು, ಶ್ರೀಮಾನ್ ಟಿ. ಎಂ. ಜೀವಣ್ಣರಾಯರು, ಶ್ರೀಮಾನ್ ಸಿ. ಸಂಜರಾಜ ಐಯಂಗಾರ್ಯರವರು, ಶ್ರೀಮಾನ್ ಪಿ. ಜಿ. ಸಚ್ಚಿದಾನಂದಂ ಪಿಳ್ಳೆಯವರು, ಶ್ರೀಮಾನ್ ಕೆ. ನರಸಿಂಹ ಐಯಂಗಾರ್ಯರವರು, ಶ್ರೀಮಾನ್ ಡಿ. ವೆಂಕಟನಂಜಪ್ಪನವರು, ಶ್ರೀಮಾನ್ ಟಿ. ಜಿ. ದೊರೆಸ್ವಾಮಿ ಐಯರವರು, ಶ್ರೀಮಾನ್ ಸಿ. ಆನಂದರಾಯರವರು, ಬ್ರಹ್ಮಶ್ರೀ ಪುರೋಹಿತ ನಂಜುಂಡಶಾಸ್ತ್ರಿಗಳವರು, ಬ್ರಹ್ಮಶ್ರೀ ಮಹಾವಿದ್ವಾನ್ ಸಾಹಿತ್ಯರತ್ನಂ ಗೋಪಾಲಕೃಷ್ಣ ಶಾಸ್ತ್ರಿಗಳವರು, ಬ್ರಹ್ಮಶ್ರೀ ಋತ್ವಿಕ್ ರಾಮಾಶಾಸ್ತ್ರಿಗಳವರು, ಶ್ರೀಮಾನ್ ಕೆ. ಸುಬ್ಬರಾಯರು,ಶ್ರೀಮಾನ್ ಎನ್. ನರಸಿಂಹಮೂರ್ತಿಯವರು,ಬ್ರಹ್ಮಶ್ರೀ ಮಹಾವಿದ್ವಾನ್ ಸಾಹಿತ್ಯರತ್ನಂ ಬೆಟ್ಟಹಲಸೂರು ವೆಂಕಟರಾಮಾ ಶಾಸ್ತ್ರಿಗಳು, ಬ್ರಹ್ಮಶ್ರೀ ಮಹಾವಿದ್ವಾನ್ ಪಂಡಿತರತ್ನಂ ಕಾಶಿಸುಬ್ರಹ್ಮಣ್ಯ ಶಾಸ್ತ್ರಿಗಳು, ಬ್ರಹ್ಮಶ್ರೀ ಸೋಸಲೆ ಕೃಷ್ಣಸ್ವಾಮಿ ಶಾಸ್ತ್ರಿಗಳು, ಶ್ರೀಮಾನ್ ಎಸ್. ಗೋಪಾಲಸ್ವಾಮಿಯವರು,ಬ್ರಹ್ಮಶ್ರೀ ವಿಶ್ವೇಶ್ವರಭಟ್ಟರು, ಗಾಯಕ ಶಿಖಾಮಣಿ ಎಲ್. ಮುತ್ತಯ್ಯ ಭಾಗವತರು, ವೈಣಿಕ ಪ್ರವೀಣ ವೆಂಕಟ ಗಿರಿಯಪ್ಪನವರು, ಶ್ರೀಮಾನ್ ಎಸ್. ರಾಮರಾಯರು, ಶ್ರೀಮಾನ್ ವೆಂಕಟನಾರಾಯಣರಾಯರು, ಶ್ರೀಮಾನ್ ಎಂ. ಎಸ್. ಸುಬ್ರಹ್ಮಣ್ಯ ಶಾಸ್ತ್ರಿಗಳವರು, ಶ್ರೀಮಾನ್ ಎಲ್. ರಾಜಾರಾಯರು, ಶ್ರೀಮತಿ

ಪಂಡಿತಾ ಸುಂದರಮ್ಮನವರು ಮತ್ತು ಲೋಕಸೇವಾಪರಾಯಣೆ ಶ್ರೀಮತಿ ಕೆ. ಡಿ. ರುಕ್ಮಿಣಿಯಮ್ಮನವರು. ಶ್ರೀಮಾನ್ ಬೈರಣ್ಣನವರು, ಶ್ರೀಮಾನ್ ಗುರಿಕಾರ ಬಸವಲಿಂಗಯ್ಯನವರು ಮುಂತಾದ ಇತರ ಕೆಲವು ಮಂದಿ ಮಹಾಶಯರುಗಳಿಂದಲೂ ನನಗೆ ಸಹಾಯವಾಗಿದೆ. ಅವರಿಗೂ ಸಹ ನಾನು ಕೃತಜ್ಞನಾಗಿದ್ದೇನೆ.

ದಿವಂಗತರುಗಳಾದ ರಾಜಕಾರ್ಯಪ್ರಸಕ್ತ ರಾವ್ ಬಹದ್ದೂರ್ ಎಂ. ಶಾಮರಾಯರು, ಲೆಫ್ಟಿನೆಂಟ್ ಕರ್ನಲ್ ಬಿ. ಪಿ. ಕೃಷ್ಣೇ ಅರಸಿನವರು, ಶ್ರೀಮಾನ್ ಪಿ. ಎಫ್. ಬೌರಿಂಗ್‌ರವರು, ಶ್ರೀಮಾನ್ ಪಿ. ಎಸ್. ಗೋವಿಂದರಾಯರು ಮತ್ತು ವೈಣಿಕ ಪ್ರವೀಣ ಸುಬ್ಬಣ್ಣನವರು, ಈ ಐದು ಮಂದಿ ಮಹನೀಯರಿಂದ ನನಗೆ ಆಗಿರುವ ಅಮೂಲ್ಯ ಸಹಾಯವನ್ನು ಸ್ಮರಿಸುವುದೂ ಕೂಡ ನನ್ನ ಅವಶ್ಯಕರ್ತವ್ಯವಾಗಿದೆ. ಅವರು ಐದು ಮಂದಿಗಳೂ ಸಹ ನನ್ನಲ್ಲಿ ಬಹಳ ವಿಶ್ವಾಸ ತೋರಿ ಬಹಳ ಸ್ವಾರಸ್ಯವಾದ ಅನೇಕ ಸಂಗತಿಗಳನ್ನು ತಿಳಿಸಿ ಉಪಕಾರ ಮಾಡಿದರು.

ಈ ಗ್ರಂಥದಲ್ಲಿ ಉಪಯೋಗಿಸಿರುವ ಪಡಿಯಚ್ಚುಗಳಲ್ಲಿ ಸರ್ ಮಿರ್ಜಾ ಎಂ. ಇಸ್ಮಾಯಿಲ್‌ರವರ ಭಾವಚಿತ್ರಗಳ ಪಡಿಯಚ್ಚುಗಳು ದಿವಾನ್‌ರವರ ಕಚೇರಿಯಿಂದ ದೊರೆತುವು; ಪ್ರಥಮ ಸಚಿವರಾದ ರಾಜಮಂತ್ರ ಪ್ರವೀಣ ಎನ್. ಮಾಧವರಾಯರು ಮತ್ತು ದ್ವಿತೀಯ ಸಚಿವರಾದ ರಾಜಮಂತ್ರಪ್ರವೀಣ ಕೆ. ವಿ. ಅನಂತರಾಮನ್‌ರವರ ಭಾವ ಚಿತ್ರಗಳ ಪಡಿಯಚ್ಚುಗಳೂ, ಖೆಡ್ಡಾ ಆವರಣದ ಪಡಿಯಚ್ಚೂ, ಕೃಷ್ಣರಾಜ ಸಾಗರ ಮತ್ತು "ಬೃಂದಾವನ" ದೃಶ್ಯದ ಪಡಿಯಚ್ಚುಗಳೂ ಮತ್ತು ರಜತೋತ್ಸವದ ಸ್ಮಾರಕವಾದ ವೃತ್ತಿಶಿಕ್ಷಣಶಾಲೆಯ ಪಡಿಯಚ್ಚೂ, ಪಬ್ಲಿಸಿಟಿ ಆಫೀಸಿನವರಿಂದ ಮತ್ತು ಸರ್ಕಾರಿ ಮುದ್ರಣಶಾಲೆಯವರಿಂದ ದೊರೆತುವು; ಖೆಡ್ಡಾ ಕಾರ್ಯಕ್ರಮದ ಐದು ಪಡಿಯಚ್ಚುಗಳು ದಸರಾ ವಸ್ತುಪ್ರದರ್ಶನ ಸಮಿತಿಯ ಸೆಕ್ರೆಟರಿಯವರಿಂದ ದೊರೆತುವು. ಈ ಉಪಕಾರಕ್ಕಾಗಿ ಸಂಬಂಧಪಟ್ಟ ಅಧಿಕಾರಿಗಳೆಲ್ಲರಿಗೂ ನನ್ನ ಕೃತಜ್ಞತಾ ಪೂರ್ವಕವಾದ ವಂದನೆಗಳನ್ನು ಸಮರ್ಪಿಸುವೆನು. ಇತರ ಪಡಿಯಚ್ಚು ಗಳಲ್ಲಿ ಕೆಲವಕ್ಕೆ ಭಾವಚಿತ್ರಗಳು ಮೇಜರ್ ಎಂ. ಸಿ. ಸುಬ್ಬರಾಜ ಅರಸಿನವರಿಂದಲೂ, ಶ್ರೀಮಾನ್ ಟಿ. ಎಸ್. ಅಲೀಖಾನ್‌ರವರಿಂದಲೂ ಮತ್ತು ಶ್ರೀಮಾನ್ ಡಿ. ಎನ್. ನೀಲಕಂಠರಾಯರವರಿಂದಲೂ ದೊರೆತುವು; ಉಳಿದ ಪಡಿಯಚ್ಚುಗಳಿಗೆಲ್ಲ ಚಿತ್ರಗಳು ಅರಮನೆ ಅಧಿಕಾರಿ ಗಳಿಂದ ದೊರೆತುವು. ಈ ಉಪಕಾರಕ್ಕಾಗಿ ಸಹ, ನಾನು ನನ್ನ ಕೃತಜ್ಞತಾ

ಪೂರ್ವಕವಾದ ವಂದನೆಗಳನ್ನು ಅವರೆಲ್ಲರಿಗೂ ಸಮರ್ಪಿಸುವೆನು. ಗ್ರಂಥವನ್ನು ಅಂದವಾಗಿ ಬೇಗ ಮುದ್ರಿಸಿಕೊಟ್ಟುದಕ್ಕಾಗಿ ಬೆಂಗಳೂರು ಪ್ರೆಸ್ಸಿನವರಿಗೂ ನನ್ನ ವಂದನೆಗಳು ಸಲ್ಲಬೇಕಾಗಿವೆ.

ಈ ಗ್ರಂಥವನ್ನು ರಚಿಸುವುದರಲ್ಲಿ ನಾನು ಮೈಸೂರು ಸಂಸ್ಥಾನದ ಚರಿತ್ರೆ ಮುಂತಾದ ವಿಚಾರಗಳಿಗೆ ಸಂಬಂಧಪಟ್ಟ ಅನೇಕ ದೊಡ್ಡ ದೊಡ್ಡ ಗ್ರಂಥಗಳನ್ನೂ. ಮಹಾಪ್ರಭುಗಳವರ ಯಾತ್ರಾದಿಗಳೇ ಮುಂತಾದ ವಿಚಾರಗಳನ್ನು ಕುರಿತು ಅರಮನೆಯ ಅಧಿಕಾರಿಗಳಿಂದ ಪ್ರಕಟವಾಗಿರುವ ನಾನಾ ಗ್ರಂಥಗಳನ್ನೂ, ಸರ್ಕಾರದಿಂದ ಪ್ರಕಟವಾದ ರಾಜ್ಯಾಡಳಿತ ಸಾಹಿತ್ಯವನ್ನೂ, ಓದಿನೋಡಿದ್ದೇನೆ; ನಾನಾ ಗ್ರಂಥಗಳ ಹೆಸರುಗಳೂ ಸಂದರ್ಭಾನುಸಾರವಾಗಿ ಅಲ್ಲಲ್ಲಿ ಅಡಿಟಿಪ್ಪಣಿಗಳಲ್ಲಿ ಸೂಚಿತವಾಗಿವೆ; ಆದಕಾರಣ, ಪ್ರತ್ಯೇಕವಾಗಿ ಅವುಗಳ ಪಟ್ಟಿಯನ್ನು ಕೊಟ್ಟಿಲ್ಲ. ಶ್ರೇಷ್ಠ ರೀತಿಯಲ್ಲಿ ರಾಜ್ಯಾಡಳಿತವನ್ನು ನಿರ್ವಹಿಸಿದ ರಾಜಮಹಾರಾಜರುಗಳೇ ಮುಂತಾದ—ನಮ್ಮ ಭರತಖಂಡದ ಮತ್ತು ಪರದೇಶಗಳ—ಮಹಾವ್ಯಕ್ತಿಗಳ ಜೀವನಚರಿತ್ರೆಗಳನ್ನೂ ಓದಿನೋಡಿ ಮೇಧಾವಿಗಳಾದ ಪ್ರತಿಭಾಶಾಲಿಗಳು ಅವುಗಳನ್ನು ಬರೆದಿರುವ ರೀತಿಯನ್ನು ಮನನಮಾಡಿ ನೋಡಿದ್ದೇನೆ. ಗ್ರಂಥ ರಚನೆಗೆ ಬೇಕಾದ ಸಾಹಿತ್ಯವನ್ನು ಅಣಿಮಾಡಿಕೊಳ್ಳುವ ಪವಿತ್ರಕಾರ್ಯದಲ್ಲಿ ಸ್ವಲ್ಪವೂ ಕರ್ತವ್ಯಲೋಪ ಮಾಡದೆ ನನ್ನಿಂದ ಸಾಧ್ಯವಿದ್ದ ಮಟ್ಟಿಗೂ ಶ್ರದ್ಧೆಯಿಂದ ಕೆಲಸಮಾಡಿ ಯಥಾಶಕ್ತಿಯಾಗಿ ಗ್ರಂಥ ರಚನೆಮಾಡಿದ್ದೇನೆ. ಈಗ ತೇಜೋಮಯರಾದ ಅಮರರಾಗಿ ತಮ್ಮ ಧವಳ ಕೀರ್ತಿಯ ಬೆಳದಿಂಗಳಿನಲ್ಲಿ ವಿರಾಜಿಸುತ್ತಿರುವ ಪೂಜ್ಯರಾದ ಶ್ರೀಮನ್ಮಹಾರಾಜ ಶ್ರೀಮನ್ನಾಲ್ವಡಿ ಶ್ರೀ ಕೃಷ್ಣರಾಜೇಂದ್ರ ಒಡೆಯರವರ ಸನ್ನಿಧಿಯಲ್ಲಿ ನಾನು ಹೊತ್ತಿಸಿಟ್ಟಿರುವ ಈ ಸಣ್ಣ ಸೊಡರಿನ ನಂದಾದೀಪವೇ ಅವರಿಗೆ ನಾನು ಭಕ್ತಿ ವಿಶ್ವಾಸಗಳಿಂದ ಸಮರ್ಪಿಸಿರುವ ಚರಮ ಸೇವೆ.

ಬೆಂಗಳೂರು<br>ತಾ॥ ೧೮-೪-೧೯೪೧

ಸಿ. ಕೆ. ವೆಂಕಟರಾಮಯ್ಯ

# ವಿಷಯ ಸೂಚಿಕೆ

# ಮೊದಲನೆಯ ಅಧ್ಯಾಯ

## ಅವತರಣಿಕೆ

ಓಂ

ಭದ್ರಂ ಕರ್ಣೇಭಿಶ್ಶೃಣುಯಾಮ ದೇವಾಃ
ಭದ್ರಂ ಪಶ್ಯೇಮಾಕ್ಷಭಿರ್ಯಜತ್ರಾಃ
ಸ್ಥಿರೈರಂಗೈಸ್ತುಷ್ಟುವಾಂಸಸ್ತನೂಭಿ
ರ್ವ್ಯಶೇಮ ದೇವಹಿತಂ ಯದಾಯುಃ ॥

ನಮ್ಮನ್ನಾಳಿದ ಮಹಾಪ್ರಭುಗಳವರಾದ ಶ್ರೀಮನ್ನಾಲ್ವಡಿ ಶ್ರೀ ಕೃಷ್ಣ ರಾಜೇಂದ್ರ ಒಡೆಯರವರು ಮಹೋನ್ನತರಾಗಿ ಬಾಳಿದ ಸಾತ್ವಿಕ ಶ್ರೇಷ್ಠರು. ಮಾನವ ಜೀವನದ ಅಮರ ಜ್ಯೋತಿಗಳೆಂದು ಒಟ್ಟು ಪ್ರಪಂಚದಲ್ಲೇ ಪ್ರಸಿದ್ಧರಾಗಿರುವ ಮಹಾನುಭಾವರ ಪಙ್ಕ್ತಿಯಲ್ಲಿ ವಿರಾಜಿಸಲು ಅವರಿಗೂ ಪೂರ್ಣಾರ್ಹತೆಯುಂಟು. ಒಟ್ಟು ಪ್ರಪಂಚ ದಲ್ಲೇ ಪ್ರಖ್ಯಾತರಾದ ಮಹನೀಯರನೇಕರು ಅವರನ್ನು ಕೊಂಡಾಡಿ ದ್ದಾರೆ; ಅವರ ಅಕಾಲ ಮರಣದಿಂದ ಭರತಖಂಡಕ್ಕೆ ಮಾತ್ರವೇ ಅಲ್ಲದೆ ಒಟ್ಟು ಪ್ರಪಂಚಕ್ಕೇ ನಷ್ಟವಾಯಿತೆಂದು ವಿಷಾದಿಸಿದ್ದಾರೆ. ಜಗದ್ವಂದ್ಯ ರಾದ ಮಹಾಪುರುಷರ ಗುಂಪಿಗೆ ಸೇರಿದ ಅನೇಕ ಮಂದಿ ಭಾರತೀಯರು ಅವರನ್ನು ಆದರ್ಶ ಪ್ರಭುಗಳೆಂದು ಶ್ಲಾಘಿಸಿ, ಅವರು ರಾಜ್ಯಭಾರ ಮಾಡುತ್ತಿದ್ದಾಗ್ಗೆ ಮೈಸೂರು ಸಂಸ್ಥಾನಕ್ಕೆ ಬಂದು ನೋಡಿ, ನಮ್ಮ ಸಂಸ್ಥಾನವನ್ನು ವಿಧವಿಧವಾಗಿ ಕೊಂಡಾಡಿದ್ದಾರೆ. ಮಹಾ ಪ್ರಭು ಗಳವರು ಕಾಲಾಧೀನರಾದುದಕ್ಕಾಗಿ ಮನಃಪೂರ್ವಕವಾದ ಸಂತಾಪ ವನ್ನು ಸೂಚಿಸಿದ್ದಾರೆ. ಲಾರ್ಡ್ ಸ್ಯಾಮ್ಯುಯೆಲ್ ಎಂಬ ಮಹಾಶಯರು ದಿವಾನ್‌ರವರಿಗೆ ಬರೆದ ಪತ್ರದಲ್ಲಿ, "ಶ್ರೀಮನ್ಮಹಾರಾಜರವರು ಮೃತ ಪಟ್ಟರೆಂಬ ವಾರ್ತೆಯನ್ನು ಕೇಳಿ, ಅವರಲ್ಲಿ ಮೆಚ್ಚಿಕೆಯೂ ಗೌರವವೂ ಇದ್ದ ಈ ದೇಶದವರನೇಕರು ವಿಶೇಷವಾಗಿ ದುಃಖಪಡುತ್ತಿದ್ದೇವೆ. ಅವರ ಪರಿಚಯ ಲಾಭದ ಸುಯೋಗವನ್ನು ಪಡೆದಿದ್ದವರ ದುಃಖವಂತೂ ಇನ್ನೂ ಹೆಚ್ಚು. ತಮ್ಮ ಪ್ರಭುಪದವಿಯಿಂದ ತಮಗೆ ದೊರೆತ ಅವಕಾಶಗಳನ್ನು ಅವರಷ್ಟುಮಟ್ಟಿಗೆ ವಿವೇಕದಿಂದಲೇ ಆಗಲಿ ಅಥವಾ ಅವರಷ್ಟುಮಟ್ಟಿಗೆ ಚೆನ್ನಾಗಿಯೇ ಆಗಲಿ ಉಪಯೋಗಿಸಿಕೊಂಡ ಅಥವಾ ಅವರಷ್ಟುಮಟ್ಟಿಗೆ

ಅಷ್ಟು ಅಧಿಕಸಂಖ್ಯೆಯ ಪ್ರಜಾವರ್ಗಕ್ಕೆ ಅಷ್ಟು ಮಹತ್ತರ ಪ್ರಯೋಜನ
ಗಳನ್ನುಂಟುಮಾಡಿ ಉಪಕಾರಮಾಡಿದ ಪ್ರಭುಗಳು ನಮ್ಮ ಕಾಲದಲ್ಲಾಗಲಿ
ಇತಿಹಾಸ ಪ್ರಸಿದ್ಧವಾದ ಹಿಂದಿನ ಕಾಲದಲ್ಲಾಗಲಿ ತೀರವಿರಳ" ಎಂದು
ಸೂಚಿಸಿ ಶ್ಲಾಘಿಸಿದ್ದಾರೆ. ' ಹಿಂದೆ ಭರತಖಂಡದಲ್ಲಿ ಮೇಜರ್ ಜನರಲ್
ಎಂಬ ದೊಡ್ಡ ಸೈನ್ಯಾಧಿಕಾರದಲ್ಲಿದ್ದ ಶ್ರೀಮಾನ್ ಎ. ಎಂ. ಮಿಲ್ಸ್ ಎಂಬ
ಮಹಾಶಯರು ಮಹಾಪ್ರಭುಗಳವರ ಮರಣ ವಾರ್ತೆಯನ್ನು ಕೇಳಿ
ತಮ್ಮ ಸಂತಾಪವನ್ನು ಸೂಚಿಸಿ ಬರೆದ ಪತ್ರದಲ್ಲಿ, "....ನಾನು ನನ್ನ
ಹುದ್ದೆಯ ಸಂಬಂಧದಲ್ಲಿ ಮೈಸೂರು ಸಂಸ್ಥಾನಕ್ಕೆ ಬಂದಾಗಲೆಲ್ಲ ಅವರ
ಗಾಂಭೀರ್ಯ ಕರುಣೆಗಳನ್ನೂ ಅವರ ಸುಸ್ವಭಾವವನ್ನೂ ಕಂಡು
ಆಶ್ಚರ್ಯಚಕಿತನಾಗುತ್ತಿದ್ದೆ. ಅವರು ಪೂರ್ತಿಯಾಗಿ ಅಪರಂಜಿಯಂತಿ
ದ್ದರು. ಅವರ ಮರಣದಿಂದ ಸಾಮಾನ್ಯವಾಗಿ ಒಟ್ಟು ಪ್ರಪಂಚಕ್ಕೂ,
ವಿಶೇಷವಾಗಿ ಬ್ರಿಟಿಷ್ ಚಕ್ರಾಧಿಪತ್ಯಕ್ಕೂ, ದೊಡ್ಡ ನಷ್ಟವುಂಟಾಗಿದೆ"
ಎಂದು ತಿಳಿಸಿದ್ದಾರೆ. ಅಳಿದ ಮಹಾಸ್ವಾಮಿಯವರು ಸಂಗೀತ ಸಾಹಿತ್ಯ
ಕಲಾಕೋವಿದರಾಗಿ ಸಮಸ್ತ ರೀತಿಗಳಲ್ಲಿಯೂ ಸರಸ್ವತೀದೇವಿಗೆ ಸೇವೆ
ಯನ್ನು ಸಲ್ಲಿಸುತ್ತ, ನಿರಂತರವೂ ತಮ್ಮ ಜ್ಞಾನ ಭಂಡಾರವನ್ನು ವೃದ್ಧಿ
ಪಡಿಸಿಕೊಳ್ಳುತ್ತಿದ್ದವರು; ಕೃಪಾನ್ವಿತರಾಗಿ ಪ್ರಾಣಿಮಾತ್ರದಲ್ಲಿ ದಯೆ
ತೋರುತ್ತ, ಭಾರತೀಯ ಸಂಸ್ಕೃತಿಯ ಸಿರಿ ಬೀಡಿನಂತಿದ್ದವರು. ದೇಶ
ವತ್ಸಲರಾಗಿ ಧರ್ಮದಿಂದ ರಾಜ್ಯಭಾರಮಾಡುತ್ತ, ಸಚ್ಚಾರಿತ್ರ ಮಹಿಮೆ
ಯಿಂದ ಅಖಿಲ ರಾಜಮಂಡಲದಲ್ಲೇ ಅಗ್ಗಳೆಯರಾಗಿ ರಾಜರ್ಷಿಯೆಂಬ
ಹೆಸರು ಸಾರ್ಥಕವಾಗುವಂತೆ ಹಿರಿಯ ಜೀವನವನ್ನು ನಡೆಯಿಸಿದವರು;
ಭಾರತೀಯ ಸಂಸ್ಕೃತಿಯನ್ನುಳಿಸಿಕೊಂಡು ಅದರ ಜೊತೆಗೆ ಪಾಶ್ಚಾತ್ಯ
ಸಂಸ್ಕೃತಿಯಲ್ಲಿ ಶ್ರೇಷ್ಠವಾಗಿರುವುದನ್ನೆಲ್ಲ ಅನುಗೂಡಿಸಿ ಹೊಂದಿಸಿ
ದೇಶೋನ್ನತಿ ಸಾಧನೆಗಾಗಿ ತಮ್ಮ ಜೀವನವನ್ನೇ ತೆಯ್ದವರು. ರಾಜ
ಮಂಡಲಕ್ಕೇ ಒಂದು ಭೂಷಣವೆನಿಸಿ ರತ್ನಸಿಂಹಾಸನವನ್ನು ಬೆಳಗಿ,
ಪ್ರಜೆಗಳನ್ನು ಮಕ್ಕಳಂತೆ ಕಾಪಾಡಿದವರು.

ಜನ ಜೀವನದ ಯಾವ ಕ್ಷೇತ್ರದಲ್ಲಾಗಲಿ ಸಮಸ್ತ ಸಾಧನೆಗಳೂ
ಸಮಸ್ತ ಸಿದ್ಧಿಗಳೂ ಪರಿಸಮಾಪ್ತಿ ಹೊಂದುವುದು ವಿಶ್ವಪ್ರೇಮದಲ್ಲಿ;
ಪ್ರಾಣಿ ಮಾತ್ರದಲ್ಲಿ ದಯೆ ತೋರುವುದರಲ್ಲಿ. ಇದುವರೆಗೆ ಪ್ರಪಂಚದಲ್ಲಿ
ಅವತರಿಸಿರುವ ಮಹಾನುಭಾವರ ಅಮರವಾಣಿಗಳೆಲ್ಲ ಸಾರಿರುವುದೂ ಸಹ
ಧರ್ಮವು ದಯಾಮೂಲವೆಂಬ ಅಮೋಘ ತತ್ತ್ವವನ್ನೇ. ಆದಿಕವಿ
ವಾಲ್ಮೀಕಿ ಮಹರ್ಷಿಗಳ ಅದ್ಭುತವಾದ ಕವಿತಾ ಸಾಮರ್ಥ್ಯಕ್ಕಿಂತಲೂ

ಹೆಚ್ಚಾಗಿ ನಮ್ಮ ಮನಸ್ಸನ್ನು ಸೆಳೆಯುವುದು ಅವರು ಕ್ರೌಂಚ ಪಕ್ಷಿಗಳಲ್ಲಿ ಅವ್ಯಾಜವಾಗಿ ತೋರಿಸಿದ ಅನುಕಂಪ. ಗೌತಮ ಬುದ್ಧನನ್ನು ಭಗವಂತನ ಅವತಾರವೆನಿಸುವ ಮಟ್ಟಕ್ಕೆ ಏರಿಸಿದ ಗುಣಗಳೆಂದರೆ ಆತನ ಅಸಾಧಾರಣ ಪ್ರಾಣಿ ದಯೆ ಮತ್ತು ಲೋಕ ಕಾರುಣ್ಯಗಳೇ.

ಈ ದೃಷ್ಟಿಯಿಂದ ನೋಡಿದರೂ, ಆಳಿದ ಮಹಾಸ್ವಾಮಿಯವರು ಜನ ಜೀವನದ ಶಕಪುರುಷರೆನಿಸಿರುವವರ ಗುಂಪಿಗೇ ಸೇರುವಂತಹವರು; ನೆನೆದಾಗಲೆಲ್ಲ ವಿಸ್ಮಯವಾಗುವಮಟ್ಟಿನ ಪ್ರಾಣಿದಯೆಯನ್ನು ತೋರಿಸುತ್ತಿದ್ದವರು. ಈಗ್ಗೆ ಹದಿನೈದು ವರ್ಷಗಳ ಹಿಂದೆ, ಅವರು ಸಂಚಾರಾರ್ಥವಾಗಿ ಕೋಲಾರ ಡಿಸ್ಟ್ರಿಕ್ಟಿಗೆ ದಯಮಾಡಿದ್ದರು. ಬಾಗೇಪಲ್ಲಿಯ ಬಳಿಯಲ್ಲಿ (ಮೈಸೂರಿನಿಂದ ಬಂದಿದ್ದ) ಅರಮನೆಯ "ಟಾಂಗಾ" ಬಂಡಿಗೆ ಒಬ್ಬ ರೈತನ ಎತ್ತುಗಳನ್ನು ಹೂಡಿಸಿ ಸಮ್ಮುಖದ ಅಧಿಕಾರಿಗಳೊಡನೆಯೂ ಕೋಲಾರ ಡಿಸ್ಟ್ರಿಕ್ಟಿನ ಡೆಪ್ಯುಟಿಕಮಿಷನರವರೊಡನೆಯೂ ಅದರಲ್ಲಿ ಕುಳಿತು ಪ್ರಯಾಣಮಾಡುತ್ತಿದ್ದರು. ಸ್ವಲ್ಪ ಹೊತ್ತಿಗೆ ಮಳೆಯು ಪ್ರಾರಂಭವಾಗಿ ಬಂಡಿಯ ಮುಂಭಾಗದಲ್ಲಿ ಕುಳಿತಿದ್ದ ಮಹಾಸ್ವಾಮಿಯವರ ಮುಖಕ್ಕೂ ಮೈಗೂ ಮಳೆಯ ಹನಿಗಳು ಬೀಳಲುಪಕ್ರಮಿಸಿದುವು. ಅವರು, ಕೈಯಲ್ಲಿ ಛತ್ರಿಯಿದ್ದರೂ ಅದನ್ನು ತೆರೆಯಲಿಲ್ಲ. ಡೆಪ್ಯುಟಿಕಮಿಷನರವರು ತಮ್ಮ ಛತ್ರಿಯನ್ನು ಕೈಯಲ್ಲಿ ಹಿಡಿದು, "ಮಳೆಯ ರಭಸ ಜೋರಾಗಿದೆ. ನೆನೆದರೆ ದೇಹಾಲಸ್ಯವಾದೀತು. ಛತ್ರಿಯನ್ನು ತೆರೆದು ಒಪ್ಪಿಸಲೆ?" ಎಂದರು. ಮಹಾಸ್ವಾಮಿಯವರು ಕೊಂಚ ನಕ್ಕು, "ನಮ್ಮ ಕೈಯಲ್ಲಿಯೂ ಛತ್ರಿಯಿದೆ. ಮಳೆಯಲ್ಲಿ ನೆನೆದು ದೇಹಾಲಸ್ಯವಾದರೆ ನಮಗೆ ಮೂರು ನಾಲ್ಕು ದಿನಗಳಲ್ಲಿ ಗುಣವಾದೀತು. ಆದರೆ ಛತ್ರಿಯನ್ನು ತೆರೆದಾಗ್ಗೆ ಎತ್ತುಗಳು ಬೆದರಿ ಜಾರಿಬಿದ್ದು ಕಾಲು ಮುರಿದುಕೊಂಡರೆ, ಆ ಬಡ ಪ್ರಾಣಿಗಳು ಯಾವಜ್ಜೀವವೂ ಕಷ್ಟಪಡಬೇಕಾಗುತ್ತದೆ" ಎಂದು ಅಪ್ಪಣೆ ಕೊಡಿಸಿದರು. ಅವರು ಒಮ್ಮೆ ಒಂದು ತಾಲ್ಲೂಕು ಕಸಬೆಗೆ ದಯಮಾಡಿದ್ದಾಗ್ಗೆ ಊರಿನ ಹೊರಭಾಗದಲ್ಲಿದ್ದ ಹಣ್ಣುಮುದುಕಿಯಾದ ಬಡವೆಯೊಬ್ಬಳ ಗುಡಿಸಿಲಿನ ಮೇಲಿನ ಹಂಜರವು ಮುರಿದುಹೋಗಿದ್ದುದನ್ನೂ, ಮುಪ್ಪಿನಿಂದ ಕುಗ್ಗಿದ್ದ ಅವಳು ಆ ಮುರುಕು ಗುಡಿಸಿಲಿನ ಬಾಗಿಲಿನಲ್ಲಿ ನಿಂತಿದ್ದುದನ್ನೂ ಪರಿಶೀಲಿಸಿದ್ದರು. ಅಂದು ರಾತ್ರಿ ಮಳೆಬಂದಾಗ ಅವರು ಆ ವೃದ್ಧೆಯ ಸ್ಥಿತಿಯು ದುರ್ಭರವಾಗಿರಬೇಕೆಂದು ಯೋಚಿಸಿ ಬಿಡಾರದಿಂದ ("ಟ್ರ್ಯಾವೆಲರ್ಸ್ ಬಂಗಲೆ"ಯ ಬಿಡಾರದಿಂದ) ಅಂಗ ರಕ್ಷಕರೊಡನೆ ಕೆಸರನ್ನೂ ತುಳಿದುಕೊಂಡು ಸಾಮಾನ್ಯರಂತೆ ಆ ಕುಟೀರದ

ಬಳಿಗೆ ದಯಮಾಡಿದರು. ಅಂದು ಕೂಲಿಯು ದೊರೆಯದೆ ಬೆಳಗಿನಿಂದ ಊಟವಿಲ್ಲದೆ ಸೋರುವ ಗುಡಿಸಿಲಿನಲ್ಲಿ ಸಂಕಟಪಡುತ್ತಿದ್ದ ಆ ಮುದುಕಿಯನ್ನು ಹೊರಕ್ಕೆ ಕರೆಯಿಸಿ ಆಕೆಗೆ ಹಣ್ಣುಗಳನ್ನೂ ಹಣವನ್ನೂ ಕೊಡಿಸಿ ಬಿಡಾರಕ್ಕೆ ಚಿತ್ತೈಸಿದರು. ಮಹಾಸ್ವಾಮಿಯವರು ಕರುಣಿಸಿದುದು, ಆ ವೃದ್ಧೆಯ ಕಷ್ಟಕಾರ್ಪಣ್ಯಗಳೆಲ್ಲ ಪರಿಹಾರವಾಗಲು ತಕ್ಕಷ್ಟು ಧನ. ಅವರು ಗೋಪ್ಯವಾಗಿ ನೆರವೇರಿಸಿದ ಧರ್ಮಕಾರ್ಯದ ವಿಚಾರವು ಪುಷ್ಪದ ಪರಿಮಳದಂತೆ ಹರಡಿ ಪ್ರಜೆಗಳಿಗೆ ಸಂತಸವನ್ನುಂಟುಮಾಡಿತು. ಉಪಕೃತೆಯಾದ ವೃದ್ಧೆಯ ಆನಂದಕ್ಕಂತೂ ಪಾರವೇ ಇರಲಿಲ್ಲ. ಅದೇ ಊರಿನ ಅನೇಕ ಮಂದಿ ಧನಿಕರಿಗೆ ಕೂಡ ಪ್ರವೃತ್ತಿ ಹುಟ್ಟದೆಹೋಗಿದ್ದ ಪರಮೋಪಕಾರವನ್ನು ಮಾಡಿದ ಪುಣ್ಯವು ಮಹಾಪ್ರಭುಗಳದಾಯಿತು. ಮಹಾಸ್ವಾಮಿಯವರ ಪ್ರಜಾವಾತ್ಸಲ್ಯವು ಅಪಾರವಾದುದು. ಪ್ರಭುಗಳವರು ಕೈಲಾಸಯಾತ್ರೆಗೆ ದಯಮಾಡಿದ್ದಾಗ್ಗೆ ಪರಮ ಪವಿತ್ರವಾದ ಮಾನಸ ಸರೋವರದಲ್ಲಿ ಸ್ನಾನಮಾಡಿದ ಕಾಲದಲ್ಲಿ ನಡೆದ ಘಟನೆಯು ಎಂತಹವರ ಮನಸ್ಸನ್ನೂ ಮುಗ್ಧಗೊಳಿಸುವಂತಿದೆ; ದೇಶೋನ್ನತಿಸಾಧನೆಗಾಗಿ ತಮ್ಮ ಜೀವನವನ್ನೇ ಮೀಸಲಾಗಿ ಸಮರ್ಪಿಸಿ ಶ್ರದ್ಧೆಯಿಂದ ಶ್ರಮಿಸುತ್ತಿದ್ದ ಮಹಾಸ್ವಾಮಿಯವರು ತಮಗಾಗಲಿ ಅಥವಾ ತಮ್ಮ ಕುಟುಂಬವರ್ಗದವರಿಗಾಗಲಿ ಪುಣ್ಯವು ಲಭಿಸಲೆಂದು ಕೋರಿ ಸಂಕಲ್ಪಮಾಡುವುದಕ್ಕಿಂತ ಮೊದಲು, ತಮ್ಮ ಪ್ರಜೆಗಳಿಗೆ ಸಮಸ್ತ ಸನ್ಮಂಗಳಗಳೂ ಆ ತೀರ್ಥೋದಕ ಸ್ನಾನದ ಪುಣ್ಯವೂ ಲಭಿಸಲೆಂದು ಸಂಕಲ್ಪಮಾಡಿ ಸ್ನಾನಮಾಡಿದರು. ಆಗ್ಗೆ, ನಿಶ್ಚಲವಾದ ಪ್ರಜಾವಾತ್ಸಲ್ಯದಿಂದ ಕೂಡಿ ತೀರ್ಥೋದಕದಲ್ಲಿ ಅಂಜಲಿಬದ್ಧರಾಗಿ ನಿಂತು, "ಈಗ ನಮಗೆ ಲಭ್ಯವಾಗಿರುವ ಈ ಪವಿತ್ರತಮವಾದ ಮಾನಸಸರೋವರ ಸ್ನಾನದ ಫಲವನ್ನು ನಮ್ಮ ಅತ್ಯಂತ ಪ್ರೀತಿಪಾತ್ರರಾದ ರಾಷ್ಟ್ರದ ಸಮಸ್ತಜನಗಳೂ ಪಡೆಯಲಿ!" ಎಂದು ಹಾರೈಸಿ ಅನೇಕ ಸಲ ಮುಳುಗುಹಾಕಿ ಸ್ನಾನಮಾಡಿದರು. ಈಗ್ಗೆ ಏಳೆಂಟು ವರ್ಷಗಳ ಹಿಂದೆ, ಅವರು ಗೇರುಸೊಪ್ಪೆ ಜಲಪಾತವನ್ನು ನೋಡಲು ದಯಮಾಡಿದ್ದಾಗ್ಗೆ, "ಇಲ್ಲಿಯ ನೋಟವು ಅದ್ಭುತವಾಗಿದೆ. ರಮ್ಯವಾದ ಈ ಕಾನನ ಪ್ರದೇಶವನ್ನೂ ಈ ಜಲಪಾತದ ಸೌಂದರ್ಯವನ್ನೂ ನಮ್ಮ ಪ್ರಜೆಗಳಲ್ಲಿ ಬಡವರಾದವರೂ ನೋಡಿ ಹರ್ಷಿಸಬೇಡವೆ? ಅವರು ಇಲ್ಲಿಗೆ ಬಂದರೆ 'ಟ್ರ್ಯಾವೆಲರ್ಸ್' ಬಂಗಲೆಯಲ್ಲಿ ಇಳಿದುಕೊಂಡು ಹಣವನ್ನು ಕೊಡಲು ಅವರಿಗೆ ಸಾಧ್ಯವೆ? ಉಚಿತವಾಗಿ ಅವರಿಗೆ ಇಲ್ಲಿ ಸ್ಥಳವಸತಿ ದೊರೆಯುವ ಸೌಕರ್ಯವನ್ನು ಕಲ್ಪಿಸಬೇಕು" ಎಂದು ಅಪ್ಪಣೆ

ಕೊಡಿಸಿದರು. ಆ ತರುವಾಯ ಅಲ್ಲಿ ಅತಿ ಶೀಘ್ರವಾಗಿ ಧರ್ಮಶಾಲೆಯು ನಿರ್ಮಿತವಾಯಿತು.

"ನಿರೀಕ್ಷೆಗಿಂತ ನಾಲ್ಕಾಣೆ ಮೇಲಾಗಿ"

ಮಹಾಪ್ರಭುಗಳವರು ಸತ್ಯ ಪ್ರೇಮ, ಧಾರ್ಮಿಕ ಮನೋವೃತ್ತಿ, ಸಾತ್ವಿಕ ಪ್ರವೃತ್ತಿ, ಭಕ್ತಿ ಪರಾಯಣತೆ, ಪ್ರಜಾವಾತ್ಸಲ್ಯ, ಔದಾರ್ಯ, ಭೂತದಯೆ—ಮುಂತಾದ ಸದ್ಗುಣಗಳನ್ನು ಬಾಲ್ಯದಿಂದಲೂ ಅಮೋಘ ರೀತಿಯಲ್ಲಿ ವೃದ್ಧಿಪಡಿಸಿಕೊಂಡು ಅನುಷ್ಠಾನದಲ್ಲಿಟ್ಟುಕೊಂಡಿದ್ದರು. ಅಲ್ಲದೆ ಈ ಗುಣಗಳು ಎಷ್ಟುಮಟ್ಟಿಗೆ ಪರಿಸ್ಫುಟವಾಗಿರಬಹುದೆಂದು ನಾವು ನಿರೀಕ್ಷಿಸಬಹುದೋ, ಅಷ್ಟಕ್ಕಿಂತಲೂ ಅಧಿಕತರವಾಗಿ ವೃದ್ಧಿ ಹೊಂದಿದ್ದುವು. ಮಹಾಸ್ವಾಮಿಯವರ ವಿದ್ಯಾಗುರುಗಳೂ, ಪ್ರೌಢವಿದ್ವಾಂಸರೂ, ಮೇಧಾವಿಗಳೂ ಆದ ಸರ್ ಎಸ್. ಎಂ. ಫ್ರೇಸರವರು ಮೈಸೂರು ಸಂಸ್ಥಾನದಿಂದ ಹೊರಟು ಹೋದಾಗ್ಗೆ ಪ್ರೈವೇಟ್ ಸೆಕ್ರೆಟರಿಯವರಾಗಿದ್ದ ಶ್ರೀಮಾನ್ ಇವ್ಯಾನ್ ಮೆಕಾನಿಕಿಯವರೊಡನೆ "ಸಮಯ ಸನ್ನಿವೇಶಗಳಾವುವೇ ಒದಗಿದರೂ ಅವುಗಳಲ್ಲಿ ಯುಕ್ತವೆನಿಸುವ ನಿರೀಕ್ಷೆಗಿಂತ ನಾಲ್ಕಾಣೆ ಮೇಲಾಗಿ ಶ್ರೀಮನ್ ಮಹಾರಾಜರವರು ವರ್ತಿಸುವರೆಂಬ ಭರವಸೆಯನ್ನಿಡಬಹುದು" ಎಂದು* ತಿಳಿಸಿದರು. ಅದಕ್ಕೆ ಅನೇಕ ನಿದರ್ಶನಗಳನ್ನು ತಾವು ಕಂಡುದಾಗಿಯೂ ಶ್ರೀಮಾನ್ ಇವ್ಯಾನ್ ಮೆಕಾನಿಕಿಯವರು ಸೂಚಿಸಿದ್ದಾರೆ. ಸರ್ ಎಸ್. ಎಂ. ಫ್ರೇಸರವರು ಬಹುಕಾಲ ಮಹಾಸ್ವಾಮಿಯವರ ಸ್ವಭಾವವನ್ನು ಪರಿಶೀಲಿಸಿದ್ದರು. ಆ ಮಹಾಶಯರಿಗೂ ಮಹಾಸ್ವಾಮಿಯವರ ಸ್ವಭಾವದ ವಿಷಯವಾಗಿ ನಿಷ್ಕೃಷ್ಟ ಜ್ಞಾನವೇ ಲಭಿಸಲಿಲ್ಲವಂತೆ. ಅವರೇ ಇದನ್ನೊಪ್ಪಿಕೊಂಡು "ಶ್ರೀಮನ್ಮಹಾರಾಜರವರೇನೋ ನನ್ನ ಸ್ವಭಾವವನ್ನು ಬಹು ಚೆನ್ನಾಗಿ ತಿಳಿದುಕೊಂಡಿದ್ದಾರೆ. ಆದರೆ ಮಹಾಸ್ವಾಮಿಯವರ ಸ್ವಭಾವವನ್ನರಿತುಕೊಳ್ಳುವುದು ನನಗೆ ಸಾಧ್ಯವೇ ಆಗಿಲ್ಲ" ಎಂದು † ನುಡಿದರು. ಮಹಾಸ್ವಾಮಿಯವರಲ್ಲಿ ಬಾಲ್ಯದಿಂದಲೂ ಸಹ "ನಿರೀಕ್ಷೆಗಿಂತ ನಾಲ್ಕಾಣೆ ಮೇಲಾಗಿ" ವರ್ತಿಸುವ ಸ್ವಭಾವವೇ ಕಂಡುಬಂದು ವಯಸ್ಸಾದವರೂ ವಿಸ್ಮಿತರಾಗುತ್ತಿದ್ದರು: ಅವರು ಶೀಲಶುದ್ಧಿಯನ್ನು ಎಷ್ಟು ಅಮೂಲ್ಯವೆಂದು

---

* "His parting assurance to me was that in any contingency His Highness could be trusted to go 'four annas better' than could be reasonably expected, an assurance that was to be most amply fulfilled."—
**Sir Evan Maconochie, K.C.I.E., C.S.I.**

† "His Highness has understood me very well. But I have not been able to understand His Highness at all."

ಆಗಲೇ ಭಾವಿಸಿದ್ದರು! ಅವರಿಗಾಗಿ ಏರ್ಪಡಿಸಿದ್ದ "ರಾಯಲ್ ಸ್ಕೂಲ್" ಎಂಬ ಪಾಠಶಾಲೆಯಲ್ಲಿ ವ್ಯಾಸಂಗಮಾಡುತ್ತಿದ್ದಾಗ್ಗೆ, ಉಪಾಧ್ಯಾಯರು ಪ್ರಶ್ನೆಗೆ ಉತ್ತರ ಹೇಳದೆ ತಪ್ಪಿದ ವಿದ್ಯಾರ್ಥಿಯ ಸ್ಥಾನದಲ್ಲಿ ಅದಕ್ಕೆ ಉತ್ತರ ಹೇಳಿದವರನ್ನು ಕುಳ್ಳಿರಿಸಿ ಮೇಲಕ್ಕೆ ಹಾಕುತ್ತಿದ್ದುದು ಆಗಿನ ಪದ್ಧತಿ. ತಮ್ಮ ಸಹಪಾಠಿಗಳಲ್ಲಾರಾದರೂ ಸುಳ್ಳನ್ನು ಹೇಳಿದ್ದರೆ ಅಥವಾ ಅನ್ಯಾಯವಾಗಿ ಕೋಪಿಸಿಕೊಂಡಿದ್ದರೆ ಅವರು ಅದಕ್ಕಾಗಿ ಪಶ್ಚಾತ್ತಾಪಪಟ್ಟು ಅಪರಾಧವಾಯಿತೆಂದು ಹೇಳುವವರೆಗೂ ಅವರು ಕುಳಿತ ಸ್ಥಳವೂ ಕೂಡ ಅಪವಿತ್ರವಾಗಿರುತ್ತಿದ್ದಿತೆಂಬುದು ಮಹಾಸ್ವಾಮಿಯವರ ಭಾವನೆ. ಅಂತಹ ಸಹಪಾಠಿಗಳಾರಾದರೂ ಉತ್ತರ ಹೇಳದೆ ಹೋದ ಪ್ರಶ್ನೆಗೆ ತಾವು ಉತ್ತರ ಹೇಳಿ, ಆತನ ಸ್ಥಾನದಲ್ಲಿ ತಾವು ಕುಳಿತು ಕೊಳ್ಳಬೇಕಾದಾಗ ಅವರು ಜೇಬಿನಲ್ಲಿ ಸಿದ್ಧವಾಗಿಟ್ಟುಕೊಂಡಿರುತ್ತಿದ್ದ ಒದ್ದೆಯಾದ ಸ್ಪಂಜನ್ನು ಸರಕ್ಕನೆ ತೆಗೆದು ಆ ಸ್ಥಳದಷ್ಟು ಭಾಗವನ್ನು ಅದರಿಂದ ಉಜ್ಜಿ ಶುದ್ಧಿಮಾಡಿಕೊಂಡು ಅನಂತರವೇ ಅಲ್ಲಿ ಕುಳಿತು ಕೊಳ್ಳುತ್ತಿದ್ದರು. ಈ ಬಗೆಯ ವರ್ತನೆಯಿಂದ ಅವರ ಸಹಪಾಠಿಗಳು ತಮ್ಮ ನಡೆನುಡಿಗಳನ್ನು ತಿದ್ದಿಕೊಳ್ಳುವಂತಾಗುತ್ತಿದ್ದಿತು; ಆಗ ಮಹಾಸ್ವಾಮಿಯವರಿಗೆ ಇನ್ನೂ ಹತ್ತೇ ವರ್ಷ ವಯಸ್ಸು. ಸಹಪಾಠಿಗಳಾದ ಬಾಲಕರೊಡನೆ ವಿದ್ಯಾಭ್ಯಾಸವು ಪ್ರಾರಂಭವಾದ ದಿನ ನಡೆದ ಘಟನೆಯೊಂದಂತೂ ವಿಸ್ಮಯಜನಕವಾಗಿದೆ. ಮಹಾಸ್ವಾಮಿಯವರಿಗೆಂದು ಉದ್ದೇಶಿಸಿದ್ದ ಮೊಕಮಲಿನ ಮೆತ್ತೆಯ ಕುರ್ಚಿಯನ್ನೂ, ಉಳಿದ ಬಾಲಕರಿಗೆಂದು ಉದ್ದೇಶಿಸಿದ್ದ ಬೆಂಚುಗಳನ್ನೂ ಕಂಡು, ಮಹಾಸ್ವಾಮಿಯವರು ಆ ಕುರ್ಚಿಯ ಮೇಲೆ ಮಂಡಿಸಲೊಲ್ಲದೆ ಅದನ್ನು ತೆಗೆಯಿಸಿ ಇತರ ಬಾಲಕರಂತೆಯೇ ಬೆಂಚಿನಮೇಲೆ ಕುಳಿತುಕೊಂಡರು.

ಚಾತುರ್ಯದಲ್ಲಿ ಕೂಡ ಇತರರು ನಿರೀಕ್ಷಿಸಬಹುದಾಗಿದ್ದುದಕ್ಕಿಂತ ಅಧಿಕತರವಾದ ಮೇಲ್ಮೆಯನ್ನು ಮಹಾಸ್ವಾಮಿಯವರು ಬಾಲ್ಯವಯಸ್ಸಿನಲ್ಲೇ ಪಡೆದಿದ್ದರು. ವಿದ್ಯಾಭ್ಯಾಸಕಾಲದಲ್ಲಿ, ಶಾನುಭೋಗ ಪಟೇಲರು ಇಡಬೇಕಾದ ಲೆಕ್ಕಗಳಾವುವೆಂಬುದನ್ನು ಪರಿಶೀಲಿಸಿ ತಿಳಿದುಕೊಳ್ಳಬೇಕಾಯಿತು. ಆಗ್ಗೆ ಮಹಾಸ್ವಾಮಿಯವರಲ್ಲಿಗೆ ಬರಮಾಡಿದ್ದ ಶಾನುಭೋಗರೂ ಪಟೇಲರೂ ಲೆಕ್ಕಗಳ ಪುಸ್ತಕಗಳನ್ನು ಒಂದೊಂದಾಗಿ ಒಪ್ಪಿಸಿ, ಕೊನೆಗೆ ಗ್ರಾಮದ ಜನನ ಮರಣಗಳ ಲೆಕ್ಕದ ಪುಸ್ತಕವನ್ನು ಒಪ್ಪಿಸಿದರು. ಮಹಾಸ್ವಾಮಿಯವರು ಅದರ ಪುಟಗಳನ್ನು ತಿರುಗಿಸಿ ನೋಡಿ ಅದನ್ನು ಮುಚ್ಚಿ ಪಹಣಿ ಲೆಕ್ಕದ ವಿಚಾರವನ್ನು ಪ್ರಸ್ತಾವಿಸಿದರು.

ಅನಂತರ ಪಟೇಲರನ್ನು ಕುರಿತು ಆತನಿಗೆಷ್ಟು ಮಂದಿ ಮಕ್ಕಳೆಂದೂ, ಆ ಮಕ್ಕಳಿಗೆ ಕೊಡುತ್ತಿದ್ದ ಆಹಾರವೇನೆಂದೂ, ಮಕ್ಕಳ ವಯಸ್ಸು ಗಳೆಷ್ಟೆಂದೂ, ಮಕ್ಕಳ ಹೆಸರುಗಳೇನೆಂದೂ, ಕೇಳಿ ಉತ್ತರಪಡೆಯುತ್ತ ಬಂದರು. ಲೆಕ್ಕಗಳ ಪುಸ್ತಕಗಳನ್ನು ಪರಿಶೀಲಿಸುವುದನ್ನು ಬಿಟ್ಟು, ಹೀಗೆ ಅಪ್ರಕೃತವಾದ ಪ್ರಶ್ನೆಗಳನ್ನು ಕೇಳಿ ಅನವಶ್ಯವಾಗಿ ಕಾಲಹರಣ ಮಾಡು ತ್ತಿದ್ದರೆಂದು ವಿದ್ಯಾಗುರುಗಳು ಕೂಡ ಭಾವಿಸಿದರು. ಪಟೇಲರು ತಮ್ಮ ಕಿರಿಯ ಮಗುವಿಗೆ ಮೂರು ತಿಂಗಳಾಗಿದ್ದುದಾಗಿಯೂ, ಅದರ ಹಿಂದಿನ ಮಗುವಿಗೆ ಎರಡು ವರ್ಷ ವಯಸ್ಸಾಗಿದ್ದುದಾಗಿಯೂ ಶ್ರುತಪಡಿಸಿದರು. ಸಂಗಡಲೇ ಮಹಾಸ್ವಾಮಿಯವರು ಆ ಎರಡು ಮಕ್ಕಳ ಹುಟ್ಟಿದ ದಿನ ಗಳಾವುವೆಂದು ಕೇಳಿ, "ಅವಕ್ಕೆ ಹುಟ್ಟಿದ ಹಬ್ಬಗಳನ್ನು ಮಾಡುವಿರಾ"? ಎಂದರು. ಆ ಪ್ರಶ್ನೆಗಳ ಆಶಯವನ್ನರಿಯದೆ, ಪಟೇಲರು ಅವೆರಡು ಮಕ್ಕಳೂ ಹುಟ್ಟಿದ ದಿನಗಳನ್ನು ಸೂಚಿಸಿ, ಬಡವರಿಗೆ ತಕ್ಕಹಾಗೆ ಅವುಗಳ ಹುಟ್ಟಿದ ಹಬ್ಬಗಳು ನಡೆಯುತ್ತಿದ್ದುದಾಗಿ ಅರಿಕೆ ಮಾಡಿದರು. ಒಡನೆಯೇ ಮಹಾಸ್ವಾಮಿಯವರು ಜನನ ಮರಣಗಳ ಲೆಕ್ಕದ ಪುಸ್ತಕವನ್ನು ಮತ್ತೆ ಪರಿಶೀಲಿಸಿ, "ನಿಮ್ಮ ಮಕ್ಕಳ ಜನನಗಳ ವಿಚಾರವನ್ನೇ ಇಲ್ಲಿ ಬರೆದಿಲ್ಲ. ತಮ್ಮ ಮಕ್ಕಳ ಜನನಗಳನ್ನೇ ಲೆಕ್ಕದ ಪುಸ್ತಕದಲ್ಲಿ ಬರೆದಿಡದವರು ಇತರರ ಮಕ್ಕಳ ಜನನಗಳನ್ನು ಸರಿಯಾಗಿ ಬರೆದಿಡುವ ಭರವಸೆಯುಂಟೆ"? ಎಂದು ಅಪ್ಪಣೆಕೊಡಿಸಿದರು. ಮಹಾಸ್ವಾಮಿಯವರನ್ನು ಪ್ರತಿದಿನವೂ ನೋಡಿ ಪಾಠಹೇಳುತ್ತಿದ್ದೂ ಅವರ ಮನೋಗತವನ್ನು ನಿಷ್ಕೃಷ್ಟವಾಗಿ ಗೊತ್ತು ಮಾಡಿಕೊಳ್ಳುವುದು ಅಸಾಧ್ಯವಾಗಿದ್ದಿತೆಂಬ ತಮ್ಮ ಸಿದ್ಧಾಂತಕ್ಕೆ ಮತ್ತೊಂದು ನಿದರ್ಶನವು ದೊರೆಯಿತೆಂದು ಮಹಾಸ್ವಾಮಿಯವರ ವಿದ್ಯಾ ಗುರುಗಳಾದ ಸರ್. ಎಸ್. ಎಂ. ಫ್ರೇಸರವರೂ ವಿಸ್ಮಿತರಾದರು.

ಮಾನವ ಜನ್ಮವನ್ನು ಸಾರ್ಥಕಪಡಿಸಿಕೊಳ್ಳಲು ಪರಿಸ್ಫುಟಗೊಳಿಸಿ ಕೊಳ್ಳಬೇಕಾದುದು ಆವಶ್ಯಕವಾಗಿರುವ ಸದ್ಗುಣಗಳು ಮಹಾಸ್ವಾಮಿ ಯವರಲ್ಲಿ ಯುಕ್ತ ಪ್ರಮಾಣಗಳಲ್ಲಿ ಸಮ್ಮಿಳಿತ

**ಸಂಸ್ಕೃತಿ ಭಂಡಾರ**

ವಾಗಿ ನೆಲೆಗೊಂಡಿದ್ದುವು. ಪೌರ್ವಾತ್ಯ ಪಾಶ್ಚಾತ್ಯ ಸಂಸ್ಕೃತಿಗಳೆರಡರ ಉದಾತ್ತ ಲಕ್ಷಣಗಳೆಲ್ಲ ಸಾಮ ರಸ್ಯದಿಂದ ಮಹಾಸ್ವಾಮಿಯವರಲ್ಲಿ ಮೂರ್ತೀಭವಿಸಿದ್ದುವೆಂದು ಧಾರಾಳ ವಾಗಿ ಹೇಳಬಹುದು. ಪಾಶ್ಚಾತ್ಯ ದೇಶಗಳ ದೊಡ್ಡ ದೊಡ್ಡ ವಂಶಗಳಲ್ಲಿ ಹುಟ್ಟಿ ಸುಶಿಕ್ಷಿತರಾದವರಿಗೂ ಕೂಡ, ಸಭ್ಯವರ್ತನೆಯ ಶಿಷ್ಟಾಚಾರ ನಿಯಮಗಳ ಪಾಲನೆಯಲ್ಲಿ ಮಹಾಸ್ವಾಮಿಯವರನ್ನು ಮೀರಿಸುವುದು

ಅಸಾಧ್ಯವೆಂದೂ, ಮಹಾಸ್ವಾಮಿಯವರಷ್ಟು ಸುಸಂಸ್ಕೃತರನ್ನು ಕಾಣು ವುದೇ ವಿರಳವೆಂದೂ, ಪಾಶ್ಚಾತ್ಯ ದೇಶಗಳಲ್ಲಿ ಶ್ರೇಷ್ಠವರ್ಗದವರನೇಕರು ಶ್ಲಾಘಿಸಿದ್ದಾರೆ. ಶ್ರುತಿಸ್ಮೃತಿಗಳಲ್ಲಿ ವಿಧಾಯಕವಾಗಿರುವ ಸದಾಚಾರ ಗಳಲ್ಲಿ ಶ್ರೇಷ್ಠವಾಗಿರತಕ್ಕವುಗಳನ್ನೆಲ್ಲ ಅನುಷ್ಠಾನದಲ್ಲಿಟ್ಟುಕೊಂಡು ಸನಾತನ ಧರ್ಮಾವಲಂಬಿಗಳಾಗಿದ್ದ ಮಹಾಸ್ವಾಮಿಯವರು ಮನುಷ್ಯ ವರ್ಗಕ್ಕೇ ಭೂಷಣಪ್ರಾಯರಾಗಿದ್ದರೆಂದು ನಮ್ಮ ದೇಶದ ವೈದಿಕ ಶ್ರೇಷ್ಠರೆಲ್ಲರೂ ಕೊಂಡಾಡುತ್ತಿದ್ದರು. ಮಹಾಪ್ರಭುಗಳವರು ಪ್ರಜೆಗಳ ಶ್ರೇಯಸ್ಸೇ ತಮ್ಮ ಜೀವನ ಸರ್ವಸ್ವವೆಂಬ ಭಾವನೆಯಿಂದ ಕೂಡಿ, ಮಾದರಿ ಸಂಸ್ಥಾನವೆಂಬ ಧವಳ ಕೀರ್ತಿಯ ಅಮೃತ ಲತೆಯು ಸೊಂಪಾಗಿ ಬೆಳೆಯುವಂತೆ ಮಾಡಿ ಆನಂದಪಡುತ್ತಿದ್ದರು; ಸಾಧ್ಯವಿರುವ ಸಮಸ್ತ ವಿಧಗಳಲ್ಲಿಯೂ ಅಭ್ಯುದಯವನ್ನು ಸಾಧಿಸುವ ಮಹತ್ತರ ಕಾರ್ಯ ಗಳನ್ನು ನೆರವೇರಿಸುವ ಪ್ರಯತ್ನಗಳನ್ನು ಮುಂದುವರಿಸಲು ಸಂತತವೂ ಶ್ರಮಿಸುತ್ತಿದ್ದರು.

ಮರಣವೇ ಸಂಭವಿಸಬಹುದಾದ ಅಪಾಯಕ್ಕೂ ವೈಯೊಡ್ಡಿ ಪರೋಪಕಾರ ಮಾಡುವುದು ಮಹಾನುಭಾವರಾದ ಕೆಲವರಿಂದ ಮಾತ್ರವೇ ಸಾಧ್ಯ. ಮಹಾಸ್ವಾಮಿಯವರು ಈ ಗುಣವನ್ನು ಪ್ರದರ್ಶಿಸಿ ಅನುಗ್ರಹಮಾಡಿದ ಕೆಲವು ಸನ್ನಿವೇಶ ಗಳನ್ನು ಸ್ಮರಿಸಿಕೊಂಡರೆ ಅತ್ಯಾಶ್ಚರ್ಯವುಂಟಾಗು ವುದು. ಒಂದು ಸಲ, ಘಟ್ಟದ ಪ್ರದೇಶದಲ್ಲಿ ಮಹಾಸ್ವಾಮಿಯವರು ಪ್ರಯಾಣಮಾಡುತ್ತಿದ್ದರು. ಉಭಯ ಪಾರ್ಶ್ವಗಳಲ್ಲಿಯೂ ಮೇಲಿನಿಂದ ನೋಡಿದರೇ ತಲೆತಿರುಗುವಂತೆ ತೋರುತ್ತಿದ್ದಷ್ಟು ಆಳವಾದ ಕಡಿದಿನ ಕಮರಿಗಳುಳ್ಳ ಇಕ್ಕಟ್ಟಾದ ಸಂಚಾರಮಾರ್ಗ. ಎದುರು ಭಾಗದಿಂದ ಇಪ್ಪತ್ತೆರಡು ಭರ್ತಿ ಬಂಡಿಗಳು ಸಾಲಿಟ್ಟು ಸಾಗಿಬರುತ್ತಿವೆ. ಮಹಾ ಪ್ರಭುಗಳವರ ಮೋಟಾರು ಬಂಡಿಯ ಸದ್ದನ್ನು ಕೇಳಿ, ಬೆಳಕನ್ನು ಕಂಡು, ಎತ್ತುಗಳು ಬೆದರಿವೆ. ಮೋಟಾರು ಬಂಡಿಯ ಚಾಲಕನು ("ಷಾಫರ್") ಮೋಟಾರು ಬಂಡಿಯ ತುತ್ತೂರಿಯನ್ನು ಧ್ವನಿಗೈದು ಸನ್ನಿವೇಶವನ್ನು ಮತ್ತಷ್ಟು ಭೀಕರ ಮಾಡುತ್ತಿದ್ದಾನೆ. ಮುಂದೆ ಒದಗುವಂತಿದ್ದ ಅಪಾಯ ವನ್ನು ಮನಗಂಡು ಮಹಾಸ್ವಾಮಿಯವರು ಆತನ ಕೈಯನ್ನು ಹಿಡಿದು ಆತನು ಹಾಗೆ ಧ್ವನಿ ಮಾಡಕೂಡದೆಂದು ಹೇಳಿ, ದೀಪವನ್ನಾರಿಸ ಬೇಕೆಂದೂ, ಮೋಟಾರು ಬಂಡಿಯು ಮಾರ್ಗದ ಅಂಚಿಗೆ ಹೋಗಿ ನಿಲ್ಲುವಂತೆ ಮಾಡಬೇಕೆಂದೂ, ತಾವು ಹೇಳಿದಲ್ಲದೆ ಒಬ್ಬರೂ ಮೋಟಾರು

**ಮಹಾತ್ಯಾಗ**

ಬಂಡಿಯಿಂದ ಕೆಳಕ್ಕಿಳಿಯಕೂಡದೆಂದೂ ಕಟ್ಟಪ್ಪಣೆ ಮಾಡಿ ಅದು ನಿಲ್ಲುವ
ಮೊದಲೇ ಮಿಂಚಿನ ವೇಗದಲ್ಲಿ ಇಳಿದು ಸರಕ್ಕನೆ ಓಡಿದ್ದಾರೆ. ಬೆದರಿದ
ಎತ್ತುಗಳು ಬಂಡಿಯವನ ಅಂಕೆಗೆ ಸಗ್ಗದೆ ಎಡಪಾರ್ಶ್ವಕ್ಕೆ ಬಂಡಿ
ಯನ್ನೆಳೆಯುತ್ತಿರುವಲ್ಲಿ ಬಂಡಿಯವನು "ಜೀವದಲ್ಲಿ ಜೀವವಿಲ್ಲದೆ"
ಎತ್ತುಗಳು ಬಲಪಾರ್ಶ್ವಕ್ಕೆ ಬರುವಂತೆ ಹಗ್ಗಗಳನ್ನು ಸೆಳೆದುದೆಲ್ಲ ವಿಫಲ
ವಾಗಿದ್ದರೂ ಮಹಾಸ್ವಾಮಿಯವರು ಮೂಕಿಯನ್ನು ಹಿಡಿದು ತಮ್ಮ
ಬಲವನ್ನೆಲ್ಲ ಪ್ರಯೋಗಿಸಿ, ಬಂಡಿಯು ಕೆಳಕ್ಕುರುಳುತ್ತಿದ್ದ ಅಪಾಯ
ವನ್ನು ತಪ್ಪಿಸಿದ್ದಾರೆ; ಮೂಕಿಯನ್ನು ಹಿಡಿದು ತಮ್ಮ ಬಲವನ್ನೆಲ್ಲ
ಪ್ರಯೋಗಿಸಿ ಬಂಡಿಯನ್ನು ಮುಂದಕ್ಕೆಳೆದುಕೊಂಡು ಬಂದು, ಮೋಟಾರು
ಬಂಡಿಯು ಸಮೀಪವಾದಷ್ಟೂ ಎತ್ತುಗಳು ಬೆದರಿದುದನ್ನು ಕಂಡು,
ಹಿಂದಿನ ಬಂಡಿಗಳನ್ನೆಲ್ಲ ನಿಲ್ಲಿಸಿ ಹಗ್ಗಗಳನ್ನು ತುಯ್ದು ಬಿಗಿಹಿಡಿದಿರುವಂತೆ
ಬಂಡಿಗಳವರಿಗೆ ಅಪ್ಪಣೆಮಾಡಿದ್ದಾರೆ. ತಾವು ಮೂಕಿಯನ್ನು ಹಿಡಿದಿದ್ದ
ಮುಂದಿನ ಬಂಡಿಯ ಚಕ್ರವು ಮೋಟಾರು ಬಂಡಿಯ ಚಕ್ರದಿಂದ ಅತ್ಯಲ್ಪ
ದೂರದಲ್ಲಿ ಹೋಗುತ್ತಿರುವಲ್ಲಿ ಎತ್ತುಗಳು ಬೆದರಿ ಅಗಡುತನವನ್ನು
ತೋರುತ್ತಿದ್ದೂ, ಮೊದಲನೆಯ ಬಂಡಿಯನ್ನು ತಕ್ಕಷ್ಟು ದೂರದವರೆಗೂ
ಮೋಟಾರು ಬಂಡಿಯಿಂದಾಚೆಗೆ ಬಿಟ್ಟುಬಂದು, ಆ ಬಳಿಕ ಉಳಿದ
ಇಪ್ಪತ್ತೊಂದು ಬಂಡಿಗಳಲ್ಲಿ ಪ್ರತಿಯೊಂದನ್ನೂ ಸುರಕ್ಷಿತವಾಗಿ ತಕ್ಕ
ಸ್ಥಾನಕ್ಕೆ ತಂದು ಸೇರಿಸಿದರು. ಮಹಾಸ್ವಾಮಿಯವರು ಅಂದು
ಎತ್ತುಗಳು ಬೆದರಿ ಎಡಕ್ಕೂ ಬಲಕ್ಕೂ ತುಯ್ದಾಗ ಮೂಕಿಯನ್ನು
ಬಲಕ್ಕೂ ಎಡಕ್ಕೂ ತುಯ್ದು ತುಯ್ದು ಬಿಗಿ ಹಿಡಿದು ಸಮತೆಯನ್ನುಂಟು
ಮಾಡಿ ಅಪಾಯವನ್ನು ತಪ್ಪಿಸಿದರು. ಆಗ ಅವರ ಎರಡು ಅಂಗೈಗಳ
ಚರ್ಮವೂ ಕಿತ್ತುಹೋಗಿ ಅಂಗೈಗಳು ರಕ್ತಮಯವಾದುವು. ಬಂಡಿಯ
ವರು ಕೃತಜ್ಞತೆಯಿಂದ ಕೂಡಿ, "ಯಾರೋ ಎಂತೋ ನಮ್ಮ ಪಾಲಿಗೆ
ದೇವರಂತೆ ಬಂದು ಜೀವಾ ಉಳಿಸಿದ್ರಿ. ನೂರಾರು ಕಾಲ ತಣ್ಣಗೆ ಬಾಳಿ,
ನಮ್ಮಪ್ಪಾ!" ಎಂದು ಹೇಳಿದ ಮಾತುಗಳನ್ನು ಕೇಳಿ, ಮಹಾಸ್ವಾಮಿ
ಯವರು, "ಇನ್ನು ಮುಂದೆ, ಸಹಾಯಕ್ಕೆ ಜನರೇ ಇಲ್ಲದೆ ಈಗಿನಂತೆ
ಬಂಡಿ ಹೊಡೆಯುವವರು ಮಾತ್ರವೇ ಪ್ರಯಾಣ ಮಾಡಬೇಡಿ" ಎಂದು
ಬುದ್ಧಿ ಹೇಳಿ ಹರ್ಷದಿಂದ ಮೋಟಾರು ಬಂಡಿಗೆ ಬಂದು ಕುಳಿತು
ಮುಂದೆ ಹೊರಟರು. ಮಹಾಸ್ವಾಮಿಯವರ ಜೊತೆಯಲ್ಲಿದ್ದವರೊಬ್ಬರು
ಪ್ರಭುಗಳ ಅಪ್ಪಣೆಯ ನಿರ್ಬಂಧವಿಲ್ಲದೆಹೋಗಿದ್ದರೆ, ತಾವೂ ಮೋಟಾರು
ಬಂಡಿಯ ಚಾಲಕನೂ, ಸಹಾಯಕ್ಕೆ ಬರುತ್ತಿದ್ದುದಾಗಿ ಅರಿಕೆಮಾಡಿ

ಪೇಚಾಡಿದರು. ಮಹಾಸ್ವಾಮಿಯವರು ಮಂದಸ್ಮಿತದಿಂದ, "ನಮ್ಮ ಮಾತಾಪಿತೃಗಳು ಈ ದೇಹವನ್ನು ಪ್ರೀತಿಯಿಂದ ಬೆಳೆಯಿಸಿದಂತೆಯೇ ನಿಮ್ಮೆಲ್ಲರ ಮಾತಾಪಿತೃಗಳೂ ನಿಮ್ಮೆಲ್ಲರನ್ನೂ ಪ್ರೀತಿಯಿಂದ ಬೆಳೆಯಿಸಿದ್ದಾರೆ. ಮರಣವೇ ಸಂಭವಿಸಿದರೂ ಸಂಭವಿಸುವಂತಿದ್ದ ಇಂದಿನ ಘಟ್ಟದಲ್ಲಿ ನಿಮ್ಮಲ್ಲಿ ಯಾರನ್ನೂ ಅಪಾಯಕ್ಕೆ ಗುರಿಮಾಡುವುದು ಉಚಿತವಲ್ಲವೆಂದು ತೋರಿತು" ಎಂದು ಅಪ್ಪಣೆ ಕೊಡಿಸಿದರು.

ಈಗ್ಗೆ ಕೆಲವು ವರ್ಷಗಳ ಹಿಂದೆ ದುಷ್ಟ ಸಲಗವೊಂದು ಒಂಟಿಯಾಗಿ ಅಲೆದು ದಾಂಧಲೆಮಾಡುತ್ತ ಅನೇಕ ಜನರನ್ನು ಸಿಗಿದುಹಾಕಲಾರಂಭಿಸಿತು. ಕಾಡಿನಲ್ಲಾಗಲಿ, ಕಾಡಿನ ಮಧ್ಯದಲ್ಲಿದ್ದ ಸಂಚಾರ ಮಾರ್ಗಗಳಲ್ಲಾಗಲಿ, ಜನರು ಸುತ್ತಾಡುವುದು ಅಪಾಯಕರವಾಗಿ ಪರಿಣಮಿಸಿತು. ದೀಪವನ್ನು ಕಂಡರೆ ಆನೆಗಳಿಗೆ ಭಯ. ಹಾಗಿದ್ದೂ ಆ ಆನೆಯು ಮೋಟಾರು ಬಸ್ಸುಗಳ ಸದ್ದಿಗೂ ದೀಪಗಳಿಗೂ ಹೆದರದೆ ಆತಂಕಪಡಿಸಿ ಅಡ್ಡಿಮಾಡಲುಪಕ್ರಮಿಸಿತು. ಅದನ್ನು ಕೊಲ್ಲಲು ಪ್ರಯತ್ನಿಸಿದವರಾರಿಗೂ ಸಿಕ್ಕದೆ, ಅದು ಬಹು ಮಂದಿಗಳನ್ನು ಧ್ವಂಸಮಾಡಿ, ಕೊನೆಗೆ ಸೂರ್ಯ ರಶ್ಮಿಯೂ ಭೇದಿಸಲಾರದಂತಿದ್ದ ದಟ್ಟವಾದ ಕಾಡಿನೊಳಗೆ ಸೇರಿ, ಕಾಡುಕುರುಬರೇ ಮುಂತಾದವರನ್ನು ಸೀಳಿ ದಾಂಧಲೆ ಮಾಡತೊಡಗಿತು. ಆ ವಿಚಾರವನ್ನು ಕೇಳಿ ಪ್ರಜಾರಕ್ಷಣೆಗಾಗಿ ಮಹಾಪ್ರಭುಗಳವರು ತೀರ ಮಿತಪರಿವಾರದೊಡನೆ ಆ ಆನೆಯ ಬೇಟೆಗಾಗಿ ದಯಮಾಡಿದರು. ಅರಣ್ಯವೇ ತಾಯಿ ಮಡಿಲೆಂದು ಭಾವಿಸಿ ನಿರ್ಭಯದಿಂದ ಸಂಚರಿಸುತ್ತಿದ್ದ ಸೋಲಿಗರು ಕೂಡ ಭಯವಿಹ್ವಲರಾಗಿ ತಲ್ಲಣಿಸುತ್ತಿದ್ದ ಭೀಕರ ಸನ್ನಿವೇಶವದು. ಕಾಡಾನೆಯು ಅರಣ್ಯದೊಳಗಿದ್ದ ಕಾಡು ಸೀಗೆಯ ದೊಡ್ಡ ಮೆಳೆಯೊಳಗೆ ಸೇರಿದ್ದಿತು. ಧೈರ್ಯಶಾಲಿಯಾದ ಸೋಲಿಗನೊಬ್ಬನು ನೆಲದಮೇಲೆ ಅಂಬೆಗಾಲಿಡುತ್ತ ಹೋಗಿ, ಮರೆಯಿಂದ ಇಣಿಕಿ ನೋಡಿ, ಬಹು ಪ್ರದೇಶವನ್ನಾವರಿಸಿದ್ದ ಕಾಡು ಸೀಗೆಯ ಮೆಳೆಯೊಳಗೆ ಸಲಗವು ನಿಂತಿದ್ದ ಸ್ಥಳವು ಗೋಚರವಾಗದೆ ಪರಿತಪಿಸಿ ಮತ್ತಷ್ಟು ಪರಿಶೀಲಿಸಿ ನೋಡಲು ಧೈರ್ಯ ಸಾಲದೆ ಹಿಂದಕ್ಕೆ ಬಂದನು. ಆ ವೇಳೆಗೆ ಪರಿವಾರದವರನ್ನು ಪಳಗಿದ ಆನೆಯಮೇಲೆ ತೊಟ್ಟಿಲಿನಲ್ಲಿಯೇ ಉಳಿಸಿ ಕೈಯಲ್ಲಿ ಬಂದೂಕವನ್ನು ಹಿಡಿದು ಕೆಳಕ್ಕಿಳಿದು ಬಂದಿದ್ದ ಮಹಾಪ್ರಭುಗಳವರೊಡನೆ ಅವನು ಪಿಸು ಮಾತಿನಲ್ಲಿ ತನ್ನ ಪ್ರಯತ್ನವು ವ್ಯರ್ಥವಾದುದನ್ನು ಸೂಚಿಸಿದನು. ಅವರು ಕಾಲ ವಿಳಂಬಕ್ಕೆ ಲೇಶಮಾತ್ರವೂ ಅವಕಾಶವಿರಲಿಲ್ಲವೆಂದೂ, ಸಲಗವು ಒಂದುವೇಳೆ ನುಗ್ಗಿ

ಬಂದರೆ ಅಪಾಯವಾಗಬಹುದೆಂದೂ ನಿರ್ಧರಿಸಿ ಸಮೀಪದಲ್ಲಿದ್ದ ದೊಡ್ಡ ಮರವನ್ನೇರುವಂತೆ ಸಂಜ್ಞೆಯಿಂದಲೇ ಅವನಿಗೆ ಅಪ್ಪಣೆಮಾಡಿದರು. ಅವನು ಮರವನ್ನು ಹತ್ತಿ ಆನೆಗೂ ಸಿಕ್ಕದಷ್ಟು ಎತ್ತರದಲ್ಲಿ ಸುರಕ್ಷಿತವಾದ ಸ್ಥಳವನ್ನು ಸೇರಿದೊಡನೆಯೇ ರಭಸದಿಂದ ಸೀಗೆಯ ಮೆಳೆಯೊಳಕ್ಕೆ ನುಗ್ಗಿಯೇ ಬಿಟ್ಟರು. ಮರವನ್ನೇರಿದ್ದವನು ಕಾತರ ಸ್ವರದಿಂದ "ಮಾ ಸ್ವಾಮಿ! ಮಾ ಸ್ವಾಮಿ!" ಎಂದು ಚೀರಿದನು. ಪರಿವಾರದವರು ಪ್ರಭುಗಳ ಆಜ್ಞೆಯನ್ನು ಮೀರುವುದಕ್ಕಿಲ್ಲದೆ ಚಿತ್ರದ ಬೊಂಬೆಗಳಂತೆ ಸ್ತಬ್ಧರಾಗಿ ಪಳಗಿದ ಆನೆಯಮೇಲೆ ತೊಟ್ಟಿಲಿನಲ್ಲಿ ಕುಳಿತಿದ್ದರು. ಪ್ರಭುವರ್ಯರು ಶೌರ್ಯ ಧೈರ್ಯಗಳ ಕೆಚ್ಚಿನಿಂದ ಮುಂದೆ ನುಗ್ಗಿ, ಕಾಡು ಸೀಗೆಯ ಮೆಳೆಯ ಮುಳ್ಳುಗಳಿಂದ ಮೈ ಕೈ ತರೆದುಹೋಗಿ ರಕ್ತ ಬಂದುದನ್ನೇ ಗಮನಿಸದೆ ಗುರಿ ತಪ್ಪದಂತೆ ಗುಂಡನ್ನು ಹಾರಿಸಿ ಆ ಆನೆಯನ್ನು ಕೊಂದರು.

ಒಂದು ಸಲ, ನೀಲಗಿರಿಗೆ ಚಿತ್ತೈಸಿದ್ದಾಗ್ಗೆ ಒಂದು ದಿನ ಪ್ರಾತಃಕಾಲ ಮಹಾಸ್ವಾಮಿಯವರು ಕುದುರೆಯನ್ನೇರಿ ದಯಮಾಡಿದರು. ನೀಲಗಿರಿಯ ಇಳಿಮೇಡಿನ ಪ್ರದೇಶಗಳಲ್ಲಿ ಕುದುರೆಯ ಸವಾರಿ ಮಾಡುವುದು ತೀರ ಅಪಾಯಕರ. ಆ ದಿನ ಕುದುರೆ ಸವಾರಿಗೆ ಹೊರಟು ತೀರ ಕಡಿದಾದ ಪ್ರದೇಶದಲ್ಲಿ ಐರೋಪ್ಯರೊಬ್ಬರೂ ಅವರ ಕುದುರೆಯೂ ಕೆಳಕ್ಕುರುಳಿದ್ದುದನ್ನೂ, ಆ ಐರೋಪ್ಯರು ಒಂದು ಪೊದೆಯಮೇಲೆ ಬಿದ್ದು ಮೂರ್ಛಿತರಾಗಿದ್ದುದನ್ನೂ ಅವರು ಕಂಡರು. ಒಡನೆಯೇ ಮಹಾಪ್ರಭುಗಳವರು ಕುದುರೆಯಿಂದಿಳಿದು ಆ ಐರೋಪ್ಯರು ಬಿದ್ದಿದ್ದ ಪೊದೆಯ ಬಳಿಗೆ ಹೋಗಿ ಅವರನ್ನೂ ಹೊತ್ತುಕೊಂಡು ತೀರ ಕಡಿದಾಗಿದ್ದ ಆ ಪ್ರದೇಶದಿಂದ ಮೇಲಕ್ಕೆ ಹತ್ತಿ ಅವರನ್ನು ಸುರಕ್ಷಿತವಾದ ಸ್ಥಳಕ್ಕೆ ಮುಟ್ಟಿಸಿ ಚಿಕಿತ್ಸೆಗೆ ಏರ್ಪಾಡು ಮಾಡಿದರು. ಅಂದಿನ ಆ ಸಾಹಸವನ್ನು ಕಂಡವರೆಲ್ಲರೂ ಬೆರಗಾಗಿ, ಜೀವದಮೇಲೆ ಆಶೆಯಿದ್ದವರಾರೂ ಆ ಕೆಲಸಕ್ಕೆ ಕೈ ಹಾಕುತ್ತಿರಲಿಲ್ಲವೆಂದು ಕೆಲವರೂ, ಪರೋಪಕಾರದ ಉತ್ಸಾಹದಲ್ಲಿ ಮಹಾಸ್ವಾಮಿಯವರಿಗೆ ಬಾಹ್ಯ ಪ್ರಪಂಚದ ಪರಿಜ್ಞಾನವೇ ಇಲ್ಲದೆ ಹೋಗಿ ಆ ಸಾಹಸಕಾರ್ಯವು ನಡೆದಿರಬೇಕೆಂದು ಕೆಲವರೂ, ಅಪಾರವಾದ ದೈವಭಕ್ತಿಯಿದ್ದುದರ ದೆಸೆಯಿಂದ ಮಾತ್ರವೇ ಆ ರೀತಿ ಮತ್ತೊಬ್ಬ ವ್ಯಕ್ತಿಯನ್ನು ಹೊತ್ತಿದ್ದೂ ಅಲ್ಲಿಂದ ಕೆಳಕ್ಕುರುಳದೆ ಮೇಲಕ್ಕೆ ಬಂದಿರಬೇಕೆಂದು ಕೆಲವರೂ ಮಾತನಾಡಿಕೊಂಡರು. ಬಹು ಮಂದಿ ಐರೋಪ್ಯರು ಕೂಡ, ಅಪರಿಚಿತರಾದ ವಿದೇಶೀಯ ಜನಾಂಗದ

ವ್ಯಕ್ತಿಯ ಜೀವವನ್ನುಳಿಸುವ ಪ್ರಯತ್ನದಲ್ಲಿ ಆತ್ಮಾರ್ಪಣಕ್ಕೂ ಸಿದ್ಧರಾಗಿ ಪ್ರವರ್ತಿಸಿದ ಮಹಾಸ್ವಾಮಿಯವರು ಈ ಪ್ರಪಂಚಕ್ಕೇ ಭೂಷಣಪ್ರಾಯ ರಾದ ಮಹಾಪುರುಷರೆಂದು ಮುಂತಾಗಿ ಶ್ಲಾಘಿಸಿದರು.

ಎಂತಹ ಅಪಾಯವೇ ಒದಗಿದರೂ ಸಮತೆ ತಪ್ಪದಂತೆ ಮನಸ್ಸನ್ನು ಸ್ವಾಧೀನದಲ್ಲಿಟ್ಟುಕೊಂಡು ಪರೋಪಕಾರಾರ್ಥವಾಗಿ ಶ್ರಮಿಸುವಲ್ಲಿ ಪ್ರಾಣವನ್ನೇ ತೃಣವಾಗಿ ಭಾವಿಸಿ ಪ್ರವರ್ತಿಸುತ್ತಿದ್ದವರು, ನಮ್ಮನ್ನಾಳಿದ ಪ್ರಭುವರ್ಯರು. ೧೯೧೭ನೆಯ ಇಸವಿಯಲ್ಲಿ ಬರೋಡೆ ಸಂಸ್ಥಾನದ ಗಾಯಕವಾಡ ಮಹಾರಾಜರವರು ಮೈಸೂರು ಸಂಸ್ಥಾನಕ್ಕೆ ದಯ ಮಾಡಿದ್ದಾಗ್ಗೆ ಚಾಮರಾಜನಗರ ತಾಲ್ಲೂಕಿನ ಬೂದಿ ಪಡಗದಲ್ಲಿ ಖೆಡ್ಡವು ನಡೆಯಿತು. ಅತಿಥಿಗಳಾದ ಗಾಯಕವಾಡ ಮಹಾರಾಜರೂ, ಮಹಾಪ್ರಭುಗಳವರೂ, ಬಹುಮಂದಿ ಮಹಿಳೆಯರೂ, ಮಹಾಶಯರೂ ತಂಡ ತಂಡಗಳಲ್ಲಿ "ಗ್ಯಾಲರಿ"ಗಳಲ್ಲಿ ಕುಳಿತು ಪಳಗಿದ "ಕುಮ್ಕಿ" ಆನೆಗಳ ಸಹಾಯದಿಂದ ಕಾಡಾನೆಗಳ ಕಾಲುಗಳಿಗೂ ಕೊರಳಿಗೂ ಹಗ್ಗಗಳನ್ನು ಕಟ್ಟುವ ವಿಧಾನವನ್ನೂ ಮಾವಟಿಗರ ಮತ್ತು ಇತರರ ಧೈರ್ಯ ಕೌಶಲ್ಯಗಳನ್ನೂ ನೋಡಿ ನೋಡಿ ಹಿಗ್ಗುತ್ತಿದ್ದರು. ಆದರೆ ಅಷ್ಟರಲ್ಲಿ ಭಯಾನಕವಾದ ಸನ್ನಿವೇಶವೊಂದು ಹಠಾತ್ತಾಗಿ ಒದಗಿದ ಕಾರಣ, ಎಲ್ಲರ ಮುಖಗಳಲ್ಲಿ ಮಿನುಗುತ್ತಿದ್ದ ಮುಗುಳು ನಗೆಯೂ ಮಾಯವಾಯಿತು. ಕಾಡಾನೆಗಳ ಹಿಂಡಿನಲ್ಲಿ ಅತ್ಯಂತ ಬಲಶಾಲಿ ಯಾಗಿದ್ದ ಸಲಗವು ರೋಷಾವೇಶದಿಂದ ಮೈಮರೆತು ಆವರಣದ ಅಡ್ಡ ತೊಲೆಗೆ ಕುಂಭಸ್ಥಳದಿಂದ ಢಿಕ್ಕಿ ಹೊಡೆದು ಅದನ್ನು ಸೊಂಡಿಲಿನಿಂದ ಹಿಡಿದು ಜಗ್ಗಿಸಲಾರಂಭಿಸಿತು. ಆನೆಗಳಿಗೆ ಹಗ್ಗವನ್ನು ಬಿಗಿಯುವ ಸ್ಥಳದ ಆವರಣಕ್ಕೆ ಮೂರು ಮೂರು ವರಸೆಗಳಾಗಿ ದೊಡ್ಡ ದೊಡ್ಡ ತೊಲೆಗಳನ್ನೇ ಭೂಮಿಯೊಳಗೆ ನಾಲ್ಕು ಅಡಿಗಳ ಆಳಕ್ಕೆ ನಟ್ಟು ತೊಲೆಗಳನ್ನೇ ಅಡ್ಡಲಾಗಿ ಬಿಗಿದಿರುತ್ತಾರೆ; ಆವರಣವು ಬಹಳ ಎತ್ತರ ವಾಗಿರುತ್ತದೆ. ಹಾಗೆ ಕಲ್ಪಿತವಾಗಿದ್ದ ಬಲವಾದ ಆವರಣದ ಮೊದಲ ನೆಯ ವರಸೆಯ ಅಡ್ಡ ತೊಲೆಯೂ ಸಲಗದ ಹೊಡೆತಕ್ಕೆ ಅದುರಿ ಅಲ್ಲಾಡಿ ಹೋಯಿತು. ಅದು ಪದೇ ಪದೇ ಢಿಕ್ಕಿ ಹೊಡೆದ ರಭಸಕ್ಕೆ ಆವರಣದಲ್ಲಿ ತೊಲೆಗಳ ಕಟ್ಟುಗಳು ಕಿತ್ತು, ಮೊದಲನೆಯ ವರಸೆಯ ತೊಲೆಗಳು ನೆಲಕ್ಕುರುಳುವಂತಾದುವು. ಅವುಗಳನ್ನೂ ಉಳಿದ ಎರಡು ವರಸೆಗಳ ತೊಲೆಗಳನ್ನೂ ನೆಲಕ್ಕುರುಳಿಸಿ ಆವರಣದಿಂದ ಹೊರಬಿದ್ದು ಓಡ ಬೇಕೆಂಬುದು ಸಲಗದ ಪ್ರಯತ್ನ. ಆ ಮತ್ತಗಜವು, ತನ್ನ ಪ್ರಯತ್ನವು

ಸ್ವಲ್ಪಮಟ್ಟಿಗೆ ಸಫಲವಾದ ಹುಚ್ಚು ಹುಮ್ಮಸ್ಸಿನಲ್ಲಿ ದ್ವಿಗುಣಿತವಾದ ಉತ್ಸಾಹದಿಂದ ಮತ್ತೆ ಮತ್ತೆ ಢಿಕ್ಕಿ ಹೊಡೆಯತೊಡಗಿತು. ಪ್ರೇಕ್ಷಕರೆಲ್ಲರೂ ಭಯದಿಂದ ತಲ್ಲಣಿಸಿ ಆವರಣದ ಹಿಂದೆಯೇ ತಾವುಗಳು ಕುಳಿತಿದ್ದ ಸ್ಥಳಗಳಿಂದ ಧುಮ್ಮಿಕ್ಕಿ ದಿಕ್ಕೆಟ್ಟು ಮನಸ್ವಿಯಾಗಿ ಓಡಿಹೋದರು. ಅಂದಿನ ಭೀಕರ ದೃಶ್ಯವನ್ನು ನೋಡಿದವರೊಬ್ಬರು "ಬಿರುಗಾಳಿಗೆ ಮಾವಿನ ಕಾಯಿಗಳು ತಪತಪನೆ ಉದುರುವಂತೆ ಎಲ್ಲಿದ್ದವರು ಅಲ್ಲಲ್ಲೇ ಎತ್ತರವನ್ನೂ ಪರಿಗಣಿಸದೆ ಗ್ಯಾಲರಿಯಿಂದ ಧುಮುಕಿ" ಓಡಿಹೋದರೆಂದು ವರ್ಣಿಸಿ ಹೇಳಿದರು. ಆ ಮತ್ತಗಜವು ಆವರಣದಿಂದ ಪಾರಾಗಿ ಹೊರಗೆ ಬಂದೊಡನೆಯೇ ಅದರ ಕಣ್ಣಿಗೆ ಬಿದ್ದ ಸಮಸ್ತರಿಗೂ ವಿಪತ್ತು ಸಿದ್ಧ. ಅಂತಹ ಸನ್ನಿವೇಶದಲ್ಲಿ ಆಳಿದ ಮಹಾಸ್ವಾಮಿಯವರು ಅಸೀಮ ಧೈರ್ಯದಿಂದ ಮುಂದೆ ಬಂದು ಆನೆಯು ಢಿಕ್ಕಿ ಹೊಡೆಯುತ್ತಿದ್ದ ಸ್ಥಳದ ಬಳಿಗೆ ದಯಮಾಡಿದರು. "ಗ್ಯಾಲರಿ"ಯ ಮೇಲೆಯೇ ಉಳಿದಿದ್ದ ಗಾಯಕವಾದ ಮಹಾರಾಜರವರಿಗೂ, ಇತರ ಒಬ್ಬಿಬ್ಬರು ಮಹಾಶಯರಿಗೂ ಸಹ ಅವರು ದೂರ ಸರಿದು ಉಪಕರಿಸಬೇಕೆಂದು ಮಹಾಸ್ವಾಮಿಯವರು ಬಹು ವಿಧವಾಗಿ ಸೂಚಿಸಿದಮೇಲೆ ಇಷ್ಟವಿಲ್ಲದೆ ಅವರುಗಳು ಹಿಂದೆ ನಿಂತರು. ಮಹಾಸ್ವಾಮಿಯವರು ತಮ್ಮ ಉತ್ಸಾಹವಾಣಿಗಳಿಂದ ಹುರಿದುಂಬಿಸಿದ ನೂರಾರು ಮಂದಿ ಕೆಲಸಗಾರರೂ, ಕೆಲವರು ಅರಣ್ಯ ಶಾಖಾಧಿಕಾರಿಗಳೂ ಪ್ರಭುಗಳೇ ಅಪಾಯಕ್ಕೆ ಎದೆಗೊಟ್ಟು ನಿಂತಿರುವಲ್ಲಿ ತಾವು ಓಡಿಹೋಗುವುದು ಅನುಚಿತವೆಂಬುದನ್ನು ಮನಗಂಡು ಅತ್ಯುತ್ಸಾಹದಿಂದ ಕಾರ್ಯಾರಂಭಮಾಡಿದರು. ಅಂದು ಅತಿಥಿಗಳ ಪ್ರಾಣರಕ್ಷಣೆಯ ಪ್ರಯತ್ನದಲ್ಲಿ ಆನೆಗಳಿಗೆ ಮನುಷ್ಯರ ತಲೆಗಳನ್ನೊಪ್ಪಿಸಬೇಕಾಗಿ ಬಂದರೆ ಮೊದಲು ತಮ್ಮ ತಲೆಯನ್ನೇ ಒಪ್ಪಿಸುವುದಾಗಿ ಮಹಾಸ್ವಾಮಿಯವರು ಅಪ್ಪಣೆ ಕೊಡಿಸಿದ ಮಾತುಗಳನ್ನು ಕೇಳಿ ಅವರಲ್ಲಿ ಕೆಲವರು ಧಾರಾಕಾರವಾಗಿ ಕಣ್ಣೀರನ್ನು ಸುರಿಸಿದರು; ಅಮಿತವಾದ ಉತ್ಸಾಹದಿಂದ ಕೆಲಸಮಾಡಲುಪಕ್ರಮಿಸಿದರು. ಮಹಾಸ್ವಾಮಿಯವರು ಅಸೀಮ ಧೈರ್ಯದಿಂದ ಮುಂದೆ ನುಗ್ಗಿ ಒಂದು ಗಳುವನ್ನು ತೆಗೆದುಕೊಂಡು ಆವರಣದ ಬಳಿಗೆ ಹೋಗುವ ವೇಳೆಗೆ ಸಲಗವು ಆವರಣದ ಎರಡನೆಯ ವರಸೆಯ ತೊಲೆಗಳನ್ನೂ ನೆಲಕ್ಕುರುಳಿಸಿತು. ಅದು ಮೂರನೆಯ ವರಸೆಯ ಅಡ್ಡ ತೊಲೆಗಳನ್ನೂ ಭೇದಿಸಿಕೊಂಡು ಹೊರಬಿದ್ದರೆ ಗತಿಯೇನೆಂದು ಶಂಕಿಸಿ ಅವರು ತಮ್ಮ ಪ್ರಾಣಾಪಾಯವನ್ನೂ ತೃಣೀಕರಿಸಿ ಮುಂದೆ ಹೋಗಿ ತೊಲೆಯನ್ನು ಜಗ್ಗಿಸುತ್ತಿದ್ದ

ಆನೆಯ ಸೊಂಡಿಲಿನ ಕೊನೆಗೆ ಗಳುವಿನಿಂದ ಬಲವಾಗಿ ಹೊಡೆದರು. ಅಲ್ಲದೆ ಆವರಣದ ಹೊರಭಾಗದಲ್ಲಿ ಸಮಯಸ್ಫೂರ್ತಿಯಿಂದ ದೊಡ್ಡದಾಗಿ ಉರಿಯನ್ನೂ ಹಾಕಿಸಿದರು. ಆನೆಯು ನೋವಿನಿಂದ ಘೀಳಿಡುತ್ತ, ಉರಿಯನ್ನು ಕಂಡು ಬೆದರಿ ಹಿಂದಕ್ಕೆ ಹೋಯಿತು. ಆವರಣದೊಳಗೆ ಪಳಗಿದ "ಕುಮ್ಕಿ" ಆನೆಗಳ ಮೇಲೆ ಕುಳಿತಿದ್ದವರು ಚಾತುರ್ಯ ದಿಂದ ಮತ್ತೆ ಕಾರ್ಯಾರಂಭಮಾಡಿ "ಕುಮ್ಕಿ" ಆನೆಗಳಿಂದ ಅದನ್ನು ಸುತ್ತುಗಟ್ಟಿ ಕಾಲುಗಳಿಗೂ ಕೊರಳಿಗೂ ಹಗ್ಗಗಳನ್ನು ಬಿಗಿದು ಅದನ್ನು ಬಂಧಿಸಿದರು. ಬೆಟ್ಟದಂತೆ ಬಂದಿದ್ದ ವಿಪತ್ತು ಮಹಾಸ್ವಾಮಿಯವರ ಧೈರ್ಯ ಸ್ಫೂರ್ತಿಗಳ ಪ್ರಭಾವದಿಂದ ಮಂಜಿನಂತೆ ಕರಗಿಹೋಯಿತು.

ರೋಷಪರವಶರಾದರೆ ಕೂಡ ಯುಕ್ತವೆನಿಸಬಹುದಾದ ಸನ್ನಿವೇಶ ಗಳಲ್ಲಿ ಸಹ ಮಹಾಪ್ರಭುಗಳವರು ಶಾಂತರಾಗಿದ್ದು, ಅಪಚಾರಮಾಡಿ ದವರಲ್ಲಿ ಕೃಪೆತೋರಿಸುತ್ತಿದ್ದ ಮಹಾಪುರುಷರು.

**ಕ್ಷಮಾ ಸಮ ದರ್ಶಿತ್ವಗಳು**

ಒಮ್ಮೆ ಊಳಿಗದವನು (ಮುಖ ಮಜ್ಜನಕ್ಕೆ ನೀರನ್ನೊಪ್ಪಿಸುವ ಕಾಲದಲ್ಲಿ) ಬಿಸಿನೀರು ತುಂಬಿದ ದೊಡ್ಡ ಪಾತ್ರೆಯನ್ನು ಮಹಾಪ್ರಭುಗಳವರ ಹೆಜ್ಜೆಯಮೇಲೆ ಎತ್ತಿಹಾಕಿದುದರಿಂದ ಬಹಳ ಬಾಧೆಯಾದುದನ್ನೂ ಸಹಿಸಿ ಕೊಂಡು ಅವರು ಶಾಂತರಾಗಿದ್ದುದು ಮಾತ್ರವೇ ಅಲ್ಲದೆ, ತನ್ನ ತಪ್ಪಿಗಾಗಿ ಗಡಗಡನೆ ನಡುಗುತ್ತ ನಿಂತಿದ್ದ ಆತನಿಗೆ ಸಮಾಧಾನ ಹೇಳಿ ಅಭಯ ವನ್ನಿತ್ತರು.

ಇಂಗ್ಲಿಷ್ ಭಾಷೆಯಲ್ಲಿರುವ "ಎನ್‌ಸೈಕ್ಲೋಪೀಡಿಯ ಬ್ರಿಟಾನಿಕ" ಎಂಬ ಹೆಸರಿನ ವಿಶ್ವಕೋಶಕ್ಕೆ ಸೇರುವ ಪೂರ್ವಣಿಯಾಗಿ ೧೯೩೦ನೆಯ ಇಸವಿಯಲ್ಲಿ ಪ್ರಕಟವಾಗಿರುವ ಸಂಪುಟದಲ್ಲಿ

**ವಿಶ್ವಕೋಶದ ಶ್ಲಾಘನೆ**

ಮೈಸೂರು ಸಂಸ್ಥಾನದ ವಿಚಾರವಾಗಿ "ಭರತ ಖಂಡದಲ್ಲಿ ಅತ್ಯಂತ ಹೆಚ್ಚಿನ ಪ್ರಗತಿಯನ್ನು ಸಾಧಿಸಿ ಮುಂದುವರಿಯುತ್ತಿರುವಂತಹದೆಂಬ ಹೆಸರಿಗೆ ನ್ಯಾಯವಾದ ಅರ್ಹತೆಯನ್ನು ಪಡೆದಿರುವ ಹಿಂದೂ ಸಂಸ್ಥಾನವಾದ ಮೈಸೂರು ಸಂಸ್ಥಾನ" * ಎಂಬ ವರ್ಣನೆಯಿದೆ. ಉಜ್ಜ್ವಲ ದೇಶಾಭಿ ಮಾನದಿಂದ ಕೂಡಿ, ಪ್ರಜೆಗಳ ಶ್ರೇಯಸ್ಸೇ ತಮ್ಮ ಶ್ರೇಯಸ್ಸೆಂದು ಬಗೆದು ರಾಜ್ಯಭಾರಮಾಡುತ್ತ ದೇಶೋನ್ನತಿ ಸಾಧನೆಗಾಗಿ ಹಗಲಿರುಳೂ

* "Mysore, a Hindu State with just claims to be the most progressive in India............."

ಶ್ರಮಿಸುತ್ತಿದ್ದ ಪ್ರಭುಗಳಾದ ಆಳಿದ ಮಹಾಸ್ವಾಮಿಯವರ ಅಧ್ಯವಸಾಯದ ಫಲವಾಗಿ ಈ ಬಗೆಯ ಶ್ಲಾಘನೆಯು ಲಭಿಸಿತೆಂದು ಮೈಸೂರು ಸಂಸ್ಥಾನದವರೆಲ್ಲರೂ ಆನಂದಿಸಬಹುದಾಗಿದೆ. ಮೇಲೆ ಸೂಚಿಸಿದ ವಿಶ್ವಕೋಶದ ಪೂರ್ವಣಿ ಸಂಪುಟದಲ್ಲಿ "ರಾಜ್ಯಭಾರವೆಷ್ಟು ಪರಿಷ್ಕೃತವಾಗಿದೆಯೆಂಬುದಕ್ಕೆ ಅಸಾಧಾರಣವಾದ ನಿದರ್ಶನದಂತಹ ಘಟನೆಯು ೧೯೩೬ನೆಯ ಇಸವಿಯ ಅಕ್ಟೋಬರು ತಿಂಗಳಿನಲ್ಲಿ ನಡೆಯಿತು. ಪೂರ್ವಸಂಪ್ರದಾಯಗಳನ್ನು ಕಟ್ಟುನಿಟ್ಟಾಗಿ ನಡೆಯಿಸಿಕೊಂಡು ಬರುತ್ತಿದ್ದ ಹಿಂದುಗಳಾದ ಶ್ರೀಮನ್ಮಹಾರಾಜರವರು ಆಗ್ಗೆ (ಅಭೂತಪೂರ್ವವೆನಿಸಿ ಮೊಟ್ಟಮೊದಲನೆಯ ಸಾರಿ) ನಿಮ್ನ ತರಗತಿಗಳ ಜನರು ದಸರಾ ಉತ್ಸವದ ದರ್ಬಾರುಗಳಿಗೆ ಅರಮನೆಗೆ ಪ್ರವೇಶಿಸಲು ಅವಕಾಶವನ್ನು ಕಲ್ಪಿಸಿದರು. ಪ್ರಾಚೀನಕಾಲದಿಂದಲೂ ನಡೆದುಬಂದಿದ್ದ ಜಾತಿ ಪದ್ಧತಿಗಳ ಕಟ್ಟುನಿಟ್ಟನ್ನು ಸಡಲಿಸಿ ಕೃಪೆತೋರುವ ಭಾಗದಲ್ಲಿ ಇದೆಷ್ಟು ಅಮೋಘವಾದ ಮಾರ್ಪಾಡೆಂಬುದನ್ನು, ಪೂರ್ವ ಸಂಪ್ರದಾಯಗಳ ಹಿಡಿತದ ಬಿಕ್ಕಟ್ಟು ಎಷ್ಟು ಹೆಚ್ಚಿನದೆಂಬುದನ್ನು ಸ್ಥಳದಲ್ಲಿ ಪ್ರತ್ಯಕ್ಷವಾಗಿ ಕಂಡಿರುವವರು ಮಾತ್ರವೇ ಪೂರ್ತಿಯಾಗಿ ಗ್ರಹಿಸಿ ಶ್ಲಾಘಿಸಬಲ್ಲರು"* ಎಂಬ ವಾಣಿಗಳೂ ಇವೆ. ಹೀಗೆ ಹರಿಜನರೂ ಅರಮನೆಗೆ ಪ್ರವೇಶಿಸಬಹುದೆಂದು ಅಪ್ಪಣೆ ಮಾಡಿ ಅನುಗ್ರಹಿಸಿರುವ ಭಾರತೀಯ ಸಂಸ್ಥಾನಾಧೀಶರುಗಳಲ್ಲಿ ಆಳಿದ ಮಹಾಸ್ವಾಮಿಯವರೇ ಮೊಟ್ಟಮೊದಲನೆಯವರು.

---

* "A remarkable instance of the enlightened character of the administration occurred in October, 1936, when the Maharaja though a strictly orthodox Hindu admitted (for the first time known) members of the depressed classes to participate in the ceremonials connected with the celebrations of the Dasara festival. How striking a breach this effected with the age long caste traditions can be appreciated only by those who had seen its rigidity on the spot."

# ಎರಡನೆಯ ಅಧ್ಯಾಯ

## ಬಾಲ್ಯ

**“ ಮಾತೃ ದೇವೋ ಭವ । ಪಿತೃ ದೇವೋ ಭವ । ಆಚಾರ್ಯ ದೇವೋ ಭವ । ”**

**ವಿಕ್ರಮನಾಮ ಸಂವತ್ಸರದ ವಿಜಯೋತ್ಕರ್ಷ**

೧೮೮೧ನೆಯ ಇಸವಿಯ ಮಾರ್ಚಿ ತಿಂಗಳು (ವಿಕ್ರಮ ಸಂವತ್ಸರದ ಫಾಲ್ಗುಣ ಮಾಸವು) ಮೈಸೂರು ಸಂಸ್ಥಾನದ ಇತಿಹಾಸದಲ್ಲಿ ಚಿರಸ್ಮರಣೀಯವಾಗಿ ಶೋಭಿಸುವುದಾಗಿದೆ. ಶ್ರೀ ಮುಮ್ಮಡಿ ಕೃಷ್ಣರಾಜ ಒಡೆಯರವರ ಕಾಲದಲ್ಲಿ ಕೈಬಿಟ್ಟು ಹೋಗಿದ್ದ ರಾಜ್ಯಾಡಳಿತವು ಸುಮಾರು ಐವತ್ತು ವರ್ಷಕಾಲ “ಬ್ರಿಟಿಷ್ ಕಮಿಷನ್” ಸ್ವಾಧೀನದಲ್ಲಿದ್ದು ಮತ್ತೆ ಮೈಸೂರು ಸಂಸ್ಥಾನಾಧೀಶ್ವರರ ಕರಗತವಾದುದು ಆ ತಿಂಗಳಿನಲ್ಲಿ.

ವಿಕ್ರಮನಾಮ ಸಂವತ್ಸರದ ಫಾಲ್ಗುಣ ಶುದ್ಧ ಏಕಾದಶೀ ಶುಕ್ರವಾರದ ದಿವಸ (ಎಂದರೆ ೧೮೮೧ನೆಯ ಇಸವಿ ಮಾರ್ಚಿ ತಿಂಗಳು ೧೧ನೆಯ ತಾರೀಖಿನ ದಿವಸ) ಶ್ರೀಮನ್ಮಹಾರಾಜ ಶ್ರೀ ಚಾಮರಾಜೇಂದ್ರ ಒಡೆಯರವರಿಗೂ ಅವರ ಧರ್ಮಪತ್ನಿಯವರಾದ ಶ್ರೀ ವಾಣೀವಿಲಾಸ ಸನ್ನಿಧಾನ ಶ್ರೀ ಮಹಾರಾಜ್ಞೀ ಶ್ರೀ ಕೆಂಪನಂಜಮ್ಮಣ್ಣಿಯವರಿಗೂ ಪುತ್ರಿಕೋತ್ಸವದ ಅಮಿತಾನಂದವು ಲಭಿಸಿತು. ವಿಕ್ರಮ ಸಂವತ್ಸರದ ಶುಭೋತ್ಕರ್ಷವು ಅಷ್ಟೇ ಅಲ್ಲ; ರಾಜ್ಯಲಕ್ಷ್ಮಿಯ ಮಂದಹಾಸದ ಬೆಳದಿಂಗಳಿನಿಂದ ಅರಮನೆಯು ಬೆಳಗಿತೋ — ಎಂಬಂತೆ ಅದೇ ಮಾರ್ಚಿ ತಿಂಗಳು ೨೫ನೆಯ ತಾರೀಖಿನ ದಿನ ಮೈಸೂರು ಸಂಸ್ಥಾನದ ರಾಜ್ಯಭಾರ ಸೂತ್ರಗಳು ಆಳಿದ ಮಹಾಸ್ವಾಮಿಯವರಾದ ಶ್ರೀಮನ್ಮಹಾರಾಜ ಶ್ರೀ ಚಾಮರಾಜೇಂದ್ರ ಒಡೆಯರವರ ಕೈಸೇರಿದುವು. ಅತ್ಯಂತ ವೈಭವ ವಿಜೃಂಭಣೆಗಳಿಂದ ಆ ಶುಭದಿನ ಪ್ರಾತಃಕಾಲ ದರ್ಬಾರು ನಡೆದು, ವೈಸ್ರಾಯಿಯವರಾಗಿದ್ದ ಲಾರ್ಡ್ ರಿಪ್ಪನ್‌ರವರು ಅನಿವಾರ್ಯದ ದೆಸೆಯಿಂದ ದಯಮಾಡಲು ಸಾಧ್ಯವಾಗದಿದ್ದಕಾರಣ ಅವರ ಪರವಾಗಿ ಮದರಾಸು ಗವರ್ನರವರಿಂದ ರಾಜ್ಯಭಾರವು ಆಳಿದ ಮಹಾಸ್ವಾಮಿಯವರಿಗೆ ಸಮರ್ಪಿತವಾಯಿತು. ಆಗ್ಗೆ ಭರತಖಂಡದ ಚಕ್ರವರ್ತಿನಿಯವರಾಗಿದ್ದ ಶ್ರೀ ವಿಕ್ಟೋರಿಯಾ ಮಹಾರಾಜ್ಞಿಯವರ ಆಜ್ಞಾನುಸಾರವಾಗಿ

ಆ ಮಹಾಪ್ರಭುಗಳವರಿಗೆ ತಾವು ರಾಜ್ಯವನ್ನು ಒಪ್ಪಿಸಿದುದಾಗಿ ವೈಸ್ರಾಯಿಯವರಿಂದ ಬಂದಿದ್ದ ಪ್ರಸಿದ್ಧ ಪತ್ರಿಕೆಯನ್ನು ಮದರಾಸು ಗವರ್ನರವರ ಚೀಫ್ ಸೆಕ್ರೆಟರಿಯವರು ಓದಿದಮೇಲೆ ಮದರಾಸು ಗವರ್ನರವರು ಆಳಿದ ಮಹಾಸ್ವಾಮಿಯವರಿಗೆ ಹಸ್ತಲಾಘವ ಕೊಟ್ಟು ಸಿಂಹಾಸನಾರೋಹಣ ಮಾಡಿಸಿದರು. ರಾಜ್ಯಭಾರವನ್ನು ಚಕ್ರವರ್ತಿನಿಯವರ ಅಭಿನಂದನದೊಡನೆ ಹಿಂದಕ್ಕೆ ಸಮರ್ಪಿಸಿದ್ದ ವರ್ಗಾವಣೆ ಪತ್ರಿಕೆಯೂ, ವೈಸ್ರಾಯಿಯವರ ಖಿಲ್ಲತ್ತೂ, ಚಕ್ರವರ್ತಿನಿಯವರ ಆಜ್ಞಾನುಸಾರವಾಗಿ ವೈಸ್ರಾಯಿಯವರು ಕಳುಹಿಸಿದ್ದ ಅಭಿನಂದನದ ತಂತಿಯ ವರ್ತಮಾನವೂ ಶ್ರೀ ಚಾಮರಾಜೇಂದ್ರ ಒಡೆಯರವರಿಗೆ ಸಮರ್ಪಿತವಾದುವು. ಆ ಸಂಬಂಧದ ಜಯೋತ್ಸಾಹವನ್ನು ಪುತ್ರಿಕಾಜನನವು ಸೂಚಿಸಿದ್ದ ಕಾರಣ, ಜ್ಯೇಷ್ಠಪುತ್ರಿಯವರಿಗೆ ಮಹಾರಾಜ ದಂಪತಿಗಳು ಜಯಲಕ್ಷ್ಮಮ್ಮಣ್ಣಿಯವರೆಂದು ನಾಮಕರಣಮಾಡಿದರು.

ಶ್ರೀ ಚಾಮರಾಜೇಂದ್ರ ಒಡೆಯರವರು ೧೮೮೧ನೆಯ ಇಸವಿಯಲ್ಲಿ ರಾಜ್ಯಭಾರವನ್ನು ವಹಿಸಿದ ಕೂಡಲೆ ಸೆಟ್ಟಿಪಣ್ಯಂ ವೀರವಲ್ಲಿ ರಂಗಾಚಾರ್ಯರವರನ್ನು ದಿವಾನರನ್ನಾಗಿ ನೇಮಕಮಾಡಿದರು.

**ಎರಡು ಮಹತ್ತರ ಕಾರ್ಯಗಳು**

೧೮೮೧ನೆಯ ಇಸವಿಯಲ್ಲಿ ಅಂದಿನ ಭರತಖಂಡಕ್ಕೇ ಮಾದರಿಯಾದ ಎರಡು ಮಹತ್ತರ ಕಾರ್ಯಗಳು ನಡೆದುವು. "ಇಂಡಿಯನ್ ನ್ಯಾಷನಲ್ ಕಾಂಗ್ರೆಸ್" ಎಂಬ ರಾಷ್ಟ್ರೀಯ ಮಹಾಸಭೆಯು ಕೂಡ ಇನ್ನೂ ಸ್ಥಾಪಿತವಾಗಿಲ್ಲದಿದ್ದ ಆಗಿನ ಸಮಯದಲ್ಲಿ ಮೈಸೂರು ಸಂಸ್ಥಾನದ ಪ್ರಜಾಪ್ರತಿನಿಧಿಸಭೆಯು ಏರ್ಪಟ್ಟುದು ಅವುಗಳಲ್ಲೊಂದು. ಮಹತ್ತರವಾದ ಈ ಕಾರ್ಯವು ಅಖಂಡ ಭರತಖಂಡಕ್ಕೇ ಮಾದರಿಯಾಗಿ ಅಂದಿನ ಪ್ರಪಂಚವನ್ನೇ ವಿಸ್ಮಯಗೊಳಿಸಿತು. ಇಷ್ಟುಮಹತ್ತರವಾದ ಕಾರ್ಯವನ್ನು ನೆರವೇರಿಸಿದುದಕ್ಕಾಗಿ ಶ್ರೀಚಾಮರಾಜೇಂದ್ರ ಒಡೆಯರವರ ಮತ್ತು ದಿವಾನ್ ರಂಗಾಚಾರ್ಯರವರ ರಾಜನೀತಿ ಕೌಶಲ್ಯವನ್ನೂ ಪ್ರಜಾವಾತ್ಸಲ್ಯವನ್ನೂ ವಿವೇಕ ವಿಚಕ್ಷಣೆಗಳನ್ನೂ ಎಷ್ಟು ಕೊಂಡಾಡಿದರೂ ಸಾಲದು.

ಒಟ್ಟು ಭರತಖಂಡಕ್ಕೇ ಮಾದರಿಯಾಗುವಂತೆ ೧೮೮೧ನೆಯ ಇಸವಿಯಲ್ಲಿ ನಡೆದ ಮತ್ತೊಂದು ಮಹತ್ತರ ಕಾರ್ಯವು, ಮೈಸೂರು ನಗರದಲ್ಲಿ ಬಾಲಕಿಯರ ಪಾಠಶಾಲೆಯ ಸ್ಥಾಪನೆ. ಆ ಪಾಠಶಾಲೆಯು ಶ್ರೀ ವಾಣೀವಿಲಾಸ ಸನ್ನಿಧಾನದವರ ಸಲಹೆಯ ಮೇಲೆ ಸ್ಥಾಪಿತವಾದ

ಕಾರಣ, ಅದು ಅವರ ನಾಮಾಂಕಿತವನ್ನೇ ಪಡೆಯಿತು. ಆ ಪಾಠ ಶಾಲೆಯೇ ಮುಂದೆ ಅಭಿವೃದ್ಧಿ ಹೊಂದಿ ಕಾಲಾನುಕ್ರಮದಲ್ಲಿ ಮಹಾಪಾಠ ಶಾಲೆಯಾಗಿ (ಎಂದರೆ, ಕಾಲೇಜಾಗಿ) ಪರಿಣಮಿಸಿತು. ೧೮೮೧ನೆಯ ಇಸವಿಯಲ್ಲಿ ಮಹಿಳೆಯರಿಗಾಗಿ ಪಾಠಶಾಲೆಯನ್ನು ಸ್ಥಾಪಿಸುವ ವಿಚಾರ ವಾಗಿ ಸಾಮಾಜಿಕ ಪರಿಸ್ಥಿತಿಯು ಎಷ್ಟು ಪ್ರತಿಕೂಲವಾಗಿದ್ದಿತೆಂಬ ಅಂಶವನ್ನು ಗಮನಿಸಿದರೆ, ಅದನ್ನು ಸ್ಥಾಪಿಸಿದುದು ಎಷ್ಟು ಮಹತ್ತರ ವಾದ ಮತ್ತು ಎಷ್ಟು ದೀರ್ಘಾಲೋಚನೆಯುಳ್ಳ ವಿಷಯವೆಂಬುದು ಗೊತ್ತಾಗುತ್ತದೆ.

೧೮೮೧ನೆಯ ಇಸವಿಯಲ್ಲಿ ರಾಜಕುಮಾರಿ ಶ್ರೀ ಜಯಲಕ್ಷ್ಮಮ್ಮಣ್ಣಿ ಯವರು ಜನಿಸಿದ ಸಂಗತಿಯನ್ನು ಹಿಂದೆಯೇ ತಿಳಿಸಲಾಗಿದೆ. ೧೮೮೩ನೆಯ ಇಸವಿ ಜೂನ್ ತಿಂಗಳು ೮ನೆಯ ತಾರೀಖು (ಸ್ವಭಾನುನಾಮ ಸಂವತ್ಸರ ಜ್ಯೇಷ್ಠ ಶುದ್ಧ ತದಿಗೆ) ಶುಕ್ರವಾರದ ದಿನ ರಾಜಕುಮಾರಿ ಶ್ರೀ ಕೃಷ್ಣಾ ಜಮ್ಮಣ್ಣಿಯವರು ಜನಿಸಿದರು. ಆಳಿದ ಮಹಾಸ್ವಾಮಿಯವರಾದ ಶ್ರೀಮನ್ಮಹಾರಾಜ ಶ್ರೀಮನ್ನಾಲ್ವಡಿ ಶ್ರೀಕೃಷ್ಣರಾಜೇಂದ್ರ ಒಡೆಯರ್ ಬಹದ್ದೂರ್, ಜಿ.ಸಿ.ಎಸ್.ಐ., ಜಿ.ಬಿ.ಇ. ಮಹಾಸ್ವಾಮಿಯವರು ೧೮೮೪ ನೆಯ ಇಸವಿ ಜೂನ್ ತಿಂಗಳು ೪ನೆಯ ತಾರೀಖು (ಶಾಲಿವಾಹನ ಶಕ ೧೮೦೬ನೆಯ ಸಂವತ್ಸರವಾದ ತಾರಣ ಸಂವತ್ಸರದ ಜ್ಯೇಷ್ಠ ಶುದ್ಧ ಏಕಾದಶೀ) ಭಾನುವಾರ ಚಿತ್ತಾ ನಕ್ಷತ್ರದಲ್ಲಿ ಜನಿಸಿದರು. ಶ್ರೀ ಚಾಮ ರಾಜೇಂದ್ರ ಒಡೆಯರವರ ರಾಜ್ಯಭಾರ ವಿಚಕ್ಷಣೆಯನ್ನು ಮೆಚ್ಚಿ ವಿಕ್ಟೋರಿಯಾ ಚಕ್ರವರ್ತಿನಿಯವರು "ಜಿ.ಸಿ.ಎಸ್.ಐ." ಬಿರುದನ್ನು ಕೊಟ್ಟಿದ್ದ ಕಾರಣ, ಪುತ್ರೋತ್ಸವದ ಸಂತೋಷವು ಲಭಿಸಿದುದಕ್ಕೆ ಇಪ್ಪತ್ತು ದಿನಗಳಿಗೆ ಮುಂಚೆ ಆ ಬಿರುದನ್ನೂ ಖಿಲ್ಲತ್ತುಗಳನ್ನೂ ಪಡೆದು ಅವರು ಹರ್ಷಿಸಿದ್ದರು. ಶ್ರೀ ಚಾಮರಾಜೇಂದ್ರ ಒಡೆಯರವರಿಗೆ ಪುತ್ರೋತ್ಸವ ವಾದರೆ ಸಾಕೆಂದು ಕೋರುತ್ತಿದ್ದ ರಾಜಭಕ್ತಿಯುತರಾದ ಮೈಸೂರು ಸಂಸ್ಥಾನದ ಪ್ರಜೆಗಳೆಲ್ಲರೂ ಸಂತೋಷಭರಿತರಾದರು. ಆಗಿನ ಉತ್ಸವ ವೈಭವಗಳಿಂದ ರಾಜಧಾನಿಯೇ ಮಂಗಳಮಯವಾಗಿ ಶೋಭಿಸಿತು. ಮಹಾಸ್ವಾಮಿಯವರು ಜನಿಸಿದ ಶುಭದಿನ, ಆ ಸಂತೋಷ ಸಮಾರಂಭದ ಸೂಚನಾರ್ಥವಾಗಿ ಅರಮನೆಯ ಬತೇರಿಯಿಂದ ಕುಶಾಲು ತೋಪು ಗಳು ಮೊಳಗಿದುವು. ದೇವಾಲಯಗಳಲ್ಲೆಲ್ಲ ಪೂಜೆಗಳೂ ಉತ್ಸವ ಗಳೂ ನಡೆದುವು. ರಾಜಧಾನಿಯ ಪ್ರಜೆಗಳೆಲ್ಲರೂ ಆ ಶುಭದಿನವನ್ನು

ಜನನ

ಹಬ್ಬದ ದಿನದಂತೆ ಭಾವಿಸಿ ಸಡಗರಪಟ್ಟರು. ಅರಮನೆಯಲ್ಲಿಯ ಸಂತೋಷವಂತೂ ಪೂರ್ಣಿಮೆಯ ದಿನದ ಸಮುದ್ರದಂತೆ ಶೋಭಿಸಿತು. ಅರಮನೆಯ ಸೇವಕರು ಬಂಡಿ ಬಂಡಿಗಳಲ್ಲಿ ಸಕ್ಕರೆಯನ್ನೂ ಹಣ್ಣುಗಳನ್ನೂ ತುಂಬಿಕೊಂಡು ನಗರನಿವಾಸಿಗಳಿಗೆ ಹಂಚಿದರು. ಅರಮನೆಯಲ್ಲಿ ವೈದಿಕರುಗಳಿಗೆಲ್ಲ ಭೂರಿದಕ್ಷಿಣೆಯು ದೊರೆಯಿತು. ಶಿಶು ಸಂದರ್ಶನಕ್ಕಾಗಿ ಬಂದ ಅರಸು ಪಂಗಡದ ಮಹಿಳೆಯರೆಲ್ಲ "ಮರದ ಹೊನ್ನು" ಎಂಬ ಚಿನ್ನದ ನಾಣ್ಯಗಳನ್ನು ನಜರು ಒಪ್ಪಿಸಿದರು. ಕಾರಾಗೃಹಗಳಲ್ಲಿ ಶಿಕ್ಷೆಯನ್ನನುಭವಿಸುತ್ತಿದ್ದವರಲ್ಲಿ ಅನೇಕರಿಗೆ ಬಂಧನ ವಿಮೋಚನವಾಯಿತು. ದೀನಾನಾಥರಿಗೆಲ್ಲ ಧನಕನಕ ವಸ್ತ್ರಾದಿಗಳು ದೊರೆತು ಹರ್ಷವುಂಟಾಯಿತು. ಶಿಶು ಜನನವಾದ ಏಳನೆಯ ದಿನ ಸಂಸ್ಥಾನದ ಸಮಸ್ತ ದೇವಾಲಯಗಳಲ್ಲಿಯೂ ವಿಶೇಷ ಪೂಜೆಗಳೂ ಉತ್ಸವಗಳೂ ನಡೆದುವು. ನಾಮಕರಣದ ದಿನ ರಾಜಧಾನಿಯಲ್ಲಿ ನಗರನಿವಾಸಿಗಳಿಗೆ ಅರಮನೆಯಿಂದ ದೇವಸ್ಥಾನಗಳಲ್ಲಿ ಸಮಾರಾಧನೆಯು ನಡೆದು ದಕ್ಷಿಣೆಯು ಲಭಿಸಿತು. ಸಂಸ್ಥಾನದಲ್ಲೆಲ್ಲ ಆನಂದಲಹರಿಯು ಉಕ್ಕಿತು. ಚಿಕ್ಕವಯಸ್ಸಿನ ವಿದ್ಯಾರ್ಥಿ ವಿದ್ಯಾರ್ಥಿನಿಯರೆಲ್ಲರಿಗೂ ಉಪಾಧ್ಯಾಯರುಗಳು "ಚಾಮೇಂದ್ರ ತನಯನ ನೋಡುವ ಬನ್ನಿರಿ" ಎಂಬ ಹಾಡನ್ನು ಹೇಳಿಕೊಟ್ಟು, ಆಮಕ್ಕಳು ಉತ್ಸಾಹದಿಂದಲೂ ಸಂತೋಷದಿಂದಲೂ ಅದನ್ನು ಹಾಡುವುದನ್ನು ಕೇಳಿ ಹಿಗ್ಗಿದರು.

ಮಾತಾಪಿತೃಗಳಿಗೆ ಸರ್ವವಿಧಗಳಲ್ಲಿಯೂ ಆನಂದವರ್ಧನರೆನಿಸಿ ವರ್ಧಿಷ್ಣುಗಳಾಗಿದ್ದ ಪುಟ್ಟ ಮಹಾಸ್ವಾಮಿಯವರಿಗೆ ಶ್ರೀ ಕೃಷ್ಣರಾಜೇಂದ್ರ ಒಡೆಯರವರೆಂದು ನಾಮಕರಣವಾಯಿತು.

**ಡೋಲೋತ್ಸವ** ಆ ಬಳಿಕ ಕಾಲಕ್ರಮದಲ್ಲಿ ಅರಮನೆಯ ಸಂಪ್ರದಾಯಕ್ಕನುಗುಣವಾಗಿ ಚಾಮುಂಡೀ ಬೆಟ್ಟದ ಮೇಲೆ ಶಿಶುವಿಗೆ ಡೋಲೋತ್ಸವವು ನಡೆಯಿತು. ಅಂದು ಶ್ರೀ ಚಾಮರಾಜೇಂದ್ರ ಒಡೆಯರವರು ಶ್ರೀ ಮಹಾರಾಜ್ಞೀ ವಾಣೀವಿಲಾಸ ಸನ್ನಿಧಾನದವರೊಡನೆಯೂ, ಮಕ್ಕಳೊಡನೆಯೂ, ಬಂಧುಮಿತ್ರ ಪರಿವಾರ ಸಮೇತರಾಗಿಯೂ ಚಾಮುಂಡೀ ಬೆಟ್ಟಕ್ಕೆ ದಯಮಾಡಿ ಕುಲದೇವತೆಯಾದ ಶ್ರೀ ಚಾಮುಂಡೇಶ್ವರೀದೇವಿಯವರಿಗೆ ವಿಶೇಷೋತ್ಸವಗಳನ್ನು ಮಾಡಿಸಿ ಸೇವೆಯನ್ನು ಸಲ್ಲಿಸಿದರು. ಆ ಬಳಿಕ ಶಿಶುವಿಗೆ ಡೋಲೋತ್ಸವವು ಬಳೆಯಿತು. ದೇವಾಲಯದ ಆವರಣದ ಸಂಪಗೆಯ ಮರಕ್ಕೆ ಚಿನ್ನದ ಸರಪಣಿಗಳಿಂದ ರತ್ನಖಚಿತವಾದ ಚಿನ್ನದ ತೊಟ್ಟಿಲನ್ನು ಕಟ್ಟಿ ಅದರಲ್ಲಿ



(ಶ್ರೀ ಚಾಮರಾಜೇಂದ್ರ ಒಡೆಯರವರು ಆಳಿದ ಮಹಾಸ್ವಾಮಿಯವರನ್ನು ಕುದುರೆಯ ಮೇಲೆ ಕುಳ್ಳಿರಿಸಿರುವುದು)



(ನಿಂತಿರುವವರು ಆಳಿದ ಮಹಾಸ್ವಾಮಿಯವರು; ಕುಳಿತಿರುವವರು ಅವರ ಸೋದರರು)

ಮಗುವನ್ನು ಮಲಗಿಸಿ ತೂಗಿದರು. ಪ್ರಕೃತಿ ಸೌಂದರ್ಯಮಯವಾದ ಚಾಮುಂಡೀ ಬೆಟ್ಟದ ಮೇಲೆ ಆದಿಶಕ್ತಿಯಾದ ಚಾಮುಂಡೇಶ್ವರೀದೇವಿ ಯವರ ದಿವ್ಯ ಸನ್ನಿಧಿಯಲ್ಲಿ ಆ ಉತ್ಸವವು ನಡೆದು ಆನಂದಲಹರಿಯ ಬೆಳದಿಂಗಳು ಎಲ್ಲೆಡೆಗಳನ್ನೂ ಬೆಳಗಿತು.

ಶ್ರೀ ಚಾಮರಾಜೇಂದ್ರ ಒಡೆಯರವರು ಶಿಶುವಿನ ಮೊದಲನೆಯ ವರ್ಷವರ್ಧಂತ್ಯುತ್ಸವವನ್ನು ವಿಶೇಷ ವೈಭವ ವಿಜೃಂಭಣೆಗಳಿಂದ ನೆರವೇರಿ ಸಿದರು. ಅಂದು ಅರಮನೆಯಲ್ಲಿ ಸಂತೋಷ ಸಡಗರಗಳಿಗೆ ಪಾರವೇ ಇರಲಿಲ್ಲ. ಶಿಶುವಿಗೆ ಪ್ರಾತಃಕಾಲ ಮಂಗಳ ಮಜ್ಜನವು ಬಳೆದ ಬಳಿಕ, ದಿವ್ಯಾಲಂಕಾರವು ನಡೆದು ಅಂಬಾವಿಲಾಸ ತೊಟ್ಟಿಯಲ್ಲಿ ಆರತಿಯೂ ದರ್ಬಾರೂ ನೆರವೇರಿದುವು. ಸಂಸ್ಥಾನದ ಮುಖ್ಯಾಧಿಕಾರಿಗಳೂ, ಇತರ ದೊಡ್ಡ ಮನುಷ್ಯರೂ ಆಹ್ವಾನಿತರಾಗಿ ರಾಜಧಾನಿಗೆ ದಯಮಾಡಿ, ಶಿಶು ದರ್ಶನ ಭಾಗ್ಯವನ್ನು ಪಡೆದು ಹರ್ಷಿಸಿದರು. ಆ ದಿನ ಸಾಯಂಕಾಲ ರತ್ನ ಖಚಿತವಾದ ಪಲ್ಲಕ್ಕಿಯಲ್ಲಿ ವೈಭವದಿಂದ ಮೈಸೂರು ನಗರದ ಕೋಟೆಯ ನಾಲ್ಕು ಬೀದಿಗಳಲ್ಲಿಯೂ ಶಿಶುವಿನ ಮೆರೆವಣಿಗೆಯು ಬಳೆದು ಪುರಜನರಿಗೆಲ್ಲ ಆನಂದವುಂಟಾಯಿತು. ತ್ರಿನಯನೇಶ್ವರಸ್ವಾಮಿ ದೇವಾಲಯ, ವರಾಹಸ್ವಾಮಿ ದೇವಾಲಯ, ಪ್ರಸನ್ನಕೃಷ್ಣಸ್ವಾಮಿ ದೇವಾಲಯ, ಲಕ್ಷ್ಮೀರಮಣಸ್ವಾಮಿ ದೇವಾಲಯ, ಮುಂತಾದ ದೇವಾಲಯಗಳಿಗೆಲ್ಲ ಮೆರೆವಣಿಗೆಯು ಹೋಗಿ ಪ್ರಸಾದವನ್ನು ಪಡೆದು ಅರಮನೆಗೆ ಹಿಂತಿರುಗಿತು.

**ವರ್ಷವರ್ಧಂತಿ**

ವರ್ಷವರ್ಧಂತಿಯು ನೆರವೇರಿದ ತರುವಾಯ, ಶಿಶುವನ್ನು ಮಕ್ಕಳ ಕೈಬಂಡಿಯಲ್ಲಿ ಕುಳ್ಳಿರಿಸಿ ಊಳಿಗದವರು ಅರಮನೆಯ ಮದನವಿಲಾಸ ತೊಟ್ಟಿಯಲ್ಲಿ ಸುತ್ತಾಡಿಸುತ್ತಿದ್ದರು. ಆಗ ಅಲ್ಲಿ ಕಟ್ಟಿದ್ದ ಪಂಜರಗಳೊಳಗಿನ ಗಿಳಿಗಳು "ಪುಟ್ಟ ಬುದ್ಧಿ, ಪರಾಕು" ಎಂದು ಹೇಳಿ ತಮ್ಮ ಗೌರವದ ಕಾಣಿಕೆಯನ್ನೊಪ್ಪಿಸುತ್ತಿದ್ದುವಂತೆ. ಅಕ್ಕಂದಿರಿಬ್ಬರೂ ಮಗುವನ್ನು ಸಂತಸದಿಂದ "ತಮ್ಮಯ್ಯಾ"—ಎಂದು ಕರೆಯುತ್ತ, ಬಂಡಿಯ ಪಕ್ಕದಲ್ಲಿ ಸುತ್ತಾಡಿ ನಗಿಸುತ್ತ, ಪ್ರೀತಿತೋರಿ ನಲಿದಾಡು ತ್ತಿದ್ದರು. ಶಿಶುವಿನ ಊಳಿಗದವರು "ಗಾಳಿಸವಾರಿ"ಗಾಗಿ ಮಗು ವನ್ನು ಮೈಸೂರು ನಗರದ ರಾಜಬೀದಿಗಳಲ್ಲಿಯೂ ಇತರ ಸ್ಥಳಗಳಲ್ಲಿಯೂ ಕರೆದೊಯ್ಯಾಗ—ಸಾಯಂಕಾಲದ ವೇಳೆ—ನಗರ ನಿವಾಸಿಗಳೆಲ್ಲರೂ

**ಐದು ವರ್ಷ ವಯಸ್ಸಿನವರೆಗೆ**

ಯುವರಾಜ ಸಂದರ್ಶನದಿಂದ ಹರ್ಷಿಸುತ್ತಿದ್ದರು. "ಗಾಳಿಸವಾರಿ" ಹೋಗಿದ್ದು ಅರಮನೆಗೆ ಹಿಂತಿರುಗಿದಾಗ ಅರಮನೆಯ ದ್ವಾರದಲ್ಲಿ ಶಿಶುವಿಗೆ ದೀವಟಿಗೆ ಸಲಾಮು ಮೊದಲಾದ ರಾಜಮರ್ಯಾದೆಗಳು ನಡೆಯುತ್ತಿದ್ದುವು.

ಮಗುವಿಗೆ ಎರಡು ವರ್ಷಗಳು ತುಂಬಿದಮೇಲೆ ಕೈಬಂಡಿಯಲ್ಲಿ ಕುಳ್ಳಿರಿಸುತ್ತಿದ್ದುದನ್ನು ನಿಲ್ಲಿಸಿ ಬಣ್ಣದ ಕುದುರೆಯ ಮೇಲೆ ಕುಳ್ಳಿರಿಸಿ ಊಳಿಗದವರು ಮದನವಿಲಾಸ ತೊಟ್ಟಿಯಲ್ಲಿ ಸುತ್ತಿಸಿ ಆಡಿಸುತ್ತಿದ್ದರು. ಚಿತ್ರದ ಕಾಗದವನ್ನಾಗಲಿ ಪುಸ್ತಕವನ್ನಾಗಲಿ ತೋರಿಸಿದರೆ, ಮಗುವು ತೀವ್ರಾಸಕ್ತಿಯಿಂದ ದೃಷ್ಟಿಸಿ ನೋಡುತ್ತಿದ್ದುದನ್ನು ಕಂಡು ಮಹಾರಾಜ ದಂಪತಿಗಳು ಆನಂದದಿಂದ ಹಿಗ್ಗುತ್ತಿದ್ದರು.

ಮೂರು ವರ್ಷಗಳು ತುಂಬುವ ವೇಳೆಗೆ ಪುಟ್ಟ ಮಹಾಸ್ವಾಮಿಯವರಿಗೆ ಚೆನ್ನಾಗಿ ಮಾತನಾಡುವ ಸಾಮರ್ಥ್ಯವೂ ಓಡಾಡುವ ಸಾಮರ್ಥ್ಯವೂ ಬಂದಿದ್ದುವು. ಆಗ ಬಣ್ಣದ ಕುದುರೆಗೆ ಪ್ರತಿಯಾಗಿ ನಿಜವಾದ ಕುದುರೆಮರಿಯ ಮೇಲೆ ಕುಳ್ಳಿರಿಸಿ ಮಗುವನ್ನು ಎಚ್ಚರಿಕೆಯಿಂದ ಹಿಡಿದುಕೊಂಡು ಕರಿಯಕಲ್ಲು ತೊಟ್ಟಿಯಲ್ಲಿ ಸುತ್ತಾಡಿಸುವುದು ಪ್ರಾರಂಭವಾಯಿತು. ಶ್ರೀ ಚಾಮರಾಜೇಂದ್ರ ಒಡೆಯರವರೂ ಸಹ, ಪ್ರೀತಿಯಿಂದ ಆಗಾಗ ಆರೀತಿ ಸುತ್ತಾಡಿಸುತ್ತಿದ್ದರು. ಮಗುವಿನ ಅಲಂಕಾರವು ಮನೋಹರವಾಗಿರುತ್ತಿದ್ದಿತು. ಬಿಳಿಯ ಪಾಯಿಜಾಮೆಯನ್ನು ಹಾಕಿ ಕಿಂಕಾಪಿನ ಅಥವಾ ದಮಾಕಿನ ಅಂಗಿಯನ್ನು ತೊಡಿಸುತ್ತಿದ್ದರು. ಆ ಅಂಗಿಗೆ ಗುಂಡಿಗೆ ಪ್ರತಿಯಾಗಿ ಚಿನ್ನದ ಗೆಜ್ಜೆಯ ಸರವನ್ನು ಹಾಕಿ ಹೊಲಿದಿರುತ್ತಿದ್ದರು. ಅದರಮೇಲೆ "ಜನಿವಾರದ ಸರ"ವೆಂಬ ರತ್ನಖಚಿತವಾದ ಹಾರವನ್ನು ಹಾಕಿ, ತಲೆಗೆ ಕಲಾಪತ್ತಿನ ಟೋಪಿಯನ್ನಿಟ್ಟು ಅಲಂಕರಿಸುತ್ತಿದ್ದರು. ಕೊರಳಿನಲ್ಲಿ ಎರಡೆಳೆಯ ಮುತ್ತಿನ ಕಂಠಿಯೂ ಕಿವಿಗಳಲ್ಲಿ ವಜ್ರದ ಹತ್ತುಕಡಕೂ ಶೋಭಿಸುತ್ತಿದ್ದುವು. ಮಗುವಿಗೆ ಜಡೆಯನ್ನು ಹೆಣೆದು ಹೂಮುಡಿಸಿ, ಹಣೆಗೆ ಬೆಳಗಿನ ವೇಳೆಯಲ್ಲಿ ಕುಂಕುಮದ ಬೊಟ್ಟನ್ನೂ ಮಧ್ಯಾಹ್ನದಮೇಲೆ ಸಾದಿನ ಬೊಟ್ಟನ್ನೂ ಇಡುತ್ತಿದ್ದರು. ಅರಮನೆಯಲ್ಲಾಗಲಿ, ಅರಮನೆಯಿಂದ ಹೊರಗೆ ಬಂದಾಗಲಾಗಲಿ ಜನರು ಮುಜರೆ ಮಾಡಿದರೆ ಪ್ರತಿಯಾಗಿ ಕೈಮುಗಿಯುವುದು ಆಳಿದ ಮಹಾಸ್ವಾಮಿಯವರಿಗೆ ತೀರ ಚಿಕ್ಕವಯಸ್ಸಿನಿಂದಲೂ—ಎಂದರೆ ಕೇವಲ ಎರಡು ವರ್ಷ ವಯಸ್ಸಿನ ಶಿಶುವಾಗಿದ್ದಾಗಿನಿಂದಲೂ — ಅಭ್ಯಾಸವಾಗಿದ್ದಿತು.



ಶ್ರೀಚಾಮರಾಜೇಂದ್ರ ಒಡೆಯರವರೂ ಮತ್ತು ಅವರ ಪುತ್ರಪುತ್ರಿಯರೂ



ಶ್ರೀಮದ್ಯುವರಾಜ ಶ್ರೀ ಕಂಠೀರವ ನರಸಿಂಹರಾಜ ಒಡೆಯರವರು ಮತ್ತು ರಾಜಕುಮಾರಿ ಶ್ರೀ ಜಯಲಕ್ಷ್ಮಮ್ಮಣ್ಣಿಯವರು.

ನಿಂತಿರುವವರು: ರಾಜಕುಮಾರಿ ಶ್ರೀ ಚೆಲುವಾಜಮ್ಮಣ್ಣಿಯವರು ಮತ್ತು ಆಳಿದ

ಚಪಲತೆಯಿಂದ ತಮ್ಮ ಸಹೋದರಿಯರೀರ್ವರಲ್ಲಿ ಸ್ಪರ್ಧಿಸಿ ತಮ್ಮ ಮನೋರಥವು ಪೂರ್ಣವಾಗದ ಕಾರಣ, ಅಳುವುದಕ್ಕುಪಕ್ರಮಿಸುತ್ತಿದ್ದರು: ಶ್ರೀ ಚಾಮರಾಜೇಂದ್ರ ಒಡೆಯರವರು ಆಗ್ಗೆ ತಮ್ಮೀರ್ವರು ಕುಮಾರಿಯವರಿಗೂ—ಅವರಿಗೆ ಐದು ವರ್ಷಗಳ ವಯಸ್ಸಾದಾಗಿನಿಂದ—ಗಂಡುಡೆಯನ್ನು ತೊಡಿಸಿ ಕುದುರೆ ಸವಾರಿಯನ್ನು ಕಲಿಸಲಾರಂಭಿಸಿದ್ದರು. ತಮ್ಮೀರ್ವರು ಜ್ಯೇಷ್ಠ ಸಹೋದರಿಯರಂತೆಯೇ ತಮ್ಮನ್ನೂ ಕುದುರೆಯ ಮೇಲೆ ಕುಳ್ಳಿರಿಸಿ ಸ್ವತಂತ್ರವಾಗಿ ಬಿಟ್ಟುಬಿಡಬೇಕೆಂಬುದು ಪುಟ್ಟ ಮಹಾಸ್ವಾಮಿಯವರ ಛಲ. ಶ್ರೀ ಚಾಮರಾಜೇಂದ್ರ ಒಡೆಯರವರು ಅದಕ್ಕಾಗಿ ಹರ್ಷಿಸಿ ಸುಪ್ರೀತರಾಗಿ ಪುಟ್ಟ ಮಹಾಸ್ವಾಮಿಯವರನ್ನು ಕುದುರೆಯಮೇಲೆ ಕುಳ್ಳಿರಿಸಿ ಬಲಗೈಯಲ್ಲಿ ಲಗಾಮನ್ನೂ ಎಡಗೈಯಲ್ಲಿ ಅವರ ರಟ್ಟೆಯನ್ನೂ ಹಿಡಿದು ಕುದುರೆಯನ್ನು ನಡೆಯಿಸಿದರೆ, ಶ್ರೀ ಜಯಲಕ್ಷ್ಮಮ್ಮಣ್ಣಿಯವರಂತೆಯೇ ತಾವೇ ಸ್ವತಂತ್ರವಾಗಿ ಕುದುರೆ ಸವಾರಿ ಮಾಡಬೇಕೆಂಬ ಹಟ. ಆ ಮನೋರಥವು ನೆರವೇರಲು ಅವಕಾಶವಿಲ್ಲದಿದ್ದಕಾರಣ, ತಮಗೆ ಅನ್ಯಾಯವಾಯಿತೆಂಬ ಕಾರಣದಿಂದ ರೋದನ.

ಆಳಿದ ಮಹಾಸ್ವಾಮಿಯವರಾದ ಶ್ರೀ ಚಾಮರಾಜೇಂದ್ರ ಒಡೆಯರವರು ತಮ್ಮ ಪುತ್ರಿಯರಿಗೆ ಕುದುರೆ ಸವಾರಿ, ಬೈಸಿಕಲ್ ಸವಾರಿಗಳನ್ನು ಕಲಿಸುತ್ತಿದ್ದುದನ್ನೂ ಉತ್ಸಾಹದಿಂದ ತಾವೇ ಅವರ ಭಾವಚಿತ್ರಗಳನ್ನು ತೆಗೆದು ಹರ್ಷಿಸುತ್ತಿದ್ದುದನ್ನೂ ಈ ಸಂದರ್ಭದಲ್ಲಿ ಸೂಚಿಸಬಹುದಾಗಿದೆ. ತಮ್ಮ ಪುತ್ರಿಯರು ಬಾಲಕರಂತೆ ಉಡುಪನ್ನು ಧರಿಸಿ, ಕಿರಿಯ ವಯಸ್ಸಿಗೆ ಮೀರಿದ ಸಾಮರ್ಥ್ಯವನ್ನು ಪ್ರದರ್ಶಿಸಿ ಕುದುರೆ ಸವಾರಿ ಮಾಡುತ್ತಿದ್ದುದನ್ನು ಕಂಡು ಮಹಾರಾಜ್ಞೀ ಶ್ರೀ ವಾಣೀವಿಲಾಸ ಸನ್ನಿಧಾನದವರಿಗೂ ವಿಶೇಷ ಸಂತೋಷ.

ಪುಟ್ಟ ಮಹಾಸ್ವಾಮಿಯವರಿಗೆ ಐದು ವರ್ಷಗಳು ಪೂರೈಸುವುದಕ್ಕೆ ಮುಂಚೆ, ೧೮೮೯ನೆಯ ಇಸವಿ ಮಾರ್ಚಿ ತಿಂಗಳಿನಲ್ಲೊಂದು ಶುಭದಿನ

**ಚೂಡಾಕರ್ಮ ಮತ್ತು ಅಕ್ಷರಾಭ್ಯಾಸ**

ಚೂಡಾಕರ್ಮವೂ ಅಕ್ಷರಾಭ್ಯಾಸವೂ ಶಾಸ್ತ್ರೋಕ್ತ ವಿಧಿಗಳಿಗನುಸಾರವಾಗಿ ನಡೆದುವು. ಅಕ್ಷರಾಭ್ಯಾಸಕಾಲದಲ್ಲಿ ದೊಡ್ಡ ಬೆಳ್ಳಿಯ ಹಲಗೆಯ ಮೇಲೆ ಬಹಳ ಬೆಲೆ ಬಾಳುತ್ತಿದ್ದ ಆಣಿಮುತ್ತುಗಳನ್ನು ಹರಡಿ ಚಿನ್ನದ ಬಳಪದಿಂದ ಪುಟ್ಟ ಮಹಾಸ್ವಾಮಿಯವರಿಗೆ ಅಕ್ಷರಾಭ್ಯಾಸವು ನಡೆಯಿತು. ಆ ಬೆಳ್ಳಿಯ ಹಲಗೆಯೂ, ಮುತ್ತುಗಳೂ, ಚಿನ್ನದ ಬಳಪವೂ ಸಂಸ್ಕೃತದಲ್ಲಿ ಮತ್ತು

ಕನ್ನಡದಲ್ಲಿ ಶ್ರೀಕಾರವನ್ನು ಬರೆಯಿಸಿದ ಉಪಾಧ್ಯಾಯರುಗಳಿಗೆ ಖಿಲ್ಲತ್ತು ಗಳ ಸಮೇತವಾಗಿ ಸಮರ್ಪಿತವಾದುವು.

ಪ್ರಾರಂಭದಲ್ಲಿ ಪುಟ್ಟ ಮಹಾಸ್ವಾಮಿಯವರು ತಮ್ಮ ಜ್ಯೇಷ್ಠ ಸಹೋದರಿಯರಿಗಾಗಿ ಏರ್ಪಟ್ಟಿದ್ದ ಪಾಠಶಾಲೆಯಲ್ಲಿ ಓದು ಬರೆಹಗಳನ್ನು ಕಲಿತರು. ಇಬ್ಬರು ಬ್ರಾಹ್ಮಣ ಬಾಲಕಿಯರೂ ಕೆಲವು ಮಂದಿ ಅರಸು ಬಾಲಕಿಯರೂ ಅವರೊಡನೆ ಓದುತ್ತಿದ್ದರು. ದರ್ಬಾರುಬಕ್ಷಿಯವ ರಾಗಿದ್ದ ರಾಯ್ ಬಹದ್ದೂರ್ ಅಂಬಿಲ್ ನರಸಿಂಹ ಐಯಂಗಾರ್ಯ ರವರೂ, ಉದ್ದಾಮ ಪಂಡಿತರುಗಳಾಗಿದ್ದ ಕವಿತಿಲಕ ಸೋಸಲೆ ಅಯ್ಯ ಶಾಸ್ತ್ರಿಗಳವರೂ, ಶ್ರೀಮಾನ್ ನಂಜನಗೂಡು ಸುಬ್ಬಾಶಾಸ್ತ್ರಿಗಳವರೂ ಇತರ ಕೆಲವರು ಮಹಾಶಯರುಗಳೂ ಬೋಧಕರಾಗಿದ್ದರು. ಪ್ರತಿದಿನವೂ ಪ್ರಾತಃಕಾಲ ಸಾಯಂಕಾಲಗಳಲ್ಲಿ ಮಹಾಸ್ವಾಮಿಯವರು ತಮ್ಮ ಜ್ಯೇಷ್ಠ ಸಹೋದರಿಯರೀರ್ವರೊಡನೆ ಬಂದು ನಿಂತು ಭಕ್ತಿಯಿಂದ ಸ್ತೋತ್ರ ಪಾಠವನ್ನು ಹೇಳಿ ಭಗವತ್ಪ್ರಾರ್ಥನೆ ಮಾಡುತ್ತಿದ್ದ ಬಗೆಯು ಸರ್ವಾದರ ಣೀಯವೆನಿಸಿ ಅರಮನೆಯವರ ಮನಗಳನ್ನೆಲ್ಲ ಆಕರ್ಷಿಸಿತು. ಶ್ರೀಮಾನ್ ನಂಜನಗೂಡು ಸುಬ್ಬಾಶಾಸ್ತ್ರಿಗಳವರು ಬಹಳ ವೃದ್ಧರಾಗಿದ್ದುದರಿಂದ ಪದ್ಯಗಳನ್ನು ಹೇಳಿಕೊಡುವಾಗ ಒಂದೊಂದುವೇಳೆ ತೂಕಡಿಸುತ್ತಿದ್ದರು. ಆಗ್ಗೆ ತಮ್ಮ ತೀರ ಅಲ್ಪ ವಯಸ್ಸಿಗನುಗುಣವಾಗಿ ಪುಟ್ಟ ಮಹಾಸ್ವಾಮಿ ಯವರು ತಮ್ಮ ಕೈಯಲ್ಲಿರುತ್ತಿದ್ದ ಚಿಕ್ಕದೊಂದು ಬೆತ್ತದಿಂದ ಅವರ ರುಮಾಲನ್ನು ಮೆಲ್ಲಗೆ ಮೇಲಕ್ಕೆತ್ತಲು ಪ್ರಯತ್ನಿಸಿ ಅವರನ್ನು ಎಚ್ಚರ ಗೊಳಿಸಿ ನಗುತ್ತಿದ್ದರು. ಪುಟ್ಟ ಮಹಾಸ್ವಾಮಿಯವರು ಕರ್ಪೂರದ ಪುಡಿಯನ್ನು ತಮ್ಮ ಬಳಿಯಲ್ಲಿಟ್ಟುಕೊಂಡಿದ್ದು ಅವರು ನಸ್ಯ ಹಾಕಿಕೊಳ್ಳು ತ್ತಿದ್ದ ರೀತಿಯನ್ನೇ ಅನುಕರಿಸಿ ಅದನ್ನು ತಮ್ಮ ಮೂಗಿಗೆ ಏರಿಸುವಂತೆ ನಟಿಸುತ್ತಿದ್ದುದನ್ನು ಕಂಡವರೆಲ್ಲರೂ ಘೊಳ್ಳನೆ ನಕ್ಕು ಹರ್ಷಿಸುತ್ತಿದ್ದರು.

ಮಹಾರಾಜ ದಂಪತಿಗಳು ತಮ್ಮ ಪುತ್ರಿಯರೂ ಪುತ್ರರೂ ಪಾಠ ಪ್ರವಚನಗಳ ಜೊತೆಗೆ ಉಲ್ಲಾಸಕರವಾದ ಉದ್ಯಾನದ ಕೆಲಸ ಮಾಡಿ ದೇಹ ದಾರ್ಢ್ಯವನ್ನೂ ಪಡೆದು ಪ್ರಕೃತಿ ಪ್ರೇಮವನ್ನೂ ವೃದ್ಧಿಪಡಿಸಿಕೊಳ್ಳಲೆಂಬ ಉದ್ದೇಶದಿಂದ ಪುಷ್ಪವಾಟಿಗಳನ್ನು ಮಾಡಿಸಿಕೊಟ್ಟಿದ್ದರು. ಪುಟ್ಟ ಮಹಾ ಸ್ವಾಮಿಯವರು ತಮ್ಮ ಜ್ಯೇಷ್ಠ ಸೋದರಿಯರೊಡನೆ ಅಲ್ಲಿ ಅಗೆದು ಪಾತಿ ಗಳನ್ನು ಮಾಡಿ ಹೂಗಿಡಗಳನ್ನು ನೆಟ್ಟು ಅವಕ್ಕೆ ನೀರೆರೆದು ಆದರದಿಂದ ಬೆಳೆಯಿಸಲುಪಕ್ರಮಿಸಿದರು. ಹೂವಿನ ಗಿಡಗಳನ್ನು ಬೆಳೆಯಿಸುವುದರಲ್ಲಿ ಅವರು ಮೂವರೂ ಪರಸ್ಪರವಾಗಿ ಸ್ಪರ್ಧೆಪಡುತ್ತಿದ್ದ ಬಗೆಯನ್ನು ಕಂಡು

ಮಾತಾಪಿತೃಗಳು ನಲಿದಾಡುತ್ತಿದ್ದರು. ಅವರುಗಳ ಚಿಕ್ಕ ವಯಸ್ಸಿಗನುಗುಣವಾಗಿ ಉತ್ತಮ ರೀತಿಯಲ್ಲಿ ಹೊಂದಿಕೆಯಿಂದಿದ್ದ ಶಿಕ್ಷಣ ಕ್ರಮವು ಏರ್ಪಟ್ಟಿದ್ದಿತು. ಸಸ್ಯಾದಿಗಳ ಬೆಳೆವಣಿಗೆ, ಪ್ರಾಣಿಗಳ ವಾಸಸ್ಥಾನ, ಗ್ರಹಗಳ ವ್ಯೂಹ, ಪ್ರಪಂಚದ ಪ್ರಸಿದ್ಧವಾದ ಕಟ್ಟಡಗಳು, ಮುಂತಾದುವುಗಳ ದೀಪ ಚಿತ್ರಗಳನ್ನು (ಮ್ಯಾಜಿಕ್ ಲ್ಯಾಂಟರ್ನ್) ವಾರಕ್ಕೊಂದು ಸಲ ತೋರ್ಪಡಿಸುವ ವ್ಯವಸ್ಥೆಯು ಏರ್ಪಟ್ಟಿದ್ದಿತು. ಬುದ್ಧಿ ಕೌಶಲ್ಯವು ವೃದ್ಧಿಯಾಗಲನುಕೂಲಿಸುವಂತೆ "ಕಿಂಡರ್ ಗಾರ್ಟನ್" ಮರದ ತುಂಡುಗಳಿಂದ ಮನೆಗಳು ದೇವಾಲಯಗಳು ಮುಂತಾದುವುಗಳ ಮಾದರಿಗಳನ್ನು ಉತ್ತಮ ರೀತಿಯಲ್ಲಿ ಜೋಡಿಸುವುದನ್ನು ಅವರಿಗೆ ಕಲಿಸುವ ವ್ಯವಸ್ಥೆಯೂ ನಡೆಯಿತು.

**ಶ್ರೀಮಾನ್ ಪೂರ್ಣ ರಾಘವೇಂದ್ರರಾಯರವರಿಂದ ಶಿಕ್ಷಣ**

ಶ್ರೀಮನ್ಮಹಾರಾಜರವರ ಮಂತ್ರಾಲೋಚನಾ ಸಭೆಯಲ್ಲಿ ಪ್ರಥಮ ಸಚಿವರಾಗಿದ್ದು ("ಫಸ್ಟ್ ಮೆಂಬರ್ ಆಫ್ ಕೌನ್ಸಿಲ್"), ಆ ಹುದ್ದೆಯಿಂದ ಈಚೆಗೆ ವಿಶ್ರಾಂತರಾಗಿರುವ ರಾಜಮಂತ್ರಪ್ರವೀಣ ದಿವಾನ್ ಬಹದ್ದೂರ್ ಪೂರ್ಣ ರಾಘವೇಂದ್ರರಾಯರವರನ್ನು ೧೮೯೦ನೆಯ ಇಸವಿ ಜೂನ್ ತಿಂಗಳಿನಲ್ಲಿ (ಜ್ಯೇಷ್ಠ ಶುದ್ಧ ದ್ವಾದಶಿಯ ದಿನ) ಶ್ರೀ ಚಾಮರಾಜೇಂದ್ರ ಒಡೆಯರವರು ತಮ್ಮ ಪುತ್ರ ಪುತ್ರಿಯರಿಗೆ ಪಾಠ ಹೇಳಲು ಉಪಾಧ್ಯಾಯರಾಗಿ ನೇಮಿಸಿದರು. ಆಗ್ಗೆ ಅವರು ಮದರಾಸು ವಿಶ್ವವಿದ್ಯಾನಿಲಯದ "ಬಿ.ಎ." ಪರೀಕ್ಷೆಯಲ್ಲಿ ತೇರ್ಗಡೆಹೊಂದಿದ್ದರು. ಶಿಷ್ಯ ಶಿಷ್ಯೆಯರು ತಮ್ಮ ಉಪಾಧ್ಯಾಯರಾದ ಶ್ರೀಮಾನ್ ಪೂರ್ಣ ರಾಘವೇಂದ್ರರಾಯರವರನ್ನು "ಹೊಸ ಸಾರ್" ಎಂದು ಸಂಬೋಧಿಸತೊಡಗಿದರು. ಅವರು ಆ ರೀತಿ ನೇಮಕವಾದುದಕ್ಕೆ ಮುಂಚೆ ಶ್ರೀಮಾನ್ ರಂಗಾಚಾರ್ಯರೆಂಬವರೊಬ್ಬರು ಶ್ರೀ ಜಯಲಕ್ಷ್ಮಮ್ಮಣ್ಣಿಯವರಿಗೆ ಇಂಗ್ಲಿಷ್ ಭಾಷೆಯನ್ನು ಕಲಿಸುತ್ತಿದ್ದರು. ಶ್ರೀಮಾನ್ ಪೂರ್ಣ ರಾಘವೇಂದ್ರರಾಯರವರು ಎಷ್ಟು ಸುಸಂಸ್ಕೃತರೆಂಬುದನ್ನೂ, ಎಷ್ಟು ದಯಾರ್ದ್ರಹೃದಯರೆಂಬುದನ್ನೂ, ಎಷ್ಟು ಮೇಧಾವಿಗಳೆಂಬುದನ್ನೂ ಅವರ ಪರಿಚಯ ಲಾಭ ಪಡೆದಿರುವವರೆಲ್ಲರೂ ಬಲ್ಲರು. ಅವರು ತಮ್ಮ ಶಿಷ್ಯ ಶಿಷ್ಯೆಯರ ಚಿಕ್ಕ ವಯಸ್ಸಿಗನುಗುಣವಾದ ಸರಳ ರೀತಿಯಲ್ಲಿ ತಮ್ಮ ಪಾಠಕ್ರಮವನ್ನಳವಡಿಸಿ ಬೋಧಿಸಲಾರಂಭಿಸಿದರು. ಅವರು ಉಪಾಧ್ಯಾಯರಾಗಿದ್ದರೆಂಬುದಕ್ಕಿಂತ ಹಿರಿಯರಾದ ಸ್ನೇಹಿತರಂತೆ ವಾತ್ಸಲ್ಯದಿಂದ ವರ್ತಿಸುತ್ತಿದ್ದರೆಂಬುದು ಚೆನ್ನಾಗಿ ಒಪ್ಪುವುದು.

ಮೊದಲು ಮೊದಲು ಶ್ರೀ ಜಯಲಕ್ಷ್ಮಮ್ಮಣ್ಣಿಯವರಿಗೆ ವ್ಯಾಸಂಗದಲ್ಲಿ ಹೆಚ್ಚು ಆಸಕ್ತಿಯಿರಲಿಲ್ಲ. ಶ್ರೀಮಾನ್ ಪೂರ್ಣ ರಾಘವೇಂದ್ರ ರಾಯರವರು ಮಹಾಸ್ವಾಮಿಯವರಿಗೆ ಪಾಠ ಹೇಳುತ್ತಿದ್ದಾಗ್ಗೆ, ಅವರು ರಾಜಕುಮಾರಿಯವರಿಗೆ ಸಹಜವಾದ ದರ್ಪದಿಂದ ಬಂದು "ಬನ್ನಿ ತಮ್ಮಯ್ಯ, ಈ ಓದಿನ ಗೋಳು ಇದ್ದೇ ಇದೆ. ಓದು ಬೇಡ. ಆಡೋಣ" ಎಂದು * ಕರೆಯುತ್ತಿದ್ದರು. ಹಲವು ವೇಳೆ ಪುಟ್ಟ ಮಹಾಸ್ವಾಮಿಯವರು "ನೀವೆಲ್ಲಾ ಆಡಿ. ನಾನು ಓದಬೇಕು" ಎನ್ನುತ್ತಿದ್ದರು. ಒಂದೊಂದು ವೇಳೆ, "ಹೊಸ ಸಾರ್, ಹೊಸ ಸಾರ್! ಆಟಕ್ಕೆ ಇವೊತ್ತು ಬಿಟ್ಟುಬಿಡಿ; ಇವೊತ್ತು ಒಂದೇ ದಿನ" ಎಂದು ಕೇಳುವರು. ಗುರುಗಳು ಅದಕ್ಕೊಪ್ಪದೆ, "ಅದೆಲ್ಲಾ ನಾನು ಕಾಣೆ. ಪಾಠ ಮುಗಿಸಿ ಒಪ್ಪಿಸಿಬಿಡಿ. ಬೇಗ ಗಟ್ಟಿಮಾಡಿದರೆ ಬೇಗ ಹೋಗಬಹುದು. ಮೊದಲು ಪಾಠ; ಆಮೇಲೆ ಆಟ" ಎಂದು ಹೇಳುವರು. ಪುಟ್ಟ ಮಹಾಸ್ವಾಮಿಯವರ ಮನಸ್ಸು ಆಗ್ಗೆ ಕೊಂಚ ಖಿನ್ನವಾದರೂ ಅವರು ಗುರುಭಕ್ತಿಯಿಂದ ಕುಳಿತು, ಗುರುಗಳೂ ವಿಸ್ಮಿತರಾಗುವಷ್ಟು ಶೀಘ್ರವಾಗಿ ಪಾಠವನ್ನು ಗಟ್ಟಿಮಾಡಿ ಆ ಬಳಿಕ ಆಟವಾಡಲು ಹೊರಟುಹೋಗುತ್ತಿದ್ದರು. ಮಹಾಸ್ವಾಮಿಯವರಿಗೆ ವ್ಯಾಸಂಗದಲ್ಲಿ ಬಹಳ ಆಸಕ್ತಿಯಿದ್ದಿತಾದರೂ ಶ್ರೀ ಜಯಲಕ್ಷ್ಮಮ್ಮಣ್ಣಿಯವರು ಕರೆಯಲು ಬಂದರೆ ಮಾತ್ರ ಆಟಕ್ಕೆ ಹೊರಟು ಹೋಗಲು ಉತ್ಸುಕರಾಗುತ್ತಿದ್ದರು. ಅದಕ್ಕೆ ಕಾರಣವು, ಹಲವು ರೀತಿಗಳಲ್ಲಿ ಶ್ರೀ ಜಯಲಕ್ಷ್ಮಮ್ಮಣ್ಣಿಯವರು ತಮ್ಮ ಸೋದರರಲ್ಲಿ ಬಹಳ ಪ್ರೀತಿಯನ್ನು ತೋರಿಸಿ ಅವರನ್ನು ದಾಕ್ಷಿಣ್ಯಬದ್ಧರನ್ನಾಗಿ ಮಾಡಿಕೊಂಡಿದ್ದುದೇ. ಹಾಗೆ ಪ್ರೀತಿ ತೋರಿಸಿದ ನಿದರ್ಶನಗಳಲ್ಲೊಂದನ್ನು ಇಲ್ಲಿ ಸೂಚಿಸಬಹುದಾಗಿದೆ: ಪುಟ್ಟ ಮಹಾಸ್ವಾಮಿಯವರೊಡನೆ ಕಣ್ಣು ಮುಚ್ಚಾಲೆ ಮುಂತಾದ ಆಟಗಳನ್ನಾಡುತ್ತಿದ್ದ ಅವರ ಜ್ಯೇಷ್ಠ ಸೋದರಿಯರೂ ಇತರ ಬಾಲಕ ಬಾಲಕಿಯರೂ ಸ್ವಲ್ಪ ದೊಡ್ಡವರಾಗಿದ್ದ ಕಾರಣ, ಪುಟ್ಟ ಮಹಾಸ್ವಾಮಿಯವರು ಆ ಆಟಗಳಲ್ಲಿ ಬೇಗ ಎದುರು ಪಕ್ಷದವರ ಕೈಗೆ ಸಿಕ್ಕಿಬಿದ್ದು ಖಿನ್ನರಾಗುತ್ತಿದ್ದರು. ಆಗ ಇತರರೆಲ್ಲರೂ ಹಾಸ್ಯ ಮಾಡಿ ನಕ್ಕರೆ, ಶ್ರೀ ಜಯಲಕ್ಷ್ಮಮ್ಮಣ್ಣಿಯವರೊಬ್ಬರು ಮಾತ್ರ ಅವರಂತೆ ನಗದೆ ಪುಟ್ಟ ಮಹಾಸ್ವಾಮಿಯವರನ್ನು ಸಂತೈಸಿ ಸಮಾಧಾನ ಹೇಳುತ್ತಿದ್ದರು. ಕೊನೆಗೊಂದುಸಲವಂತೂ, ಅವರು, "ತಮ್ಮಯ್ಯ!

---

* ರಾಜಕುಟುಂಬದವರಲ್ಲಿ ದೊಡ್ಡವರೂ ಚಿಕ್ಕವರನ್ನು ಬಹುವಚನದಲ್ಲಿ ಸಂಬೋಧಿಸುತ್ತಾರೆ.

ನೀವು ಯೋಚನೆಯೇ ಮಾಡಬೇಡಿ. ಮನಸ್ಸು ಚಿಕ್ಕದುಮಾಡಿಕೊಳ್ಳ ಬೇಡಿ. ನೀವು ನಮ್ಮನ್ನು ಒಂದು ಸಲ ಹಿಡಿದರೆ ಮೂರು ಸಲ ಹಿಡಿದಹಾಗೆ. ನೀವು ಮೂರು ಸಲ ಸಿಕ್ಕಿಬಿದ್ದರೂ ಒಂದೇ ಸಲ ಸಿಕ್ಕಿಬಿದ್ದು ಒಂದೇ ಸಲ ಸೋತಹಾಗೆ. ಇನ್ನುಮೇಲೆ ಇದೇ ಲೆಕ್ಕಾಚಾರ'' ಎಂದು ಹೇಳಿ ತಮ್ಮ ಜಾಣ್ಮೆಯಿಂದ ಪುಟ್ಟ ಮಹಾಸ್ವಾಮಿಯವರನ್ನು ಸಂತೈಸಿ ಸಮಾಧಾನ ಮಾಡಿ ಅವರಿಗೆ ಅಚ್ಚುಮೆಚ್ಚಾದರು.

ಪುಟ್ಟ ಮಹಾಸ್ವಾಮಿಯವರು ಅಕ್ಷರಜ್ಞಾನವನ್ನು ಪಡೆದು ಕೆಲವು ಪುಸ್ತಕಗಳನ್ನು ಓದಿದ ತರುವಾಯ ಶ್ರೀಮಾನ್ ಪೂರ್ಣ ರಾಘವೇಂದ್ರರಾಯರು ಹೇಳಿದಂತೆ ಕೇಳಿ ಅಕ್ಷರಗಳನ್ನು ಬಹು ಚೆನ್ನಾಗಿ ಕುದುರಿಸಿಕೊಂಡರು. ಮುತ್ತಿನ ಮಣಿಗಳಂತೆ ದುಂಡಾಗಿದ್ದ ಅಕ್ಷರದಲ್ಲಿ ತಮ್ಮ ನಾಮಾಂಕಿತವನ್ನು ತಮ್ಮ ಪುಸ್ತಕಗಳ ಮೇಲೆಲ್ಲಾ ಕೃಷ್ಣನಾಮ ವನ್ನು ಬರೆದಂತೆ "ಶ್ರೀ ಕೃಷ್ಣ ಶ್ರೀ ಕೃಷ್ಣ" ಎಂದು ಬರೆಯುತ್ತಿದ್ದರು. ಇನ್ನೂ ಆರೇಳು ವರ್ಷ ವಯಸ್ಸಾಗಿದ್ದಾಗ ಕೂಡ ತಮ್ಮ ಜೊತೆಯ ಬಾಲಕರಲ್ಲಿ ಬಹಳ ದಾಕ್ಷಿಣ್ಯ ಪ್ರವೃತ್ತಿಯಿಂದ ವರ್ತಿಸುತ್ತಿದ್ದರು: ಒಂದು ಸಲ ಮಕ್ಕಳಿಗೆ ತೋರಿಸುವುದಕ್ಕಾಗಿ ಶ್ರೀಮಾನ್ ಅಂಬಿಲ್ ನರಸಿಂಹ ಐಯಂಗಾರ್ಯರವರು ಧಾನ್ಯಗಳನ್ನು ದೊನ್ನೆಗಳಲ್ಲಿ ತುಂಬಿಸಿ ಪಾಠಶಾಲೆಯಲ್ಲಿಡಿಸಿದ್ದರು. ಒಂದು ದೊನ್ನೆಯಲ್ಲಿ ಹರಳುಬೀಜಗಳೂ ಇದ್ದುವು. ಅವುಗಳು ಒಂದು ಬಗೆಯ ಬಾದಾಮಿಯೆಂದು ಹೇಳಿ ಪುಟ್ಟ ಮಹಾಸ್ವಾಮಿಯವರಿಗೆ ಸಹಪಾಠಿಗಳು ತಿನ್ನಿಸಿದರು. ಆಗ್ಗೆ ಶ್ರೀಮಾನ್ ಅಂಬಿಲ್ ನರಸಿಂಹ ಐಯಂಗಾರ್ಯರವರು ಅಲ್ಲಿರಲಿಲ್ಲವಾದ ಕಾರಣ, ಆ ಸಂಗತಿಯು ಶ್ರೀ ವಾಣೀವಿಲಾಸ ಸನ್ನಿಧಾನದವರಿಗೆ ವರದಿಯಾಯಿತು. ಶ್ರೀ ವಾಣೀವಿಲಾಸ ಸನ್ನಿಧಾನದವರು ಒಡನೆಯೇ ದಯೆಮಾಡಿ ಯಾರು ಹರಳುಬೀಜಗಳನ್ನು ತಿನ್ನಿಸಿದರೆಂದು ವಿಚಾರಣೆ ಮಾಡಿದಾಗ ಪುಟ್ಟ ಮಹಾಸ್ವಾಮಿಯವರು, "ಅಮ್ಮಯ್ಯ, ನಾನೇ ತಿಂದೆ, ನಾನೇ ತಿಂದೆ" ಎಂದು ಹೇಳಿ, ಭೀತರಾಗಿದ್ದ ಸಹಪಾಠಿಗಳ ಅಪರಾಧವನ್ನು ಹೊರಗೆಡವದೆ ರಕ್ಷಿಸಿದರು. ಪುಟ್ಟ ಮಹಾಸ್ವಾಮಿಯವರಿಗೆ ತಮ್ಮ ಸಹಪಾಠಿಗಳಲ್ಲಿ ಬಹಳ ಪ್ರೀತಿಯಿದ್ದಿತು. ಒಂದು ಸಲ ಪುಟ್ಟ ಮಹಾಸ್ವಾಮಿಯವರು ಅವರೊಡನೆ, "ನೀವು ಮಾತ್ರ ನಿತ್ಯವೂ ಇಲ್ಲಿಗೆ ಬರುತ್ತೀರಿ. ನನ್ನ ಮಾತ್ರ ನೀವು ನಿಮ್ಮ ಮನೆಗೆ ಕರೆದುಕೊಂಡು ಹೋಗಬಾರದೋ? ನಿಮ್ಮ ಮನೆಗೆ ಕರೆದುಕೊಂಡುಹೋಗಿ" ಎಂದು ಹೇಳಿದಾಗ ಅವರಲ್ಲೊಬ್ಬ ಬಾಲಕನು, "ನೀವು ಮಹಾರಾಜರು. ನಮ್ಮ ಮನೆಗೆ ಬರಬಾರದು.

ಹೀಗೆಲ್ಲಾ ಹೇಳಬಾರದು" ಎಂದನು. ಅದಕ್ಕೆ ಪುಟ್ಟ ಮಹಾಸ್ವಾಮಿಯವರು, "ನಾನಲ್ಲ ಮಹಾರಾಜರು. ಅಪ್ಪಾಜಿಯವರು ಮಹಾರಾಜರು. ನೀವು ನನ್ನನ್ನು ನಿಮ್ಮ ಮನೆಗೆ ಕರೆದುಕೊಂಡು ಹೋಗಿ" ಎಂದು ಉತ್ತರ ಕೊಟ್ಟರು.

ಶ್ರೀಮಾನ್ ಪೂರ್ಣ ರಾಘವೇಂದ್ರರಾಯರು, ಪಾಠ ಹೇಳುವಾಗ್ಗೆ ಶಿಕ್ಷಣದ ಶಿಸ್ತನ್ನು ಕಾಪಾಡುತ್ತಿದ್ದರಾದರೂ, ಇತರ ವೇಳೆಗಳಲ್ಲಿ ತಾವು ಪಾಠ ಹೇಳುತ್ತಿದ್ದ ಮಕ್ಕಳ ಜೊತೆಗೆ ಮಕ್ಕಳಂತೆ ಸ್ನೇಹ ಸಲಿಗೆಗಳಿಂದಲೂ, ಪ್ರೀತಿ ವಾತ್ಸಲ್ಯಗಳಿಂದಲೂ ವರ್ತಿಸುತ್ತಿದ್ದರು. ಹೇಗೆ ಬೋಧಿಸಿದರೆ ಮಕ್ಕಳ ಮನಸ್ಸಿಗೆ ನಾಟುವುದೆಂಬುದರ ಮರ್ಮವನ್ನರಿತು ನಡೆಯುತ್ತಿದ್ದರು. ಒಂದು ದಿನ ಪಾಠಗಳು ಕಠಿನವಾಗಿದ್ದಾಗ ಸಾಧ್ಯವಾದಷ್ಟು ಸುಲಭ ರೀತಿಯಲ್ಲಿ ಬೋಧನೆಮಾಡಿ, ಮಕ್ಕಳ ಮನಸ್ಸಿಗೆ ಆಯಾಸವುಂಟಾಗಿ ಬೇಸರವಾಗಿದ್ದುದನ್ನು ಹೋಗಲಾಡಿಸುವುದಕ್ಕಾಗಿ, "ಪುಸ್ತಕಗಳನ್ನೇನೋ ಓದಬೇಕು. ಆದರೆ ಪುಸ್ತಕಗಳ ಓದೇ ತೀರ ಮುಖ್ಯವಲ್ಲ. ಓದಿಗೆ ಪರಿಮಿತಿಯೇ ಇಲ್ಲ. ವಿದ್ಯೆಯು ಅಪಾರವಾದುದು. ಎಷ್ಟು ವ್ಯಾಸಂಗ ಮಾಡಿದರೂ ಸಾಲದು. ಗಿಡವಾಗಿ ಬಗ್ಗದ ಬುದ್ಧಿ ಮರವಾದ ಮೇಲೆ ಬಗ್ಗದು. ಈಗ ಬಾಲ್ಯದಲ್ಲಿ ಓದನ್ನು ಕಲಿಯದೆಹೋದರೆ ಮುಂದೆ ದೊಡ್ಡವರಾದಮೇಲೆ ಕಲಿಯುವುದು ಕಷ್ಟ. ಆದರೂ ಒಂದೇ ಸಲಕ್ಕೆ ಮೆದುಳು ದಣಿಯುವಷ್ಟು ಹೆಚ್ಚಾಗಿ ಓದಬಾರದು. ಇವೊತ್ತಿಗೆ ಇನ್ನು ಸಾಕು. ಮೆದುಳು ದಣಿಯುವಷ್ಟು ಹೆಚ್ಚಾಗಿ ಓದಿದ ಓದು ದೇಹಕ್ಕೆ ಭಾರವೆಂದು ಯೇಸುಕ್ರಿಸ್ತನು ಕೂಡ ಹೇಳಿದ್ದಾನೆ. 'ಅತಿ ಸರ್ವತ್ರ ವರ್ಜಯೇತ್' ಎಂದು ನಮ್ಮವರು ಕೂಡ ಹೇಳಿದ್ದಾರೆ. ಒಂದೂ ಅತಿಯಾಗಬಾರದು" ಎಂದು ಹೇಳಿದರು. ಆ ಮಾತುಗಳನ್ನು ಕೇಳಿ ಮಕ್ಕಳ ಮನಸ್ಸಿನ ಉಲ್ಲಾಸಕ್ಕೆ ಪರಿಮಿತಿಯೇ ಇಲ್ಲದಂತಾಯಿತು. ಶ್ರೀ ಜಯಲಕ್ಷ್ಮಮ್ಮಣ್ಣಿಯವರಂತೂ, ಸಂತೋಷದಿಂದ ಹಿಗ್ಗುತ್ತ, "ನಮ್ಮ ಹೊಸ ಸಾರ್ ಸರಿ. ಅವರು ಸರಿಯಾಗಿ ಹೇಳಿಬಿಡುತ್ತಾರೆ" ಎಂದರು. ಮತ್ತೊಂದು ದಿನ ಶ್ರೀ ಜಯಲಕ್ಷ್ಮಮ್ಮಣ್ಣಿಯವರು ಪಾಠವನ್ನು ಓದಿಯೇ ಇರಲಿಲ್ಲ; ಅಂದು ಪಾಠವನ್ನೊಪ್ಪಿಸದೆಹೋದುದರ ಜೊತೆಗೆ, "ಮೆದುಳು ದಣಿದಿದೆ, ಹೊಸ ಸಾರ್. ಅವೊತ್ತೇ ಹೇಳಿದ್ದೀರಿ. ಮೆದುಳು ದಣಿಯುವಷ್ಟು ಓದಬಾರದು. ಅಲ್ಲವೇ ಹೊಸ ಸಾರ್?" ಎಂದು ಅವರು ಕೇಳಿದರು. ಆಗ ಶ್ರೀಮಾನ್ ಪೂರ್ಣ ರಾಘವೇಂದ್ರ ರಾಯರವರು ನಕ್ಕು, "ನೀವು ಓದಿದ್ದರೆ ತಾನೆ ಮೆದುಳಿಗೆ ದಣಿವು?

ಆ ಮೆದುಳಿಗೇಕೋ ಕೆಲಸ ಮಾಡುವುದಕ್ಕೇ ಬೇಸರ. ಆ ಮೆದುಳು ಹಾಗೆ ಮಾಡಿದರೆ ನೀವೇನು ಮಾಡೀರಿ, ಚಿನ್ನಮ್ಮಣ್ಣಿ? ನೀವು ನಿಜವಾಗಿಯೂ ಚಿನ್ನದಂಥವರು. ಆದರೆ ಒಂದೊಂದು ಸಲ ಮಾತ್ರ ಕೊಂಚ ಕೊಂಚ ಹೊತ್ತು ಕಬ್ಬಿಣವೇ ಆಗಿಬಿಡುತ್ತೀರಿ. ಹಾಗಿಲ್ಲದೆ ನಮ್ಮ ಚಿನ್ನಮ್ಮಣ್ಣಿ ಯವರು ಸರ್ವದಾ ಚಿನ್ನವಾಗಿರಬೇಕೆಂದು ನನಗೆ ಆಶೆ. ನನ್ನ ಮನಸ್ಸಿ ನಲ್ಲಿದ್ದ ವಿಚಾರ ತಿಳಿಸಿದ್ದೇನೆ. ಚಿನ್ನವಾಗಿರಬೇಕೋ ಕಬ್ಬಿಣವಾಗಿರ ಬೇಕೋ, ಚಿನ್ನಮ್ಮಣ್ಣಿಯವರೇ ಯೋಚಿಸಬೇಕು" ಎಂದರು. (ಶ್ರೀ ಜಯಲಕ್ಷ್ಮಮ್ಮಣ್ಣಿಯವರನ್ನು ಎಲ್ಲರೂ ಚಿನ್ನಮ್ಮಣ್ಣಿಯವರೆಂದು ಕರೆಯುತ್ತಿದ್ದುದು ವಾಡಿಕೆ.) ಶ್ರೀ ಜಯಲಕ್ಷ್ಮಮ್ಮಣ್ಣಿಯವರು ನಗುತ್ತ, "ಹೊಸ ಸಾರ್, ಇವೊತ್ತು ನಿಜವಾಗಿಯೂ ನೀವು ಹೇಳಿದಷ್ಟೂ ಓದಿ ಆಮೇಲೆ ಎರಡನೇ ಮಾತು. ಎಲ್ಲಿ, ಹೊಸ ಸಾರ್, ಅದಕ್ಕೆ ಮುಂಚೆ ಕೊಂಚ ಅಪ್ಪಾಲೆ ತಿರುಗಿಸಿಬಿಡಿ. ಕೊಂಚ, ಕೊಂಚ, ಅಪ್ಪಾಲೆ ತಿರುಗಿಸಿ ಬಿಡಿ" ಎಂದು ಉತ್ತರ ಹೇಳಿದರು. ಶ್ರೀಮಾನ್ ಪೂರ್ಣ ರಾಘವೇಂದ್ರರಾಯರು ನಗುತ್ತ, "ನಮ್ಮ ಚಿನ್ನಮ್ಮಣ್ಣಿಯವರಿಗೆ ಚಿನ್ನ ವಾಗುವ ಯೋಚನೆ ಬಂದಿದೆ. ಆದರೆ ಪಾಠದ ವೇಳೆಯಲ್ಲಿ ಯಾವುದು ಆಗಬೇಕೋ ಅದನ್ನು ಮಾಡುವುದಿಲ್ಲ. ಯಾವುದನ್ನು ಮಾಡಬಾರದೋ ಅದನ್ನು ಮಾಡುತ್ತಾರೆ" ಎಂದು ಹೇಳಿ ಅಪ್ಪಾಲೆ ತಿರುಗಿಸಿದರು. ಆಗ ಪುಟ್ಟ ಮಹಾಸ್ವಾಮಿಯವರು ಮೇಲಕ್ಕೆದ್ದು ಓಡಿಬಂದು, "ಹೊಸ ಸಾರ್! ನನಗೂ ಅಪ್ಪಾಲೆ. ನನ್ನೂ ಅಪ್ಪಾಲೆ ತಿರುಗಿಸಿ, ಹೊಸ ಸಾರ್" ಎಂದರು. ಶ್ರೀ ಕೃಷ್ಣಾಜಮ್ಮಣ್ಣಿಯವರೂ ಓಡಿಬಂದು ತಮ್ಮನ್ನೂ ಅಪ್ಪಾಲೆ ತಿರುಗಿಸಬೇಕೆಂದು ಕೇಳಿದರು. ಮಕ್ಕಳೆಲ್ಲರನ್ನೂ ಅಪ್ಪಾಲೆ ತಿರುಗಿಸಿ, ಅವರೊಡನೆ ತಾವೂ ನಲಿದು, ಆ ಬಳಿಕ ಗುರುಗಳು ಪಾಠ ಹೇಳಲು ಪ್ರಾರಂಭಿಸಿದರು. ಶ್ರೀ ಜಯಲಕ್ಷ್ಮಮ್ಮಣ್ಣಿಯವರು ಆ ಬಳಿಕ ಕೆಲವು ದಿನಗಳಮೇಲೆ, ಒಂದು ದಿನ ವ್ಯಾಸಂಗದಲ್ಲಿ ಶ್ರದ್ಧೆ ತೋರಿಸದೆ ಛಲ ಹಿಡಿದಾಗ ಅವರು ಅನುನಯದಿಂದ ವರ್ತಿಸುತ್ತ, "ಇನ್ನು ಬೆಂಚಿನ ಮೇಲೆ ನಿಲ್ಲಿಸಬೇಕಾದೀತು. 'ಇಂಪೊಜಿಷನ್' ಬರೆಯಿಸಬೇಕಾದೀತು. ಮಹಾರಾಜರ ಕುಮಾರಿಯವರು ಎಲ್ಲರಿಗಿಂತ ಮೇಲಾಗಿ, ಎಲ್ಲರಿಗಿಂತ ಉತ್ತಮವಾಗಿ ಪಾಠಗಳನ್ನು ಓದುತ್ತ, ಮಹಾರಾಜ ಕುಮಾರಿಯವರ ಪದವಿಗೆ ಯುಕ್ತವಾದ ರೀತಿಯಲ್ಲಿರಬೇಡವೆ?" ಎಂದರು. ಆಗ ಶ್ರೀ ಜಯಲಕ್ಷ್ಮಮ್ಮಣ್ಣಿಯವರು, "ಬರೀ ಪಾಠ, ಪಾಠ; ಪಾಠದ ಜೊತೆಗೆ ಆಟವೂ ಇರಲಿ. ಕೊಂಚ ಅಪ್ಪಾಲೆ ತಿರುಗಿಸಿಬಿಡಿ, ಹೊಸ ಸಾರ್!

ಬೇಡ, ಬೇಡ. ಇವೊತ್ತು ಮೊದಲು ಪಾಠ, ಆಮೇಲೆ ಅಪ್ಪಾಲೆ. ಅವೊತ್ತು ಮೊದಲೇ ಅಪ್ಪಾಲೆ ಆಗಿದೆ. ಇವೊತ್ತೂ ಮೊದಲೇ ಕೇಳಬಾರದು" ಎಂದು ಹೇಳಿ ಶ್ರದ್ಧೆಯಿಂದ ವ್ಯಾಸಂಗಮಾಡಿ ಚೆನ್ನಾಗಿ ಪಾಠಗಳನ್ನೊಪ್ಪಿಸಿದರು.

ಶ್ರೀ ಜಯಲಕ್ಷ್ಮಮ್ಮಣ್ಣಿಯವರು ಆರಂಭದಲ್ಲಿ ಆ ರೀತಿ ವ್ಯಾಸಂಗದಲ್ಲಿ ಅನಾದರವನ್ನು ತೋರಿಸುತ್ತಿದ್ದರಾದರೂ, ಆ ಬಳಿಕ ಅತ್ಯಂತ ಶ್ರದ್ಧೆಯನ್ನು ವಹಿಸಿ ವಿದ್ಯಾಭ್ಯಾಸ ಮಾಡಿದರು; ಓದು ಬರೆಹಗಳಲ್ಲಿಯೂ ಸಂಗೀತದಲ್ಲಿಯೂ ಅಧಿಕವಾದ ಅಭಿರುಚಿಯನ್ನು ತೋರಿಸಿದರು. ಅಷ್ಟೇ ಅಲ್ಲ. ತಮ್ಮ ಮಾತೃಶ್ರೀಯವರಾದ ಶ್ರೀ ಮಹಾರಾಜ್ಞೀ ಶ್ರೀ ವಾಣೀವಿಲಾಸ ಸನ್ನಿಧಾನದವರ ನಾಮಾಂಕಿತದ ಬಾಲಿಕಾ ಪಾಠಶಾಲೆಯ ಕಾರ್ಯಕಲಾಪಗಳು ಹೇಗೆ ಮುಂದುವರಿಯುತ್ತಿದ್ದುವೆಂಬುದನ್ನು ವಿಚಾರಿಸಿಕೊಳ್ಳಲಾರಂಭಿಸಿದರು. ಆ ಪಾಠಶಾಲೆಗೆ ಆಗಬೇಕಾಗಿದ್ದ ಅನುಕೂಲಗಳನ್ನು ಶ್ರೀಮಾನ್ ಅಂಬಿಲ್ ನರಸಿಂಹ ಐಯಂಗಾರ್ಯರವರು ತಿಳಿಸಿದೊಡನೆಯೇ ಉತ್ಸಾಹದಿಂದ ಅವುಗಳ ವಿಚಾರವನ್ನು ತಮ್ಮ ಮಾತಾಪಿತೃಗಳಲ್ಲಿ ಅರಿಕೆ ಮಾಡಿ ಶೀಘ್ರ ಶೀಘ್ರವಾಗಿ ಅವು ಒದಗುವಂತೆ ಮಾಡಲುಪಕ್ರಮಿಸಿದರು; ಅಲ್ಲದೆ ತಾವೇ ಉತ್ತಮವಾದ ಸಲಹೆಗಳನ್ನು ಕೊಡಲಾರಂಭಿಸಿದರು. ಅವರು ಅಷ್ಟು ಚಿಕ್ಕ ವಯಸ್ಸಿನಲ್ಲಿ ಆ ರೀತಿ ಮಾಡುತ್ತಿದ್ದುದನ್ನು ಕಂಡು ಬೆರಗಾಗಿ ಅಂಬಿಲ್ ನರಸಿಂಹ ಐಯಂಗಾರ್ಯರವರು, "ಕುಮಾರಿಯವರಿಗೆ ಕೆಲವು ಕಾಲ ನಾನು ಗುರುವಾಗಿದ್ದೆ. ಈಗ ನನಗೇ ಕುಮಾರಿಯವರು ಗುರುವಾಗಿದ್ದಾರೆ. ಅದರ ಜೊತೆಗೆ ಪರಮೋಪಕಾರಿಗಳೂ ಆಗಿದ್ದಾರೆ" ಎಂದು ತಮ್ಮ ಆಪ್ತರೊಡನೆ ಹೇಳಿಕೊಂಡು ಹರ್ಷಿಸುತ್ತಿದ್ದರು.

**ಜಗದ್ಗುರುಗಳ ಆಶೀರ್ವಚನ**

ಪುಟ್ಟ ಮಹಾಸ್ವಾಮಿಯವರು ಏಳು ವರ್ಷ ವಯಸ್ಸಿನವರಾಗಿದ್ದಾಗ್ಗೆ (೧೮೯೧ನೆಯ ಇಸವಿಗೆ ಸರಿಯಾದ ಶಾಲಿವಾಹನ ಶಕ ೧೮೧೩ನೆಯ ಖರ ಸಂವತ್ಸರದ ಆಷಾಢ ಶುದ್ಧ ಬಿದಿಗೆ ಶುಕ್ರವಾರದ ದಿನ) ಪ್ರದರ್ಶಿಸಿದ ಗುರುಭಕ್ತಿಯ ಅದ್ಭುತ ನಿದರ್ಶನವು ಅರಮನೆಯಲ್ಲಿದ್ದವರೆಲ್ಲರನ್ನೂ ವಿಸ್ಮಯಗೊಳಿಸಿತು. ಅದನ್ನು ಇಲ್ಲಿ ಸೂಚಿಸುವುದಕ್ಕೆ ಮುಂಚೆ ಗುರುಹಿರಿಯರಲ್ಲಿ ಅವರ ಮನೋಧರ್ಮವು ಹೇಗಿದ್ದಿತೆಂಬುದನ್ನು ತಿಳಿಸುವುದು ಉಚಿತವಾಗಿದೆ. ಕವಿತಿಲಕ ಸೋಸಲೆ ಅಯ್ಯಾಶಾಸ್ತ್ರಿಗಳವರು ಪುಟ್ಟ ಮಹಾಸ್ವಾಮಿಯವರಿಗೆ "ಗುರುರ್ಬ್ರಹ್ಮಾ ಗುರುರ್ವಿಷ್ಣುಃ ಗುರುರೇವ ಮಹೇಶ್ವರಃ। ಗುರುಸ್ಸಾಕ್ಷಾತ್ಪರಬ್ರಹ್ಮಾ ತಸ್ಮೈ

ಶ್ರೀಗುರವೇ ನಮಃ ॥'' ಎಂಬ ಶ್ಲೋಕವನ್ನು ಕಂಠಪಾಠಮಾಡಿಸಿ ಅದ
ಅರ್ಥವು ಅವರ ಎಳೆಯ ಮನಸ್ಸಿಗೆ ಖಚಿತವಾಗಿ ಗೋಚರಿಸುವ ರೀತಿಯಲ್ಲಿ
ಸಕಾರಣವಾಗಿ ಆದರದಿಂದ ಬೋಧಿಸಿದ್ದಾಗಿನಿಂದ ಅವರ ಗುರುಭಕ್ತಿಯು
ಮೊದಲಿಗಿಮ್ಮಡಿಯಾಗಿ, ಅವರು ತಮ್ಮ ವಿದ್ಯಾಗುರುಗಳಲ್ಲೆಲ್ಲ ವಿಧೇಯ
ರಾಗಿ ವರ್ತಿಸುತ್ತಿದ್ದರು. ಗುರುವೆಂಬ ಶಬ್ದವು ಮಾತಾಪಿತೃಗಳಿಗೆ ಸ
ಅನ್ವಯಿಸುವ ಅಂಶವನ್ನೂ ಶಾಸ್ತ್ರಿಗಳವರು ಬೋಧಿಸಿದ್ದರು. ಪುಟ್ಟ
ಮಹಾಸ್ವಾಮಿಯವರು ಅದನ್ನು ಗ್ರಹಿಸಿ, ತಮ್ಮ ತೀರ್ಥರೂಪರವರಾ
ಶ್ರೀ ಚಾಮರಾಜೇಂದ್ರ ಒಡೆಯರವರು ಶ್ರೀ ಸೀತಾವಿಲಾಸದ ಮಾತೃಶ್ರೀ
ಯವರಲ್ಲಿ ತೋರಿಸುತ್ತಿದ್ದ ಭಕ್ತಿವಿಶ್ವಾಸಗಳ ಪ್ರತ್ಯಕ್ಷ ನಿದರ್ಶನವನ್ನು
ಕಂಡು, ಅದೇ ರೀತಿ ಅನನ್ಯ ಸುಲಭವಾದ ಭಕ್ತಿ ವಿಶ್ವಾಸಗಳನ್ನು ತಾವ
ತಮ್ಮ ಮಾತಾಪಿತೃಗಳಲ್ಲಿ ಪ್ರದರ್ಶಿಸಲಾರಂಭಿಸಿದರು. ಅಷ್ಟು ಬಾ
ವಯಸ್ಸಿನಲ್ಲಿ ಅಷ್ಟು ಮಹತ್ತರವಾದ ಭಕ್ತಿ ವಿಶ್ವಾಸಗಳನ್ನು ಪ್ರದರ್ಶಿಸ
ತ್ತಿದ್ದುದು ಮಹಾಸ್ವಾಮಿಯವರ ಪೂರ್ವಜನ್ಮ ಸಂಸ್ಕಾರ ಫಲವೆಂ
ಸಮಸ್ತರೂ ಕೊಂಡಾಡುತ್ತಿದ್ದರು. ಅತ್ಯುತ್ತಮವಾದ ಫಲಪು
ಗಳನ್ನೂ ಇತರ ವಸ್ತುಗಳನ್ನೂ ತಮ್ಮ ವಿದ್ಯಾ ಗುರುಗಳಿಗೆ ಆಗಾಗ
ಗಾಣಿಕೆಯಾಗಿ ಸಮರ್ಪಿಸಿ ಪುಟ್ಟ ಮಹಾಸ್ವಾಮಿಯವರು ಸಡಗರಪ
ತ್ತಿದ್ದರು. ಮೇಲೆ ಸೂಚಿಸಿದ ಶುಭದಿನ, ಶ್ರೀ ಶೃಂಗಗಿರಿ ಜಗದ್ಗು
ಗಳಾದ ಶ್ರೀ ಸಚ್ಚಿದಾನಂದ ಶಿವಾಭಿನವ ನೃಸಿಂಹಭಾರತಿ ಸ್ವಾಮಿಗಳ
ಸವಾರಿಯು ಅರಮನೆಗೆ ಚಿತ್ತೈಸಿದಾಗ ಶ್ರೀ ಚಾಮರಾಜೇಂದ್ರ ಒಡೆ
ರವರು ಶ್ರೀ ಶ್ರೀಗಳವರನ್ನು ಮಹತ್ತರವಾದ ಭಕ್ತಿಯಿಂದ ಸ್ವಾಗ
ಪಾದಪೂಜೆಮಾಡಿ ಸತ್ಕರಿಸಿದರು. ಅನಂತರ ಅವರೀರ್ವರಿಗೂ ಸಂಭಾಷ
ನಡೆದು ಪೂರೈಸಿದ ಮೇಲೆ ಪುಟ್ಟ ಮಹಾಸ್ವಾಮಿಯವರೊಬ್ಬರು ಹೊರ
ಉಳಿದ ನಾಲ್ವರು ಮಕ್ಕಳೂ ಶ್ರೀ ಶ್ರೀಗಳವರಿಗೆ ನಮಸ್ಕಾರಮಾಡಿದ
ಶ್ರೀ ಚಾಮರಾಜೇಂದ್ರ ಒಡೆಯರವರು ಶ್ರೀ ಶ್ರೀಗಳವರಿಂದ ಆ ನಾಲ್ಕ
ಮಕ್ಕಳಿಗೂ ಆಶೀರ್ವಾದ ನಡೆದಂತೆಯೇ ಶ್ರೀಮದ್ಯುವರಾಜ ಶ್ರೀ ಕೃ
ರಾಜೇಂದ್ರ ಒಡೆಯರವರಿಗೂ ಆಶೀರ್ವಾದ ನಡೆಯಬೇಕೆಂದು ವಿಜ್ಞಾ
ಕೊಂಡು ಅಂತಃಪುರದಲ್ಲಿಲ್ಲದೆ ಹೊರಟುಹೋಗಿದ್ದ ಕುಮಾರ
ಬರಮಾಡುವಂತೆ ಇಂಗಿತಜ್ಞರಾದ ಧರ್ಮಾಧಿಕಾರಿಗಳಿಗೆ ಸಂಜ್ಞೆಮ
ದರು. ಧರ್ಮಾಧಿಕಾರಿಗಳು ಸನ್ನಿಧಿಯಿಂದ ಹೊರಟು ಅಂತಃಪ
ಹೊರಗಿನ ಭವ್ಯದೃಶ್ಯವನ್ನು ಕಂಡು ಬೆರಗಾಗಿ, ಮತ್ತೆ ಅಂತಃಪ
ಹಿಂತಿರುಗಿ, ತಮ್ಮ ಸಂಜ್ಞೆಗನುಸಾರವಾಗಿ ಅಲ್ಲಿಂದ ಚಿತ್ತೈ

ಮಹಾಪ್ರಭುಗಳವರನ್ನು ಅನುವರ್ತಿಸಿದರು. ಪುಟ್ಟ ಮಹಾಸ್ವಾಮಿಯವರು ತಮ್ಮ ಏಳು ವರ್ಷ ವಯಸ್ಸಿಗೆ ಮೀರಿದ ಭಕ್ತಿಪಾರವಶ್ಯದಿಂದ ಕೂಡಿ, ಅಂತಃಪುರದ ದ್ವಾರಪ್ರದೇಶದಲ್ಲಿದ್ದ ಶ್ರೀ ಶ್ರೀಗಳವರ ಪಾದುಕೆಗಳೆರಡನ್ನೂ ಎದೆಗಪ್ಪಿಕೊಂಡು ಕಣ್ಣುಗಳನ್ನು ಮುಚ್ಚಿ ನಿಂತು, ಮೆಲ್ಲಗೆ, "ಗುರುರ್ಬ್ರಹ್ಮಾ ಗುರುರ್ವಿಷ್ಣುಃ ಗುರುರೇವ ಮಹೇಶ್ವರಃ । ಗುರುಸ್ಸಾಕ್ಷಾತ್ಪರಬ್ರಹ್ಮಾ ತಸ್ಮೈ ಶ್ರೀಗುರವೇ ನಮಃ ॥" ಎಂಬ ಶ್ಲೋಕವನ್ನೇ ಮತ್ತೆಮತ್ತೆ ಹೇಳಿಕೊಳ್ಳುತ್ತ, ಬಾಹ್ಯಪ್ರಪಂಚವನ್ನೇ ಮರೆತು ತಲ್ಲೀನರಾಗಿ ನಿಂತಿದ್ದರು. ಧರ್ಮಾಧಿಕಾರಿಗಳು ಆ ಸಂಗತಿಯನ್ನು ಶ್ರೀ ಶ್ರೀಗಳವರಿಗೆ ವಿಜ್ಞಾಪಿಸಲು ಅಂತಃಪುರಕ್ಕೆ ತೆರಳಿದರು. ಮಹಾಪ್ರಭುಗಳವರು ಕುಮಾರರನ್ನು ಬಿಗಿದಪ್ಪಿ ಅಂತಃಪುರದೊಳಕ್ಕೆ ಕರೆದೊಯ್ದಾಗ ಶ್ರೀ ಶ್ರೀಗಳವರು ಮಂದಸ್ಮಿತ ವದನರಾಗಿ "ಶ್ರೀ ಶಾರದಾಚಂದ್ರಮೌಳೀಶ್ವರರು ಸಂಪೂರ್ಣವಾಗಿ ಶ್ರದ್ಧಾಭಕ್ತಿಗಳನ್ನೂ ವಿವೇಕ ವೈರಾಗ್ಯಗಳನ್ನೂ ಇವರಿಗೆ ಅನುಗ್ರಹಿಸಿ ಸೇವೆಯನ್ನು ಸ್ವೀಕರಿಸುತ್ತಾರೆ. ಇವರದು ಅದ್ಭುತವಾದ ಸಂಸ್ಕಾರ" ಎಂದು ಹೇಳಿ ಆನಂದಬಾಷ್ಪಪೂರಿತಲೋಚನರಾಗಿ — ಅಷ್ಟರಲ್ಲಿ ದೀರ್ಘದಂಡ ಪ್ರಣಾಮ ಮಾಡಿದ ಪುಟ್ಟ ಮಹಾಸ್ವಾಮಿಯವರನ್ನಾಶೀರ್ವದಿಸಿ ಅನುಗ್ರಹಿಸಿದರು.

**ಬಾಲ್ಯ ವಯಸ್ಸಿನ ವಾಗ್ಝರಿ**

೧೮೯೧ನೆಯ ಇಸವಿಯಲ್ಲಿ ಶ್ರೀಮನ್ಮಹಾರಾಜ ಶ್ರೀ ಚಾಮರಾಜೇಂದ್ರ ಒಡೆಯರವರು ತಮ್ಮ ಪುತ್ರರಿಗೆ ಇಂಗ್ಲಿಷ್ ಭಾಷೆಯಲ್ಲಿ ಮಾತನಾಡುವುದನ್ನು ಕಲಿಸಬೇಕೆಂದು ಶ್ರೀಮಾನ್ ಪೂರ್ಣ ರಾಘವೇಂದ್ರರಾಯರವರಿಗೆ ಅಪ್ಪಣೆ ಮಾಡಿದರು. ಮುಂದಿನ ಒಂದು ವರ್ಷದ ಅವಧಿಯಲ್ಲಿ ಅವರು ಆ ಕೆಲಸವನ್ನು ಶ್ರೇಷ್ಠರೀತಿಯಲ್ಲಿ ನಿರ್ವಹಿಸಿದರು. ೧೮೯೨ನೆಯ ಇಸವಿಯಲ್ಲಿ ಮೈಸೂರು ನಗರದ ಮಹಾರಾಜಾ ಕಾಲೇಜಿಗೆ ಅಧ್ಯಾಪಕರಾಗಿ (ಪ್ರೊಫೆಸರಾಗಿ) ನೇಮಕವಾಗಿ ಬಂದ ಶ್ರೀಮಾನ್ ಜೆ. ವೀರ್ ಸಾಹೇಬರು ಎಂಟು ವರ್ಷ ವಯಸ್ಸಿನ ಬಾಲಕರಾಗಿದ್ದ ಶ್ರೀ ಕೃಷ್ಣರಾಜೇಂದ್ರ ಒಡೆಯರವರು ಶುದ್ಧವಾದ ಶೈಲಿಯಲ್ಲಿ ಸೊಗಸಾಗಿ ಇಂಗ್ಲಿಷ್ ಭಾಷೆಯಲ್ಲಿ ಮಾತನಾಡುತ್ತಿದ್ದ ವೈಖರಿಯನ್ನು ಕೊಂಡಾಡಿ, "ನಾನಾಗಿ ಕಣ್ಣಾರ ನೋಡದೆ ಹೋಗಿದ್ದು ಮತ್ತಾರಾದರೂ ಈ ಸಂಗತಿಯನ್ನು ನನಗೆ ತಿಳಿಸಿದ್ದ ಪಕ್ಷದಲ್ಲಿ ಇದು ನಿಜವೆಂದಾಗಲಿ ಅಥವಾ ಇದು ಸಾಧ್ಯವೆಂದಾಗಲಿ ನಾನು ಬೇರೆ ನಂಬುತ್ತಿರಲಿಲ್ಲ. ಗುರುಗಳಾದ ಶ್ರೀಮಾನ್ ರಾಘವೇಂದ್ರರಾಯರ

ಸಾಮರ್ಥ್ಯವನ್ನು ಹೆಚ್ಚಾಗಿ ಕೊಂಡಾಡಬೇಕೋ, ಶಿಷ್ಯರ ಪ್ರತಿಭೆಯನ್ನು ಹೆಚ್ಚಾಗಿ ಕೊಂಡಾಡಬೇಕೋ ತಿಳಿಯದು" ಎಂದು ಹೇಳಿದರು.

ಪ್ರತಿಭಾಶಾಲಿಗಳಾಗಿದ್ದ ಶ್ರೀಮದ್ಯುವರಾಜ ಶ್ರೀ ಕೃಷ್ಣರಾಜೇಂದ್ರ ಒಡೆಯರವರಿಗೆ ಪ್ರತ್ಯೇಕವಾಗಿ ಪಾಠಶಾಲೆಯಲ್ಲಿ ಶಿಕ್ಷಣ ದೊರೆಯುವುದೇ ಉಚಿತವೆಂದು ಶ್ರೀ ಚಾಮರಾಜೇಂದ್ರ ಒಡೆಯರವರಿಗೆ ತೋರಿತು. ೧೮೯೨ನೆಯ ಇಸವಿಯಲ್ಲಿ "ರಾಯಲ್ ಸ್ಕೂಲ್" ಎಂಬ ಹೆಸರಿನ ಪಾಠಶಾಲೆಯು ಲೋಕರಂಜನ ಮಹಲ್ ("ಸಮ್ಮರ್ ಪ್ಯಾಲಸ್") ಕಟ್ಟಡದಲ್ಲಿ ಸ್ಥಾಪಿತವಾಗಿ, ಪುಟ್ಟ ಮಹಾಸ್ವಾಮಿಯವರ ವಿದ್ಯಾಭ್ಯಾಸವು ಅರಸು ಪಂಗಡದ ಮತ್ತು ಬ್ರಾಹ್ಮಣ ಪಂಗಡದ ಕೆಲವು ಬಾಲಕರೊಡನೆ ಅಲ್ಲಿ ಪ್ರಾರಂಭವಾಯಿತು. ಆಗ್ಗೆ ಅಲ್ಲಿ ವ್ಯಾಸಂಗ ಮಾಡುತ್ತಿದ್ದವರೆಲ್ಲರ ಒಟ್ಟು ಸಂಖ್ಯೆಯು ಸುಮಾರು ಇಪ್ಪತ್ತು ಮಾತ್ರ. ಶ್ರೀಮದ್ಯುವರಾಜ ಶ್ರೀ ಕೃಷ್ಣರಾಜೇಂದ್ರ ಒಡೆಯರವರ ಸಹೋದರಿಯರಾದ ಶ್ರೀ ಜಯಲಕ್ಷ್ಮಮ್ಮಣ್ಣಿಯವರು, ಶ್ರೀ ಕೃಷ್ಣಾಜಮ್ಮಣ್ಣಿಯವರು ಮತ್ತು ಶ್ರೀ ಚಲುವಾಜಮ್ಮಣ್ಣಿಯವರು — ಇವರುಗಳ ವಿದ್ಯಾಭ್ಯಾಸಕ್ಕಾಗಿ ಪ್ರತ್ಯೇಕವಾಗಿ ಏರ್ಪಾಡಾಯಿತು; ಅವರೊಡನೆ ಇತರ ಕೆಲವರು ಬಾಲಕಿಯರೂ ವ್ಯಾಸಂಗಮಾಡುತ್ತಿದ್ದರು. ಶ್ರೀ ಕಂಠೀರವ ನರಸಿಂಹರಾಜ ಒಡೆಯರವರಿಗೆ ಆಗ್ಗೆ ನಾಲ್ಕೇ ವರ್ಷ ವಯಸ್ಸಾಗಿದ್ದ ಕಾರಣ, ಚೂಡಾಕರ್ಮವೂ, ಅಕ್ಷರಾಭ್ಯಾಸವೂ ಇನ್ನೂ ನೆರವೇರಿರಲಿಲ್ಲ.

**"ರಾಯಲ್ ಸ್ಕೂಲ್" ಪಾಠಶಾಲೆ**

"ರಾಯಲ್ ಸ್ಕೂಲ್" ಪಾಠಶಾಲೆಯಲ್ಲಿ ಶ್ರೀಮಾನ್ ಅಂಬಿಲ್ ನರಸಿಂಹ ಐಯಂಗಾರ್ಯರವರು ಮುಖ್ಯೋಪಾಧ್ಯಾಯರಾಗಿ ನೇಮಕವಾದರು. ಸಹಾಯೋಪಾಧ್ಯಾಯರಾಗಿ ನೇಮಕವಾದವರಲ್ಲಿ ಶ್ರೀಮಾನ್ ಪೂರ್ಣ ರಾಘವೇಂದ್ರರಾಯರವರು ಇಂಗ್ಲಿಷ್ ಭಾಷೆಯನ್ನೂ, ಕವಿತಿಲಕ ಸೋಸಲೆ ಅಯ್ಯ ಶಾಸ್ತ್ರಿಗಳವರು ಕನ್ನಡ ಮತ್ತು ಸಂಸ್ಕೃತ ಭಾಷೆಗಳನ್ನೂ, ಶ್ರೀಮಾನ್ ಹಸನ್ ಆಲಿಯವರು ಉರ್ದು ಭಾಷೆಯನ್ನೂ, ಶ್ರೀಮಾನ್ ಬಿ. ಭೀಮರಾಯರವರು ಗಣಿತ ಮುಂತಾದುವುಗಳನ್ನೂ, ಶ್ರೀಮಾನ್ ಹಟ್ಟಿ ಕೃಷ್ಣ ಐಯಂಗಾರ್ಯರವರು ಭೂಗೋಳವನ್ನೂ, ರಿಸಾಲ್ದಾರ್ ಮಹಮ್ಮದ್ ಆಲಿಯವರು ಕುದುರೆ ಸವಾರಿಯನ್ನೂ, ಜಮಾದಾರ್ ವರದರಾಜುಲು ನಾಯ್ಡು ಅವರು ಡ್ರಿಲ್ ಕವಾತನ್ನೂ, ಶ್ರೀಮಾನ್ ಆರ್ಮುಗಂ ಪಿಳ್ಳೆಯವರು ರೇಖಾ ಚಿತ್ರಲೇಖನವನ್ನೂ (ಡ್ರಾಯಿಂಗ್), ಶ್ರೀಮಾನ್ ವೀರಣ್ಣನವರು "ಜಮ್ನಾಸ್ಟಿಕ್ಸ್" ಅಂಗಸಾಧನೆಯನ್ನೂ

ಕಲಿಸಬೇಕೆಂದು ಗೊತ್ತಾಯಿತು. ಪಾಠಶಾಲೆಯ ಕಾರ್ಯಕಲಾಪಗಳು ತೃಪ್ತಿಕರವಾಗಿ ಮುಂದುವರಿದುವು. ಆ "ರಾಯಲ್ ಸ್ಕೂಲ್" ಪಾಠ ಶಾಲೆಯು ೧೯೦೧ನೆಯ ಇಸವಿಯ ವರೆಗೂ ನಡೆಯಿತು.

ಆಳಿದ ಮಹಾಸ್ವಾಮಿಯವರ ಸಹಪಾಠಿಗಳಾಗಿದ್ದವರಲ್ಲಿ ಕೆಲವರು ಈಗ ದೊಡ್ಡ ದೊಡ್ಡ ಹುದ್ದೆಗಳನ್ನಲಂಕರಿಸಿದ್ದಾರೆ. ಉಳಿದವರಲ್ಲಿ ಕೆಲವರು ದೊಡ್ಡದೊಡ್ಡ ಹುದ್ದೆಗಳಲ್ಲಿದ್ದು ವಿಶ್ರಾಂತರಾಗಿದ್ದಾರೆ. ಈಗ ದಿವಾನ್‌ರವ ರಾಗಿರುವ ಅಮೀನ್-ಉಲ್-ಮುಲ್ಕ್ ಸರ್ ಮಿರ್ಜಾ ಎಂ. ಇಸ್ಮಾಯಿಲ್, ಕೆ.ಸಿ.ಐ.ಇ., ಓ.ಬಿ.ಇ. ಅವರು, ಸರ್ದಾರ್ ಎಂ. ಲಕ್ಷ್ಮೀಕಾಂತರಾಜ ಅರಸಿನವರು, ಮೇಜರ್ ಎಂ. ಸಿ. ಸುಬ್ಬರಾಜ ಅರಸಿನವರು, ಶ್ರೀಮಾನ್ ಎಂ. ಎಸ್. ರಾಮಚಂದ್ರರಾಯರವರು, ಶ್ರೀಮಾನ್ ಎಚ್. ಸಿದ್ದರಾಜ ಅರಸಿನವರು, ಶ್ರೀಮಾನ್ ಎಸ್. ನರಸಿಂಗರಾಯರವರು, ಶ್ರೀಮಾನ್ ಬಾದಾಮಿ ಶಂಕರರಾಯರವರು, ಶ್ರೀಮಾನ್ ಎ. ಸಿ. ಬಸವರಾಜ ಅರಸಿ ನವರು, ಶ್ರೀಮಾನ್ ಕೆ. ಲಿಂಗೋಪಂತ್ ಬಾದಾಮಿಯವರು ಮುಂತಾ ದವರು ಅವರ ಸಹಪಾಠಿಗಳಾಗಿದ್ದರು. ಅವರಲ್ಲಿ ಸರ್ ಮಿರ್ಜಾ ಎಂ. ಇಸ್ಮಾಯಿಲ್ ಅವರೂ, ಶ್ರೀಮಾನ್ ಟಿ. ಎಸ್. ಅಲೀಖಾನ್‌ರವರೇ ಮುಂತಾದ ಕೆಲವರೂ ೧೮೯೬ನೆಯ ಇಸವಿಯಿಂದಲೇ ಮಹಾಸ್ವಾಮಿ ಯವರ ಸಹಪಾಠಿಗಳಾಗಿರಲಿಲ್ಲ. ಕೆಲಕೆಲವರು ಕೆಲಕೆಲವು ಕಾಲಾನಂತರ ಸೇರಿದವರು. ದಿವಂಗತ ಶ್ರೀಮಾನ್ ರಾಜಸೇವಾನಿಪುಣ ಎಸ್. ಶಾಮಣ್ಣ ನವರೂ, ಶ್ರೀಮಾನ್ ಟಿ. ಗುಂಡಪ್ಪನವರೂ, ಶ್ರೀಮಾನ್ ಬಿ. ವೆಂಕಟ ಸುಬ್ಬರಾಯರವರೂ "ರಾಯಲ್ ಸ್ಕೂಲ್" ಪಾಠಶಾಲೆಗೆ ಸೇರಿದಾಗಲೇ ಮಹಾಸ್ವಾಮಿಯವರಿಗಿಂತ ಹೆಚ್ಚಿನ ತರಗತಿಗೆ ಅರ್ಹರಾಗಿದ್ದುದರಿಂದ ಅವರಿಗಾಗಿ ಮೇಲಿನ ತರಗತಿಯೂ ಏರ್ಪಟ್ಟಿತು. ಮಹಾಸ್ವಾಮಿಯವರೂ, ಅವರ ಮೂವರು ಸಹೋದರಿಯರೂ ಅರಮನೆಯಿಂದ ಪಾಠಶಾಲೆಗೆ ಬರುತ್ತಿದ್ದರು. ಉಳಿದವರು ತಮ್ಮ ತಮ್ಮ ಮನೆಗಳಿಂದ ಪಾಠಶಾಲೆಗೆ ಬಂದು ಹೋಗುತ್ತಿದ್ದರು. ಮಧ್ಯಾಹ್ನದಮೇಲೆ ಅವರಿಗೆ ಆವಶ್ಯಕವಾಗು ತ್ತಿದ್ದ ಉಪಾಹಾರ ಮುಂತಾದ ಸಮಸ್ತ ಸೌಕರ್ಯಗಳೂ ಅರಮನೆಯಿಂದ ಕಲ್ಪಿತವಾಗಿದ್ದುವು.

ಶ್ರೀ ಚಾಮರಾಜೇಂದ್ರ ಒಡೆಯರವರೂ, ಆಗಿನ ದಿವಾನ್‌ರವರಾದ ಸರ್ ಕೆ. ಶೇಷಾದ್ರಿ ಐಯರವರೂ, ಈಗಿನ ಹುಜೂರು ಸೆಕ್ರೆಟರಿಯವರಾದ ರಾಜಸಭಾಭೂಷಣ ಟಿ. ತಂಬೂಚೆಟ್ಟಿಯವರ ತಂದೆಯವರಾದ ಶ್ರೀಮಾನ್ ಟಿ. ಆರ್. ಎ. ತಂಬೂಚೆಟ್ಟಿಯವರು ಮುಂತಾದ ದೊಡ್ಡ ದೊಡ್ಡ

ಅಧಿಕಾರಿಗಳೂ ಆಗಾಗ್ಗೆ ಪಾಠಶಾಲೆಗೆ ಹೋಗಿ ಅಲ್ಲಿ ನಡೆಯುತ್ತಿದ್ದ ಪಾಠ ಪ್ರವಚನಗಳನ್ನು ಪರಿಶೀಲಿಸಿ, ವಿದ್ಯಾರ್ಥಿಗಳಿಗೆ ಪ್ರಶ್ನೆಗಳನ್ನು ಹಾಕಿ, ಉತ್ತಮವಾದ ಸಲಹೆಗಳನ್ನು ಕೊಡುತ್ತಿದ್ದರು.

**ಬಾಲಸ್ವಭಾವಕ್ಕೆ ಮೀರಿದ ವರ್ತನೆ**

ಮಹಾಸ್ವಾಮಿಯವರು ಬಾಲ್ಯದಲ್ಲಿ ಸಹ, ಅಲ್ಪವಯಸ್ಸಿನ ಬಾಲಕರಿಂದ ನಿರೀಕ್ಷಿಸುವುದು ಸಾಧ್ಯವಿಲ್ಲದಷ್ಟು ಮೇಲ್ಮೆಯಿಂದ ವರ್ತಿಸುತ್ತಿದ್ದರು. ಒಂದು ದಿನ ಮಕ್ಕಳೆಲ್ಲರೂ ಆಡುತ್ತಿದ್ದಾಗ್ಗೆ, ಊಳಿಗದವನ ಅಚಾತುರ್ಯದಿಂದ ಮಹಾಸ್ವಾಮಿಯವರು ಬಿದ್ದು, ಹಲ್ಲಿಗೆ ಏಟು ತಗಲಿ ತುಟಿಯು ಕಿತ್ತುಹೋಗಿ, ರಕ್ತವು ಹರಿಯಿತು; ಅಲ್ಲದೆ, ಮಂಡಿಗಳಿಗೂ ಪೆಟ್ಟು ಬಿದ್ದು ನೋವಾಯಿತು. ಮಹಾಸ್ವಾಮಿಯವರು ಆಗ ಆ ಊಳಿಗದವನಲ್ಲಿ ಸ್ವಲ್ಪವೂ ಕುಪಿತರಾಗದೆ, ತಮಗೆ ಪೆಟ್ಟು ತಗಲಿದುದಕ್ಕಾಗಿ ಲೇಶಮಾತ್ರವೂ ರೋದಿಸದೆ, ಅಸಾಧಾರಣವಾದ ತಾಳ್ಮೆಯನ್ನು ತೋರಿಸಿದರು. ಆದಾಗ್ಗೂ ಸೇವಕನ ಅಚಾತುರ್ಯದ ವಿಚಾರವು ಇತರರಿಂದ ಶ್ರೀ ಮಹಾರಾಜ್ಞೀ ವಾಣೀವಿಲಾಸ ಸನ್ನಿಧಾನದವರ ಕಿವಿಗೆ ಮುಟ್ಟಿತು. ಅವರು ಆ ಸೇವಕನನ್ನು ಕರೆಯಿಸಿ ವಿಚಾರಣೆ ಮಾಡಿದಾಗ ಮಹಾಸ್ವಾಮಿಯವರು, "ಅಮ್ಮಯ್ಯ! ಅವನ ತಪ್ಪೇನೂ ಇಲ್ಲ. ಅವನನ್ನ ಬಯ್ಯಬೇಡಿ. ಅವನು ನನ್ನ ಚೆನ್ನಾಗಿ ನೋಡಿಕೋತಾನೆ. ನಾನೇ ಬಿದ್ದೆ, ನನ್ನ ತಪ್ಪು" ಎಂದರು. ಶ್ರೀ ವಾಣೀವಿಲಾಸ ಸನ್ನಿಧಾನದವರು ನಕ್ಕು ಸುಮ್ಮನಾದರು. ಆ ಬಳಿಕ ಆಟಕ್ಕಾಗಿ ಸೇರಿದ್ದಾಗ್ಗೆ ಶ್ರೀ ಕೃಷ್ಣಾಜಮ್ಮಣ್ಣಿಯವರು ಮಹಾಸ್ವಾಮಿಯವರನ್ನು ಕುರಿತು, "ತಮ್ಮಯ್ಯ! ಅದೇಕೆ ಅಮ್ಮಯ್ಯನೊಡನೆ ಹಾಗೆ ಹೇಳಿದಿರಿ? ಅವನಿಂದಲೇ ಅಲ್ಲವೋ ನೀವು ಬಿದ್ದದ್ದು?" ಎಂದು ಕೇಳಿದರು. ಆಗ ಮಹಾಸ್ವಾಮಿಯವರು, "ಅಕ್ಕಯ್ಯ! ಅವೊತ್ತು ನೀವು ತಳ್ಳಿ ನಾನು ಕೆಳಗೆ ಬಿದ್ದಾಗಲೂ ನಾನು ಅವರಿಗೆ ಹೇಳಲಿಲ್ಲ. ಅವನು ತಳ್ಳಿದಾಗ ಇವೊತ್ತೂ ಹೇಳಲಿಲ್ಲ. ಅವನೂ ನಮ್ಮ ಹಾಗೇ ತಾನೆ? ನಮ್ಮನ್ನಾಡಿಸಿ ನಮ್ಮ ಜೊತೆಯಲ್ಲೇ ಇರ್ತಾನೆ. ನಮ್ಮ ಹಾಗೇ ಅಲ್ಲವೇ, ಅಕ್ಕಯ್ಯ?" ಎಂದುದಕ್ಕಾಗಿ ಹಿಗ್ಗಿ, ಶ್ರೀ ಜಯಲಕ್ಷ್ಮಮ್ಮಣ್ಣಿಯವರೂ, ಶ್ರೀ ಕೃಷ್ಣಾಜಮ್ಮಣ್ಣಿಯವರೂ ನಾನು ತಾನೆಂದು ಹುರುಡುಪಡುತ್ತ ಅವರನ್ನು ಮುದ್ದಿಸಿದರು. ಸಮಸ್ತರನ್ನೂ ತಮ್ಮಂತೆಯೇ ಕಂಡು ಅವರ ಸ್ಥಾನದಲ್ಲಿ ತಾವೇ ಇದ್ದಂತೆ ಭಾವಿಸಿ ವರ್ತಿಸುವ ಸ್ತೋತ್ರಾರ್ಹವಾದ ಸದ್ಗುಣವು ಆಳಿದ ಮಹಾಸ್ವಾಮಿಯವರಲ್ಲಿ ತೀರ ಬಾಲ್ಯ ವಯಸ್ಸಿನಿಂದಲೂ ನೆಲಸಿದ್ದು ದಿನ ದಿನವೂ ಪರಿಸ್ಫುಟವಾಯಿತು.

ಆಳಿದ ಮಹಾಸ್ವಾಮಿಯವರಿಗೆ ಕೇವಲ ಬಾಲ್ಯ ವಯಸ್ಸಿನಿಂದಲೂ ವಿದ್ಯಾಭ್ಯಾಸದಲ್ಲಿ ತೀವ್ರಾಸಕ್ತಿಯಿದ್ದಿತು. ಮಹಾಸ್ವಾಮಿಯವರು ಆಟಗಳ ಕಾಲದಲ್ಲಿ ಆಟಗಳಲ್ಲಿಯೂ, ಪಾಠಗಳ ಕಾಲದಲ್ಲಿ ಪಾಠಗಳಲ್ಲಿಯೂ ಮಗ್ನರಾಗಿರುತ್ತಿದ್ದರು; ಉತ್ಸಾಹವನ್ನೂ ಆಸಕ್ತಿಯನ್ನೂ ತೋರಿಸುತ್ತಿದ್ದರು; ಸಮಸ್ತರಿಗೂ ವಿಸ್ಮಯವನ್ನುಂಟು ಮಾಡುತ್ತಿದ್ದರು. ೧೮೯೩ನೆಯ ಇಸವಿಯಲ್ಲಿ ಪುಟ್ಟ ಮಹಾಸ್ವಾಮಿಯವರಿಗೆ ವಿಷಮಶೀತಜ್ವರವು ಬಂದು ಮಹಾರಾಜ ದಂಪತಿಗಳನ್ನೂ, ಇತರರನ್ನೂ ವಿಶೇಷ ಕಳವಳಕ್ಕೆ ಗುರಿಮಾಡಿತು. ವೈದ್ಯಶ್ರೇಷ್ಠರು ಸಾಧ್ಯವಿದ್ದಷ್ಟುಮಟ್ಟಿನ ಜಾಗರೂಕತೆಯಿಂದ ಚಿಕಿತ್ಸೆ ಮಾಡತೊಡಗಿದರು. ಮಹಾಸ್ವಾಮಿಯವರು ವಿಷಮಶೀತಜ್ವರದಿಂದ ನರಳುತ್ತಿದ್ದಾಗ ಕೂಡ, ರೋಗದ ದೆಸೆಯಿಂದ ವಿದ್ಯಾಭ್ಯಾಸಕ್ಕೆ ವಿಘ್ನವಾಯಿತಲ್ಲಾ — ಎಂದು ತೊಳಲುತ್ತಿದ್ದರು; ತಮ್ಮನ್ನು ನೋಡಲು ಶ್ರೀಮಾನ್ ಪೂರ್ಣರಾಘವೇಂದ್ರರಾಯರವರು ದಯಮಾಡಿಸಿದಾಗಲೆಲ್ಲ "ಕ್ಲಾಸಿನಲ್ಲಿ ನಂಬರು ಹೋಯಿತಲ್ಲಾ. ರ್‍ಯಾಂಕ್ ಹೋಯಿತಲ್ಲಾ" ಎಂದು ಮಹಾಸ್ವಾಮಿಯವರು ಪೇಚಾಡುತ್ತಿದ್ದರು. ರೋಗದಿಂದ ಹಿಂಸೆಪಡುತ್ತಿದ್ದಾಗ ಕೂಡ, ತರಗತಿಯಲ್ಲಿ ತಾವು ಪಡೆದಿದ್ದ ಉತ್ತಮ ಸ್ಥಾನವು ("ರ್‍ಯಾಂಕ್") ತಪ್ಪಿಹೋಗುವುದೆಂಬ ಚಿಂತೆ; ವ್ಯಾಸಂಗದಲ್ಲಿ ಹಿಂದೆ ಬೀಳಬೇಕಾಯಿತೆಂಬ ಕಳವಳ. ಗುರುಹಿರಿಯರು ಎಷ್ಟು ಸಮಾಧಾನ ಹೇಳಿದರೂ ಅವರಿಗೆ ತೃಪ್ತಿಯಾಗಲಿಲ್ಲ. ವಿದ್ಯಾಭ್ಯಾಸದಲ್ಲಿ ಅವರಿಗೆ ಅಷ್ಟುಮಟ್ಟಿನ ಸ್ಪರ್ಧೆಯೂ, ಶ್ರದ್ಧೆಯೂ, ಉತ್ಸುಕತೆಯೂ ಇದ್ದುವು.

**ವಿದ್ಯಾಭ್ಯಾಸದಲ್ಲಿ ತೀವ್ರಾಸಕ್ತಿ**

ಮಹಾಸ್ವಾಮಿಯವರು ವಿಷಮಶೀತಜ್ವರದಿಂದ ಪೀಡಿತರಾಗಿದ್ದಾಗ್ಗೆ ಸಹಿಸಲಶಕ್ಯವಾದ ಬಾಧೆಯ ಮಧ್ಯದಲ್ಲಿ ಸಹ, ಅಸಾಧಾರಣವಾದ ದೇವತಾಭಕ್ತಿಯನ್ನು ಪ್ರದರ್ಶಿಸುತ್ತಿದ್ದರು. ಜ್ವರದ ತಾಪವೂ, ದೇಹದಲ್ಲಿ ನಿಶ್ಶಕ್ತಿಯೂ ಹೆಚ್ಚಿದಂತೆಲ್ಲ, ಮಹಾಸ್ವಾಮಿಯವರು ಕುಲದೇವತೆಯಾದ ಚಾಮುಂಡಾಂಬಿಕೆಯಲ್ಲಿ ಅತಿಶಯವಾದ ಭಕ್ತಿಯನ್ನು ತೋರಿಸುತ್ತ, ದೇವಿಯ ಸ್ಮರಣೆ ಮಾಡುತ್ತ, ತಮ್ಮ ಪುಟ್ಟ ಕೈಗಳನ್ನು ಮುಗಿಯುತ್ತಿದ್ದ ಬಗೆಯನ್ನು ಕಂಡು ಊಳಿಗದವರು ಕೂಡ ಕಂಬನಿದುಂಬುತ್ತಿದ್ದರು. ಕೆಲವು ದಿನಗಳಲ್ಲಿ ಜ್ವರವು ಬಹಳ ಹೆಚ್ಚಿ ಅರೆವಾಸಿ ಪ್ರಜ್ಞೆ ತಪ್ಪಿದಂತಾಗುತ್ತಿದ್ದ ಸಮಯಗಳಲ್ಲಿ ಕೂಡ

**ಅಸಾಧಾರಣವಾದ ದೇವತಾಭಕ್ತಿ**

ಚಾಮುಂಡೇಶ್ವರೀ ದೇವಿಯವರ ಧ್ಯಾನವನ್ನು ಮಾಡುತ್ತಿದ್ದರು. ಆ ಸಲ ಜ್ವರವು ವಾಸಿಯಾದ ಬಳಿಕ ಶ್ರೀ ಚಾಮುಂಡೇಶ್ವರೀ ದೇವಿಯವರ ವಿಗ್ರಹಕ್ಕೆರತ್ನಖಚಿತವಾದ ಕಿರೀಟವನ್ನು ಮಾಡಿಸಿ ಸಮರ್ಪಿಸಬೇಕೆಂಬುದು ತಮ್ಮ ಅಭಿಲಾಷೆಯೆಂದು ಅವರು ಮಾತಾಪಿತೃಗಳಿಗೆ ಅರಿಕೆ ಮಾಡಿದರು. ಮಹಾರಾಜ ದಂಪತಿಗಳು ಅದಕ್ಕೆ ಒಡನೆಯೇ ಸಮ್ಮತಿಸಿದರು. ಮಹಾರಾಜ್ಞೀ ಶ್ರೀ ವಾಣೀವಿಲಾಸ ಸನ್ನಿಧಾನದವರಂತೂ, "ಅಯ್ಯಾಜಿ! ಅಗತ್ಯವಾಗಿ ಮಾಡೋಣ. ಈ ಚಿಕ್ಕವಯಸ್ಸಿನಲ್ಲಿ ನಿಮಗೆಷ್ಟು ಭಕ್ತಿ! ಇದೇ ಭಕ್ತಿಯು ಬೆಳೆದು ಶಾಶ್ವತವಾಗಿರಲಿ!" ಎಂದು ಹೇಳಿದರು. ಮಹಾಸ್ವಾಮಿಯವರಿಗೆ ವಿಷಮಶೀತಜ್ವರವು ಗುಣವಾದ ಬಳಿಕ, ಮಹಾರಾಜ ದಂಪತಿಗಳು ಸಹಸ್ರಜನ ಸಂತರ್ಪಣೆ ಮಾಡಿಸಿ, ಶ್ರೀ ಚಾಮುಂಡೇಶ್ವರೀ ದೇವಿಯವರ ವಿಗ್ರಹಕ್ಕೆ ರತ್ನಖಚಿತವಾದ ಕಿರೀಟವನ್ನು ಸಮರ್ಪಿಸಿ ಸೇವೆ ಮಾಡಿಸಿದರು.

**ಮಹಾರಾಜ ದಂಪತಿಗಳ ಸಮದರ್ಶಿತ್ವ**

ಮಹಾರಾಜ ದಂಪತಿಗಳು ತಮ್ಮ ಪುತ್ರರೊಡನೆ ವ್ಯಾಸಂಗಮಾಡುತ್ತಿದ್ದ ಇತರ ಬಾಲಕರನ್ನೂ, ಪುತ್ರಸಮವಾಗಿ ಭಾವಿಸಿ, ಆದರದಿಂದ ಕಂಡು ಅನುಗ್ರಹಿಸುತ್ತಿದ್ದರು. "ರಾಯಲ್ ಸ್ಕೂಲ್" ಪಾಠಶಾಲೆಯಲ್ಲಿ ಬಾಲಕರೆಲ್ಲರಿಗೂ ಕುದುರೆ ಸವಾರಿಯನ್ನು ಕಲಿಸುತ್ತಿದ್ದರು. ಒಂದು ದಿನ ಅವರಲ್ಲೊಬ್ಬ ಬಾಲಕನು ಕುದುರೆಯಮೇಲೆ ಕುಳಿತುಕೊಂಡು ಬರುತ್ತಿರುವಾಗ್ಗ್ಗ, ಎದುರಿಗೆ ಬರುತ್ತಿದ್ದ ಶ್ರೀ ಚಾಮರಾಜೇಂದ್ರ ಒಡೆಯರವರಿಗೆ ಕೈ ಮುಗಿದು ತಲೆ ಬಾಗಿಸಿದ ವೇಳೆಗೆ ಸರಿಯಾಗಿ ಕುದುರೆಯು ತಟಕ್ಕನೆ ತಲೆಯನ್ನು ಮೇಲಕ್ಕೆತ್ತಿಬಿಟ್ಟಿತು. ಮಹಾಪ್ರಭುಗಳವರು, "ಕುದುರೆಯ ಮೇಲೆ ಸವಾರಿ ಮಾಡಿಕೊಂಡು ಬರುವಾಗಲೂ ತಲೆ ಬಗ್ಗಿಸಿ ಹೀಗೆ ಕೈ ಮುಗಿಯಬೇಕೆ? ಕುದುರೆಯು ಇನ್ನು ಸ್ವಲ್ಪ ಜೋರಾಗಿತಲೆಯೆತ್ತಿದ್ದರೆ ಹಲ್ಲು ಬಿದ್ದುಹೋಗಿ ನೀನು ಈಗಲೇ ಮುದುಕನಾಗಿ ಹೋಗುತ್ತಿದ್ದೆ. ಅಯ್ಯಾಜಿಯವರ ಜೊತೆಯಲ್ಲಿ ಓದುವವರೆಲ್ಲ ಅಯ್ಯಾಜಿಯವರಂತೆಯೇ ನಮಗೆ ಪ್ರೀತಿಪಾತ್ರರಾಗಿದ್ದೀರಿ. ಅಯ್ಯಾಜಿಯವರು ನಮಗೆ ಕೈ ಮುಗಿಯಬೇಕೆ? ಅವರಂತೆಯೇ ನೀವೂ. ನೀವೂ ಕೈ ಮುಗಿಯಬೇಡಿ" ಎಂದು ಅಪ್ಪಣೆ ಕೊಡಿಸಿದರು. ಪಾಠಶಾಲೆಯಲ್ಲಿ ಮಧ್ಯಾಹ್ನದಮೇಲೆ ಉಪಾಹಾರ ಸೇವನೆಯಾಗುತ್ತಿದ್ದಾಗ ಬಾಲಕರೆಲ್ಲರನ್ನೂ ಸಮಾನವಾಗಿ ಕಂಡು ಎಲ್ಲರಿಗೂ ಒಂದೇಸಮವಾಗಿ ಉಪಚಾರ ನಡೆಯಬೇಕೆಂದು ಅಪ್ಪಣೆ ಮಾಡಿ, "ಎಲ್ಲಾ

ಹುಡುಗರನ್ನೂ ಅಯ್ಯಾಜಿಯವರಂತೆಯೇ ಕಂಡು ಆದರದಿಂದ ಉಪಚಾರ ಮಾಡಬೇಕು. ಹೆಚ್ಚು ಕಡಮೆ ಮಾಡೀರಿ'' ಎಂದು ಶ್ರೀ ವಾಣೀವಿಲಾಸ ಸನ್ನಿಧಾನದವರು ಪರಿಚಾರಕರಿಗೆ ಎಚ್ಚರಿಕೆ ಹೇಳುತ್ತಿದ್ದರು. ಒಂದು ದಿನ ಹೇಳಿದುದನ್ನು ಅವರೆಲ್ಲಿ ಜ್ಞಾಪಕದಲ್ಲಿಟ್ಟುಕೊಂಡಿರುವುದಿಲ್ಲವೋ ಎಂಬ ಶಂಕೆಯಿಂದ ಪದೇ ಪದೇ ಎಚ್ಚರಿಕೆ ಕೊಡುತ್ತಿದ್ದರು. ಪಾಠಶಾಲೆಯ ಬಾಲಕರೆಲ್ಲರೂ ಒಂದು ದಿನ ಲಗ್ಗೆ ಚೆಂಡಿನ ಆಟವಾಡುತ್ತಿದ್ದಾಗ್ಗೆ ಮಹಾಸ್ವಾಮಿಯವರೇ ಗೆದ್ದರು. ಆಟದ ನಿಯಮದಂತೆ, ಸೋತ ಬಾಲಕನು ತನ್ನ ಬೆನ್ನಿನಮೇಲೆ ಮಹಾಸ್ವಾಮಿಯವರನ್ನು ಕುಳ್ಳಿರಿಸಿ ಕೊಂಡು ಓಡಬೇಕಾಯಿತು. ಆ ಸಮಯಕ್ಕೆ ಆ ಮಾರ್ಗವಾಗಿ ದಯ ಮಾಡಿದ ಶ್ರೀ ಚಾಮರಾಜೇಂದ್ರ ಒಡೆಯರವರು ಮಹಾಸ್ವಾಮಿಯವ ರನ್ನು ಕುರಿತು, '' ಅಯ್ಯಾಜಿ! ಮೊದಲು ಕೆಳಕ್ಕಿಳಿಯಿರಿ. ನೀವು ಅವನಿಗಿಂತ ಬಲವಾಗಿ ದಪ್ಪವಾಗಿದ್ದೀರಿ. ಅವನು ತೆಳ್ಳಗಿದ್ದಾನೆ. ಅವನ ಬೆನ್ನಿನ ಮೇಲೆ ಕುಳಿತುಕೊಂಡರೆ ತಡೆದಾನೆ?'' ಎಂದು ಅಪ್ಪಣೆ ಕೊಡಿಸಿದರು.

**ಮುಂಬಯಿ ಪ್ರಯಾಣ**

ಶ್ರೀ ಚಾಮರಾಜೇಂದ್ರ ಒಡೆಯರವರು ೧೮೯೩ನೆಯ ಇಸವಿಯಲ್ಲಿ ಮುಂಬಯಿ ನಗರಕ್ಕೆ ಸಕುಟುಂಬ ಸಪರಿವಾರರಾಗಿ ಚಿತ್ತೈಸಿದರು. ಅದಕ್ಕೆ ಸ್ವಲ್ಪ ಮುಂಚಿತವಾಗಿ— ಎಂದರೆ ೧೮೯೩ನೆಯ ಇಸವಿ ಆಗಸ್ಟ್ ತಿಂಗಳಿನಲ್ಲಿ— ಆಗ್ಗೆ ಚಕ್ರವರ್ತಿನಿ ಯವರಾಗಿದ್ದ ಶ್ರೀ ವಿಕ್ಟೋರಿಯಾ ರಾಣಿಯವರು ಮಹಾಪ್ರಭುಗಳವರ ಪ್ರಜಾವಾತ್ಸಲ್ಯವನ್ನೂ ರಾಜ್ಯಭಾರ ಕೌಶಲ್ಯವನ್ನೂ ಮೆಚ್ಚಿ ಆ ಮೊದಲೇ ದಯಪಾಲಿಸಿದ್ದ '' ಜಿ.ಸಿ.ಎಸ್.ಐ. '' ಎಂಬ ಬಿರುದಿನ ಜೊತೆಗೆ '' ಕರ್ನಲ್ '' ಎಂಬ ಘನವಾದ ಬಿರುದನ್ನೂ ದಯಪಾಲಿಸಿದ್ದರು. (೧೮೯೨ನೆಯ ಇಸವಿ ಜೂನ್ ತಿಂಗಳಿನಲ್ಲಿ ಶ್ರೀ ಮಹಾರಾಜ್ಞೀ ಶ್ರೀ ವಾಣೀವಿಲಾಸ ಸನ್ನಿಧಾನದವರಿಗೆ ಅವರು '' ಸಿ.ಐ. '' ಎಂಬ ಬಿರುದನ್ನು ಕೊಟ್ಟಿದ್ದರೆಂಬ ಸಂಗತಿಯನ್ನೂ ಇಲ್ಲಿ ಸೂಚಿಸಬಹುದಾಗಿದೆ.) ಮಹಾಪ್ರಭುಗಳವರ ಸತ್ಕಾರಕ್ಕೆ ಮುಂಬಯಿ ಗವರ್ನರವರು ಅಟ್ಟಹಾಸದಿಂದ ಯುಕ್ತವಾದ ಏರ್ಪಾಡನ್ನು ಮಾಡಿಸಿ ದ್ದರು. ಮಹಾಪ್ರಭುಗಳವರು ಎರಡು ತಿಂಗಳುಗಳ ಕಾಲ ಮುಂಬಯಿ ನಗರದಲ್ಲಿದ್ದು— ಮಹಾರಾಜರಾಗಿದ್ದೂ ಸಾಮಾನ್ಯರಂತೆ ವರ್ತಿಸಿ— ಆ ನಗರದಲ್ಲಿ ನೋಡತಕ್ಕ ಸ್ಥಳಗಳನ್ನೆಲ್ಲ ತಮ್ಮ ಪುತ್ರ ಪುತ್ರಿಯರಿಗೆ ತೋರಿಸಿ, ಅವರ ಮತ್ತು ಅವರ ಸಹಪಾಠಿಗಳ ಅನುಭವವನ್ನು ಹೆಚ್ಚಿಸಿ, ತಮ್ಮ ಸೌಜನ್ಯ ಸರಳತೆಗಳಿಂದ ಮುಂಬಯಿ ನಗರ ನಿವಾಸಿಗಳನೇಕರಿಗೆ ವಿಸ್ಮಯ ವನ್ನುಂಟುಮಾಡಿದರು.

ಈಚಿನವರೆಗೂ ಶ್ರೀ ಮದ್ಯುವರಾಜರವರಾಗಿದ್ದು ದಿವಂಗತರಾದ ಶ್ರೀ ಕಂಠೀರವ ನರಸಿಂಹರಾಜ ಒಡೆಯರ್ ಬಹದ್ದೂರ್, ಜಿ.ಸಿ.ಐ.ಇ. ಮಹಾಸ್ವಾಮಿಯವರಿಗೆ ಯಥಾ ಕಾಲದಲ್ಲಿ ಶುಭ ದಿವಸ ಅಕ್ಷರಾಭ್ಯಾಸವು ನಡೆಯಿತು; ತಮ್ಮ ಸೋದರೀ ಸೋದರರಲ್ಲಿ ಅವರಿಗೆ ಅತ್ಯಂತ ಪ್ರೀತಿ. ಅವರ ವಿದ್ಯಾಭ್ಯಾಸವು ದಿನದಿನವೂ ಮುಂದು ವರಿಯಿತು. ೧೮೯೪ನೆಯ ಇಸವಿಯಲ್ಲಿ, ಮಹಾ ಪ್ರಭುಗಳಾದ ಶ್ರೀ ಚಾಮರಾಜೇಂದ್ರ ಒಡೆಯುರವರು ತಮ್ಮ ದ್ವಿತೀಯ ಪುತ್ರರಿಗಾಗಿ ಸಹ "ರಾಯಲ್ ಸ್ಕೂಲ್" ಪಾಠಶಾಲೆಯಲ್ಲಿ ಕೆಲವು ಮಂದಿ ಸಹಪಾಠಿಗಳೊಡನೆ ಪ್ರತ್ಯೇಕ ತರಗತಿಯು ಏರ್ಪಡಬೇಕೆಂದು ಅಪ್ಪಣೆ ಮಾಡಿದರು. ಲೆಫ್ಟಿನೆಂಟ್ ಕರ್ನಲ್ ದಿವಂಗತ ಬಿ. ಪಿ. ಕೃಷ್ಣೇ ಅರಸಿನವರು, ದಿವಂಗತ ಶ್ರೀಮಾನ್ ಎಂ. ಚನ್ನರಾಜ ಅರಸಿನವರು, ಶ್ರೀಮಾನ್ ಎಂ. ಜಿ. ವ್ಹೀಕ್ರಿಯವರು, ಶ್ರೀಮಾನ್ ಎಫ್. ಸಿ. ದೇವರಾಜ ಅರಸಿನವರು, ಶ್ರೀಮಾನ್ ಕೆ. ಸುಬ್ಬರಾಯರವರು, ಶ್ರೀಮಾನ್ ಎಚ್. ಮುದ್ದರಾಜ ಅರಸಿನವರು, ಶ್ರೀಮಾನ್ ಬಿ. ದಾಸಪ್ಪನವರು, ಶ್ರೀಮಾನ್ ಅಬ್ದುಲ್ ಬಾಸಿತ್ ಅವರು ಮುಂತಾದವರು ಆ ಸಹಪಾಠಿಗಳು.

**ಶ್ರೀ ಕಂಠೀರವ ನರಸಿಂಹರಾಜ ಒಡೆಯರವರ ವಿದ್ಯಾಭ್ಯಾಸ**

ಈ ಮಧ್ಯೆ, "ರಾಯಲ್ ಸ್ಕೂಲ್" ಪಾಠಶಾಲೆಯಲ್ಲಿ ೧೮೯೩ನೆಯ ಇಸವಿಯಲ್ಲಿ ದೊಡ್ಡ ಮಾರ್ಪಾಟೊಂದು ನಡೆಯಿತು. ಆಳಿದ ಮಹಾಸ್ವಾಮಿಯವರು ಮುಂದೆ ರಾಜ್ಯಭಾರವನ್ನು ವಹಿಸಬೇಕಾಗಿದ್ದವರಾದ ಕಾರಣ, ಇಂಗ್ಲಿಷ್ ಭಾಷೆಯಲ್ಲಿ ಪೂರ್ಣ ಪಾಂಡಿತ್ಯವುಂಟಾಗಲನುಕೂಲಿಸುವಂತೆ ಇಂಗ್ಲಿಷ್ ಭಾಷೆಯು ಮಾತೃಭಾಷೆಯಾಗಿರತಕ್ಕವರೇ ಅಲ್ಲಿ ಅದನ್ನು ಬೋಧಿಸಬೇಕೆಂದು ಶಿಕ್ಷಣ ವಿಜ್ಞಾನದಲ್ಲಿ ಪರಿಣತರಾದವರನೇಕರು ಸಲಹೆ ಮಾಡಿದರು. ಶ್ರೀ ಚಾಮರಾಜೇಂದ್ರ ಒಡೆಯರವರು ಆ ಸಲಹೆಯನ್ನು ಲಾಲಿಸಿ, ಮದರಾಸು ಸರ್ಕಾರದ ಪಬ್ಲಿಕ್ ವರ್ಕ್ಸ್ ಶಾಖೆಯಲ್ಲಿ ಎಗ್ಜಿಕ್ಯುಟಿವ್ ಇಂಜನಿಯರಾಗಿದ್ದ ಶ್ರೀಮಾನ್ ಜೆ. ಜೆ. ವ್ಹೈಟ್ಲಿ, ಎಂ.ಐ.ಸಿ.ಇ. ಅವರನ್ನು ಬೋಧಕರನ್ನಾಗಿ ನೇಮಕಮಾಡಿದರು. ಅವರು ಮೇಜರ್ ಮಾರ್ಟಿನ್ ಅವರ ಅಳಿಯಂದಿರು. ಮೇಜರ್ ಮಾರ್ಟಿನ್ ಅವರು ಶ್ರೀ ಚಾಮರಾಜೇಂದ್ರ ಒಡೆಯರವರಿಗೆ ಪ್ರೈವೇಟ್ ಸೆಕ್ರಿಟರಿಯವರಾಗಿದ್ದವರು; ಅಲ್ಲದೆ ಅದಕ್ಕೆ

**ಯೂರೋಪಿಯನ್ ಬೋಧಕರು**

ಹಿಂದೆ ಮೇಜರ್ ಮಾರ್ಟಿನ್ ಅವರು ಶ್ರೀ ಚಾಮರಾಜೇಂದ್ರ ಒಡೆಯ ರವರಿಗೆ— ಅವರು ಶ್ರೀ ಮುಮ್ಮಡಿ ಕೃಷ್ಣರಾಜ ಒಡೆಯರವರ ದತ್ತು ಪುತ್ರರಾಗಿ— ಸಂಸ್ಥಾನವನ್ನು ಹಿಂದಕ್ಕೆ ಪಡೆಯಲು ಪೂರ್ಣಾಧಿಕಾರ ವುಂಟೆಂದು ವಾದಿಸಿ ಮುಂದಾಳುಗಳಾಗಿ ಹೋರಾಡಿದ್ದವರಲ್ಲೊಬ್ಬರು. ಆದಕಾರಣ, ಅವರ ಅಳಿಯಂದಿರಾದ ಶ್ರೀಮಾನ್ ಜೆ. ಜೆ. ವೈಟ್ಲಿ ಯವರೂ ಸಹ, ಮೈಸೂರು ಸಂಸ್ಥಾನದ ವಿಚಾರದಲ್ಲಿ ಅಭಿಮಾನವುಳ್ಳವ ರಾಗಿದ್ದರು. ಅವರು ೧೮೯೩ನೆಯ ಇಸವಿ ನವೆಂಬರು ತಿಂಗಳಿನಲ್ಲಿ ಮೈಸೂರಿಗೆ ದಯಮಾಡಿ "ರಾಯಲ್ ಸ್ಕೂಲ್" ಆಡಳಿತವನ್ನು ವಹಿಸಿ ಕೊಂಡರು.

ಆಳಿದ ಮಹಾಸ್ವಾಮಿಯವರಾದ ಶ್ರೀ ಚಾಮರಾಜೇಂದ್ರ ಒಡೆಯ ರವರಿಗೆ ಸಂಗೀತದಲ್ಲಿ ಪ್ರೇಮವೂ ಪರಿಶ್ರಮವೂ ಇದ್ದುವು. ಅವರು ಸುಶ್ರಾವ್ಯವಾಗಿ ಪಿಟೀಲನ್ನು ನುಡಿಸುತ್ತಿದ್ದರು. ಅವರಿಗೆ ಪಾಶ್ಚಾತ್ಯ ಸಂಗೀತದಲ್ಲಿ ಸಹ ಆದರ ವಿದ್ದಿತು: ಶ್ರೀ ಜಯಲಕ್ಷ್ಮಮ್ಮಣ್ಣಿಯವರಿಗೆ

**ಸಂಗೀತ ಶಿಕ್ಷಣ**

ಕರ್ಣಾಟಕ ಸಂಗೀತದ ಜೊತೆಗೆ ಪಿಯಾನೊ ವಾದ್ಯವನ್ನು ನುಡಿಸುವುದನ್ನು ಕಲಿಸಲು ಏರ್ಪಾಡುಮಾಡಿದ್ದರು. ರಾಜಕಾರ್ಯ ಮಧ್ಯದಲ್ಲಿ ಅವಕಾಶ ಲಭಿಸಿದ ದಿನಗಳಲ್ಲೆಲ್ಲ ಮಹಾಪ್ರಭುಗಳು ಆಸ್ಥಾನ ವಿದ್ವಾಂಸರಿಂದ ವೀಣೆ, ಕೊಳಲು, ಪಿಟೀಲು, ಮೃದಂಗ– ಮುಂತಾದ ವಾದ್ಯಗಳನ್ನು ನುಡಿಸಿಯೂ ಗಾಯನ ಮಾಡಿಸಿಯೂ ಆನಂದಿಸುತ್ತಿದ್ದರು. ಶ್ರೀ ಮಹಾರಾಜ್ಞೀ ವಾಣೀವಿಲಾಸ ಸನ್ನಿಧಾನದವರು ಶ್ರೀ ವಾಣೀವಿಲಾಸದವರೆಂಬ ಅಂಕಿತದ ಅನ್ವರ್ಥಲಕ್ಷಣಯುತರೋ— ಎಂಬಂತೆ ವೀಣಾವಾದನ ಚತುರರಾಗಿ ದ್ದರು. ಆದಕಾರಣ, ಮಹಾರಾಜ ದಂಪತಿಗಳ ಐವರು ಮಕ್ಕಳಿಗೂ ಸಂಗೀತದಲ್ಲಿ ಅಭಿರುಚಿಯುಂಟಾದುದರಲ್ಲಿ ಆಶ್ಚರ್ಯವೇನೂ ಇಲ್ಲ.

ಬಾಲಕರಾಗಿದ್ದ ಪುಟ್ಟ ಮಹಾಸ್ವಾಮಿಯವರಾದ ಶ್ರೀ ಕೃಷ್ಣ ರಾಜೇಂದ್ರ ಒಡೆಯರವರು ಹಾಗೆ ಜನ್ಮತಃ ಲಭಿಸಿದ್ದ ಅಭಿರುಚಿಯ ಪ್ರಭಾವದಿಂದ ತಮ್ಮಾರ್ವರು ಜ್ಯೇಷ್ಠ ಸಹೋದರಿಯರಾದ ಶ್ರೀ ಜಯ ಲಕ್ಷ್ಮಮ್ಮಣ್ಣಿಯವರಿಗೂ, ಶ್ರೀ ಕೃಷ್ಣಾಜಮ್ಮಣ್ಣಿಯವರಿಗೂ, ಶ್ರೀಮಾನ್ ಸಂಗೀತ ಶಾಮರಾಯರೆಂಬ ಸುಪ್ರಸಿದ್ಧ ಸಂಗೀತ ವಿದ್ವಾಂಸರಿಂದ ಸಂಗೀತ ಪಾಠವು ನಡೆಯುತ್ತಿದ್ದಾಗ ಗಮನವಿಟ್ಟು ಕೇಳುತ್ತಿದ್ದರು. ನಾದ ಸ್ವರವನ್ನು (ಎಂದರೆ, ಓಲಗವನ್ನು) ಕೇಳುವುದರಲ್ಲಿಂತೂ, ಅವರಿಗೆ ತೀರ ಬಾಲ್ಯ ವಯಸ್ಸಿನಿಂದಲೂ ಪೂರ್ಣಾದರ. ಆಹಾರ ನಿದ್ರೆಗಳಿಗೆ

ವೇಳೆ ಮೀರಿದರೂ ಗಮನ ಕೊಡದೆ ಔತ್ಸುಕ್ಯದಿಂದ ನಾದ ಸ್ವರವನ್ನು
ಕೇಳುತ್ತಿದ್ದರು. ಅಲ್ಲದೆ ಬಾಲ್ಯೋಚಿತ ರೀತಿಯಲ್ಲಿ ಕಾಗದವನ್ನು ಓಲ
ದಂತೆ ಸುತ್ತಿ ತಾವೂ "ಊ" ಎಂದು ಊದುತ್ತ, ತಮ್ಮ ಜೊತೆಯ
ರಿಂದಲೂ ಅದೇ ರೀತಿಯ ಕಾಗದದ ಓಲಗಗಳನ್ನು ಊದಿಸುತ್ತಿದ್ದರು
ಶ್ರೀ ಚಾಮರಾಜೇಂದ್ರ ಒಡೆಯರವರು, ತಮ್ಮ ಪುತ್ರಿಯರಿಗೆ ಸಂಗೀತ
ಶಿಕ್ಷಣಕ್ಕೆ ಉತ್ತಮವಾದ ಏರ್ಪಾಡನ್ನು ಮಾಡಿದ್ದಂತೆಯೇ ಮಹಾಸ್ವಾಮಿ
ಯವರಿಗೂ ಸಂಗೀತ ಶಿಕ್ಷಣಕ್ಕೆ ಉತ್ತಮವಾದ ಏರ್ಪಾಡನ್ನು
ಮಾಡಬೇಕೆಂದು ಸಂಬಂಧಪಟ್ಟ ಅಧಿಕಾರಿಗಳಿಗೆ ಅಪ್ಪಣೆ ಮಾಡಿದರು.

ಆಳಿದ ಮಹಾಸ್ವಾಮಿಯವರು ಸಂಗೀತ ಪ್ರವೀಣರಾಗಿ, ಪಾಶ್ಚಾತ್ಯ
ಪೌರ್ವಾತ್ಯ ಸಂಗೀತಗಳೆಡರಲ್ಲಿಯೂ ಪರಿಣತರಾಗಿ "ತಾಲಬ್ರಹ್ಮರೋ"

**ಪ್ರಥಮ ಗುರುಗಳಾದ ವೀಣೆ ಶಾಮಣ್ಣನವರು**

ಎಂಬಂತೆ ಅದ್ಭುತ ಸಾಮರ್ಥ್ಯವುಳ್ಳವರಾಗಿದ್ದು
ದನ್ನು ಸಂಗೀತ ವಿದ್ವಾಂಸರುಗಳಲ್ಲಿ ಅನೇಕರು
ಬಲ್ಲರು. ವೀಣೆ ಶಾಮಣ್ಣನವರೆಂಬ ಘನ
ವಿದ್ವಾಂಸರು ಸಂಗೀತದಲ್ಲಿ ಮಹಾಸ್ವಾಮಿಯವರಿ
ಪ್ರಥಮ ಗುರುಗಳು; ಅವರು ದಿವಂಗತರಾ
ಬಳಿಕ, ವೈಣಿಕ ಶಿಖಾಮಣಿ ಶ್ರೀಮಾನ್ ಶೇಷಣ್ಣನವರಿಂದ ಮಹಾಸ್ವಾಮಿ
ಯವರಿಗೆ ಸಂಗೀತ ಪಾಠವಾಯಿತು.

ಶ್ರೀಮಾನ್ ವೀಣೆ ಶಾಮಣ್ಣನವರು ಬೃಹಚ್ಚರಣ ಪಂಗಡ
ದ್ರಾವಿಡರು. ವಂಶಾನುಗತವಾಗಿ ಬಂದ ಸಂಗೀತ ಪ್ರೌಢಿಮೆ; ತಾಳದಲ್ಲಿ
ಅಸಾಧಾರಣ ಪ್ರತಿಭೆ ಸಾಮರ್ಥ್ಯಗಳು; ವಿದ್ವತ್ತಿನ ಕೆಚ್ಚಿನಿಂದ ಕೂಡಿ
"ಜನ ಮುದ್ದು ಮಕ್ಕಳಾಗಿರದೆ" ಪ್ರತಿಪಕ್ಷ ಭಯಂಕರರೆನಿಸುತ್ತಿದ್ದ
ದರ್ಪ; ಇವೆರಡೂ ಅವರ ವಿಶೇಷ ಗುಣಗಳು. ಮುಮ್ಮಡಿ ಕೃಷ್ಣರಾಜ
ಒಡೆಯರವರ ಕಾಲದಲ್ಲಿದ್ದ (ವೈಣಿಕ ಶಿಖಾಮಣಿ ಶ್ರೀಮಾನ್ ವೀಣೆ
ಶೇಷಣ್ಣನವರ ತಂದೆಯವರಾದ) ಚಿಕ್ಕರಾಮಪ್ಪನವರು, (ವೈಣಿಕ ಪ್ರವೀಣ
ಶ್ರೀಮಾನ್ ವೀಣೆ ಸುಬ್ಬಣ್ಣನವರ ತಂದೆಯವರಾದ) ಶೇಷಣ್ಣನವರು
(ವೈಣಿಕ ಪ್ರವೀಣ ಶ್ರೀಮಾನ್ ವೆಂಕಟಗಿರಿಯಪ್ಪನವರ ಪಿತಾಮಹರಾದ
ದೊಡ್ಡ ಸುಬ್ಬರಾಯರು — ಮುಂತಾದ ಘನ ವಿದ್ವಾಂಸರಿಗೆಲ್ಲ ಅವರಲ್ಲಿ
ಆದರ ಗೌರವಗಳು.

ಒಂದು ಸಲ, ಪ್ರಶಸ್ತಿ ಪತ್ರಗಳನ್ನೂ ಪರಿಚಯ ಪತ್ರಗಳನ್ನೂ
ಪಡೆದಿದ್ದ ಪರದೇಶದ ವಿದ್ವಾಂಸರೊಬ್ಬರು ಮುಮ್ಮಡಿ ಕೃಷ್ಣರಾಜ
ಪ್ರಭುಗಳವರ ಸನ್ನಿಧಿಗೆ ಬಂದು, ತಾವು ಜಲತರಂಗಿನಲ್ಲಿ ಷಟ್ಕಾಲಗಳಲ್ಲಿ

ಪಲ್ಲವಿ ಬಾರಿಸಲು ಮತ್ತು ಹಾಡಲು ಸಮರ್ಥರೆಂದೂ, ಸಂಗೀತಶಾಸ್ತ್ರ ಪ್ರವೀಣರೆಂದೂ ಮತ್ತು ತಮಗೆ "ಜಯಭೇರಿ ಪತ್ರ"ವನ್ನು ಕರುಣಿಸಿ ಪ್ರೋತ್ಸಾಹಿಸಬೇಕೆಂದೂ ಅರಿಕೆ ಮಾಡಿಕೊಂಡರಂತೆ. ಅವರು ಆ ಬಗೆಯ ಮೆಚ್ಚನ್ನು ಬೇಡುವರೆಂದು ನಿರೀಕ್ಷಿಸಿಲ್ಲದಿದ್ದ ದಾನವೀರ ಪ್ರಭುಗಳವರು "ಜಯಭೇರಿ ಪತ್ರ"ವನ್ನು ಕೊಟ್ಟು ಆಸ್ಥಾನ ವಿದ್ವಾಂಸರಿಗೆಲ್ಲ ಅಪಮಾನ ಕರವಾಗುವಂತೆ ಮಾಡುವುದು ಸರಿಯಲ್ಲವೆಂದು ಯೋಚಿಸಿ, "ಅಗತ್ಯ ವಾಗಿ ಕೊಡುವೆವು; ಆದರೆ ನಮ್ಮ ಆಸ್ಥಾನ ವಿದ್ವಾಂಸರುಗಳನ್ನೆಲ್ಲಾ ನೀವು ಮೊದಲು ಸೋಲಿಸಬೇಕು. ನಾಳೆಯೇ ಸ್ಪರ್ಧೆಯ ಏರ್ಪಾಡು" ಎಂದು ಅಪ್ಪಣೆ ಕೊಡಿಸಿದರು. ಮಾರನೆಯ ದಿನವೇ ಸಂಗೀತ ಸ್ಪರ್ಧೆ. ಆಸ್ಥಾನ ವಿದ್ವಾಂಸರುಗಳಲ್ಲಿ ಮೂರು ಮಂದಿಗಳು ವೀಣೆಗಳನ್ನು ಶ್ರುತಿ ಮಾಡಿ ತ್ರಿಕಾಲದಲ್ಲಿ ಪಲ್ಲವಿ ನುಡಿಸಿದಮೇಲೆ, ಶ್ರೀಮಾನ್ ವೀಣೆ ಶಾಮಣ್ಣ ನವರು ನಾಟಕುರಂಜಿ ರಾಗವನ್ನು ನುಡಿಸಿ, ಅದೇ ರಾಗದಲ್ಲಿ "ಅನ್ನಿಟಿಕಿ ನೀವೇ ಅಧಿಕಾರಿಯೈ ...." ಎಂಬ ಪಲ್ಲವಿಯನ್ನು ತ್ರಿಕಾಲದಲ್ಲಿ— "ಬಾಯಲ್ಲಿ ಒಂದು ಗತಿ, ಕೈಯ್ಯಲ್ಲಿ ಒಂದು ಗತಿ, ಹೀಗೆ ಗತಿವ್ಯತ್ಯಾಸ ಮಾಡಿಕೊಂಡು ಅಮೋಘವಾಗಿ"— ನುಡಿಸಿದರು. ಅನಂತರ ಅವರು ಹೊರಗಿನ ಸಂಗೀತಗಾರರನ್ನುದ್ದೇಶಿಸಿ, "ಮಹಾಸ್ವಾಮಿಯವರ ಸನ್ನಿಧಿ ಯಲ್ಲಿ ನಾವೆಲ್ಲರೂ ತ್ರಿಕಾಲ ಪಲ್ಲವಿ ನುಡಿಸಿ ಸೇವೆಯನ್ನು ಸಲ್ಲಿಸಿದ್ದೇವೆ. ತಾವು ಷಟ್ಕಾಲ ಪಲ್ಲವಿ ಹಾಡಿ ಜಲತರಂಗ್ ನುಡಿಸುತ್ತೀರಂತೆ; ಸಂಗೀತ ಶಾಸ್ತ್ರ ಪಾರಂಗತರೂ ಆಗಿದ್ದೀರಂತೆ. ಸಂಗೀತ ಶಾಸ್ತ್ರ ಪಾರಂಗತರಾದ ತಮ್ಮಿಂದ, ಕಾಮವರ್ಧಿನಿ ರಾಗಕ್ಕೂ ಪಂತುವರಾಳಿ ರಾಗಕ್ಕೂ ಇರುವ ಪರಸ್ಪರ ವ್ಯತ್ಯಾಸವನ್ನು ತಿಳಿದುಕೊಂಡು, ಪಂತುವರಾಳಿ ರಾಗದ ಗಾಂಧಾರವು ನಿಖರವಾಗಿ ಹೇಗಿರುವುದೆಂಬುದನ್ನು ಗೊತ್ತುಮಾಡಿಕೊಳ್ಳುವ ಆಶೆ. ನಾನು ನುಡಿಸಿದ ನಾಟಕುರಂಜಿ ರಾಗದ ಪಲ್ಲವಿಯ ತ್ರಿಕಾಲದ ಮೇಲೆ ಮತ್ತೊಂದು ಕಾಲ ಅಪ್ಪಣೆಯಾಗಬೇಕು" ಎಂದು ಹೇಳಿದರು. ನಾಲ್ಕನೆಯ ಕಾಲದಲ್ಲಿಯೂ ಪಲ್ಲವಿ ಹಾಡುವುದಾಗಲಿ ಅಥವಾ ನುಡಿಸು ವುದಾಗಲಿ ಆತನಿಗೆ ಸಾಧ್ಯವಾಗದೆಹೋದುದನ್ನು ಕಂಡು ಪ್ರಭುಗಳಿಗೆ ಸಮಾಧಾನವಾಯಿತು. ಅದರ ಪರಿಜ್ಞಾನವೇ ಇಲ್ಲದೆ ವೀಣೆ ಶಾಮಣ್ಣ ನವರು ನಿಟ್ಟುಸಿರುಬಿಟ್ಟು— ತಾವಿದ್ದುದೆಲ್ಲೆಂಬುದನ್ನೂ ಮರೆತು— "ಅಯ್ಯೋ ಜಯಭೇರಿ ಪತ್ರವೆ! ಸರಸ್ವತೀ ಮಾತೆ! ನಿನ್ನ ಸೇವೆಯಲ್ಲಿ ಯಾರಮೇಲೆ ಯಾರಿಗೆ ಜಯಭೇರಿ, ನನ್ನಮ್ಮ? ನೀನೇ ವೀಣೆ ನುಡಿಸಿದರೆ, ಆಗ್ಗೆ ನಮ್ಮಲ್ಲಿ ಯಾರ ಗತಿಗಳು ಎಲ್ಲೆಲ್ಲಿ? ಯಾರ ಸ್ಥಾನಗಳು ಎಲ್ಲೆಲ್ಲಿ?"

ಎಂದು ಹೇಳಿ ಕಂಬನಿದುಂಬಿ, ಆ ಬಳಿಕ, ಪ್ರಭು ಸನ್ನಿಧಿಯಲ್ಲಿ ಹಾಗೆ ನುಡಿದುದಕ್ಕಾಗಿ ಕ್ಷಮೆ ಬೇಡಿದರು. ಅವರ ಪ್ರಿಯ ಶಿಷ್ಯರು, ಆಳಿದ ಮಹಾಸ್ವಾಮಿಯವರು.

**ಪೂಜಾ ಕಾಲದ ಪರಮ ಸೇವೆ**

ಮಹಾಸ್ವಾಮಿಯವರೂ, ಶ್ರೀ ಜಯಲಕ್ಷ್ಮಮ್ಮಣ್ಣಿಯವರೂ, ಶ್ರೀ ಕೃಷ್ಣಾಜಮ್ಮಣ್ಣಿಯವರೂ ೧೮೯೪ನೆಯ ಇಸವಿಯಲ್ಲಿ ಭಾದ್ರಪದ ಮಾಸದ ಶುದ್ಧ ತದಿಗೆಯ ದಿನ ಶ್ರೀ ವಾಣೀವಿಲಾಸ ಸನ್ನಿಧಾನದವರು ಗೌರೀ ಪೂಜೆ ಮಾಡಿದಾಗ್ಗೆ ಭಕ್ತಿಯಿಂದ ಪುಟ್ಟದೊಂದು ಸಂಗೀತ ಗೋಷ್ಠಿಯನ್ನು ನೆರವೇರಿಸಿ ಪೂಜಾ ಕಾಲದಲ್ಲಿ ಪರಮ ಸೇವೆಯನ್ನು ಸಮರ್ಪಿಸಿದರು. ಅದರಿಂದ ಮಹಾರಾಜ ದಂಪತಿಗಳಿಗೆ ಉಂಟಾದ ಹರ್ಷಕ್ಕೆ ಪಾರವೇ ಇರಲಿಲ್ಲ.

**ಸರ್ ಜಾರ್ಜ್ ವುಲ್ಸ್ಲಿ ಅವರ ವರ್ಣನಾ ವಾಣಿ**

ಬ್ರಿಟಿಷ್ ಸೈನ್ಯದ ಮುಖ್ಯ ಸೇನಾಧಿಪತಿಗಳಾಗಿ ೧೮೯೫ನೆಯ ಇಸವಿಯಲ್ಲಿ ದೊಡ್ಡ ಪದವಿಯನ್ನಲಂಕರಿಸುವವರಾಗಿದ್ದ ಫೀಲ್ಡ್ ಮಾರ್ಷಲ್ ಸರ್ ಜಾರ್ಜ್ ವುಲ್ಸ್ಲಿ ಅವರು ೧೮೯೪ನೆಯ ಇಸವಿಯ ದಸರಾ ಮಹೋತ್ಸವವು ಮುಗಿದ ತರುಣದಲ್ಲಿ ಶ್ರೀ ಚಾಮರಾಜೇಂದ್ರ ಒಡೆಯರವರ ಅತಿಥಿಗಳಾಗಿ ಮೈಸೂರು ನಗರಕ್ಕೆ ದಯಮಾಡಿದ್ದರು. ಅವರು ಮೈಸೂರು ನಗರದಲ್ಲಿ ತಾವು ಕಂಡ ವಿವರಗಳನ್ನು ವರ್ಣಿಸಿ ಇಂಗ್ಲಿಷ್ ಪತ್ರಿಕೆಯೊಂದಕ್ಕೆ ಬರೆದ ಲೇಖನದಲ್ಲಿ, ಶ್ರೀ ಜಯಲಕ್ಷ್ಮಮ್ಮಣ್ಣಿಯವರೇ ಆದಿಯಾದ ಐವರು ಮಕ್ಕಳ ವಿಷಯವಾಗಿ ಸೂಚಿಸಿದ್ದ ಅಂಶಗಳು ಗಮನಾರ್ಹವಾಗಿವೆ. ಅವರು ಸೂಚಿಸಿದ್ದುದೇನೆಂದರೆ: "ನಾನು ಮೈಸೂರು ನಗರಕ್ಕೆ ಹೋದ ಮಾರನೆಯ ದಿನ ಶ್ರೀಮನ್ಮಹಾರಾಜರವರೊಡನೆ ಕುದುರೆ ಬಂಡಿಯಲ್ಲಿ ಕೆರೆಯ ಏರಿಯ ಮೇಲೆ ಹೊಸ ಕುದುರೆ ಜೂಜಿನ ಬಯಲಿಗೆ ("ನ್ಯೂ ರೇಸ್ ಕೋರ್ಸ್") ಹೋದೆ. ಶ್ರೀಮನ್ಮಹಾರಾಜರವರ ಐವರು ಮಕ್ಕಳನ್ನೂ—ಮೂವರು ಪುತ್ರಿಯರನ್ನೂ ಈರ್ವರು ಪುತ್ರರನ್ನೂ—ನಾನು ನೋಡಿದುದು ಆಗಲೇ. ಶ್ರೀಮನ್ಮಹಾರಾಜರವರ ಜ್ಯೇಷ್ಠ ಪುತ್ರಿಯವರು ಸುಮಾರು ಹದಿನಾಲ್ಕು ವರ್ಷ ವಯಸ್ಸಿನವರಾಗಿ ಪೌರ್ವಾತ್ಯ ಸಂಪ್ರದಾಯದ ಮೇರೆಗೆ ವಿವಾಹ ಯೋಗ್ಯವಾದ ವಯಸ್ಸಿನವರಾಗಿದ್ದಾರೆ..........ಜೂಜಿನ ಕುದುರೆಗಳ ಓಟವು ಪ್ರಾರಂಭವಾಗುವುದಕ್ಕೆ ಸ್ವಲ್ಪ ಕಾಲ ಮುಂಚಿತವಾಗಿ ಆ ಐವರು ಮಕ್ಕಳೂ ತಮ್ಮನ್ನು

ನೋಡಿಕೊಳ್ಳುತ್ತಿದ್ದ ಯೂರೋಪಿಯನ್ ಮಹಿಳೆಯೊಬ್ಬರೊಡನೆ ಅಲ್ಲಿಗೆ ಬಂದು ತಮ್ಮ ತಂದೆಯವರಿಗೆ ಸಮೀಪವಾಗಿ ಕುಳಿತು, ತಾವುಗಳು ಅಲ್ಲಿದ್ದಷ್ಟು ಕಾಲವೂ ಆಕೆಯೊಡನೆ ಸಂಭ್ರಮದೊಡನೆ ಸಂಭಾಷಣೆ ಮಾಡುತ್ತಿದ್ದರು.......... ಮಹಾರಾಜಕುಮಾರಿಯರು ಮೂವರ ಕಬರೀದಾಮಗಳೂ ಮುಕ್ತಾಸರಗಳಿಂದಲೂ, ರತ್ನಗಳ ಸರಗಳಿಂದಲೂ ಪರಿವೇಷ್ಟಿತಗಳಾಗಿ ಸಂಶೋಭಿಸುತ್ತಿದ್ದುವು. **ಬಾಲಕರಿಬ್ಬರೂ ಬಹು ಚೆನ್ನಾಗಿ ಇಂಗ್ಲಿಷ್ ಭಾಷೆಯಲ್ಲಿ ಮಾತನಾಡುತ್ತಿದ್ದರು.** ಅವರಿಬ್ಬರೂ ಕಿಂಕಾಪಿನ ಅಂಗಿಗಳನ್ನೂ ಅವಕ್ಕೆ ತಕ್ಕ ಷರಾಯಿಗಳನ್ನೂ ಧರಿಸಿದ್ದರು. ಅವರಿಬ್ಬರೂ ಧರಿಸಿದ್ದ ರುಮಾಲುಗಳಲ್ಲಿ ತುಂಬಿ ತೊಳಗುತ್ತಿದ್ದ ಮುತ್ತುಗಳೂ ಪಚ್ಚೆಗಳೂ ಬಿಸಿಲಿನ ಕಾಂತಿಯು ಅವುಗಳಮೇಲೆ ಬಿದ್ದು ಥಳಥಳನೆ ಫಳಗುಟ್ಟುತ್ತಿದ್ದುವು. ಅವರಿಬ್ಬರು ಬಾಲಕರೂ, ಅವರ ಸೋದರಿಯರೂ ಪ್ರತಿಭಾಯುತರಾದ ಮೇಧಾವಿಗಳಾಗಿ ಚಟುವಟಿಕೆಯಿಂದಿದ್ದಾರೆ. ಅವರುಗಳೆಲ್ಲರೂ ಆರೋಗ್ಯವಂತರಾಗಿ ಸುಖಸಂತೋಷಗಳಿಂದಿರುವಂತೆ ತೋರಿತು."*

---

* "The day after I reached Mysore, I drove with His Highness round the lake (or properly speaking, the tank) to the new race course and it was on that occasion that I first saw his five children — three daughters and two sons. The eldest princess is of marriageable age according to Eastern etiquette being nearly fourteen........Just before the race began, the children joined their father and kept up a brisk conversation all the time with their English governess by whom they were accompanied........The young princesses had strings of pearls and other precious stones twisted in their dark silky hair. The two little boys both of whom speak English very prettily were coats of richly brocaded silk and trousers to match, together with turbans thickly sprinkled with pearls and emeralds which glittered and sparkled brightly as the sun's rays flashed upon them. Both they and their sisters looked bright and intelligent and they all seemed to be healthy and happy."

—**Field-Marshal Sir George Wolsley (later Viscount)**
(*Vide* pp. 153–154, *Modern Mysore*
by Rajakaryaprasaktha Rao Bahadur M. Shama Rao, M.A.)

## ಮೂರನೆಯ ಅಧ್ಯಾಯ

## ಪಿತೃವಿಯೋಗ

"ಓಂ ನಮೋ ಭಗವತೇ ವೈವಸ್ವತಾಯ ಮೃತ್ಯವೇ
ಬ್ರಹ್ಮವಿದ್ಯಾಚಾರ್ಯಾಯ........"

**ಕಲ್ಕತ್ತಾ ಪ್ರಯಾಣ**

೧೮೯೪ನೆಯ ಇಸವಿ ಡಿಸೆಂಬರು ತಿಂಗಳಿನಲ್ಲಿ ಶ್ರೀ ಚಾಮರಾಜೇಂದ್ರ ಒಡೆಯರವರು ಕುಟುಂಬ ಸಮೇತರಾಗಿ ಕಲ್ಕತ್ತಾ ನಗರಕ್ಕೆ ಪ್ರಯಾಣ ಹೊರಡಲು ನಿಶ್ಚೈಸಿದರು. ಪ್ರಯಾಣದ ದಿನಗಳು ಸಮೀಪಿಸಿದಂತೆಲ್ಲ, ಉತ್ಸಾಹದಿಂದ ಸಕಲ ಸನ್ನಾಹಗಳೂ ಸಿದ್ಧವಾದುವು. ಆದರೆ ಪ್ರಯಾಣದ ದಿನವು ಸನ್ನಿಹಿತವಾದಂತೆಲ್ಲ ಹಲವು ಅನಿಮಿತ್ತಗಳುಂಟಾಗಿ, ಅವುಗಳಲ್ಲಿ ನಂಬಿಕೆಯಿದ್ದವರು ವಿಶೇಷವಾಗಿ ಕಳವಳಪಟ್ಟರು.

ಶ್ರೀ ಚಾಮರಾಜೇಂದ್ರ ಒಡೆಯರವರು ಕುಲದೈವವಾದ ಶ್ರೀ ಚಾಮುಂಡೇಶ್ವರೀ ದೇವಿಯವರಿಗೆ ಸಿಂಹ ವಾಹನೋತ್ಸವವೇ ಮುಂತಾದ ಸೇವೆಗಳನ್ನು ಸಮರ್ಪಿಸಿ, ಕೆಲವು ದಿನಗಳಮೇಲೆ ಪ್ರಯಾಣಮಾಡಿದರು. ೧೮೯೪ನೆಯ ಇಸವಿ ಡಿಸೆಂಬರ್ ೯ನೆಯ ತಾರೀಖಿನ ದಿನ ಮೈಸೂರು ನಗರದಿಂದ ಹೊರಟು ೧೧ನೆಯ ತಾರೀಖಿನ ದಿನ ಪುಣೆಯನ್ನು ತಲಪಿ, ಪಾರ್ವತೀ ಬೆಟ್ಟಕ್ಕೆ ಬಿಜಯಮಾಡಿ ಸೇವೆ ಮಾಡಿಸಿದರು. ಪುಣೆಯಿಂದ ಹೊರಟು ಜಬ್ಬಲ್ಪುರಕ್ಕೆ ಹೋಗಿ ನರ್ಮದಾ ನದಿಗೆ ನಾಲ್ಕು ಮೈಲಿಗಳ ದೂರದಲ್ಲಿದ್ದ ಮೀರ್‌ಗಂಜ್ ಸ್ಟೇಷನಿನಲ್ಲಿಳಿದು ನರ್ಮದಾತೀರಕ್ಕೆ ಹೋಗಿ ಬಿಡಾರಮಾಡಿದರು. ಅಲ್ಲಿ ಉಭಯಪಾರ್ಶ್ವಗಳಲ್ಲಿಯೂ ಶುಭ್ರವಾದ ಅಮೃತಶಿಲೆಯ ಬಂಡೆಗಳ ಮಧ್ಯದಲ್ಲಿ, ತೀರ ಆಳದಲ್ಲಿ, ನರ್ಮದಾ ನದೀ ಜಲವು ಕಂಗೊಳಿಸುತ್ತದೆ. ಹಾಗೆ ಹರಿದುಬರುವ ನೀರು ಧುಮ್ಮಿಕ್ಕುವೆಡೆ ಯಲ್ಲಿಯ ಸೌಂದರ್ಯವೂ ಅಲ್ಲಿಯ ಸೂರ್ಯಾಸ್ತದ ಸೊಬಗೂ ಎಷ್ಟು ಸಾರಿ ನೋಡಿದರೂ ತೃಪ್ತಿಯಾಗದಂತಿರುತ್ತವೆ. ಶ್ರೀ ಚಾಮರಾಜೇಂದ್ರ ಒಡೆಯರವರಿಗೆ ಮೈಸೂರಿನಿಂದ ಹೊರಡುವಾಗಲೇ ಕೆಮ್ಮೂ ಕೊಂಚ ಜ್ವರವೂ ಇದ್ದಾಗ್ಯೂ ಅವುಗಳನ್ನು ಲಕ್ಷ್ಯಮಾಡದೆ, ದೇಹವು ನಿತ್ರಾಣ ದಿಂದಲೂ ಆಯಾಸದಿಂದಲೂ ಬಳಲಿದ್ದುದನ್ನೂ ಮರೆತು, ಅಲ್ಲಿಯ ಸೌಂದರ್ಯವನ್ನು ಕಂಡು ಹರ್ಷಿಸಿದರು.

ಮಹಾಪ್ರಭುಗಳವರು ಪ್ರಯಾಗದ (ಅಲಹಾಬಾದಿನ) ಮೂಲಕವಾಗಿ ಕಲ್ಕತ್ತಾ ನಗರಕ್ಕೆ ಸೇರಲು ಹನ್ನೊಂದು ದಿನಗಳು ಹಿಡಿದುವು. (ಎಂದರೆ ೧೮೯೪ನೆಯ ಇಸವಿ ಡಿಸೆಂಬರು ೧೧ನೆಯ ತಾರೀಖಿನ ದಿನ ಪುಣೆಯಿಂದ ಹೊರಟು ಅದೇ ತಿಂಗಳು ೨೧ನೆಯ ತಾರೀಖಿನ ದಿನ ಕಲ್ಕತ್ತಾ ನಗರವನ್ನು ಸೇರಿದರು.) ಅಲ್ಲಿ ಇಂಗ್ಲಿಷ್ ಅಧಿಕಾರಿಗಳೇ ಮುಂತಾದವರು ಮಹಾ ಪ್ರಭುಗಳನ್ನು ಸ್ವಾಗತಿಸಿ, ವಿಜಯನಗರದ ಮಹಾರಾಜರಿಗೆ ಸೇರಿದ್ದ "ಷಿಯಾಲ್ಡಾ" ಎಂಬ ಹೆಸರಿನ ಪ್ರಾಸಾದದಲ್ಲಿಳಿಸಿದರು. ಅದೇ ದಿನ ಮಹಾಪ್ರಭುಗಳಿಗೂ ವೈಸ್ರಾಯಿಯವರಾಗಿದ್ದ ಲಾರ್ಡ್ ಎಲ್ಗಿನ್‌ರವರಿಗೂ ಭೇಟಿ ನಡೆಯಿತು. ಆ ಬಳಿಕ ಎರಡು ದಿನಗಳನ್ನು ಮಹಾಪ್ರಭುಗಳವರು ಸಂತೋಷದಿಂದ ಕಳೆದು, ಪ್ರೇಕ್ಷಣೀಯವಾದ ನಾನಾ ಸ್ಥಳಗಳಿಗೂ ತಮ್ಮ ಕುಟುಂಬ ವರ್ಗದವರೊಡನೆ ಚಿತ್ತೈಸಿ ಹರ್ಷಿಸಿದರು.

**ಅಸ್ವಸ್ಥರಾದುದು**

೧೮೯೪ನೆಯ ಇಸವಿ ಡಿಸೆಂಬರು ೨೪ನೆಯ ತಾರೀಖಿನ ದಿನ ಶ್ರೀ ಚಾಮರಾಜೇಂದ್ರ ಒಡೆಯರವರಿಗೆ ಜ್ವರವು ಕಾಣಿಸಿಕೊಂಡಿತು. ಆ ದಿನ ಅಖಿಲ ಭಾರತೀಯ ವೈದ್ಯ ಸಮ್ಮೇಳನವು ("ಆಲ್ ಇಂಡಿಯಾ ಮೆಡಿಕಲ್ ಕಾಂಗ್ರೆಸ್") ನಡೆಯುವುದಾಗಿದ್ದಿತು. ಭರತಖಂಡದ ನಾನಾ ಪ್ರಾಂತಗಳಿಂದಲೂ ಬಂದಿದ್ದ ಒಂದು ಸಾವಿರ ಮಂದಿ ವೈದ್ಯರು (ಡಾಕ್ಟರು ಗಳು) ಅದರಲ್ಲಿ ಭಾಗಿಗಳಾಗಿದ್ದರು. ವೈಸ್ರಾಯಿಯವರಾದ ಲಾರ್ಡ್ ಎಲ್ಗಿನ್‌ರವರು ಸಮ್ಮೇಳನದ ಸಮಾರಂಭಣ ಮಹೋತ್ಸವವನ್ನು ನೆರವೇರಿಸಿದರು.

ಮಾರನೆಯ ದಿನ, ಎಂದರೆ ೧೮೯೪ನೆಯ ಇಸವಿ ಡಿಸೆಂಬರು ತಿಂಗಳು ೨೫ನೆಯ ತಾರೀಖಿನ ದಿನ ಬೆಳಗ್ಗೆ (ಆಗ್ಗೆ ದಿವಾನ್ ಹುದ್ದೆಯಲ್ಲಿದ್ದ) ಶ್ರೀಮಾನ್ ಕೆ. ಶೇಷಾದ್ರಿ ಐಯರವರು ತಮ್ಮ ಬಿಡಾರದಿಂದ ಬಂದು, ಮಹಾಪ್ರಭುಗಳವರ ದೇಹಸ್ಥಿತಿಯು ಹೇಗಿದ್ದಿತೆಂಬುದನ್ನು ವಿಚಾರಿಸಿ ಕೊಂಡರು. ದರ್ಬಾರ್ ಸರ್ಜನ್‌ರವರಾಗಿದ್ದ ಕರ್ನಲ್ ಬೆನ್ಸನ್ ರವರಿಗೂ, ಅಸಿಸ್ಟೆಂಟ್ ಸರ್ಜನ್‌ರವರಾಗಿದ್ದ ಡಾಕ್ಟರ್ ಹನುಮಾನ್ ಸಿಂಗ್‌ರವರಿಗೂ, ತಮ್ಮ ಹೆಡ್‌ಕ್ವಾರ್ಟರ್ಸ್ ಸರ್ಜನ್‌ರವರಾಗಿದ್ದ ಡಾಕ್ಟರ್ ಕೃಷ್ಣಸ್ವಾಮಿ ಐಯರವರಿಗೂ ಮಹಾಪ್ರಭುಗಳವರನ್ನು ಬಹಳ ಎಚ್ಚರಿಕೆಯಿಂದ ನೋಡಿಕೊಳ್ಳುವಂತೆ ಆಜ್ಞಾಪಿಸಿದರು.

ಆದರೆ, ಆ ದಿನ ಬೆಳಗ್ಗೆ ಜ್ವರವು ಸ್ವಲ್ಪ ಮಟ್ಟಿಗೆ ಕಡಮೆಯಾಗಿದ್ದು ದರಿಂದ ಮಹಾಪ್ರಭುಗಳು ಜೂಜಿನ ಕುದುರೆಗಳನ್ನು ನೋಡಿಕೊಂಡು

ಬರಲು ಚಿತ್ತೈಸಿದರು. ಬೆಳಗಿನ ತಂಗಾಳಿಯು ಬಲವಾಗಿ ಬೀಸುತ್ತಿದ್ದು ದನ್ನೂ ಗಮನಿಸದೆ ಉತ್ತಮಾಶ್ವಗಳನ್ನು ನೋಡುವ ಕುತೂಹಲದಿಂದ ಚಿತ್ತೈಸಿದುದನ್ನು ಕಂಡು ಡಾಕ್ಟರ್ ಹನುಮಾನ್‌ಸಿಂಗರವರು ಶ್ರೀಮಾನ್ ಪೂರ್ಣ ರಾಘವೇಂದ್ರರಾಯರೊಡನೆ "ಮಹಾಸ್ವಾಮಿಯವರ ಮೈಯಲ್ಲಿ ಜ್ವರವಿದೆ. ಕೆಮ್ಮೂ ಬಿಟ್ಟಿಲ್ಲ. ಬೆಳಗಿನ ಈ ಕೊರತದ ಗಾಳಿಯಲ್ಲಿ ಹೊರಟಿದ್ದಾರೆ. ಗತಿಯೇನು?" ಎಂದು ಮುಂತಾಗಿ ಹೇಳಿದರು; ಅವರಿಬ್ಬರೂ ಪೇಚಾಡಿಕೊಂಡರು.

ಶ್ರೀ ಚಾಮರಾಜೇಂದ್ರ ಒಡೆಯರವರು ಬಿಡಾರಕ್ಕೆ ಹಿಂತಿರುಗಿದಾಗ ಬೆಳಗ್ಗೆ ಒಂಬತ್ತು ಘಂಟೆ. ಆಗ್ಗೆ ಮೈಯಲ್ಲಿ ಗಡಗಡನೆ ನಡುಕ ಹುಟ್ಟಿದ್ದು ದಲ್ಲದೆ, ಸರಿಯಾಗಿ ಉಸಿರಾಡಲು ಕೂಡ ಸಾಧ್ಯವಿರಲಿಲ್ಲ. ಮಹಾಪ್ರಭು ಗಳವರು ಅಂದು ತಮ್ಮ ದೇಹಸ್ಥಿತಿಯು ಪ್ರತಿಕೂಲವಾಗಿದ್ದೂ ಕೂಡ, ದರ್ಬಾರ್ ಸರ್ಜನ್‌ರವರಾದ ಡಾಕ್ಟರ್ ಬೆನ್ಸನ್‌ರವರೇ ಮುಂತಾದ ವೈದ್ಯರೆಲ್ಲರೂ ವೈದ್ಯ ಸಮ್ಮೇಳನದಲ್ಲಿ ಭಾಗವಹಿಸಲು ಆ ದಿನವೂ ಹೋಗ ಬಹುದೆಂದು ಆ ಮೊದಲೇ ಅಪ್ಪಣೆಯನ್ನಿತ್ತು ಕೃಪೆತೋರಿದ್ದರು. ವೈದ್ಯರುಗಳು ಸಮ್ಮೇಳನಕ್ಕೆ ತೆರಳಿದ್ದ ಕಾರಣ, ಪ್ರಭುಗಳವರ ಸವಾರಿ ಚಿತ್ತೈಸಿದಾಗ, ದರ್ಬಾರು ಬಕ್ಷಿಯವರಾದ ಶ್ರೀಮಾನ್ ಅಂಬಿಲ್ ನರಸಿಂಹ ಐಯಂಗಾರ್ಯರವರೂ, ಶ್ರೀಮಾನ್ ಪೂರ್ಣ ರಾಘವೇಂದ್ರ ರಾಯರವರೂ ಏನನ್ನು ಮಾಡುವುದಕ್ಕೂ ತೋರದೆ ದಿಗ್ಭ್ರಮೆ ಹಿಡಿದವ ರಾದರು. ಪ್ರತ್ಯುತ್ಪನ್ನಮತಿಗಳಾದ ಶ್ರೀಮಾನ್ ಪೂರ್ಣ ರಾಘವೇಂದ್ರ ರಾಯರವರು ಮಹಾಪ್ರಭುಗಳವರು ಉಸಿರಾಡಲು ಸ್ವಲ್ಪಮಟ್ಟಿಗಾದರೂ ಅನುಕೂಲವಾಗಲೆಂಬ ಉದ್ದೇಶದಿಂದ ಕಾಂಪೌಂಡರಿಂದ "ಮಸ್ಟರ್ಡ್ ಪ್ಲ್ಯಾಸ್ಟರ್" ಎಂಬ ಸಾಸಿವೆ ಮುಲಾಮನ್ನು ಮಾಡಿಸಿ ಕೊರಳಿಗೆ ಲೇಪಹಾಕಿಸಿದರು. ಶ್ರೀ ವಾಣೀವಿಲಾಸ ಸನ್ನಿಧಾನದವರು ತಾವು ಪ್ರಾಣ ಕ್ಕಿಂತಲೂ ಹೆಚ್ಚಾಗಿ ಪ್ರೀತಿಸುತ್ತಿದ್ದ ಮಹಾಪ್ರಭುಗಳವರ ಸಂಕಟವನ್ನು ನೋಡಿ ಕಂಬನಿದುಂಬಿ ಬಿಸಿಬಿಸಿಯಾಗಿ ಕೊಂಚ ಹಾಲನ್ನು ಕುಡಿಸಿದರೆ ವಾಸಿಯೋ ಏನೋ—ಎಂದು ಭಾವಿಸಿ ತಾವೇ ಹಾಲನ್ನು ತಂದರು; ಅಲ್ಲದೆ ಒಂದೆರಡು ಗುಟುಕುಗಳಷ್ಟು ಹಾಲನ್ನು ಬಿಸಿಬಿಸಿಯಾಗಿ ಕುಡಿಸಿದರು. ಆದರೂ ಅದರಿಂದ ಪ್ರಯೋಜನವೇನೂ ಆಗಲಿಲ್ಲ. ಶ್ರೀಮಾನ್ ಅಂಬಿಲ್ ನರಸಿಂಹ ಐಯಂಗಾರ್ಯರವರು ತಿಳಿಸಿದ ಮೇರೆಗೆ ಶ್ರೀಮಾನ್ ಪೂರ್ಣ ರಾಘವೇಂದ್ರರಾಯರವರು ಡಾಕ್ಟರ್ ಬೆನ್ಸನ್‌ರವರನ್ನು ಕರೆದುಕೊಂಡು ಬರಲು— ಅತ್ಯಂತ ವೇಗವಾಗಿ ಹೋಗತಕ್ಕ ಕುದುರೆಗಳನ್ನು ಕಟ್ಟಿಸಿದ್ದ

ಬಂಡಿಯಲ್ಲಿ— ಹೊರಟರು. ಭರತಖಂಡದ ನಾನಾ ಭಾಗಗಳಿಂದಲೂ ಬಂದಿದ್ದ ಸಾವಿರ ಮಂದಿ ವೈದ್ಯರುಗಳೂ ಕಲ್ಕತ್ತಾ ನಗರದ ವೈದ್ಯರುಗಳೂ ಸೇರಿದ್ದ ಸಮ್ಮೇಳನದಲ್ಲಿ ಡಾಕ್ಟರ್ ಬೆನ್ಸನ್‌ರವರನ್ನು ಸಮೀಪಿಸಿ ಕರೆದು ಕೊಂಡುಬರುವುದು ಸುಲಭಸಾಧ್ಯವಾಗಿರಲಿಲ್ಲ. ಸಮ್ಮೇಳನ ಮಂದಿರ ದಿಂದ ಬಂದ ಡಾಕ್ಟರ್ ಬೆನ್ಸನ್‌ರವರು ತಮ್ಮ ಬುದ್ಧಿಯನ್ನೆಲ್ಲ ಉಪಯೋಗಿಸಿ ಚಿಕಿತ್ಸೆ ಮಾಡಿದರು.

ಮಾರನೆಯ ದಿನದ ವೇಳೆಗೆ (ಎಂದರೆ, ೧೮೯೪ನೆಯ ಇಸವಿ ಡಿಸೆಂಬರು ತಿಂಗಳು ೨೬ನೆಯ ತಾರೀಖಿನ ವೇಳೆಗೆ) ಮಹಾಪ್ರಭುಗಳ ವರಿಗೆ ಸಂಭವಿಸಿದ್ದ ವ್ಯಾಧಿಯು ಉಲ್ಬಣವಾಗಿ, ಬಾಧೆಯು ಸಹಿಸಲಶಕ್ಯವಾಗಿ, ಉತ್ಕಟವಾಗಿ ಪರಿಣಮಿಸಿತು. ಅಂತಹ ಸ್ಥಿತಿಯಲ್ಲಿ ಕೂಡ, ಶ್ರೀ ಚಾಮರಾಜೇಂದ್ರ ಒಡೆಯರವರು, ಶ್ರೀ ಚಾಮುಂಡೇಶ್ವರೀ ದೇವಿಯವರ ಅರ್ಚನೆ ಮುಂತಾದ ನಿತ್ಯಾನುಷ್ಠಾನವನ್ನು ಆಗ್ಗೆ ಸಾಧ್ಯವಾದ ಮಟ್ಟಿಗೂ ನೆರವೇರಿಸುತ್ತಿದ್ದರು. ಮಹಾಪ್ರಭುಗಳ ದೇಹಸ್ಥಿತಿಯು ಆತಂಕ ಜನಕವಾಗಿ ಪರಿಣಮಿಸಿದುದನ್ನು ಕಂಡು ದಿವಾನ್‌ರವರಾದ ಸರ್ ಕೆ. ಶೇಷಾದ್ರಿ ಐಯರವರು ಕಲ್ಕತ್ತಾನಗರದ ವೈದ್ಯಮಹಾಪಾಠಶಾಲೆಯಲ್ಲಿ (ಎಂದರೆ, ಮೆಡಿಕಲ್ ಕಾಲೇಜಿನಲ್ಲಿ) ಚಿಕಿತ್ಸಾಶಾಸ್ತ್ರ ಬೋಧಕರೂ ಮತ್ತು ಕಲ್ಕತ್ತಾ ನಗರದಲ್ಲೆಲ್ಲ ಸುಪ್ರಸಿದ್ಧ ವೈದ್ಯ ಶ್ರೇಷ್ಠರೂ ಆಗಿದ್ದ ಡಾಕ್ಟರ್ ಮೆಕ್ಡೊನೆಲ್‌ರವರನ್ನು ಕರೆಯಿಸಿದರು. ಅವರು ಡಾಕ್ಟರ್ ಬೆನ್ಸನ್‌ರವರ ಸಹಾಯದಿಂದ ಮಹಾಪ್ರಭುಗಳವರ ದೇಹಸ್ಥಿತಿಯನ್ನು ಜಾಗರೂಕತೆಯಿಂದ ಪರೀಕ್ಷಿಸಿ, ಅವರಿಗೆ ಸಂಭವಿಸಿದ್ದುದು "ಡಿಫ್ತೀರಿಯಾ"ಎಂಬ ಕ್ರೂರವ್ಯಾಧಿಯೆಂದು ನಿರ್ಧರಿಸಿದರು. ಗಂಟಲಿನ ಸಂಬಂಧವಾದ ಆ ಘೋರ ಜಾಡ್ಯವು ಗುಣವಾಗುವುದು ವಿರಳವಾದರೂ, ಮಹಾಸ್ವಾಮಿಯವರ ಚಿಕ್ಕವಯಸ್ಸನ್ನೂ ದೃಢಕಾಯವನ್ನೂ ನೋಡಿದರೆ ರೋಗಪರಿಹಾರದ ನಿರೀಕ್ಷೆಗೆ ಕಾರಣವುಂಟೆಂದು ಸೂಚಿಸಿ ವೈದ್ಯರಿಬ್ಬರೂ ಧೈರ್ಯ ಹೇಳಿದರು.

**ಉತ್ಕಟ ಬಾಧೆ**

"ಡಿಫ್ತೀರಿಯಾ" ವ್ಯಾಧಿಯನ್ನು ಹಿಮ್ಮೆಟ್ಟಿಸುವ ಸೂಚೀ ಮುಖ ಚಿಕಿತ್ಸಾವಿಧಾನವನ್ನು (ಎಂದರೆ, "ಇಂಜೆಕ್ಷನ್" ಚಿಕಿತ್ಸಾವಿಧಾನವನ್ನು) ಆಗ್ಗೆ ಒಂದೆರಡು ವರ್ಷಗಳ ಹಿಂದೆ "ಪಾಸ್ಟ್ಯೂರ್ ಇನ್‌ಸ್ಟಿಟ್ಯೂಟ್" ಎಂಬ ಸಂಶೋಧನ ಸಂಸ್ಥೆಯವರು ಕಂಡುಹಿಡಿದಿದ್ದರು. ಅದಕ್ಕೆ ಬೇಕಾದ ಔಷಧವನ್ನು ಸಿದ್ಧಮಾಡಿ ಅವರು ಮಾರಾಟಕ್ಕೆ ಕಳುಹಿಸುತ್ತಿದ್ದರು.

ಆ ಚಿಕಿತ್ಸೆಯು ಮಹಾಪ್ರಭುಗಳಿಗೆ ನಡೆಯಬೇಕೆಂದು ನಿರ್ಧರವಾಗಿ, ಆ ಔಷಧವನ್ನು (ಎಂದರೆ, ಔಷಧ ದ್ರವವನ್ನು ತುಂಬಿದ್ದ "ಆಂಟಿಟಾಕ್ಸಿನ್ ಕ್ಯಾಪ್ಸೂಲು"ಗಳನ್ನು) ಕೊಂಡು ತರಲು ೧೮೯೪ನೆಯ ಇಸವಿ ಡಿಸೆಂಬರು ೨೭ನೆಯ ತಾರೀಖಿನ ದಿನ ಬೆಳಗ್ಗೆ ಶ್ರೀಮಾನ್ ಪೂರ್ಣ ರಾಘವೇಂದ್ರರಾಯರವರಿಗೆ ದಿವಾನ್‌ರವರು ಅಪ್ಪಣೆ ಮಾಡಿದರು. ಆದರೆ ಬೆಳಗಿನಿಂದ ಮಧ್ಯಾಹ್ನದವರೆಗೂ ಆ ಮಹಾನಗರದಲ್ಲಿದ್ದ ವೈದ್ಯಶಾಲೆಗಳಲ್ಲೆಲ್ಲ ಮತ್ತು ಔಷಧದ ಅಂಗಡಿಗಳಲ್ಲೆಲ್ಲ ವಿಚಾರಿಸಿದರೂ ಆ ಔಷಧವು ದೊರೆಯಲಿಲ್ಲ. ಎಲ್ಲಿಯಾದರೂ ಔಷಧವು ದೊರೆತರೆ ಸಾಕೆಂದೂ ಅದರಿಂದ ಮಹಾಪ್ರಭುಗಳವರಿಗೆ ಆ ವ್ಯಾಧಿಯು ಗುಣವಾದರೆ ಸಾಕೆಂದೂ ಆತಂಕಪಡುತ್ತ ಎಷ್ಟು ಕ್ರಯವನ್ನಾದರೂ ಕೊಡಲು ಸಿದ್ಧವಾಗಿದ್ದೂ ಶ್ರೀಮಾನ್ ಪೂರ್ಣ ರಾಘವೇಂದ್ರರಾಯರವರು ಪ್ರಯತ್ನಪಟ್ಟುದೆಲ್ಲ ವ್ಯರ್ಥವಾಯಿತು. ಆ ರೋಗವು ಆಗಾಗ್ಗೆ ಒಂದೊಂದು ಸಲ ಕಲ್ಕತ್ತಾ ನಗರದಲ್ಲಿ ಒಬ್ಬೊಬ್ಬರಿಗೆ ವಿರಳವಾಗಿ ಬರುತ್ತಿದ್ದುದೇ ಅಲ್ಲಿ ಹೆಚ್ಚಾಗಿ ಆ ಔಷಧವನ್ನು ತರಿಸಿಟ್ಟಿಲ್ಲದಿದ್ದುದಕ್ಕೆ ಕಾರಣ. ಔಷಧಗಳ ಒಂದು ಅಂಗಡಿಯಲ್ಲಿ ಮಾತ್ರ ಆ ಔಷಧವನ್ನಿಟ್ಟದ್ದರೆಂದೂ, ಹಿಂದಿನ ದಿನ ಅದು ಪೂರ್ತಿಯಾಗಿ ವ್ಯಾಪಾರವಾಗಿಹೋಗಿದ್ದಿತೆಂದೂ ತಿಳಿಯಬಂದುದರಿಂದ, ಶ್ರೀಮಾನ್ ಪೂರ್ಣ ರಾಘವೇಂದ್ರರಾಯರವರು ವಿಫಲ ಮನೋರಥರಾಗಿ ಕಳೆಗುಂದಿ ಹಿಂದಿರುಗಿದರು.

ಔಷಧವು ದೊರೆಯದೆಹೋದುದಕ್ಕಾಗಿ ಡಾಕ್ಟರ್ ಮೆಕ್ಡೊನೆಲ್‌ರವರಿಗೂ ಡಾಕ್ಟರ್ ಬೆನ್ಸನ್‌ರವರಿಗೂ ಉಂಟಾದ ಉತ್ಸಾಹ ಭಂಗವನ್ನು ವರ್ಣಿಸಲಳವಲ್ಲ. ಆ ಔಷಧದ ಹೊರತು ಮತ್ತಾವುದನ್ನು ಪ್ರಯೋಗಿಸಿದರೂ ರೋಗವು ಗುಣವಾಗುವ ಸಂಭವವಿರಲಿಲ್ಲ. ಆದಕಾರಣ, ಅವರಿಬ್ಬರೂ ಹತಾಶರಾಗಿ ಮುಂದಿನ ಚಿಕಿತ್ಸಾ ವಿಧಾನವನ್ನು ಕುರಿತು ಮೆಲ್ಲಗೆ ಮಾತನಾಡಿಕೊಳ್ಳಲಾರಂಭಿಸಿದರು. ಮಹಾಪ್ರಭುಗಳವರು ಅಲ್ಲಿಗೆ ಸ್ವಲ್ಪದೂರದಲ್ಲಿ ಮಂಚದಮೇಲೆ ಪವಳಿಸಿದ್ದರು. ಆಗಿನ ದುಸ್ಸಹವಾದ ಯಾತನೆಯ ಮಧ್ಯದಲ್ಲಿ ಕೂಡ, ಸಮಚಿತ್ತರಾಗಿ, ಮಹಾಪ್ರಭುಗಳವರು ಸರ್ ಕೆ. ಶೇಷಾದ್ರಿ ಐಯರವರೊಡನೆಯೂ, ಶ್ರೀಮಾನ್ ಅಂಬಿಲ್ ನರಸಿಂಹ ಐಯಂಗಾರ್ಯರವರೊಡನೆಯೂ, "ಏನು, ಡಾಕ್ಟರುಗಳು ಬಹಳ ಯೋಚನೆಯಲ್ಲಿದ್ದಾರೆ. ಅಪ್ಪಣೆ ಚೀಟಿ ಬರುವಹಾಗಿದೆಯೋ ಹೇಗೆ?" ಎಂದು ಕೇಳಿ ನಕ್ಕರು. ಆ ಪ್ರಶ್ನೆಯನ್ನು ಕೇಳಿ ಅವರಿಬ್ಬರೂ ಅಪ್ರತಿಭರಾಗಿ ಆ ಬಗೆಯ ಅಮಂಗಳ ವಚನಗಳನ್ನಾಡಕೂಡದೆಂದು ಅವರನ್ನು ಬೇಡಿಕೊಂಡರು.

೧೮೯೪ನೆಯ ಇಸವಿ ಡಿಸೆಂಬರು ೨೭ನೆಯ ತಾರೀಖಿನ ರಾತ್ರಿಯ ವೇಳೆಗೆ ವ್ಯಾಧಿಯು ಉಲ್ಬಣವಾಗಿ ಹಿಂಸೆಯನ್ನು ತಾಳುವುದು ಮಹಾಸ್ವಾಮಿಯವರಿಗೆ ಬಹಳ ಕಷ್ಟವಾಯಿತು.

**ನಿರ್ಯಾಣ**

ರೋಗದ ದೆಸೆಯಿಂದ ಸಂಭವಿಸಿದ್ದ ದೇಹ ಬಾಧೆಯ ಜೊತೆಗೆ, ಆ ದಿನ ಸ್ನಾನ ಸಂಧ್ಯಾವಂದನೆಗಳನ್ನೂ, ದೇವತಾರ್ಚನೆಯನ್ನೂ ಎಂದಿನಂತೆ ಮಾಡಲು ಸಾಧ್ಯವಿಲ್ಲದೆಹೋಗಿ ಅತ್ಯಂತ ಸೂಕ್ಷ್ಮವಾಗಿ ಕುಲದೇವತೆಯ ಅರ್ಚನೆಯನ್ನು ಪೂರೈಸಬೇಕಾಗಿಬಂದುದರ ದೆಸೆಯಿಂದುಂಟಾದ ಮನಸ್ಸಿನ ಯಾತನೆಯೂ ಸೇರಿದ್ದಿತು. ಮರಣವು ಸನ್ನಿಹಿತವಾಗುತ್ತಿದ್ದಂತೆ ತೋರುತ್ತಿದ್ದ ಅಂದಿನ ಸ್ಥಿತಿಯಲ್ಲಿ ಕೂಡ ಅವರು ಸಂತೋಷಚಿತ್ತರಾಗಿದ್ದುದನ್ನು ಕಂಡು, ಶ್ರೀ ವಾಣೀವಿಲಾಸ ಸನ್ನಿಧಾನದವರು ಸಹಿಸಲಶಕ್ಯವಾದ ವೇದನೆಯನ್ನನುಭವಿಸಿದರು. ತಮ್ಮ ಪ್ರಾಣಾಧಿಕರೆಲ್ಲಿ ಕಣ್ಮರೆಯಾಗುವರೋ ಎಂದು ಶಂಕಿಸಿ ರೋದಿಸಿದರು. ಪರಿಜನರ ವಿಷಯದಲ್ಲಿ ಕರುಣಾಳುಗಳಾಗಿ ಆಶ್ರಿತವತ್ಸಲರೆನಿಸಿದ್ದ ಮಹಾಪ್ರಭುಗಳವರು ರೋಗವು ಉಲ್ಬಣವಾಗಿದ್ದ ಆಗಿನ ಸ್ಥಿತಿಯಲ್ಲಿ ಕೂಡ, ಒಂದು ಔತಣ ಕೂಟಕ್ಕೆ ಹೋಗಲಿಚ್ಛಿಸಿದ ಡಾಕ್ಟರ್ ಬೆನ್ಸನ್‌ರವರಿಗೆ ಅನುಮತಿಯನ್ನು ದಯಪಾಲಿಸಿದರು; "ನಮಗೆ ಹಿಂಸೆಯಾದರೆ, ಅವರಿಗೆ ಬಂದಿರುವ ಆಹ್ವಾನಕ್ಕೆ ಮನ್ನಣೆಯನ್ನೀಯದೆ ಅಲಕ್ಷ್ಯಮಾಡಬೇಕೆ? ಅವಶ್ಯವಾಗಿ ಹೋಗಿಬರಲಿ" ಎಂದು ಅಪ್ಪಣೆ ಕೊಡಿಸಿದರು. ಮಹಾಪ್ರಭುಗಳವರ ಮೃದುಸ್ವಭಾವವನ್ನು ಸರ್ ಕೆ. ಶೇಷಾದ್ರಿ ಐಯರವರು ಪ್ರೀತಿ ಭಕ್ತಿಗಳಿಂದ ತಮ್ಮ ಸಂಗಡಿಗರೊಡನೆ ಕೊಂಡಾಡಿ ಶ್ಲಾಘಿಸಿದರಾದರೂ, ಡಾಕ್ಟರ್ ಬೆನ್ಸನ್‌ರವರು ತಮಗೆ ಹೇಳಿಹೋಗಲು ಬಂದಾಗ, "ನೋಡಿ ಡಾಕ್ಟರವರೇ! ಇದು ಸಂತೋಷ ಕೂಟಗಳಲ್ಲಿ ಭಾಗವಹಿಸಲು ಸಮಯವಲ್ಲ. ನೀವು ಒಪ್ಪಿಕೊಂಡಿರುವ ಔತಣಕ್ಕೆ ಬರಲಾಗುವುದಿಲ್ಲವೆಂದು ಸೂಚಿಸಿ ನಿಮ್ಮ ಜವಾಬ್ದಾರಿಯನ್ನರಿತು ವರ್ತಿಸಿರಿ"* ಎಂದು ಹೇಳಿ ವೈದ್ಯರನ್ನು ನಿಲ್ಲಿಸಿಕೊಂಡರು. ಮಹಾಪ್ರಭುಗಳವರ ಬಾಧೆಯು ನಿಮಿಷ ನಿಮಿಷವೂ ಅಧಿಕವಾಯಿತು. ಅದನ್ನು ಕಂಡು, ಡಾಕ್ಟರ್ ಬೆನ್ಸನ್‌ರವರು ಅಂದು ರಾತ್ರಿ ತಾವು ಔತಣ ಕೂಟಕ್ಕೆ ಹೋಗದಂತೆ ಸರ್ ಕೆ. ಶೇಷಾದ್ರಿ ಐಯರವರು ತಪ್ಪಿಸಿದುದರಿಂದ ತಮಗೆ ಪರಮೋಪಕಾರ

---

* "Well, Doctor, this is no time for participating in entertainments. You have to cry off the engagement, realising your responsibility."

ಮಾಡಿದಂತಾಯಿತೆಂದು ಸೂಚಿಸಿ ಡಾಕ್ಟರ್ ಮೆಕ್ಡೊನೆಲ್‌ರವರೊಡನೆ ಮಹಾಪ್ರಭುಗಳವರಿಗೆ ತಮ್ಮ ಅಂತಿಮ ಸೇವೆಯನ್ನು ಸಲ್ಲಿಸಿದರು. ಭವರೋಗ ವೈದ್ಯನಾದ ಪರಮೇಶ್ವರನು ಜೀವಪಕ್ಷಿಯನ್ನು ತನ್ನೆಡೆಗೆ ಬರಮಾಡಿಕೊಳ್ಳುವಾಗ ವೈದ್ಯರಾರುತಾನೆ ಅದನ್ನು ದೇಹದಲ್ಲಿ ನಿಲ್ಲಿಸಿಕೊಳ್ಳಬಲ್ಲರು ? ವೈದ್ಯರುಗಳ ಚಿಕಿತ್ಸೆಗಳೆಲ್ಲ ನಿಷ್ಫಲವಾದುವು. ಅವರು ಕೊಡಲಿಚ್ಛಿಸಿದ ಉತ್ತೇಜಕವಾದ ಔಷಧಗಳನ್ನು ಮೊದಲು ಬೇಡವೆಂದು ಹೇಳಿಯೂ ದರ್ಬಾರು ಬಕ್ಷಿಯವರ ಬಲವತ್ತರವಾದ ಪ್ರಾರ್ಥನೆಯನ್ನು ಲಾಲಿಸಿ ಮಹಾಪ್ರಭುಗಳವರು ಅತಿ ಪ್ರಯಾಸದಿಂದ ಒಂದೆರಡು ತೊಟ್ಟುಗಳನ್ನು ಸೇವಿಸಿದರು; ತಮ್ಮ ಮರಣಕಾಲವು ಸನ್ನಿಹಿತವಾಯಿತೆಂದು ನಿರುದ್ವಿಗ್ನಚಿತ್ತರಾಗಿಯೇ ಸೂಚಿಸಿ, ಇನ್ನು ಔಷಧಗಳಿಂದ ಪ್ರಯೋಜನವಾಗುವಂತಿರಲಿಲ್ಲವೆಂದು ತಿಳಿಸಿದರು. ಪ್ರಜ್ಞೆತಪ್ಪುವುದಕ್ಕೆ ಮುಂಚೆ ಅವರು ತೊದಲ್ನುಡಿಯಲ್ಲಿ "ತಾಯಿ ಚಾಮುಂಡೇಶ್ವರಿ" ಎಂಬ ಮಾತುಗಳನ್ನು ಕೊನೆಯ ಸಾರಿ ಹೇಳಿ ಕಣ್ಣುಗಳನ್ನು ಮುಚ್ಚಿಕೊಂಡರು. ಒಡನೆಯೇ ಅಂತಿಮಕಾಲದ ಲಕ್ಷಣಗಳೆಲ್ಲ ಕಾಣಿಸಿಕೊಂಡು, ಶ್ವಾಸವು ಸೆಳೆಯಲಾರಂಭಿಸಿತು.

ಆ ವೇಳೆಗೆ (೧೮೯೪ನೆಯ ಇಸವಿ ಡಿಸೆಂಬರು ೨೮ನೆಯ ತಾರೀಖು) ಪ್ರಾತಃಕಾಲ ಐದು ಘಂಟೆಯ ಸಮಯವಾಯಿತು. ಆ ಬಳಿಕ ಸ್ವಲ್ಪ ಹೊತ್ತಿನೊಳಗಾಗಿ ಶ್ರೀ ಚಾಮರಾಜೇಂದ್ರ ಒಡೆಯರವರ ಇಹಲೋಕ ವ್ಯಾಪಾರವು ಕೊನೆಮುಟ್ಟಿ, ಅವರು ಪರಲೋಕ ಯಾತ್ರೆ ಮಾಡಿದರು. ಪತಿವಿಯೋಗವು ಸಂಭವಿಸಿದುದಕ್ಕಾಗಿ ಮಹಾರಾಣಿಯವರಿಗುಂಟಾದ ದುಃಖವು ಅಷ್ಟಿಷ್ಟಲ್ಲ. ಅವರು ಶೋಕವಿಹ್ವಲರಾಗಿ ಧೊಪ್ಪನೆ ನೆಲದ ಮೇಲೆ ಬಿದ್ದು, ಮತ್ತೆ ಮತ್ತೆ ಮೂರ್ಛೆಹೊಂದಿ ಎಚ್ಚೆತ್ತು, ಆ ಬಳಿಕ ರೋದನ ಮಾಡತೊಡಗಿದರು.

**ಶೋಕ ಸಂತಾಪಗಳು**

ದರ್ಬಾರು ಬಕ್ಷಿಯವರಾಗಿದ್ದ ರಾಯ್ ಬಹದ್ದೂರ್ ಶ್ರೀಮಾನ್ ಅಂಬಿಲ್ ನರಸಿಂಹ ಐಯಂಗಾರ್ಯರವರು ದಿವಾನ್‌ರವರಿಗೆ ಪ್ರಭು ವಿಯೋಗದ ದುಃಖವಾರ್ತೆಯನ್ನು ತಿಳಿಸಿಬರಲು ಶ್ರೀಮಾನ್ ಪೂರ್ಣ ರಾಘವೇಂದ್ರರಾಯರವರನ್ನು ಕಳುಹಿಸಿದರು. ದಿವಾನ್‌ರವರು ಇಳಿದುಕೊಂಡಿದ್ದ ಬಂಗಲೆಯು ಅಲ್ಲಿಗೆ ಐದು ಮೈಲಿಗಳ ದೂರದಲ್ಲಿದ್ದಿತಾದರೂ, ಶ್ರೀಮಾನ್ ಪೂರ್ಣ ರಾಘವೇಂದ್ರರಾಯರವರು ಸ್ವಲ್ಪದೂರ ಹೋಗುವುದರೊಳಗಾಗಿ ಅವರೇ ಎದುರಿಗೆ ಬರುತ್ತಿದ್ದುದನ್ನು ಕಂಡರು. ಉಭಯತ್ರರ

ಬಂಡಿಗಳೂ ನಿಂತಮೇಲೆ ಶ್ರೀಮಾನ್ ಪೂರ್ಣ ರಾಘವೇಂದ್ರರಾಯರವರು ಮಹಾಪ್ರಭುಗಳ ಪರಲೋಕಯಾತ್ರೆಯ ಸುದ್ದಿಯನ್ನು ತಿಳಿಸಿದಾಗ ಸರ್ ಕೆ. ಶೇಷಾದ್ರಿ ಐಯರವರು "ಶಿವ ಶಿವಾ" ಎಂದು ಹೇಳಿ ತಮ್ಮ ಅಂಗೈಗಳಿಂದ ಕಿವಿಗಳನ್ನು ಮುಚ್ಚಿಕೊಂಡರು. ದುಃಖಾವೇಗದಿಂದ ಅವರು ಒಂದೆರಡು ನಿಮಿಷಗಳ ಕಾಲ ಸ್ಮೃತಿ ತಪ್ಪಿದಂತಿದ್ದರು. ಮಹಾಪ್ರಭುಗಳವರ ಮೃತಕಳೇಬರವಿದ್ದೆಡೆಗೆ ಶ್ರೀಮಾನ್ ಪೂರ್ಣ ರಾಘವೇಂದ್ರರಾಯರವರೊಡನೆ ದಯಮಾಡಿದಾಗ ಮಹಾರಾಣಿಯವರ ಪ್ರಲಾಪವನ್ನು ಕಂಡೊಡನೆಯೇ ಅವರು ಮಗುವಿನಂತೆ ರೋದಿಸಿದರು. ಶ್ರೀಮಾನ್ ಅಂಬಿಲ್ ನರಸಿಂಹ ಐಯಂಗಾರ್ಯರವರೂ ಮತ್ತು ಶ್ರೀಮಾನ್ ಪೂರ್ಣ ರಾಘವೇಂದ್ರರಾಯರವರೂ ಬಿಕ್ಕಿಬಿಕ್ಕಿ ಅಳುತ್ತ, "ಇವೊತ್ತು ತಂದೆಯಿಲ್ಲದ ತಬ್ಬಲಿಗಳಾದೆವು" ಎಂದು ಹಂಬಲಿಸಿದರು. ಶ್ರೀಮಾನ್ ಶೇಷಾದ್ರಿ ಐಯರವರು ಕಲ್ಕತ್ತಾ ನಗರದಿಂದ ಹಿಂತಿರುಗಿದ ಬಳಿಕ ಎರಡು ಮೂರು ತಿಂಗಳುಗಳಾದಮೇಲೆ ಕೂಡ, ತಮ್ಮ ಸಮೀಪ ಬಂಧುಗಳೊಡನೆ ತಾವೆಷ್ಟು ಸಮಾಧಾನ ಮಾಡಿಕೊಂಡರೂ ಶೋಕವು ಕಡಮೆಯಾಗದೆಂದೂ, ಶ್ರೀ ಚಾಮರಾಜೇಂದ್ರ ಒಡೆಯರವರ ಚಿತ್ರವು ತಮ್ಮ ಹೃದಯದಿಂದ ಮರೆಯಾಗದೆಂದೂ ಹೇಳಿಕೊಂಡು ಕಣ್ಣೀರು ಸುರಿಸಿದರು. ಅವರುಗಳ ಸ್ಥಿತಿಯೇ ಹಾಗಿದ್ದಮೇಲೆ, ಇನ್ನು ಮಹಾರಾಣಿಯವರ ಮತ್ತು ಪಿತೃವಿಯೋಗ ದುಃಖಕ್ಕೆ ಗುರಿಯಾದ ಐವರು ಮಕ್ಕಳ ಶೋಕವನ್ನು ವರ್ಣಿಸುವುದಾದರೂ ಸಾಧ್ಯವೆ?

ಮಹಾಪ್ರಭುಗಳವರು ತಮ್ಮ ಸದ್ಗುಣಗಳ ಪ್ರಭಾವದಿಂದಲೂ, ರಾಜ್ಯಭಾರ ನಿರ್ವಹಣ ಸಾಮರ್ಥ್ಯದಿಂದಲೂ ಸ್ವದೇಶ ಪರದೇಶಗಳವರ ಮನಸ್ಸನ್ನೆಲ್ಲ ಸೆಳೆದಿದ್ದುದನ್ನು ಗಮನಿಸಿದರೆ, ಬಂಧುವರ್ಗದವರೂ ಪರಿಜನರೂ ದುಸ್ಸಹವಾದ ದುಃಖಕ್ಕೆ ಗುರಿಯಾದುದೇನೂ ಆಶ್ಚರ್ಯವಲ್ಲ. ಅಲಹಾಬಾದಿನ "ಪಯನೀರ್" ಪತ್ರಿಕೆಯಲ್ಲಿ ಸೂಚಿತವಾದಂತೆ, "ಚೆನ್ನಾಗಿ ವಿದ್ಯಾಭ್ಯಾಸ ಮಾಡಿದವರೂ, ಸ್ನೇಹಶೀಲರೂ, ಹರ್ಷಚಿತ್ತರೂ, ಆಟಪಾಟಗಳಲ್ಲಿ ಸಮರ್ಥರೂ, ಉದಾರ ಮನಸ್ಸಿನವರಾದ ಸುಸಂಸ್ಕೃತರೂ ಆಗಿದ್ದ ಶ್ರೀಮನ್ಮಹಾರಾಜ ಶ್ರೀ ಚಾಮರಾಜೇಂದ್ರ ಒಡೆಯರವರು ತಮ್ಮ ಸಂಸ್ಥಾನದಿಂದ ಆಚೆಗೆ ಬಹು ದೂರದ ವರೆಗಿನ ಪ್ರಾಂತಗಳ ಜನಗಳ ಪ್ರೀತಿ ಗೌರವಗಳಿಗೆ ಪಾತ್ರರಾಗಿದ್ದರು."*

* "Well-educated, amiable, genial, a good sportsman and high-minded gentleman, Maharaja Chamarajendra Wadiyar gained affection and esteem far beyond the limits of his own territories."—*The Pioneer.*

ವಿದೇಶಗಳಲ್ಲಿ ಕೂಡ ಮಹಾಪ್ರಭುಗಳವರಿಗೆ ಅನೇಕ ಸನ್ಮಿತ್ರರಿದ್ದರು. ಮಹಾಪ್ರಭುಗಳ ಸ್ವಭಾವವನ್ನು ಚೆನ್ನಾಗಿ ಅರಿತಿದ್ದವರಾದ ಶ್ರೀಮಾನ್ ರೈಸ್ ಅವರು ಹೇಳಿರುವುದು ಕೂಡ ಮನೋಜ್ಞವಾಗಿದೆ: "ಗಾಂಭೀರ್ಯವುಳ್ಳವರೂ, ನಿಗರ್ವಿಗಳೂ ಆಗಿದ್ದ ಆಳಿದ ಮಹಾಸ್ವಾಮಿಯವರ ನಡೆನುಡಿಗಳು ಸುಸಂಸ್ಕೃತನಾದ ಇಂಗ್ಲಿಷ್ ದೊಡ್ಡಮನುಷ್ಯನ ನಡೆನುಡಿಗಳಂತಿದ್ದುವು. ಕುದುರೆ ಸವಾರಿಯಲ್ಲಿಯೂ, ಕುದುರೆ ಬಂಡಿಯನ್ನು ನಡೆಯಿಸುವುದರಲ್ಲಿಯೂ ಅವರು ಚತುರರಾಗಿದ್ದರು. ಆಟಪಾಟಗಳಲ್ಲಿ ಅವರಿಗೆ ತೀವ್ರಾಸಕ್ತಿ. ಕುದುರೆಯ ಜೂಜಿನ ವ್ಯವಸ್ಥೆಗೆ ಅವರು ಉದಾರವಾಗಿ ಧನ ಸಹಾಯ ಮಾಡುತ್ತಿದ್ದರು. ಅತಿಥಿ ಸತ್ಕಾರದಲ್ಲಿ ವಿಶೇಷ ಧಾರಾಳ ಬುದ್ಧಿಯಿಂದಲೂ ಆದರಾತಿಶಯಗಳಿಂದಲೂ ವರ್ತಿಸುತ್ತಿದ್ದರು. ಹಿಂದೂ ಸಂಪ್ರದಾಯಗಳನ್ನು ಬಹು ಜಾಗರೂಕತೆಯಿಂದ ಅನುಸರಿಸಿ ಆಚರಣೆಯಲ್ಲಿಟ್ಟುಕೊಂಡಿದ್ದರು. ಯೂರೋಪಿಯನ್ ಜನರಿಗೂ ಭಾರತೀಯರಿಗೂ ಅವರು ಅಚ್ಚುಮೆಚ್ಚಾಗಿದ್ದರು........ ಇಂಗ್ಲೆಂಡಿನ ಸಮ್ರಾಜ್ಞಿಯವರ ಆಸ್ಥಾನವು ಕೂಡ ಘನತೆ ಗಾಂಭೀರ್ಯಗಳಲ್ಲಿಯೂ ಸೌಶೀಲ್ಯ ಸಭ್ಯವರ್ತನೆಗಳಲ್ಲಿಯೂ, ಆಳಿದ ಮಹಾಸ್ವಾಮಿಯವರಾದ ಶ್ರೀಮನ್ಮಹಾರಾಜರವರ ಆಸ್ಥಾನಕ್ಕಿಂತ ಮಿಗಿಲೆನಿಸಿರಲಿಲ್ಲ. ಆಳಿದ ಮಹಾಸ್ವಾಮಿಯವರಿಗೆ ತಮ್ಮ ಕುಟುಂಬದವರಲ್ಲಿ ವಿಶೇಷ ಪ್ರೀತಿ. ಅವರು ಸುಸಂಸ್ಕೃತರೂ, ಉತ್ತಮವಾದ ಅಭಿರುಚಿಯುಳ್ಳವರೂ ಆಗಿದ್ದರು. ಅವರಿಗೆ ಪಾಶ್ಚಾತ್ಯ ಸಂಗೀತದಲ್ಲಿಯೂ ಕಲಾಪೂರ್ಣ ವಸ್ತುಗಳಲ್ಲಿಯೂ ವಿಶೇಷಾದರ. ರಾಜ್ಯಾಡಳಿತವಿಚಾರ ಸಂಬಂಧವಾದ ಕಾರ್ಯಕಲಾಪಗಳಲ್ಲಿ ಅವರು ಉದ್ಯೋಗಶೀಲತೆಯಿಂದಲೂ ಅಂತರಾತ್ಮಸಾಕ್ಷಿಯಾಗಿಯೂ ಶ್ರಮಿಸುತ್ತಿದ್ದರು. ಮಳೆಗಾಲದಲ್ಲಿ ಸ್ವಲ್ಪಕಾಲವನ್ನು ಮೈಸೂರು ನಗರದಲ್ಲಿಯೂ ಉಳಿದ ಅವಧಿಯನ್ನು ಬೆಂಗಳೂರು ನಗರದಲ್ಲಿಯೂ ಕಳೆಯುತ್ತಿದ್ದರು. ಚಳಿಗಾಲದಲ್ಲಿ ಭರತಖಂಡದ ಇತರ ಭಾಗಗಳಲ್ಲಿ ಸಂಚರಿಸಿ, ಬೇಸಗೆಯಲ್ಲಿ ಉದಕಮಂಡಲದ ಅರಮನೆಯಲ್ಲಿರುತ್ತಿದ್ದರು. ಆಳಿದ ಮಹಾಸ್ವಾಮಿಯವರು ಈ ರೀತಿ ಭರತಖಂಡದ ನಾನಾ ಪ್ರದೇಶಗಳನ್ನೂ ಪರಾಂಬರಿಸಿ, ಭರತಖಂಡದ ಸುಪ್ರಸಿದ್ಧರಾದ ಮಹನೀಯರಲ್ಲಿ ಬಹು ಮಂದಿಗಳ ಪರಿಚಯವನ್ನು ಪಡೆದಿದ್ದರು; ಅವರೆಲ್ಲರ ಮನಸ್ಸಿನಮೇಲೂ ತಮ್ಮ ಸದ್ಗುಣಗಳ ವರ್ಚಸ್ಸನ್ನು ಖಚಿತಗೊಳಿಸಿ ಅವರ ಚಿತ್ತವನ್ನಾಕರ್ಷಿಸಿದ್ದರು."

ಅಂತಹ ಪ್ರಭುಗಳನ್ನು ಕಳೆದುಕೊಂಡ ಪ್ರಭುಭಕ್ತರೂ, ಬಂಧು ಮಿತ್ರರೂ, ಪತ್ನೀಪುತ್ರರೂ, ಮತ್ತು ಪುತ್ರಿಯರೂ ಶೋಕ ಸಂತಪ್ತರಾಗಿ ದೆಸೆಗೆಟ್ಟರು. ಸರ್ ಕೆ. ಶೇಷಾದ್ರಿ ಐಯರರವರೂ, ಶ್ರೀಮಾನ್ ಅಂಬಿಲ್ ನರಸಿಂಹ ಐಯಂಗಾರ್ಯರವರೂ ಮಹಾರಾಣಿಯವರಿಗೆ ವಿಧ ವಿಧವಾಗಿ ಸಮಾಧಾನ ಹೇಳಿ, ದುಃಖಿಸಕೂಡದೆಂದು ಬೇಡಿಕೊಂಡರು.

ಶ್ರೀ ಚಾಮರಾಜೇಂದ್ರ ಒಡೆಯರವರು ಕಾಲವಶರಾದ ವಾರ್ತೆಯನ್ನು ಕೇಳಿ, ವೈಸ್ರಾಯಿಯವರು ವಿಷಾದಿಸಿ ಫ಼ಾರಿನ್ ಸೆಕ್ರಿಟೆರಿಯವರನ್ನೂ, ತಮ್ಮ ಅಂಗರಕ್ಷಕರನ್ನೂ, ಮಹಾರಾಣಿಯವರಿಗೆ ತಮ್ಮ ಸಂತಾಪವನ್ನು ಸೂಚಿಸಿ ಸಮಾಧಾನ ಹೇಳಲು ತಮ್ಮ ಪರವಾಗಿ ಕಳುಹಿಸಿ ಕೊಟ್ಟರು. ಆಗ ಮಹಾರಾಣಿಯವರು ರೋದಿಸುತ್ತ, ದುಃಖಭರದಲ್ಲಿ ತಮ್ಮ ಮಕ್ಕಳನ್ನು ಅವರಿಗೊಪ್ಪಿಸಿ, ಶ್ರೀ ಚಾಮರಾಜೇಂದ್ರ ಒಡೆಯರವರು ಆ ಮಕ್ಕಳನ್ನು ವೈಸ್ರಾಯಿಯವರಿಗೆ ಒಪ್ಪಿಸುವುದಕ್ಕಾಗಿಯೇ ಕಲ್ಕತ್ತಾ ನಗರಕ್ಕೆ ಬಂದ ಹಾಗಾಯಿತೆಂದು ಸೂಚಿಸಿದರು.

**ವೈಸ್ರಾಯಿಯವರ ಸಹಾನುಭೂತಿ**

ಅಂದು ಕಪೂರ್ಥಲ ಮಹಾರಾಜರವರು ವೈಸ್ರಾಯಿಯವರ ಸಂದರ್ಶನಕ್ಕಾಗಿ ಬರುವಂತೆಯೂ ಆ ಸಂಬಂಧದಲ್ಲಿ ಕುಶಾಲು ಫಿರಂಗಿಗಳು ಹಾರುವಂತೆಯೂ ಗೊತ್ತಾಗಿದ್ದಿತು. ಶ್ರೀ ಚಾಮರಾಜೇಂದ್ರ ಒಡೆಯರವರು ನಿರ್ಯಾಣಹೊಂದಿದ ಆ ದುಃಖಸಮಯದಲ್ಲಿ ಅದು ನಡೆಯತಕ್ಕುದಲ್ಲವೆಂದು ವೈಸ್ರಾಯಿಯವರು ಅಪ್ಪಣೆ ಮಾಡಿದರು.

**ಶ್ಮಶಾನಯಾತ್ರೆ**

ಮಹಾಪ್ರಭುಗಳವರ ಕಳೇಬರವನ್ನು ಕಾಶೀ ನಗರಕ್ಕೆ ತೆಗೆದುಕೊಂಡುಹೋಗಿ ಅಲ್ಲಿ ಅಂತಿಮ ಸಂಸ್ಕಾರ ಮಾಡಬೇಕೆಂದು ಯೋಚನೆ ಹುಟ್ಟಿತು. ಶ್ರೀ ಮಹಾರಾಜ್ಞಿಯವರೂ, ದಿವಾನ್‌ರವರೂ ತಾವೇ ಆ ರೀತಿ ಸಲಹೆ ಮಾಡಿದ್ದೂ ಕೂಡ ಆಗಲೇ ಮಧ್ಯಾಹ್ನಕಾಲವಾಗಿದ್ದುದರಿಂದ ಕಾಶೀ ನಗರಕ್ಕೆ ಹೋಗಬೇಕಾದರೆ ಮಕ್ಕಳು ಸೊರಗಬೇಕಾಗುವುದೆಂಬ ಕಾರಣದಮೇಲೆ ಹೇಗೆ ಮಾಡಬೇಕೆಂದು ಯೋಚಿಸತೊಡಗಿದರು. ನಿರ್ಯಾಣ ನಡೆದ ನಗರದಲ್ಲಿ ಅಂತಿಮ ಸಂಸ್ಕಾರವಾಗಬೇಕಾದುದೇ ಉಚಿತವೆಂದು, ಕಲ್ಕತ್ತಾ ಹೈಕೋರ್ಟಿನ ನ್ಯಾಯಾಧೀಶರಲ್ಲೊಬ್ಬರೂ ಧರ್ಮಶಾಸ್ತ್ರವೇತ್ತರೂ ಆಗಿದ್ದ ಶ್ರೀಮಾನ್ ಗುರುದಾಸ ಬ್ಯಾನರ್ಜಿಯವರು ಹೇಳಿಕಳುಹಿಸಿದುದರಮೇಲೆ— ಕಾಶೀ ನಗರಕ್ಕೆ

ಕಳೇಬರವನ್ನು ಸಾಗಿಸುವ ಯೋಚನೆಯನ್ನು ಬಿಟ್ಟರು. ಕಲ್ಕತ್ತಾ ನಗರದಲ್ಲಿ ಪಲ್ಲಕ್ಕಿ ದೊರೆಯದೆಹೋದಕಾರಣ, ಮಹಾಸ್ವಾಮಿಯವರು ಪವಳಿಸಿದ್ದ ಹೊಂಗೆಲಸದ ಮಂಚವೇ ಪಲ್ಲಕ್ಕಿಯಂತೆ ಕಾಣುವಹಾಗೆ ಅದನ್ನಲಂಕರಿಸಿ ಅದರಲ್ಲಿ ಪ್ರಭುಗಳವರ ಕಳೇಬರವನ್ನು ಶ್ಮಶಾನಯಾತ್ರೆಗೆ ತೆಗೆದುಕೊಂಡು ಹೋಗುವಂತೆ ನಿರ್ಧರವಾಯಿತು. ತಮ್ಮ ಪ್ರಭುಗಳ ದೇಹವನ್ನು ಅಲಂಕರಿಸುವುದು ಅದೇ ಕೊನೆಯ ಸಲವೆಂದು ಸೇವಕರೆಲ್ಲರೂ ಕಣ್ಣೀರಿಡುತ್ತ ತಮ್ಮ ಚರಮಸೇವೆಯನ್ನು ಸಮರ್ಪಿಸಿದರು. ಆಳಿದ ಮಹಾಸ್ವಾಮಿಯವರು "ಕರ್ನಲ್" ಬಿರುದನ್ನು ಪಡೆದವರಾಗಿದ್ದುದರಿಂದ, ವೈಸ್ರಾಯಿಯವರ ಅಪ್ಪಣೆಯ ಮೇರೆಗೆ ಸೈನಿಕರೂ ಸೈನ್ಯ ಗೌರವಗಳೂ ಬರುವಹಾಗೆ ಗೊತ್ತಾಯಿತು. ವೈಸ್ರಾಯಿಯವರ ಪ್ರತಿನಿಧಿಗಳಾಗಿ ಬಂದಿದ್ದ ಫಾರಿನ್ ಸೆಕ್ರೆಟರಿಯವರೂ, ವೈಸ್ರಾಯಿಯವರ ಅಂಗ ರಕ್ಷಕರೂ, ಆಳಿದ ಮಹಾಸ್ವಾಮಿಯವರ ಮಿತ್ರರಾಗಿದ್ದ ಬಹು ಮಂದಿ ಯೂರೋಪಿಯನ್ ದೊಡ್ಡಮನುಷ್ಯರೂ, ತಮ್ಮ ಜನಾಂಗದ ಪದ್ಧತಿಗನುಸಾರವಾಗಿ ದುಃಖಸೂಚಕವಾದ ಕಪ್ಪು ಬಟ್ಟೆಗಳನ್ನು ಧರಿಸಿ ಶ್ಮಶಾನ ಯಾತ್ರೆಯ ಮೆರವಣಿಗೆಯೊಡನೆ ಹೊರಡಲು ಸಿದ್ಧವಾದರು. ಕಪೂರ್ಥಲ ಸಂಸ್ಥಾನದ ಮಹಾರಾಜರು ತಮ್ಮ ಪರವಾಗಿ ಕಳುಹಿಸಿದ್ದ ದಿವಾನ್‌ರವರಾದ ಶ್ರೀಮಾನ್ ದೌಲತ್‌ರಾಮ್‌ರವರೂ, ಕ್ಯಾಪ್ಟನ್ ಸುಂದರ್ ಸಿಂಗ್‌ರವರೂ, ಮಹಾ ಪ್ರಭುಗಳವರೊಡನೆ ಕಲ್ಕತ್ತಾ ನಗರಕ್ಕೆ ಹೋಗಿದ್ದ ದಿವಾನ್‌ರವರೇಮುಂತಾದ ಅಧಿಕಾರಿಗಳೂ ಶ್ಮಶಾನಯಾತ್ರೆಯ ಮೆರವಣಿಗೆ ಯೊಡನೆ ಹೊರಟರು. ಶ್ರೀಮಾನ್ ಪೂರ್ಣರಾಘವೇಂದ್ರರಾಯರವರು ಮಾತ್ರ, ಮಕ್ಕಳನ್ನು ಸಮಾಧಾನಮಾಡಿ ಸಂತೈಸುತ್ತ ಹಿಂದೆ ನಿಲ್ಲ ಬೇಕೆಂದು ದಿವಾನ್‌ರವರು ಅಪ್ಪಣೆಮಾಡಿದರು. ಮಹಾರಾಣಿಯವ ರಂತೂ, ದುಸ್ಸಹವಾದ ಶೋಕಾಗ್ನಿ .ಬೇಗೆಗೆ ಗುರಿಯಾಗಿ ಪದೇ ಪದೇ ಮೂರ್ಛೆ ಹೊಂದುತ್ತಿದ್ದರು.

**ಪಾರ್ಥಿವ ದೇಹದ ಅಂತಿಮ ಸಂಸ್ಕಾರ**

ಶ್ರೀ ಚಾಮರಾಜೇಂದ್ರ ಒಡೆಯರವರ ಪಾರ್ಥಿವ ದೇಹದ ಮೆರವಣಿಗೆಯು ಹೋಗುವಂತೆ ಗೊತ್ತಾಗಿದ್ದ ಬೀದಿಗಳಲ್ಲೆಲ್ಲ ವೈಸ್ರಾಯಿ ಯವರ ಅಪ್ಪಣೆಯ ಮೇರೆ ಅಶ್ವಾರೋಹಿಗಳಾದ ಸೈನಿಕರ ಮತ್ತು ಪೋಲೀಸಿನವರ ಕಾವಲು ವ್ಯವಸ್ಥೆಯು ನಡೆದಿದ್ದಿತು. ನಾಲ್ಕು ಕುದುರೆ ಗಳನ್ನು ಕಟ್ಟಿದ ದಿವ್ಯ ರಥದಂತಿದ್ದ ಬಂಡಿಯಲ್ಲಿ ಮಹಾಸ್ವಾಮಿಯವರ ಸುಂದರ ಮೂರ್ತಿಯನ್ನು ಹಿಂದೆ ಹಲವು ಬಾರಿ

ನೋಡಿ ಹರ್ಷಿಸಿದ್ದ ಕಲ್ಕತ್ತಾ ನಗರ ನಿವಾಸಿಗಳಲ್ಲಿ ಅಸಂಖ್ಯಾತ ಮಂದಿ ಗಳು ಮಹಾಪ್ರಭುಗಳವರ ಅಕಾಲಮರಣಕ್ಕಾಗಿ ವಿಷಾದಿಸಿದರು. ಮಧ್ಯಾಹ್ನದ ಮೇಲೆ ಎರಡೂ ಘಂಟೆಗೆ ಹೊರಟ ಮೆರೆವಣಿಗೆಯು ಕಾಳೀ ಘಾಟಿಗೆ ಹೋಗಿ ಸೇರುವಾಗ್ಗೆ ಸಾಯಂಕಾಲ ಸುಮಾರು ಏಳು ಘಂಟೆಯ ವೇಳೆಯಾದುದರಿಂದಲೇ, ಮೆರೆವಣಿಗೆಯ ಜೊತೆಯಲ್ಲಿ ನಡೆದು ದುಃಖ ವನ್ನೂ ಗೌರವವನ್ನೂ ಸೂಚಿಸಿದ ನಾಗರಿಕರ ಸಂದಣಿಯೆಷ್ಟೆಂಬುದನ್ನು ಊಹಿಸಬಹುದು. ಭರತಖಂಡದ ರಾಷ್ಟ್ರ ಮಹಾಸಭೆಯು ("ಇಂಡಿಯನ್ ನ್ಯಾಷನಲ್ ಕಾಂಗ್ರೆಸ್" ಸಭೆಯು) ಏರ್ಪಡುವುದ ಕ್ಕಿಂತ ಮುಂಚಿತವಾಗಿಯೇ ಮತ್ತು ಇಂಡಿಯಾ ಸರ್ಕಾರದ ಆಡಳಿತ ವಿಧಾನದಲ್ಲಿ ಪ್ರಜೆಗಳ ಪ್ರತಿನಿಧಿಗಳ ಸಂಬಂಧವು ಏರ್ಪಡುವುದಕ್ಕಿಂತ ಮುಂಚಿತವಾಗಿಯೇ — ಮೈಸೂರು ಸಂಸ್ಥಾನದಲ್ಲಿ ಪ್ರಜಾಪ್ರತಿನಿಧಿ ಸಭೆ ಯನ್ನು ಸ್ಥಾಪಿಸಿದ ಕಾರಣಕ್ಕಾಗಿಯೂ ಸ್ತ್ರೀ ವಿದ್ಯಾಭ್ಯಾಸ ವ್ಯವಸ್ಥೆ ಮುಂತಾದುವುಗಳನ್ನು ಅಖಿಲ ಭರತಖಂಡಕ್ಕೇ ಮಾರ್ಗದರ್ಶಕವಾದ ರೀತಿಯಲ್ಲಿ ಏರ್ಪಡಿಸಿದ ಕಾರಣಕ್ಕಾಗಿಯೂ ಸಹ, ಭರತಖಂಡದ ನಾನಾ ಪ್ರಾಂತಗಳವರೂ ಶ್ರೀ ಚಾಮರಾಜೇಂದ್ರ ಒಡೆಯರವರನ್ನು ಶಕಪುರುಷ ರೆಂದು ಭಾವಿಸಿ ಗೌರವಿಸುತ್ತಿದ್ದುದೇ ಆ ಬಗೆಯ ಜನಸಂದಣಿಯು ಸೇರಿದ್ದುದಕ್ಕೆ ಮುಖ್ಯಕಾರಣ.

ಆದಿಶಕ್ತಿಯಾದ ಶ್ರೀ ಚಾಮುಂಡಾಂಬಿಕೆಯ ಆರಾಧಕರಾಗಿದ್ದ ಶ್ರೀ ಚಾಮರಾಜೇಂದ್ರ ಒಡೆಯರವರ ಪಾರ್ಥಿವ ಶರೀರಕ್ಕೆ, ಭವತಾರಿಣಿ ಯಾದ ಆ ಆದಿಶಕ್ತಿಯೇ ಕಾಳಿಕಾದೇವಿಯೆಂಬ ನಾಮಧೇಯದಿಂದ ಅಧಿಷ್ಠಾತ್ರಿಯಾಗಿರುವ ಕಾಳೀ ಘಾಟನಲ್ಲಿ, ಗಂಗಾಮಾತೆಯ ಮಹಾ ಸಾನ್ನಿಧ್ಯದ ಪವಿತ್ರ ಪ್ರದೇಶದಲ್ಲಿ ಅಂತಿಮ ಸಂಸ್ಕಾರವು ನಡೆಯಿತು. ಅಂದಿನ ಅಪರ ಕರ್ಮಗಳೆಲ್ಲ ಮಿಲಿಟರಿ ಬಕ್ಷಿ ರಾಜಸೇನಾಭೂಷಣ ಶ್ರೀಮಾನ್ ಬಸವಪ್ಪಾಜಿ ಅರಸಿನವರಿಂದ ಸಾಂಗವಾಗಿ ನೆರವೇರಿದುವು. ದಿವಾನ್‌ರವರಾದ ಸರ್ ಕೆ. ಶೇಷಾದ್ರಿ ಐಯರವರೇ ಮುಂತಾದವರೆಲ್ಲರೂ ತಮ್ಮ ಪ್ರಭುಗಳವರಿಗೆ ತಮ್ಮ ಕಡೆಯ ಸೇವೆಯನ್ನು ಸಲ್ಲಿಸಿ, ದುಃಖ ಭರವನ್ನು ತಾಳಲಾರದೆ ಕಡುಕಷ್ಟದಿಂದ ಹಿಂತಿರುಗಿ ಬಂದಾಗ ಸಮ ರಾತ್ರಿಯ ವೇಳೆಯಾಗಿದ್ದಿತು.

ಮಾರನೆಯ ದಿನ (ಎಂದರೆ, ೧೮೯೪ನೆಯ ಇಸವಿ ಡಿಸೆಂಬರು ತಿಂಗಳು ೨೯ನೆಯ ತಾರೀಖು ಶನಿವಾರದ ದಿನ) ಇಂಡಿಯಾ ಸರ್ಕಾರದ ಪರವಾಗಿ ವೈಸ್ರಾಯಿಯವರ ಕಡೆಯಿಂದ ಮಹಾರಾಜ್ಞೀ

ಶ್ರೀ ವಾಣೀವಿಲಾಸ ಸನ್ನಿಧಾನದವರಿಗೆ ಸಂತಾಪ ಸಹಾನುಭೂತಿ ಸೂಚಕ ಪತ್ರವೂ, ಶ್ರೀ ಕೃಷ್ಣರಾಜೇಂದ್ರ ಒಡೆಯರವರು (ಆಳಿದ ಮಹಾಸ್ವಾಮಿ ಯವರಾದ ಶ್ರೀಮನ್ಮಹಾರಾಜ ಶ್ರೀಮನ್ನಾಲ್ವಡಿ ಶ್ರೀ ಕೃಷ್ಣರಾಜೇಂದ್ರ ಒಡೆಯರ್ ಬಹದ್ದೂರ್, ಜಿ ಸಿ.ಎಸ್.ಐ., ಜಿ.ಬಿ.ಇ. ಮಹಾಪ್ರಭುಗಳವರು) ಮೈಸೂರು ಸಂಸ್ಥಾನದ ಶ್ರೀಮನ್ಮಹಾರಾಜರವ ರೆಂದು ಅಂಗೀಕೃತವಾಗಿದ್ದ ವಿವರವನ್ನು ಸೂಚಿ ಸಿದ್ದ ಸಂದೇಶ ಪತ್ರವೂ ಬಂದು ತಲುಪಿದುವು. ಮುಂದೆ ಏರ್ಪಡಬೇಕಾದ ಆಡಳಿತ ವ್ಯವಸ್ಥೆಯು ನಿಷ್ಕರ್ಷೆಯಾಗುವವರೆಗೂ ಸರ್ ಕೆ. ಶೇಷಾದ್ರಿ ಐಯರವರು ಬ್ರಿಟಿಷ್ ರೆಸಿಡೆಂಟರವರ ಸಲಹೆಯಂತೆಯೂ ಮತ್ತು ಸಾಧ್ಯವಾದಮಟ್ಟಿಗೂ ಶ್ರೀ ಮಹಾರಾಜ್ಞೀ ವಾಣೀವಿಲಾಸ ಸನ್ನಿಧಾನ ದವರ ಇಷ್ಟಾನುಸಾರವಾಗಿಯೂ ಸಂಸ್ಥಾನದ ಆಡಳಿತವನ್ನು ನಡೆಯಿಸು ತ್ತಿರಬೇಕೆಂದೂ ಸಹ ಆ ಸಂದೇಶ ಪತ್ರದಲ್ಲಿ ಸೂಚಿತವಾಗಿದ್ದಿತು.

**ವೈಸ್ರಾಯಿಯವರ ಸಂತಾಪ ಸೂಚಕ ಪತ್ರ**

ಈ ಮಧ್ಯದಲ್ಲಿ ವೈಸ್ರಾಯಿಯವರ ಫಾರಿನ್ ಸೆಕ್ರೆಟರಿಯವರು, ಮೈಸೂರು ಸಂಸ್ಥಾನದ ಬ್ರಿಟಿಷ್ ರೆಸಿಡೆಂಟರವರಾಗಿದ್ದ ಕರ್ನಲ್ ಹೆಂಡರ್ಸನ್ ಅವರಿಗೆ ಕಲ್ಕತ್ತಾ ನಗರದಿಂದ ತಂತಿವರ್ತಮಾನವನ್ನು ಕಳುಹಿಸಿ, ಶ್ರೀ ಚಾಮ ರಾಜೇಂದ್ರ ಒಡೆಯರವರು ಇಹಲೋಕವನ್ನು ತ್ಯಜಿಸಿದ ದುಃಖವಾರ್ತೆಯನ್ನು ತಿಳಿಸಿದರು. ರೆಸಿಡೆಂಟರವರು ಮೈಸೂರು ನಗರದ ಅರಮನೆಯಲ್ಲಿ ಮುಖ್ಯ ಮುಖ್ಯವಾದ ಅಂತಃಪುರಗಳೇ ಮುಂತಾದುವುಗಳ ಬಾಗಿಲುಗಳಿಗೆಲ್ಲ ಬೀಗಗಳನ್ನುಹಾಕಿಸಿ ಮೊಹರು ಮಾಡಿಸುವಂತೆ ಅರಮನೆಯ ಕಂಟ್ರೋಲರವರಿಗೆ ತಂತಿ ವರ್ತಮಾನವನ್ನು ಕಳುಹಿಸಿ, ಸರ್ ಕೆ. ಶೇಷಾದ್ರಿ ಐಯರವರು ಕಲ್ಕತ್ತಾ ನಗರದಲ್ಲಿದ್ದ ಕಾರಣ, ಆಗ್ಗೆ ದಿವಾನ್ ಹುದ್ದೆಯ ಕರ್ತವ್ಯಗಳನ್ನು ನೆರವೇರಿಸಿ ನೋಡಿಕೊಳ್ಳುತ್ತಿದ್ದ ಶ್ರೀಮಾನ್ ಟಿ. ಆರ್. ಎ. ತಂಬೂ ಚೆಟ್ಟಿಯವರೊಡನೆ ಮಾರನೆಯ ದಿವಸ (ಎಂದರೆ, ೧೮೯೪ನೆಯ ಇಸವಿ ಡಿಸೆಂಬರು ತಿಂಗಳು ೨೯ನೆಯ ತಾರೀಖಿನ ದಿವಸ) ಮೈಸೂರು ನಗರಕ್ಕೆ ತೆರಳಿದರು. ಮಹಾಪ್ರಭುಗಳವರು ಇಹಲೋಕವನ್ನು ತ್ಯಜಿಸಿದರೆಂಬ ದಾರುಣವಾರ್ತೆಯನ್ನು ಕೇಳಿ ಶೋಕಗ್ರಸ್ತರಾದ ಮೈಸೂರು ನಗರ ನಿವಾಸಿಗಳು ಬಹು ಮಂದಿ ಅರಮನೆಯ ಎದುರಿಗೆ ತಂಡೋಪತಂಡವಾಗಿ ಬಂದು ಸೇರಿ, ಮುಂದೆ ಸಂಸ್ಥಾನದ ಗತಿಯೇನಾಗುವುದೋ—ಇಂಡಿಯಾ

**ರೆಸಿಡೆಂಟರ ಭರವಸೆ**

ಸರ್ಕಾರದವರೆಲ್ಲಿ ತಮ್ಮ ಕಾರ್ಯನೀತಿಯನ್ನು ಮಾರ್ಪಡಿಸುವರೋ— ಎಂದು ಮುಂತಾಗಿ ಕಳವಳಪಡುತ್ತಿದ್ದರು. ಆ ಸಭೆಯಲ್ಲಿ ಬ್ರಿಟಿಷ್ ರೆಸಿಡೆಂಟರವರು ಶ್ರೀ ಚಾಮರಾಜೇಂದ್ರ ಒಡೆಯರವರ ನಿರ್ಯಾಣದಿಂದ ತಮಗುಂಟಾಗಿದ್ದ ಅಪಾರವಾದ ವ್ಯಸನವನ್ನು ಸೂಚಿಸಿ, ದಿವಂಗತರ ಸದ್ಗುಣ ಕಥನ ಮಾಡಿ, ಅಪರಕರ್ಮಗಳು ಪೂರೈಸಿ ಶುಭಸ್ವೀಕಾರವು ನೆರವೇರಿದ ಬಳಿಕ ಶ್ರೀಮದ್ಯುವರಾಜ ಶ್ರೀ ಕೃಷ್ಣರಾಜೇಂದ್ರ ಒಡೆಯರವರಿಗೆ ಪಟ್ಟಾಭಿಷೇಕ ಮಹೋತ್ಸವವು ನಡೆಯಬಹುದೆಂದು ತಿಳಿಸಿ, ಇಂಡಿಯಾ ಸರ್ಕಾರದವರ ಕಾರ್ಯನೀತಿಯಲ್ಲಿ ಮಾರ್ಪಾಟುಂಟಾಗುವ ಶಂಕೆಗೆ ಲೇಶಮಾತ್ರವೂ ಕಾರಣವಿರಲಿಲ್ಲವೆಂದು ಭರವಸೆಯಿತ್ತರು.

ಶ್ರೀ ಚಾಮರಾಜೇಂದ್ರ ಒಡೆಯರವರ ನಿರ್ಯಾಣದಿಂದ ಒಟ್ಟು ಮೈಸೂರು ಸಂಸ್ಥಾನವೇ ಶೋಕಸಾಗರದಲ್ಲಿ ಮುಳುಗಿತು. ಕೋರ್ಟು

**ಮೈಸೂರಿಗೆ ಆಗಮನ**

ಕಚೇರಿಗಳನ್ನೂ, ವಿದ್ಯಾಸಂಸ್ಥೆಗಳನ್ನೂ, ಇತರ ಸಮಸ್ತ ಸಾರ್ವಜನಿಕ ಸಂಸ್ಥೆಗಳನ್ನೂ, ದುಃಖ ಸೂಚಕವಾಗಿ ಹದಿಮೂರು ದಿವಸಗಳು ಮುಚ್ಚುವಂತೆ ಅಪ್ಪಣೆಯಾಯಿತು. ಬೆಂಗಳೂರು ಮೈಸೂರು ನಗರಗಳಲ್ಲಿ ಒಂದೊಂದು ನಿಮಿಷಕ್ಕೊಂದರಂತೆ ದಿವಂಗತರ ವಯೋನುಗುಣವಾಗಿ ಒಟ್ಟು ಮೂವತ್ತೆರಡು ಸಾರಿ ತೋಪುಗಳನ್ನು ಹಾರಿಸಿದರು. ಹನ್ನೆರಡನೆಯ ದಿನದ ಕರ್ಮಗಳು ಪೂರೈಸುವವರೆಗೂ ಸಾರ್ವಜನಿಕ ಸಂಸ್ಥೆಗಳೇ ಮುಂತಾದುವುಗಳಮೇಲಣ ಧ್ವಜಗಳನ್ನೆಲ್ಲ ಧ್ವಜಸ್ತಂಭಗಳ ಮಧ್ಯಭಾಗಕ್ಕಿಳಿಸಿರಬೇಕೆಂದು ಅಪ್ಪಣೆಯಾಯಿತು.

ಶ್ರೀ ಮಹಾರಾಜ್ಞೀ ವಾಣೀವಿಲಾಸ ಸನ್ನಿಧಾನ, ಸಿ. ಐ. ಅವರೂ, ಮಕ್ಕಳೂ ಮತ್ತು ಇತರರೂ, ೧೮೯೪ನೆಯ ಇಸವಿ ಡಿಸೆಂಬರು ತಿಂಗಳು ೩೦ನೆಯ ತಾರೀಖಿನ ಸಂಚಯನಾದಿಕರ್ಮಗಳು ನೆರವೇರಿದಮೇಲೆ ಕಲ್ಕತ್ತಾ ನಗರದಿಂದ ಹೊರಡಲನುವಾದರು. ವೈಸ್ರಾಯಿಯವರ ಪ್ರತಿನಿಧಿಗಳಾಗಿ ಫಾರಿನ್ ಸೆಕ್ರಿಟೆರಿಯವರೂ, ಕ್ಯಾಪ್ಟನ್ ಪೊಲೆನ್ ಅವರೂ ಕಲ್ಕತ್ತಾ ನಗರದ ರೈಲ್ವೇ ಸ್ಟೇಷನಿನಲ್ಲಿ ಅವರನ್ನು ಬೀಳ್ಕೊಂಡರು. ಅವರುಗಳು ೧೮೯೫ನೆಯ ಇಸವಿ ಜನವರಿ ತಿಂಗಳು ೩ನೆಯ ತಾರೀಖಿನ ದಿನ ಮೈಸೂರು ನಗರಕ್ಕೆ ತಲುಪಿದರು. ಶ್ರೀ ಮಹಾರಾಜ್ಞೀ ವಾಣೀವಿಲಾಸ ಸನ್ನಿಧಾನದವರ ಘೋಷಾ ಬಂಡಿಯೂ, ಇತರರ ಬಂಡಿಗಳೂ ಮೈಸೂರು ನಗರದ ರೈಲ್ವೇ ಸ್ಟೇಷನಿನಿಂದ ರಾಜಮಾರ್ಗಗಳಲ್ಲಿ ಕಿಕ್ಕಿರಿದು ನೆರೆದಿದ್ದ ಜನಗಳ ರೋದನ ಮತ್ತು ಹಾಹಾಕಾರ ಮಧ್ಯದಲ್ಲಿ ಅರಮನೆಗೆ

ಹೊರಟುವು. ಜನಗಳು ಶೋಕ ಸಂತಪ್ತರಾಗಿ ಪ್ರಲಾಪಿಸುತ್ತ, "ಮಹಾತಾಯಿ! ಮಹಾಸ್ವಾಮಿ! ತಮಗೆ ಈ ಗತಿ ಬಂತೆ! ಈ ಎಳೆಯ ವಯಸ್ಸಿಗೇ ಪಿತೃವಿಯೋಗ ದುಃಖ ಒದಗಿತೆ!" ಎಂದು ಮುಂತಾಗಿ ಹೇಳುತ್ತ, ಕಂಬನಿದುಂಬಿ, ಮಹಾಸ್ವಾಮಿಯವರ ಬಂಡಿಗೆ ಅಡ್ಡಿಮಾಡಿ ಮಾರ್ಗ ಮಧ್ಯದಲ್ಲಿ ಸಾಲಿಟ್ಟು ನಿಂತರು. ಪೋಲೀಸಿನವರು ಜನರನ್ನು ಅತ್ತಿತ್ತ ತಳ್ಳಿ ದಾರಿಯನ್ನು ಬಿಡಿಸುವ ಪ್ರಯತ್ನಮಾಡಿದರು. ಮಹಾ ಸ್ವಾಮಿಯವರಿಗೆ ಅದು ಸರಿಬೀಳದೆ, ಪೋಲೀಸಿನವರು ಹಾಗೆ ತಳ್ಳಕೂಡ ದೆಂದು ಅಪ್ಪಣೆ ಮಾಡಿದುದಲ್ಲದೆ, ಬಂಡಿಯ ಕುದುರೆಗಳನ್ನು ಮೆಲುನಡೆ ಯಲ್ಲಿ ಬಿಡುವಂತೆ ಆಜ್ಞಾಪಿಸಿದರು. ಅದನ್ನು ಕಂಡು ಜನರು ದಾರಿ ಬಿಟ್ಟುದಲ್ಲದೆ, ಅವರಲ್ಲಿ ಕೆಲವರು ಮಕ್ಕಳಂತೆ ಬಿಕ್ಕಿಬಿಕ್ಕಿ ರೋದನ ಮಾಡಿದರು. ಅರಮನೆಯಲ್ಲಿ ತಮ್ಮ ಬಂಧುಗಳನ್ನು ಕಂಡಾಗ ಮಹಾ ಸ್ವಾಮಿಯವರು ಶೋಕಾವೇಗದಿಂದ ಕಂಬನಿದುಂಬಿ ನೀರವ ರೋದನ ಮಾಡಿದರಾದರೂ, ಅವರೆಲ್ಲರೂ ರೋದಿಸಲುಪಕ್ರಮಿಸಿ ಶೋಕವಿಹ್ವಲ ರಾದಾಗ, ತಾವು ತೀರ ಕಿರಿಯ ವಯಸ್ಸಿನವರಾಗಿದ್ದೂ ಹಿರಿಯರಾದ ಅವರೆಲ್ಲರಿಗೂ ಸಮಾಧಾನ ಹೇಳಿ ಅವರು ರೋದಿಸಕೂಡದೆಂದು ಕೇಳಿ ಕೊಂಡರು.

**ಸಂತಾಪ ಸೂಚನೆ**

ಶ್ರೀ ಚಾಮರಾಜೇಂದ್ರ ಒಡೆಯರವರ ನಿಧನ ವಾರ್ತೆಯು ಕೂರಲಗಿ ನಂತೆ ಅವರ ಬಂಧು ಮಿತ್ರರೆಲ್ಲರ ಕಿವಿಗಳನ್ನೂ ಇರಿದು ಸಂತಾಪವನ್ನುಂಟು ಮಾಡಿತು. ಭರತಖಂಡದ ರಾಷ್ಟ್ರ ಮಹಾಸಭೆಯ (ಎಂದರೆ, ಇಂಡಿಯನ್ ನ್ಯಾಷನಲ್ ಕಾಂಗ್ರೆಸ್ಸಿನ) ಅಧಿವೇಶನವು ಆಗ ಮದರಾಸುನಗರದಲ್ಲಿ ನಡೆಯು ತ್ತಿದ್ದಿತು. ಆಳಿದ ಮಹಾಸ್ವಾಮಿಯವರ ನಿಧನ ವಾರ್ತೆಯು ಅಲ್ಲಿಗೆ ತಲುಪಿದಾಗ ಆ ಅಧಿವೇಶನದ ಮಧ್ಯದಲ್ಲಿ ಸಂತಾಪ ಸೂಚಕ ನಿರ್ಣಯ ವೊಂದು ನಡೆದು ಮಹಾಪ್ರಭುಗಳವರಲ್ಲಿದ್ದ ಗೌರವವನ್ನು ಸೂಚಿಸು ವುದಕ್ಕಾಗಿ ಅಂದಿನ ಸಭಾಕಾರ್ಯಗಳು ಅಲ್ಲಿಗೇ ಮುಕ್ತಾಯವಾದುವು. ಅಂದು ಸಭೆಗೆ ದಯಮಾಡಿದ್ದ ಮಹಾದೇವ ಗೋವಿಂದ ರ್‍ಯಾನಡೆ ಮುಂತಾದ ಮಹನೀಯರೆಲ್ಲರೂ ಶೋಕ ಸಂತಪ್ತರಾಗಿ ಸಭೆಯಿಂದ ತೆರಳಿದರು. ಭರತಖಂಡದ ಸಮಸ್ತ ವರ್ತಮಾನ ಪತ್ರಿಕೆಗಳಲ್ಲಿಯೂ ಮತ್ತು "ಲಂಡನ್ ಟೈಮ್ಸ್" ಮುಂತಾದ ಅನೇಕ ವಿದೇಶೀಯ ಪತ್ರಿಕೆ ಗಳಲ್ಲಿಯೂ ಸಂತಾಪಸೂಚಕ ಲೇಖನಗಳು ಪ್ರಕಟವಾದುವು. ರಾಜ ಗುರುಗಳಾದ ಶ್ರೀ ಬ್ರಹ್ಮತಂತ್ರ ಪರಕಾಲಮಠದ ಶ್ರೀ ಶ್ರೀಗಳವರು

ಯಥೋಚಿತವಾದ ಸಮಾಧಾನ ವಚನಗಳಿಂದ ಶ್ರೀ ಮಹಾರಾಜ್ಞೀ ವಾಣೀವಿಲಾಸ ಸನ್ನಿಧಾನದವರಿಗೆ ಧರ್ಮೋಪದೇಶ ಮಾಡಿದರು. ಮೈಸೂರು ನಗರದ ಮಹಾಜನರು ೧೮೯೫ನೆಯ ಇಸವಿ ಜನವರಿ ತಿಂಗಳು ೫ನೆಯ ತಾರೀಖಿನ ದಿನ ಸಂತಾಪ ಸೂಚಕ ಸಭೆಯನ್ನು ನಡೆಯಿಸಿ, ದಿವಾನ್‌ರವರ ಮೂಲಕ ಶ್ರೀ ಮಹಾರಾಜ್ಞೀ ವಾಣೀವಿಲಾಸ ಸನ್ನಿಧಾನ ದವರಲ್ಲಿಗೆ ವಿಜ್ಞಾಪನಾ ಪತ್ರಿಕೆಯನ್ನು ಸಮರ್ಪಿಸಿದರು. ಅದರಲ್ಲಿ ಅವರು ಗಳು ತಮ್ಮ ಶೋಕ ಸಂತಾಪಗಳನ್ನು ವ್ಯಕ್ತಪಡಿಸಿದ್ದುದಲ್ಲದೆ, ಆಗ್ಗೆ ಹತ್ತುವರ್ಷ ವಯಸ್ಸಿನ ಬಾಲಕರಾಗಿದ್ದ ಶ್ರೀಮನ್ಮಹಾರಾಜ ಶ್ರೀ ಕೃಷ್ಣ ರಾಜೇಂದ್ರ ಒಡೆಯರ್ ಮಹಾಪ್ರಭುಗಳವರು ಪ್ರಾಪ್ತವಯಸ್ಕರಾಗುವ ವರೆಗೂ ರಾಜ್ಯಭಾರವನ್ನು ವಹಿಸಿ ಮಾತೃವಾತ್ಸಲ್ಯದಿಂದ ಪ್ರಜೆಗಳನ್ನು ಪರಿಪಾಲಿಸಬೇಕೆಂದೂ ಭಕ್ತಿಯಿಂದ ಪ್ರಾರ್ಥಿಸಿದ್ದರು. ಮೈಸೂರು ಸಂಸ್ಥಾನದಲ್ಲೆಲ್ಲ ಅನೇಕ ಸ್ಥಳಗಳಲ್ಲಿ ಸಂತಾಪಸೂಚಕ ಸಭೆಗಳು ನಡೆದುವು. ಶ್ರೀ ಮಹಾರಾಜ್ಞೀ ವಾಣೀವಿಲಾಸ ಸನ್ನಿಧಾನದವರಲ್ಲಿ ಸಹಾನುಭೂತಿ ಯನ್ನು ಸೂಚಿಸಿ, ಸ್ವದೇಶ ವಿದೇಶಗಳಿಂದ ಅನೇಕ ಬಿನ್ನಹ ಪತ್ರಗಳು ಬಂದುವು. ಎಲ್ಲಕ್ಕೂ ಮಿಗಿಲಾಗಿ, ಭರತಖಂಡದ ಚಕ್ರವರ್ತಿನಿಯವ ರಾಗಿದ್ದ ಶ್ರೀ ವಿಕ್ಟೋರಿಯಾ ಮಹಾರಾಜ್ಞಿಯವರಿಂದ ಸಂತಾಪ ಸೂಚಕ ವಾದ ತಂತಿ ವರ್ತಮಾನವು ಬಂದು ತಲಪಿತು. ಶ್ರೀ ಚಾಮರಾಜೇಂದ್ರ ಒಡೆಯರವರ ನಿಧನದಿಂದ ಬ್ರಿಟಿಷ್ ಚಕ್ರಾಧಿಪತ್ಯಕ್ಕೊಂದು ದೊಡ್ಡ ನಷ್ಟ ವುಂಟಾಯಿತೆಂದು ಬ್ರಿಟಿಷ್ ಸರ್ಕಾರದವರು ವಿಷಾದಿಸಿದರು. ಮಹಾಪ್ರಭು ಗಳವರ ನಿಧನದಿಂದ ಒಟ್ಟು ಭಾರತೀಯ ಜನಾಂಗಕ್ಕೇ ಅಪಾರವಾದ ನಷ್ಟವುಂಟಾಯಿತೆಂದು ಭರತಖಂಡದವರು ವಿಷಾದಿಸಿದರು. ಶ್ರೀ ಶೃಂಗಗಿರಿ ಶ್ರೀಮಠದ ಶ್ರೀ ಶ್ರೀಗಳವರು ಶೋಕ ಸಂತಪ್ತರಾಗಿ ಕಂಬನಿ ಸುರಿಸಿದರು.

**ಮಹಾದೇವ ಗೋವಿಂದ ರ್‍ಯಾನಡೆಯವರ ಸಂತಾಪ**

ಮುಂಬಯಿ ಹೈಕೋರ್ಟಿನ ಸುಪ್ರಸಿದ್ಧ ನ್ಯಾಯಾಧೀಶರಲ್ಲೊಬ್ಬ ರಾಗಿದ್ದ ಶ್ರೀಮಾನ್ ಮಹಾದೇವ ಗೋವಿಂದ ರ್‍ಯಾನಡೆ, ಎಂ.ಎ., ಎಲ್‌ಎಲ್.ಬಿ., ಸಿ.ಐ.ಇ. ಅವರ ಖ್ಯಾತಿಯನ್ನೂ, ಪ್ರಚಂಡ ಪಾಂಡಿತ್ಯವನ್ನೂ, ಸೌಶೀಲ್ಯವನ್ನೂ ಮತ್ತು ದೇಶಾಭಿಮಾನವನ್ನೂ ವರ್ಣಿಸ ಬೇಕಾದುದೇ ಇಲ್ಲ. ಅವರು "ಇಂಡಿಯನ್ ನ್ಯಾಷನಲ್ ಕಾಂಗ್ರೆಸ್" ಮಹಾಸಭೆಯ ಅಧಿ ವೇಶನದಿಂದ ಶೋಕಗ್ರಸ್ತರಾಗಿ (ಮೇಲೆ ಸೂಚಿಸಿದಂತೆ) ತಮ್ಮ ಬಿಡಾರಕ್ಕೆ ತೆರಳಿದಮೇಲೆ "ಹಿಂದು" ಪತ್ರಿಕೆಯ ಸುದ್ದಿಗಾರರಾಗಿದ್ದ ಶ್ರೀಮಾನ್

ಕೆ. ಸುಬ್ಬರಾಯರವರೊಡನೆ, "ಮೈಸೂರು ಸಂಸ್ಥಾನದ ಶ್ರೀಮನ್ಮಹಾರಾಜರವರ ಮರಣದಿಂದ ನಮಗೆ ಸಂಭವಿಸಿರುವುದೇನೆಂಬುದನ್ನು ನೀವು ಯೋಚಿಸಿ ಪೂರ್ತಿಯಾಗಿ ಗ್ರಹಿಸಿದ್ದೀರಾ?" ಎಂದು ಕೇಳಿ, ನಿಟ್ಟುಸಿರು ಬಿಟ್ಟು ಆಲೋಚನಾಮಗ್ನರಾಗಿ ಕುಳಿತರು. ತಮಗೇ ಅಪಾರವಾದ ನಷ್ಟವುಂಟಾಗಿದ್ದಂತೆ ಸಂತಾಪಪಡುತ್ತ ನಿರುತ್ಸಾಹದಿಂದಲೂ ಮೌನದಿಂದಲೂ ಅವರು ದುಃಖಿಸುತ್ತಿದ್ದ ಆ ಸನ್ನಿವೇಶದಲ್ಲಿ ಅವರ ಪ್ರಶ್ನೆಗೆ ಉತ್ತರ ಕೊಡುವ ಬಗೆ ಹೇಗೆಂದು ಆಲೋಚಿಸುತ್ತ ಶ್ರೀಮಾನ್ ಕೆ. ಸುಬ್ಬರಾಯರೂ ಸುಮ್ಮನಿದ್ದರು. ಹಾಗೆ ಮೌನದಿಂದ ಸ್ವಲ್ಪಕಾಲ ಕುಳಿತಿದ್ದ ಬಳಿಕ ಶ್ರೀಮಾನ್ ಮಹಾದೇವ ಗೋವಿಂದ ರ್ಯಾನಡೆಯವರು ಮತ್ತೆ ದೊಡ್ಡದಾಗಿ ನಿಟ್ಟುಸಿರು ಬಿಟ್ಟು, ದೇಶಾಭಿಮಾನದ ಹುರುಪಿನಿಂದಲೂ ಸಂತಾಪದಿಂದಲೂ ಕೂಡಿ, "ಈ ನಿಧನದ ದೆಸೆಯಿಂದ ಅಖಿಲ ಭರತಖಂಡದ ಪ್ರಗತಿಯೇ ಇನ್ನು ವಿಳಂಬವಾಗಿ ಹತ್ತಿಪ್ಪತ್ತು ವರ್ಷಗಳು ಹಿಂದಕ್ಕೆ ಬಿದ್ದಂತಾಗುವುದು"* ಎಂದರು. ಅನೇಕ ವಿಚಾರಗಳಲ್ಲಿ ಅಖಿಲ ಭರತಖಂಡಕ್ಕೇ ಮಾದರಿಯಾಗಿ ಶೀಘ್ರವಾಗಿ ಮುಂದುವರಿಯುತ್ತಿದ್ದ ಮೈಸೂರು ಸಂಸ್ಥಾನದ ಪ್ರಗತಿಯನ್ನು ನೋಡಿ ನೋಡಿ ಅಭಿವೃದ್ಧಿ ಕಾರ್ಯಗಳನ್ನು ನೆರವೇರಿಸುತ್ತಿದ್ದ ಇತರ ಪ್ರದೇಶಗಳ ಮುನ್ನಡೆಯೇ ಕುಂಠಿತವಾಗಿ ಮುಂದೆ ಆಲಸ್ಯಕ್ಕೆ ಕಾರಣವಾಗುವುದೆಂದೂ, ಹಾಗೆ ಮಂದಗತಿಯೊದಗುವುದರ ಫಲಿತಾಂಶವಾಗಿ ಒಟ್ಟು ಭರತಖಂಡದ ಪ್ರಗತಿಯೇ ಹತ್ತಿಪ್ಪತ್ತು ವರ್ಷಗಳಷ್ಟು ಹಿಂದೆ ಬೀಳಬೇಕಾಗುತ್ತಿದ್ದಿತೆಂದೂ ಅವರಶಂಕೆ. ಆ ಬಗೆಯ ಶಂಕೆಯು ನಿರಾಧಾರವಾಗಿ ಪರಿಣಮಿಸಿತೆಂಬುದು ಮೈಸೂರು ಸಂಸ್ಥಾನದ ಮುಂದಿನ ಇತಿಹಾಸದಿಂದ ವ್ಯಕ್ತವಾಯಿತಾದರೂ, ಮಹಾಪ್ರಭುಗಳವರ ರಾಜ್ಯಭಾರ ವಿಚಾರದಲ್ಲಿ ಅವರಿಗೆ ಎಂತಹ ಅಭಿಪ್ರಾಯವಿದ್ದಿತೆಂಬುದು ಅವರ ಮಾತುಗಳಿಂದ ಸ್ಪಷ್ಟವಾಗಿ ತಿಳಿಯುತ್ತದೆ.

ಶ್ರೀಮನ್ಮಹಾರಾಜ ಶ್ರೀ ಚಾಮರಾಜೇಂದ್ರ ಒಡೆಯರ್ ಬಹದ್ದೂರ್, ಜಿ.ಸಿ.ಎಸ್.ಐ. ಮಹಾಪ್ರಭುಗಳವರ ಅದ್ಭುತವಾದ ರಾಜ್ಯಭಾರ ಸಾಮರ್ಥ್ಯದಿಂದಲೂ, ದಕ್ಷರಾದ ದಿವಾನರುಗಳ ಆಡಳಿತ ವಿಚಕ್ಷಣೆಯಿಂದಲೂ, ಕೇವಲ ಹದಿನಾಲ್ಕು ವರ್ಷಗಳ ಅವಧಿಯಲ್ಲಿ ಮೈಸೂರು ಸಂಸ್ಥಾನಕ್ಕೆ ಮಾದರಿ ಸಂಸ್ಥಾನವೆಂದು ಹೆಸರು ಬರುವ ಮಟ್ಟಿಗೆ

* "It means the progress of India as a whole has been thrown back by a decade or two."

ದೇಶೋನ್ನತಿ ಸಾಧನೆಯೂ ಮುಂದುವರಿಯಿತು. ೧೮೮೧ನೆಯ ಇಸವಿಯಿಂದ ಹಿಡಿದು ೧೮೮೬ನೆಯ ಇಸವಿಯವರೆಗೆ ನಡೆದಿದ್ದ ಅಭ್ಯುದಯ ಸಾಧನೆಯನ್ನು ಶ್ಲಾಘಿಸಿ ಆಗ್ಗೆ ವೈಸ್ರಾಯಿಯವರಾಗಿದ್ದ ಲಾರ್ಡ್ ಡಫ್ರಿನ್ ಎಂಬವರು, "ಶ್ರೀಮನ್ಮಹಾರಾಜರವರ ರಾಜ್ಯಭಾರದಲ್ಲಿ ಉತ್ತಮವಾದ ಆಡಳಿತ ವಿಚಕ್ಷಣೆಯೂ, ಸುಸಂಸ್ಕೃತವಾದ ಪ್ರಗತಿ ಸಾಧನೆಯೂ, ಸಾರ್ವತ್ರಿಕವಾದ ಪ್ರಜಾಶಾಂತಿಯೂ, ಸತ್ಪರಿಣಾಮಕರವಾದ ವಿದ್ಯಾಭ್ಯಾಸವೂ ಎಲ್ಲೆಲ್ಲಿಯೂ ಶೋಭಿಸುತ್ತಿವೆ. ಸುವಿಸ್ತರವಾದ ಭರತಖಂಡದಲ್ಲಿ ಬ್ರಿಟಿಷರು ತಮ್ಮ ರಾಜ್ಯಭಾರದ ಜೊತೆಗೆ ಭಾರತೀಯ ಸಂಸ್ಥಾನಾಧೀಶ್ವರರುಗಳಿಂದಲೂ ರಾಜ್ಯಭಾರ ನಡೆಯಲು ಅವಕಾಶಕೊಟ್ಟಿರುವ ವಿವೇಕಮಯವಾದ ಕಾರ್ಯನೀತಿಯು ಸಾರ್ಥಕವಾಗಿ ಪರಿಣಮಿಸಿರುವುದಕ್ಕೆ, ಭರತ ಭೂಮಿಯಲ್ಲಿ ಮೈಸೂರು ಸಂಸ್ಥಾನಕ್ಕಿಂತ ಮಿಗಿಲೆನಿಸುವ ಮತ್ತಾವ ಸಂಸ್ಥಾನದ ನಿದರ್ಶನವೂ ಇಲ್ಲ" ಎಂದು ಹೇಳಿದರು. ಆ ಬಳಿಕ ೧೮೯೨ನೆಯ ಇಸವಿಯವರೆಗೆ ನಡೆದಿದ್ದ ಅಭ್ಯುದಯ ಸಾಧನೆಯನ್ನು ಮನಗಂಡು ಹರ್ಷಿಸಿ ಆಗಿನ ವೈಸ್ರಾಯಿಯವರಾದ ಲಾರ್ಡ್ ಲ್ಯಾನ್ಸ್‌ಡೌನ್ ಅವರು, "ಮೈಸೂರು ಸಂಸ್ಥಾನದಲ್ಲಿ ಶ್ರೀಮನ್ಮಹಾರಾಜರವರಿಗೂ ಪ್ರಜೆಗಳಿಗೂ ಇರುವ ಅನ್ಯೋನ್ಯತೆಗಿಂತ ಹೆಚ್ಚಿನ ಅನ್ಯೋನ್ಯತೆಯು ಪ್ರಭುಗಳಿಗೂ ಪ್ರಜೆಗಳಿಗೂ ಇರತಕ್ಕ ಮತ್ತಾವ ಸಂಸ್ಥಾನವೂ ಭರತಖಂಡದಲ್ಲಿಲ್ಲವೆಂದು ಹೇಳಬಹುದಾಗಿದೆ. ಅಷ್ಟೇ ಅಲ್ಲ. ಸರ್ಕಾರವಿರುವುದು ಪ್ರಜೆಗಳ ಸುಖಸಾಧನೆಗಾಗಿಯೇ — ಎಂಬ ಉದಾತ್ತ ನಿಯಮವು ಮೈಸೂರು ಸಂಸ್ಥಾನದಲ್ಲಿ ಕಾರ್ಯತಃ ಪರಿಪಾಲಿತವಾಗಿರುವುದಕ್ಕಿಂತ ಅಧಿಕವಾಗಿ ಪರಿಪಾಲಿತವಾಗಿರುವ ಮತ್ತೊಂದು ಸಂಸ್ಥಾನವೂ ಭರತಖಂಡದಲ್ಲಿಲ್ಲವೆಂದೂ ಹೇಳಬಹುದಾಗಿದೆ" ಎಂದು ಸೂಚಿಸಿ ಶ್ಲಾಘಿಸಿದರು.

**ದೇಶೋನ್ನತಿ ಸಾಧನೆ**

ಶ್ರೀ ಕೃಷ್ಣರಾಜೇಂದ್ರ ಒಡೆಯರ್ ಬಹದ್ದೂರರವರು ಪಟ್ಟಕ್ಕೆ ಬರಬಹುದೆಂದು ಇಂಡಿಯಾ ಸರ್ಕಾರದವರು ಅಂಗೀಕರಿಸಿದ್ದುದೇ ಮುಂತಾದ ಅಂಶಗಳನ್ನೊಳಗೊಂಡಿದ್ದ ವೈಸ್ರಾಯಿಯವರ ಸಂದೇಶ ಪತ್ರವು ೧೮೯೪ನೆಯ ಇಸವಿ ಡಿಸೆಂಬರು ತಿಂಗಳು ೩೦ನೆಯ ತಾರೀಖಿನ ದಿನ ಮೈಸೂರು ಗೆಜೆಟ್ಟಿನ ವಿಶೇಷ ಪತ್ರಿಕೆಯಲ್ಲಿ ಪ್ರಕಟವಾಯಿತು.

**ಸಿಂಹಾಸನಾಧಿಕಾರ ವ್ಯವಸ್ಥೆ**

# ನಾಲ್ಕನೆಯ ಅಧ್ಯಾಯ

## ರೀಜೆಂಟರವರ ನೇಮಕ

"ಪ್ರಜಾನಾಂ ಭವಸಿ ಮಾತಾ ಆಯುಷ್ಮಂತಂ ಕರೋತು ಮಾಂ।"

**ಪಟ್ಟಾಭಿಷೇಕ ಮಹೋತ್ಸವ**

ಮೈಸೂರು ನಗರದಲ್ಲಿ ೧೮೯೫ನೆಯ ಇಸವಿ ಫೆಬ್ರವರಿ ೧ನೆಯ ತಾರೀಖಿನ ದಿನ ಶ್ರೀಮದ್ಯುವರಾಜ ಶ್ರೀ ಕೃಷ್ಣರಾಜೇಂದ್ರ ಒಡೆಯರವರ ಪಟ್ಟಾಭಿಷೇಕ ಮಹೋತ್ಸವವು ನಡೆಯಬೇಕೆಂದು ನಿಷ್ಕರ್ಷೆಯಾಯಿತು. ಶ್ರೀ ವಾಣೀವಿಲಾಸ ಸನ್ನಿಧಾನದವರು ತಮ್ಮ ಪತಿವಿಯೋಗ ದುಃಖವನ್ನು ಅತಿ ಕಷ್ಟದಿಂದ ದಮನಮಾಡಿ, ತಮ್ಮ ಕುಮಾರರ ಪಟ್ಟಾಭಿಷೇಕ ಮಹೋತ್ಸವಕ್ಕಾಗಿ ಸಕಲ ಸಂರಂಭಗಳೂ ಸಿದ್ಧವಾಗುವಂತೆ ಆಜ್ಞಾಪಿಸಿ, ಉತ್ಸವ ದಿನವನ್ನೇ ಎದುರುನೋಡುತ್ತಿದ್ದರು. ಪಟ್ಟಾಭಿಷೇಕ ಮಹೋತ್ಸವದ ಆಹ್ವಾನ ಪತ್ರಿಕೆಯು ಸ್ವದೇಶ ಪರದೇಶಗಳಲ್ಲಿದ್ದ ಅನೇಕ ಮಹನೀಯರಿಗೂ ನಾನಾ ಸಂಸ್ಥಾನಾಧೀಶರುಗಳಿಗೂ ಹೋಯಿತು. ಮನೋಹರವಾಗಿರುವಂತೆ ನಗರ ಶೃಂಗಾರವು ನಡೆದು, ಆಹ್ವಾನಿತರಾಗಿದ್ದ ರಾಜಮಹಾರಾಜರುಗಳ ಪ್ರತಿನಿಧಿಗಳೂ, ಮಠಾಧಿಪತಿಗಳ ಪ್ರತಿನಿಧಿಗಳೂ, ಇತರ ಅತಿಥಿಗಳೂ ಪಟ್ಟಾಭಿಷೇಕ ಮಹೋತ್ಸವಕ್ಕಾಗಿ ದಯಮಾಡಿದರು.

ಹಿಂದೆ ಶ್ರೀ ಮುಮ್ಮಡಿ ಕೃಷ್ಣರಾಜ ಒಡೆಯರವರೂ, ಶ್ರೀ ಚಾಮರಾಜೇಂದ್ರ ಒಡೆಯರವರೂ ಸಿಂಹಾಸನಾಸೀನರಾಗಿ ದರ್ಬಾರು ಬಳೆಯುತ್ತಿದ್ದ ಬಾಲಾಖಾನೆಯೇ ಪಟ್ಟಾಭಿಷೇಕ ಮಹೋತ್ಸವವು ನಡೆಯುವುದಕ್ಕಾಗಿ ಅಲಂಕೃತವಾಗಿ ಮೈಸೂರು ಸಂಸ್ಥಾನದ ರತ್ನಸಿಂಹಾಸನವು ಪೂರ್ವಾಭಿಮುಖವಾಗಿ ವ್ಯಾಘ್ರಾಜಿನದಮೇಲೆ ಶೋಭಿಸುತ್ತಿದ್ದಿತು. ಸಿಂಹಾಸನದ ಬಲಗಡೆ ಯೂರೋಪಿಯನ್ ಅತಿಥಿಗಳೂ, ಸಿಂಹಾಸನದ ಎಡಗಡೆಯಲ್ಲಿ ರಾಜಬಂಧುಗಳೂ, ಭಾರತೀಯ ಅತಿಥಿಗಳೂ, ವೈದಿಕರೂ, ಇತರರೂ, ಅಧಿಕಾರಿಗಳೂ ಮಂಡಿಸಿದ್ದರು. ಬಾಲಾಖಾನೆಯ ಉತ್ತರ ಭಾಗದಲ್ಲಿ ಬಾರ್ ಸಿಪಾಯಿಗಳೂ, ಭಾಲೆಯವರೂ, ಜಿಲ್ಲೋದವರೂ, ಇಂಗ್ಲಿಷ್ ಬ್ಯಾಂಡ್, ನಾದಸ್ವರ ಮುಂತಾದ ಮಂಗಳವಾದ್ಯಗಳವರೂ, ಸಂಭ್ರಮದಿಂದ ನೆರೆದಿದ್ದರು; ಪಟ್ಟದ ಆನೆ, ಪಟ್ಟದ ಕುದುರೆ, ಪಟ್ಟದ ಹಸು, ಮುಂತಾದುವುಗಳೆಲ್ಲ ದಿವ್ಯಾಲಂಕಾರ ಶೋಭಿತಗಳಾಗಿ ನಿಂತಿದ್ದುವು.

ಅರಮನೆಯ ಆನೆಬಾಗಿಲಿನ ಮುಂಭಾಗದಲ್ಲಿ ಸೈನಿಕರು ಶಿಸ್ತಿನಿಂದ ನಿಂತಿದ್ದರು. ಅಲ್ಲಿ ಗುಂಪು ಗುಂಪಾಗಿ ಕಿಕ್ಕಿರಿದು ತುಂಬಿದ್ದ ಪುರಜನರ ಉತ್ಸಾಹವನ್ನು ವರ್ಣಿಸಲಳವಲ್ಲ.

ಆಳಿದ ಮಹಾಸ್ವಾಮಿಯವರಾದ ಶ್ರೀ ಕೃಷ್ಣರಾಜೇಂದ್ರ ಒಡೆಯರವರು ಅಂದು ಶಾಸ್ತ್ರೋಕ್ತ ವಿಧಿಗಳನ್ನೂ, ಪೂಜಾದಿಗಳನ್ನೂ ನೆರವೇರಿಸಿ, ದಿವ್ಯವಸ್ತ್ರಾಭರಣ ಭೂಷಿತರಾಗಿ, ಸಿಂಹಾಸನಾರೋಹಣ ಮಹೋತ್ಸವ ಮುಹೂರ್ತವನ್ನು ನಿರೀಕ್ಷಿಸುತ್ತಿದ್ದರು. ಆಗ್ಗೆ ಬ್ರಿಟಿಷ್ ರೆಸಿಡೆಂಟರಾಗಿದ್ದ ಕರ್ನಲ್ ಹೆಂಡರ್ಸನ್ ಅವರು ಅರಮನೆಗೆ ದಯಮಾಡಿ, ಶ್ರೀ ಮನ್ಮಹಾರಾಜರವರಿಗೆ ಹಸ್ತಲಾಘವವನ್ನಿತ್ತು ಸಿಂಹಾಸನದ ಮುಂಭಾಗಕ್ಕೆ ಬಿಜಯ ಮಾಡಿಸಿ, ವೈಸ್ರಾಯಿಯವರಿಂದ ಬಂದಿದ್ದ ಖರೀತಾ ಪತ್ರಿಕೆಯನ್ನು ಓದಿ, ಶ್ರೀಮನ್ಮಹಾರಾಜರವರಿಗೆ ಒಪ್ಪಿಸಿದರು. ಶ್ರೀಮನ್ಮಹಾರಾಜರವರು ರಾಜ್ಯಭಾರ ಯೋಗ್ಯತೆಯನ್ನು ಪಡೆದು ಪ್ರಾಪ್ತವಯಸ್ಕರಾದ ನಂತರ ಮಹಾಸ್ವಾಮಿಯವರಿಗೆ ರಾಜ್ಯಸೂತ್ರಗಳನ್ನು ವಹಿಸುವುದಾಗಿಯೂ, ಅದುವರೆಗೂ ಶ್ರೀ ವಾಣೀವಿಲಾಸ ಸನ್ನಿಧಾನ, ಸಿ.ಐ. ಅವರು "ರೀಜೆಂಟ್" ಪದವಿಯನ್ನಲಂಕರಿಸಿ ಬ್ರಿಟಿಷ್ ರೆಸಿಡೆಂಟರ ಸಲಹೆಗಳನ್ನೂ ಕೇಳಿ ರಾಜ್ಯಭಾರವನ್ನು ನಿರ್ವಹಿಸಬೇಕೆಂಬುದೇ ತಮ್ಮ ಅಭಿಲಾಷೆಯೆಂಬುದಾಗಿಯೂ ಅದರಲ್ಲಿ ವೈಸ್ರಾಯಿಯವರು ಸೂಚಿಸಿದ್ದರು. ಆ ಪತ್ರಿಕೆಯ ವಾಚನವು ಮುಗಿದ ತರುವಾಯ ಬ್ರಿಟಿಷ್ ರೆಸಿಡೆಂಟರವರು, ಶ್ರೀಮನ್ಮಹಾರಾಜರವರಿಗೆ ಹಸ್ತಲಾಘವವನ್ನಿತ್ತು ಮಹಾಸ್ವಾಮಿಯವರನ್ನು ಮಧ್ಯಾಹ್ನ ಹನ್ನೆರಡೂವರೆ ಘಂಟೆಯ ವೃಷಭ ಲಗ್ನದ ಉಚ್ಚಾಂಶದ ಶುಭ ಸಮಯದಲ್ಲಿ ಸಿಂಹಾಸನಾರೋಹಣ ಮಾಡಿಸಿದರು. ಮಂಗಳವಾದ್ಯಗಳು ಭೋರ್ಗರೆಯುತ್ತಿರುವಲ್ಲಿ ಸಮಸ್ತ ದಿಕ್ಕುಗಳಿಂದಲೂ ಪ್ರಜೆಗಳು ಹೂಗಳನ್ನೆರಚಿ ರಾಜಭಕ್ತಿಯನ್ನು ಸಲ್ಲಿಸಿದರು. ಸೈನಿಕರು ಕ್ರಮಪ್ರಕಾರ "ಸುರುಟು" ಮಾಡಿದರು. ಬತೇರಿಯಿಂದ ಇಪ್ಪತ್ತೊಂದು ಕುಶಾಲು ತೋಫುಗಳು ಹಾರಿದುವು. ಪುರೋಹಿತರೇ ಮುಂತಾದ ವೈದಿಕ ಮಂಡಲಿಯವರು ಯಥಾವಿಧಿಯಾಗಿ ಪಟ್ಟಾಭಿಷೇಕದ ಶುಭ ಕರ್ಮವನ್ನು ನೆರವೇರಿಸಿ ಮಂಗಳಾಶೀರ್ವಾದ ಮಾಡಿದರು. ಆ ಬಳಿಕ ದರ್ಬಾರು ಬಕ್ಷಿಯವರಾದ ರಾಯ್ ಬಹದ್ದೂರ್ ಶ್ರೀಮಾನ್ ಅಂಬಿಲ್ ನರಸಿಂಹ ಐಯಂಗಾರ್ಯರವರು ರಾಜವಂಶಾವಳಿಯನ್ನೂ ಪ್ರಸಿದ್ಧಪತ್ರಿಕೆಯನ್ನೂ ಓದಿದರು. ಅನಂತರ ಬ್ರಿಟಿಷ್ ರೆಸಿಡೆಂಟರವರು ವಾಡಿಕೆಯಂತೆ ವೈಸ್ರಾಯಿಯವರಿಂದ ಬಂದಿದ್ದ ಇಪ್ಪತ್ತೊಂದು ತಟ್ಟೆಗಳ ಖಿಲ್ಲತ್ತುಗಳನ್ನು



ಸಹೋದರರು

(ಆಳಿದ ಮಹಾಸ್ವಾಮಿಯವರು ಮತ್ತು ದಿವಂಗತರಾದ
ಶ್ರೀಮದ್ಯುವರಾಜ ಶ್ರೀಕಂಠೀರವ ನರಸಿಂಹರಾಜ ಒಡೆಯರವರು)



ಶ್ರೀಮನ್ಮಹಾರಾಜರವರಿಗೆ ಒಪ್ಪಿಸಿ, ಭಾರಿ ಮುತ್ತಿನ ಕಂಠಿಯೊಂದನ್ನು ಮಹಾಸ್ವಾಮಿಯವರ ಕಂಠಕ್ಕೆ ಹಾಕಿದರು. ಆ ಬಳಿಕ ಶ್ರೀಮನ್ಮಹಾರಾಜರವರು ವೈಸ್ರಾಯಿಯವರಿಗೆ ಕಳುಹಿಸುವುದಕ್ಕಾಗಿ ಪಾಡಿಕೆಯಂತೆ ಇಪ್ಪತ್ತೊಂದು ತಟ್ಟೆ ಖಿಲ್ಲತ್ತುಗಳನ್ನೂ ನೂರೊಂದು ವೀಳೆಯಗಳನ್ನೂ ದಿವಾನ್‌ರವರ ಮೂಲಕ ಬ್ರಿಟಿಷ್ ರೆಸಿಡೆಂಟರವರಿಗೆ ಒಪ್ಪಿಸಿದರು. ಅನಂತರ ರಾಜಬಂಧುಗಳೂ, ಸರದಾರರೂ, ಅಧಿಕಾರಿಗಳೂ ಶ್ರೀಮನ್ಮಹಾರಾಜರವರಿಗೆ ನಜರು ಮುಜರೆಗಳಿಂದ ರಾಜಭಕ್ತಿ ವಿಶ್ವಾಸಗಳನ್ನರ್ಪಿಸಿದರು.

ದಿವಾನ್‌ರವರು ಬ್ರಿಟಿಷ್ ರೆಸಿಡೆಂಟರವರಿಗೆ ಪುಷ್ಪಹಾರ ತಾಂಬೂಲಗಳನ್ನು ಕೊಟ್ಟು ಮರ್ಯಾದೆ ಮಾಡಿದ ಬಳಿಕ ಇಂಗ್ಲಿಷ್ ಸರದಾರರುಗಳಿಗೆಲ್ಲ ರಾಜಸೇನಾಭೂಷಣ ಶ್ರೀಮಾನ್ ಬಕ್ಷಿ ಬಸವಪ್ಪಾಜಿ ಅರಸಿನವರು ಮರ್ಯಾದೆ ಮಾಡಿದರು. ರೆಸಿಡೆಂಟರೇ ಮುಂತಾದ ಯೂರೋಪಿಯನ್ ಅತಿಥಿಗಳು ಶ್ರೀಮನ್ಮಹಾರಾಜರವರಿಗೆ ಮುಜರೆ ಮಾಡಿ ಅರಮನೆಯಿಂದ ತೆರಳಿದರು. ಮರಾಧಿಕಾರಿಗಳ ಕಡೆಯಿಂದ ಬಂದಿದ್ದ ವೈದಿಕ ಮಂಡಲಿಯವರು ಶ್ರೀಮನ್ಮಹಾರಾಜರವರಿಗೆ ವೇದೋಕ್ತಾಶೀರ್ವಾದ ಪೂರ್ವಕವಾಗಿ ಖಿಲ್ಲತ್ತುಗಳನ್ನೂ ಫಲಮಂತ್ರಾಕ್ಷತೆಗಳನ್ನೂ ಒಪ್ಪಿಸಿದರು. ಉತ್ಸವಕ್ಕೆ ಬಂದಿದ್ದ ಸಮಸ್ತರಿಗೂ ಪುಷ್ಪಮಾಲಿಕೆಗಳನ್ನು ಹಾಕಿ ತಾಂಬೂಲಗಳನ್ನು ಕೊಟ್ಟ ಬಳಿಕ ದರ್ಬಾರು ಮುಗಿಯಿತು ; ಶ್ರೀಮನ್ಮಹಾರಾಜರವರು ಸಿಂಹಾಸನದಿಂದಿಳಿದು ಅಂತಃಪುರಕ್ಕೆ ಚಿತ್ತೈಸಿದರು. ಅತಿಥಿಗಳೆಲ್ಲರೂ ಆನಂದದಿಂದಕೂಡಿ ಅರಮನೆಯಿಂದ ತೆರಳಿದರು.

ಆಳಿದ ಮಹಾಸ್ವಾಮಿಯವರಾದ ಶ್ರೀ ಮನ್ಮಹಾರಾಜರವರ ಪಟ್ಟಾಭಿಷೇಕ ಮಹೋತ್ಸವ ನಿಮಿತ್ತವಾಗಿ ಅನೇಕ ಭೂರಿದಾನಗಳೂ ಸಂತರ್ಪಣೆಗಳೂ ಉತ್ಸವಪರಂಪರೆಗಳೂ ವಿಜೃಂಭಣೆಯಿಂದ ನಡೆದುವು. ಅವರಿಗೆ ಅನೇಕ ವಿಜ್ಞಾಪನಾ ಪತ್ರಿಕೆಗಳು ಸಮರ್ಪಿತವಾದುವು. ಆಹ್ವಾನಿತರಾಗಿ ಬಂದಿದ್ದ ಅತಿಥಿಗಳಿಗೆಲ್ಲ ಅವರು ಖಿಲ್ಲತ್ತುಗಳನ್ನು ದಯಪಾಲಿಸಿದರು. ದರ್ಬಾರು ಬಕ್ಷಿಯವರಿಂದ ಅವರುಗಳು ಆ ಖಿಲ್ಲತ್ತುಗಳನ್ನು ಪಡೆದು, ಮಹತ್ತರವಾದ ಸಂತೋಷದಿಂದ ತಮ್ಮ ತಮ್ಮ ಸ್ಥಾನಗಳಿಗೆ ತೆರಳಿದರು.

ಪ್ರಜೆಗಳ ಪ್ರಾರ್ಥನೆಯನ್ನೂ, ದಿವಾನ್‌ರವರೇ ಮುಂತಾದ ಅಧಿಕಾರಿಗಳ ವಿಜ್ಞಾಪನೆಯನ್ನೂ, ಬಂಧುಗಳ ಬಿನ್ನಹವನ್ನೂ ಇಂಡಿಯಾ ಸರ್ಕಾರದವರ ಸಲಹೆಯನ್ನೂ ಲಾಲಿಸಿ, ಶ್ರೀ ವಾಣೀವಿಲಾಸ ಸನ್ನಿಧಾನ

ದವರು ದುಸ್ಸಹವಾದ ಪತಿವಿಯೋಗ ದುಃಖವನ್ನು ಸಹಿಸಿಕೊಂಡು, "ರೀಜೆಂಟ್" ಪದವಿಯನ್ನು ವಹಿಸಲು ಸಮ್ಮತಿಸಿ ಕೃಪೆಮಾಡಿದರು.

**"ರೀಜೆಂಟ್" ಪದವಿ**

ತಮ್ಮ ಮಕ್ಕಳ ಜೊತೆಗೆ ಮೈಸೂರು ಸಂಸ್ಥಾನದ ಪ್ರಜಾಕೋಟಿಯನ್ನೂ ಸಲಹುವ ಮಹಾಮಾತೃಶ್ರೀಯವರಾದರು. ರಾಜ್ಯಭಾರವನ್ನು ನಿರ್ವಹಿಸುವುದರಲ್ಲಿ ಅವರು ವಿಸ್ಮಯಜನಕವಾದ ಸಾಮರ್ಥ್ಯವನ್ನು ಪ್ರದರ್ಶಿಸಿದರು. ಅವರು ರಾಜ್ಯಭಾರವನ್ನು ನಿರ್ವಹಿಸಿದ ವಿಚಕ್ಷಣೆಯನ್ನು ಕಂಡು ರಾಜ್ಯಾಡಳಿತ ನಿರ್ವಹಣ ದುರಂಧರರೆನಿಸಿದ ಮೇಧಾವಿಗಳು ಕೂಡ ವಿಸ್ಮಿತರಾಗಿ ಅವರನ್ನು ಶ್ಲಾಘಿಸಿದರು; ಯಾವ ಉದಾತ್ತ ಭಾವನೆಯಿಂದ ಅವರು ರಾಜ್ಯಭಾರ ಸೂತ್ರವನ್ನು ಸ್ವೀಕರಿಸಿದರೋ ಅದಕ್ಕನುಗುಣವಾದ ಕಾರ್ಯಸಿದ್ಧಿಯು ಲಭಿಸಿತು.

ಶ್ರೀ ಶೃಂಗಗಿರಿ ಜಗದ್ಗುರುಗಳಾಗಿದ್ದ ಶ್ರೀ ಸಚ್ಚಿದಾನಂದ ಶಿವಾಭಿನವ ನೃಸಿಂಹಭಾರತಿ ಸ್ವಾಮಿಗಳವರು (೧೮೯೫ನೆಯ ಇಸವಿಗೆ ಸರಿಯಾದ

**ಜಗದ್ಗುರುಗಳ ಹಿತೋಪದೇಶ**

ಶಾಲಿವಾಹನ ಶಕ ೧೮೧೮ನೆಯ ಸಂವತ್ಸರವಾದ) ಮನ್ಮಥನಾಮ ಸಂವತ್ಸರ ಜ್ಯೇಷ್ಠ ಬಹುಳ ಪಂಚಮಿಯ ದಿನ ಮೈಸೂರು ನಗರಕ್ಕೆ ದಯಮಾಡಿದರು. ಮಹಾಮಾತೃಶ್ರೀಯವರು ಕೋರಿದಂತೆ ಶ್ರೀ ಶ್ರೀಗಳವರು ಅರಮನೆಗೆ ಚಿತ್ತೈಸಿದರು; "ಸರ್ವದಾ ಮಂದಹಾಸದಿಂದ ಸಂಶೋಭಿಸುತ್ತಿದ್ದ ಶ್ರೀ ಶ್ರೀಗಳವರ ಮುಖಕಮಲವು ಪಟ್ಟಣ ಪ್ರವೇಶಕಾಲದಲ್ಲಿಯೂ ಅರಮನೆಯ ಸಮೀಪಕ್ಕೆ ಬರುವ ಕಾಲದಲ್ಲಿಯೂ ಅತ್ಯಂತ ವಿಕಾರವನ್ನು ಹೊಂದಿ ನೋಡುವವರ ಮನಸ್ಸುಗಳು ಕಲಕಿಹೋಗುವಂತೆ ಮಾಡಿತು." ಶ್ರೀ ಶ್ರೀಗಳವರ ಆಗಮನವನ್ನು ನಿರೀಕ್ಷಿಸುತ್ತಿದ್ದ ಶ್ರೀಮನ್ಮಹಾರಾಜ ಶ್ರೀ ಕೃಷ್ಣರಾಜೇಂದ್ರ ಒಡೆಯರವರನ್ನೂ, ಶ್ರೀಮದ್ಯುವರಾಜ ಶ್ರೀ ಕಂಠೀರವ ನರಸಿಂಹರಾಜ ಒಡೆಯರವರನ್ನೂ ಕಂಡೊಡನೆಯೇ ಸಂಯಮಿ ಶ್ರೇಷ್ಠರಾದ ಶ್ರೀ ಶ್ರೀಗಳವರೂ ಕೂಡ ಉತ್ಕಂಠಿತರಾಗಿ ಕಂಬನಿದುಂಬಿದರು. ಅರಮನೆಗೆ ದಯಮಾಡಿಸಿ, ಮಹಾಮಾತೃಶ್ರೀಯವರಿಗೂ ಅವರ ಪುತ್ರ ಪುತ್ರಿಯರಿಗೂ ಶ್ರೀ ಶ್ರೀಗಳವರು ವಿಧವಿಧವಾಗಿ ಹಿತೋಪದೇಶ ಮಾಡಿ ಸಂತೈಸಿದರು. ಶ್ರೀ ಶ್ರೀಗಳವರು ಅದೇ ಮನ್ಮಥ ಸಂವತ್ಸರದ ಆಷಾಢ ಶುದ್ಧ ಸಪ್ತಮಿಯ ದಿನ ಶೃಂಗಗಿರಿಗೆ ಹಿಂತಿರುಗಿದ ಬಳಿಕ ಶ್ರೀ ಶಾರದಾದೇವಿಯವರ ಸನ್ನಿಧಿಯಲ್ಲಿ ಆಗಿನ ಶ್ರೀಮನ್ಮಹಾರಾಜರವರ ಮತ್ತು ಶ್ರೀಮದ್ಯುವರಾಜರವರ

ಶ್ರೇಯಸ್ಸಿಗಾಗಿ ಪ್ರಾರ್ಥಿಸಿದರು. ಆಗ್ಗೆ ಶ್ರೀ ಶ್ರೀಗಳವರಿಂದ ರಚಿತವಾದ ಶ್ಲೋಕಗಳಲ್ಲಿ ಮೂರನ್ನು ಇಲ್ಲಿ ಕಾಣಿಸಲಾಗಿದೆ:—

"ಶ್ರೀ ರಾಮಲಕ್ಷ್ಮಣಾವಿವ ಸೌಹಾರ್ದಂ ಪ್ರಾಪ್ಯ ಸುಸ್ಥಿರಂ ಸುಚಿರಂ ।
ಶ್ರೀ ಚಾಮರಾಜಪುತ್ರೌ ಜೀಯಾಸ್ತಾಂ ಶಾರದಾಂಬ ತವ ಕೃಪಯಾ ॥

ಭಾರತಿ ಸಂಪದ್ಭರಿತೌ ಬುದ್ಧ್ಯಾ ಚೈವಾತಿತೀಕ್ಷ್ಣಯಾ ಪೂರ್ಣೌ ।
ಆಯುಷ್ಮನ್ತೌ ಸುಖಿನೌ ಭೂಯಾಸ್ತಾಂ ಚಾಮರಾಜ ಸುಕುಮಾರೌ ॥

ದೇವದ್ವಿಜಗುರುಭಕ್ತಿಂ ಸುದೃಢಾಂ ದತ್ವಾ ಚ ವಿನಯ ಸಂಪತ್ತಿಂ ।
ಪಾಲಯ ಪದ್ಮಜಮಾನಿನಿ ಸತತಂ ಶ್ರೀ ಚಾಮರಾಜ ಸುಕುಮಾರೌ" ॥

# ಐದನೆಯ ಅಧ್ಯಾಯ

## ವಿದ್ಯಾಭ್ಯಾಸ

"ಸಹ ನಾವವತು ಸಹ ನೌ ಭುನಕ್ತು ಸಹವೀರ್ಯಂ ಕರವಾವಹೈ ।
ತೇಜಸ್ವಿನಾವಧೀತಮಸ್ತು ಮಾ ವಿದ್ವಿಷಾವಹೈ" ॥

**ಕಲ್ಕತ್ತಾ ನಗರದಿಂದ ಹಿಂತಿರುಗಿದಮೇಲೆ**

ಹಿಂದಿನ ಅಧ್ಯಾಯದಲ್ಲಿ ಸೂಚಿತವಾಗಿರುವಂತೆ ಮಹಾಮಾತೃಶ್ರೀಯವರೇ ಮುಂತಾದವರು ಕಲ್ಕತ್ತಾ ನಗರದಿಂದ ಮೈಸೂರು ನಗರಕ್ಕೆ ಹಿಂತಿರುಗಿ, ಶ್ರೀ ಚಾಮರಾಜೇಂದ್ರ ಒಡೆಯರವರ ಉತ್ತರಕ್ರಿಯಾದಿಗಳೆಲ್ಲ ನೆರವೇರಿ 'ಶುಭಸ್ವೀಕಾರ' ಕರ್ಮವು ಪೂರೈಸಿದ ಬಳಿಕ "ರಾಯಲ್ ಸ್ಕೂಲ್" ಪಾಠಶಾಲೆಯ ಕೆಲಸವು ಯಥಾಪ್ರಕಾರ ಮತ್ತೆ ನಡೆಯಲುಪಕ್ರಮವಾಯಿತು. ಶ್ರೀಮಾನ್ ವೈಟ್ಲಿಯವರೇ ಅದರ ಆಡಳಿತವನ್ನು ೧೮೯೫ನೆಯ ಇಸವಿಯವರೆಗೂ ನಿರ್ವಹಿಸಿ, ಅನಂತರ ಪಬ್ಲಿಕ್‌ವರ್ಕ್ಸ್ ಇಲಾಖೆಯ ಕೆಲಸಕ್ಕೆ ಹಿಂತಿರುಗಿದರು. ಮುಂದೆ ಪ್ರಾಪ್ತವಯಸ್ಕರಾದ ಬಳಿಕ ರಾಜ್ಯಭಾರವನ್ನು ವಹಿಸಬೇಕಾಗಿದ್ದ ಆಳಿದ ಮಹಾಸ್ವಾಮಿಯವರಾದ ಶ್ರೀಮನ್ಮಹಾರಾಜರವರಿಗೂ, ಶ್ರೀಮದ್ಯುವರಾಜ ಶ್ರೀ ಕಂಠೀರವ ನರಸಿಂಹರಾಜ ಒಡೆಯರವರಿಗೂ, ಯುಕ್ತರೀತಿಯಲ್ಲಿ ಶಿಕ್ಷಣ ದೊರೆಯುವ ವಿಷಯದಲ್ಲಿ ಇಂಡಿಯಾ ಸರ್ಕಾರದವರೂ ಸಹ ತೀವ್ರಾಸಕ್ತಿಯನ್ನು ವಹಿಸಿ ಬ್ರಿಟಿಷ್ ರೆಸಿಡೆಂಟರವರ ಮೂಲಕ ಕಾಲಕಾಲಕ್ಕೆ ತಕ್ಕ ಸಲಹೆಗಳನ್ನು ಕೊಡುತ್ತಿದ್ದರು. ಮಹಾಸ್ವಾಮಿಯವರ ಮತ್ತು ಸೋದರ ಸೋದರಿಯರ ವಿದ್ಯಾಭ್ಯಾಸವು ಸಮರ್ಪಕವಾಗಿ ಮುಂದುವರಿಯಿತು. ಶ್ರೀಮಾನ್ ಪೂರ್ಣ ರಾಘವೇಂದ್ರರಾಯರವರು "ಅಸಿಸ್ಟೆಂಟ್ ಟ್ಯೂಟರ್" ಎಂಬ ಸಹಾಯೋಪಾಧ್ಯಾಯಾಧಿಕಾರಕ್ಕೆ ನಿಯೋಜಿತರಾಗಿ ಇಂಗ್ಲಿಷ್ ಭಾಷೆಯನ್ನೂ ವಿಜ್ಞಾನ ಶಾಸ್ತ್ರವನ್ನೂ ("ಸೈನ್ಸ್") ಕಲಿಸುತ್ತಿದ್ದರು; ಶಿಷ್ಯರಿಗೆ ಸಂತೋಷವಾಗುವಂತೆ ವೈಜ್ಞಾನಿಕ ಪ್ರಯೋಗಗಳನ್ನು ತೋರಿಸುತ್ತಿದ್ದರು; ಆಗಿನ ಕಾಲದಲ್ಲಿ ವೈಜ್ಞಾನಿಕ ಪ್ರಯೋಗಗಳನ್ನು ("ಎಕ್ಸ್‌ಪೆರಿಮೆಂಟ್ಸ್") ತೋರಿಸುತ್ತಿದ್ದುದೇ ಅತಿ ವಿರಳ.

ಪಾಠಶಾಲೆಯ ಕೆಲಸವು ಪೂರ್ವಾಹ್ನ ಹನ್ನೊಂದು ಘಂಟೆಗೆ

ಪ್ರಾರಂಭವಾಗಿ ಅಪರಾಹ್ನ ಎರಡು ಘಂಟೆಗಳವರೆಗೂ ನಡೆಯುತ್ತಿದ್ದಿತು. ಅಪರಾಹ್ನ ಎರಡು ಘಂಟೆಯಿಂದ ಮೂರು ಘಂಟೆಯುವರೆಗೆ ವಿರಾಮ. ವಿರಾಮ ಕಾಲದಲ್ಲಿ ರುಚಿಕರವಾದ ಭೋಜನ.

**ಶಾಲಾಕಾರ್ಯ**

ವಿರಾಮವು ಕಳೆದ ಬಳಿಕ ಐದು ಘಂಟೆಯುವರೆಗೆ ಮತ್ತೆ ಪಾಠಗಳು. ಅನಂತರ ಆಟ ಪಾಟಗಳು ಅಥವಾ ಕವಾತು ನಡೆದು, ಆ ಬಳಿಕ ಮಹಾಸ್ವಾಮಿಯವರುಗಳಿಗೂ ಸಹಪಾಠಿಗಳಾದ ವಿದ್ಯಾರ್ಥಿಗಳಿಗೂ ಫಲಾಹಾರವು ನಡೆಯುತ್ತಿದ್ದಿತು. ಆ ಬಳಿಕ ಮಹಾಸ್ವಾಮಿಯವರುಗಳು ಅರಮನೆಗೂ, ಉಳಿದವರು ತಮ್ಮ ತಮ್ಮ ಮನೆಗಳಿಗೂ ತೆರಳುತ್ತಿದ್ದರು. ಶ್ರೀಮಾನ್ ವೈಟ್ಲಿ ಸಾಹೇಬರು ಪಾಠಗಳನ್ನು ಕಲಿಸುತ್ತಿದ್ದಷ್ಟೇ ಶ್ರದ್ಧೆಯಿಂದ ವ್ಯಾಯಾಮ ವಿಚಾರಕ್ಕೂ ಗಮನಕೊಟ್ಟು ಮೇಲ್ವಿಚಾರಣೆ ನೋಡಿಕೊಳ್ಳುತ್ತಿದ್ದರು; ಕವಾತಿನ ("ಡ್ರಿಲ್") ಕಾಲದಲ್ಲಿ ಬಾಲಕರಲ್ಲಿ ಒಬ್ಬರೂ ತಪ್ಪಿಸಿಕೊಳ್ಳದಂತೆ ನೋಡಿಕೊಳ್ಳುತ್ತಿದ್ದರು; ಶಿಷ್ಯರ ಕೈ ಬರೆಹವು ಸ್ಫುಟವಾಗಿಯೂ ಸುಂದರವಾಗಿಯೂ ಇರುವಂತೆ ಕುದುರಲೆಂಬ ಉದ್ದೇಶದಿಂದ ಪ್ರತಿ ದಿನವೂ "ಮಾನೆ ಬರೆವಣಿಗೆ" ("ಕಾಪಿ") ಬರೆಯಿಸುತ್ತಿದ್ದರು. ಚಿತ್ರಲೇಖನದಲ್ಲಿ ಶಿಕ್ಷಣವೂ ನಡೆಯುತ್ತಿದ್ದಿತು. ಬಾಲಕರು ಅಪರಾಧ ಮಾಡಿದಾಗ ಶ್ರೀಮಾನ್ ವೈಟ್ಲಿಯವರು ಮುಚ್ಚಿಯ ಕೆಲಸದಲ್ಲಿದ್ದ ಪುಟ್ಟಣ್ಣನವರಿಂದ ಏಟು ಕೊಡಿಸುತ್ತಿದ್ದರು; ಅಲ್ಲದೆ ಮಹಾಸ್ವಾಮಿಯವರ ಮಾದರಿಯನ್ನನುಸರಿಸುವಂತೆ ಬುದ್ಧಿ ಹೇಳುತ್ತಿದ್ದರು. ಮಳೆ ಬಂದ ದಿನಗಳಲ್ಲಿ ಚೆಂಡಾಟ ಮುಂತಾದುವುಗಳು ನಡೆಯುತ್ತಿರಲಿಲ್ಲ. ಪಾಠಶಾಲೆಯೊಳಗೇ ಕುಳಿತು ಮಹಾಸ್ವಾಮಿಯವರೂ ಅವರ ಸಹಪಾಠಿಗಳೂ ಶ್ರೀಮಾನ್ ಟಿ. ಗುಂಡಪ್ಪನವರೆಂಬೊಬ್ಬರು ಸಹಪಾಠಿಯವರಿಂದ ಕಥೆಗಳನ್ನು ಕೇಳಿ ಹರ್ಷಿಸುತ್ತಿದ್ದರು. ಶ್ರೀಮಾನ್ ಟಿ. ಗುಂಡಪ್ಪನವರು ಹೇಳುತ್ತಿದ್ದುವುಗಳೆಲ್ಲ ನಮ್ಮ ದೇಶದ ಕಥೆಗಳೇ. ಮಹಾಸ್ವಾಮಿಯವರು ಇತರರೊಡನೆ ಆದರದಿಂದ ಸಮಾನಸ್ಕಂಧರಾಗಿ ಕುಳಿತು ಕಥೆಗಳನ್ನು ಕೇಳುತ್ತಿದ್ದರು. (ಶ್ರೀಮಾನ್ ಟಿ. ಎಸ್. ಅಲೀಖಾನ್‌ರವರು ೧೮೯೪ನೆಯ ಇಸವಿಯಲ್ಲಿ "ರಾಯಲ್ ಸ್ಕೂಲ್" ಪಾಠಶಾಲೆಗೆ ಸೇರಿದರು. ಅಮೀನ್-ಉಲ್-ಮುಲ್ಕ್ ಸರ್ ಮಿರ್ಜಾ ಎಂ. ಇಸ್ಮಾಯಿಲ್, ಕೆ.ಸಿ.ಐ.ಇ., ಓ.ಬಿ.ಇ. ಅವರೂ ಶ್ರೀಮಾನ್ ಟಿ. ಎಸ್. ಅಲೀಖಾನ್‌ರವರಂತೆಯೇ ಆಳಿದ ಮಹಾಸ್ವಾಮಿಯವರ ಸಹಪಾಠಿಗಳು. ಅವರು ತಮ್ಮ ಹದಿಮೂರನೆಯ ವಯಸ್ಸಿನಲ್ಲಿ — ಎಂದರೆ ೧೮೯೬ನೆಯ ಇಸವಿಯಲ್ಲಿ ಅವರ ಸಹಪಾಠಿ

ಗಳಾಗಿ ಸೇರಿದರು. ಅವರ ತಂದೆಯವರಾದ ಶ್ರೀಮಾನ್ ಆಗಾಜಾನ್ ಸಾಹೇಬರವರು ಶ್ರೀ ಚಾಮರಾಜೇಂದ್ರ ಒಡೆಯರವರ ಅಂಗರಕ್ಷಕರಾಗಿದ್ದರು. ಅವರ ಮರಣಾನಂತರ ಪುಟ್ಟ ಮಹಾಸ್ವಾಮಿಯವರ ಅಂಗರಕ್ಷಕರಾಗಿ ಕೆಲಸ ಮಾಡಿದರು.) ಬೇಸಗೆಯಲ್ಲಿ "ಫರ್ನ್ ಹಿಲ್" ಎಂಬ ಹೆಸರಿನ ನೀಲಗಿರಿ ಅರಮನೆಯಲ್ಲಿ ಪಾಠಶಾಲೆಯು ನಡೆಯುತ್ತಿದ್ದಿತು. ವರ್ಷದಲ್ಲಿ ಕೆಲವು ತಿಂಗಳುಗಳು ಬೆಂಗಳೂರು ಅರಮನೆಯಲ್ಲಿ ಪಾಠಶಾಲೆಯು ನಡೆಯುತ್ತಿದ್ದಿತು. ಉಳಿದ ಕಾಲದಲ್ಲಿ ಮೈಸೂರು ನಗರದ ಲೋಕರಂಜನ ಮಹಲಿನಲ್ಲಿ (ಈ ಮೊದಲೇ ತಿಳಿಸಿರುವಂತೆ) ನಡೆಯುತ್ತಿದ್ದಿತು. ಪಾಠಶಾಲೆಯಲ್ಲಿ, ಕುದುರೆಸವಾರಿ ಮಾಡುವುದು, ಈಜುವುದು ಮುಂತಾದುವುಗಳನ್ನೂ ಕಲಿಸುತ್ತಿದ್ದರು. ಮಹಾಸ್ವಾಮಿಯವರು ತಕ್ಕಷ್ಟು ದೇಹಪುಷ್ಟಿಯನ್ನು ಪಡೆದ ಬಳಿಕ ಬಂದೂಕವನ್ನು ಹೊಡೆಯುವುದೇ ಮುಂತಾದುವುಗಳಲ್ಲಿಯೂ ಶಿಕ್ಷಣವನ್ನು ಪಡೆದು ಸಾಮರ್ಥ್ಯ ಹೊಂದಿದರು.

**ಪ್ರಬಂಧ ರಚನೆಯ ಪ್ರತಿಭೆ**

ಆಳಿದ ಮಹಾಸ್ವಾಮಿಯವರು ಹತ್ತು ವರ್ಷ ವಯಸ್ಸಿನ ಬಾಲ್ಯದಲ್ಲಿ ಪ್ರಬಂಧ ರಚನೆಯಲ್ಲಿ ತೋರಿಸಿದ ಪ್ರತಿಭೆಯೂ ಸಾಮರ್ಥ್ಯವೂ ಶ್ಲಾಘಾರ್ಹವಾಗಿವೆ. ಬೆಂಗಳೂರನ್ನೂ ಮೈಸೂರನ್ನೂ ಪರಸ್ಪರವಾಗಿ ಹೋಲಿಸಿ ಇಂಗ್ಲಿಷ್ ಭಾಷೆಯಲ್ಲಿ ಒಂದು ಪ್ರಬಂಧವನ್ನು ಬರೆಯಬೇಕೆಂದು ತರಗತಿಯಲ್ಲಿ ಉಪಾಧ್ಯಾಯರು ಕೇಳಿದಾಗ ಮಹಾಸ್ವಾಮಿಯವರು ಬರೆದ ಪ್ರಬಂಧವೇ ಆ ತರಗತಿಯ ವಿದ್ಯಾರ್ಥಿಗಳೆಲ್ಲರ ಪ್ರಬಂಧಗಳಿಗಿಂತಲೂ ಉತ್ತಮವಾಗಿದ್ದು ಉಪಾಧ್ಯಾಯರಿಂದ ಶ್ಲಾಘನೆಯನ್ನು ಪಡೆಯಿತು. ಆ ಚಿಕ್ಕವಯಸ್ಸಿನಲ್ಲಿ ಮಹಾಸ್ವಾಮಿಯವರ ಪರಿಶೀಲನ ಸಾಮರ್ಥ್ಯವೆಷ್ಟು ಅಧಿಕವಾಗಿದ್ದಿತೆಂಬುದು ಆ ಪ್ರಬಂಧದಲ್ಲಿ ಸೂಚಿತವಾಗಿರುವ ಅಂಶಗಳಿಂದ ಗೊತ್ತಾಗುತ್ತದೆ. ಅಲ್ಲದೆ, ಮಾತೃಭಾಷೆಯಲ್ಲದ ಇಂಗ್ಲಿಷ್ ಭಾಷೆಯಲ್ಲಿ ಅಷ್ಟು ಚಿಕ್ಕವಯಸ್ಸಿಗೇ ಮಹಾಸ್ವಾಮಿಯವರು ಎಷ್ಟು ಅಧಿಕವಾದ ಪರಿಶ್ರಮವನ್ನು ಪಡೆದಿದ್ದರೆಂಬುದು ಮೂಲ ಪ್ರಬಂಧವನ್ನು ಓದಿದವರೆಲ್ಲರಿಗೂ ಸ್ಪಷ್ಟವಾಗುತ್ತದೆ. (ಇನ್ನೂ ಚಿಕ್ಕವಯಸ್ಸಿನವರಾಗಿದ್ದಾಗಲೇ ಮಹಾಸ್ವಾಮಿಯವರು ಇಂಗ್ಲಿಷ್ ಭಾಷೆಯಲ್ಲಿ ಪ್ರದರ್ಶಿಸಿದ ಸಂಭಾಷಣ ಸಾಮರ್ಥ್ಯವನ್ನು ಕಂಡು ಅದು ಅನನ್ಯಸಾಧಾರಣವೆಂದು ಮುಂತಾಗಿ ಶ್ರೀಮಾನ್ ಜೆ. ವಿಯರ್ ಸಾಹೇಬರವರು ಶ್ಲಾಘಿಸಿದ್ದುದನ್ನು ಹಿಂದೆಯೇ ತಿಳಿಸಲಾಗಿದೆ.) ಮಹಾಸ್ವಾಮಿಯವರು

ತರಗತಿಯಲ್ಲಿ ಕುಳಿತೇ ಬರೆದ ಆ ಆಶುಪ್ರಬಂಧದ ಸಾರಾಂಶವನ್ನು ಇಲ್ಲಿ ಸೂಚಿಸಿ, ಮೂಲವನ್ನು ಅಡಿಟಿಪ್ಪಣಿಯಲ್ಲಿ ಕಾಣಿಸಲಾಗಿದೆ.* "ಬೆಂಗಳೂರು ನಗರದಲ್ಲಿ ನಾವು ಬಹಳ ವೇಗವಾಗಿ ಕುದುರೆಸವಾರಿ ಮಾಡಲನುಕೂಲಿಸುವಂತೆ ನಯವಾದ ಪ್ರದೇಶವಿರುವ ಕಾರಣ, ಕುದುರೆ ಸವಾರಿಗೆ ಅದು ಸೊಗಸಾಗಿದೆ. ಆದರೆ ಕುದುರೆಸವಾರಿಗೆ ಬೆಂಗಳೂರು ನಗರದಲ್ಲಿರುವಂತಹ ಪ್ರದೇಶವು ಮೈಸೂರು ನಗರದಲ್ಲಿಲ್ಲ. ಕುದುರೆಸವಾರಿಯಲ್ಲಿ ಶಿಕ್ಷಣ ಕೊಡುವುದಕ್ಕಾಗಿ ಏರ್ಪಟ್ಟಿರುವ ಶಿಕ್ಷಣಶಾಲೆಯು ಬೆಂಗಳೂರಿನಲ್ಲಿ ಮೈಸೂರಿನದಕ್ಕಿಂತ ಬಹಳ ದೊಡ್ಡದು. ಬೆಂಗಳೂರಿನಲ್ಲಿ ದೊಡ್ಡ 'ಬ್ಯಾಂಡ್ ಸ್ಟ್ಯಾಂಡ್' ಇದೆ; ಆದರೆ ಮೈಸೂರಿನಲ್ಲಿ ಅದರಷ್ಟು ದೊಡ್ಡದಿಲ್ಲ. ಬೆಂಗಳೂರಿನಲ್ಲಿ ಅನೇಕ ಕುದುರೆಗಳಿವೆ. ಮೈಸೂರಿನಲ್ಲಿ ಅಷ್ಟು ಕುದುರೆಗಳಿಲ್ಲ. ಮೈಸೂರಿನಲ್ಲಿ ವಾಯುಗುಣವು ಕೊಂಚ ಉಷ್ಣ. ಬೆಂಗಳೂರಿನಲ್ಲಿ ಅದು ತಂಪಾಗಿ ಬಹಳ ಸೊಗಸಾಗಿದೆ. ಬೆಂಗಳೂರಿನಲ್ಲಿ ಅನೇಕಮಂದಿ ಇಂಗ್ಲಿಷರು ಇದ್ದಾರೆ; ಮೈಸೂರಿನಲ್ಲಿ ಅಷ್ಟು ಮಂದಿಗಳಿಲ್ಲ. ಬೆಂಗಳೂರಿನಲ್ಲಿ ಸಂಚಾರ ಮಾರ್ಗಗಳು ಬಹಳ ಸೊಗಸಾಗಿ ನಯವಾಗಿವೆ; ಅವುಗಳಲ್ಲಿ ಕಲ್ಲುಗಳು ಎದ್ದುಕೊಂಡಿಲ್ಲ. ಆದರೆ ಅವು ಮೈಸೂರಿನಲ್ಲಿ ಅಷ್ಟು ಸೊಗಸಾಗಿಯೂ ನಯವಾಗಿಯೂ ಇಲ್ಲ; ಅವು ಬಹಳ ಗಡುಚಾಗಿ ಕಲ್ಲುಗಳು ಎದ್ದುಕೊಂಡಿವೆ. ಬೆಂಗಳೂರಿನಲ್ಲಿ ಲಾಲ್‌ಬಾಗ್ ಉದ್ಯಾನವು ಸೊಗಸಾಗಿದೆ; ಆದರೆ ಅಲ್ಲಿರುವ ಪ್ರಾಣಿಗಳ ಸಂಖ್ಯೆಯು ಕಡಮೆ. ಮೈಸೂರಿನಲ್ಲಿ ಉದ್ಯಾನವು ಸುಂದರವಾಗಿಲ್ಲ; ಆದರೆ ಪ್ರಾಣಿಗಳ ಸಂಖ್ಯೆಯು ಹೆಚ್ಚು. ಆದರೆ (ಮೈಸೂರಿನ) ಉದ್ಯಾನವು ಅಲ್ಲಿಯದರಂತೆಯೇ ಉತ್ತಮವಾಗುವಂತೆ ನಾವು ಮಾಡುವಂತಾಗುವುದೆಂಬುದು ನಮ್ಮ ಹಾರೈಕೆ. ಬೆಂಗಳೂರಿನಲ್ಲಿ ಬೆಳೆಯು ಕೆಟ್ಟುಹೋಗಿದೆ. ಇಲ್ಲಿ ಬೆಳೆಯು ಚೆನ್ನಾಗಿದೆ.

---

* "Bangalore is a nice place for riding as there is smooth ground for us to ride hard. But at Mysore there is no such place as in Bangalore for riding. The Bangalore Riding School is a much bigger one than that of Mysore. There is a big band stand at Bangalore, but at Mysore there is not one so big. At Mysore there are lots of animals, but at Bangalore there are not so many. The climate at Mysore is a bit hot, but at Bangalore it is very nice and cool. At Bangalore there are many English men but at Mysore there are not so many. The Bangalore roads are very nice and not stony. But at Mysore the roads are not so nice and smooth, they are very hard and stony. At Bangalore the Lal bagh gardens are very nice but the animals are poor. At Mysore the gardens are poor and the animals are good many, but we hope we will do the gardens as good as they are there. The crops there were bad, but here they are good. The Palace at Bangalore is of the English fashion but the Palace at Mysore is old fashioned. At Bangalore there are English Regiments but there are none at Mysore."

ಬೆಂಗಳೂರು ಅರಮನೆಯು ಇಂಗ್ಲಿಷ್ ಮಾದರಿಯದಾಗಿದೆ. ಆದರೆ ಮೈಸೂರಿನ ಅರಮನೆಯು ಹಳೆಯ ಮಾದರಿಯದು.† ಬೆಂಗಳೂರಿನಲ್ಲಿ ಇಂಗ್ಲಿಷ್ ರೆಜಿಮೆಂಟುಗಳಿವೆ; ಆದರೆ ಮೈಸೂರಿನಲ್ಲಿ ಒಂದು ಇಂಗ್ಲಿಷ್ ರೆಜಿಮೆಂಟೂ ಇಲ್ಲ.''

ಚಾಮುಂಡೀ ಬೆಟ್ಟವನ್ನು ಕುರಿತು ಕನ್ನಡ ಭಾಷೆಯಲ್ಲಿ ಆಶು ಪ್ರಬಂಧವೊಂದನ್ನು ತರಗತಿಯಲ್ಲಿ ಬರೆದಾಗಲೂ ಸಹ, ಹತ್ತು ವರ್ಷದ ಬಾಲಕರಿಂದ ಸಾಮಾನ್ಯವಾಗಿ ನಿರೀಕ್ಷಿಸಲಾಗದಷ್ಟು ಮಟ್ಟಿನ ಪ್ರತಿಭೆಯನ್ನು ಮಹಾಸ್ವಾಮಿಯವರು ಪ್ರದರ್ಶಿಸಿದರು. ಮಹಾಸ್ವಾಮಿಯವರು ಆ ಪ್ರಬಂಧದಲ್ಲಿ, ''ಜನರಿಗೆಲ್ಲ ತಾಯಿಯಂತೆ ಅಭಯ ಕೊಟ್ಟು, ಅವರ ನಡೆನುಡಿಗಳನ್ನೆಲ್ಲ ಪರೀಕ್ಷಿಸಿ ಪರಿಶೀಲಿಸುತ್ತಾ ಚಾಮುಂಡೇಶ್ವರೀ ದೇವಿಯು ಬೆಟ್ಟದ ಮೇಲೆ—ಮೇಲುಗಡೆ, ಮೇಲುಗಡೆ—ಕುಳಿತು ನೋಡುತ್ತಿದ್ದಾಳೆ. ಆದಕಾರಣ, ನಾವೆಲ್ಲರೂ ಭಕ್ತಿಯಿಂದಿದ್ದು ಒಳ್ಳೆಯ ಕೆಲಸಗಳನ್ನು ಮಾಡಬೇಕು'' ಎಂದು ಬರೆದಿದ್ದ ಪರಿಸಮಾಪ್ತಿ ವಾಕ್ಯಗಳನ್ನೂ, ಪ್ರಬಂಧದ ಇತರ ವಾಕ್ಯಗಳನ್ನೂ ಕಂಡು ಉಪಾಧ್ಯಾಯರನೇಕರು ವಿಸ್ಮಿತರಾದರು; ಕವಿತಿಲಕ ಸೋಸಲೆ ಅಯ್ಯಾಶಾಸ್ತ್ರಿಗಳವರ ಸಂತೋಷಕ್ಕೆ ಪಾರವೇ ಇರಲಿಲ್ಲ.

ಮಹಾಸ್ವಾಮಿಯವರಿಗೆ ಮತ್ತೆ ಒಂದೆರಡು ವರ್ಷ ವಯಸ್ಸು ಹೆಚ್ಚಿ ಮೇಲಿನ ತರಗತಿಗೆ ಬಂದಾಗ (ಎಂದರೆ, ಹನ್ನೆರಡು ವರ್ಷ ವಯಸ್ಸಾದಾಗ) ಬರೆದ ಮತ್ತೊಂದು ಪ್ರಬಂಧವೂ ಚಾಮುಂಡೀ ಬೆಟ್ಟವನ್ನು ಕುರಿತು ಕನ್ನಡದಲ್ಲಿ ಬರೆದುದೇ ಆಗಿದ್ದಿತು. ಅದರ ವಿಚಾರವಾಗಿ ಕವಿತಿಲಕ ಸೋಸಲೆ ಅಯ್ಯಾಶಾಸ್ತ್ರಿಗಳವರು ''ಶ್ರೀಮನ್ಮಹಾರಾಜರವರ ರಾಜ್ಯಾಭ್ಯುದಯ ಪ್ರಕಾಶಿಕೆ'' ಎಂಬ ಪ್ರಬಂಧದಲ್ಲಿ ಬರೆದಿರುವುದೇನೆಂದರೆ: ''ನಮ್ಮ ಪ್ರಭುಗಳು ಸ್ವಲ್ಪ ಮೇಲ್ಪಟ್ಟ ತರಗತಿಗೆ ಬಂದಾಗ ಸಂಸ್ಕೃತೋಪಾಧ್ಯಾಯರು ಒಂದು ದಿನ ಸಂಸ್ಕೃತ ಕಾವ್ಯಗಳಲ್ಲೂ ಕರ್ಣಾಟಕ ಕಾವ್ಯಗಳಲ್ಲೂ ಬರುವ ಉಪಮೆ, ರೂಪಕ, ಉತ್ಪ್ರೇಕ್ಷೆ, ಅತಿಶಯೋಕ್ತಿ ಮೊದಲಾದ ಅಲಂಕಾರಗಳನ್ನು ಸಲಕ್ಷಣವಾಗಿ ಬೋಧಿಸಿದರು. ಆಮೇಲೆ ಒಂದು ದಿನ ಮಹಾರಾಜರವರು ಸಹಪಾಠಿಗಳೊಡನೆ ಮನೋವಿನೋದಕ್ಕಾಗಿ ಚಾಮುಂಡೀ ಬೆಟ್ಟಕ್ಕೆ ಹೋಗಿ ಬಂದರು. ಆ ಮರುದಿನ ಕನ್ನಡ ಪಾಠವಾಗುವಾಗ ಉಪಾಧ್ಯಾಯರು ವಿದ್ಯಾರ್ಥಿಗಳ ಬುದ್ಧಿಯನ್ನು

---

† ಆಗ್ಗೆ ಮೈಸೂರು ನಗರದಲ್ಲಿದ್ದುದು ಈಗಿನ ಅರಮನೆಯಲ್ಲ, ಹಳೆಯ ಅರಮನೆ. ಅದು ೧೮೯೭ನೆಯ ಇಸವಿಯಲ್ಲಿ ಸುಟ್ಟುಹೋದ ತರುವಾಯ ಈಗಿರುವ ಅರಮನೆಯು ನಿರ್ಮಿತವಾಯಿತು. ಇದನ್ನು ಮುಂದೆ ವಿಶದವಾಗಿ ತಿಳಿಸಲಾಗುವುದು.

ಪರೀಕ್ಷಿಸಬೇಕೆಂದು ಯೋಚಿಸಿಕೊಂಡು ಚಾಮುಂಡೀ ಬೆಟ್ಟವನ್ನು ಕುರಿತು ಒಂದು ವಾಕ್ಯರಚನೆಯನ್ನು ಬರೆಯಿರಿ ಎಂದು ನೇಮಿಸಿದರು. ಆಗ ವಿದ್ಯಾರ್ಥಿಗಳು ಕೆಲವರು ಆ ಬೆಟ್ಟವನ್ನೇರುವ ಸಾವಿರಾರು ಕಲ್ಲುಹಂತಗಳ ಸೌಕರ್ಯ ಮತ್ತು ಅಲ್ಲಲ್ಲಿರುವ ಸ್ಥಳವಿಶೇಷಗಳು ಮುಂತಾದ ತಾವು ನೋಡಿದ ವಿಷಯಗಳನ್ನು ತಮತಮಗೆ ತೋರಿದ ಮಟ್ಟಿಗೆ ಬರೆದರು. ನಮ್ಮ ಮಹಾರಾಜರವರು ತಾವು ಹಿಂದೆ ಕೇಳಿ ಅವಗಾಹನೆಗೆ ತಂದು ಕೊಂಡಿದ್ದ ಅಲಂಕಾರಗಳನ್ನು ಸ್ಮರಣೆಗೆ ತಂದುಕೊಂಡು—'ಈ ಬೆಟ್ಟವು ಸಮೀಪದಲ್ಲಿರುವುದರಿಂದ ನಮ್ಮ ರಾಜಧಾನಿಗೆ ಒಂದು ಅಲಂಕಾರವಾಗಿ ರುವುದು; ಮತ್ತು ಶ್ರೀ ಚಾಮುಂಡೇಶ್ವರೀ ಅಮ್ಮನವರು ಈ ಬೆಟ್ಟವೆಂಬ ಸಿಂಹಾಸನದಲ್ಲಿ ಮಂಡಿಸಿ ಈ ಕರ್ಣಾಟಕ ರಾಷ್ಟ್ರವನ್ನು ಸಂರಕ್ಷಿಸುತ್ತಿರು ವರೋ—ಎಂಬಂತೆ ತೋರುವರು; ಮತ್ತು ಅಮ್ಮನವರು ಈ ಬೆಟ್ಟವೇ ಮಹಿಷಾಸುರನು, ಇವನನ್ನು ಸಂಹರಿಸಿ ಮೆಟ್ಟಿಕೊಂಡಿದ್ದೇನೆ, ಇನ್ನು ನೀವು ಭಯಪಡಬೇಡಿರಿ ಎಂದು ಮೈಸೂರು ಜನಗಳಿಗೆ ಅಭಯಪ್ರದಾನ ಮಾಡುತ್ತಿರುವರೋ—ಎಂಬಂತೆ ಕಾಣುವರು' ಎಂದು ಬರೆದು ಕೆಲವು ಸ್ವಭಾವೋಕ್ತಿಗಳನ್ನೂ ಬರೆದಿದ್ದರು. ಈ ಲೇಖನವನ್ನು ನೋಡಿ ಉಪಾಧ್ಯಾಯರು ಇವರ ಪ್ರತಿಭೆಗೆ ಮನಸ್ಸಿನಲ್ಲಿ ಸಂತೋಷಪಟ್ಟು, ಮೇಲ್ಪಟ್ಟವರುಗಳಿಗೆ ಈ ವಿಷಯವನ್ನು ಶ್ರುತವಡಿಸಲು ಅವರೆಲ್ಲರೂ ಆಗಲೇ ಅವರಲ್ಲಿ ಒಂದು ಶಕ್ತಿ ಗ್ರಹಣವನ್ನು ಮಾಡಿದರು. ನಮ್ಮ ಮಹಾರಾಜರವರ ಬುದ್ಧಿಶಕ್ತಿಯು ರತ್ನಕಾಂತಿಯಂತೆ ಹುಟ್ಟಿನ ಗುಣ ವಾಗಿರುವುದು. ನಾಣೆಗಾರನು ಶುದ್ಧವಾದ ರತ್ನಕ್ಕೆ ಮಿರುಗಿಕ್ಕಿ ಅದರ ನಿಜವಾದ ಕಾಂತಿಯನ್ನು ಹೊರಪಡಿಸುವಂತೆ ಆಯಾ ಉಪಾಧ್ಯಾಯರು ವಿದ್ಯಾಬೋಧೆಯನ್ನು ಮಾಡಿ ಸ್ವಾಭಾವಿಕವಾದ ಆ ಬುದ್ಧಿಶಕ್ತಿಯನ್ನು ಹೊರಪಡಿಸಿದರು.''

**ವ್ಯಾಸಂಗ ಪ್ರೌಢಿಮೆ**

ಮಹಾಪ್ರಭುಗಳು ಬಾಲ್ಯದಿಂದಲೂ ವ್ಯಾಸಂಗಕಾಲದಲ್ಲಿ ಏಕಾಗ್ರ ಚಿತ್ತದಿಂದ ಕೂಡಿ ಉಪಾಧ್ಯಾಯರ ಬೋಧನೆಯನ್ನು ಗ್ರಹಿಸುತ್ತ, ಉಪಾಧ್ಯಾಯರಲ್ಲಿ ವಿನಯ ನಮ್ರರಾಗಿ ವರ್ತಿಸುತ್ತ, ತಮ್ಮ ಮನಸ್ಸಿಗೆ ಅರ್ಥವಾಗದಿದ್ದ ಅಥವಾ ತಮಗೆ ಸಂದೇಹವಾಗಿದ್ದ ವಿಷಯಗಳನ್ನು ಉಪಾಧ್ಯಾಯರಿಂದ ಕೇಳಿ ತಿಳಿದುಕೊಳ್ಳುತ್ತ, ಸಹಪಾಠಿಗಳೊಡನೆ ನಾನಾ ವಿಚಾರಗಳನ್ನೂ ಚರ್ಚಿಸುತ್ತ, ತೀವ್ರಾಸಕ್ತಿಯಿಂದ ವ್ಯಾಸಂಗಮಾಡುತ್ತಿದ್ದರು. ವ್ಯಾಸಂಗಕಾಲದಲ್ಲಿ ಒಂದು ಕ್ಷಣವನ್ನೂ

ವ್ಯರ್ಥವಾಗಿ ಕಳೆಯದೆ ಸರಸ್ವತೀ ದೇವಿಯನ್ನು ಸೇವಿಸಿದುದರ ಸತ್ಫಲವಾಗಿ
ಮಹಾಸ್ವಾಮಿಯವರು ತಮ್ಮ ಸಹಾಧ್ಯಾಯಿಗಳೆಲ್ಲರಿಗಿಂತಲೂ ಉತ್ತಮ
ವರ್ಗದಲ್ಲಿ ಅಂಕಗಳನ್ನು ("ನಂಬರು"ಗಳನ್ನು) ಪಡೆಯುತ್ತಿದ್ದರು. ಕೆಲ
ಕೆಲವು ವಿಷಯಗಳಲ್ಲಿ ಒಂದೊಂದು ವೇಳೆ ಇತರ ವಿದ್ಯಾರ್ಥಿಗಳು ಅತ್ಯಧಿಕ
ವಾಗಿ ಅಂಕಗಳನ್ನು ಪಡೆಯುತ್ತಿದ್ದುದು ನಿಜವಾದರೂ ಒಟ್ಟಿನಲ್ಲಿ ಮಾತ್ರ
ಮಹಾಸ್ವಾಮಿಯವರೇ ಪ್ರತಿ ತಿಂಗಳೂ ತರಗತಿಯಲ್ಲಿ ಮೊದಲನೆಯವ
ರಾಗಿರುತ್ತಿದ್ದರು. ಉದಾಹರಣೆಗಾಗಿ, ೧೮೯೬ನೆಯ ಇಸವಿ ಮಾರ್ಚಿ
ತಿಂಗಳಿನಲ್ಲಿ ಮಹಾಸ್ವಾಮಿಯವರು ಇಂಗ್ಲಿಷ್, ಕನ್ನಡ, ಸಂಸ್ಕೃತ,
ವಾಕ್ಯರಚನೆ, ಉರ್ದು, ಚರಿತ್ರೆ, ಭೂಗೋಳ— ಇವುಗಳಲ್ಲಿ ತಮ್ಮ
ಜೊತೆಯ ಎಂಟು ಮಂದಿಗಳನ್ನೂ ಮೀರಿಸಿ, ತರಗತಿಯಲ್ಲಿ ಒಟ್ಟಿನಮೇಲೆ
ಮೊದಲನೆಯವರಾಗಿಯೂ, ಗಣಿತವೊಂದರಲ್ಲಿ ಮಾತ್ರ ಮೂರನೆಯವ
ರಾಗಿಯೂ ಇದ್ದರು. ಉರ್ದು ಭಾಷೆಯು ಮಾತೃಭಾಷೆಯಾಗಿಲ್ಲದಿದ್ದೂ
ಮಹಾಸ್ವಾಮಿಯವರು ಅದರಲ್ಲಿ ಅದೇ ಮಾತೃಭಾಷೆಯಾಗಿದ್ದ
ಮುಸಲ್ಮಾನ ಪಂಗಡದ ವಿದ್ಯಾರ್ಥಿಗಳಿಗಿಂತ ಹೆಚ್ಚಾಗಿ ಅಂಕಗಳನ್ನು
("ನಂಬರು"ಗಳನ್ನು) ಪಡೆಯುತ್ತಿದ್ದರು.

**ಚಿತ್ರಲೇಖನ ಕುತೂಹಲ**

ತೀರ ಚಿಕ್ಕವಯಸ್ಸಿನಿಂದಲೇ ಆಳಿದ ಮಹಾಸ್ವಾಮಿಯವರಿಗೆ ಚಿತ್ರ
ಲೇಖನದಲ್ಲಿ ತೀವ್ರಾಸಕ್ತಿಯಿದ್ದಿತು; ಆದರೆ ಶ್ರೀಮದ್ಯುವರಾಜ
ಶ್ರೀ ಕಂಠೀರವ ನರಸಿಂಹರಾಜ ಒಡೆಯರವರಿಗೆ
ಚಿತ್ರಲೇಖನದಲ್ಲಿದ್ದಷ್ಟು ಮುಟ್ಟಿಗಿರಲಿಲ್ಲ.
ಶ್ರೀಮದ್ಯುವರಾಜ ಶ್ರೀ ಕಂಠೀರವ ನರಸಿಂಹರಾಜ
ಒಡೆಯರವರಿಗೆ ಸಂಗೀತದಲ್ಲಿ ತೀವ್ರಾಸಕ್ತಿಯಿದ್ದಿ
ತಾದರೂ ತಮ್ಮ ಸಹೋದರರಿಗಿದ್ದಷ್ಟು ಮುಟ್ಟಿಗಿರಲಿಲ್ಲ. ಆಳಿದ ಮಹಾ
ಸ್ವಾಮಿಯವರು ಚಿತ್ರಲೇಖನದಲ್ಲಿ ಪಡೆದುದಕ್ಕಿಂತ ಅಧಿಕತರವಾಗಿ
ಅಪರಿಮಿತವಾದ ಪ್ರೌಢಿಮೆಯನ್ನು ಸಂಗೀತದಲ್ಲಿ ಪಡೆದರು. ಚಿತ್ರ
ಲೇಖನದಲ್ಲಿ ಮಹಾಸ್ವಾಮಿಯವರಿಗೆ ತೀವ್ರಾಸಕ್ತಿಯಿದ್ದು ರೇಖಾಚಿತ್ರ
ಲೇಖನ ಮುಂತಾದುವುಗಳಲ್ಲಿ ಶಿಕ್ಷಣ ದೊರೆತು ಅಧಿಕ ಪರಿಶ್ರಮವುಂಟಾ
ದುದರಿಂದ, ಮುಂದೆ ಅವರ ಶಿಲ್ಪಕಲಾ ಚಾತುರ್ಯವು ಪರಿಸ್ಫುಟ
ವಾಗಲನುಕೂಲಿಸಿತು.

ತೀರ ಬಾಲ್ಯದಿಂದಲೂ ಮಹಾಸ್ವಾಮಿಯವರು ಆಸ್ಥೆಯಿಂದ ಚಿತ್ರ
ಗಳನ್ನು ಬರೆಯುತ್ತಿದ್ದರು. ಹತ್ತು ವರ್ಷ ವಯಸ್ಸಾಗಿದ್ದಾಗ ಅವರು
ಬರೆದಿರುವ ಹೂಜಿಗಳು, ಲೋಟಗಳು, ಸುತ್ತಿಗೆ, ಹಾಲಿನ ಪಾತ್ರೆ,

ಚೂರಿ, ಚಮಚ, ಇಕ್ಕಳ,' ಎಲೆಗುದ್ದಲಿ, ತುತ್ತೂರಿ, ಕ್ರಿಕೆಟ್ ಆಟದ ಸಾಮಾನುಗಳು, ದೊಡ್ಡ ಚೆಂಡು, ಗಿಡಗಳನ್ನು ಕತ್ತರಿಸುವ ದೊಡ್ಡ ಕತ್ತರಿಗಳು, ಗಿಡಬಳ್ಳಿಗಳು,—ಮುಂತಾದುವುಗಳ ಚಿತ್ರಗಳು ಸುಂದರ ವಾಗಿಯೂ ಸೊಗಸಾಗಿಯೂ ಇವೆ. ಮೇಲಾಗಿ ಕರಡು ಲೇಖನ ಪುಸ್ತಕ ಗಳ ("ರಫ್ ನೋಟ್ ಬುಕ್ಕುಗಳ") ಹಾಳೆಗಳಲ್ಲೆಲ್ಲ ಗಂಡಭೇರುಂಡ ಗಳು, ಹಸುಗಳು, ಸಮುದ್ರ, ಜಹಜುಗಳು, ದೋಣಿಗಳು, ಹೂವಿನ ಗಿಡಗಳು, ಪುಷ್ಪವಾಟಿಕೆಗಳು, ಉದ್ಯಾನ ವೃಕ್ಷಗಳು, ಲತೆಗಳು, ಚಾಮುಂಡೀ ಬೆಟ್ಟ, ಕುದುರೆಗಳು, ಆನೆಗಳು, ದೇವತಾ ವಿಗ್ರಹಗಳು, —ಮುಂತಾದುವುಗಳನ್ನೆಲ್ಲ ಮನೋಹರವಾಗಿ ಬರೆದು ಕೊನೆಯಲ್ಲಿ ತಮ್ಮ ನಾಮಧೇಯವನ್ನು ಕೂಡ ಅಲಂಕಾರ ಲಿಪಿಗಳಲ್ಲಿ ಮುದ್ದಾಗಿ ಬರೆದಿದ್ದಾರೆ. ಅಲ್ಪಸ್ವಲ್ಪ ಅವಕಾಶದೊರೆತಾಗಲೆಲ್ಲ ಮಹಾಸ್ವಾಮಿಯವರು ಚಿತ್ರಗಳನ್ನು ಬರೆಯುತ್ತಿದ್ದರು. ಒಂದು ಪುಟದಲ್ಲಂತೂ, ಒಂದು ಲೆಕ್ಕವನ್ನು ಮಾಡಿ ಮುಗಿಸಿ ಅಂಚಿನಲ್ಲೆಲ್ಲ ಕುದುರೆಗಳನ್ನು ಬರೆದಿದ್ದಾರೆ. ಅವರು ಬರೆದಿರುವ ಚಿತ್ರಗಳಲ್ಲೆಲ್ಲ ಕುದುರೆಗಳ ಚಿತ್ರಗಳ ಸಂಖ್ಯೆಯೇ ಅತ್ಯಧಿಕವಾಗಿದೆ; ಆನೆಗಳ ಮತ್ತು ನಾಯಿಗಳ ಚಿತ್ರಗಳ ಸಂಖ್ಯೆಯು ಅದಕ್ಕಿಂತ ಕಡಮೆ. ಆದುದರಿಂದ ಇತರ ಪ್ರಾಣಿಗಳ ಮೇಲಿದ್ದುದಕ್ಕಿಂತ ಕುದುರೆಯ ಮೇಲೆ ಅವರಿಗೆ ಬಾಲ್ಯದಿಂದಲೂ ಅತ್ಯಂತ ಹೆಚ್ಚಿನ ಪ್ರೇಮವೆಂಬುದು ಗೊತ್ತಾಗುತ್ತದೆ.

**ಉಪನಯನ ಮಹೋತ್ಸವ**

೧೮೯೬ನೆಯ ಇಸವಿ ಏಪ್ರಿಲ್ ತಿಂಗಳು ೨೯ನೆಯ ತಾರೀಖು (ದುರ್ಮುಖಿ ಸಂವತ್ಸರದ ವೈಶಾಖ ಬಹುಳ ಬಿದಿಗೆ) ಬುಧವಾರದ ದಿನ ಹಗಲು ಒಂಬತ್ತೂವರೆ ಘಂಟೆಯ ಮೇಲೆ ಮತ್ತು ಹನ್ನೊಂದು ಘಂಟೆಯೊಳಗೆ ಮಿಥುನ ಲಗ್ನದಲ್ಲಿ, ಆಳಿದ ಮಹಾಸ್ವಾಮಿಯವರ ಉಪನಯನ ಮಹೋತ್ಸವವು ವೈಭವ ವಿಜೃಂಭಣೆಗಳಿಂದ ನಡೆಯಿತು. ಅದೇ ಸಮಯದಲ್ಲಿ ಮಹಾಸ್ವಾಮಿಯವರ ಜ್ಯೇಷ್ಠ ಸಹೋದರಿಯರಲ್ಲಿ ಎರಡನೆಯವರಾದ ರಾಜಕುಮಾರಿ ಶ್ರೀ ಕೃಷ್ಣಾ ಜಮ್ಮಣ್ಣಿಯವರಿಗೂ ಕರ್ನಲ್ ದೇಶರಾಜ ಅರಸಿನವರಿಗೂ ವಿವಾಹ ಮಹೋತ್ಸವವು ಜರುಗಿತು. ಈ ಮಹೋತ್ಸವಗಳಿಗೆ ಅನೇಕ ರಾಜ ಮಹಾರಾಜರುಗಳೂ, ಇತರ ಮಾನ್ಯ ಅತಿಥಿಗಳೂ ದಯಮಾಡಿದ್ದು ಆದರಪೂರ್ವಕವಾದ ಸತ್ಕಾರವನ್ನೂ ಖಿಲ್ಲತ್ತುಗಳನ್ನೂ ಪಡೆದು ತಮ್ಮ ಸ್ಥಳಗಳಿಗೆ ತೆರಳಿದರು.

ಆಳಿದ ಮಹಾಸ್ವಾಮಿಯವರು ತಮ್ಮ ಪಟ್ಟಾಭಿಷೇಕ ಮಹೋತ್ಸವವು ನೆರವೇರಿದಾಗಿನಿಂದ ಮಹಾರಾಜ ಪದವಿಯ ಘನತೆಗೆ ತಕ್ಕಂತೆ ದರ್ಪದಿಂದ ವರ್ತಿಸುತ್ತಿದ್ದರು. ಮಹಾಪ್ರಭುಗಳವರು ಸ್ವಭಾವತಃ ಮಿತಭಾಷಿಗಳಾಗಿದ್ದುದರಿಂದ ತಮ್ಮದೇ ಆದೊಂದು ವೈಶಿಷ್ಟ್ಯದಿಂದ ಕೂಡಿ, ಕೇವಲ ಸಂಜ್ಞೆಗಳಿಂದಲೇ ಸೇವಕರಿಂದ ಕೆಲಸ ಮಾಡಿಸುತ್ತಿದ್ದರು; ಸರಳ ಮನೋಹರವಾದ ಕೆಲವು ಮಾತುಗಳಿಂದಲೇ ತಮ್ಮ ಅಭಿಪ್ರಾಯವನ್ನು ಸೂಚಿಸುತ್ತಿದ್ದರು. ಅವರು ತಮ್ಮ ಮಹಾರಾಜ ಪದವಿಯ ಘನತೆಗೆ ತಕ್ಕಂತೆ ವರ್ತಿಸುತ್ತಿದ್ದರಾದರೂ, ತಾವು ಇತರರಿಗಿಂತ ಶ್ರೇಷ್ಠರೆಂಬ ಭಾವನೆಯಿಂದ ಕೂಡಿ ಗರ್ವವನ್ನಾಗಲಿ ವಿನಯೋಲ್ಲಂಘನವನ್ನಾಗಲಿ ಎಂದೂ ಪ್ರದರ್ಶಿಸಿದವರಲ್ಲ. ಅವರು ಗುರುಹಿರಿಯರಲ್ಲಿ ಪೂಜ್ಯಭಾವದಿಂದ ವರ್ತಿಸುತ್ತಿದ್ದುದೂ, ತಾವು ಪ್ರಭುಗಳಾಗಿದ್ದೂ ತಮ್ಮ ಸಹಪಾಠಿಗಳೊಡನೆ ಸಮಾನಸ್ಕಂಧರಂತೆ ವರ್ತಿಸುತ್ತಿದ್ದುದೂ ಸಮಸ್ತರಿಗೂ ಆಶ್ಚರ್ಯವನ್ನುಂಟುಮಾಡುತ್ತಿದ್ದ ಅಂಶಗಳು. ತಮ್ಮ ವಿದ್ಯಾಗುರುಗಳು ತಮ್ಮ ಸಹಾಧ್ಯಾಯಿಗಳಂತೆಯೇ ತಮ್ಮನ್ನೂ ಕಾಣಬೇಕೇ ಹೊರತು ತಮ್ಮ ವಿಷಯದಲ್ಲಿ ಯಾವ ಪಕ್ಷಪಾತವನ್ನೂ ತೋರಿಸಕೂಡದೆಂಬುದೇ ಕೇವಲ ಚಿಕ್ಕವಯಸ್ಸಿನಲ್ಲಿ ಕೂಡ ಅವರಿಗಿದ್ದ ಅಭಿಲಾಷೆ. ಒಂದು ದಿನ ಉಪಾಧ್ಯಾಯರಲ್ಲೊಬ್ಬರು ತಾವು ಕೇಳಿದ ಪ್ರಶ್ನೆಗಳಿಗೆ ಉತ್ತರ ಹೇಳದೆ ತಪ್ಪಿದ ಬಾಲಕರಲ್ಲಿ ಪ್ರತಿಯೊಬ್ಬರಿಗೂ ಬೆತ್ತದಿಂದ ಎರಡೆರಡು ಏಟುಗಳನ್ನು ಕೊಟ್ಟು ಆ ಬಳಿಕ ಮಹಾಸ್ವಾಮಿಯವರಿಗೂ ಪ್ರಶ್ನೆಗಳನ್ನು ಹಾಕಿ ಅವರೂ ಉತ್ತರ ಹೇಳದೆ ತಪ್ಪಿದಾಗ ಸುಮ್ಮನಿದ್ದರು. ಮಹಾಸ್ವಾಮಿಯವರೇ ಕೈಯನ್ನು ಚಾಚಿ ಅಂಗೈಯನ್ನು ಮುಂದೆ ಹಿಡಿದು "ನನಗೂ ಎರಡು ಏಟು" ಎಂದರು. ಉಪಾಧ್ಯಾಯರು ಅಪ್ರತಿಭರಾಗಿ "ಮಹಾಸ್ವಾಮಿಯವರಿಗೆ ಏಟು ಕೊಡುವುದುಂಟೆ? ಕೂಡದು ಕೂಡದು" ಎಂದು ಉತ್ತರ ಹೇಳಿದರು. ಪ್ರಭುಗಳು, "ನಾನೂ ಅವರಂತೆಯೇ ಪ್ರಶ್ನೆಗಳಿಗೆ ಉತ್ತರ ಹೇಳದೆ ತಪ್ಪಿದೆ. ನನಗೂ ಅವರಂತೆಯೇ ಎರಡು ಏಟು ಬೀಳಬೇಕು. ನನಗೂ ಎರಡು ಏಟು ಕೊಡಿ" ಎಂದರು. ಉಪಾಧ್ಯಾಯರು ಉಪಾಯ ಕಾಣದೆ, "ಇನ್ನು ಮೇಲೆ ಯಾರಿಗೂ ಏಟು ಕೊಡುವುದಿಲ್ಲ" ಎಂದು ಹೇಳಿ ಬೆತ್ತವನ್ನೇ ಮುರಿದುಹಾಕಿದರು. ಆ ದಿನದ ಆ ಘಟನೆಯಿಂದ ಮಹಾಸ್ವಾಮಿಯವರ ಉಪಾಧ್ಯಾಯರಿಗೂ ಸಹಾಧ್ಯಾಯಿಗಳಿಗೂ ಉಂಟಾದ ಸಂತೋಷವನ್ನು

ಅನೋಘ ಗುಣಗಳ ಅಂಕುರ ದಶೆ

ವರ್ಣಿಸಲಳವಲ್ಲ. ಮಹಾಮಾತೃಶ್ರೀಯವರು ಆ ಸಂಗತಿಯನ್ನು ಕೇಳಿ ಅತ್ಯಂತವಾಗಿ ಹರ್ಷಿಸಿ, ತಮ್ಮ ಪತಿದೇವರು ಜೀವಿಸಿದ್ದು ಆ ಸದ್ವರ್ತನೆಯನ್ನು ಕಂಡು ಪುತ್ರಾಲಿಂಗನ ಸೌಖ್ಯವನ್ನು ಪಡೆದುದನ್ನು ನೋಡುವ ಸುಯೋಗವು ತಮಗಿಲ್ಲದೆ ಹೋಯಿತಲ್ಲಾ — ಎಂದು ಕಂಬನಿ ಮಿಂಬಿದರು.

ಕೇವಲ ಬಾಲ್ಯವಯಸ್ಸಿನಲ್ಲಿ ಕೂಡ, ಮಹಾಸ್ವಾಮಿಯವರು ಅನ್ಯಾದೃಶವಾದ ಮಾತೃಭಕ್ತಿಯನ್ನೂ, ಸೋದರ ಸೋದರಿಯರಲ್ಲಿ ಅಮಿತವಾದ ಪ್ರೀತಿ ವಿಶ್ವಾಸಗಳನ್ನೂ ತೋರಿಸುತ್ತಿದ್ದರು. ತಾವು ಎಲ್ಲಿಗೆ ಚಿತ್ತೈಸಬೇಕಾದರೂ ಮಹಾಮಾತೃಶ್ರೀಯವರಿಗೆ ಅರಿಕೆಮಾಡಿ, ಅವರ ಅನುಜ್ಞೆಯನ್ನು ಪಡೆದು, ಅನಂತರ ಮುಂದಕ್ಕೆ ಹೆಜ್ಜೆಯನ್ನಿಡುತ್ತಿದ್ದುದೇ ಮಹಾಸ್ವಾಮಿಯವರ ದಿನಚರಿ. ಪ್ರತಿ ದಿನವೂ ನಡೆದ ನಾನಾ ಸಂಗತಿಗಳನ್ನೂ ಯಥಾವತ್ತಾಗಿ ಮಾತೃಶ್ರೀಯವರಿಗೆ ವಿಜ್ಞಾಪಿಸಿದಲ್ಲದೆ ಮಹಾಸ್ವಾಮಿಯವರಿಗೆ ತೃಪ್ತಿಯಿರುತ್ತಿರಲಿಲ್ಲ. ಅಲ್ಲದೆ, ಅವರು ಪ್ರತಿಯೊಂದು ಸನ್ನಿವೇಶದಲ್ಲಿ ಸಹ ತಾವು ನಡೆದುಕೊಂಡುದು ಹೇಗೆಂಬ ವಿವರಗಳನ್ನೆಲ್ಲ ವಿಶದವಾಗಿ ಮಾತೃಶ್ರೀಯವರಿಗೆ ವಿಜ್ಞಾಪಿಸಿ, "ಅಮ್ಮಯ್ಯ! ನಾನು ಮಾಡಿದ್ದು ಸರಿಯೆ?" ಎಂದು ಕೇಳಿ, ಮಹಾಮಾತೃಶ್ರೀಯವರು ಒಪ್ಪದಿದ್ದ ಸಂಗತಿಗಳಾವುವಾದರೂ ಇದ್ದರೆ, ಸಂಕೋಚದಿಂದ ಕೂಡಿ "ಅಮ್ಮಯ್ಯ! ಇದು ತಪ್ಪು. ನಿಜ. ನೀವು ಹೇಳಿದ್ದು ಸರಿ. ನಾನು ಇನ್ನೆಂದೂ ಹೀಗೆ ಮಾಡುವುದಿಲ್ಲ" ಎನ್ನುತ್ತಿದ್ದರು. ಒಂದು ಸಲ, "ಮೊಹರಂ" ಹಬ್ಬದಲ್ಲಿ ಜನರು ಮುಖಕ್ಕೆ ಕಟ್ಟಿಕೊಳ್ಳುವ ("ಅಳ್ಳಿ ಬಾಬಯ್ಯ" ಎಂಬ ಹೆಸರಿನ) ವಿಕಟ ರೂಪಗಳ ಕಾಗದದ ಮೊಗವಾಡಗಳನ್ನು ದಾರದಿಂದ ಮುಖಕ್ಕೆ ಕಟ್ಟಿಕೊಂಡು ತಮ್ಮ ಸೋದರಿಯವರಾದ ಶ್ರೀ ಚೆಲುವಾಜಮ್ಮಣ್ಣಿಯವರನ್ನೂ ತಮ್ಮ ಸೋದರರನ್ನೂ ಅವರು ಹೆದರಿಸಿ ಹಿಗ್ಗಿದರು. ಮುಂದೆ ಹಾಗೆ ಮಾಡಕೂಡದೆಂದು ಮಹಾಮಾತೃಶ್ರೀಯವರು ಒಂದು ದಿನ ಅಪ್ಪಣೆ ಮಾಡಿದಾಗ, "ಅಮ್ಮಯ್ಯ! ಇನ್ನೆಂದೂ ಹೀಗೆ ಮಾಡುವುದಿಲ್ಲ" ಎಂದು ದೈನ್ಯದಿಂದ ಹೇಳಿದರು. ಆದಾಗ್ಯೂ, ತಮ್ಮ ಮೂವರು ಸಹೋದರಿಯವರೊಡನೆಯೂ ತಮ್ಮ ಸಹೋದರರೊಡನೆಯೂ ಆಟವಾಡಿ, ಲಲ್ಲೆಯಾಡುವುದರಲ್ಲಿ ಮಹಾಸ್ವಾಮಿಯವರಿಗೆ ವಿಪುಲವಾದ ಉತ್ಸಾಹ.

ಮಹಾಪ್ರಭುಗಳವರು ತಮ್ಮ ಸಹಾಧ್ಯಾಯಿಗಳೊಡನೆ ವರ್ತಿಸುತ್ತಿದ್ದ ರೀತಿಯು ಆ ಬಾಲಕರ ಮಾತಾಪಿತೃಗಳಿಗೂ ಉಪಾಧ್ಯಾಯರಿಗೂ

ಆಶ್ಚರ್ಯವನ್ನುಂಟುಮಾಡುತ್ತಿದ್ದಿತು. ಆ ಬಾಲಕರಲ್ಲಿ ತುಂಟರಾದ ಕೆಲವರು ವಿವಾದಕ್ಕೆ ಸರ್ವದಾ ಸಿದ್ಧವಾಗಿರುತ್ತಿದ್ದರು. ಬಾಲ್ಯದಲ್ಲಿ ಬಹು ಸುಲಭವಾಗಿ ಕೋಪಬರಬೇಕಾದುದು ಸಹಜವಾಗಿದ್ದ ಸನ್ನಿವೇಶಗಳಲ್ಲಿ ಕೂಡ ಮಹಾಸ್ವಾಮಿಯವರು ತಾಳ್ಮೆಯಿಂದ ವರ್ತಿಸುತ್ತಿದ್ದರು. ಅಲ್ಲದೆ, ತಮ್ಮೊಡನೆ ವ್ಯಾಸಂಗ ಮಾಡುತ್ತಿದ್ದ ಬಾಲಕರ ವಿವಾದಗಳನ್ನು ಕೂಡ ಸಮರ್ಪಕವಾಗಿ ವ್ಯವಸ್ಥೆಮಾಡಿ ಅವರ ಕೋಪವನ್ನಿಳಿಸುತ್ತಿದ್ದರು. ಒಂದು ಸಲ, ಅವರು ತಮ್ಮಲ್ಲಿ ಸುಳ್ಳು ಹೇಳಿದ ಸಹಾಧ್ಯಾಯಿಗಳಿಬ್ಬರೊಡನೆ ಮಾತು ಬಿಟ್ಟರು. ಅನಂತರ ಒಂದೆರಡು ದಿನಗಳಮೇಲೆ ಮತ್ತೀರ್ವರು ಸಹಾಧ್ಯಾಯಿಗಳು ಪರಸ್ಪರವಾಗಿ ಜಗಳವಾಡಿ ಹೊಡೆದಾಡಿ ಮಾತು ಬಿಟ್ಟರು. ಅವರಿಬ್ಬರನ್ನೂ ಕುರಿತು ಮಹಾಸ್ವಾಮಿಯವರು "ನೀವಿಬ್ಬರೂ ಹೀಗೆ ಮಾತುಬಿಟ್ಟಿರುವುದು ಸರಿಯಲ್ಲ, ಸ್ನೇಹದಿಂದಿರಬೇಕು" ಎಂದರು. ಅವರಲ್ಲೊಬ್ಬರು "ನೀವು ಮಾತ್ರ ಇಬ್ಬರ ಸಂಗಡ ಮಾತುಬಿಟ್ಟಿಲ್ಲವೇನೊ? ಅದು ಮಾತ್ರ ಸರಿಯೊ?" ಎಂದು ಕೇಳಿದರು. ಮಹಾಸ್ವಾಮಿಯವರು, "ಅವರು ಸುಳ್ಳು ಹೇಳಿದರು. ಮಾತು ಬಿಟ್ಟೆ. ನಾನೇನು ನಿಮ್ಮ ಹಾಗೆ ಜಗಳವಾಡಿ, ಗುದ್ದಾಡಿ ಮಾತು ಬಿಟ್ಟಿನೇನು?" ಎಂದು ಕೇಳಿದರು. ಅದಕ್ಕೂ ಅವರು ಉತ್ತರ ಹೇಳಲು ಸಿದ್ಧರಾಗಿ "ಅದೆಲ್ಲಾ ನಮಗೆ ಬೇಡ. ಮಾತು ಬಿಟ್ಟಮೇಲೆ ಮಾತು ಬಿಟ್ಟಹಾಗೇ. ಹ್ಯಾಗೇ, ಏನೂ, ಏಕೇ, ಅನ್ನೋದೆಲ್ಲಾ ನಮಗೆ ಬೇಡ. ಅವೊತ್ತು ನೀವೇ ಹೇಳಲಿಲ್ಲವೇನೊ, ನಾವೆಲ್ಲರೂ ಸಮಾ ಅಂತ. ನಾವೆಲ್ಲಾ ಸಮ. ನಿಮ್ಮಂತೆಯೇ ನಾವೂ. ನೀವೂ ಇಬ್ಬರ ಕೈಲಿ ಮಾತು ಬಿಟ್ಟಿದ್ದೀರಿ. ನಾವಿಬ್ಬರೂ ಒಬ್ಬರೊಡನೆ ಮತ್ತೊಬ್ಬರು ಮಾತುಬಿಟ್ಟಿದ್ದೀವಿ" ಎಂದರು. ಒಡನೆಯೇ ಮಹಾಸ್ವಾಮಿಯವರು ತಾವು "ಮಾತು ಬಿಟ್ಟಿದ್ದ" ಇಬ್ಬರು ಬಾಲಕರ ಬಳಿಗೆ ಅವರಿಬ್ಬರನ್ನೂ ಕರೆದುಕೊಂಡುಹೋಗಿ, ಆ ಬಾಲಕರನ್ನು ತಾವೇ ಮಾತನಾಡಿಸಿ ಆ ಬಳಿಕ "ಇಗೋ! ಇವರಿಬ್ಬರ ಜೊತೆ ಕಟ್ಟಿ ಮಾತನಾಡಿದ್ದೀನಿ. ನೀವೂ ಇನ್ನು ಒಬ್ಬರ ಸಂಗಡ ಮತ್ತೊಬ್ಬರು ಮಾತನಾಡಿ ಮತ್ತೆ" ಎಂದರು. ಅವರಿಬ್ಬರೂ ಸಂತೋಷದಿಂದ ಒಬ್ಬರೊಡನೊಬ್ಬರು ಮಾತನಾಡಿದರು. ಮಹಾಸ್ವಾಮಿಯವರು ಜೇಬುಗಳಲ್ಲಿಟ್ಟುಕೊಂಡಿದ್ದ ಹಣ್ಣುಗಳನ್ನು ಅವರೆಲ್ಲರಿಗೂ ಕೊಟ್ಟು, ತಾವೂ ತಿಂದು ಹರ್ಷಿಸಿದರು. ಮಹಾಸ್ವಾಮಿಯವರು ಅಕಾಲದ ಹಣ್ಣುಗಳನ್ನೂ ಅತ್ಯುತ್ತಮವಾದ ಹಣ್ಣುಗಳನ್ನೂ ತಂದು ತಂದು ತಮ್ಮ ಸಹಾಧ್ಯಾಯಿಗಳಿಗೆ ಕೊಡುತ್ತಿದ್ದರು. ಉತ್ತಮ ವಸ್ತುಗಳಾವುವೇ ಕೈಸೇರಿದಾಗಲೂ ತಮ್ಮ

ಸಹಾಧ್ಯಾಯಿಗಳಿಗೆಷ್ಟು ಹೊತ್ತಿಗೆ ತೋರಿಸಲಾದೀತೋ — ಎಂಬುದು ಮಹಾಸ್ವಾಮಿಯವರಿಗಿರುತ್ತಿದ್ದ ಕುತೂಹಲ.

ಆಟಗಳಲ್ಲಿ ಸಹ ಮಹಾಸ್ವಾಮಿಯವರು — ವ್ಯಾಸಂಗದಲ್ಲಿ ಮೇಲಾಗಿದ್ದಂತೆಯೇ — ಮೇಲಾಗಿ ತಮ್ಮ ಸಹಾಧ್ಯಾಯಿಗಳನ್ನು ಮೀರಿಸಿದ್ದರು; ಆದಾಗ್ಯೂ ಅವರುಗಳ ಮನಸ್ಸಿಗೆಲ್ಲಿ ಲಜ್ಜೆಯೂ ಹೀನಾಯವೂ ಆದಾವೋ ಎಂದು ಭಾವಿಸಿ ಪ್ರೀತ್ಯಾದರಗಳಿಂದ ವರ್ತಿಸುತ್ತಿದ್ದರು. ಸಹಾಧ್ಯಾಯಿಗಳಲ್ಲಾರಾದರೂ ತಮಗಿಂತ ಹಿಂದೆಬಿದ್ದ ಬಾಲಕರನ್ನು ಹಾಸ್ಯಮಾಡಿದರೆ ಮಹಾಸ್ವಾಮಿಯವರು ಹಾಗೆ ಹಾಸ್ಯಮಾಡಿದವರಿಗೆ ಬುದ್ಧಿ ಹೇಳಿ ಹಾಗೆ ಹಾಸ್ಯಕ್ಕೆ ಗುರಿಯಾದವರನ್ನು ಪ್ರೋತ್ಸಾಹ ವಚನಗಳಿಂದ ಹುರಿದುಂಬಿಸುತ್ತಿದ್ದರು. ಹೀಗೆಂದ ಮಾತ್ರವೇ ಮಹಾಸ್ವಾಮಿಯವರು ವಿನೋದಪ್ರಿಯರಾಗಿರಲಿಲ್ಲವೆಂದೇನೂ ಅರ್ಥವಲ್ಲ. ಅವರ ವಯಸ್ಸು ಹೆಚ್ಚಿದಂತೆಲ್ಲ ಅವರ ವಿನೋದ ಪ್ರವೃತ್ತಿಯೂ ವೃದ್ಧಿಯಾಯಿತು. ಆದರೆ ಇತರರ ಮನಸ್ಸಿಗೆ ನೋವನ್ನುಂಟುಮಾಡುವ ಹಾಸ್ಯದಲ್ಲಿ ಅವರಿಗೆ ಅಸಹ್ಯಭಾವನೆ. ಅವರು ತಾವೇ ಇತರ ಸಹಾಧ್ಯಾಯಿಗಳನ್ನು ಹಾಸ್ಯಮಾಡುತ್ತಿದ್ದುದೂ, ತಮ್ಮನ್ನು ತಮ್ಮ ಸಹಾಧ್ಯಾಯಿಗಳು ಹಾಸ್ಯಮಾಡಿದಾಗ ತಾವೂ ಅವರೊಡನೆ ನಗುತ್ತಿದ್ದುದೂ ಸಹಜ ಪ್ರವೃತ್ತಿ. ಹತ್ತು ಅಥವಾ ಹನ್ನೊಂದು ವರ್ಷ ವಯಸ್ಸಿನ ಬಾಲಕರು ತಮ್ಮನ್ನು ಹಾಸ್ಯಮಾಡಿದವರೊಡನೆ ತಾವೂ ಕಿಲಕಿಲನೆ ನಗುವುದು ತೀರ ವಿರಳವೆಂದು ಧಾರಾಳವಾಗಿ ಹೇಳಬಹುದು. ಮಹಾಸ್ವಾಮಿಯವರಿಗೆ ವಿಷಪೂರಿತವಾದ ಅಥವಾ ಕಟುವಾದ ಹಾಸ್ಯದಲ್ಲಿ ಅಸಹ್ಯ; ಶುದ್ಧವಾದ ಮತ್ತು ಸರಳವಾದ ಹಾಸ್ಯದಲ್ಲಿ ಪರಮಾದರ. ಒಂದು ದಿನ, ಮಹಾಸ್ವಾಮಿಯವರು ರಾಜಕುಮಾರಿಯರಲ್ಲಿ ಊಳಿಗ ಮಾಡಲು ನೇಮಕವಾಗಿದ್ದ ಬಾಲ್ಯವಯಸ್ಸಿನ ಒಬ್ಬ ಸೇವಕನಂತೆ ಉಡುಪನ್ನು ಧರಿಸಿ, ಮುಂಪಲಿಗೆಯೊಂದನ್ನು ಕೌಂಕುಳಿನಲ್ಲಿ ಇರುಕಿಕೊಂಡರು. ಅವನ ಧ್ವನಿಯನ್ನೂ ಅವನ ಮಾತಿನ ರೀತಿಯನ್ನೂ ಅನುಕರಣಮಾಡುತ್ತ, ತಮ್ಮ ಜ್ಯೇಷ್ಠ ಸಹೋದರಿಯವರು ಆ ಕತ್ತಲೆಯ ವೇಳೆಯಲ್ಲಿ ತಮ್ಮನ್ನು ಗುರುತುಹಿಡಿಯದೆ ಹೋದುದಕ್ಕಾಗಿ ಹರ್ಷಿಸುತ್ತ, ಅವರನ್ನುದ್ದೇಶಿಸಿ ಪಾದಾವಧಾನ ಹೇಳುತ್ತ "ಮಹಾಸ್ವಾಮಿ, ಪಾದ ಬೆಳೆಯಬೇಕು. ಪಾದ ಬೆಳೆಯಬೇಕು. ಹೀಗೆ ಬೆಳೆಯಬೇಕು"* ಎಂದು ಮುಂತಾಗಿ ಹೇಳಿ, ಕೊನೆಗೆ ನಿಜಸ್ಥಿತಿಯು ಅವರಿಗೆ ಗೊತ್ತಾಗಿ

* ಮಹಾರಾಜ ಕುಟುಂಬದವರೆಲ್ಲರನ್ನೂ, ಸ್ತ್ರೀ ಪುರುಷಭೇದವಿಲ್ಲದೆ "ಮಹಾಸ್ವಾಮಿ" ಎಂದು ಸಂಬೋಧಿಸುವುದು ಅರಮನೆಯಲ್ಲಿ ಅನೂಚಾನವಾಗಿ ನಡೆದು ಬಂದಿರುವ ಸಂಪ್ರದಾಯ.

ಅವರು ನಗುವುದಕ್ಕುಪಕ್ರಮಿಸಿದಾಗ ತಾವೂ ನಗಲಾರಂಭಿಸಿದರು. ಒಂದು ಸಲ ಮಹಾಸ್ವಾಮಿಯವರು ತಮ್ಮ ಉಡುಪನ್ನು ಮತ್ತೊಬ್ಬರಿಗೆ ಹಾಕಿ ನಿಲ್ಲಿಸಿದ್ದು, ಹಿಂದಿನಿಂದ ಬಂದ ಮಹಾಮಾತೃಶ್ರೀಯವರು ಅವರೇ ತಮ್ಮ ಪುತ್ರರೆಂದು ಭ್ರಮಿಸಿ ದೂರದಿಂದಲೇ "ಅಯ್ಯಾಜಿ" ಎಂದು ಕೂಗಿ ಮಾತನಾಡಿಸಿದಾಗ ದೊಡ್ಡ ವಿನೋದವಾಯಿತು. ಮೂವರೂ ನಕ್ಕರು. ಮಹಾಮಾತೃಶ್ರೀಯವರು, "ನಾಟಕ, ನಾಟಕ ಮಾಡಿ ಬಿಡುತ್ತೀರಿ, ಅಯ್ಯಾಜಿ" ಎಂದು ಹೇಳಿ ನಕ್ಕರು. ತಮ್ಮ ಬಾಲ್ಯದಲ್ಲಿ ಮಹಾಸ್ವಾಮಿಯವರು ಈ ಬಗೆಯ ವಿವಿಧ ವಿನೋದಗಳಿಂದ ತಮ್ಮ ಸೋದರ ಸೋದರಿಯರನ್ನೂ, ಮಹಾಮಾತೃಶ್ರೀಯವರೇ ಮುಂತಾದ ವರನ್ನೂ ನಗಿಸಿ ನಗಿಸಿ ಉಲ್ಲಾಸಪಡಿಸುತ್ತಿದ್ದುದು ವಾಡಿಕೆ.

ವ್ರತಾಚರಣೆಯಲ್ಲಿಯೂ ಮತ್ತು ಪೂಜೆಯಲ್ಲಿಯೂ ಮಹಾಸ್ವಾಮಿ ಯವರಿಗೆ ಮೊದಲಿನಿಂದಲೂ ವಿಶೇಷವಾದ ಆಸಕ್ತಿ; ಅತ್ಯಂತವಾದ ಸಡಗರ; ಅತಿಶಯವಾದ ಶ್ರದ್ಧೆ. ಹತ್ತೇ ವರ್ಷ ವಯಸ್ಸಿನವರಾಗಿದ್ದಾಗ ಕೂಡ ಬೆಳಗ್ಗೆ ಸ್ನಾನಮಾಡಿ, ಸ್ತೋತ್ರಗಳನ್ನು ಹೇಳಿಕೊಂಡು ದೇವತಾರ್ಚನೆ ಮಾಡಿದಲ್ಲದೆ ಅವರು ಕಾಫಿಯನ್ನು ಸೇವಿಸುತ್ತಿರಲಿಲ್ಲ. ಪುರಾಣೋಕ್ತಗಳಾದ ಸತ್ಕಥೆಗಳನ್ನು ಎಷ್ಟು ಕೇಳಿದರೂ ಅವರಿಗೆ ತೃಪ್ತಿಯೇ ಉಂಟಾಗುತ್ತಿರಲಿಲ್ಲ. ವಿನೋದವಾದ ಕಥೆಗಳನ್ನು ಕೇಳು ವುದರಲ್ಲಿದ್ದುದಕ್ಕಿಂತ ಅಧಿಕತರವಾದ ಅಭಿಲಾಷೆಯು ಭಕ್ತಿಪೂರಿತಗಳಾದ ಪುರಾಣೋಕ್ತ ಕಥೆಗಳನ್ನು ಕೇಳುವುದರಲ್ಲಿ ಮಹಾಸ್ವಾಮಿಯವರಿಗಿದ್ದಿತು. ಅವರ ಹೃದಯದಲ್ಲಿ ಆಗ್ಗೆ ಮೂಡಿದ್ದ ಭಕ್ತಿಯೇ ಮಹಾವೃಕ್ಷವಾಗಿ ಬೆಳೆಯಿತು.

ವಸ್ತ್ರಾಭರಣಗಳ ವಿಷಯದಲ್ಲಿ ಸಹ ಅವರ ಅಭಿರುಚಿಯು ಸರಳ ಮನೋಹರವಾಗಿದ್ದಿತು. ನವರಾತ್ರಿ ಮುಂತಾದ ಉತ್ಸವ ಕಾಲಗಳಲ್ಲಿ ಹೊರತು, ಉಳಿದ ವೇಳೆಗಳಲ್ಲೆಲ್ಲ ಕಿಂಕಾಪಿನ ಪೋಷಾಕುಗಳನ್ನಾಗಲಿ ಅಥವಾ ರತ್ನಾಭರಣಗಳನ್ನಾಗಲಿ ಧರಿಸಲು ಮಹಾಸ್ವಾಮಿಯವರಿಗೆ ಆ ವಯಸ್ಸಿನಲ್ಲಿ ಕೂಡ ಸುತರಾಂ ಇಷ್ಟವಿರಲಿಲ್ಲ. ವಿದ್ಯಾರ್ಥಿದಶೆಯಲ್ಲಿ ದ್ದಾಗ ಸಾಮಾನ್ಯವರ್ಗದ ಬಾಲಕರಂತೆ ಗಜಕ್ಕೆ ಆರಾಣೆಗಳ ಬೆಲೆಯ ಚೆಕ್ಕು ಬಟ್ಟೆಗಳ ಅಂಗಿ ಷರಾಯಿಗಳನ್ನೂ "ಫೆಲ್ಟ್" ಟೋಪಿಯನ್ನೂ ಧರಿಸಲು ಅವರು ಬಹಳ ಇಷ್ಟಪಡುತ್ತಿದ್ದರು; ಸ್ವಲ್ಪ ವಯಸ್ಸು ಹೆಚ್ಚಿದ ಮೇಲೆ ರುಮಾಲನ್ನು ಧರಿಸಲಾರಂಭಿಸಿದರು. ಬಾಲ್ಯದಿಂದಲೂ ಸಾಮಾನ್ಯ ವಾದ ಆಹಾರದಲ್ಲಿ ಅವರಿಗೆ ಅಭಿಲಾಷೆಯೇ ಹೊರತು, ಬಗೆಬಗೆಯ

ಭಕ್ಷ್ಯಾದಿಗಳಿಂದ ಕೂಡಿದ ಮಿಷ್ಟಾನ್ನ ಭೋಜನವು ಅವರಿಗೆ ಸೊಗಸು ತ್ತಿರಲಿಲ್ಲ. ಸರಳತೆಯೂ, ಸೌಜನ್ಯವೂ, ಸ್ನೇಹಪ್ರವೃತ್ತಿಯೂ, ಮಹಾ ಸ್ವಾಮಿಯವರ ವೈಶಿಷ್ಟ್ಯಗಳಂತಿದ್ದ ಸದ್ಗುಣಗಳಾಗಿ ಶೋಭಿಸುತ್ತಿದ್ದುವು.

**ಶ್ರೀಮಾನ್ ಫ್ರೇಸರ್ ಅವರ ಆಗಮನ**

ಮಹಾಪ್ರಭುಗಳಿಗೆ ರಾಜ್ಯಭಾರ ನಿರ್ವಹಣ ಸಾಮರ್ಥ್ಯವುಂಟಾಗು ವುದಕ್ಕೆ ತಕ್ಕಂತೆ ಶಿಸ್ತಿನಿಂದ ವಿದ್ಯಾಭ್ಯಾಸವು ನಡೆಯುವ ಹಾಗೆ ಏರ್ಪಾಡಾಗಬೇಕೆಂಬ ಉದ್ದೇಶದಿಂದ ಇಂಡಿಯಾ ಸರ್ಕಾರದವರು ಆಲೋಚನೆ ಹೇಳಿದರು. ಅದರ ಪರಿಣಾಮವಾಗಿ, ರಾಜಕುಮಾರರ ಶಿಕ್ಷಣಕಲೆ ಯಲ್ಲಿ ಪ್ರವೀಣರೆಂದು ಆ ಮೊದಲೇ ಪ್ರಖ್ಯಾತ ರಾಗಿದ್ದ ಶ್ರೀಮಾನ್ ಎಸ್. ಎಂ. ಫ್ರೇಸರ್, ಐ.ಸಿ.ಎಸ್. ಅವರು ಮುಖ್ಯೋಪಾಧ್ಯಾಯರಾಗಿ ನೇಮಕವಾದರು. (ಅವರಿಗೆ ಆಗ್ಗೆ ಇನ್ನೂ "ಸರ್" ಪ್ರಶಸ್ತಿಯು ಲಭಿಸಿರಲಿಲ್ಲ.) ಅವರು ೧೮೯೬ನೆಯ ಇಸವಿ ಜೂನ್ ತಿಂಗಳಿನಲ್ಲಿ ಅಧಿಕಾರವಹಿಸಿ "ರಾಯಲ್ ಸ್ಕೂಲ್" ಪಾಠಶಾಲೆಯ ಶಿಸ್ತಿನ ವ್ಯವಸ್ಥೆಯನ್ನು ಹೆಚ್ಚಿಸಿದುದಲ್ಲದೆ, ಮಹಾಸ್ವಾಮಿಯವರೂ ಮತ್ತು ಇತರ ಬಾಲಕರೂ ಪ್ರತಿ ದಿನವೂ ಪಾಠ ಶಾಲಾ ಕಾರ್ಯಗಳು ಪೂರೈಸಿದ ತರುವಾಯ ಲೋಕರಂಜನ ಮಹಲಿ ನಿಂದ ತೆರಳುತ್ತಿದ್ದುದು ತಪ್ಪಿ, ಅವರೆಲ್ಲರ ಭೋಜನ ವಸತಿಗಳಿಗೆ ಸಹ ತಮ್ಮ ಮೇಲ್ವಿಚಾರಣೆಯಲ್ಲಿ ಅದೇ ಕಟ್ಟಡದಲ್ಲಿ ಏರ್ಪಾಡಾಗಬೇಕೆಂದು ಕೋರಿದರು.

**ಮಾತೃಹೃದಯದ ಕಳವಳ**

ಶ್ರೀಮಾನ್ ಎಸ್. ಎಂ. ಫ್ರೇಸರ್ ಅವರು ತಮ್ಮ ಅಧಿಕಾರವನ್ನು ವಹಿಸಿಕೊಂಡೊಡನೆಯೇ ಒಂದು ದಿನ ತಮ್ಮ ಶಿಷ್ಯರವರನ್ನು ತಮ್ಮೊಡನೆ ಕುದುರೆ ಸವಾರಿಗೆ ಕರೆದುಕೊಂಡು ಹೋದರು. ಅದರಿಂದ ಮಹಾಸ್ವಾಮಿಯವರಿಗೆ ಅಪರಿಮಿತ ವಾದ ಸಂತೋಷವುಂಟಾಯಿತು. ಏಕೆಂದರೆ, ಮಹಾಸ್ವಾಮಿಯವರನ್ನು ಕುದುರೆಯ ಮೇಲೆ ಕುಳ್ಳಿರಿಸಿ ಕುದುರೆಯನ್ನು ಬಿಟ್ಟುಬಿಟ್ಟರೆ ಅಪಾಯವೆಲ್ಲಿ ಸಂಭವಿಸೀತೋ — ಎಂಬ ಭಯದಿಂದ ಸೇವಕರು ಕುದುರೆಯನ್ನು ಹಿಡಿದುಕೊಂಡು ನಡಿಗೆ ಯಲ್ಲಿ ಅಥವಾ ಕುಲುಕು ಓಟದಲ್ಲಿ ಅವರನ್ನು ಕರೆದುಕೊಂಡುಹೋಗು ತ್ತಿದ್ದರು; ಅವರೆಷ್ಟು ಬಯಸಿದರೂ ನಾಗಾಲೋಟದಲ್ಲಿ ಕುದುರೆ ಸವಾರಿ ಮಾಡುವ ಸ್ವಾತಂತ್ರ್ಯಕ್ಕೆ ಅವಕಾಶವೇ ಅದುವರೆಗೆ ದೊರೆತಿರಲಿಲ್ಲ. ಆದಕಾರಣ, ಅಂದು ಮನಸಾರೆ ಕುದುರೆ ಸವಾರಿ ಮಾಡಲು ಅವಕಾಶ

ದೊರೆತುದಕ್ಕಾಗಿ ಸಾಹಸಪ್ರೇಮಿಗಳಾದ ಮಹಾಸ್ವಾಮಿಯವರು ಬಹಳ ವಾಗಿ ಹರ್ಷಿಸಿದರು. ಶ್ರೀಮಾನ್ ಎಸ್. ಎಂ. ಫ್ರೇಸರ್ ಅವರು, ಮಹಾ ಸ್ವಾಮಿಯವರೊಡನೆ, ಮೈಸೂರು ನಗರದಿಂದ ಬಹು ದೂರದವರೆಗೂ ವೇಗವಾಗಿ ಕುದುರೆಯನ್ನು ಓಡಿಸಿಕೊಂಡು ಹೋಗಿದ್ದು ಆ ಬಳಿಕ ಹಿಂದಕ್ಕೆ ಬಂದರು. ಆ ವಾರ್ತೆಯನ್ನು ಕೇಳಿದಾಗಲೇ ಮಹಾಮಾತೃಶ್ರೀ ಯವರ ಚಿತ್ತಕ್ಕೆ ಬಹಳ ಆತಂಕವುಂಟಾಗಿದ್ದ ಕಾರಣ, ಮುಂದೆ ತಮ್ಮ ಪುತ್ರರು ಅರಮನೆಯಲ್ಲಿರುವುದು ತಪ್ಪಿಹೋಗಿ— ಲೋಕರಂಜನ ಮಹಲಿನಲ್ಲಿದ್ದು—ಪ್ರತಿದಿನವೂ ರಾತ್ರಿಯ ಭೋಜನದ ವೇಳೆಗೆ ಮಾತ್ರ ಅರಮನೆಗೆ ಚಿತ್ತೈಸಿ ಮತ್ತೆ ಹಿಂದಕ್ಕೆ ದಯಮಾಡಬೇಕಾದ ಏರ್ಪಾಡು ನಡೆಯುವ ವಾರ್ತೆಯು ಬಂದಾಗ ಸ್ತ್ರೀಜನೋಚಿತವಾದ ಮಾತೃಹೃದ ಯದ ಕಳವಳಕ್ಕೀಡಾಗಿ ಮತ್ತಷ್ಟು ಪರಿತಪಿಸಿದರು. ದಾರುಣವಾದ ಪತಿವಿಯೋಗ ದುಃಖದಿಂದ ಸಂಕಟಪಡುತ್ತಿರುವಲ್ಲಿ— ತಮ್ಮ ಪುತ್ರಪುತ್ರಿ ಯರೇ ತಮ್ಮ ಜೀವರತ್ನಗಳೆಂದು ಭಾವಿಸಿರುವಲ್ಲಿ— ಪ್ರಿಯ ಪುತ್ರರನ್ನು ಅರಮನೆಯಿಂದ ಹಾಗೆ ಕಳುಹಿಸುವುದು ಕಷ್ಟವೆನಿಸಿತು. ಅದಕ್ಕೆ ಹಿಂದೆ ಒಂದು ದಿನವೂ ಅವರು ತಮ್ಮ ಪ್ರಿಯ ಪುತ್ರಪುತ್ರಿಯರನ್ನು ಅಗಲಿರಲಿಲ್ಲ ವಾದ ಕಾರಣ, ಪುತ್ರವಾತ್ಸಲ್ಯಕ್ಕೆ ವಶರಾಗಿ ಅವರು ಅಸಮ್ಮತಿಯನ್ನು ಸೂಚಿಸಿದರು. ಆಳಿದ ಮಹಾಸ್ವಾಮಿಯವರಾದ ಶ್ರೀಮನ್ಮಹಾರಾಜ ರವರು ತಮ್ಮ ವಿದ್ಯಾಗುರುಗಳ ಕೋರಿಕೆಯೇ ಸಾಧುವೆಂದು ಅರಿಕೆ ಮಾಡಿ ಅನುಜ್ಞೆ ಕೊಡಬೇಕೆಂದು ಮಹಾಮಾತೃಶ್ರೀಯವರನ್ನು ಪ್ರಾರ್ಥಿಸಿದರು.

ಶ್ರೀಮಾನ್ ಅಂಬಿಲ್ ನರಸಿಂಹ ಐಯಂಗಾರ್ಯರವರು ಮಹಾ ಮಾತೃಶ್ರೀಯವರ ಸನ್ನಿಧಿಗೆ* ಹೋಗಿ, "ಮಹಾಸ್ವಾಮಿಯವರು ಪ್ರಭು ಗಳು; ಮುಂದೆ ರಾಜ್ಯಭಾರವಹಿಸತಕ್ಕವರು. ಅವರಿಗೆ ಸಮರ್ಪಕವಾದ ಶಿಕ್ಷಣವಾಗದೆಹೋದರೆ ನಿರ್ವಾಹವೇ ಇಲ್ಲ. ಆದಕಾರಣ, ಸನ್ನಿಧಿಯ ಅನುಮತಿಗಾಗಿ ನಾವುಗಳೆಲ್ಲರೂ ಪ್ರಾರ್ಥಿಸುವೆವು" ಎಂದು ಅರಿಕೆ ಮಾಡಿದರು. ಅನಂತರ ಮಹಾಮಾತೃಶ್ರೀಯವರು, "ಹಾಗಾದರೆ ಅಯ್ಯಾಜಿಯವರನ್ನು ನಮ್ಮಿಂದ ಅಗಲಿಸಬೇಕೆಂದಿರುವಿರೇನು?" ಎಂದು ಪ್ರಶ್ನೆಮಾಡಿದರು. ಶ್ರೀಮಾನ್ ಅಂಬಿಲ್ ನರಸಿಂಹ ಐಯಂಗಾರ್ಯ ರವರು ಸಮಾಧಾನೋಕ್ತಿಗಳನ್ನು ಅರಿಕೆಮಾಡಿ ಕೊನೆಗೆ, "ಅವರಿಗೆ

* ಅಧಿಕಾರಿಗಳೊಡನೆ ಮಾತನಾಡಬೇಕಾದಾಗ್ಗೆ ಮಹಾಮಾತೃಶ್ರೀಯವರು ಘೋಷಾ ಪದ್ಧತಿಗನುಸಾರವಾಗಿ ತೆರೆಯ ಹಿಂದೆ ಕುಳಿತು ಮಾತನಾಡುತ್ತಿದ್ದರು.

ಈ ರೀತಿ ಶಿಕ್ಷಣವಾಗುವುದೇ ಉಚಿತವಾಗಿದೆ, ಮಹಾಸ್ವಾಮಿ. ವೈಸ್ರಾಯಿ ಪದವಿಗೂ ಗವರ್ನರ್ ಪದವಿಗೂ ಬರುವವರೆಲ್ಲರೂ ಹೀಗೆ ಶಿಕ್ಷಣ ಪಡೆದವರೇ. ಪಾಶ್ಚಾತ್ಯ ದೇಶಗಳಲ್ಲಿ ರಾಜರಾಗತಕ್ಕವರಿಗೂ ಇದೇ ರೀತಿ ಶಿಕ್ಷಣವಾಗುತ್ತದೆ. ನಾನು ಮಹಾಸ್ವಾಮಿಯವರ ಅನ್ನವನ್ನು ತಿಂದು ಈ ಏರ್ಪಾಡನ್ನೂ ಮಾಡಬೇಡವೆ? ಚಿತ್ತಕ್ಕೆ ಆಯಾಸವಾಗಕೂಡದೆಂದು ಪ್ರಾರ್ಥಿಸುತ್ತೇನೆ. ಈ ಏರ್ಪಾಡನ್ನು ಮಾಡದೆಹೋದರೆ ನನಗೆ ನರಕವಾಗುತ್ತೆ. ಪ್ರಭುಗಳಿಗೆ ಸರಿಯಾದ ಶಿಕ್ಷಣ ಕೊಡಿಸಿ ಅವರು ಸಂಸ್ಥಾನದ ಕಲ್ಪವೃಕ್ಷವಾಗುವಂತೆ ಏರ್ಪಾಡು ಮಾಡಿಯೇ ನಾನು ಉದ್ಧಾರವಾಗಬೇಕು" ಎಂದು ಅರಿಕೆ ಮಾಡಿದರು. ಶ್ರೀ ಚಾಮರಾಜೇಂದ್ರ ಒಡೆಯರವರ ವಿದ್ಯಾಗುರುಗಳಾಗಿದ್ದು, ಆ ಬಳಿಕ ಅವರ ದರ್ಬಾರು ಬಕ್ಷಿಯವರಾಗಿಯೂ ಮತ್ತು ಆಪ್ತಮಿತ್ರರಾಗಿಯೂ ಇದ್ದ ಶ್ರೀಮಾನ್ ಅಂಬಿಲ್ ನರಸಿಂಹ ಐಯಂಗಾರ್ಯರವರ ಪಥ್ಯವಚನಗಳನ್ನು ಲಾಲಿಸಿ ಮಹಾಮಾತೃಶ್ರೀಯವರು, "ನೀವು ಇಷ್ಟು ಹೇಳಿದಮೇಲೆ ಹಾಗೆಯೇ ನಡೆಯಲಿ. ನಾವು ಒಂದು ದಿನವೂ ಅಯ್ಯಾಜಿಯವರನ್ನು ಬಿಟ್ಟಿರಲಿಲ್ಲ. ಈಗ ಅವರೇ ಬೇರೆ ಸ್ಥಳದಲ್ಲಿದ್ದು ನಾವು ಅವರನ್ನಗಲಿರಬೇಕಾದುದು ಹೀಗೆ ಕಳವಳಕ್ಕೆ ಕಾರಣವಾಗಿದೆ" ಎಂದು ಅಪ್ಪಣೆ ಕೊಡಿಸಿದರು.

ಮಹಾಪ್ರಭುಗಳಿಗೂ ಅವರ ಸಹಾಧ್ಯಾಯಿಗಳಿಗೂ ಲೋಕರಂಜನ ಮಹಲಿನಲ್ಲಿ (ಎಂದರೆ, "ಸಮ್ಮರ್ ಪ್ಯಾಲೆಸ್" ಭವನದಲ್ಲಿ) ಭೋಜನ

**ಶ್ರೀಮಾನ್ ಫ್ರೇಸರ್ ಅವರ ಆಡಳಿತದಲ್ಲಿ**

ವಸತಿಗಳ ಏರ್ಪಾಡೂ ನಡೆದು ಅವರ ಶಿಕ್ಷಣವು ಮುಂದುವರಿಯಿತು. ಮುಂದೆ ರಾಜ್ಯಭಾರವನ್ನು ವಹಿಸಿ ವಿಚಕ್ಷಣೆಯಿಂದ ನಿರ್ವಹಿಸುವುದಕ್ಕೆ ಸಾಧಕವಾದ ಸಮಸ್ತ ವಿಚಾರಗಳಲ್ಲಿಯೂ ಮಹಾಸ್ವಾಮಿಯವರಿಗೆ ಶಿಕ್ಷಣಕೊಡಲು ಶ್ರೀಮಾನ್ ಎಸ್. ಎಂ. ಫ್ರೇಸರ್ ಅವರು ತೀವ್ರಾಸಕ್ತಿಯಿಂದ ಶ್ರಮಿಸಿದರು. ಶ್ರೀಮಾನ್ ಪೂರ್ಣ ರಾಘವೇಂದ್ರರಾಯರವರೇ ಮುಂತಾದ ಇತರ ಉಪಾಧ್ಯಾಯರುಗಳೂ ಅವರಿಗೆ ಪೂರ್ಣಸಹಕಾರವನ್ನೊದಗಿಸಿ ಸಹಾಯಮಾಡಿದರು. ಇಂಗ್ಲಿಷ್, ಕನ್ನಡ, ಸಂಸ್ಕೃತ ಮತ್ತು ಉರ್ದು ಭಾಷೆಗಳಲ್ಲಿ ಪಾಠಪ್ರವಚನಗಳು ನಡೆಯುತ್ತಿದ್ದುವು. ಅಲ್ಲದೆ ವಿಜ್ಞಾನಶಾಸ್ತ್ರ, ಚರಿತ್ರೆ, ರಾಜ್ಯಶಾಸ್ತ್ರ, ವ್ಯವಹಾರ ವಿಜ್ಞಾನಶಾಸ್ತ್ರ, ಅರ್ಥಶಾಸ್ತ್ರ, ಮುಂತಾದುವುಗಳ ಬೋಧನೆಯೂ ನಡೆಯುತ್ತಿತ್ತು. ವಿದ್ಯಾರ್ಥಿಗಳು ಪಾಠವನ್ನೊಪ್ಪಿಸದೆ ತಪ್ಪಿದರೆ, "ಇಂಪೋಜಿಷನ್" ಎಂಬ ಪುನರ್ಲೇಖನ, ಬೆಂಚಿನಮೇಲೆ ನಿಲ್ಲಿಸುವುದು,

ಆಟಗಳಿಗೆ ಹೋಗದಂತೆ ತಡೆದು ನಿಲ್ಲಿಸುವುದು, ಮುಂತಾದ ಶಿಕ್ಷೆಗಳನ್ನು ವಿಧಿಸುತ್ತಿದ್ದರು.

ಅಂಗಸಾಧನೆಯಾಗಲು "ರೌಂಡ್ ರೇಸ್"; "ಕ್ರಿಕೆಟ್", "ಫುಟ್ ಬಾಲ್", "ಟೆನ್ನಿಸ್", "ರ್‍ಯಾಕೆಟ್ಸ್", "ಪೋಲೊ" ಮುಂತಾದ ಚೆಂಡಾಟಗಳು; "ಜಿಮ್ನಾಸ್ಟಿಕ್ಸ್"; ಕುದುರೆ ಸವಾರಿ; ಬೈಸಿಕಲ್ ಸವಾರಿ; ಮುಂತಾದುವುಗಳಲ್ಲೆಲ್ಲ ಶಿಕ್ಷಣ ನಡೆಯುತ್ತಿದ್ದಿತು.

ಶ್ರೀಮಾನ್ ಫ್ರೇಸರ್ ಅವರ ಮೇಲ್ವಿಚಾರಣೆಯಲ್ಲಿ ಶ್ರೀಮಾನ್ ಪೂರ್ಣ ರಾಘವೇಂದ್ರರಾಯರವರು ವಿಜ್ಞಾನಶಾಸ್ತ್ರ ಪಾಠ ಹೇಳುತ್ತಿದ್ದುದರ ಜೊತೆಗೆ ಪಾಠಶಾಲೆಯ ಆಡಳಿತ ವಿಚಾರಗಳನ್ನೂ ನೋಡಿಕೊಂಡು ನಿರ್ವಹಿಸುತ್ತಿದ್ದರು. ಶ್ರೀಮಾನ್ ಬಾದಾಮಿ ಭೀಮರಾಯರವರು ಭೋಜನ ವಸತಿಗಳಿಗೆ ಸಂಬಂಧಪಟ್ಟ ಆಡಳಿತಗಳನ್ನು ನೋಡಿಕೊಳ್ಳುತ್ತ ಚರಿತ್ರೆಯನ್ನು ಬೋಧಿಸುತ್ತಿದ್ದರು. ಹೀಗೆ ಈ ಪಾಠಶಾಲೆಯು ೧೮೯೬ನೆಯ ಇಸವಿ ಜೂನ್ ತಿಂಗಳಿನಿಂದ ೧೯೦೨ನೆಯ ಇಸವಿ ಜುಲೈ ತಿಂಗಳಿನವರೆಗೂ ನಡೆಯಿತು.

**ಮಹಾಸ್ವಾಮಿಯವರ ಪಾಠಶಾಲಾ ದಿನಚರಿ**

ಮಹಾಪ್ರಭುಗಳು ಪ್ರಾತಃಕಾಲ ಐದು ಘಂಟೆಗೆ ಸರಿಯಾಗಿ ನಿದ್ರೆಯಿಂದೆಚ್ಚೆತ್ತು, ತಮ್ಮ ಸಹಾಧ್ಯಾಯಿಗಳೆಲ್ಲರೂ ಎಚ್ಚರಗೊಳ್ಳಲನುಕೂಲಿಸುವಂತೆ "ಬ್ಯೂಗಲ್" ಎಂಬ ತುತ್ತೂರಿಯನ್ನು ಧ್ವನಿಗೈದು, ಪ್ರಾತರ್ವಿಧಿಗಳನ್ನು ಪೂರೈಸಿ (ಸ್ನಾನ ಸಂಧ್ಯಾವಂದನೆಗಳೂ ದೇವತಾರ್ಚನೆಯೂ ಮುಗಿದ ಬಳಿಕ), ಸಂಗೀತವನ್ನು ಅಭ್ಯಾಸಮಾಡುತ್ತಿದ್ದರು. ಅವರು ಪಿಯಾನೊ ವಾದ್ಯವನ್ನೂ ಪಿಟೀಲನ್ನೂ ನುಡಿಸಿ ಬ್ಯಾಂಡ್ ಮಾಸ್ಟರಾಗಿದ್ದ ಶ್ರೀಮಾನ್ ಡೆಸ್ಪ್ರೇಸ್ ಅವರಲ್ಲಿ ಪಾಶ್ಚಾತ್ಯ ಸಂಗೀತವನ್ನೂ, ಕೊಳಲು, ಮೃದಂಗ, ಪಿಟೀಲು ಮುಂತಾದುವುಗಳನ್ನು ನುಡಿಸಿ ಶ್ರೀಮಾನ್ ವೀಣೆ ಶೇಷಣ್ಣನವರಲ್ಲಿ ಭಾರತೀಯ ಸಂಗೀತವನ್ನೂ ಅಭ್ಯಾಸ ಮಾಡುತ್ತಿದ್ದರು. ಅನಂತರ ಕುದುರೆ ಸವಾರಿಗೆ ದಯಮಾಡುತ್ತಿದ್ದರು. ಕುದುರೆ ಸವಾರಿ ಮಾಡಿಕೊಂಡು ಹಿಂತಿರುಗುವಾಗ್ಗೆ ಬೆಳಗ್ಗೆ ಎಂಟೂವರೆ ಘಂಟೆಯಾಗುತ್ತಿದ್ದಿತು. ಅನಂತರ ವ್ಯಾಸಂಗಮಾಡುತ್ತಿದ್ದು ಮತ್ತೆ ಸ್ನಾನಾಹ್ನಿಕಗಳನ್ನೂ ಭೋಜನವನ್ನೂ ನೆರವೇರಿಸಿ ಹನ್ನೊಂದು ಘಂಟೆಗೆ ಪಾಠಶಾಲೆಗೆ ದಯಮಾಡುತ್ತಿದ್ದರು. ಆಳಿದ ಮಹಾಸ್ವಾಮಿಯವರ ತರಗತಿಯು ಮಹಡಿಯ ಕೆಳಗೂ, ಶ್ರೀಮದ್ಯುವರಾಜ ಶ್ರೀ ಕಂಠೀರವ ನರಸಿಂಹರಾಜ ಒಡೆಯ

ರವರ ತರಗತಿಯು ಮಹಡಿಯ ಮೇಲೂ ನಡೆಯುತ್ತಿದ್ದುವು. ತರಗತಿ ಯಲ್ಲಿ ಪಾಠಗಳು ಪ್ರಾರಂಭವಾಗುವುದಕ್ಕೆ ಮುಂಚೆ, ಕವಿತಿಲಕ ಸೋಸಲೆ ಅಯ್ಯಾಶಾಸ್ತ್ರಿಗಳು ಭಗವತ್ಪ್ರಾರ್ಥನೆಯ ಶ್ಲೋಕಗಳನ್ನು ಮಹಾಸ್ವಾಮಿ ಯವರಿಂದ ಹೇಳಿಸುತ್ತಿದ್ದರು. ಶಿವತಾಂಡವ ಸ್ತೋತ್ರ, ಮುಕುಂದ ಮಾಲಾ ಸ್ತೋತ್ರ ಮತ್ತು ಶ್ಯಾಮಲಾ ದಂಡಕ— ಇವುಗಳನ್ನು ಕಂಡರೆ ಮಹಾಸ್ವಾಮಿಯವರಿಗೆ ಬಹಳ ಇಷ್ಟ. ಅವರು ಬಹಳ ಭಕ್ತಿಯಿಂದ ತರಗತಿಯಲ್ಲಿ ಆ ಶ್ಲೋಕಗಳನ್ನು ಹೇಳುತ್ತಿದ್ದರು. ಅವರ ಭಕ್ತಿಯು ಎಷ್ಟು ಗಾಢವಾದುದೆಂಬುದಕ್ಕೆ ಅನಿರೀಕ್ಷಿತವಾಗಿ ಅವರು ಒಂದೊಂದು ವೇಳೆ "ಸ್ವಾಮಿ, ನಂಜುಂಡೇಶ್ವರನು ನನ್ನನ್ನು ಸೇವೆಗೆ ಬರಬೇಕೆಂದು ಪ್ರೇರಿಸಿ ಅನುಗ್ರಹಿಸಿದ್ದಾನೆ. ಹೋಗಲು ಅನುಮತಿಯನ್ನು ಕೊಡ ಬೇಕೆಂದು ವಿಜ್ಞಾಪನೆ" ಎಂದು ತಾತ್ಪರ್ಯವಾಗುವಂತೆ ಇಂಗ್ಲಿಷಿನಲ್ಲಿ ಶ್ರೀಮಾನ್ ಫ್ರೇಸರ್ ಸಾಹೇಬರವರಿಗೆ ಬರೆದುಕಳುಹಿಸಿ, ಮಿತಪರಿವಾರ ದೊಡನೆ ನಂಜನಗೂಡಿಗೆ ದಯಮಾಡಿ ಸೇವೆಯನ್ನು ಸಲ್ಲಿಸಿ ಹಿಂದಕ್ಕೆ ಚಿತ್ತೈಸುತ್ತಿದ್ದುದೇ ನಿದರ್ಶನ. ಆದರೆ ಪಾಠಶಾಲೆಯಲ್ಲಿ ಪಾಠಪ್ರವಚನ ಗಳಿಗೆ ತಪ್ಪಿಸಿಕೊಳ್ಳದೆಯೇ ಪಾಠಶಾಲೆಯು ನಡೆಯದ ವೇಳೆಗಳಲ್ಲಿ ಮಾತ್ರ ಅವರು ಆ ರೀತಿ ಮಾಡುತ್ತಿದ್ದರು.

ಬೆಳಗ್ಗೆ ಹನ್ನೊಂದು ಘಂಟೆಯಿಂದ ಸಾಯಂಕಾಲ ಐದು ಘಂಟೆಯ ವರೆಗೆ ಪಾಠಪ್ರವಚನಗಳು ನಡೆಯುತ್ತಿದ್ದುವು. ಮಧ್ಯದಲ್ಲಿ ಅಪರಾಹ್ನ ಎರಡು ಘಂಟೆಯಿಂದ ಮೂರು ಘಂಟೆಯವರೆಗೆ (ಹಿಂದೆಯೇ ಸೂಚಿತ ವಾಗಿರುವಂತೆ) ವಿರಾಮವಿದ್ದು, ಬಿಡದಿ ಬಕ್ಷಿಯವರ ಮೇಲ್ವಿಚಾರಣೆ ಯಲ್ಲಿ ಅಲ್ಪಾಹಾರ ಸೇವನೆಯು ನಡೆಯುತ್ತಿದ್ದಿತು. ಐದು ಘಂಟೆಯ ಮೇಲೆ ಆಟಪಾಟಗಳು ನಡೆಯುತ್ತಿದ್ದುವು. ಮಹಾಸ್ವಾಮಿಯವರು ತಮ್ಮ ಸಹಾಧ್ಯಾಯಿಗಳೊಡನೆ, "ಹಾರಿಸಾಂಟಲ್ ಬಾರ್", "ಪ್ಯಾರಲೆಲ್ ಬಾರ್ಸ್" ಮುಂತಾದುವುಗಳ ಮೇಲೆ ಸಾಧಕಮಾಡುತ್ತ, ಶಿಕ್ಷಕರಾದ ಶ್ರೀಮಾನ್ ವೀರಾಸಾಮಿಯವರನ್ನು ಕೂಡ ಬೆರಗುಮಾಡುತ್ತಿದ್ದರು. ಆ ಬಗೆಯ "ಜಿಮ್ನಾಸ್ಟಿಕ್ಸ್" ಅಂಗಸಾಧನೆಯು ವಾರದಲ್ಲೆರಡು ದಿನ ಗಳೂ, ಕವಾತಿನ ("ಡ್ರಿಲ್") ಅಂಗಸಾಧನೆಯು ವಾರದಲ್ಲೆರಡು ದಿನಗಳೂ ನಡೆಯುತ್ತಿದ್ದುವು. ಉಳಿದ ದಿನಗಳಲ್ಲಿ "ಕ್ರಿಕೆಟ್", "ಟೆನ್ನಿಸ್" ಮುಂತಾದುವು ನಡೆಯುತ್ತಿದ್ದುವು. ಈ ಆಟಪಾಟಗಳು ಅಥವಾ ಅಂಗಸಾಧನೆಯು ಸಾಯಂಕಾಲ ಆರೂವರೆ ಘಂಟೆಯ ತನಕ ನಡೆದ ಬಳಿಕ ಸ್ವಲ್ಪಹೊತ್ತು ವಿಶ್ರಾಂತಿ ಹೊಂದಿ ಅನಂತರ ರಾತ್ರಿ



" ಪ್ಯಾರಲೆಲ್ ಬಾರ್ " ವ್ಯಾಯಾಮ ಕಾಲದಲ್ಲಿ

(ಆಳಿದ ಮಹಾಸ್ವಾಮಿಯವರು ಮಧ್ಯಭಾಗದಲ್ಲಿ ಮೇಲೆ ಕುಳಿತಿದ್ದಾರೆ. ಅವರ ಹಿಂಭಾಗದಲ್ಲಿ ನಿಂತಿರುವವರಲ್ಲಿ ಮೊದಲನೆಯವರು ಶ್ರೀಮಾನ್ ಮೇಜರ್ ಎಂ. ಸಿ. ಸುಬ್ಬರಾಜ ಅರಸಿನವರು; ಎರಡನೆಯವರು ಶ್ರೀಮಾನ್ ಟಿ. ಎಸ್. ಅಲೀಖಾನ್ ರವರು; ಮೂರನೆಯವರು ಸರ್ದಾರ್ ಎಂ. ಲಕ್ಷ್ಮೀಕಾಂತರಾಜ ಅರಸಿನವರು; ನಾಲ್ಕನೆಯವರು ಶ್ರೀಮಾನ್ ಎ. ಸಿ. ಬಸವರಾಜ ಅರಸಿನವರು. ಆಳಿದ ಮಹಾಸ್ವಾಮಿಯವರ ಎಡಕ್ಕೆ ಮುಂಭಾಗದಲ್ಲಿ ನಿಂತಿರುವವರು ಸರ್ ಮಿರ್ಜಾ ಎಂ. ಇಸ್ಮಾಯಿಲ್‌ರವರು)

ಎಂಟೂವರೆ ಘಂಟೆಯವರೆಗೂ ಮಹಾಸ್ವಾಮಿಯವರು ವ್ಯಾಸಂಗಮಾಡು ತ್ತಿದ್ದರು. ಅನಂತರ ಮತ್ತೆ ಸ್ನಾನ ಸಂಧ್ಯಾವಂದನೆಗಳನ್ನು ನೆರವೇರಿಸಿ, ಭೋಜನ ಮಾಡಿ, ಸಹಾಧ್ಯಾಯಿಗಳೊಡನೆ ಸ್ವಲ್ಪಕಾಲ ವಿನೋದ ಗೋಷ್ಠಿಯಲ್ಲಿದ್ದು, ಆ ಬಳಿಕ ನಿದ್ರಿಸುತ್ತಿದ್ದರು. ಮಹಾಪ್ರಭು ಗಳವರ ವಯಸ್ಸು ಕೊಂಚ ಹೆಚ್ಚಿ ದೇಹಪುಷ್ಟಿಯು ಅಧಿಕವಾದಮೇಲೆ ಅವರಿಗೆ ಸೈನಿಕ ಶಿಕ್ಷಣ, ಯುದ್ಧಕಲೆಯ ಬೋಧನೆ, "ಪೋಲೋ" ಎಂಬ ಚೆಂಡಾಟದಲ್ಲಿ ಶಿಕ್ಷಣ, ಮುಂತಾದುವೆಲ್ಲ ನಡೆದುವು. ಈ ಬಗೆಯ ಸೈನಿಕೋದ್ಯೋಗ ಶಿಕ್ಷಣವು ನಡೆಯುವ ಕಾಲದಲ್ಲಿ ವಾರಕ್ಕೆರಡು ದಿನಗಳು ಸೈನ್ಯದ ಕವಾತು ("ಮಿಲಿಟರಿ ಡ್ರಿಲ್") ಎಂಬ ಶ್ರಮಸಾಧ್ಯವಾದ ಅಂಗಸಾಧನೆಯು ನಡೆಯುತ್ತಿದ್ದಿತು. ಅದಕ್ಕೆ ತಪ್ಪಿಸಿಕೊಂಡವರನ್ನು ಬೆಂಚಿನಮೇಲೆ ನಿಲ್ಲಿಸುವುದೇ ಮುಂತಾದ ಶಿಕ್ಷೆಗೆ ಗುರಿಮಾಡುತ್ತಿದ್ದರು. ಒಂದು ಸಲ ಮಹಾಸ್ವಾಮಿಯವರ ಸಹಾಧ್ಯಾಯಿಯವರೊಬ್ಬರಿಗೆ ಮಂಡಿಯು ಹಿಡಿದುಕೊಂಡಿದ್ದು ಗುಣವಾದ ಮೇಲೆ ಸಹ ಅವರು ಕವಾತಿಗೆ ಹೋಗದೆ ತಪ್ಪಿಸಿಕೊಳ್ಳುವ ಉದ್ದೇಶದಿಂದ ಮಂಡಿಯು ಇನ್ನೂ ನೋವೆಂದು ಹೇಳಿ ನಟಿಸುತ್ತ ಕುಂಟುತ್ತಿದ್ದರು. ಶಿಕ್ಷಕರು ಅವರ ಹೇಳಿಕೆಯನ್ನೇ ನಂಬಿ ಸುಮ್ಮನಿದ್ದರು. ಆಗ ಮಹಾಸ್ವಾಮಿ ಯವರು ಅವರನ್ನು "ಕುಂಟ, ಕುಂಟ, ಸುಳ್ಳಿನ ಕುಂಟ", ಎಂದು ಕರೆದು ಹಾಸ್ಯಮಾಡಿದರು. ಅವರು ನಾಚಿಕೊಂಡು, ತಮ್ಮ ತಪ್ಪನ್ನೊಪ್ಪಿಕೊಂಡು ಕ್ರಮವಾಗಿ ಕವಾತಿಗೆ ಬರಲು ಪ್ರಾರಂಭಿಸಿದರು. ಆಗ್ಗೆ ಪಡೆದ ಸೈನಿಕ ಶಿಕ್ಷಣದಿಂದ ತಮಗೆ ಮುಂದೆ ಸೈನ್ಯಾಧಿಕಾರದಲ್ಲಿ ಬಹಳ ಉಪಯೋಗವಾಯಿತೆಂದು ಅವರು ಯಾವಾಗಲೂ ಉಪಕಾರ ಸ್ಮರಣೆ ಮಾಡುತ್ತಿರುತ್ತಾರೆ. ಯುದ್ಧೋದ್ಯಮದಲ್ಲಿ ಮಹಾಪ್ರಭುಗಳ ವರಿಗೆ ಪರಿಶ್ರಮವುಂಟಾಗುವಂತೆ ಮಾಡುವುದಕ್ಕಾಗಿ ನೂರು ಮಂದಿ ಯೋಧರನ್ನು ಕರೆಯಿಸಿ ಆ ಯೋಧರಿಗೆ ಅವರು ನಾಯಕರಾಗಿ ನಿಂತು ಸೈನ್ಯದ ಕಾರ್ಯಕಲಾಪಗಳನ್ನು ಅವರು ನೆರವೇರಿಸಬೇಕೆಂದೂ ಸಹ ಶಿಕ್ಷಕರು ಏರ್ಪಡಿಸಿದ್ದರು. ಗುರಿಗೆ ಸರಿಯಾಗಿ ಬಂದೂಕವನ್ನು ಹಾರಿಸುವ ಶಿಕ್ಷಣವೂ ಅವರಿಗೂ ಅವರ ಸಹಪಾಠಿಗಳಿಗೂ ದೊರೆಯಿತು. ಶ್ರೀ ರೀಜೆಂಟರವರಿಗೆ ಪ್ರೈವೇಟ್ ಸೆಕ್ರಿಟರಿಯವರಾಗಿದ್ದ ಕರ್ನಲ್ ಕ್ಯಾಂಬಲ್ ಅವರು ಕುದುರೆಯ ಬಂಡಿಯನ್ನು ಚತುರತೆಯಿಂದ ನಡೆಯಿಸುವ ಕಲೆಯನ್ನು ಮಹಾಸ್ವಾಮಿಯವರಿಗೆ ಬೋಧಿಸಿ, ಅದರಲ್ಲಿ ಮಹಾಸ್ವಾಮಿಯವರಿಗೆ ವಿಶೇಷ ಪರಿಶ್ರಮವನ್ನುಂಟುಮಾಡಿಕೊಟ್ಟರು.

ಮತ್ತೊಬ್ಬರು ಯೂರೋಪಿಯನ್ ದೊಡ್ಡಮನುಷ್ಯರಿಂದ ಮಹಾ
ಯವರು ಅದನ್ನು ಮತ್ತಷ್ಟು ಉತ್ತಮಪಡಿಸಿಕೊಂಡರು. ಇಲ
ಬಳಿಯ ಕಾಡುಗಳಲ್ಲಿ ಆಗ್ಗೆ ಚಿರತೆಗಳು ವಿಶೇಷವಾಗಿದ್ದ
ಮಹಾಸ್ವಾಮಿಯವರೂ, ಶ್ರೀಮಾನ್ ಗೋಪಾಲರಾಜ ಅರಸಿ
ಶ್ರೀಮಾನ್ ಫ್ರೇಸರ್ ಅವರೂ ಆಗಾಗ್ಗೆ ಒಂದೊಂದು ಸಲ
ಬೇಟೆಗೆ ದಯಮಾಡುತ್ತಿದ್ದರು. ಮಹಾಸ್ವಾಮಿಯವರಿಗೆ ಮ
ವಿನೋದದ ಅಭಿರುಚಿಯುಂಟಾಗುವುದಕ್ಕೂ, ಬಾಲ್ಯದಿಂದಲೂ
ಸ್ಥೈರ್ಯಗಳೂ ಸಾಹಸಬುದ್ಧಿಯೂ ಬಳೆವಣಿಗೆ ಹೊಂದುವು
ಅದರಿಂದ ಬಹಳ ಸಹಾಯವಾಯಿತು.

ವರ್ಷದಲ್ಲಿ ಕೆಲವು ತಿಂಗಳುಗಳ ಕಾಲ "ರಾಯಲ್ ಸ
ಪಾಠಶಾಲೆಯು ಬೆಂಗಳೂರು ಅರಮನೆಯಲ್ಲಿ ನಡೆಯುತ್ತಿದ್ದಿತು.
ಪ್ರತಿ ಭಾನುವಾರ ಪ್ರಾತಃಕಾಲವೂ "ಪೇಪರ್ ಚೇಸ್" ಎಂಬ ಆ
ಆಡುತ್ತಿದ್ದುದು ವಾಡಿಕೆ. ಈ ಆಟದಲ್ಲಿ ಅವಿತುಕೊಳ್ಳುವವರೂ, ಅ
ಹಿಡಿಯುವವರೂ, ಉಭಯತ್ರರೂ ಚಾತುರ್ಯವನ್ನುಪಯೋ
ಅವಕಾಶವುಂಟು. ಪ್ರತಿ ಶನಿವಾರವೂ ಶ್ರೀಮಾನ್ ಎಸ್. ಎಂ. ಫ್ರೆ
ಅವರು ತಮ್ಮ ಶಿಷ್ಯರನ್ನೆಲ್ಲ ತಮ್ಮ ಮನೆಗೆ ಬರಮಾಡಿಕೊಂಡು
ತ್ತಿದ್ದರು. ಆಗ್ಗೆ ಶ್ರೀಮನ್ಮಹಾರಾಜ ಶ್ರೀ ಕೃಷ್ಣರಾಜೇಂದ್ರ
ರವರೂ ಶ್ರೀಮದ್ಯುವರಾಜ ಶ್ರೀ ಕಂಠೀರವ ನರಸಿಂಹರಾಜ
ರವರೂ ತಮ್ಮ ಸಹಾಧ್ಯಾಯಿಗಳೊಡನೆ "ಜೋಕರ್" ಎಂಬ
ಇಸ್ಪೀಟಾಟ, ಪ್ರಾಣಿಗಳ ಕೂಗುಗಳನ್ನು ಅನುಕರಣಮಾಡಿ
ಹಾಕುವ ಆಟ, "ಆಕ್ಟಿಂಗ್ ಗೇಮ್" ಎಂಬ ಅಭಿನಯ ಕೌಶಲ
ಮುಂತಾದುವುಗಳಲ್ಲಿ ಉದ್ಯುಕ್ತರಾಗಿ ಹರ್ಷಿಸುತ್ತಿದ್ದರು. ಬೆಂ
ಅರಮನೆಯಲ್ಲಿದ್ದ ತಿಂಗಳುಗಳಲ್ಲಿ ಮಹಾಸ್ವಾಮಿಯವರು ವಿನೋ
ವಾಗಿ ತೀವ್ರಾಭಿಲಾಷೆಯಿಂದ ನೆರವೇರಿಸುತ್ತಿದ್ದ ಕಾರ್ಯಗಳಲ್ಲೆ
ಇಲ್ಲಿ ಸೂಚಿಸಬಹುದಾಗಿದೆ. ಅವರು ಪ್ರತಿ ದಿನವೂ ತೀರ ಗಂಟು
ಗಿದ್ದ ಮರದ ತುಂಡುಗಳನ್ನು ಕೊಡಲಿಯಿಂದ ಸೀಳುತ್ತಿದ್ದು
ವಿನೋದಕ್ಕಾಗಿಯೂ ವ್ಯಾಯಾಮಕ್ಕಾಗಿಯೂ ಕೈಕೊಳ್ಳುತ್ತಿದ್ದ
ದಲ್ಲಿ ತೀವ್ರಾಸಕ್ತಿಯನ್ನೂ ವಹಿಸುತ್ತಿದ್ದರು. ಬ್ರಿಟಿಷ್ ಸಾಮ
ಮುಖ್ಯಾಮಾತ್ಯರಾಗಿದ್ದ ಗ್ಲ್ಯಾಡ್‌ಸ್ಟನ್ ಎಂಬವರು ಪ್ರತಿ
ಮರವನ್ನು ಕಡಿಯುತ್ತಿದ್ದುದು ಈ ಸಂಬಂಧದಲ್ಲಿ ನೆನಪಿಗೆ ಬರ
ಬೆಂಗಳೂರು ಅರಮನೆಯಲ್ಲಿದ್ದಾಗ ಮಹಾಸ್ವಾಮಿಯವರು

Bangalore to Nandidroog

Provincial tour 1900 Oct 26th

We left the palace at 7-30 A M, party being H. H., Mr Fraser, Captain Car White, Mr Raghavender Rao Ali Khan, Basavaraja Urs and Shanker Rao. The Cyclone having blown over, the morning was fine though cloudy. The first place on the road Yalahanka; met here by assistant: Com: K.R Shrinivasa Iyangar, Stopped at the Hunsmarana halli mutt The Lingayat Guru is of some importance under the Baley Hormoor mutt. Has Seven Jodi villages worth about 4000 Rs per annum, partly given by Krishna Raja Wadiyar Halted next at Jalar where we ~~met~~ were met by Venkata Rama Chetty whose grand father built a big Chatram at this place where travellors between Bangalore and Bellary used to halt at noon Devandahalli met by Dep: Com. Venkata Varada Iyangar who had prepared refreshments This is the place at the Seige of which Hyderali first distinguished himself and here Tippu was born Three miles from here we entered the gravel road which was in very heavy condition after the rain and our pair, Bother and

ಆಳಿದ ಮಹಾಸ್ವಾಮಿಯವರ ಕೈ ಬರಹ
(ದಿನಚರಿ ಪುಸ್ತಕದ ಒಂದು ಹಾಳೆಯ ಛಾಯ ಚಿತ್ರ)

ಉತ್ಸುಕತೆಯಿಂದ ನಡೆಯಿಸುತ್ತಿದ್ದ ಮತ್ತೊಂದು ಕಾರ್ಯವು, ಉತ್ತಮ ರೀತಿಯಲ್ಲಿ ಅಲಂಕೃತವಾಗಿದ್ದ ಎತ್ತಿನ ರಥದಲ್ಲಿ ತಮ್ಮ ಸಹೋದರ ಸಹೋದರಿಯರನ್ನು ಕುಳ್ಳಿರಿಸಿ, ತಾವೇ ಸಾರಥ್ಯವನ್ನು ವಹಿಸಿ ಅರಮನೆಯ ಆವರಣದ ಸಂಚಾರ ಮಾರ್ಗಗಳಲ್ಲಿ ಆ ರಥವನ್ನು ಬಿಟ್ಟು ಆನಂದಿಸುತ್ತಿದ್ದುದು. ನೀಲಗಿರಿಯ ಅರಮನೆಯಲ್ಲಿದ್ದಾಗಲೂ ಆಗಾಗ ಮಹಾಸ್ವಾಮಿಯವರು ಹಾಗೆಯೇ ಮಾಡುತ್ತಿದ್ದರಂತೆ. ತಮ್ಮ ಪ್ರಾರ್ಥನೆಯನ್ನು ಲಾಲಿಸಿ ಮಹಾಮಾತೃಶ್ರೀಯವರು ಎತ್ತಿನ ರಥದಲ್ಲಿ ಮಂಡಿಸಿ ತಾವು ಸಾರಥ್ಯವನ್ನು ವಹಿಸಲು ಅನುಮತಿಸಿದ ದಿನಗಳಲ್ಲಿ ಮಹಾಸ್ವಾಮಿಯವರಿಗೆ ಪರಮಾನಂದ. ಎತ್ತಿನ ರಥದ ಸಾರಥ್ಯವನ್ನು ವಹಿಸಲು ಅವರಿಗಿದ್ದ ಉತ್ಸಾಹಕ್ಕೆ ಸರಿಯಾದ ತೀವ್ರಾಸಕ್ತಿಯೇ ಎತ್ತುಗಳ ಯೋಗಕ್ಷೇಮವನ್ನು ನೋಡಿಕೊಳ್ಳುವುದರಲ್ಲೂ ಇದ್ದಿತು. ರಥಕ್ಕೆ ಕಟ್ಟುತ್ತಿದ್ದ ಎತ್ತುಗಳ ಕೊರಳುಗಳಿಂದ ನೊಗವನ್ನಿಳಿಸಿದಮೇಲೆ ಅವಕ್ಕೆ ತಾವೇ ಮೈ ತೊಳೆದು, ತಾವೇ ಹುಲ್ಲನ್ನು ಹಾಕಿ, ತಿರುವಿದ್ದ ಅವರೇಕಾಳು ಮತ್ತು ತೆಂಗಿನ ತುರಿ ಉಂಡೆಗಳನ್ನು ಸಹ, ಮಹಾಸ್ವಾಮಿಯವರು ಅವಕ್ಕೆ ತಾವೇ ತಿನ್ನಿಸುತ್ತಿದ್ದರು.

ಬೇಸಗೆ ಕಾಲದಲ್ಲಿ ನೀಲಗಿರಿಯ ಅರಮನೆಯಲ್ಲಿ ಪಾಠಶಾಲೆಯು ನಡೆಯುತ್ತಿದ್ದಿತು. ಆಗ್ಗೆ ಪ್ರತಿ ಭಾನುವಾರವೂ ನೀಲಗಿರಿಯ ಅತ್ಯುನ್ನತ ಶಿಖರವಾದ ದೊಡ್ಡ ಬೆಟ್ಟಕ್ಕಾಗಲಿ ಅಥವಾ ನೀಲಗಿರಿಯಮೇಲೆ ಮೈಸೂರು ಸಂಸ್ಥಾನದ ಕಡೆಗಿರುವ "ಪೈಕಾರಾ" ಜಲಪಾತದ ಸಮೀಪಕ್ಕಾಗಲಿ ಅಥವಾ "ಲಾರೆನ್ಸ್ ಅಸ್ಯೆಲಮ್" ಸರೋವರದ ಬಳಿಗಾಗಲಿ ವಿನೋದ ಕೂಟಕ್ಕಾಗಿ ಮಹಾಸ್ವಾಮಿಯವರು ತಮ್ಮ ಸೋದರ ಸೋದರಿಯರೊಡನೆಯೂ, ತಮ್ಮ ಸಹಪಾಠಿಗಳೊಡನೆಯೂ ದಯಮಾಡಿ ಅಲ್ಲಿ ಫಲಾಹಾರಾದಿಗಳು ಮುಗಿದಮೇಲೆ ನೀಲಗಿರಿ ಅರಮನೆಗೆ ಹಿಂತಿರುಗುತ್ತಿದ್ದರು. ವಿನೋದ ಕೂಟಕ್ಕಾಗಿ ಹಾಗೆ ಅಲ್ಲಿಗೆ ತೆರಳಿದಾಗ್ಗೆ, ಮಹಾಮಾತೃಶ್ರೀಯವರ ಸವಾರಿ ಚಿತ್ತೈಸುತ್ತಿದ್ದ ಕಾಲುದಾರಿಗಳಿಗೆಲ್ಲ ಒಬ್ಬಿಬ್ಬರು ಸಹಪಾಠಿಗಳ ಸಹಾಯದೊಡನೆ ಭಕ್ತಿಯಿಂದ ಮಹಾಸ್ವಾಮಿಯವರೇ ನೀರನ್ನು ಚುಮುಕಿಸಿ, ಮಹಾಮಾತೃಶ್ರೀಯವರು ಮಂಡಿಸಲು ಒಂದು ಸಣ್ಣ ಡೇರೆಯನ್ನು ಹೊಡೆದು ನಿಲ್ಲಿಸುತ್ತಿದ್ದರು. ಅದನ್ನು ಕಂಡು ಮಹಾಮಾತೃಶ್ರೀಯವರಿಗೆ ಬಹಳ ಸಂತೋಷ. ವಿನೋದ ಕೂಟಗಳು ನಡೆದಾಗ್ಗೆ, ಮಹಾಸ್ವಾಮಿಯವರೇ ತಮ್ಮ ಸೋದರ ಸೋದರಿಯರಿಗೂ ಸಹಪಾಠಿಗಳಿಗೂ ಫಲಾಹಾರ ಸಾಮಗ್ರಿಗಳನ್ನು ಆದರ ವಿಶ್ವಾಸಗಳಿಂದ

ವಿನಿಯೋಗಿಸುತ್ತಿದ್ದ ಬಗೆಯನ್ನು ಕಂಡು ಮಹಾಮಾತೃಶ್ರೀಯವರು ಹಿಗ್ಗುತ್ತಿದ್ದರು. ಹೀಗೆ ಅವರು ಪಾಠಶಾಲಾ ಕಾರ್ಯಗಳ ಜೊತೆಗೆ ಇತರ ನಾನಾ ವಿಚಾರಗಳಲ್ಲಿ ಸಹ, ತೀವ್ರಾಸಕ್ತಿಯನ್ನೂ ಔತ್ಸುಕ್ಯವನ್ನೂ ತೋರಿಸುತ್ತಿದ್ದರು.

ಆಳಿದ ಮಹಾಸ್ವಾಮಿಯವರಾದ ಶ್ರೀಮನ್ಮಹಾರಾಜರವರ ಮತ್ತು ಶ್ರೀಮದ್ಯುವರಾಜರವರ ಸಹಾಧ್ಯಾಯಿಗಳಾಗಿದ್ದವರಲ್ಲಿ, ಕೆಲವರ ಹೆಸರುಗಳನ್ನು ಹಿಂದೆಯೇ ಸೂಚಿಸಲಾಗಿದೆ. ಶ್ರೀಮಾನ್ ತಿರುಮಲ ಸ್ವಾಮಿಯವರು, ಶ್ರೀಮಾನ್ ಗುಂಡಪ್ಪನವರು ಮುಂತಾದವರು ಆಳಿದ ಮಹಾಸ್ವಾಮಿಯವರೊಡನೆ ಸ್ವಲ್ಪ ಸ್ವಲ್ಪ ಕಾಲ ವ್ಯಾಸಂಗ ಮಾಡುತ್ತಿದ್ದು ಪಾಠಶಾಲೆಯನ್ನು ಬಿಟ್ಟು ಹೋದರು. "ರಾಯಲ್ ಸ್ಕೂಲ್" ಪಾಠಶಾಲೆಯು ನಡೆದ ವರೆಗೂ ಅವರೊಡನೆ ವ್ಯಾಸಂಗ ಮಾಡುತ್ತಿದ್ದವರು ಶ್ರೀಮಾನ್ ಟಿ. ಎನ್. ಅಲೀಖಾನ್‌ರವರು; ಶ್ರೀಮಾನ್ ಎ. ಸಿ. ಬಸವರಾಜ ಅರಸಿನವರು; ಮತ್ತು ಶ್ರೀಮಾನ್ ಬಾದಾಮಿ ಶಂಕರರಾಯರು. ಉಳಿದವರಲ್ಲಿ, ಶ್ರೀಮಾನ್ ಬಾದಾಮಿ ಲಿಂಗೋಪಂತರವರು, ಶ್ರೀಮಾನ್ ಎನ್. ಶಾಮಣ್ಣನವರು, ಶ್ರೀಮಾನ್ ಗಜಾನನ ಕರ್ವೆಯವರು ಮತ್ತು ಶ್ರೀಮಾನ್ ಬಿ. ವೆಂಕಟಸುಬ್ಬರಾಯರವರು — ಈ ನಾಲ್ವರನ್ನೂ ಶ್ರೀಮಾನ್ ಎಸ್. ಎಂ. ಫ್ರೇಸರ್ ಅವರು ಹೈ ಸ್ಕೂಲು ವ್ಯಾಸಂಗಕ್ಕಾಗಿ ಕಳುಹಿಸಿ ಅವರಿಗೆ ವಿದ್ಯಾರ್ಥಿ ವೇತನಗಳನ್ನು ಕೊಡಿಸಿದರು. ಈಗಿನ ದಿವಾನ್‌ರವರಾದ ಅಮೀನ್-ಉಲ್-ಮುಲ್ಕ್ ಸರ್ ಮಿರ್ಜಾ ಎಂ. ಇಸ್ಮಾಯಿಲ್, ಕೆ.ಸಿ.ಐ.ಇ., ಓ.ಬಿ.ಇ. ಅವರೂ, ಶ್ರೀಮಾನ್ ಎಂ. ಎಸ್. ರಾಮಚಂದ್ರರಾಯರವರೂ ಮತ್ತು ಶ್ರೀಮಾನ್ ನರಸಿಂಗರಾಯರವರೂ ೧೯೦೦ನೆಯ ಇಸವಿಯಲ್ಲಿ ಮೆಟ್ರಿಕ್ಯುಲೇಷನ್ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿ ಮುಂದೆ ಕಾಲೇಜು ವ್ಯಾಸಂಗಕ್ಕೆ ತೆರಳಿದರು. ಶ್ರೀಮಾನ್ ಸಿ. ವಿ. ಸುಬ್ರಹ್ಮಣ್ಯರಾಜ ಅರಸಿನವರೂ ಮತ್ತು ಶ್ರೀಮಾನ್ ಎಂ. ಸಿ. ಸುಬ್ಬರಾಜ ಅರಸಿನವರೂ ಸಹ ಮಹಾಸ್ವಾಮಿಯವರ ಸಹಾಧ್ಯಾಯಿಗಳಾಗಿದ್ದರು. ೧೯೦೧—೧೯೦೨ನೆಯ ವರ್ಷದಲ್ಲಿ ಶ್ರೀಮದ್ಯುವರಾಜ ಶ್ರೀ ಕಂಠೀರವ ನರಸಿಂಹರಾಜ ಒಡೆಯರವರ ಸಹಾಧ್ಯಾಯಿಗಳಾಗಿದ್ದವರು ಆರು ಮಂದಿ: ಅವರುಗಳಾರೆಂದರೆ: ಶ್ರೀಮಾನ್ ಎಂ. ಜಿ. ಮ್ಹೈಶ್ರೀಯವರು, ಶ್ರೀಮಾನ್ ಎಂ. ಚನ್ನರಾಜ ಅರಸಿನವರು, ಶ್ರೀಮಾನ್ ಕೆ. ಸುಬ್ಬರಾಯರವರು, ಶ್ರೀಮಾನ್ ಎಚ್. ಮಲ್ಲರಾಜ ಅರಸಿನವರು,

ಸಹಾಧ್ಯಾಯಿಗಳು

ಶ್ರೀಮಾನ್ ಎಚ್. ಮುದ್ದುರಾಜ ಅರಸಿನವರು ಮತ್ತು ಶ್ರೀಮಾನ್ ಬಿ. ದಾಸಪ್ಪನವರು. ಶ್ರೀಮಾನ್ ಕಾಶೀನಾಥ ಕರ್ವಿಯವರು, ಶ್ರೀಮಾನ್ ಎಫ್. ಸಿ. ದೇವರಾಜ ಅರಸಿನವರು, ಈಚೆಗೆ ದಿವಂಗತರಾದ ಶ್ರೀಮಾನ್ ಬಿ. ಪಿ. ಕೃಷ್ಣೇ ಅರಸಿನವರು ಮುಂತಾದವರು ಆ ಮೊದಲೇ ಕೆಲಕೆಲವು ವರ್ಷಗಳ ಕಾಲ ಶ್ರೀಮದ್ಯುವರಾಜ ಶ್ರೀ ಕಂಠೀರವ ನರಸಿಂಹರಾಜ ಒಡೆಯರವರ ಜೊತೆಯಲ್ಲಿ ವ್ಯಾಸಂಗ ಮಾಡಿದ್ದರು.

**ನಿರೀಕ್ಷೆಗೆ ಮೀರಿದ ವರ್ತನೆ**

ಆಳಿದ ಮಹಾಸ್ವಾಮಿಯವರು ಹನ್ನೆರಡು ವರ್ಷದವರಾಗಿದ್ದಾಗಲೇ ಪ್ರಾಣಿದಯೆಯೂ ಅನುಕಂಪ ಬುದ್ಧಿಯೂ ಮೂರ್ತಿವೆತ್ತಂತೆ ವರ್ತಿಸುತ್ತಿದ್ದರು. ಅವರು ತಮ್ಮ ಸಹಾಧ್ಯಾಯಿಗಳೊಡನೆ ಲೋಕರಂಜನ ಮಹಲಿನಲ್ಲಿ ಪಾಠಮಾಡಲು ಪ್ರಾರಂಭವಾದ ತರುಣದಲ್ಲೊಂದು ದಿನ ಗೌಳಿಗನು ಹಸುವಿನ ಹಿಂಗಾಲುಗಳನ್ನು ಹಗ್ಗದಿಂದ ಬಿಗಿದು, ಅದರ ಅಗಡುತನವನ್ನು ಅಡಗಿಸಲು ಅದನ್ನು ಹೊಡೆದು, ಕರುವನ್ನು ದೂರವಾಗಿ ಕಟ್ಟಿ, ಹಾಲನ್ನು ಕರೆಯುತ್ತಿದ್ದುದನ್ನು ನೋಡಿದರು. ಕಾರಣಾಂತರದಿಂದ ಪಸುವಿನ ಕಣ್ಣಿನಲ್ಲಿ ನೀರು ಸುರಿಯುತ್ತಿದ್ದುದನ್ನು ಕಂಡು ಅದು ದುಃಖಾವೇಗದಿಂದ ಸಂಕಟಪಡುತ್ತಿದ್ದುದಾಗಿ ಭಾವಿಸಿ, ಅಷ್ಟರಲ್ಲಿ ಕರುವು ಮುಂದಕ್ಕೆ ಬಂದು ಹಾಲು ಕುಡಿಯುವ ಪ್ರಯತ್ನ ಮಾಡಿ ಕೊರಳನ್ನು ಚಾಚಿದ ರಭಸದಲ್ಲಿ ಅದರ ಕೊರಳಿನ ಹಗ್ಗವು ಬೀರಿಕೊಂಡು ಬಾಧೆಯಾಗಿ ಕರುವು "ಗೊರಗೊರ" ಎಂದು ಶಬ್ದ ಮಾಡಿದುದನ್ನೂ ಅವರು ಕಂಡರು. ಮಹಾಸ್ವಾಮಿಯವರ ಎಳೆಯ ಮನಸ್ಸಿನಲ್ಲಿ ಕರುಣೆಯ ಪ್ರವಾಹವು ಉಕ್ಕಿ, ಅವರು ಕಂಬನಿದುಂಬಿದರು. ಪರಿವಾರದವರು ಕಳವಳದಿಂದ ಓಡಿಬಂದು ಅದಕ್ಕೆ ಕಾರಣವನ್ನು ಕೇಳಿದಾಗ, "ಇಂಥಾ ಹಿಂಸೆಯ ಹಾಳು ಹಾಲನ್ನು ನಾವು ಕುಡಿಯಬೇಕೆ? ನಮ್ಮ ಹೊಟ್ಟೆಗಾಗಿ ಈ ಮೂಗು ಪ್ರಾಣಿಗಳಿಗೆ ಹೀಗೆ ಚಿತ್ರಹಿಂಸೆಯೆ?" ಎಂದು ಕಷ್ಟದಿಂದ ಹೇಳಿ ಬಿಕ್ಕಿ-ಬಿಕ್ಕಿ ಅಳತೊಡಗಿದರು. ಪರಿವಾರದವರು ಬಗೆ ಬಗೆಯ ಸಮಾಧಾನೋಕ್ತಿಗಳನ್ನಾಡಿ ಸಂತೈಸಿ, ಅದು ತುಂಟ ಹಸುವಾಗಿದ್ದ ಕಾರಣ ಹಾಗೆ ಮಾಡಬೇಕಾಯಿತೆಂದು ಹೇಳಿ ಸಾಧುವಾದ ಹಸುವಿನ ವಿಷಯದಲ್ಲಿ ಹಾಗೆ ಮಾಡುವುದಿಲ್ಲವೆಂದರು. ಅದಕ್ಕೆ ಉತ್ತರವಾಗಿ ಮಹಾಸ್ವಾಮಿಯವರು, "ಹಾಗೂ ಆಗಲಿ. ಕರುವಿಗೆ ಹಾಲು ಬಿಡದೆ ಬಡಕಲಾಗಿ ಮಾಡಿರುವುದೇಕೆ? ದೂರವಾಗಿ ಕಟ್ಟುವುದೇಕೆ? ಮೂಳೆಗಳನ್ನೆಣಿಸುವಂತೆ ಮಾಡಿರುವುದೇಕೆ?" ಎಂದು ಕೇಳಿದರು. ಆ ಪ್ರಶ್ನೆ

ಗಳಿಗೆ, "ಗೌಳಿಗನ ಬಡತನ, ಹಾಲನ್ನು ಮಾರಿ ಜೀವನಮಾಡುವ ಹೊಟ್ಟೆಯ ಆತುರ" ಎಂದು ಪರಿಜನರು ಉತ್ತರ ಹೇಳಿದರು. ಅದಕ್ಕೆ ಮಹಾಸ್ವಾಮಿಯವರು, "ಈ ಅನ್ಯಾಯದ ಹಾಲನ್ನು ನಮ್ಮ ಹೊಟ್ಟೆಗೆ ಹುಯ್ದುಕೊಳ್ಳಬೇಕೇನೊ?" ಎಂದು ಹೇಳಿ ಹಾಲನ್ನೆಲ್ಲ ಕರುವಿಗೇ ಕುಡಿಸಿಬಿಟ್ಟರು. ಅವನ್ನು ಕಂಡು ಅಲ್ಲಿದ್ದವರು, "ಹೀಗೆ ಪ್ರತಿದಿನವೂ ಅಷ್ಟು ಹಾಲನ್ನೂ ಪೂರ್ತಿಯಾಗಿ ಕರುವೇ ಕುಡಿದರೆ ಅದಕ್ಕೆ ಅಜೀರ್ಣವಾಗುತ್ತದೆ. ಇದರಮೇಲೆ ತುಂಟ ಹಸುವಾದ್ದರಿಂದ ಕಾಲು ಕಟ್ಟಿ ಹಾಲು ಕರೆಯಬೇಕಾಯಿತು. ಮಾಫ್ ಮಾಡಬೇಕು, ಮಾಸ್ವಾಮಿ" ಎಂದರು. ಆಗ ಮಹಾಸ್ವಾಮಿಯವರು, "ತುಂಟ ಹಸುವೋ ಗಿಂಟ ಹಸುವೋ! ನಮಗೆ ಹೀಗೆ ಕರೆದ ಹಾಲು ಇನ್ನು ಬೇಡ. ಸಾಧುವಾದ ಹಸುವನ್ನು ತಂದು, ಹಿಂಸೆಯಿಲ್ಲದೆ ಹಾಲು ಕರೆದು ಕೊಟ್ಟರೆ ಆಗಬಹುದು. ಇಲ್ಲವಾದರೆ ಇನ್ನುಮೇಲೆ ಹಾಲೇ ಬೇಡ" ಎಂದು ಅಪ್ಪಣೆ ಕೊಡಿಸಿದರು. ಮಾರನೆಯ ದಿನ ಬೇರೆ ಹಸುವು ಬಂದಾಗ ಮಹಾಸ್ವಾಮಿಯವರು, "ಕರುವನ್ನು ಹಗ್ಗದಲ್ಲಿ ಕಟ್ಟಿಹಾಕಕೂಡದು. ಅದು ಕೊರಳನ್ನು ಮುಂದಕ್ಕೆ ನೀಡಿದಾಗ ಬಾಧೆಯಾಗಲು ಅವಕಾಶ ಕೊಡಕೂಡದು. ಕರುವನ್ನು ಹಗ್ಗದಲ್ಲಿ ಕಟ್ಟದೆ ಕೈಯಲ್ಲಿ ಹಿಡಿದುಕೊಂಡಿರಬೇಕು. ಕರುವಿಗೆ ಅರ್ಧ ಹಾಲು ಬಿಡಬೇಕು" ಎಂದು ಆಜ್ಞಾಪಿಸಿ, ಹಸುವಿಗೆ ಹಿಂಸೆ ಮಾಡದೆ ಹಾಲನ್ನು ಕರೆಯುದನ್ನು ಕಣ್ಣಾರೆ ನೋಡಿ ಮನಸ್ಸಿಗೆ ಸಮಾಧಾನ ಮಾಡಿಕೊಂಡರು. ಅಷ್ಟಕ್ಕೇ ಅವರ ಮನಸ್ಸಿಗೆ ತೃಪ್ತಿಯಾಗಲಿಲ್ಲ. ಆಗಾಗ ಇತರರಾರಿಗೂ ಗೋಚರವಾಗದಂತೆ, ಎಲ್ಲಿ ಬಡಕಲು ಕರುವನ್ನು ಕಂಡರೂ ಅದನ್ನು ಆದರದಿಂದ ಮೈದಡವಿ, ಗರಿಕೆ ಹುಲ್ಲನ್ನು ತಿನ್ನಿಸಿ, ಒಂದು ಚೌಕದಲ್ಲಿ ರೂಪಾಯಿಗಳನ್ನು ಬಿಗಿದು ಅದರ ಕೊರಳಿಗೆ ಕಟ್ಟಿ, ಆ ಬಳಿಕ ನಂಬಿಕೆಗೆ ಪಾತ್ರರಾದ ಆಳುಗಳನ್ನು ಕರೆದು ಅವನ್ನು ಅದರ ಯಜಮಾನನ ಬಳಿಗೆಬಿಟ್ಟು ಬರುವಂತೆ ಹೇಳುತ್ತಿದ್ದರು.

ಮಹಾಪ್ರಭುಗಳವರಿಗೆ ಬಾಲ್ಯದಿಂದಲೂ ಪ್ರಾಣಿಗಳಲ್ಲಿ ಅತ್ಯಂತ ಪ್ರೀತಿ. ಬಾಲ್ಯದಲ್ಲಿ ಮಹಾಸ್ವಾಮಿಯವರು ಕಂಚಿ ಹಸುಗಳನ್ನು ಕೊಳ್ಳಲು ಎಷ್ಟು ಹಣವನ್ನಾದರೂ ಕೊಟ್ಟುಬಿಡುತ್ತಿದ್ದರು. ಕರುಗಳನ್ನು ಕಂಡರಂತೂ ಆಗ್ಗೆ ಅವರಿಗೆ ಬಹಳ ಪ್ರೀತಿ. ಒಂದುಸಲ ಅವರು ಸುಂದರವಾದ ಕರುವೊಂದನ್ನು ಕಂಡು ಅದನ್ನು ಕೊಂಡುಕೊಳ್ಳಲಿಚ್ಛಿಸಿದರು. ಆ ಕರುವು ಒಬ್ಬ ಅಗಸರವನಿಗೆ ಸೇರಿದ್ದ ಕಾರಣ, ಆತನನ್ನು ಕರೆಯಿಸಿ ಕೇಳಿದಾಗ, ಅರಮನೆಯಲ್ಲಿ ಮಹಾಸ್ವಾಮಿಯವರು ತನಗೊಂದು

ಉಳಿಗವನ್ನು ವಂಶಪಾರಂಪರ್ಯವಾಗಿ ಕೊಡಿಸಿದರೆ ತಾನು ಅದನ್ನು ವಿಕ್ರಯಿಸುವುದಾಗಿ ಆತನು ಅರಿಕೆ ಮಾಡಿದನು. ಆ ರೀತಿ ಉದ್ಯೋಗವನ್ನು ಕೊಡಿಸುವುದಕ್ಕೆ ವಿದ್ಯಾರ್ಥಿಗಳಾಗಿದ್ದ ತಮಗೆ ಅಧಿಕಾರವಿರಲಿಲ್ಲವೆಂದೂ, ಆ ಕರುವಿನ ಬೆಲೆಯು ಮೂರು ನಾಲ್ಕರಷ್ಟು ಮೊಬಲಗನ್ನು ಬೇಕಾದರೂ ತಾವು ಸಂತೋಷದಿಂದ ಕೊಡುವುದಾಗಿಯೂ ಮಹಾಸ್ವಾಮಿಯವರು ಅಪ್ಪಣೆ ಕೊಡಿಸಿದರು. ಆತನು ಅದಕ್ಕೆ ಸಮ್ಮತಿಸದೆಹೋಗಲು, ಅವರು ತಮಗೆ ಆಶಾಭಂಗವುಂಟಾದುದಕ್ಕಾಗಿ ಒಂದೆರಡು ದಿನಗಳು ಖಿನ್ನಮನಸ್ಕರಾಗಿದ್ದರು.

ಹಸುಗಳಿಗೂ ಕರುಗಳಿಗೂ ಆರೈಕೆ ಮಾಡಿಸುವುದರಲ್ಲಿ ಮಹಾಸ್ವಾಮಿಯವರಿಗೆ ಬಾಲ್ಯದಿಂದಲೂ ತೀವ್ರಾಸಕ್ತಿ. ಗೋಕುಲಾಷ್ಟಮಿಯ ಮೆರೆವಣಿಗೆಯಲ್ಲಿ ಅವರಿಗೆ ಆಸ್ಥೆ. ಆಗಿನ ಮೆರೆವಣಿಗೆಯಲ್ಲಿ ಮಹಾರಾಜರ ಹಸು, ಯುವರಾಜರ ಹಸು, ಶ್ರೀ ಜಯಲಕ್ಷ್ಮಮ್ಮಣ್ಣಿಯವರ ಹಸು, ಶ್ರೀ ಕೃಷ್ಣಾಜಮ್ಮಣ್ಣಿಯವರ ಹಸು, ಶ್ರೀ ಚಲುವಾಜಮ್ಮಣ್ಣಿಯವರ ಹಸು, ಇವುಗಳೂ ಹೋಗುತ್ತಿದ್ದುವು. ಅರಮನೆಯ ವಸ್ತ್ರಾಭರಣಗಳಿಂದ ಅವುಗಳಿಗೆ ಅಂದವಾಗಿ ಅಲಂಕಾರ ಮಾಡಿಸುವುದರಲ್ಲಿ ಸೋದರಸೋದರಿಯರು ಪ್ರತಿಸ್ಪರ್ಧಿಗಳಾಗಿ ಸಡಗರಪಡುತ್ತಿದ್ದುದನ್ನು ಕಂಡು ಮಹಾಮಾತೃಶ್ರೀಯವರು ಹರ್ಷಿಸುತ್ತಿದ್ದರು. ಬಾಲಕರಾಗಿದ್ದ ಮಹಾಪ್ರಭುಗಳವರು ಪಟ್ಟದ ಆನೆ ಮುಂತಾದುವುಗಳಿಗೆ— ತಾವೇ ಎದುರಿಗೆ ನಿಂತು— ಅಂದವಾಗಿ ಬಣ್ಣ ಹಾಕಿಸುತ್ತಿದ್ದರು. ಆನೆಯಮೇಲೆ ಸವಾರಿ ಮಾಡುವುದರಲ್ಲಿಯೂ ಮಹಾಸ್ವಾಮಿಯವರಿಗೆ ಬಹಳ ಇಷ್ಟ. ಅವರು ತಮ್ಮ ಕುದುರೆಗಳ ಹೆಸರುಗಳನ್ನು ಯಾವ ಅನುಕ್ರಮದಲ್ಲಿ ಕೂಗಿದರೆ ಆ ಅನುಕ್ರಮದಲ್ಲಿ ಅವು ಓಡಿಬರುತ್ತಿದ್ದ ಮಟ್ಟಿಗೆ ಅವುಗಳ ಪ್ರೀತಿಯನ್ನು ಸಂಪಾದಿಸಿಕೊಂಡಿದ್ದರು. ಹಸುಗಳಿಗೂ, ಕುದುರೆಗಳಿಗೂ, ಆನೆಗಳಿಗೂ ಸ್ವಹಸ್ತದಿಂದ ಮೇವನ್ನು ತಿನ್ನಿಸಲು ಅವರಿಗೆ ಪರಮಾನಂದ. ಅವರು ಆಗ್ಗೆ ಅನೇಕ ನಾಯಿಗಳನ್ನೂ ಸಾಕಿದ್ದರು. ಅವುಗಳಲ್ಲಾರಾದರೂ ಕ್ರೌರ್ಯವನ್ನು ತೋರಿಸಿದರೆ, ತಮ್ಮ ಅಸಮಾಧಾನವನ್ನು ಅವರು ವ್ಯಕ್ತಗೊಳಿಸುತ್ತ, ಅವುಗಳನ್ನು ಆದರದಿಂದ ಪೋಷಿಸುತ್ತಿದ್ದರು. ಕುದುರೆ ಸವಾರಿ ಮಾಡುವಾಗ ಒಂದೇ ಕುದುರೆಯು ದಣಿಯುವವರೆಗೂ ಸವಾರಿ ಮಾಡದೆ, ಬೇರೆ ಬೇರೆ ಕುದುರೆಗಳನ್ನೇರಿ ಸವಾರಿ ಮಾಡುತ್ತಿದ್ದುದು ಮಹಾಸ್ವಾಮಿಯವರ ಪದ್ಧತಿ. ಪಕ್ಷಿಗಳನ್ನು ಸಾಕುವುದರಲ್ಲಿ ಮಾತ್ರ ಅವರಿಗೆ ಆಸೆಯಿರಲಿಲ್ಲ.

ತರುಗುಲ್ಮಲತಾದಿಗಳು ಸ್ಥಾವರವಾಗಿದ್ದರೂ ಅವಕ್ಕೂ ಜೀವ ವುಂಟೆಂದೂ, ಅವೂ ಆ ಮಟ್ಟಿಗೆ ಪ್ರಾಣಿಗಳೆಂದೂ ಮಹಾಸ್ವಾಮಿಯವರಿಗೆ ಅಚಲವಾದ ನಂಬಿಕೆ. ಆದಕಾರಣ, ಗಿಡಮರಗಳನ್ನು ನೋಡಿದರೇ ಅವರಿಗೆ ಆತ್ಮೀಯತೆಯ ಆನಂದ; ಹೂಗಳನ್ನು—ಮುಖ್ಯವಾಗಿ ಗುಲಾಬಿ ಹೂಗಳನ್ನು—ಕಂಡರೆ ಅಪಾರವಾದ ಪ್ರೇಮ. ಉದ್ಯಾನದಲ್ಲಿ ಮಹಾ ಜನರು ನೋಡಿ ಹರ್ಷಿಸುವ ಅವಕಾಶವು ತಪ್ಪುವಂತೆ ಯಾರಾದರೂ ಹೂಗಳನ್ನು ಕಿತ್ತರೆ, ಮಹಾಸ್ವಾಮಿಯವರು ಅಸಮಾಧಾನಪಡುತ್ತಿದ್ದರು. ತಮ್ಮ ಸಹಾಧ್ಯಾಯಿಗಳಲ್ಲಾರಾದರೂ ಉದ್ಯಾನದ ಹೂಗಳನ್ನು ಕಿತ್ತರೆ ಕೂಡ ಅವರಿಗೆ ಅಸಮಾಧಾನ. ಒಂದು ಸಲ, ತಮ್ಮ ಸಹಾಧ್ಯಾಯಿ ಗಳಲ್ಲೊಬ್ಬರು ಉದ್ಯಾನದಲ್ಲಿ ಹೂಗಳನ್ನು ಕಿತ್ತಾಗ, ಅವರು "ಜೋಕೆ! ಇನ್ನುಮೇಲೇನಾದರೂ ಹೀಗೆ ಮಾಡಿದರೆ ಸ್ನೇಹವನ್ನೂ ಗಮನಿಸದೆ ಪೋಲೀಸಿನವರಿಗೆ ಹಿಡಿಸಿ ಕೊಟ್ಟುಬಿಡುತ್ತೇನೆ" ಎಂದು ಹೇಳಿ ಹೆದರಿಸಿ ದರು. ಮಹಾಸ್ವಾಮಿಗಳ ಸಹಾಧ್ಯಾಯಿಗಳಲ್ಲಿ ಮತ್ತೊಬ್ಬರು ಒಂದು ದಿನ ಉದ್ಯಾನದಲ್ಲಿದ್ದ ಹೂಗಳನ್ನು ಕಿತ್ತು, "ಪೂಜೆಗಾಗಿ ಹೂಗಳನ್ನು ಕಿತ್ತೆ" ಎಂದು ತಿಳಿಸಿದಾಗ ಅವರು, "ಪೂಜೆಗೆ ಬೇರೆ ಹೂಗಳನ್ನು ತರಿಸಬೇಕೇ ಹೊರತು, ಉದ್ಯಾನದ ಹೂಗಳನ್ನು ಕಿತ್ತು ಉದ್ಯಾನದ ಸೊಬಗನ್ನು ಹಾಳು ಮಾಡಬಾರದು. ಉದ್ಯಾನದ ಸೌಂದರ್ಯವನ್ನು ಕಾಪಾಡುವುದೂ ದೇವರಿಗೆ ಇಷ್ಟವೇ. ಆದಕಾರಣ, ಅದೂ ದೇವರ ಪೂಜೆಯೇ" ಎಂದರು. ಹೀಗೆಂದ ಮಾತ್ರವೇ ಅವರು ತಮ್ಮ ಸಹಾಧ್ಯಾಯಿಗಳನ್ನು ತಮಗೆ ಸಮಾನಸ್ಕಂಧರಂತೆ ಭಾವಿಸಿ ಪ್ರೀತಿಸುತ್ತಿರಲಿಲ್ಲವೆಂದು ಭಾವಿಸಲು ಕಾರಣವಿಲ್ಲ. ಅವರೂ ಅವರ ಸೋದರರೂ ತಮ್ಮ ಪದವಿಯನ್ನೇ ಗಮನಕ್ಕೆ ತಾರದೆ, ತಮ್ಮ ಸಹಾಧ್ಯಾಯಿಗಳನ್ನು ತಮಗೆ ಸಮಾನರಾಗಿಯೇ ಕಂಡು ಪೂರ್ಣವಾದ ವಿಶ್ವಾಸದಿಂದ ನಡೆದುಕೊಳ್ಳುತ್ತಿದ್ದರು. ಉಪಾಧ್ಯಾಯರು ಗಳು ಅವರಲ್ಲಿ ಬೆಳೆಯಿಸಿ ಅಭಿವೃದ್ಧಿಗೊಳಿಸುತ್ತಿದ್ದುದು ಅದೇ ಮನೋ ಧರ್ಮವನ್ನೇ. ತಮ್ಮ ಸಹಾಧ್ಯಾಯಿಗಳಿಗೂ ತಮಗಿದ್ದಂತೆ ಊಳಿಗದವರಿರ ಬೇಕು; ತಮ್ಮ ಸಹಾಧ್ಯಾಯಿಗಳೂ ತಾವು ನೋಡಿದಂತೆ ನೋಟಗಳನ್ನು ನೋಡಬೇಕು; ಅವರೂ ತಾವು ಭುಂಜಿಸಿದಂತಹ ಆಹಾರವನ್ನು ಭುಂಜಿಸ ಬೇಕು—ಎಂಬುದೇ ಮಹಾಸ್ವಾಮಿಯವರಿಗಿದ್ದ ಅಭಿಲಾಷೆ. ಅವರು ತಮ್ಮ ಸಹಾಧ್ಯಾಯಿಗಳಲ್ಲಿ ಕೆಲವರು ಹಲವು ಸನ್ನಿವೇಶಗಳಲ್ಲಿ ಬಹಳ ಅಸಭ್ಯತೆ ಯಿಂದ ವರ್ತಿಸಿ ರೇಗಿ ಬಿರುನುಡಿಗಳನ್ನಾಡಿದರೂ ಕೂಡ—ಆ ರೀತಿ ದುಡುಕಿ ನಡೆದುದಕ್ಕಾಗಿ—ನಗುತ್ತ ವಾಸ್ತವ ಪರಿಸ್ಥಿತಿಯೇನೆಂಬುದನ್ನು

ವಿವರಿಸಿ ಹೇಳಿ, ರೇಗಿದ್ದವರೇ ತಮ್ಮ ತಪ್ಪು ತಿಳಿವಳಿಕೆಯನ್ನು ಮನಗಂಡು ಅದಕ್ಕಾಗಿ ನಾಚುವಂತೆ ಮಾಡಿದ ನಿದರ್ಶನಗಳಿವೆ. ಮಹಾಸ್ವಾಮಿಯವರು ಯಾವ ಸನ್ನಿವೇಶದಲ್ಲಾಗಲಿ, ತಮ್ಮ ಸಹಾಧ್ಯಾಯಿಗಳೆಲ್ಲರಿಗಿಂತ ತಾವು ಶ್ರೇಷ್ಠರೆಂಬ ಮನೋಧರ್ಮವೇ ಇಲ್ಲದೆ, ಅವರಲ್ಲಾರಾದರೂ ತಮ್ಮನ್ನು ಅನ್ಯಾಯವಾಗಿ ಕಾಡಿದಾಗಲೂ ಶಾಂತರಾಗಿಯೇ ಇರುತ್ತಿದ್ದರು. ಒಂದು ಸಲ, ಮಹಾಸ್ವಾಮಿಯವರ ಜೊತೆಯ ವಿದ್ಯಾರ್ಥಿಗಳಲ್ಲೊಬ್ಬರು ಕಠಿನ ವಾದೊಂದು ಲೆಕ್ಕವನ್ನು ಇತರರಿಗಿಂತ ಮುಂಚೆಯೇ ಮಾಡಿ ಮುಗಿಸಿ ಶ್ರೀಮಾನ್ ಫ್ರೇಸರ್ ಅವರ ಶ್ಲಾಘನೆಯನ್ನು ಪಡೆದರು. ಆಗ ಮಹಾ ಸ್ವಾಮಿಯವರು ಆ ಲೆಕ್ಕವನ್ನು ತೋರಿಸಬೇಕೆಂದು ಆತನನ್ನು ಕೇಳಿದಾಗ ಆತನು ತೋರಿಸುವುದಿಲ್ಲವೆಂದರು. ಉಪಾಧ್ಯಾಯರು, "ನೀವು ಇವೊತ್ತು ಇತರರಿಗಿಂತ ಮುಂಚಿತವಾಗಿ ಎಂದಿನಂತೆ ಲೆಕ್ಕವನ್ನೇಕೆ ಮಾಡಲಿಲ್ಲವೋ ತಿಳಿಯದು. ಇದು ವಿಚಿತ್ರವಾಗಿದೆ. ಆತನನ್ನೇಕೆ ಕೇಳಬೇಕು? ನೀವೇ ಆ ಲೆಕ್ಕವನ್ನು ಮಾಡಬೇಕು" ಎಂದು ಹೇಳಿದರು. ಮಹಾಸ್ವಾಮಿ ಯವರು ಲೇಶಮಾತ್ರವೂ ಅಸಮಾಧಾನಪಡದೆ ಲೆಕ್ಕವನ್ನು ಮಾಡ ಲುದ್ಯುಕ್ತರಾದರು. ಶ್ರೀಮಾನ್ ಫ್ರೇಸರ್ ಅವರ ಶ್ಲಾಘನೆಯನ್ನು ಆ ಮೊದಲೇ ಪಡೆದಿದ್ದ ವಿದ್ಯಾರ್ಥಿಯು ಕೊಂಚ ಗರ್ವದಿಂದ ಕೂಡಿ ಕೊರಳನ್ನು ಕೊಂಕಿಸಿ ಅಪಹಾಸ್ಯದ ದೃಷ್ಟಿಯಿಂದ ನೋಡುತ್ತ ಅಣಕದ ಚೇಷ್ಟೆ ಮಾಡಿದಾಗ ಕೂಡ, ಮಹಾಸ್ವಾಮಿಯವರು ಪ್ರಸನ್ನ ಗಂಭೀರ ವಾದ ಮುಖ ಮುದ್ರೆಯಿಂದಿದ್ದರು. ಶ್ರೀಮಾನ್ ಫ್ರೇಸರ್ ಅವರು ಅದನ್ನು ಗಮನಿಸಿ ಅವರನ್ನು ತಮ್ಮ ಸಮೀಪಕ್ಕೆ ಕರೆದು, "ಶ್ರೀಮನ್ಮಹಾ ರಾಜರವರ ವರ್ತನೆಗೂ ನಿಮ್ಮ ವರ್ತನೆಗೂ ಇರುವ ಅಂತರವನ್ನಾದರೂ ನೋಡಿ. ಅವರೆಷ್ಟು ತಾಳ್ಮೆ ಸೌಹಾರ್ದಗಳಿಂದಿದ್ದಾರೆ! ನೀವೆಷ್ಟು ಗರ್ವದಿಂದ ಅಣಕ ಮಾಡುತ್ತಿದ್ದೀರಿ! ಪ್ರತಿ ದಿನವೂ ಮಹಾಸ್ವಾಮಿಯವರೇ ಎಲ್ಲರಿ ಗಿಂತಲೂ ಮುಂಚಿತವಾಗಿ ಲೆಕ್ಕಗಳನ್ನು ಮಾಡುತ್ತಿದ್ದಾಗ ನಿಮ್ಮ ಸೂಕ್ಷ್ಮ ಬುದ್ಧಿಯು ಎಲ್ಲಿ ಹೋಗಿರುತ್ತಿದ್ದಿತೋ ನಾನರಿಯೆ. ನೀವು ವಿನಯದಿಂದ ನಡೆದು ಒಳ್ಳೆಯ ಗುಣವನ್ನು ತೋರಿಸಬೇಡವೆ? ಶೀಲವು ಚೆನ್ನಾಗಿಲ್ಲದಿರುವ ಪಕ್ಷಕ್ಕೆ ನೀವು ಗಣಿತಶಾಸ್ತ್ರದಲ್ಲಿ ಮುಂದೆ 'ಸೀನಿಯರ್ ರ್‍ಯಾಂಗ್ಲರ್'* ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿ ಪ್ರಶಸ್ತಿಯನ್ನು ಪಡೆದರೆತಾನೆ ಏನು ಪ್ರಯೋಜನ? 'ಇಲ್ಲ'ವೆಂದು ಹೇಳುವುದನ್ನು ನಯವಾಗಿ ಹೇಳಬಹು

* ಗಣಿತಶಾಸ್ತ್ರ ಬೋಧನೆಗೆ ಸುಪ್ರಸಿದ್ಧವಾದ ಕೇಂಬ್ರಿಡ್ಜ್ ವಿಶ್ವವಿದ್ಯಾನಿಲಯದ ಪರೀಕ್ಷೆಗಳಲ್ಲೆಲ್ಲ ಅತ್ಯಂತ ಶ್ರೇಷ್ಠವಾದ ಉಚ್ಚತರಗತಿಯ ಪರೀಕ್ಷೆ.

ದಾಗಿದ್ದಿತಲ್ಲವೆ? ಶ್ರೀಮನ್ಮಹಾರಾಜರವರು ಅವರ ವಯಸ್ಸಿಗೆ ಮೀರಿದಷ್ಟು ವಿನಯಪರರಾಗಿದ್ದಾರೆ. ಅವರಂತೆಯೇ ವಿನಯಶೀಲರಾಗಿರುವುದನ್ನು ನೀವೂ ಕಲಿತುಕೊಳ್ಳಬೇಕು'' ಎಂದು ಬುದ್ಧಿ ಹೇಳಿದರು. ಒಂದು ದಿನ ಮಹಾಸ್ವಾಮಿಯವರು ''ಫುಟ್‌ಬಾಲ್'' ಚೆಂಡಾಟವನ್ನು ಆಡಲು ಹೊರಟಾಗ್ಗೆ ತಮ್ಮೊಡನೆ ಆಟಕ್ಕೆ ಹೋಗಲು ಅನನುಕೂಲತೆಯಿದ್ದ ಸಹಾಧ್ಯಾಯಿಯೊಬ್ಬರ ಕೈಗೆ ತಮ್ಮ ಕೈಯಿನ ಚಿನ್ನದ ಗಡಿಯಾರವನ್ನು ಕೊಟ್ಟು ಅದನ್ನು ಜೋಪಾನವಾಗಿಟ್ಟಿರಬೇಕೆಂದು ಹೇಳಿದ್ದರು. ಅನಂತರ ಎರಡು ಮೂರು ದಿನಗಳು ಕಳೆದರೂ ಅದನ್ನು ಕೇಳಿ ಹಿಂದಕ್ಕೆ ತೆಗೆದು ಕೊಳ್ಳಲಿಲ್ಲ. ಆಗ ಅವರೇ ಮಹಾಸ್ವಾಮಿಯವರಲ್ಲಿಗೆ ಬಂದು, ''ಚಿನ್ನದ ಗಡಿಯಾರ ನನ್ನಲ್ಲೇ ಉಳಿದುಹೋಗಿದೆ. ನೀವು ಕೇಳಿ ತೆಗೆದುಕೊಳ್ಳಲೇ ಇಲ್ಲ'' ಎಂದು ಹೇಳಿದಾಗ ಮಹಾಸ್ವಾಮಿಯವರು, ''ಕೇಳುವುದೇನು, ತೆಗೆದುಕೊಳ್ಳುವುದೇನು? ಅದು ಯಾರಲ್ಲಿದ್ದರೂ ಆಯಿತು. ನೀವೇ ತೆಗೆದುಕೊಳ್ಳಿ'' ಎಂದು ಉತ್ತರ ಹೇಳಿದರು. ಆಗ ಅವರು ನಕ್ಕು ''ನಾನು ತೆಗೆದುಕೊಂಡರೆ ಆಮೇಲೆ ದೊಡ್ಡವರು ಸುಮ್ಮನೆ ಬಿಟ್ಟಾರೆ?'' ಎಂದು ಕೇಳಲು ಮಹಾಸ್ವಾಮಿಯವರು, ''ನನ್ನ ಗಡಿಯಾರ ನಾನು ಕೊಟ್ಟುಬಿಟ್ಟರೆ ಹಿರಿಯರೇನೂ ಮಾಡುವುದಿಲ್ಲ. ಆ ಯೋಚನೆ ನಿಮಗೇಕೆ? ಆ ಗಡಿಯಾರ ನಿಮ್ಮದೇ'' ಎಂದು ಹೇಳಿ ಅದನ್ನು ಅವರಿಗೇ ಕೊಟ್ಟು ಬಿಟ್ಟರು. ನೀಲಗಿರಿಯಲ್ಲೊಂದು ದಿನ ತಮ್ಮ ಜೊತೆಯ ವಿದ್ಯಾರ್ಥಿ ಯೊಬ್ಬರು ಎಡವಿ, ಕಾಲಿನಲ್ಲಿ ರಕ್ತ ಬಂದಾಗ ಮಹಾಸ್ವಾಮಿಯವರು ತಮ್ಮ ಕರವಸ್ತ್ರವನ್ನು ಹರಿದು ಒದ್ದೆಮಾಡಿ ತಾವೇ ಅವರ ಬೆರಳಿಗೆ ಕಟ್ಟಿದರು.

**ಶಾಂತಿ ಸ್ಥಾಪಕರು**

ಮಹಾಸ್ವಾಮಿಯವರು ಹೀಗೆ ತಮ್ಮ ಸಹಾಧ್ಯಾಯಿಗಳನ್ನೆಲ್ಲ ತಮಗೆ ಸರಿಸಮಾನರೆಂದೇ ಪ್ರೀತಿಯಿಂದ ಕಾಣುತ್ತಿದ್ದುದರಿಂದ, ಅವರುಗಳಲ್ಲಿ ಪರಸ್ಪರವಾಗಿ ವ್ಯಾಜ್ಯಗಳೂ ವಿವಾದಗಳೂ ಸಂಭವಿಸಿದಾಗಲೆಲ್ಲ ಶಾಂತಿ ಸ್ಥಾಪಕರಾಗಿ ವರ್ತಿಸಿ, ಅವರನ್ನು ಸಮಾಧಾನಪಡಿಸಿ, ಮತ್ತೆ ಸ್ನೇಹವನ್ನು ನೆಲೆಗೊಳಿಸಲು ಬಹಳ ಅನುಕೂಲವಾಯಿತು. ಅವರಲ್ಲಿ ಜಗಳಗಳೂ ಮನಃಕಷಾಯವೂ ಉಂಟಾದಾಗ್ಗೆ ಉಪಾಧ್ಯಾಯರುಗಳ ಅಧಿಕಾರ ವಾಣಿಗಳ ಜೊತೆಗೆ ಮಹಾಸ್ವಾಮಿಯವರ ಆಪ್ತವಾಕ್ಯಗಳೂ ಸೇರಿ ಶಾಂತಿ ಸ್ಥಾಪನೆಗೆ ಸಹಾಯವಾಗುತ್ತಿದ್ದಿತು. ''ರಾಯಲ್ ಸ್ಕೂಲ್'' ಪಾಠಶಾಲೆಗೆ ಸೇರಿಲ್ಲದಿದ್ದ ಮುಸಲ್ಮಾನ ವಿದ್ಯಾರ್ಥಿಯೊಬ್ಬರು ಆಟಪಾಟಗಳಿಗೆ ಮಾತ್ರ ಲೋಕ

ರಂಜನ ಮಹಲಿಗೇ ಹೋಗುತ್ತಿದ್ದರು. ಒಂದು ದಿನ "ರೌಂಡ್ ರೇಸ್" ಚೆಂಡಾಟವನ್ನಾಡುತ್ತಿದ್ದಾಗ್ಗೆ, ಅವರ ಕಾಲುಗಳ ಕೆಳಗೆ ಚೆಂಡು ಹೊರಟು ಹೋಯಿತು. ಕ್ಯಾಪ್ಟನ್ ಆಗಿದ್ದ ಅರಸಿನವರು, "ಹೀಗೇಕೆ ಚೆಂಡು ಕಾಲು ಕೆಳಗೆ ಬಿಟ್ಟಿದ್ದು? ಆಟ ಹೋಯಿತಲ್ಲಾ! ಅದಕ್ಕೆ ಯಾರು ಹೊಣೆ?" ಎಂದು ಕೋಪಿಸಿಕೊಂಡು ಚೆಂಡಿನಿಂದ ಒಂದು ಏಟು ಹೊಡೆದರು. ಎಳೆಯ ವಯಸ್ಸಿನವರಾದ ಆ ಮುಸಲ್ಮಾನ ವಿದ್ಯಾರ್ಥಿಯವರು ಅಳುವುದಕ್ಕುಪಕ್ರಮಿಸಿದುದನ್ನು ಕಂಡು, ಅಧ್ಯಾಪಕರಲ್ಲೊಬ್ಬರಾಗಿದ್ದ ಶ್ರೀಮಾನ್ ಬಾದಾಮಿ ಭೀಮರಾಯರವರು ಅರಸಿನವರನ್ನು ಆಕ್ಷೇಪಿಸಿ "ಚೆಂಡನ್ನು ಬಿಟ್ಟ ಮಾತ್ರಕ್ಕೇ ಹೊಡೆಯುವುದಕ್ಕೆ ಅಧಿಕಾರ ಕೊಟ್ಟವರಾರು? ಹೀಗೆ ಹೊಡೆಯಬಹುದೆ?" ಎಂದು ಕೇಳಿದಾಗ ಅರಸಿನವರು ಎಳೆಯತನದ ರಕ್ತದ ಕಾವಿನಿಂದ ಮೈಮರೆತು, "ಹೊಡೆಯದೇ ಏನು! ನಾನು ಕ್ಯಾಪ್ಟನ್. ನನಗೆ ಹೊಡೆಯಲು ಅಧಿಕಾರವಿದೆ" ಎಂದು ಎದುರು ಹೇಳಿದರು. ಅದಕ್ಕೆ ಶ್ರೀಮಾನ್ ಭೀಮರಾಯರವರು ಮುನಿದು, ಕ್ಷಮಾಪಣೆ ಕೇಳಬೇಕೆಂದು ಅಪ್ಪಣೆ ಮಾಡಿದರು. ಇನ್ನೊಬ್ಬ ಅರಸು ಪಂಗಡದ ವಿದ್ಯಾರ್ಥಿಯವರು ಅರಸಿನವರನ್ನು ಸ್ವಲ್ಪ ಓರೆಯಾಗಿ ಕರೆದುಕೊಂಡುಹೋಗಿ, "ನಾವು ಅರಸುಗಳು. ಅವನು ಇಲ್ಲಿಯ ಹುಡುಗನಲ್ಲ. ಇದರಮೇಲೆ ಮಾಂಸ ತಿನ್ನುವ ಮುಸಲ್ಮಾನರ ಹುಡುಗ. ನೀನು ಖಂಡಿತ ಕ್ಷಮಾಪಣೆ ಕೇಳಕೂಡದು" ಎಂದು ಮಂತ್ರಾಲೋಚನೆ ಹೇಳಿಬಿಟ್ಟರು. ಅರಸಿನವರು ("ಕ್ಯಾಪ್ಟನ್") ಕ್ಷಮಾಪಣೆ ಕೇಳುವುದಿಲ್ಲವೆಂದರು. ಶ್ರೀಮಾನ್ ಭೀಮರಾಯರವರು, "ಅವರ ಕ್ಷಮಾಪಣೆ ಕೇಳದೆಹೋದರೆ ನೀವು ಇನ್ನು ಆಟಕ್ಕೇ ಬರಕೂಡದು" ಎಂದರು. ಮಹಾಪ್ರಭುಗಳು ಆಗ ಅರಸಿನವರನ್ನು ಸ್ವಲ್ಪ ದೂರಕ್ಕೆ ಕರೆದುಕೊಂಡುಹೋಗಿ, "ತಪ್ಪು ಮಾಡಿದಮೇಲೆ ಕ್ಷಮಾಪಣೆ ಕೇಳಿದರೆ, ಅದರಲ್ಲೇನು ಅವಮಾನ?" ಎಂದರು. ಅರಸಿನವರು, "ನಾನು ಅರಸು ಪಂಗಡಕ್ಕೆ ಸೇರಿದ್ದೂ ಮಾಂಸತಿನ್ನುವ ಮುಸಲ್ಮಾನ ಹುಡುಗನನ್ನು ಕ್ಷಮಾಪಣೆ ಕೇಳಲಿ?" ಎಂದು ಉತ್ತರ ಹೇಳಿದರು. ಮಹಾಸ್ವಾಮಿಯವರು ನಕ್ಕು, "ನಾವು ಒಬ್ಬರನ್ನೊಬ್ಬರು ಪ್ರೀತಿಸಿ ಅಣ್ಣತಮ್ಮಂದಿರಂತೆ ಅನ್ಯೋನ್ಯವಾಗಿರಬೇಕು. ಫ್ರೇಸರ್ ಸಾಹೇಬರೂ ಮಾಂಸವನ್ನು ತಿನ್ನುವವರಲ್ಲವೇನು? ಅದಕ್ಕೂ ನಾವು ಅವರಲ್ಲಿ ಗುರುಭಕ್ತಿಯನ್ನು ತೋರಿಸುವುದಕ್ಕೂ ಏನು ಸಂಬಂಧ?" ಎಂದು ಕೇಳಿ, ವಿಧವಿಧವಾಗಿ ವಿವೇಕವನ್ನು ಬೋಧಿಸಿದರು. ಅಲ್ಲದೆ ಉಪಾಧ್ಯಾಯರಲ್ಲೊಬ್ಬರಾದ ಶ್ರೀಮಾನ್ ಭೀಮರಾಯರಿಗೆ ಎದುರು

ಮಾತನಾಡಿ ಅವಿಧೇಯತೆಯನ್ನು ತೋರಿಸಿದುದು ಸರಿಯಲ್ಲವೆಂದು ತಿಳಿಸಿದರು. ಆಗ ಅರಸಿನವರು, "ನಾನು ಭೀಮರಾಯರಲ್ಲಿ ಕ್ಷಮಾಪಣೆ ಬೇಡಿಕೊಳ್ಳುತ್ತೇನೆ. ಆದರೆ ಆ ಮುಸಲ್ಮಾನ ಹುಡುಗನಲ್ಲಿ ಬೇರೆ ಕ್ಷಮಾಪಣೆ ಕೇಳಲಾರೆ" ಎಂದರು. ಅನ್ಯಾಯವಾಗಿ ಹೊಡೆದಮೇಲೆ ಕ್ಷಮಾಪಣೆ ಕೇಳುವುದೇ ಭೂಷಣವೆಂದು ಮಹಾಸ್ವಾಮಿಯವರು ತಿಳಿಸಿದರು. ಅನಂತರ ಮೇಲಿನವರೊಬ್ಬರು ಕೂಲಂಕಷವಾಗಿ ವಿಚಾರಣೆ ನಡೆಯಿಸಿ, ಮಹಾಸ್ವಾಮಿಯವರು ಆಡಿದ್ದ ವಿವೇಕವಾಣಿಗಳನ್ನು ಶ್ಲಾಘಿಸಿ, ಅವಕ್ಕಿಂತ ಉಪಾದೇಯವಾದ ಉಪದೇಶವನ್ನು ಹೇಳುವುದಾರಿಗೂ ಸಾಧ್ಯವಿಲ್ಲವೆಂದು ತಿಳಿಸಿದರು. ಅಲ್ಲದೆ, "ಟೆನ್ನಿಸ್ ಆಡುವಾಗ ಸರಿಯಾಗಿ ಹೊಡೆಯದೆ ತಪ್ಪಿದರೆ ಕೂಡ ನಾನು ಮುಸಲ್ಮಾನ್ ಬಂಧುಗಳಾದ ನನ್ನ ಜೊತೆಯ ಆಟಗಾರರ ಕ್ಷಮಾಪಣೆ ಎಷ್ಟೋ ಸಲ ಕೇಳಿದ್ದೇನೆ. ಹೀಗಿರುವಲ್ಲಿ ಅನ್ಯಾಯವಾಗಿ ಪೆಟ್ಟುಹೊಡೆದ ಅಪರಾಧಕ್ಕಾಗಿ ಕ್ಷಮಾಪಣೆ ಕೇಳದೆ ಉಂಟೆ?" ಎಂದೂ ಸಹ ಅವರು ಹೇಳಿದರು. ಮಹಾಸ್ವಾಮಿಯವರು ಸಹ ಕಿವಿಮಾತುಗಳನ್ನಾಡಿ, ಕ್ಷಮಾಪಣೆ ಬೇಡುವುದೇ ಸರಿಯೆಂದಮೇಲೆ ಅರಸಿನವರು ಶ್ರೀಮಾನ್ ಭೀಮರಾಯರವರಲ್ಲಿಯೂ, ಆ ಮುಸಲ್ಮಾನ್ ವಿದ್ಯಾರ್ಥಿಯವರಲ್ಲಿಯೂ ಕ್ಷಮಾಪಣೆ ಕೇಳಿದರು.

**ಕರುಣಾ ಪ್ರದರ್ಶನ**

ಮಹಾಸ್ವಾಮಿಯವರು ತಮ್ಮ ಸಹಾಧ್ಯಾಯಿಗಳಲ್ಲಿಯೂ ಇತರರಲ್ಲಿಯೂ ವಿಧವಿಧವಾಗಿ ಕರುಣೆ ತೋರುತ್ತಿದ್ದರು. ಒಂದುಸಲ, ಶ್ರೀಮಾನ್ ಫ್ರೇಸರ್ ಸಾಹೇಬರವರು ಅಪರಾಧಿಯಾದೊಬ್ಬನಲ್ಲಿ ಆಗ್ರಹಗೊಂಡು ಎರಡು ಪೆಟ್ಟುಗಳನ್ನು ಕೊಟ್ಟಾಗ ಅವರು ಕಂಬನಿದುಂಬಿದರು. ಇನ್ನೊಂದುಸಲ, ಲೋಕರಂಜನ ಮಹಲಿನಲ್ಲಿ ಸುವರ್ಣರಚಿತವಾದ ದೇವತಾವಿಗ್ರಹಗಳು ಕಳವಾಗಿ, ಶ್ರೀಮಾನ್ ಫ್ರೇಸರ್ ಸಾಹೇಬರು ಅವುಗಳನ್ನು ಪತ್ತೆಮಾಡಿಸಿ ಅಪರಾಧಿಗಳನ್ನು ಕಾರಾಗೃಹಕ್ಕೆ ಸೇರಿಸುವ ಪ್ರಯತ್ನ ಮಾಡಿದಾಗ, ಆಳಿದ ಮಹಾಸ್ವಾಮಿಯವರು ಅವರನ್ನು ಕ್ಷಮಿಸುವಂತೆ ಶ್ರೀಮಾನ್ ಫ್ರೇಸರ್ ಸಾಹೇಬರವರಿಗೆ ಬಿನ್ನವಿಸಿದರು.

ಮಹಾಸ್ವಾಮಿಯವರ ಸಹಾಧ್ಯಾಯಿಗಳಾಗಲಿ, ಅಧ್ಯಾಪಕರಾಗಲಿ ಅಥವಾ ಸನ್ನಿಧಿಯ ಊಳಿಗದವರಾಗಲಿ ರೋಗಗ್ರಸ್ತರಾದರೆ, ಅವರು ತಮ್ಮ ಮಹಾರಾಜ ಪದವಿಯನ್ನೇ ಮರೆತು ಸಾಮಾನ್ಯರಂತೆ ಅವರ ಬಳಿಗೆ ಹೋಗಿ, ಬಗೆಬಗೆಯಾಗಿ ಧೈರ್ಯಹೇಳಿ, ಅವರಿಗೆ ತಮಗೆ

ನಡೆಯುತ್ತಿದ್ದಂತೆಯೇ ಉಪಚಾರಗಳು ನಡೆಯಲು ಏರ್ಪಡಿಸಿ, ವೈದ್ಯರು ಸರಿಯಾಗಿ ನೋಡಿಕೊಳ್ಳುತ್ತಿದ್ದರೋ ಇಲ್ಲವೋ ಎಂಬುದನ್ನು ಪರೀಕ್ಷಿಸಿ, ಔಷಧವನ್ನು ಕುಡಿಸಿ ಅವರ ಸಮೀಪದಲ್ಲಿ ಕುಳಿತು, ಅವರ ಮನಸ್ಸಿಗೆ ಹಿತವಾಗಿರುವಂತೆ ಮಾತುಗಳನ್ನಾಡಿ ಬರುತ್ತಿದ್ದರು. ಅನೇಕ ರಾಜಕುಮಾರರುಗಳಿಗೆ ಶಿಕ್ಷಣಕೊಟ್ಟು ಬಂದಿದ್ದ ಶ್ರೀಮಾನ್ ಫ್ರೇಸರ್ ಸಾಹೇಬರು ಕೂಡ ಅದನ್ನು ಕಂಡು ಬೆರಗಾಗಿ ಅದು ಅನನ್ಯ ಸುಲಭವಾದ ಸದ್ವರ್ತನೆಯೆಂದು ಶ್ಲಾಘಿಸುತ್ತಿದ್ದರು.

**ವಿನೋದಪ್ರಿಯತೆ**

ಮಹಾಪ್ರಭುಗಳ ವಿನೋದಪ್ರಿಯತೆಯೂ ಮನೋಜ್ಞವಾಗಿದ್ದಿತು. ತಮ್ಮ ಸಹಾಧ್ಯಾಯಿಗಳೊಡನೆ ಸೇರಿ, ಬಗೆಬಗೆಯ ವಿನೋದಗಳಿಂದ ವಿರಾಮಕಾಲಗಳನ್ನು ಕಳೆಯಲು ಅವರಿಗೆ ತೀವ್ರಾಭಿಲಾಷೆಯಿದ್ದಿತು. ಅವರು ತಮ್ಮ ಸಹಾಧ್ಯಾಯಿಗಳಿಗೆ ಬಗೆಬಗೆಯ ಅಡ್ಡಹೆಸರುಗಳನ್ನಿಟ್ಟು* ಕೂಗಿ, ತಾವೂ ನಕ್ಕು ಇತರರನ್ನೂ ನಗಿಸುತ್ತಿದ್ದರು. ತಮಗೇ ತಮ್ಮ ಸಹಾಧ್ಯಾಯಿಗಳು ಅಡ್ಡಹೆಸರನ್ನಿಟ್ಟು ಕೂಗಿ ಹಾಸ್ಯ ಮಾಡಿದಾಗ ಕೂಡ ಅವರು ತಾವೂ ತಮ್ಮ ಮಿತ್ರರೊಡನೆ ಸೌಹಾರ್ದದಿಂದ ನಗುತ್ತಿದ್ದರು.

ಮಹಾಸ್ವಾಮಿಯವರು ಇತರರು ಮಾತನಾಡುತ್ತಿದ್ದ ರೀತಿಯನ್ನೂ, ಕೈಮುಗಿಯುತ್ತಿದ್ದುದನ್ನೂ, ಸಲಾಂ ಮಾಡುತ್ತಿದ್ದುದನ್ನೂ, ಮುಜರೆ ಮಾಡುತ್ತಿದ್ದುದನ್ನೂ, ಅನುಕರಣಮಾಡಿ ತಮ್ಮ ಸಹಾಧ್ಯಾಯಿಗಳನ್ನು ನಗಿಸುತ್ತಿದ್ದುದು ಮತ್ತೊಂದು ವಿನೋದ ವಿಧಾನ. ಅಂಗಸಾಧನೆಗಾಗಿ ಅವರು ಮಳೆಗಾಲದಲ್ಲಿ ಚಾಮುಂಡೀ ಬೆಟ್ಟಕ್ಕೆ ಹೋಗಿ ಅಲ್ಲಿಂದ ಲೋಕರಂಜನ ಮಹಲಿಗೆ ಓಡಿಬರುತ್ತಿದ್ದುದುಂಟು. ಒಂದುಸಲ ಹೀಗೆ ಓಡುತ್ತ ಒಂದು ಹೊಲದ ಮಧ್ಯದಲ್ಲಿ ಹಾಯ್ದು ಓಡಿಬರುತ್ತಿದ್ದರು. ಟೋಪಿಯನ್ನಿಟ್ಟುಕೊಂಡು ಸಾಮಾನ್ಯ ಬಾಲಕರಂತಿದ್ದ ಅವರನ್ನು ಮಹಾರಾಜರೆಂದು ಅರಿಯದೆಹೋದ ಆ ಹೊಲದವನು, "ಬೆಳೀ ಒಳಗೆ ಹೋಯ್ತಾನೆ; ಯಾನಾ, ಅವನು?" ಎಂದು ಕೀರಲು ಧ್ವನಿಯಿಂದ ಕೂಗಿದನು. ಮಹಾಸ್ವಾಮಿಯವರು ಮೌನದಿಂದ ಓಡುತ್ತಿರಲು, ಆತನು, "ಕಿವಿ ಕೇಳಾಕಿಲ್ವಾ? ಯಾನಾ ಅವನು, ಹಿಂಗೆ ಬೆಳೀ ಒಳಗೆ ಓಡಾವ?"

---

* ತೀರ ಎತ್ತರವಾಗಿ ತೆಳ್ಳಗಿದ್ದರೆ "ಜನರಲ್ ಸ್ಟಿಕ್"; ಗುಂಡಗೆ ದಪ್ಪವಾಗಿದ್ದರೆ "ಮೇಜರ್ ಡ್ರಮ್"; ಹಟವಾದಿಯಾಗಿದ್ದರೆ "ಕೊಂಟು"; ಇತ್ಯಾದಿಯಾಗಿ ಬಗೆಬಗೆಯ ಅಡ್ಡಹೆಸರುಗಳು.

ಎಂದು ಗರ್ಜಿಸಿದನು. ಮಹಾಸ್ವಾಮಿಯವರು ಆ ರೈತನ ಧ್ವನಿಯನ್ನೇ ಅನುಕರಿಸಿ ಗ್ರಾಮ್ಯ ಭಾಷೆಯಲ್ಲಿ ಮಾತನಾಡುತ್ತ, "ಯಾನಪ್ಪಾ, ಹಿಂಗೆ ಓಡಿದರೆ ಏನಾಯ್ತುದಪ್ಪಾ! ಬೇರೇ ದಾರೀನೇ ಇಲ್ವೇಲ್ಲಯ್ಯಾ?" ಎಂದರು. ಅದಕ್ಕೆ ರೈತನು, "ಬೇರೇ ದಾರೀ ಇಲ್ಡಿದ್ರೇ ಇದು ದಾರೀನಾ? ಧೊರೆಗೋಳ್ಗೆ ಹೇಳ್ಕೊಂಡೀ ನಿನ್ಗೇ ಒಂದು ಬೇರೇ ದಾರೀ ಮಾಡೀ ಸ್ಕೊಳೋ ಮಾರಾಯಾ!" ಎಂದು ಹೇಳಿದನು. ಮಹಾಸ್ವಾಮಿಯವರು ಲೋಕರಂಜನ ಮಹಲಿಗೆ ದಯಮಾಡಿದಮೇಲೆ, ಆ ರೈತನನ್ನು ಅಶ್ವಶಾಲೆಯ ಕಟ್ಟಡಕ್ಕೆ (ಎಂದರೆ, ತಬೇಲಿಗೆ) ಕರೆಯಿಸಿ, "ಏನಯ್ಯ! ಈ ದಿನ ಯಾವನೋ ಹುಡುಗ ನಿನ್ನ ಹೊಲಕ್ಕೆ ಬಂದಿದ್ದನಂತೆ. ನೀನು 'ಬೆಳೀ ಒಳಗೆ ಹೋಯ್ತಾನೆ, ಯಾನಾ ಅವನು?' ಎಂದೆಯಂತೆ. ನೀನು ಕೂಗುತ್ತಿದ್ದರೂ ಲಕ್ಷ್ಯಮಾಡದೆ ಅವನು ಓಡಿಬಂದನಂತೆ. 'ನೀನು ಕಿವಿ ಕೇಳಾಕಿಲ್ವಾ? ಯಾನಾ ಅವನು' ಎಂದೆಯಂತೆ. ಇನ್ನುಮೇಲೆ ಅವನು ಬೆಳೀ ಒಳಗೆ ಓಡಿ ಬರಕೂಡದೆಂತ ಕಟ್ಟುಮಾಡಿದ್ದೇವೆ. ಇನ್ನು ಮುಂದೆ ಅವನು ಹಾಗೆ ಮಾಡುವಹಾಗಿಲ್ಲ" ಎಂದರು. ರುಮಾಲನ್ನು ಧರಿಸಿ ಬೇರೆ ಪೋಷಾಕನ್ನು ಹಾಕಿಕೊಂಡಿದ್ದ ಮಹಾಸ್ವಾಮಿಯವರನ್ನು — ಬೆಳಗಿನ ಮಬ್ಬಿನಲ್ಲಿ ಬೇರೆಯ ಸಾಮಾನ್ಯ ಉಡುಪಿನಲ್ಲಿ ದೂರದಿಂದ ನೋಡಿದ್ದುದು ನಿಜವಾದರೂ — ಆ ರೈತನು ಗುರುತಿಸಲಾರದೆ, "ಅದಾ ಬುದ್ದಿ! ಯಾನೋ ಹೈದ ಬೆಟ್ಟದ ಕಡೆಯಿಂದ ಓಡಿಬಂದ. ಯಾನೋ ಟೋಪೀ ಹೈದ. ಹೊಲಾ ತುಳಿದು ಹಾಳುಮಾಡಿ ಓಡಿ ಬೆಳೀ ಒಳಗೆ ಹಾಯ್ದ. 'ಯಾನಾ ಅವನೂ' ಅಂತ ನಾ ಕೂಗು ಹಾಕ್ದೆ" ಎಂದು ಉತ್ತರ ಹೇಳಿದನು. ಮಹಾಸ್ವಾಮಿಯವರು ಒಳಕ್ಕೆ ಹೋಗಿ ಪೋಷಾಕನ್ನು ಮಾರ್ಪಡಿಸಿ ಬೆಳಗಿನಂತೆ ಟೋಪಿಯನ್ನು ಧರಿಸಿ ಈಚೆಗೆ ಬಂದು, "ಆ ಹುಡುಗ ಹೀಗಿದ್ದನೇನಯ್ಯ?" ಎಂದು ಕೇಳಿದಾಗ ಆ ರೈತ ದೃಷ್ಟಿಸಿ ನೋಡಿ, "ಹಿಂಗೇ ಇದ್ದದ್ದು. ಇವರೇ; ಇವರೇ" ಎಂದನು. ಅಲ್ಲಿದ್ದವರೆಲ್ಲರೂ ನಕ್ಕರು. ಮಹಾಸ್ವಾಮಿಯವರು ಆ ರೈತನಿಗೆ ಇಪ್ಪತ್ತೈದು ರೂಪಾಯಿಗಳನ್ನು ಕೊಟ್ಟು ಬೀಳ್ಕೊಟ್ಟರು. ರೈತನು ಸಂತೋಷಭರಿತನಾಗಿ ತೆರಳಿದನು. ಸರ್ ಅಸುತೋಷ್ ಮುಖರ್ಜಿಯವರ ಜೀವನದಲ್ಲಿ ನಡೆದ ಘಟನೆಯೊಂದು ಈ ಸನ್ನಿವೇಶದಲ್ಲಿ ನೆನಪಿಗೆ ಬರುತ್ತದೆ. ಅವರು ಚಡ್ಡಿಯನ್ನು ಧರಿಸಿ ಅಂಗಸಾಧನೆಗಾಗಿ ತಮ್ಮ ಭವನದ ಉದ್ಯಾನದಲ್ಲಿ ಗುದ್ದಲಿಯಿಂದ ಅಗೆಯುತ್ತಿದ್ದಾಗ ಹಿಂಭಾಗದ ಬಾಗಿಲಿನಿಂದ ಅಲ್ಲಿಗೆ ಬಂದ

ಆಗಂತುಕರೊಬ್ಬರು "ಸರ್ ಅಸುತೋಷ್ ಮುಖರ್ಜಿಯವರು ಮನೆಯಲ್ಲಿದ್ದಾರೆಯೆ? ನಾನು ನೋಡಲಾದೀತೆ?" ಎಂದು ಕೇಳಿದರಂತೆ. ಅವರು ಅದಕ್ಕೆ "ಅಗತ್ಯವಾಗಿ ನೋಡಬಹುದು. ಅವರು ಮನೆಯಲ್ಲೇ ಇದ್ದಾರೆ. ನೀವು ಮುಂಭಾಗದ ಕೊಟಡಿಯಲ್ಲಿ ಕುಳಿತುಕೊಳ್ಳಿ. ನಾನು ಅವರನ್ನು ಅಲ್ಲಿಗೆ ಕಳುಹಿಸುತ್ತೇನೆ" ಎಂದು ಉತ್ತರ ಹೇಳಿ, ಆತ ಹೊರಟುಹೋದಮೇಲೆ ಮನೆಯೊಳಕ್ಕೆ ಹೋಗಿ ಉಡುಪನ್ನು ಮಾರ್ಪಡಿಸಿಕೊಂಡು ಆತನು ಕುಳಿತಿದ್ದ ಕೊಟಡಿಗೆ ಹೋಗಿ, "ನೀವು ನನ್ನನ್ನು ನೋಡ ಬಯಸಿದರಂತೆ. ನಮ್ಮ ತೋಟಗಾರ ನನಗೆ ಹೇಳಿದ" ಎಂದು ಹೇಳಿ ನಕ್ಕರಂತೆ.

ಮಹಾಸ್ವಾಮಿಯವರು ಜೋಗದ ಜಲಪಾತವನ್ನು ನೋಡಲು ತಮ್ಮ ಸಹಾಧ್ಯಾಯಿಗಳೊಡನೆ ಬಿಜಯಮಾಡಿದ್ದಾಗ, ಅಲ್ಲಿದ್ದ ವೃಷಭಯ್ಯನೆಂಬ ವೃದ್ಧನೊಬ್ಬನು, "ನನ್ನೊಡೆಯಾ, ಹಿಂದೆ ನಡೆದದ್ದು ಏನು ಹೇಳಾನೇ? ಹೊಳೀ ದಾಟ್ತಿದ್ದೆ. ನರೆ ಬಂದು ನೀರು ಉರುಳುರುಳೀ ತೆರೆತೆರೆಯಾಗಿ ಉಕ್ಕೀ ಉಕ್ಕೀ ಬಂತು. ಹಂಗೇ ಹೊಳೀ ಬಂದಾಗ ಕೊಚ್ಕೊಹೋಗ್ತಿದ್ದೆ. ದ್ಯಾವ್ರೇ ಕಾಪಾಡಪ್ಪಾ, ದ್ಯಾವ್ರೇ ಉಳೀಸಿ ಕಾಪಾಡಪ್ಪಾ — ಎಂದೆ. ಹೆಂಗೋ ದ್ಯಾವ್ರೇ ಕಾಪಾಡಿ ಉಳೀಸ್ದ" ಎಂದು ರಾಗರಾಗವಾಗಿ ಹೇಳುತ್ತಿದ್ದುದನ್ನು ಕೇಳಿದರು. ಅನಂತರ ಅವನನ್ನು ಪದೇ ಪದೇ "ವೃಷಭಯ್ಯ, ಹೇಳಯ್ಯ. ನೀನು ಹೊಳೆದಾಟಿ ಬದುಕಿ ಬಂದ ಬಗೆ ಹೇಗೆ, ಹೇಳಯ್ಯ. ಎಷ್ಟುಸಲ ಕೇಳಿದರೂ ತೃಪ್ತಿಯಿಲ್ಲ" ಎಂದು ಹೇಳಿ, ಅವನ ಮಾತುಗಳನ್ನು ಕೇಳಿ ಕೇಳಿ, ತಮ್ಮ ಸಹಾಧ್ಯಾಯಿಗಳೊಡನೆ ಅವರು ವಿನೋದ ಸುಖವನ್ನನುಭವಿಸುತ್ತಿದ್ದರು.

ಮಹಾಸ್ವಾಮಿಯವರ ಊಳಿಗದವರಲ್ಲೊಬ್ಬನಾದ ಪುಟ್ಟನಂಜಪ್ಪನೆಂಬಾತನು, ಆಳಿದ ಮಹಾಸ್ವಾಮಿಯವರಾದ ಶ್ರೀ ಮುಮ್ಮಡಿ ಕೃಷ್ಣರಾಜ ಒಡೆಯರವರ ಕಾಲದಲ್ಲಿ ಹಿಂದೆ ತಾನು ಇಪ್ಪತ್ತನಾಲ್ಕು ಘಂಟೆಗಳ ಕಾಲ "ಕುಮುಂದಾರಿ" ಕೆಲಸ ಮಾಡಿದುದಾಗಿ (ಎಂದರೆ, "ಕಮ್ಯಾಂಡರ್" ಕೆಲಸ ಮಾಡಿದುದಾಗಿ) ಹೆಮ್ಮೆಯಿಂದ ಹೇಳುತ್ತಿದ್ದನಂತೆ. ಬಾಲಕರಾದ ಮಹಾಸ್ವಾಮಿಯವರು ತಮ್ಮ ಸಹಾಧ್ಯಾಯಿಗಳೊಡಗೂಡಿ ಆತನ ಮಾತುಗಳನ್ನು ಕೇಳಬೇಕೆಂಬ ವಿನೋದೋತ್ಸುಕತೆಯಿಂದ, "ಪುಟ್ಟನಂಜಪ್ಪ! ಇಪ್ಪತ್ತನಾಲ್ಕು ಘಂಟೆ 'ನಾನೂ ಬೆಲ್ಟ್ ಹಾಕಿ ಕುಮುಂದಾರಿ ಮಾಡಿದ್ದೀನಿ' ಅಂದೆಯಲ್ಲಾ! ಅದು ಹೇಗೆ,

ಕೊಂಚ ಹೇಳಯ್ಯಾ,'' ಎನ್ನುವರು. ಆತನು ಹೆಮ್ಮೆಯಿಂದ ಕಣ್ಣು ಗಳನ್ನರಳಿಸಿಕೊಂಡು "ಕುಮುಂದಾರಿ ಮಾಡಿದ್ದೀನಿ, ಮಾಸ್ವಾಮಿ. ಮುಮ್ಮಡಿ ಧೊರೆಗಳು ಬೆಳ್ಳೀ ಕತ್ತೀ ಸೊಂಟಕ್ಕೆ ಕಟ್ಟಿಸಿದ್ರು. ಒಂದು ದಿನವೆಲ್ಲಾ ಕುಮುಂದಾರಿ ಮಾಡ್ದೆ. ಮಾರನೇ ದಿನ ಬ್ಯಾಡವೆಂದ್ರು. ನನ್ನ ಹಿಂದಿನ ಕೆಲ್ಸಕ್ಕೇ ಹಾಕಿಬಿಟ್ರು. ಈಗಲೂ ಕುಮುಂದಾರಿ ಮಾಡೇನು. ಅಂತೂವೇ ಇಪ್ಪತ್ನಾಲ್ಕು ಘಂಟೆ ಕುಮುಂದಾರಿ ಮಾಡ್ದೋನು ನಾನು'' ಎಂದು ಹೇಳಿ ಮುಗಿಸುವನು. ಅವನು ಹೊರಟುಹೋದ ಬಳಿಕ ಮಹಾ ಸ್ವಾಮಿಯವರೂ ಇತರ ವಿದ್ಯಾರ್ಥಿಗಳೂ ಗಹಗಹಿಸಿ ನಗುವರು. ಪುಟ್ಟ ನಂಜಪ್ಪನಿಗೆ ಹಣದ ರೂಪದ ಪಾರಿತೋಷಿಕವು ಲಭಿಸುತ್ತಿದ್ದುದನ್ನು ಹೇಳಬೇಕಾದುದೇ ಇಲ್ಲ.

ಮಹಾಸ್ವಾಮಿಯವರಿಗೆ ಅಂಗಸಾಧನೆಯನ್ನು ಕಲಿಸುವುದಕ್ಕೆ ನೇಮಕವಾಗಿದ್ದವರಲ್ಲಿ ಒಬ್ಬರು ಪದಾತಿ ಸೈನ್ಯದಲ್ಲಿ ("ಇನ್‌ಫೆಂಟ್ರಿ" ಯಲ್ಲಿ) ಕೆಲಸ ಮಾಡಿದ್ದವರು; ಮತ್ತೊಬ್ಬರು ಅಶ್ವಾರೋಹಿಗಳ ಸೈನ್ಯ ದಲ್ಲಿ ("ಕ್ಯಾವಲ್ರಿ"ಯಲ್ಲಿ) ಕೆಲಸ ಮಾಡಿದ್ದವರು. ಪದಾತಿ ಸೈನ್ಯವು ಅಶ್ವಾರೋಹಿ ಸೈನ್ಯಕ್ಕಿಂತ ಶ್ರೇಷ್ಠವೆಂದೂ, ಅಶ್ವಾರೋಹಿ ಸೈನ್ಯವು ಪದಾತಿ ಸೈನ್ಯಕ್ಕಿಂತ ಹೆಚ್ಚೆಂದೂ ಅವರಿಬ್ಬರಿಗೂ ಪದೇ ಪದೇ ಮಸಗು ತ್ತಿದ್ದ ವಾದವನ್ನು ಕೇಳಿಕೇಳಿ, ಮಹಾಸ್ವಾಮಿಯವರೂ ಅವರ ಜೊತೆ ಯವರೂ ನಕ್ಕು ನಲಿಯುತ್ತಿದ್ದರು.

ಮಹಾಸ್ವಾಮಿಯವರು ಇತರ ರೀತಿಗಳಲ್ಲಿ ಸಹ ವಿನೋದಪ್ರಿಯ ರಾಗಿ ಉಲ್ಲಾಸಪಡುತ್ತಿದ್ದರು. ಉಷಃಕಾಲ ಐದು ಘಂಟೆಗೆ "ಬ್ಯೂಗಲ್" ತುತ್ತೂರಿಯನ್ನು ಧ್ವನಿಗೈದಾಗ ಪ್ರತಿ ದಿನವೂ ಕ್ರಮವಾಗಿ ಏಳುತ್ತಿದ್ದವರಿಗೆ ಪಾರಿತೋಷಿಕವನ್ನು ಕೊಟ್ಟು ಏಳದೆ ನಿದ್ರಾಲೋಲ ರಾಗಿ ಗೊರಕೆ ಹೊಡೆಯುತ್ತಿದ್ದವರನ್ನು ಅವರು ಎಚ್ಚರಗೊಂಡ ಬಳಿಕ ಬಗೆಬಗೆಯಾಗಿ ಹಾಸ್ಯಮಾಡುವುದು; ಈಜುವಾಗ ಜೊತೆಯವರನ್ನು ತಟಕ್ಕನೆ ನೀರಿಗೆ ತಳ್ಳಿ ಲಲ್ಲೆಯಾಡುವುದು; ಸಹಾಧ್ಯಾಯಿಗಳನ್ನು ತುಂಟ ಕುದುರೆಯ ಮೇಲೆ ಕುಳ್ಳಿರಿಸಿ ಕುದುರೆಯ ಅಡಗುತನದಿಂದ ಅವರು ಭೀತರಾಗಿ ಪಾಡುಪಡುವುದನ್ನು ನೋಡಿ ನಲಿಯುತ್ತ ಅವರು ಕೆಳಕ್ಕೆ ಬೀಳದಂತೆ ನೋಡಿಕೊಳ್ಳುವುದಕ್ಕಾಗಿ ಕುದುರೆಯೊಡನೆ — ಅದರ ಪಾರ್ಶ್ವದಲ್ಲಿ — ಓಡುವುದು; ಸಂಗಡಿಗರನ್ನು ಪರಿಪರಿಯಾಗಿ ಹಾಸ್ಯ ಮಾಡುವುದು; ಮುಂತಾದುವುಗಳೆಲ್ಲ ಮಹಾಸ್ವಾಮಿಯವರ ವಿನೋದ ಪ್ರಿಯತೆಯ ನಿದರ್ಶನಗಳು.

ಮಹಾಸ್ವಾಮಿಯವರು ವ್ಯಾಸಂಗ ವಿಚಾರದಲ್ಲಾಗಲಿ ಅಥವಾ ಇತರ ವಿಚಾರಗಳಲ್ಲಾಗಲಿ, ತಮ್ಮ ಜೊತೆಯವರೆಲ್ಲರಿಗಿಂತ ಶ್ರೇಷ್ಠರೆನಿಸಬೇಕೆಂಬ ಉದ್ದೇಶದಿಂದ ಶ್ರಮಿಸುತ್ತ, ಒಟ್ಟಿನಲ್ಲಿ ತಮ್ಮ ಸಹಾಧ್ಯಾಯಿಗಳೆಲ್ಲರಿಗಿಂತಲೂ ಮೇಲೆನಿಸಿ ತರಗತಿಯಲ್ಲಿ ಪ್ರಥಮ ಸ್ಥಾನವನ್ನು ಪಡೆದಿದ್ದ

ವೈಶಿಷ್ಟ್ಯ

ಅಂಶವನ್ನು ಹಿಂದೆಯೇ ತಿಳಿಸಲಾಗಿದೆ. ತರಗತಿಯಲ್ಲಿದ್ದ ಅಂಕಗಳ ಪುಸ್ತಕವನ್ನು ("ಮಾರ್ಕ್ಸ್ ರಿಜಿಸ್ಟರ್") ನೋಡಿದರೆ, ವ್ಯಾಸಂಗದಲ್ಲಿ ನಿಷ್ಪಕ್ಷಪಾತವಾದ ಶಿಸ್ತು ಏರ್ಪಟ್ಟಿದ್ದುದೂ, ವಿದ್ಯಾರ್ಥಿಗಳಲ್ಲಿ ಅಮಿತವಾದ ಸ್ಪರ್ಧೆ ಮಸಗುತ್ತಿದ್ದುದೂ, ಕೆಲಕೆಲವು ದಿನಗಳಲ್ಲಿ ಮಹಾಸ್ವಾಮಿಯವರು ಅತ್ಯಂತ ಹೆಚ್ಚಾಗಿ ಅಂಕಗಳನ್ನು ಪಡೆದು ಪ್ರಥಮ ಸ್ಥಾನಕ್ಕೆ ಏರದೆಹೋಗಿದ್ದರೂ ಆ ಆ ತಿಂಗಳಿನ ಒಟ್ಟು ಅಂಕಗಳನ್ನು ("ನಂಬರು"ಗಳನ್ನು) ಕೂಡಿದಾಗ ಮಾತ್ರ ಇತರರೆಲ್ಲರಿಗಿಂತಲೂ ಅಧಿಕವಾಗಿ ಅಂಕಗಳನ್ನು ಪಡೆದು ತರಗತಿಯಲ್ಲಿ ಪ್ರಥಮ ಸ್ಥಾನವನ್ನಲಂಕರಿಸುತ್ತಿದ್ದುದೂ ಸ್ಪಷ್ಟವಾಗಿ ವ್ಯಕ್ತವಾಗುತ್ತವೆ. ಭಾಷೆಗಳಲ್ಲಂತೂ ಅವರು ಇತರ ವಿಷಯಗಳಿಗಿಂತ ಹೆಚ್ಚಾಗಿ ಪರಿಶ್ರಮ ಹೊಂದಿ— ತಮ್ಮ ಜೊತೆಯವರಿಗಿಂತ ವಯಸ್ಸಿನಲ್ಲಿ ಚಿಕ್ಕವರಾಗಿದ್ದೂ —ಅತ್ಯಂತ ಹೆಚ್ಚಾಗಿ ಅಂಕಗಳನ್ನು ಪಡೆಯುತ್ತಿದ್ದರು. ಅವರು ಇಂಗ್ಲಿಷ್, ಕನ್ನಡ, ಸಂಸ್ಕೃತ ಮತ್ತು ಉರ್ದು ಭಾಷೆಗಳಲ್ಲಿ ಪ್ರೌಢಿಮೆಯನ್ನು ಪಡೆದಿದ್ದುದಲ್ಲದೆ, ಪಾರ್ಸಿ ಮತ್ತು ತಮಿಳು ಭಾಷೆಗಳಲ್ಲಿ ಸಹ ತಕ್ಕಮಟ್ಟಿಗೆ ಪರಿಶ್ರಮ ಹೊಂದಿದ್ದರು. ಆ ಭಾಷೆಗಳಲ್ಲಿದ್ದ ಉತ್ತಮ ಗ್ರಂಥಗಳನ್ನು ವ್ಯಾಸಂಗಮಾಡಿ ಹರ್ಷಿಸುತ್ತಿದ್ದರು. ವಿಜ್ಞಾನದಲ್ಲಿ ಸಹ (ಎಂದರೆ, "ಸೈನ್ಸ್"ನಲ್ಲಿ ಸಹ), ಅವರಿಗೆ ಬಹಳ ಅಭಿರುಚಿ; ತರಗತಿಯ ಪಾಠಗಳಿಗೆ ಗಮನ ಕೊಡುತ್ತಿದ್ದುದು ಮಾತ್ರವೇ ಅಲ್ಲದೆ, ವಿಜ್ಞಾನ ಸಂಬಂಧ ವಿಚಾರಗಳಲ್ಲಿ ನೂತನ ಸಂಶೋಧನಗಳ ಫಲವಾಗಿ ಪ್ರಕಟವಾದ ಗಹನ ವಿಚಾರಗಳನ್ನೆಲ್ಲ ಶ್ರೀಮಾನ್ ಪಿ. ರಾಘವೇಂದ್ರರಾಯರವರಿಂದ ಅರಿತುಕೊಂಡು ಮನನ ಮಾಡುತ್ತಿದ್ದರು. ಅಷ್ಟು ಚಿಕ್ಕವಯಸ್ಸಿನಲ್ಲೇ ಅವರಿಗಿದ್ದ ಅಭಿಲಾಷೆಗಳಲ್ಲಿ, ಮೈಸೂರು ಸಂಸ್ಥಾನದ ಕೈಗಾರಿಕೆಗಳು ಹೆಚ್ಚಿ, ಪ್ರಜೆಗಳು ಸುಖವಾಗಿರಬೇಕೆಂಬುದೂ ಒಂದು. ಅವರು ಉದ್ಯೋಗಶೀಲರಾಗಿ, "ಫ್ರೆಟ್‌ವರ್ಕ್" ಎಂಬ ಮರಗೆಲಸ ಮುಂತಾದುವುಗಳಲ್ಲಿ ಸಹ ಪ್ರಥಮ ಸ್ಥಾನವನ್ನು ನಿರಂತರವೂ ಪಡೆಯುತ್ತಿದ್ದರು; ನಾನಾ ಕೈಗಾರಿಕೆಗಳ ಮತ್ತು ಯಂತ್ರಗಳ ವಿಚಾರವನ್ನು

ಸಂತತವೂ ತಿಳಿದುಕೊಳ್ಳುತ್ತಿದ್ದ ಉತ್ಸಾಹಿಗಳಾಗಿಯೂ ಇದ್ದರು. ಮಹಾಸ್ವಾಮಿಯವರು ಮರವನ್ನೂ ರಟ್ಟನ್ನೂ ತಗಡನ್ನೂ ತಂತಿಯನ್ನೂ ಉಪಯೋಗಿಸಿ, ತಮ್ಮ ಹದಿನಾಲ್ಕನೆಯ ವಯಸ್ಸಿನಲ್ಲಿ ರೈಲಿನ ಸ್ಟೀಂ ಎಂಜನ್ನಿನ ಮಾದರಿಯೊಂದನ್ನು ರಚಿಸಿದ್ದರು. ಕೇವಲ ಬಾಹ್ಯಾಕೃತಿ ಯಲ್ಲಿ ಮಾತ್ರವೇ ಅಲ್ಲದೆ ಒಳಗಿನ ಯಂತ್ರಭಾಗಗಳು ಕೂಡ ಸಪ್ರಮಾಣ ದಲ್ಲಿ ಸರಿಯಾಗಿರುವಂತೆ ಜೋಡಣೆಗೊಳಿಸಿ ಅದನ್ನು ರಚಿಸಿದ್ದರು. (ಹದಿನಾಲ್ಕು ವರ್ಷಗಳ ಬಾಲಕರ ವಿಚಾರವು ಹಾಗಿರಲಿ. ವಿಜ್ಞಾನ ಕಲಾಶಾಲೆಗಳಲ್ಲಿ ವ್ಯಾಸಂಗ ಮಾಡುವ ಪ್ರೌಢ ತರಗತಿಗಳ ಯುವಕರಲ್ಲಿ ಕೂಡ ಎಷ್ಟು ಮಂದಿಗಳು ಅಂತಹ ಮಾದರಿಯನ್ನು ರಚಿಸಬಲ್ಲರು?) ಅದಲ್ಲದೆ, ಮಹಾಸ್ವಾಮಿಯವರು ಚಿತ್ರಲೇಖನ, ವಿವಿಧಾಕೃತಿ ರಚನಾ ನೈಪುಣ್ಯ, ಮತ್ತು ಹಸ್ತಕೌಶಲ್ಯ— ಇವುಗಳಲ್ಲಿ ಕೂಡ ಪರಿಶ್ರಮವನ್ನು ಪಡೆದಿದ್ದರು. ತೆಳುವಾದ ಮರದ ಹಲಗೆಗಳನ್ನು ಚಿತ್ರವಿಚಿತ್ರವಾದ ಆಕೃತಿ ಗಳಿಗೆ ಕೊರೆದು ನಾನಾ ವಸ್ತುಗಳನ್ನು ರಚಿಸುವ ಕಲೆಯನ್ನು ಕಲಿತು, ಆ ತರಗತಿಯಲ್ಲಿ ಸಹ ಅವರು ಪ್ರಥಮ ಸ್ಥಾನವನ್ನು ಪಡೆದಿದ್ದರು.

ಕುದುರೆ ಸವಾರಿಯಲ್ಲಿ ಸಹ ಅವರು ತಮ್ಮ ಸಹಪಾಠಿಗಳನ್ನು ಮೀರಿಸಿದ್ದರು. ಕೆಲವುವೇಳೆ ಲಗಾಮನ್ನು ಕೂಡ ಕುದುರೆಯ ಕೊರಳಿನ ಮೇಲ್ಭಾಗಕ್ಕೇ ಕಟ್ಟಿ ಸವಾರಿಮಾಡುತ್ತಿದ್ದರು. ಆಗ ತಮ್ಮ ಕೈಯಲ್ಲಿದ್ದ ಚಿಕ್ಕ ಬೆತ್ತದಿಂದ ಕುದುರೆಯ ಕೊರಳನ್ನು ಸ್ಪರ್ಶಿಸಿದ ಮಾತ್ರಕ್ಕೇ ಕುದುರೆಯು ಅವರು ಬಯಸಿದ ಕಡೆಗೆ ತಿರುಗುವಂತೆ ಅದಕ್ಕೆ ಶಿಕ್ಷಣ ಕೊಟ್ಟಿದ್ದರು. ಎಂತಹ ತುಂಟು ಕುದುರೆಯ ಮೇಲಾದರೂ ಸವಾರಿ ಮಾಡುತ್ತಿದ್ದರು. ಎತ್ತರವಾದ ಬೇಲಿಗಳ ಮೇಲೂ, ಆಳವಾದ ಹಳ್ಳಗಳ ಮತ್ತು ಕಮರಿಗಳ ಮೇಲೂ ಕುದುರೆಯನ್ನು ಹಾರಿಸುತ್ತಿದ್ದರು. ಒಂದು ಸಲ ಒಂದು ದೊಡ್ಡ ಬೇಲಿಯ ಮೇಲೆ ಒಂದು ತುಂಟು ಕುದುರೆಯನ್ನು ಹಾರಿಸುವ ಪ್ರಯತ್ನಮಾಡಿ ತಲೆಕೆಳಕಾಗಿ ಬಿದ್ದುಬಿಟ್ಟರು. ಆಗ ಬಹಳ ಪೆಟ್ಟಾದುದನ್ನು ಸಹಿಸಿಕೊಂಡು, ಆ ಬಳಿಕ ಕೆಲವು ದಿನಗಳಮೇಲೆ ಮತ್ತೆ ಬಹಳ ಧೈರ್ಯದಿಂದ ಅದೇ ಪ್ರಯತ್ನವನ್ನು ಕೈಕೊಂಡು ಜಯಶಾಲಿ ಗಳಾದರು. ಕುದುರೆಯ ಮೇಲೆ ಕುಳಿತಾಗ, ಒಂದೊಂದು ಕಡೆಯಲ್ಲಿಯೂ ಮಂಡಿಯಿಂದ ಕುದುರೆಯ ಪಾರ್ಶ್ವವನ್ನು ಅಮುಕಿ ಹಿಡಿದರೆಂದರೆ ಮರ ಸುತ್ತಿನ ಹಿಡಿತದಂತಿರುತ್ತಿದ್ದಿತಂತೆ. ಮಂಡಿಗೂ ಕಾಟರಕ್ಕೂ ನಡುವೆ ಎರಡು ಕಡೆಗೂ ಒಂದೊಂದು ಅರ್ಧಾಣೆ ಬಿಲ್ಲೆಯನ್ನು* ಸಿಕ್ಕಿಸಿಕೊಂಡು

* ಆಗ್ಗೆ ಕಾಲಾಣೆ ನಾಣ್ಯಗಳಿಗಿಂತ ದೊಡ್ಡವಾಗಿದ್ದ ಅರ್ಧಾಣೆ ನಾಣ್ಯಗಳೂ ಇದ್ದುವು.



ಆಳಿದ ಮಹಾಸ್ವಾಮಿಯವರಾದ

**ಶ್ರೀಮನ್ಮಹಾರಾಜ ಶ್ರೀಕೃಷ್ಣರಾಜೇಂದ್ರ ಒಡೆಯರವರು**

ಬೈಸಿಕಲ್ ಸವಾರಿಗೆ ಹೊರಡುತ್ತಿರುವರು

ಮುಂಡಿಗಳನ್ನು ಒತ್ತಿ ಹಿಡಿದು ಅನೇಕ ಮೈಲಿಗಳ ದೂರ ಕುದುರೆಯನ್ನು ಓಡಿಸಿಕೊಂಡು ಬಂದಮೇಲೆ ಸಹ, ಆ ಎರಡು ನಾಣ್ಯಗಳೂ ಮೊದಲಿದ್ದ ಸ್ಥಾನಗಳಲ್ಲೇ ಇದ್ದು, ಮುಂಡಿಗಳ ಹಿಡಿತವನ್ನು ಸಡಲಿಸಿದ ಕೂಡಲೆ ಅವು ಕೆಳಕ್ಕೆ ಬೀಳುತ್ತಿದ್ದುವು. ಒತ್ತಿ ಹಿಡಿದ ಕಾಲುಗಳನ್ನು ಅಲುಗಾಡಿಸದೆ—ಬಾಲಕರು— ಹೀಗೆ ಕುದುರೆ ಸವಾರಿ ಮಾಡುವುದು ಎಷ್ಟು ಕಷ್ಟವೆಂಬುದನ್ನು ಕುದುರೆ ಸವಾರಿಯಲ್ಲಿ ಪರಿಶ್ರಮವಿರುವವರು ಮಾತ್ರವೇ ಗ್ರಹಿಸಬಲ್ಲರು.

ಮಹಾಸ್ವಾಮಿಯವರು ಶ್ರಮಸಹಿಷ್ಣುತೆಯನ್ನು ಬಾಲ್ಯದಿಂದಲೇ ಪಡೆದಿದ್ದರು. ಒಂದು ಸಲ, ನೀಲಗಿರಿಯಲ್ಲಿದ್ದಾಗ ಆಗ್ಗೆ ಉಪಾಧ್ಯಾಯರಲ್ಲೊಬ್ಬರಾಗಿ "ರಾಯಲ್ ಸ್ಕೂಲ್" ಪಾಠಶಾಲೆಯಲ್ಲಿ ಕೆಲಸಮಾಡುತ್ತಿದ್ದವರೊಬ್ಬರು ಮಹಾಶಯರು ಅಪರಾಹ್ನ ನಾಲ್ಕು ಘಂಟೆಯ ಇಳಿಹೊತ್ತಿನಲ್ಲಿ "ಕೇರ್ನ್ ಹಿಲ್" ಗುಡ್ಡಕ್ಕೆ ಹೋಗಿ ಬರಬೇಕೆಂದು ಮಹಾಸ್ವಾಮಿಯವರೊಡನೆಯೂ ಇತರ ವಿದ್ಯಾರ್ಥಿಗಳೊಡನೆಯೂ ಹೊರಟರು. ಅಂದು ಕುದುರೆ ಸವಾರಿಯಿಂದ ಮಹಾಸ್ವಾಮಿಯವರಿಗೆ ಬಹಳ ಆಯಾಸವಾಗಿದ್ದರೂ ಅವರೂ ಹೊರಟೇಬಿಟ್ಟರು. ಇಳಿದು ಇಳಿದು ಸಾಕಾಗಿ, ಕತ್ತಲಾದಮೇಲೆ ಮತ್ತೆ ಮೇಲಕ್ಕೆ ಹತ್ತಿಬರುವಲ್ಲಿ ದಾರಿ ತಪ್ಪಿ ಕಡಿದಾದ ಪ್ರದೇಶಗಳಲ್ಲಿ ಬಂಡೆಯಿಂದ ಬಂಡೆಗೆ ಹತ್ತಿ ಹತ್ತಿ ಎಲ್ಲರೂ ದಣಿದುಹೋದರು. ಇತರ ವಿದ್ಯಾರ್ಥಿಗಳೆಲ್ಲರೂ ಉಪಾಧ್ಯಾಯರೊಡನೆ ತಮ್ಮ ದಣಿವನ್ನೂ ಭಯವನ್ನೂ ಪರಿಪರಿಯಾಗಿ ಹೇಳಿಕೊಳ್ಳುತ್ತಿದ್ದರೂ, ಮಹಾಸ್ವಾಮಿಯವರು ಮಾತ್ರ ಅಸಾಧಾರಣವಾದ ತಾಳ್ಮೆಯಿಂದ ಕೂಡಿ ಮೌನವಾಗಿದ್ದರು. ಅದೇ ದಿನ ಸಾಯಂಕಾಲ ಮೈಸೂರಿನಿಂದ ನೀಲಗಿರಿಗೆ ಬಂದ ಮಹಾಮಾತೃಶ್ರೀಯವರು ಮಕ್ಕಳನ್ನು ಕಾಣದೆ ಕಳವಳಪಟ್ಟು ಲಾಂದ್ರಗಳೊಡನೆ ಕಳುಹಿಸಿದ ಆಳುಗಳು ಹುಡುಕಿ ಹುಡುಕಿ ಸಾಕಾಗಿ ಹಿಂತಿರುಗುವ ಹೊತ್ತಿಗೆ ಮಹಾಸ್ವಾಮಿಯವರೂ ಇತರರೂ ಅರಮನೆಗೆ ದಯಮಾಡಿ ಹರ್ಷವನ್ನುಂಟುಮಾಡಿದರು. ನೀಲಗಿರಿಯ ಅರಮನೆಯಿಂದ ಸುಮಾರು ಇಪ್ಪತ್ತು ಮೈಲಿಗಳ ದೂರವಿರುವ ಮುಕುರ್ತಿ ಬೆಟ್ಟಕ್ಕೆ ಒಂದು ಸಲ ಪ್ರಯಾಣ ಬಳೆಯಿತು. ಮಲಗಿರುವ ರಾಕ್ಷಸನ ಮೂಗಿನಂತಿರುವುದೆಂಬ ಕಾರಣವನ್ನು ಕಲ್ಪಿಸಿ ಜನರು ಮುಕುರ್ತಿ ಬೆಟ್ಟವೆಂದು ಹೆಸರಿಟ್ಟಿರುವ ಆ ಬೆಟ್ಟಕ್ಕೆ ಹೋಗಬೇಕಾದರೆ, ಹತ್ತು ಮೈಲಿಗಳ ದೂರ ಮಾತ್ರ ಕುದುರೆಯ ಮೇಲೆ ಕುಳಿತು ಸವಾರಿ ಮಾಡಿಕೊಂಡು ಹೋಗಬಹುದು. ಉಳಿದ ಹತ್ತು ಮೈಲಿಗಳ ದೂರ ನಡೆದುಕೊಂಡುಹೋಗಿ ಆಮೇಲೆ ಬೆಟ್ಟ

ವನ್ನು ಹತ್ತಬೇಕು. ಮಹಾಪ್ರಭುಗಳವರೂ ಅವರ ಜೊತೆಯವರೂ ಆಹಾರ ಸಾಮಗ್ರಿಗಳನ್ನೂ, ನೀರು ಮುಂತಾದ ಪಾನೀಯಗಳ ಕೂಜಾ ಗಳನ್ನೂ ಹಿಡಿದುಕೊಂಡು ಬೆಟ್ಟವನ್ನು ಹತ್ತಬೇಕಾಯಿತು. ಕೆಲವರು ಹತ್ತಲಾರದೆ ಬಳಲಿಹೋದರು. ಆಗ ಮಹಾಸ್ವಾಮಿಯವರು, "ತನ್ನಿ, ತನ್ನಿ, ನಾನು ತಂದುಕೊಡುತ್ತೇನೆ. ನೀವು ಹೊರೆಯಿಲ್ಲದೆ ಹತ್ತಿಬನ್ನಿ" ಎಂದು ಹೇಳಿ, ತಾವು ಹಿಡಿದಿದ್ದ ಸಾಮಾನುಗಳ ಜೊತೆಗೆ ಅವರು ಹಿಡಿದಿದ್ದುವುಗಳನ್ನೂ ತೆಗೆದುಕೊಂಡು ಇತರರೆಲ್ಲರಿಗಿಂತ ಮುಂಚಿತ ವಾಗಿಯೇ ಬೆಟ್ಟದ ಮೇಲಕ್ಕೆ ಹತ್ತಿಹೋದರು.

ಹನ್ನೊಂದು ವರ್ಷ ವಯಸ್ಸಾಗಿದ್ದಾಗಲೇ ಮಹಾಸ್ವಾಮಿಯವರ ಮನಸ್ಸಿನಲ್ಲಿ, ಸರ್ವವ್ಯಾಪಕನಾದ ಪರಮೇಶ್ವರನು ರಕ್ಷಕನಾಗಿರುವುದ ರಿಂದ ಭೀತಿಗೇ ಅವಕಾಶವಿಲ್ಲವೆಂಬ ಅಚಲವಾದ ಶ್ರದ್ಧೆಯು ಮೂಡಿದ್ದಿತು. ಒಂದು ದಿನ, ಅವರ ಪರಿವಾರಕ್ಕೆ ಸೇರಿದ್ದ ಸಣ್ಣ ಅಧಿಕಾರಿಯವರೊಬ್ಬರು, "ತಮಗೊಂದು ಉಪಕಾರ ಮಾಡಬೇಕಾಗಿದೆ. ಹೋಗೋಣ, ಬನ್ನಿ, ಮಹಾಸ್ವಾಮಿ" ಎಂದು ಹೇಳಿ ಅವರನ್ನು ಬಂಡಿಯಲ್ಲಿ ಕುಳ್ಳಿರಿಸಿಕೊಂಡು ಮೈಸೂರು ನಗರದಿಂದ ಸುಮಾರು ಮೂರು ಮೈಲಿಗಳ ದೂರವಿರುವ ಶಿದ್ದಲಿಂಗಪುರದ ಶಿವದೇವಾಲಯಕ್ಕೆ ಚೆನ್ನಾಗಿ ಕತ್ತಲಾಗುವ ವೇಳೆಗೆ ಕರೆದುಕೊಂಡುಹೋದರು. "ದೇವರ ಧ್ಯಾನ ಮಾಡಿ, ಸ್ತೋತ್ರ ಹೇಳಿ ದಯಮಾಡಿ" ಎಂದು ಹೇಳಿ ಆಳಿನ ಸಂಗಡ ಅವರನ್ನು ದೇವಾಲಯಕ್ಕೆ ಕಳುಹಿಸಿ ತಾವು ಸ್ವಲ್ಪ ದೂರದಲ್ಲಿ ಹೊರಗೇ ಉಳಿದರು. ಆಳು ಮೇಣದ ಬತ್ತಿಯೊಂದನ್ನು ಹೊತ್ತಿಸಿ ಅವರನ್ನು ಕರೆದುಕೊಂಡುಹೋದ ಬಳಿಕ, ಅವರು ಶಿವಸ್ತೋತ್ರದ ಶ್ಲೋಕಗಳನ್ನು ಹೇಳುತ್ತ, ಉತ್ಸಾಹಭರದಲ್ಲಿ ಮೈಮರೆತು ನಿಂತರು. ಅವರಿಗೆ ಗೊತ್ತಿಲ್ಲದಹಾಗೆ ಮೊದಲೇ ಆಗಿದ್ದ ಸಂಕೇತದಂತೆ ಆ ಆಳು ಮೇಣದ ಬತ್ತಿಯನ್ನು ತಾನೇ ಆರಿಸಿ, ಅದು ಗಾಳಿಗೆ ಆರಿಹೋದಂತೆ ನೆವ ಹೇಳಿ ಅದನ್ನು ಹೊತ್ತಿಸಿಕೊಂಡುಬರು ವುದಕ್ಕೆಂದು ಹೊರಗೆ ಹೋದವನು ಮತ್ತೆ ಬರಲೇ ಇಲ್ಲ. ಮಹಾಸ್ವಾಮಿ ಯವರು ಸ್ತೋತ್ರಗಳನ್ನೆಲ್ಲ ಹೇಳಿ ಮುಗಿಯಿಸಿ ಶಿವಲಿಂಗಕ್ಕೆ ನಮಸ್ಕಾರ ಮಾಡಿ ದೇವಾಲಯವನ್ನು ಬಿಟ್ಟು ಹೊರಕ್ಕೆ ದಯಮಾಡಿದರು. ಆ ವೇಳೆಗೆ ಕುದುರೆ ಬಂಡಿಯೂ ಅಲ್ಲಿಂದ ಹೊರಟೇಹೋಗಿದ್ದಿತು. ಅತ್ತ ಅರಮನೆ ಯಲ್ಲಿ ಆರೋಗಣೆಯ ವೇಳೆಯೂ ಮೀರಿತು; ಮಹಾಸ್ವಾಮಿಯವರಿರಲಿಲ್ಲ. ಮಹಾಮಾತೃಶ್ರೀಯವರು ವಿಚಾರಣೆ ಮಾಡಿದಾಗ ಅದಕ್ಕೆ ಕಾರಣರಾದ ಅಧಿಕಾರಿಯು, "ಹಸ್ತಾವಧಾನ ಪಾದಾವಧಾನದಲ್ಲಿದ್ದರೆ ಧೈರ್ಯ

ಬರುವುದಿಲ್ಲವೆಂದು ಯೋಚಿಸಿ ಮಹಾಸ್ವಾಮಿಯವರಿಗೆ ಧೈರ್ಯಬರುವಂತೆ ಮಾಡಲು'' ತಾವು ಕೈಕೊಂಡ ಕ್ರಮವನ್ನು ಅರಿಕೆ ಮಾಡಿದರು. ಕೃಷ್ಣ ಪಕ್ಷದ ಕಗ್ಗತ್ತಲಿನ ರಾತ್ರಿಯಲ್ಲಿ ಹನ್ನೊಂದು ವರ್ಷ ವಯಸ್ಸಿನ ಬಾಲಕರ ವಿಷಯದಲ್ಲಿ ಹಾಗೆ ಮಾಡಿದುದಕ್ಕಾಗಿ ಮಹಾಮಾತೃಶ್ರೀಯವರಿಗೆ ಅಸಮಾಧಾನವಾಯಿತು. ಲಾಂದ್ರಗಳೊಡನೆ ಕುದುರೆ ಬಂಡಿಯನ್ನು ತೆಗೆಯಿಸಿಕೊಂಡುಹೋದ ಜನರು ನಗರದಿಂದಾಚೆಗೆ ಸ್ವಲ್ಪ ದೂರ ಹೋದ ಮೇಲೆ, ಮಹಾಸ್ವಾಮಿಯವರು ಪುಟ್ಟ ಪುಟ್ಟ ಹೆಜ್ಜೆಗಳನ್ನಿಟ್ಟುಕೊಂಡು ಮೃತ್ಯುಂಜಯ ಸ್ತೋತ್ರವನ್ನು ಹೇಳುತ್ತ ಬರುತ್ತಿದ್ದುದನ್ನು ಕಂಡರು. ಅರಮನೆಗೆ ಸವಾರಿ ಚಿತ್ತೈಸಿದಮೇಲೆ ಮಹಾಮಾತೃಶ್ರೀಯವರು, "ಅಯ್ಯಾಜಿ! ಭಯವಾಗಲಿಲ್ಲವೆ? ನಿಮಗೆ ಹೀಗೆ ಅಪಕಾರಮಾಡಿದವರನ್ನು ಇನ್ನು ಕೆಲಸದಲ್ಲಿಡುವುದಿಲ್ಲ'' ಎಂದರು. ಆಗ ಮಹಾಸ್ವಾಮಿಯವರು, "ಅಮ್ಮಯ್ಯ, ಹಾಗೆಮಾತ್ರ ಮಾಡಬೇಡಿ. ಅವರು ನನಗೊಂದು ಉಪಕಾರ ಮಾಡುವುದಾಗಿ ಹೇಳಿ ಕರೆದುಕೊಂಡು ಹೋದರು. ನಾನು ಹೆದರುವೆನೋ ಏನೋ ಎಂಬುದನ್ನು ಪರೀಕ್ಷಿಸಲು ಹಾಗೆ ಮಾಡಿರಬೇಕು'' ಎಂದರು. ಮಹಾಮಾತೃಶ್ರೀಯವರು, "ನಿಮಗೆ ಭಯವಾಗಲಿಲ್ಲವೆ? ಅಲ್ಲಿ ಹಾವಿನ ಕಾಟ. ಹಾವುಗಳು ಬಂದಿದ್ದರೇನು ಗತಿ?'' ಎಂದು ಕೇಳಿದಾಗ ಮಹಾಸ್ವಾಮಿಯವರು, "ಭಯವಾಗಲಿಲ್ಲ. ಬೆಳಕು ಕಡಮೆಯಾಗಿದ್ದ ಮಾತ್ರವೇ ಭಯವೇಕೆ? ಮೃತ್ಯುಂಜಯ ಸ್ತೋತ್ರ ಹೇಳುತ್ತಿದ್ದೆ. ನಿನ್ನೆ ಶಾಸ್ತ್ರಿಗಳು ಹೇಳಿಯೇ ಇದ್ದರು; ಶಿವನೇ ರಕ್ಷಕ, ಶಿವನೇ ಸರ್ವವೂ ಎಂತ. ಶಿವನು ಕಾವಲು ನೋಡಿಕೊಂಡಮೇಲೆ ಹಾವು ಚೇಳುಗಳು ಬರುವ ಬಗೆ ಹೇಗೆ?'' ಎಂದರು. ಮಹಾಮಾತೃಶ್ರೀಯವರು ಆನಂದಬಾಷ್ಪದೊಡನೆ ಮಗನನ್ನು ಆಲಿಂಗಿಸಿ, "ಈ ಭಕ್ತಿ ಸರ್ವದಾ ಶಾಶ್ವತವಾಗಿರಲಿ, ಅಯ್ಯಾಜಿ'' ಎಂದು ಹರಸಿದರು.

ಅಪಾಯಗಳು ಸನ್ನಿಹಿತವಾದಾಗಿನ ಸನ್ನಿವೇಶಗಳಲ್ಲಿ ಕೂಡ, ಮಹಾಪ್ರಭುಗಳು ಧೈರ್ಯ ಸ್ಥೈರ್ಯಗಳಿಂದ ಕೂಡಿ ಪ್ರಶಾಂತರಾಗಿಯೇ ಇರುತ್ತಿದ್ದರು. ಕೇವಲ ಹತ್ತನೆಯ ವರ್ಷ ವಯಸ್ಸಿನಿಂದ ಹದಿಮೂರನೆಯ ವರ್ಷ ವಯಸ್ಸಿನವರೆಗಿನ ಅವಧಿಯಲ್ಲಿ ನಡೆದ ಮೂರು ಘಟನೆಗಳನ್ನು ಇದಕ್ಕೆ ಉತ್ತಮ ನಿದರ್ಶನಗಳನ್ನಾಗಿ ಸೂಚಿಸಬಹುದಾಗಿದೆ: ಶ್ರೀ ಚಾಮರಾಜೇಂದ್ರ ಒಡೆಯರವರು ಕುಟುಂಬ ಪರಿವಾರ ಸಮೇತರಾಗಿ ೧೮೯೩ನೆಯ ಇಸವಿಯಲ್ಲಿ ಮುಂಬಯಿ ನಗರಕ್ಕೆ ದಯಮಾಡಿದ್ದರು.

ಆಗ್ಗೆ ಶ್ರೀಮಾನ್ ಅಂಬಿಲ್ ನರಸಿಂಹ ಐಯಂಗಾರ್ಯರವರು ಪುಟ್ಟ ಮಹಾಸ್ವಾಮಿಯವರನ್ನೂ, ಅವರ ಜೊತೆಯ ವಿದ್ಯಾರ್ಥಿಗಳನ್ನೂ "ಎಲಿಫ್ಯಾಂಟಾ" ಗುಹೆಗೆ ಕರೆದುಕೊಂಡು ಹೋಗುವುದಕ್ಕಾಗಿ ದೋಣಿಯಲ್ಲಿ ಕುಳ್ಳಿರಿಸಿದರು. ಅಲ್ಲಿಗೆ ಹೋಗಿ ಬರುವಾಗ್ಗೆ ಸಮುದ್ರದ ಅಲೆಗಳ ರಭಸಕ್ಕೆ ದೋಣಿಯು ಬಹಳವಾಗಿ ಆಂದೋಳಿತವಾಗಲುಪಕ್ರಮಿಸಿತು. ಅದುವರೆಗೆ ಎಂದೂ ದೋಣಿಯಲ್ಲಿ ಕುಳಿತಿಲ್ಲದಿದ್ದ ಬಾಲಕನೊಬ್ಬನು ವಿಶೇಷವಾಗಿ ಭಯಪಟ್ಟು, "ಅಯ್ಯೋ ಹೋದೆ, ಹೋದೆ" ಎಂದು ಕೂಗಿಕೊಂಡಾಗ ಆತನಿಗಿಂತಲೂ ವಯಸ್ಸಿನಲ್ಲಿ ಕಿರಿಯರಾಗಿ ಆತನಂತೆಯೇ ಅದೇ ದಿನ ಮೊಟ್ಟಮೊದಲು ದೋಣಿಯಲ್ಲಿ ಕುಳಿತಿದ್ದ ಮಹಾಸ್ವಾಮಿಯವರೂ ಅವರ ಸೋದರರೂ ಒಡನೆಯೇ ಒಂದೇ ಉಸಿರಿನಲ್ಲಿ "ನಾವಿದ್ದೇವೆ, ನಾವಿದ್ದೇವೆ. ಹೆದರಬೇಡ" ಎಂದರು. ಅದನ್ನುಕಂಡು ಶ್ರೀಮಾನ್ ಅಂಬಿಲ್ ನರಸಿಂಹ ಐಯಂಗಾರ್ಯರು ಕೂಡ ಬೆರಗಾದರು. ಅಂಬಿಗರ ಬುದ್ಧಿವಂತಿಕೆಯಿಂದಲೂ ಸಾಹಸದಿಂದಲೂ ದೋಣಿಯಲ್ಲಿದ್ದವರೆಲ್ಲರೂ ಅಪಾಯದಿಂದ ಪಾರಾದರು. ಆ ಬಳಿಕ ಮೂರು ನಾಲ್ಕು ವರ್ಷಗಳ ತರುವಾಯ, ಒಂದು ದಿನ ಹೆಜ್ಜೇನುಗಳು ಓಡಿಸಿಕೊಂಡು ಕಡಿಯಲು ಬಂದಾಗ ಜನರೆಲ್ಲರೂ ಹಾಹಾಕಾರ ಮಾಡುತ್ತ ಚದರಿ ಮನಸ್ವಿಯಾಗಿ ನುಗ್ಗಿದರೂ ಮಹಾಸ್ವಾಮಿಯವರು ಶಾಂತಚಿತ್ತರಾಗಿಯೇ ಇದ್ದು ಸರಸರನೆ ತ್ರಿನಯನೇಶ್ವರ ದೇವಾಲಯವನ್ನು ಪ್ರವೇಶಿಸಿದರು. ಅಲ್ಲಿ ಒಂದೆರಡು ಘಂಟೆಗಳಕಾಲ ವಿಶ್ರಮಿಸಿಕೊಂಡು ಅರಮನೆಗೆ ಹಿಂತಿರುಗಿದ ಬಳಿಕ ಜೇನು ನೊಣಗಳು ಕಡಿದಿದ್ದ ಗಾಯಗಳಿಗೆ ಚಿಕಿತ್ಸೆ ನಡೆಯಿತು. ಒಂದು ಸಲ, ನೀಲಗಿರಿಯಲ್ಲಿದ್ದಾಗ, ಮಹಾಪ್ರಭುಗಳು ಶ್ರೀಮಾನ್ ಕ್ಯಾಂಬೆಲ್ ಸಾಹೇಬರವರೊಡನೆಯೂ ಅವರ ಮಗನೊಡನೆಯೂ ನಾಲ್ಕು ಅಶ್ವಗಳನ್ನು ಕಟ್ಟಿದ್ದ ರಥದೊಳಗೆ ಕುಳಿತು ಚಿತ್ತೈಸುತ್ತಿದ್ದಾಗ್ಗೆ ಮಳೆ ಬಂದು ಸಿಡಿಲು ಹೊಡೆಯಿತು. ಆಗ್ಗೆ ಒಂದು ದೊಡ್ಡ ಯೂಕ್ಲಿಪ್ಟಸ್ ಮರವು ಧಗ್ಗನೆ ಹೊತ್ತಿಕೊಂಡು ಉರಿಯತೊಡಗಿತು. ಚಕ್ರವು ಒಂದು ಉರುಳಿನಷ್ಟು ದೂರ ಹಿಂದಿದ್ದ ಪಕ್ಷಕ್ಕೆ ಸಿಡಿಲಿಗೆ ಸಿಕ್ಕಬೇಕಾಗಿದ್ದ ಸನ್ನಿವೇಶದಿಂದ ಪಾರಾದ ಸಂದರ್ಭವದು. ಆಗಲೂ ಮಹಾಸ್ವಾಮಿಯವರು ಉದ್ವೇಗಹೊಂದದೆ ಸಮಚಿತ್ತರಾಗಿದ್ದುದನ್ನು ಕಂಡು ಶ್ರೀಮಾನ್ ಕ್ಯಾಂಬಲ್ ಸಾಹೇಬರು ಆಶ್ಚರ್ಯಭರಿತರಾದರು. ಅಂದು ಅವರೆಲ್ಲರೂ ಮೃತ್ಯುವಿನ ಕರಾಳದಂಷ್ಟ್ರದಿಂದ ಪಾರಾದರೆಂದು ಧಾರಾಳವಾಗಿ ಹೇಳಬಹುದು.

**ಶ್ರೀ ಜಯಲಕ್ಷ್ಮಮ್ಮಣ್ಣಿ ಯವರ ವಿವಾಹ ಮಹೋತ್ಸವ**

ಮಹಾಸ್ವಾಮಿಯವರ ಜ್ಯೇಷ್ಠ ಸಹೋದರಿಯವರಾದ ಶ್ರೀ ಜಯಲಕ್ಷ್ಮಮ್ಮಣ್ಣಿಯವರಿಗೂ, ಶ್ರೀಮಾನ್ ಕಾಂತರಾಜ ಅರಸಿನವರಿಗೂ ೧೮೯೭ನೆಯ ಇಸವಿಯ ಫೆಬ್ರವರಿ ತಿಂಗಳು ವಿವಾಹ ಮಹೋತ್ಸವವು ನೆರವೇರಿ ಮೈಸೂರು ಸಂಸ್ಥಾನದ ಹೊರಗಿನಿಂದಲೂ, ಮೈಸೂರು ಸಂಸ್ಥಾನದ ನಾನಾ ಪ್ರದೇಶಗಳಿಂದಲೂ ಬಂದಿದ್ದ ಮಾನ್ಯ ಅತಿಥಿಗಳೂ, ಮೈಸೂರು ನಗರ ನಿವಾಸಿಗಳೂ ಆನಂದಪಟ್ಟರು.

**ಅಗ್ನಿಯ ಅನಾಹುತ**

ಆದರೆ, ವಿವಾಹ ಸಂಬಂಧವಾದ ಬೀಗರ ಉರುಟಣೆ ಮುಂತಾದ ಉತ್ಸವಗಳೆಲ್ಲ ಪೂರೈಸುವುದಕ್ಕಿಂತ ಮುಂಚಿತವಾಗಿ ಅರಮನೆಯು ಅಗ್ನಿದಗ್ಧವಾದ ಅನಾಹುತವು ಒದಗಿ ಸಮಸ್ತರಿಗೂ ಹೃದಯವೇದನೆಯನ್ನುಂಟುಮಾಡಿತು. ಅರಮನೆಯ ಅವ್ವೆಯರ ಅಜಾಗರೂಕತೆಯಿಂದ ವಿವಾಹ ಮಂಟಪವು ಹೊತ್ತಿಕೊಂಡಕಾರಣ, ಅದರ ದೆಸೆಯಿಂದ ಅರಮನೆಯ ಕಟ್ಟಡಕ್ಕೆ ಉರಿಯು ವ್ಯಾಪಿಸಿತು. ಫೆಬ್ರವರಿ ೨೮ನೆಯ ತಾರೀಖು ಭಾನುವಾರದ ದಿನ ವ್ಯಾಪಿಸಿದ ಬೆಂಕಿಯ ಜ್ವಾಲೆಯಿಂದ, ಅರಗು ಮೆರುಗೆಣ್ಣೆಗಳಿಂದ ಕೂಡಿದ್ದ ಮರದ ತೊಲೆಗಳೇ ಮುಂತಾದ ನಾನಾ ಭಾಗಗಳೂ ಧಗಧಗನೆ ಉರಿಯಲಾರಂಭವಾದುವು; "ಬೆಂಕಿ, ಬೆಂಕಿ; ನೀರು, ನೀರು" ಎಂಬ ಕೂಗಿಗೆ ಪ್ರಾರಂಭವಾಗಿ ಅರಮನೆಯ ಅಧಿಕಾರಿಗಳೂ ದಿವಾನ್‌ರವರೇ ಮುಂತಾದ ಅಧಿಕಾರಿಗಳೂ ಅಗ್ನಿಜ್ವಾಲೆಯನ್ನಾರಿಸಲು ಮಾಡಿಸಿದ ಸಮಸ್ತ ಪ್ರಯತ್ನಗಳೂ ವಿಫಲವಾದುವು. ಸೂಪರಿಂಟೆಂಡಿಂಗ್ ಇಂಜನಿಯರವರಾಗಿದ್ದ ಶ್ರೀಮಾನ್ ಮೆಕಚಿನ್ ಸಾಹೇಬರವರ ಕೈಕೆಳಗೆ ಶ್ರೀಮಾನ್ ಅಟ್ಟಾಚಿ ವೆಂಕಟರಾಯರವರೂ, ಈಚೆಗೆ ದಿವಂಗತರಾದ ಶ್ರೀಮಾನ್ ಚೆಂಗಯ್ಯ ಶೆಟ್ಟಿಯವರೂ ಮತ್ತು ಮೈಸೂರು ತಾಲ್ಲೂಕಿನ ಆಗಿನ ಅಮಲ್ದಾರರವರೂ ಬೆಂಕಿಯನ್ನಾರಿಸುವ ಉದ್ಯಮವನ್ನು ಹಿಡಿದರು. ಆದರೆ ವಿಧಿಯೇ ಪ್ರತಿಕೂಲವಾದಾಗ ಮನುಷ್ಯ ಪ್ರಯತ್ನಕ್ಕೆ ಹೇಗೆತಾನೆ ಫಲವಾದೀತು? ನೀರನ್ನೆರಚಲು ನೋಡುವ ವೇಳೆಗೆ ಆ ದಿನ ನಲ್ಲಿಗಳಲ್ಲಿ ನೀರೇ ಇರಲಿಲ್ಲ. ನಲ್ಲಿಗಳಿಗೆ ನೀರನ್ನೊದಗಿಸುವ ಯಂತ್ರಗಳು ಕೆಟ್ಟುಹೋಗಿದ್ದುದೇ ಅದಕ್ಕೆ ಕಾರಣ. ಜನರು ವಿಫಲಮನೋರಥರಾಗಿ ದೊಡ್ಡಕೆರೆಯ ಕೆಸರನ್ನು ತಂದು ಎರಚಿದರು.

ಅಗ್ನಿಜ್ವಾಲೆಯು ಹೆಚ್ಚುತ್ತಬಂದುದನ್ನು ಕಂಡು, ಶ್ರೀ ಮಹಾರಾಣಿ ರೀಜೆಂಟರವರ ಪ್ರೈವೇಟ್ ಸೆಕ್ರೆಟರಿಯವರಾಗಿದ್ದ ಶ್ರೀಮಾನ್ ಕ್ಯಾಂಬೆಲ್ ಸಾಹೇಬರವರೂ, ಶ್ರೀಮಾನ್ ಫ್ರೇಸರ್ ಸಾಹೇಬರವರೂ, ಶ್ರೀಮಾನ್ ಕಾಂತರಾಜ ಅರಸಿನವರೂ, ಶ್ರೀಮಾನ್ ದೇಶರಾಜ ಅರಸಿನವರೂ ಮತ್ತು ರಾಜಸೇನಾಭೂಷಣ ಶ್ರೀಮಾನ್ ಬಕ್ಷಿ ಬಸವಪ್ಪಾಜಿ ಅರಸಿನವರೂ, ಇತರ ಅಧಿಕಾರಿಗಳೂ ಮಹಾಮಾತೃಶ್ರೀಯವರನ್ನೂ ಮಕ್ಕಳನ್ನೂ ಜಗನ್ಮೋಹನ ಪ್ರಾಸಾದಕ್ಕೆ ಕಳುಹಿಸಿ, ಕರ್ಣಾಟಕ ರತ್ನ ಸಿಂಹಾಸನ, ವೈರಮುಡಿ, ಪಟ್ಟದಕತ್ತಿ, ಚಾಮರಾಜಮುಡಿ, ಮುಂತಾದ ಪವಿತ್ರ ವಸ್ತುಗಳನ್ನೆಲ್ಲ ಮೊದಲು ಅರಮನೆಯಿಂದ ಸಾಗಿಸಿದರು. ಎರಡು ಮೂರು ಘಂಟೆಗಳ ಕಾಲದೊಳಗಾಗಿ ಉರಿಯು ದಕ್ಷಿಣದಲ್ಲಿ ಅಂಬಾ ವಿಲಾಸದ ಕಡೆಗೂ, ಉತ್ತರದಲ್ಲಿ ರಾಗಮಾಲು ಮಹಲು, ಸರಸ್ವತೀ ಭಂಡಾರ, ಆಯುಧಶಾಲೆಗಳ ಕಡೆಗೂ ವ್ಯಾಪಿಸಿತು. ಅಲ್ಲಿಂದ ಉರಿಯು ಸೀತಾವಿಲಾಸ, ರಮಾವಿಲಾಸ ಮುಂತಾದ ತೊಟ್ಟಿಗಳ ಕಡೆಗೆ ವ್ಯಾಪಿಸಿತು. ಸಹಸ್ರಾರು ಜನರು ಪ್ರಯತ್ನಿಸಿ ರತ್ನಾಭರಣಗಳನ್ನೂ ದಿವ್ಯದುಕೂಲ ಗಳನ್ನೂ ಅಮೂಲ್ಯ ವಸ್ತುಗಳನ್ನೂ ಅರಮನೆಯಿಂದ ಹೊರಕ್ಕೆ ತಂದು ಬಯಲಿನಲ್ಲಿ ರಾಶಿಹಾಕುವುದಕ್ಕೆ ಪ್ರಾರಂಭಿಸಿದರು. ಚಿನ್ನ ಬೆಳ್ಳಿಯ ಸಾಮಾನುಗಳೂ, ಅನರ್ಘ್ಯವಾದ ರತ್ನಾಭರಣಗಳೂ, ಥಳಥಳಿಸುತ್ತಿದ್ದ ಮುತ್ತಿನ ಕಂಠಿಗಳೂ, ಕಂಠೀರವ ನರಸರಾಜ ಒಡೆಯರವರ ಕತ್ತಿಗಳೂ, ವಿಕ್ಟೋರಿಯಾ ಮಹಾರಾಣಿಯವರು ಶ್ರೀ ಮುಮ್ಮಡಿ ಕೃಷ್ಣರಾಜ ಒಡೆಯ ರವರಿಗೆ ಕಳುಹಿಸಿದ್ದ ಬಂಗಾರದ ಬಂದೂಕ ಮತ್ತು ಬಂಗಾರದ ಒರೆಯ ಕತ್ತಿ ಮುಂತಾದುವುಗಳೂ, ರಾಶಿ ರಾಶಿ ಸುವಸ್ತುಗಳೂ, ಅಸ್ತವ್ಯಸ್ತವಾಗಿ ಬಿದ್ದಿದ್ದುವು. ಮೂರನೆಯ ದಿನ ಮಧ್ಯರಾತ್ರಿಯಲ್ಲಿ ಅರಮನೆಯ ಪಂಚ ಕಲಶಗಳು ಬಿದ್ದಾಗ ಅರಮನೆಯ ಮುಂದೆ ನೆರೆದಿದ್ದ (ಎರಡು ಸಾವಿರಗಳಿ ಗಿಂತಲೂ ಅಧಿಕ ಸಂಖ್ಯೆಯ) ಪ್ರಜೆಗಳೆಲ್ಲ ರೋದಿಸಿದರು. ಕುದುರೆ ತೊಟ್ಟಿ, ಕನ್ನಡಿ ತೊಟ್ಟಿ, ಸರಸ್ವತೀ ಭಂಡಾರ ಮತ್ತು ಮದನವಿಲಾಸ ತೊಟ್ಟಿಯ ಕೆಲಕೆಲವು ಭಾಗಗಳೂ, ಬಾಲಾಖಾನೆ, ಅಂಬಾವಿಲಾಸ, ರಮಾವಿಲಾಸ, ಸೆಜ್ಜೆ ಮುಂತಾದುವುಗಳೂ ಅಗ್ನಿದಗ್ಧವಾಗಿ ಅಪಾರವಾದ ನಷ್ಟವುಂಟಾಯಿತು. ಬೆಂಗಳೂರಿನಿಂದ ಸೈನಿಕರು ತಂದ ಬೆಂಕಿಯ ನ್ನಾರಿಸುವ ಯಂತ್ರಗಳ ಸಹಾಯದಿಂದ ಸಹಸ್ರಾರು ಮಂದಿಗಳು ಶ್ರಮ ವಹಿಸಿ ಉರಿಯನ್ನಾರಿಸಿದರು. ಅರಮನೆಗೆ ಬೆಂಕಿ ಹೊತ್ತಿದುದಕ್ಕೆ ಕಾರಣಗಳೇನೆಂಬುದನ್ನು ವಿಚಾರಮಾಡಿ ವರದಿಯನ್ನೊಪ್ಪಿಸಲು ಒಂದು

ಸಮಿತಿಯು ನೇಮಕವಾಗಿ, ಅವ್ವೆಯರು ಪ್ರಮಾದವಶದಿಂದ ಕೆಂಡ ಗಳಿದ್ದ ಬೂದಿಯನ್ನು ಎರಚಿದ ಅಜಾಗರೂಕತೆಯೇ ಅದಕ್ಕೆ ಕಾರಣ ವೆಂದು ಗೊತ್ತಾಯಿತು. ಮುಂದೆ ಯಥಾಕಾಲದಲ್ಲಿ ಈಗಿನ ಹೊಸ ಅರಮನೆಯ ಕಟ್ಟಡವು ನಿರ್ಮಿತವಾಗಲು ಪ್ರಾರಂಭವಾಯಿತು.

ಅರಮನೆಯು ಉರಿಯುತ್ತಿದ್ದಾಗ, ಮಹಾಪ್ರಭುಗಳವರು (ಹದಿಮೂರೇ ವರ್ಷ ವಯಸ್ಸಿನವರಾಗಿದ್ದೂ) ಚಿತ್ತ ದಮನದಿಂದ ಕೂಡಿ ಮಹಾಮಾತೃಶ್ರೀಯವರಿಗೂ ಸೋದರ ಸೋದರಿಯರಿಗೂ ಸಮಾಧಾನ ಹೇಳುತ್ತ ತಮ್ಮ ಮನಸ್ಸಿಗೆ ಖೇದವೇ ಇರಲಿಲ್ಲವೋ — ಎಂದು ತೋರುವ ಮಟ್ಟಿಗೆ ನಿರುದ್ವಿಗ್ನಮನಸ್ಕರಾಗಿ ವರ್ತಿಸಿದರು. ಅರಮನೆಗೆ ಬೆಂಕಿ ಹೊತ್ತಿದ ಮಾರನೆಯ ದಿನ ಅವರು ಅಶ್ವಾರೂಢರಾಗಿ ಪ್ರಾತಃಕಾಲ ಆರ ಘಂಟೆಗೆ ಅರಮನೆಯ ಬಳಿಗೆ ದಯಮಾಡಿದರು. ಆಗ ಹಲವರು ಸೇವ ಕರು ಬಿಕ್ಕಿ ಬಿಕ್ಕಿ ಅಳುತ್ತಿದ್ದುದನ್ನೂ, ಮುಸಲ್ಮಾನ್ ಮತದ ವೃದ್ಧ ಸೇವಕ ನೊಬ್ಬನು ಶ್ರೀ ಚಾಮರಾಜೇಂದ್ರ ಒಡೆಯರವರಿಗೆ ತಾನು ಸೇವೆಯನ್ನು ಸಮರ್ಪಿಸಿದ್ದ ಅರಮನೆಯು ಉರಿದುಹೋಯಿತೆಂದು ಪ್ರಲಾಪಿಸುತ್ತ ಗೋಳಿಡುತ್ತಿದ್ದುದನ್ನೂ ಕಂಡು, ಅವರು ತಮ್ಮ ಮನಸ್ಸಿನ ವಿಷಾದವನ್ನು ದಮನಮಾಡಿ ನಿಟ್ಟುಸಿರುಬಿಟ್ಟು, "ಜೀವನದಲ್ಲಿ ಬೇವು ಬೆಲ್ಲ — ಎರಡೂ ಉಂಟು. ದೇವರ ದಯದಿಂದ ಎಲ್ಲವೂ ಸರಿಹೋಗುವುದು. ಬಂದದ್ದ ನ್ನೆಲ್ಲಾ ಅನುಭವಿಸಲೇಬೇಕು. ಅಳಬೇಡಿ. ಸುಮ್ಮನಿರಿ" ಎಂದು ಅವರೆಲ್ಲರಿಗೂ ಸಮಾಧಾನ ಹೇಳಿದರು.

**ಚಕ್ರವರ್ತಿನಿಯವರ ವಜ್ರೋತ್ಸವ**

ಭರತಖಂಡದ ಚಕ್ರವರ್ತಿನಿಯವರಾಗಿದ್ದ ಶ್ರೀ ವಿಕ್ಟೋರಿಯಾ ಮಹಾರಾಜ್ಞಿಯವರ ರಾಜ್ಯಭಾರವು ಅರವತ್ತು ವರ್ಷಗಳ ಕಾಲ ಬೆಳಗಿದ ವಜ್ರೋತ್ಸವವು ೧೮೯೭ನೆಯ ಇಸವಿಯ ಜೂನ್ ತಿಂಗಳಿನಲ್ಲಿ ಸಂಸ್ಥಾನದ ಸಮಸ್ತ ಪ್ರದೇಶ ಗಳಲ್ಲಿಯೂ ವಿಜೃಂಭಣೆಯಿಂದ ನೆರವೇರಿತು. ಅದರ ನಿಮಿತ್ತವಾಗಿ ಸಂಸ್ಥಾನದ ದೇವಾಲಯ ಗಳಲ್ಲಿಯೂ, ಮಸೀದಿಗಳಲ್ಲಿಯೂ, ಚರ್ಚುಗಳಲ್ಲಿಯೂ, ಪೂಜೆಗಳೂ ಪ್ರಾರ್ಥನೆಗಳೂ ನಡೆದುವು. ಕೆಲವು ಜನ ಸೆರೆಯಾಳುಗಳಿಗೆ ಕೃಪಾ ಪೂರ್ವಕವಾಗಿ ಬಿಡುಗಡೆಯಾಯಿತು. ಬಡವರಿಗೆ ಅನ್ನದಾನವೂ, ವಸ್ತ್ರ ದಾನವೂ ನಡೆದುವು. ವಿದ್ಯಾಶಾಲೆಗಳಲ್ಲಿ ಆಟಪಾಟಗಳೂ ಸಭೆಗಳೂ ನಡೆದು, ವಿದ್ಯಾರ್ಥಿ ವಿದ್ಯಾರ್ಥಿನಿಯರಿಗೆ ಲಾಡುಗಳನ್ನೂ ಪಾರಿತೋಷಿಕ ಗಳನ್ನೂ ಹಂಚಲಾಯಿತು. ಶ್ರೀ ಮಹಾರಾಜ್ಞೀ ರೀಜೆಂಟರವರು

ಶ್ರೀ ವಿಕ್ಟೋರಿಯಾ ಮಹಾರಾಜ್ಞಿಯವರ ನಾಮಾಂಕಿತದಮೇಲೆ ಬೆಂಗಳೂರು ನಗರದಲ್ಲಿ ವಿಕ್ಟೋರಿಯಾ ಆಸ್ಪತ್ರೆಯನ್ನು ನಿರ್ಮಾಣ ಮಾಡಿಸಿ ಶಾಶ್ವತ ಕೀರ್ತಿಯನ್ನು ಗಳಿಸಿದರು.

ನಾಟಕ ಪ್ರದರ್ಶನದಲ್ಲಿಯೂ ನಾಟಕಾವಲೋಕನದಲ್ಲಿಯೂ ಮಹಾಸ್ವಾಮಿಯವರಿಗೆ ಬಾಲ್ಯದಿಂದಲೂ ಬಹಳ ಪ್ರೇಮ. ಅರಮನೆಯ ಕರಿಕಲ್ಲು ತೊಟ್ಟಿಯಲ್ಲಿ ಮಹಾಸ್ವಾಮಿಯವರೇ ಅವರೂ ತಮ್ಮ ಸಹಾಧ್ಯಾಯಿಗಳೊಡನೆ ನಾಟಕಗಳನ್ನು ಪ್ರದರ್ಶಿಸಿ ಹರ್ಷಿಸುತ್ತಿದ್ದರು. ತುಲಸೀ ಪ್ರಹಸನ (ತುಲಸೀ "ಫಾರ್ಸ್") ಪ್ರದರ್ಶನ

**ರಂಗಭೂಮಿಯ ಮೇಲಣ ಪ್ರೇಮ**

ದಲ್ಲಿಯೂ, ರಂಗಭೂಮಿಯಮೇಲೆ ಪ್ರದರ್ಶನ ಯೋಗ್ಯವಾದ ರೂಪಕ್ಕೆ ತಿರುಗಿಸಿದ್ದ ವಿನೋದಾತ್ಮಕಗಳಾದ ಕೆಲವು ಕಥೆಗಳ ಪ್ರದರ್ಶನದಲ್ಲಿಯೂ ಮಹಾಸ್ವಾಮಿಯವರಿಗೆ ಬಹಳ ಇಷ್ಟ. ಕೆಲವುವೇಳೆ ಮಹಾಸ್ವಾಮಿಯವರೂ ಶ್ಲಾಘಾರ್ಹವಾದ ರೀತಿಯಲ್ಲಿ ಪಾತ್ರವನ್ನು ವಹಿಸುತ್ತಿದ್ದರು. ಉಳಿದ ಸಂದರ್ಭಗಳಲ್ಲಿ ಹಾರ್ಮೋನಿಯಂ ಅಥವಾ ಮೃದಂಗವನ್ನು ನುಡಿಸಿ ನಾಟಕ ಪ್ರದರ್ಶನಕ್ಕೆ ಸಹಾಯಮಾಡುತ್ತಿದ್ದರು. ಹಲವು ಶ್ರೇಷ್ಠ ನಾಟಕಗಳ ಪ್ರದರ್ಶನವು ನಡೆಯುತ್ತಿದ್ದುದೂ ಉಂಟು.

ಮಹಾಸ್ವಾಮಿಯವರು ಬಾಲಕರಾಗಿದ್ದಾಗ್ಗೆ ನಟರನ್ನು ಪ್ರೋತ್ಸಾಹಿಸಿದ ಎರಡು ಸನ್ನಿವೇಶಗಳು ಅಪ್ರತಿಮ ಮನೋಹರವಾಗಿ ಅವರ ಔದಾರ್ಯಕ್ಕೂ ಧೈರ್ಯಕ್ಕೂ ಬಾಲ್ಯದಲ್ಲೇ ಪರಿಸ್ಫುಟವಾಗಿದ್ದ ಕಲಾಭಿಮಾನಕ್ಕೂ ನಿದರ್ಶನಗಳಾಗಿವೆ. ಸಾಂಗಲಿ ನಾಟಕ ಸಂಘದವರು ಮೈಸೂರು ಸಂಸ್ಥಾನಕ್ಕೆ ಬಂದು ಮರಾಟಿ ಭಾಷೆಯಲ್ಲಿ ನಾಟಕ ಪ್ರದರ್ಶನ ಮಾಡಿದಮೇಲೆ, ಕನ್ನಡದಲ್ಲಿ ಯಕ್ಷಗಾನಗಳ ಬಯಲಾಟಗಳ ಹೊರತು ಉಚ್ಚಹಂತದ ನಾಟಕ ಪ್ರದರ್ಶನವಿಲ್ಲದಿದ್ದುದನ್ನು ಕಂಡು ಶ್ರೀ ಚಾಮರಾಜೇಂದ್ರ ಒಡೆಯರವರು ಸಂಸ್ಕೃತದಿಂದಲೂ, ಇಂಗ್ಲಿಷಿನಿಂದಲೂ ಶಾಕುಂತಲ, ರತ್ನಾವಳಿ, ಮೃಚ್ಛಕಟಿಕ, ಒಥೆಲೋ—ಮುಂತಾದ ನಾಟಕಗಳನ್ನು ಕನ್ನಡಕ್ಕೆ ಭಾಷಾಂತರಮಾಡಿಸಿ ಅವುಗಳನ್ನಾಡಲು ಅರಮನೆಯ ಆಶ್ರಯದಲ್ಲಿ "ಶ್ರೀ ಚಾಮರಾಜೇಂದ್ರ ಕರ್ಣಾಟಕ ನಾಟಕ ಸಭಾ" ಎಂಬ ನಾಟಕ ಮಂಡಲಿಯನ್ನು ಏರ್ಪಡಿಸಿ ಪ್ರೋತ್ಸಾಹಿಸಿದ್ದರು. ಅವರ ಮರಣಾನಂತರ ನಾಲ್ಕು ವರ್ಷಗಳ ಬಳಿಕ ನಟವರ್ಗದವರಿಗೆ ಸಂಬಳಗಳನ್ನು ಹೆಚ್ಚಿಸುವ ಸನ್ನಿವೇಶವು ಒದಗಿತು. ಅಧಿಕಾರಿಗಳು ಮಹಾರಾಜ್ಞೀ ರೀಜೆಂಟರವರಿಗೆ ನಟರ ನಾಮಧೇಯಗಳ ಪಟ್ಟಿಯನ್ನೊಪ್ಪಿಸಿ, ಅವರಲ್ಲಿ

ಒಬ್ಬೊಬ್ಬರು ನಟರಿಗೂ ಅವರವರ ಯೋಗ್ಯತೆಯ ಅನುಕ್ರಮದಲ್ಲಿ ಮೂರು ರೂಪಾಯಿ, ಎರಡು ರೂಪಾಯಿ, ಒಂದು ರೂಪಾಯಿ— ಈ ಮೇರೆಗೆ ಸಂಬಳಗಳ ಹೆಚ್ಚುವರಿಯನ್ನು ಸಲಹೆ ಮಾಡಿ ಅನುಮೋದನಕ್ಕಾಗಿ ಒಪ್ಪಿಸಿದ್ದರು. ಆಗ್ಗೆ ಕೇವಲ ಹದಿನಾಲ್ಕು ವರ್ಷ ವಯಸ್ಸಿನ ಬಾಲಕರಾಗಿದ್ದ ಮಹಾಸ್ವಾಮಿಯವರು, ಶ್ರೀ ಮಹಾರಾಜ್ಞೀ ರೀಜೆಂಟರವರು ಆ ಪಟ್ಟಿಯನ್ನು ಪರಿಶೀಲಿಸುವುದಕ್ಕೆ ಪೂರ್ವಭಾವಿಯಾಗಿ ಅದನ್ನು ಪರಾಂಬರಿಸಿ ಪಟ್ಟಿಯಲ್ಲಿದ್ದ ಆ ಹೆಚ್ಚುವರಿ ಸಂಖ್ಯೆಗಳನ್ನೆಲ್ಲಾ ಹೊಡೆದು ಹಾಕಿ ಆ ಆ ನಟರ ಯೋಗ್ಯತೆಗೆ ತಕ್ಕಂತೆ ಬಹಳ ಧಾರಾಳವಾಗಿ ಹೆಚ್ಚುವರಿಗಳನ್ನು ಕಾಣಿಸಿ ಸಂಬಳಗಳನ್ನು ಅಧಿಕಗೊಳಿಸಿ, ನೀಲಿಯ ಸೀಸದಕಡ್ಡಿಯಲ್ಲಿ ಅಂಕಿಗಳನ್ನು ಬರೆದು "ನಾಟಕಗಳಲ್ಲಿ ಪಾತ್ರವಹಿಸಿ ಹಾಡುವವರಿಗೆ ತುಂಬ ಶ್ರಮ. ಅವರಿಗೆ ಜೀವನವಾಗಿ ಹಾಲಿಗೆ ಆಗುವಷ್ಟು ಹಣವನ್ನಾದರೂ ಕೊಡಬೇಡವೆ? ಹೊಟ್ಟೆಯತುಂಬ ಊಟವಾಗಿ ಹಾಲು ಬೀಳದಿದ್ದರೆ, ಅವರು ಸುಖವಾಗಿಲ್ಲದಿದ್ದರೆ, ಕಂಠದಿಂದ ಇಂಪಾಗಿ ಧ್ವನಿಯಾದರೂ ಹೊರಟೀತೆ? ಆದುದರಿಂದ ಈಗ ತಿದ್ದಿ ಬರೆದಿರುವುದೂ ಸಾಲದು. ಸದ್ಯಕ್ಕೆ ಇಷ್ಟನ್ನಾದರೂ ಕರುಣಿಸಿ ಅಪ್ಪಣೆಯಾಗಬೇಕೆಂದು ಪ್ರಾರ್ಥನೆ" ಎಂದು ಬರೆದು ಮಹಾಮಾತೃಶ್ರೀಯವರಲ್ಲಿಗೆ ಒಪ್ಪಿಸಿದರು. ಮೊದಲಿನ ಸಲಹೆಯನ್ನೊಪ್ಪಿಸಿದ್ದ ಅಧಿಕಾರಿಗಳು, "ಮಹಾಸ್ವಾಮಿಯವರಿಗೆ ಎಳೆಯ ವಯಸ್ಸಿನ ಉತ್ಸಾಹ" ಎಂದು ಹೇಳಿ, ಅನುಭವವಿಲ್ಲದವರ ಸಲಹೆಯೆಂಬುದನ್ನು ವ್ಯಂಗ್ಯವಾಗಿ ಸೂಚಿಸಿದರು. ಅದಕ್ಕೆ ಪ್ರತ್ಯುತ್ತರವಾಗಿ ಮಹಾಮಾತೃಶ್ರೀಯವರು, "ಅಯ್ಯಾಜಿಯವರು ಪ್ರಭುಗಳು. ಅವರು ಉದಾರ ಹೃದಯದಿಂದ ಅದಕ್ಕೆ ತಕ್ಕಹಾಗೆ ಕೊಟ್ಟಿದ್ದಾರೆ" ಎಂದು ಹೇಳಿ ಹರ್ಷಿಸಿ, ತಾವು ಇನ್ನೂ ಐದೈದು ರೂಪಾಯಿಗಳನ್ನು ಸೇರಿಸಿ, "ಅದು ಎಳೆಯ ವಯಸ್ಸಿನ ಉತ್ಸಾಹ. ಇದು ರೀಜೆಂಟರವರ ಸಂತೋಷ" ಎಂದು ಅಪ್ಪಣೆ ಕೊಡಿಸಿ ನಕ್ಕರಂತೆ; ಅಲ್ಲದೆ ಅಧಿಕಾರಿಗಳ ಮನಸ್ಸೆಲ್ಲಿ ನೋಯುವುದೋ ಎಂಬ ಮರುಕದಿಂದ "ನೀವು ಸಲಹೆಮಾಡಿರುವುದೂ ಸರಿ. ರಾಜಭಕ್ತರು ಅರಮನೆಯ ಹಣವೆಲ್ಲ ತಮ್ಮ ಹಣವೇ ಆಗಿದ್ದಂತೆ ಭಾವಿಸಿ ಹಿಡಿತಮಾಡಬೇಕಾದುದೇ ಯುಕ್ತ. ಅಯ್ಯಾಜಿಯವರು ತಾವು ಮಹಾರಾಜರೆಂಬುದನ್ನು ಮರೆಯದೆ ಕೊಡುಗೈಯಿಂದ ಹಾಗೆ ಕೊಟ್ಟಿರುವುದೂ ಯುಕ್ತ. ಆ ಬಡಪಾಯಿಗಳ ಸಂಬಳಗಳು ಬಹಳ ಕಡಮೆಯಾಗಿರುವ ಕಾರಣ, ಅವರು ಸುಖಜೀವನ ಮಾಡಿ ಕಲಾಸೇವೆಯನ್ನು ಸಮರ್ಪಿಸಲನುಕೂಲಿಸಲೆಂಬ ಉದ್ದೇಶದಿಂದ

ನಾವು ಇನ್ನೂ ಕೊಂಚ ಹೆಚ್ಚು ಮಾಡಿದೆವು" ಎಂದು ಅಪ್ಪಣೆ ಕೊಡಿಸಿದ ರಂತೆ. ಔದಾರ್ಯವು ಹುಟ್ಟನಿಂದಲೇ ಬರಬೇಕಾದ ಸಹಜ ಗುಣ. ಮಹಾಸ್ವಾಮಿಯವರು ಸ್ವಭಾವತಃ ಉದಾರಿಗಳಾಗಿದ್ದು ಮಹಾಮಾತೃ ಶ್ರೀಯವರ ಶಿಕ್ಷಣದಿಂದ ಮತ್ತಷ್ಟು ಧಾರಾಳಿಗಳಾದರು. ಒಂದು ದಿನ, ಚಾಮುಂಡೀ ಬೆಟ್ಟದ ಕಡೆಗೆ ಸಂಚಾರಾರ್ಥವಾಗಿ ದಯಮಾಡಿದ್ದಾಗ್ಗೆ ಮಹಾಸ್ವಾಮಿಯವರ ಕಿವಿಯಿಂದ ಬಿದ್ದುಹೋಗಿದ್ದ ವಜ್ರದ ಕಡುಕನ್ನು ತಂದು ಸಮರ್ಪಿಸಿದ ಪ್ರಾಮಾಣಿಕನಾದ ರೈತನಿಗೆ ಮುಕ್ತಹಸ್ತದಿಂದ ಪಾರಿತೋಷಿಕವನ್ನು ಕೊಟ್ಟುದಲ್ಲದೆ, ಮಹಾಮಾತೃಶ್ರೀಯವರಿಗೆ ಅರಿಕೆ ಮಾಡಿ ಅರಮನೆಯಲ್ಲಿ ಕೆಲಸ ಮಾಡಿಸಿಕೊಟ್ಟರು. ಆತನು ಈಗಲೂ ಅರಮನೆಯಲ್ಲಿ ಊಳಿಗದಲ್ಲಿದ್ದಾರೆ.

ಅರಮನೆಯ ನಾಟಕ ಸಭೆಯ ನಟರು ಮಹಾಪ್ರಭುಗಳಿಂದ ದೊರೆತ ಪ್ರೋತ್ಸಾಹಕ್ಕೆ ಅರ್ಹತೆಯನ್ನೂ ಸಂಪಾದಿಸಿದ್ದರು. ಶ್ರೀ ಚಾಮ ರಾಜೇಂದ್ರ ಒಡೆಯರವರು ಜೀವಂತರಾಗಿದ್ದಾಗಲೇ ಅವರುಗಳ ಸಂಬಳ ಗಳನ್ನು ಹೆಚ್ಚಿಸಬೇಕೆಂದಿದ್ದರು. ಅಲ್ಲದೆ, ರಂಗಭೂಮಿಯಲ್ಲಿ ನಾನಾ ದೃಶ್ಯ ಪ್ರದರ್ಶನಗಳಿಗನುಕೂಲಿಸುವಂತೆ ರಂಗಪರಿಕರಗಳಿಂದಲೂ ಯಂತ್ರಸಾಧನಗಳಿಂದಲೂ ಸುಸಜ್ಜಿತವಾದ ನಾಟಕಶಾಲೆಯೊಂದನ್ನು ಕಟ್ಟಿಸುವುದಕ್ಕಾಗಿ ನಕ್ಷೆ ಮುಂತಾದುವುಗಳನ್ನು ರಚಿಸುವಂತೆ ಅಪ್ಪಣೆ ಮಾಡಿದ್ದರು. ಕಲ್ಕತ್ತಾ ನಗರದಿಂದ ಬಂದೊಡನೆಯೇ ಆ ಕೆಲಸವನ್ನು ಪ್ರಾರಂಭಿಸಬೇಕೆಂದು ಉದ್ದೇಶಿಸಿದ್ದರು. ಅರಮನೆಯ ನಾಟಕ ಸಭೆಯಲ್ಲಿ ಉತ್ತಮ ವರ್ಗದ ನಟರಿದ್ದರು. ರಾಜಾ ರವಿವರ್ಮರು "ಶ್ರೀಮಾನ್ ಲಕ್ಷ್ಮೀಪತಿ ಶಾಸ್ತ್ರಿಗಳಷ್ಟು ಶ್ರೇಷ್ಠ ನಟರನ್ನು ನಾನು ಭರತಖಂಡದಲ್ಲಿ ಮತ್ತೆಲ್ಲಿಯೂ ನೋಡಿಲ್ಲ" ಎಂದರಂತೆ. ಶ್ರೀಮಾನ್ ಲಕ್ಷ್ಮೀಪತಿ ಶಾಸ್ತ್ರಿಗಳ ಶಕುಂತಲಾ ಪಾತ್ರಾಭಿನಯವು ಪ್ರೇಕ್ಷಕರನ್ನು ಮುಗ್ಧಗೊಳಿಸುತ್ತಿದ್ದಿತು; ಸರ್ ಕೆ. ಶೇಷಾದ್ರಿ ಐಯರವರು ಕೂಡ ಅವರ ಪಾತ್ರಾಭಿನಯವನ್ನು ನೋಡಿ ಮೆಚ್ಚಿ, ಅವರನ್ನು ಸರ್ಕಾರಿ ಉದ್ಯೋಗಕ್ಕೆ ನೇಮಕಮಾಡಿಕೊಳ್ಳುವುದಾಗಿಯೂ, ಅತ್ಯಲ್ಪಕಾಲದೊಳಗಾಗಿ ಹೆಚ್ಚು ಸಂಬಳವನ್ನು ಮಾಡಿ ಕೊಡುವುದಾಗಿಯೂ ತಿಳಿಸಿದರು. ಆದರೆ ಕಲಾಭಿ ಮಾನದಿಂದ ಶ್ರೀಮಾನ್ ಲಕ್ಷ್ಮೀಪತಿ ಶಾಸ್ತ್ರಿಗಳು ಅದಕ್ಕೆ ಸಮ್ಮತಿಸದೆ ಅರಮನೆಯ ನಾಟಕ ಸಭೆಯ ನಟರಾಗಿಯೇ ಉಳಿದರು. ನಾಟಕ ಶಿರೋಮಣಿ ಶ್ರೀಮಾನ್ ಎ. ವಿ. ವರದಾಚಾರ್ಯರವರು ಕೂಡ ಶ್ರೀಮಾನ್ ಲಕ್ಷ್ಮೀಪತಿ ಶಾಸ್ತ್ರಿಗಳನ್ನು "ಗುರುಗಳೇ" ಎಂದು

ಸಂಬೋಧಿಸಿ ಗೌರವ ತೋರುತ್ತಿದ್ದರು. ಶ್ರೀಮಾನ್ ಸುಬ್ಬಣ್ಣನವರ* ದುಷ್ಯಂತ ಪಾತ್ರಾಭಿನಯವೂ ಶ್ರೀಮಾನ್ ಲಕ್ಷ್ಮೀಪತಿ ಶಾಸ್ತ್ರಿಗಳವರ ಶಕುಂತಲಾ ಪಾತ್ರಾಭಿನಯವೂ ಆದರ್ಶಪ್ರಾಯವಾಗಿದ್ದುವಂತೆ. ಅರಮನೆಯ ನಾಟಕ ಸಭೆಯಲ್ಲಿ ಇತರ ಶ್ರೇಷ್ಠ ನಟರೂ ಇದ್ದರು. ಶ್ರೀ ವೀರರಾಘವನೆಂಬ ಯುವಕನೊಬ್ಬನು ಮಂದಾರವಲ್ಲಿಯ ಪಾತ್ರವನ್ನು ಧರಿಸಿ ತೋರ್ಪಡಿಸಿದ ಅಭಿನಯ ಕೌಶಲ್ಯವನ್ನು ಮೆಚ್ಚಿ ಶ್ರೀ ಚಾಮರಾಜೇಂದ್ರ ಒಡೆಯರವರು ಚಿನ್ನದ ಗಡಿಯಾರವನ್ನು ಪಾರಿತೋಷಿಕವಾಗಿ ದಯಪಾಲಿಸಿದ್ದರು. ಒಥೆಲೋ ನಾಟಕದ ಭಾಷಾಂತರವಾದ ಶೂರಸೇನ ಚರಿತ್ರೆಯೆಂಬ ನಾಟಕದಲ್ಲಿ ವರ್ಟನ್ ರಾಮರಾಯರ ಶೂರಸೇನ ಪಾತ್ರಾಭಿನಯವು ಸರ್ವಾದರಣೀಯವಾಗಿ ದ್ದಿತು. ಅರಮನೆಯ ನಾಟಕ ಸಭೆಯವರು ಬಳ್ಳಾರಿಗೆ ಹೋಗಿ ನಾಟಕಾಭಿನಯ ಮಾಡಿದಾಗ ಅಲ್ಲಿಯ ದಂಡಿನ ಪ್ರದೇಶದಿಂದ (ಎಂದರೆ, ಕಂಟೋನ್ಮೆಂಟಿನಿಂದ) ಬಂದಿದ್ದ ಲೆಪ್ಟಿನೆಂಟ್ ಕರ್ನಲ್‌ರವರು, "ಈತನ ಅಭಿನಯವು ಅಮೋಘವಾಗಿದೆ. ಇವರು ಇಂಗ್ಲೆಂಡಿನ ಶ್ರೇಷ್ಠ ನಟರ ಗುಂಪಿಗೆ ಸೇರಲು ಅರ್ಹರಾಗಿದ್ದಾರೆ. ಅಲ್ಲಿಯ ಅತ್ಯುತ್ತಮ ನಟ ಶ್ರೇಷ್ಠರು ಕೂಡ ಒಥೆಲೋ ಪಾತ್ರಾಭಿನಯದಲ್ಲಿ ಈತನನ್ನು ಮೀರಿ ದವರೇ ಎಂಬುದು ಸಂದೇಹಾಸ್ಪದವಾಗಿದೆ" ಎಂದು ಹೇಳಿ ನಟರಾದ ವರ್ಟನ್ ರಾಮರಾಯರಿಗೆ ಮೆಚ್ಚನ್ನು ಕೊಟ್ಟು ಪ್ರೋತ್ಸಾಹಿಸಿದರು. ಅಲ್ಲದೆ, ವರ್ಟನ್ ರಾಮರಾಯರ ಅಭಿನಯ ಕೌಶಲ್ಯವನ್ನು ಕಂಡು ಬೆರಗಾದ ಬಳ್ಳಾರಿಯ ಮಹಾಜನರು ಅವರಿಗೆ ಮೆರೆವಣಿಗೆ ಮಾಡಿಸಿದರು. ಆ ಮೆರೆವಣಿಗೆಯ ಕಾಲದಲ್ಲಿ ಹಲವು ಮನೆಗಳ ಸದ್ಗೃಹಸ್ಥರು ಅವರಿಗೆ ಆಗಿನ ಸಾಮಾಜಿಕ ಸಂಪ್ರದಾಯಕ್ಕನುಸಾರವಾಗಿ ತಮ್ಮ ತಮ್ಮ ಮನೆಯ ಮುಂದೆ ಆರತಿಮಾಡಿಸಿ, ತಮ್ಮ ಕಲಾಭಿಮಾನವನ್ನು ತೋರಿಸಿ, ನಟರಿಗೆ ಗೌರವ ತೋರಿದರು.

ಆಳಿದ ಮಹಾಸ್ವಾಮಿಯವರಾದ ಶ್ರೀ ಕೃಷ್ಣರಾಜೇಂದ್ರ ಒಡೆಯರ್ ಬಹದ್ದೂರರವರು ಬಾಲಕರಾಗಿದ್ದಾಗ್ಗೆ ಒಂದು ದಿನ ಅರಮನೆಯಲ್ಲಿ ಹರಿಶ್ಚಂದ್ರ ನಾಟಕ ಪ್ರದರ್ಶನವು ನಡೆಯಿತು. ಕಾಪಾಲಿ ವೇಷವನ್ನು ಧರಿಸಿದ್ದ ವರ್ಟನ್ ರಾಮರಾಯರು ಹಾವಾಡಿಗರಿಂದ ತಂದಿದ್ದ ನಾಗರ ಹಾವುಗಳನ್ನೇ ಮೈಗೂ, ತಲೆಗೂ, ತೋಳುಗಳಿಗೂ ಸುತ್ತಿಕೊಂಡು ಬಂದು

* ಈಚೆಗೆ ಸ್ತ್ರೀ ಪಾತ್ರಗಳನ್ನೂ, ಶ್ರೀ ಕೃಷ್ಣನ ಪಾತ್ರ ಮುಂತಾದುವುಗಳನ್ನೂ ಧರಿಸಿ ಪ್ರಸಿದ್ಧರಾಗಿದ್ದ ಶ್ರೀಮಾನ್ ಸುಬ್ಬಣ್ಣನವರಲ್ಲ; ಅವರಿಗಿಂತಲೂ ಹಿಂದಿನವರು.

ಸಭಿಕರನ್ನು ಸ್ತಂಭೀಭೂತರನ್ನಾಗಿ ಮಾಡಿದರು. ಆಗ ನುಡಿಸಿದ ನಾಗಸ್ವರ ವನ್ನಾಲಿಸಿ ಆ ನಾಗರ ಹಾವುಗಳೆಲ್ಲ ಹೆಡೆಗಳನ್ನು ಬಿಚ್ಚಿ ತಲೆದೂಗಿದ ಸೊಬಗನ್ನೂ ನಟನ ನರ್ತನವನ್ನೂ ಕಂಡು ಮಹಾಸ್ವಾಮಿಯವರು ಮೆಚ್ಚಿ, "ಇಲ್ಲೀ ಹಾವುಗಳು ಇಷ್ಟು ಚೆನ್ನಾಗಿವೆ. ಇನ್ನು ಶಿವನ ಮೈಮೇಲಿರುವ ಹಾವುಗಳೆಷ್ಟು ಚೆನ್ನೋ! ನಾನು ಈ ಹಾವುಗಳನ್ನು ಮುಟ್ಟಬೇಕು" ಎಂದು ಅಪ್ಪಣೆ ಕೊಡಿಸಿದರು. ಪರಿಜನರು ನೇಪಥ್ಯಕ್ಕೆ ಕರೆದುಕೊಂಡುಹೋದಾಗ ಮಹಾಸ್ವಾಮಿಯವರು ಆ ಹಾವುಗಳನ್ನು ಮೈದಡವಿ, "ಶಿವನ ಆಭರಣಗಳು. ಶಿವ ಶಿವ, ಶಂಭೋ, ಶಂಕರ" ಎಂದು ಹೇಳಿ ಕಣ್ಣುಗಳನ್ನು ಮುಚ್ಚಿ ಆನಂದ ಪರವಶರಾಗಿ ನಿಂತಿದ್ದು ತಮ್ಮ ಪುಟ್ಟ ಬೆರಳಿನಲ್ಲಿದ್ದ ವಜ್ರದುಂಗುರವನ್ನು ಸರ್ಟನ್ ರಾಮರಾಯರಿಗೆ ಪಾರಿತೋಷಿಕವಾಗಿ ಅನುಗ್ರಹಿಸಿದರು. ಅದನ್ನು ಕೇಳಿ ಹರ್ಷಿಸಿದ ಮಹಾಮಾತೃಶ್ರೀಯವರು, ಮಾರನೆಯ ದಿನ ಸರ್ಟನ್ ರಾಮರಾಯರ ಕೈಬೆರಳಿಗೆ ಧರಿಸಲಾಗುವಂತಿದ್ದ ದೊಡ್ಡ ವಜ್ರ ದುಂಗುರವನ್ನು ಕಳುಹಿಸಿ ಮಹಾಸ್ವಾಮಿಯವರು ಕೊಟ್ಟಿದ್ದ ಉಂಗುರ ವನ್ನು ತರಿಸುವಂತೆ ಬಕ್ಷಿಯವರಿಗೆ ಅಪ್ಪಣೆ ಮಾಡಿದರು. ಮಹಾಸ್ವಾಮಿ ಯವರಿಗೆ ಅವರು ಆ ಉಂಗುರವನ್ನು ತೋರಿಸಿ, "ಅಯ್ಯಾಜಿ! ಇಗೋ, ನಿಮ್ಮ ಉಂಗುರ! ಬೆರಳಿಗಿಟ್ಟುಕೊಳ್ಳಿ" ಎಂದು ಅಪ್ಪಣೆಕೊಡಿಸಿದರು. ಮಹಾಮಾತೃಶ್ರೀಯವರ ಮಾತುಗಳನ್ನು ಕೇಳಿ, "ಇದು ನಿನ್ನೆ ರಾತ್ರಿ ಸರ್ಟನ್ ರಾಮರಾಯರಿಗೆ ಕೊಟ್ಟಿದ್ದ ಉಂಗುರ. ಅದೇಕೆ ಅವರು ಉಂಗುರಾ ಹಿಂದಕ್ಕೆ ಕಳುಹಿಸಿಬಿಟ್ಟರು? ಇದರ ಬೆಲೆ ಕಡಿಮೆಯೆಂದೆ? ಇನ್ನೇನನ್ನಾದರೂ ಕಳುಹಿಸೋಣವೆ?" ಎಂದು ಮಹಾಸ್ವಾಮಿಯವರು ಪ್ರಶ್ನೆ ಮಾಡಿದರು. ಆಗ ಮಹಾಮಾತೃಶ್ರೀಯವರು, "ಅಯ್ಯಾಜಿ! ನಿಮ್ಮ ಪುಟ್ಟ ಬೆರಳಿನ ಉಂಗುರ ಅವರ ದೊಡ್ಡ ಬೆರಳಿಗೆ ಆಗುತ್ತದೆಯೆ?" ಎಂದರು. ಮಹಾಸ್ವಾಮಿಯವರು, "ನಿಜ, ನಿಜ; ತೋರಲೇ ಇಲ್ಲ. ದೊಡ್ಡದೊಂದು ವಜ್ರದ ಉಂಗುರವನ್ನು ಕೊಡಬೇಕು. ಕೊಡಬೇಕು, ಅಲ್ಲವೆ?" ಎಂದರು. ಮಹಾಮಾತೃಶ್ರೀಯವರು ನಕ್ಕು, "ಕೊಡಬೇಕು, ಕೊಡಿ. ಕೊಡಿ. ಕೊಡುವುದಕ್ಕಾಗಿಯೇ ಭಗವಂತ ಈ ಮಹಾರಾಜ ಪದವಿಯನ್ನು ಕರುಣಿಸಿ ಜನ್ಮವನ್ನು ದಯಪಾಲಿಸಿದ್ದಾನೆ. ಅಯ್ಯಾಜಿ! ಬಕ್ಷಿಯವರು ದೊಡ್ಡ ವಜ್ರದುಂಗರಾ ಕಳುಹಿಸಿಯೇ ಇದನ್ನು ಹಿಂದಕ್ಕೆ ತರಿಸಿದ್ದಾರೆ" ಎಂದು ಅಪ್ಪಣೆಕೊಡಿಸಿದರು. ಮಹಾಸ್ವಾಮಿ ಯವರಿಗೆ ಅತುಳ ಹರ್ಷವೂ ವಿಪುಲ ತೃಪ್ತಿಯೂ ಉಂಟಾದುವು.

ಅವರು ಆ ವಜ್ರದುಂಗುರವನ್ನು ಸ್ವೀಕರಿಸಿ ಮತ್ತೆ ತಮ್ಮ ಬೆರಳಿಗೆ ಧರಿಸಿದರು.

ಮಹಾಸ್ವಾಮಿಯವರಿಗೆ ಬಾಲ್ಯದಲ್ಲಿ ಪಿತೃವಿಯೋಗವುಂಟಾದ ಕಾರಣ, ಮಹಾರಾಜ ಪದವಿಯ ಗುರುತರವಾದ ಭಾರವನ್ನು ವಹಿಸಿ ಕರ್ತವ್ಯಗಳನ್ನು ಪಾಲಿಸುವ ಅರ್ಹತೆಯನ್ನು ತೀರ ಅಲ್ಪಾವಧಿಯಲ್ಲಿ ಪಡೆಯಬೇಕಾಗಿದ್ದುದರಿಂದ, ಒಂದು ದೃಷ್ಟಿಯಿಂದ ನೋಡಿದರೆ ನಿರಾತಂಕವಾದ ಬಾಲಭಾವದ ಸುಖವನ್ನನುಭವಿಸಲು ಅವರಿಗೆ ಅಧಿಕವಾದ ಅವಕಾಶವೇ ಉಳಿಯಲಿಲ್ಲ. ಶ್ರೀ ಮಹಾರಾಜ್ಞೀ ರೀಜೆಂಟರವರು ರಾಜ್ಯಭಾರವನ್ನು ನಿರ್ವಹಿಸುತ್ತಿದ್ದುದೇನೋ ನಿಜ; ಆದರೂ, ತಮ್ಮ ಪುತ್ರರಾದ ಶ್ರೀಮನ್ಮಹಾರಾಜರವರಿಗೆ ಅವರು ತಮ್ಮ ಮೇಲ್ವಿಚಾರಣೆಯಲ್ಲಿ ಅನೇಕ ಕಾರ್ಯಗಳನ್ನು ವಹಿಸಿ ತಮ್ಮದೇ ಆದೊಂದು ವೈಶಿಷ್ಟ್ಯದಿಂದ ಶಿಕ್ಷಣ ಕೊಡುತ್ತಿದ್ದರು; ಆದಕಾರಣ, ಮಹಾಸ್ವಾಮಿಯವರು ನಿರ್ವಹಿಸಬೇಕಾದ ಕಾರ್ಯಗಳು ಅನೇಕವಾಗಿರುತ್ತಿದ್ದುವು. ಅವರು ಅವುಗಳನ್ನೆಲ್ಲ ವಿಚಕ್ಷಣೆಯಿಂದ ನಿರ್ವಹಿಸಿ ಸಮಸ್ತರ ಶ್ಲಾಘನೆ ವಿಶ್ವಾಸಗಳಿಗೂ ಪಾತ್ರರಾದರು. ಅದರ ಪರಿಣಾಮವಾಗಿಯೂ ಮಹಾಸ್ವಾಮಿಯವರು ತಮ್ಮ ಸೋದರ ಸೋದರಿಯರಲ್ಲಿ ಪ್ರದರ್ಶಿಸುತ್ತಿದ್ದ ಪ್ರೀತಿಪರತೆಯ ಫಲಿತಾಂಶವಾಗಿಯೂ, ಮಹಾಸ್ವಾಮಿಯವರ ಸೋದರ ಸೋದರಿಯರೂ, ಇತರರನೇಕರೂ ತಮ್ಮ ಕೋರಿಕೆಗಳನ್ನು ಮಹಾಮಾತೃಶ್ರೀಯವರಲ್ಲಿ ಅರಿಕೆ ಮಾಡುತ್ತಿದ್ದುದಕ್ಕಿಂತಲೂ ಹೆಚ್ಚಾಗಿ ಮಹಾಸ್ವಾಮಿಯವರಲ್ಲಿ ಸೂಚಿಸಿಯೇ ನೆರವೇರಿಸಿಕೊಳ್ಳಲು ಪ್ರಾರಂಭಿಸಿದರು. ಅದನ್ನು ಕಂಡು, ಮಹಾಮಾತೃಶ್ರೀಯವರೂ ಹರ್ಷಿಸುತ್ತಿದ್ದರು. ಮಹಾಸ್ವಾಮಿಯವರಾದರೂ ಆ ಬಗೆಯ ಯಾಜಮಾನ್ಯವನ್ನು ದಾಕ್ಷಿಣ್ಯಬುದ್ಧಿಯಿಂದಲೂ, ಪ್ರೀತ್ಯುತ್ಸಾಹಗಳಿಂದಲೂ ನಿರ್ವಹಿಸುತ್ತಿದ್ದರು. ಒಂದು ಸಲ, ಅವರ ಜ್ಯೇಷ್ಠ ಸೋದರಿಯವರು (ಶ್ರೀ ಜಯಲಕ್ಷ್ಮಮ್ಮಣ್ಣಿಯವರು) ಅಶ್ವರಥದಲ್ಲಿ ಕುಳಿತು ಗಾಳಿ ಸವಾರಿಗಾಗಿ ಚಿತ್ತೈಸಲು ತಮಗೆ ಬಹಳ ಪ್ರಿಯವಾಗಿದ್ದ ಬಿಳಿಯ ಬಣ್ಣದ ಉತ್ತಮಾಶ್ವಗಳ ಜೊತೆಯೇ ಬೇಕೆಂದು ಮಹಾಸ್ವಾಮಿಯವರಿಗೆ ಹೇಳಿಕಳುಹಿಸಿದರು. ಆ ಮಾತುಗಳು ಕಿವಿಗಳಿಗೆ ಬಿದ್ದೊಡನೆಯೇ ಮಹಾಸ್ವಾಮಿಯವರು ಚಿಂತಾಕುಲರಾಗಿ ಪೇಚಾಡಿದರು. ಎಂದೂ ಇಲ್ಲವೆಂದು ಹೇಳದಿದ್ದವರು ಅಂದು ಇಲ್ಲವೆಂದು ಪ್ರತ್ಯುತ್ತರ ಹೇಳಿಕಳುಹಿಸಿ ಉತ್ಸಾಹಭಂಗಮಾಡುವುದು

**ಯಾಜಮಾನ್ಯದ ಉತ್ಸಾಹಪರತೆ**

ಹೇಗೆಂದು ಅವರು ವಿಷಾದಿಸಿದರು. ಆ ಉತ್ತಮಾಶ್ವಗಳಲ್ಲೊಂದರ ಕಾಲಿಗೆ ಮೂಗುಪೆಟ್ಟು ಬಿದ್ದು ನೋವಾಗಿ ಅದಕ್ಕೆ ಚಿಕಿತ್ಸೆ ನಡೆಯುತ್ತಿದ್ದಿತು. ಮಹಾಸ್ವಾಮಿಯವರು ಬೇರೆ ಜೊತೆಯ ಕುದುರೆಗಳನ್ನು ರಥಕ್ಕೆ ಹೂಡಲು ಕಳುಹಿಸಿ, ತಮ್ಮ ಜ್ಯೇಷ್ಠ ಸಹೋದರಿಯವರು ಹೇಳಿಕಳುಹಿಸಿದ್ದ ಜೊತೆಯನ್ನು ಕಳುಹಿಸಲು ಸಾಧ್ಯವಿಲ್ಲದೆ ಹೋದುದಕ್ಕಾಗಿ ತಾವು ಅತ್ಯಂತ ವಿಷಾದದಿಂದ ಕೂಡಿದ್ದುದಾಗಿಯೂ, ತಮ್ಮನ್ನು ಕ್ಷಮಿಸುವ ದೊಡ್ಡ ಮನಸ್ಸು ಮಾಡಬೇಕೆಂದೂ ಅರಿಕೆ ಮಾಡಿಸಿದರು. ಆಗ ಶ್ರೀ ಜಯಲಕ್ಷ್ಮಮ್ಮಣ್ಣಿಯವರು, "ತಮ್ಮಯ್ಯನ ಮನಸ್ಸು ಬೆಣ್ಣೆಯಂತೆ ಮೃದು" ಎಂದರು. ೧೮೯೮ನೆಯ ಇಸವಿಯಲ್ಲಿ ಶ್ರೀ ಕಂಠೀರವ ನರಸಿಂಹರಾಜ ಒಡೆಯರವರು ಅಶ್ವಾರೋಹಿಗಳಾಗಿ ಚಿತ್ತೈಸುತ್ತಿದ್ದಾಗ ಆಯತಪ್ಪಿ ಬಿದ್ದು ಭುಜದ ಮೂಳೆಯು ಮುರಿದುಹೋಯಿತು. ಅವರು ಮೇಲಕ್ಕೆದ್ದು ಸಂಚರಿಸುವುದು ಸಾಧ್ಯವಿಲ್ಲದೆ, ಚಿಕಿತ್ಸೆ ಹೊಂದಬೇಕಾಯಿತು. ಆಗ ಅವರ ಸೋದರರಾದ ಶ್ರೀಮನ್ಮಹಾರಾಜರವರು ಅವರಲ್ಲಿ ಪ್ರೀತ್ಯಾದರಗಳನ್ನು ತೋರಿಸಿ ನೋಡಿಕೊಂಡ ಬಗೆಯನ್ನು ಗಮನಿಸಿದವರೆಲ್ಲರೂ ಸಹೋದರರೀರ್ವರೂ ರಾಮ ಲಕ್ಷ್ಮಣರಂತೆ ಪ್ರೀತಿಯಿಂದಿದ್ದರೆಂದು ಹೇಳಿಕೊಂಡು ಆನಂದಿಸುತ್ತಿದ್ದರು. ತಮ್ಮ ಸೋದರರೇನಾದರೂ ನಿದ್ರಿಸುತ್ತಿದ್ದಾಗ ತಾವು ದಯಮಾಡಿದರೆ, ಲೇಶಮಾತ್ರವೂ ಶಬ್ದವಾಗದಂತೆ ಚಿತ್ತೈಸುತ್ತಿದ್ದುದಲ್ಲದೆ, ಊಳಿಗದವರೇನಾದರೂ ಬೇಗ ಬೇಗ ಹೆಜ್ಜೆಗಳನ್ನಿಟ್ಟರೆ ಸಂಜ್ಞೆಮಾಡಿ ದೂರವಾಗಿ ಕರೆದು, "ನಿದ್ದೆ ಬಂದಿದೆ. ಮೆಲ್ಲಗೆ ಓಡಾಡಿ. ಎಚ್ಚರವಾದೀತು" ಎಂದು ಮಹಾಸ್ವಾಮಿಯವರು ಎಚ್ಚರಿಕೆ ಹೇಳುತ್ತಿದ್ದರು.

**ಸಂಸ್ಥಾನದಲ್ಲಿ ಸಂಚಾರ; ಶೃಂಗೇರಿಗೆ ಪ್ರಯಾಣ**

೧೯೦೮ನೆಯ ಇಸವಿ ನವೆಂಬರು ತಿಂಗಳಿನಲ್ಲಿ ಶ್ರೀಮಾನ್ ಎಸ್. ಎಂ. ಫ್ರೇಸರ್ ಸಾಹೇಬರವರು ಮೈಸೂರು ಸಂಸ್ಥಾನದ ಪ್ರಕೃತಿ ಸೌಂದರ್ಯವನ್ನೂ ಶಿಲ್ಪ ಕಲಾ ಭಂಡಾರವನ್ನೂ ಮಹಾಪ್ರಭುಗಳಿಗೂ ಮತ್ತು ಅವರ ಸಹಾಧ್ಯಾಯಿಗಳಿಗೂ ತೋರಿಸುವುದಕ್ಕಾಗಿ ಶಿವಮೊಗ್ಗ, ಕಡೂರು ಮತ್ತು ಹಾಸನ ಡಿಸ್ಟ್ರಿಕ್ಟುಗಳಿಗೆ ಸಂಚಾರಾರ್ಥವಾಗಿ ಕರೆದುಕೊಂಡುಹೋದರು. ಅವರುಗಳು ಶಿವಮೊಗ್ಗ ಡಿಸ್ಟ್ರಿಕ್ಟಿನ ಜೋಗದ ಜಲಪಾತದ ಅದ್ಭುತ ಸೌಂದರ್ಯವನ್ನು ನೋಡಿ ಹರ್ಷಿಸಿದರು. ಅಲ್ಲದೆ ಸಾಗರ, ಕೊಡಚಾದ್ರಿ, ತೀರ್ಥಹಳ್ಳಿ, ಶೃಂಗೇರಿ, ಚಿಕ್ಕಮಗಳೂರು, ಬಾಬಾಬುಡನ್ ಬೆಟ್ಟ, ಬೇಲೂರು,

ಹಳೇಬೀಡು— ಮುಂತಾದುವಕ್ಕೆಲ್ಲ ದಯಮಾಡಿ ಅನಂತರ ಮೈಸೂರು ನಗರಕ್ಕೆ ಹಿಂತಿರುಗಿದರು.

ಮಹಾಸ್ವಾಮಿಯವರು ಶೃಂಗೇರಿಗೆ ೧೯೭೯ನೆಯ ಇಸವಿ ಡಿಸೆಂಬರು ೭ನೆಯ ತಾರೀಖು (ಶಾಲಿವಾಹನ ಶಕ ೧೮೨೧ನೆಯ ವಿಳಂಬಿ ಸಂವತ್ಸರದ ಕಾರ್ತಿಕ ಬಹುಳ ನವಮೀ ಬುಧವಾರ) ಚಿತ್ತೈಸಿದರು. ಅಲ್ಲಿ ಶ್ರೀ ವಿದ್ಯಾರಣ್ಯಸ್ವಾಮಿಗಳವರು ನಿರ್ಮಿಸಿರುವ ಶ್ರೀ ವಿದ್ಯಾಶಂಕರ ದೇವಾಲಯದೊಳಗಿನ ಹನ್ನೆರಡು ಶಿಲಾಸ್ತಂಭಗಳಲ್ಲಿ ಒಂದೊಂದರ ಮೇಲೆ ಒಂದೊಂದು ಸಂಕ್ರಮಣ ಕಾಲದಲ್ಲಿ ಬಿಸಿಲು ಬೀಳುವಂತಿರುವ ಶಿಲ್ಪರಚನಾ ಕೌಶಲ್ಯವನ್ನು ಕಂಡು ಮಹಾಸ್ವಾಮಿಯವರೂ ಅವರ ಸಹಾಧ್ಯಾಯಿಗಳೂ ಹರ್ಷಿಸಿದರು. ಶೃಂಗೇರಿ ಮಠದ ಸಂಪ್ರದಾಯ ವನ್ನನುಸರಿಸಿ ಮಠದ ಅಧಿಕಾರಿಗಳು ಮಾಡಿದ ಮರ್ಯಾದೆಗಳನ್ನೆಲ್ಲ ಸ್ವೀಕರಿಸಿ, ತುಂಗಾ ನದಿಯನ್ನು ದಾಟಿ ಅವರುಗಳು ನರಸಿಂಹ ವನಕ್ಕೆ ತೆರಳಿದರು. ಮಹಾಸ್ವಾಮಿಯವರು ಅಲ್ಲಿ ಶ್ರೀ ಶ್ರೀಗಳವರ ಉಪದೇಶ ವಾಣಿಗಳನ್ನಾಲಿಸಿದ ಬಳಿಕ ಗುರುಗಳನ್ನಗಲಿ ತೆರಳಲಾರದೆ, "ಮನಸ್ಸೆಲ್ಲಾ ಇಲ್ಲೇ ಇದೆ. ಇಲ್ಲಿಂದ ಹೋಗಲಾರದೆ ಕಳವಳವಾಗುತ್ತಿದೆ" ಎಂದರು. ಆಗ ಶ್ರೀ ಶ್ರೀಗಳವರು ಮಂದಸ್ಮಿತದಿಂದ, "ಇಲ್ಲಿಯೇ ಈ ದಿನ ನಿಲ್ಲು ವುದಾಗಿ ಶ್ರೀಮಾನ್ ಫ್ರೇಸರ್ ಸಾಹೇಬರವರಿಗೆ ಹೇಳಿಬಿಡಬಹುದಲ್ಲವೆ? ಮಹಾರಾಜರವರು ಆಜ್ಞೆ ಮಾಡಿದರೆ ಅದೇನೂ ಅಸಾಧ್ಯವಲ್ಲವಷ್ಟೆ! ಮೇಲಾಗಿ ನಮಗೂ ಅಮಿತವಾದ ಸಂತೋಷವುಂಟಾಗುತ್ತದೆ" ಎಂದು ಅಪ್ಪಣೆ ಕೊಡಿಸಿದರು. ಮಹಾಸ್ವಾಮಿಯವರು, "ಅವರು ನಮ್ಮ ವಿದ್ಯಾಗುರುಗಳು. ನಾನು ಈ ದಿನ ಇಲ್ಲಿ ನಿಲ್ಲುವುದಾಗಿ ಹೇಳುವುದು ಧರ್ಮವಲ್ಲ. ಅದನ್ನು ನಾನು ವಿಜ್ಞಾಪಿಸಬೇಕಾದುದೇ ಅಲ್ಲ. ಅವರು ಅನುಜ್ಞೆಕೊಟ್ಟರೆ ಆಗಬಹುದೇ ಹೊರತು ಅನ್ಯಥಾ ಕೂಡದು" ಎಂದು ಬಿನ್ನವಿಸಿದುದನ್ನು ಕೇಳಿ ಶ್ರೀ ಶ್ರೀಗಳವರು ಆಶ್ಚರ್ಯಭರಿತರಾಗಿ ತಾವೇ ಫ್ರೇಸರ್ ಸಾಹೇಬರವರಿಗೆ ಹೇಳಿ, ಅಂದಿನ ಪ್ರಯಾಣವನ್ನು ನಿಲ್ಲಿಸಿದರು. ಮಹಾಸ್ವಾಮಿಯವರು ಆಡಿದ್ದ ಮಾತುಗಳನ್ನು ಶ್ರೀ ಶ್ರೀಗಳವರು ಫ್ರೇಸರ್ ಸಾಹೇಬರವರಿಗೆ ತಿಳಿಸಿದಾಗ ಅವರೂ ವಿಶೇಷವಾಗಿ ಹರ್ಷಿಸಿದರು.

೧೯೦೦ನೆಯ ಇಸವಿ ಜನವರಿ ತಿಂಗಳು ೫ನೆಯ ತಾರೀಖಿನ ದಿನ, ಮಹಾಸ್ವಾಮಿಯವರು ತಮ್ಮ ಅಧ್ಯಾಪಕರುಗಳೊಡನೆಯೂ ಸಹಾಧ್ಯಾಯಿ ಗಳೊಡನೆಯೂ ಉತ್ತರ ಭಾರತದ ನಾನಾ ಪ್ರದೇಶಗಳನ್ನು ನೋಡಿ

ಕೊಂಡು ಬರಲು ಸಂಚಾರಹೊರಟರು; "ಡೂಪ್ಲೆ" ಎಂಬ ಜಹಜಿನಲ್ಲಿ ಮದರಾಸು ನಗರದಿಂದ ಕಲ್ಕತ್ತಾ ನಗರಕ್ಕೆ ತೆರಳಿ, ವೈಸ್ರಾಯಿಯವರಾಗಿದ್ದ ಲಾರ್ಡ್ ಕರ್ಜನ್ ಅವರನ್ನೂ ಸೈನ್ಯಾಧಿಪತಿಗಳಾಗಿದ್ದ ಲಾರ್ಡ್ ಕಿಚನರ್ ಅವರನ್ನೂ ಸಂದರ್ಶಿಸಿ, ಕುಚ್‌ಬಿಹಾರ ಸಂಸ್ಥಾನದ ಮಹಾರಾಜರ ಆತಿಥ್ಯವನ್ನು ಪಡೆದು, ಕಾಶೀ ನಗರಕ್ಕೆ ಚಿತ್ತೈಸಿ ಅಲ್ಲಿಯ ಮಹಾರಾಜರವರಾದ ಶ್ರೀ ಪ್ರಭುನಾರಾಯಣ ಸಿಂಹರವರ ಅತಿಥಿಗಳಾಗಿದ್ದರು; ಕಲ್ಕತ್ತಾ ನಗರದಲ್ಲಿದ್ದಾಗ ಡಾರ್ಜೀಲಿಂಗ್ ನಗರಕ್ಕೆ ಪ್ರಯಾಣಮಾಡಿ, ಮೊಟ್ಟಮೊದಲನೆಯ ಸಾರಿ ಹಿಮಾಲಯ ಪರ್ವತಶ್ರೇಣಿಯನ್ನು ಸಂದರ್ಶಿಸಿ ಆನಂದಿಸಿದರು; ಆಗ್ರಾ ನಗರಕ್ಕೆ ತೆರಳಿ ಜಗತ್ಪ್ರಸಿದ್ಧವಾದ ತಾಜಮಹಲ್ ಕಟ್ಟಡವನ್ನು ಪರಾಂಬರಿಸಿದರು. ಅಲ್ಲಿಗೆ ಹೋದಾಗ ಪ್ರಭುಗಳಾಗಿರತಕ್ಕವರು ಮಾತ್ರ ಕಾಲುಗಳಿಂದ ಜೋಡುಗಳನ್ನು ತೆಗೆಯದೆಯೇ ತಾಜ್‌ಮಹಲಿನೊಳಕ್ಕೆ ಪ್ರವೇಶಿಸಿ ಪರಾಂಬರಿಸಬಹುದೆಂಬ ನಿಯಮವನ್ನರಿತಿದ್ದೂ ಮಹಾಸ್ವಾಮಿಯವರು ಜೋಡುಗಳನ್ನು ಹೊರಗೇ ಬಿಡುವ ಪ್ರಯತ್ನಮಾಡಿದರು. ಆಗ್ಗೆ ಪ್ರಭುಗಳವರು ಬರಿಯ ಕಾಲಿನಲ್ಲಿ ಪ್ರವೇಶಿಸ ಬೇಕಾದ ಆವಶ್ಯಕತೆಯಿಲ್ಲವೆಂದು ಜೊತೆಯಲ್ಲಿದ್ದ ಆಗ್ರಾ ನಗರದ ಮಹಾಶಯರು ಅರಿಕೆ ಮಾಡಿದಾಗ ಮಹಾಸ್ವಾಮಿಯವರು, "ಲೋಕೋತ್ತರ ಸೌಂದರ್ಯ ಸಿಧಿಯ ಎದುರಿಗೆ ಗೌರವ ತೋರಿಸಬೇಕಾದುದೇ ನಮ್ಮೆಲ್ಲರ ಧರ್ಮ" ಎಂದು ಅಪ್ಪಣೆ ಕೊಡಿಸಿದುದನ್ನು ಕೇಳಿ ಅಲ್ಲಿದ್ದವರೆಲ್ಲರೂ ಆಶ್ಚರ್ಯಚಕಿತರಾದರು. ಆ ಸಲದ ಪ್ರವಾಸದಲ್ಲಿ ಮಹಾಸ್ವಾಮಿಯವರು ಗೋಕುಲ ಬೃಂದಾವನ ಯಾತ್ರೆ ಮಾಡಿ, ಲಕ್ನೋ, ಕಾನ್ಪುರ, ದೆಹಲಿ, ಅಮೃತಸರ, ಲಾಹೋರ್ ಮುಂತಾದ ನಗರಗಳಿಗೆಲ್ಲ ದಯಮಾಡಿಸಿ, ಬರೋಡಾ ಸಂಸ್ಥಾನದಲ್ಲಿ ಶ್ರೀ ಸಯ್ಯಾಜಿರಾವ್ ಗಾಯಕವಾಡ ಮಹಾರಾಜರವರ ಆತಿಥ್ಯವನ್ನು ಸ್ವೀಕರಿಸಿದರು; ಆ ಬಳಿಕ ಮುಂಬಯಿ ನಗರಕ್ಕೆ ಪ್ರಯಾಣಮಾಡಿ, ಕೋಟ್ಯಧೀಶ್ವರರಾದ ಸರ್ ಟಾಟಾ ಅವರ ಆತಿಥ್ಯವನ್ನು ಸ್ವೀಕರಿಸಿ, ಬಿಜಾಪುರ, ಹಂಪೆ ಮುಂತಾದುವುಗಳಲ್ಲಿಯ ಶಿಲ್ಪಕಲಾ ಸಂಪತ್ತಿಯನ್ನವಲೋಕಿಸಿ ಮೈಸೂರು ನಗರಕ್ಕೆ ಹಿಂತಿರುಗಿದರು. ಮಹಾಪ್ರಭುಗಳವರು ತಮ್ಮ ಉತ್ತರ ಭಾರತ ಪ್ರವಾಸ ಕಾಲದಲ್ಲಿ ಪ್ರೌಢಿಮೆಯಿಂದ ಉರ್ದು ಭಾಷೆಯಲ್ಲಿ ಮಾತನಾಡಿದುದನ್ನು ಕಂಡ ಮಹಾಶಯರೊಬ್ಬರು ಶ್ರೀಮಾನ್ ಪೂರ್ಣ ರಾಘವೇಂದ್ರರಾಯರವರೊಡನೆ "ತಮ್ಮ ಮಹಾರಾಜರವರು

**ಉತ್ತರ ಭಾರತದಲ್ಲಿಯ ಸಂಚಾರ**



ಆಳಿದ ಮಹಾಸ್ವಾಮಿಯವರ ವಿವಾಹಕಾಲದ ಚಿತ್ರ

ನಮ್ಮ ಭಾಷೆಯಲ್ಲಿ ಎಷ್ಟು ಚೆನ್ನಾಗಿ ಮಾತನಾಡುತ್ತಾರೆ, ನೋಡಿ!" ಎಂದು* ಹೇಳಿದರು.

**ವಿವಾಹ ಮಹೋತ್ಸವ**

ಮಹಾಪ್ರಭುಗಳವರಿಗೆ ಹದಿನಾರು ವರ್ಷ ವಯಸ್ಸಾಗುವ ವೇಳೆಗೆ ವಿವಾಹ ಮಹೋತ್ಸವವು ಜರುಗಬೇಕೆಂಬುದು ಮಹಾಮಾತೃಶ್ರೀಯವರಿಗಿದ್ದ ಅಭಿಲಾಷೆ. ಅವರಿಗೆ ಯಾವುದಾದರೂ ಉತ್ತರ ಭಾರತ ಸಂಸ್ಥಾನದ ರಾಜವಂಶದಿಂದ ಕನ್ಯಾ ಪ್ರತಿಗ್ರಹಮಾಡಬೇಕೆಂಬ ಉದ್ದೇಶವು ಶ್ರೀ ಚಾಮರಾಜೇಂದ್ರ ಒಡೆಯರವರಿಗಿದ್ದುದನ್ನೂ ಮನಸ್ಸಿಗೆ ತಂದುಕೊಂಡು ಮಹಾಮಾತೃಶ್ರೀಯವರು ಕನ್ಯಾನ್ವೇಷಣಕ್ಕಾಗಿ ತಮ್ಮ ಸಹೋದರರಾದ ಶ್ರೀಮಾನ್ ಸರ್ದಾರ್ ಎಂ. ಕಾಂತರಾಜ ಅರಸಿನವರನ್ನೂ, ಶ್ರೀಮಾನ್ ಪಿ. ಎನ್. ಕೃಷ್ಣಮೂರ್ತಿಯವರನ್ನೂ ಉತ್ತರ ಭಾರತಕ್ಕೆ ಕಳುಹಿಸಿದರು. ಕಾಥ್ಯವಾಡ ಸಂಸ್ಥಾನಗಳಲ್ಲೊಂದರ ವಾಣಾ ರಾಜವಂಶದ ಝೂಲಾ ರಾಣಾ ಸಾಹೇಬರವರಾದ ಶ್ರೀ ವಿನಯ ಸಿಂಹರವರ ಕುಮಾರಿಯವರಾದ ಶ್ರೀ ಪ್ರತಾಪಕುಮಾರಿದೇವಿಯವರನ್ನು (ಆಗ್ಗೆ ಅವರಿಗೆ ಹನ್ನೆರಡು ವರ್ಷ ವಯಸ್ಸು) ತಂದು ಶ್ರೀಮನ್ಮಹಾರಾಜ ಶ್ರೀಮನ್ನಾಲ್ವಡಿ ಕೃಷ್ಣರಾಜೇಂದ್ರ ಒಡೆಯರವರಿಗೆ ಶಾರ್ವರಿನಾಮ ಸಂವತ್ಸರ ಜ್ಯೇಷ್ಠ ಶುದ್ಧ ನವಮೀ ಬುಧವಾರದ ದಿನ (೧೯೦೦ನೆಯ ಇಸವಿ ಜೂನ್ ತಿಂಗಳು ಆರನೆಯ ತಾರೀಖಿನ ದಿನ) ಬೆಳಗ್ಗೆ ಸಿಂಹಲಗ್ನ ವೃಷಭ ಮಿಥುನಾಂಶಗಳಲ್ಲಿ ವಿವಾಹ ಮಹೋತ್ಸವವು ಅತ್ಯಂತ ವೈಭವ ವಿಜೃಂಭಣೆಗಳೊಡನೆ ಜಗನ್ಮೋಹನ ಪ್ರಾಸಾದದಲ್ಲಿ ನೆರವೇರಿತು. ಅನೇಕ ರಾಜ ಮಹಾರಾಜರುಗಳೂ, ಇತರ ಮಹನೀಯರೂ, ಆಹ್ವಾನಿತರಾಗಿ ದಯ ಮಾಡಿದ್ದರು. ವೈಸ್ರಾಯಿಯವರು ಕಳುಹಿಸಿದ್ದ ಖಿಲ್ಲತ್ತುಗಳನ್ನೊಪ್ಪಿಸಿ ಆ ವಿವಾಹದಿಂದ ಶ್ರೀ ವಿಕ್ಟೋರಿಯಾ ಮಹಾರಾಣಿಯವರಿಗೂ ವೈಸ್ರಾಯಿಯವರಿಗೂ ಉಂಟಾಗಿದ್ದ ಸಂತೋಷಾತಿಶಯಗಳನ್ನು ಮದರಾಸು ಆಧಿಪತ್ಯದ ಗವರ್ನರವರು ಶ್ರುತಪಡಿಸಿದರು. ಅನಂತರ ನಾನಾ ರಾಜಮಹಾರಾಜರುಗಳ ಕಡೆಯ ಮತ್ತು ನಾನಾ ಮಠಾಧಿಪತಿಗಳ ಕಡೆಯ ಖಿಲ್ಲತ್ತುಗಳು ಸಮರ್ಪಿತವಾದುವು.

ಅದೇ ಸಮಯದಲ್ಲಿ, ಶ್ರೀಮಾನ್ ಸರ್ದಾರ್ ಲಕ್ಷ್ಮೀಕಾಂತರಾಜ ಅರಸಿನವರಿಗೆ ಶ್ರೀ ಚೆಲುವಾಜಮ್ಮಣ್ಣಿಯವರನ್ನು ಕೊಟ್ಟು ವೈಭವ ವಿಜೃಂಭಣೆಗಳಿಂದ ವಿವಾಹ ಮಹೋತ್ಸವವು ನೆರವೇರಿತು.

---

* "ಅಪ್ನೇ ಮಹಾರಾಜಾ ಸಾಹೇಬ್ ಕೈಸೀ ಬಾತ್ ಕರ್ತೇಹೈ ಹಮಾರ ಸಬಾನ್ಮೇ."

ಮಹಾಪ್ರಭುಗಳ ವಿವಾಹ ಸಂಬಂಧವಾಗಿ, ಜೂನ್ ತಿಂಗಳು ೧೩ನೆಯ ತಾರೀಖಿನ ದಿನ ಪ್ರಾತಃಕಾಲ ಚಿನ್ನದ ಗಣಿಯವರೂ, ಕೊಡಗು ಪ್ರಾಂತ ದವರೂ, ಯೂರೋಪಿಯನ್ ಪ್ಲಾಂಟರುಗಳೂ, ನಾನಾ ಸಂಘಗಳೇ ಮುಂತಾದುವುಗಳ ಪ್ರತಿನಿಧಿಗಳೂ, ವಿಜ್ಞಾಪನಾ ಪತ್ರಿಕೆಗಳನ್ನೊಪ್ಪಿಸಿ ದಾಗ, ಆಳಿದ ಮಹಾಸ್ವಾಮಿಯವರು ಅಮೋಘವಾಗಿ ಆಶುಭಾಷಣ ಮಾಡಿ ಪ್ರತ್ಯುತ್ತರ ಹೇಳಿದುದನ್ನು ಕಂಡು ಬ್ರಿಟಿಷ್ ರೆಸಿಡೆಂಟರವರು, ಸರ್ ಕೆ. ಶೇಷಾದ್ರಿಐಯರವರು ಮುಂತಾದವರೆಲ್ಲ ಪರಮಾನಂದ ಭರಿತರಾಗಿ ಶ್ಲಾಘನೆ ಮಾಡಿದರು. ಚಿಕ್ಕವಯಸ್ಸಿನವರಾದ ಮಹಾಸ್ವಾಮಿ ಯವರು ಭಾಷಣ ಮಾಡಿದುದು ಅದೇವೊಟ್ಟಮೊದಲನೆಯ ಸಲವಾದುದ ರಿಂದ, ಸಭಾಕಂಪವಿಲ್ಲದೆ ಭಾಷಣಮಾಡಿಯಾರೆ— ಎಂಬ ವಿಷಯದಲ್ಲಿ ಸಂದೇಹಗ್ರಹಸ್ತರಾಗಿದ್ದ ಸರ್ ಕೆ. ಶೇಷಾದ್ರಿ ಐಯರವರ ಆಶ್ಚರ್ಯ ಸಂತೋಷಗಳು ಅತ್ಯಧಿಕವಾಗಿದ್ದುವು.

ಜೂನ್ ತಿಂಗಳು ೧೪ನೆಯ ತಾರೀಖಿನ ದಿನ ಉಭಯ ದಂಪತಿಗಳೂ ದಿವ್ಯಾಭರಣ ಭೂಷಿತರಾಗಿ, ಅಲಂಕೃತವಾಗಿದ್ದ ಎರಡು ಆನೆಗಳಮೇಲೆ ಅಂಬಾರಿಗಳಲ್ಲಿ ಕುಳಿತು ವೈಭವದಿಂದ ಮೆರೆವಣಿಗೆ ಹೊರಟರು. ಪುರಜನರು ಬೀದಿ ಬೀದಿಗಳಲ್ಲಿಯೂ ಮಹಡಿಗಳಮೇಲೂ ಕಿಕ್ಕಿರಿದು ತುಂಬಿದ್ದರು. ಉತ್ಸವಾರ್ಥವಾಗಿ ಬಂದು ನೆರೆದಿದ್ದ ಲಕ್ಷಾಂತರ ಮಂದಿ ಪ್ರಜೆಗಳೂ ಮೆರೆವಣಿಗೆಯನ್ನು ನೋಡಿ ಹರ್ಷಿಸಿದರು. ವಾದ್ಯಗಾರ ರಿಂದಲೂ, ಸೈನಿಕರಿಂದಲೂ, ರಾಜಬಂಧುಗಳ ಮತ್ತು ಅತಿಥಿಗಳ ರಥಗಳಿಂದಲೂ, ಅಧಿಕಾರಿಗಳೇ ಮುಂತಾದ ಮಹಾಶಯರುಗಳಿಂದಲೂ, ಪರಿವೃತವಾಗಿ ವಿಜೃಂಭಣೆಯಿಂದ ನಡೆದ ಆ ಮೆರೆವಣಿಗೆಯು ರಾತ್ರಿ ಏಳು ಘಂಟೆಗೆ ಹೊರಟು, ನಗರದ ನಾನಾ ಮಾರ್ಗಗಳಲ್ಲಿಯೂ ಹೋಗಿ, ಮತ್ತೆ ಜಗನ್ಮೋಹನ ಪ್ರಾಸಾದಕ್ಕೆ ಹಿಂತಿರುಗುವ ಹೊತ್ತಿಗೆ ಬೆಳಗಿನ ಜಾವ ಐದು ಘಂಟೆಯ ವೇಳೆಯಾಯಿತು.

**ಸದಾಚಾರ ನಿಷ್ಠೆ**

ಮಹಾಪ್ರಭುಗಳ ವಿವಾಹಾನಂತರವೂ "ರಾಯಲ್ ಸ್ಕೂಲ್" ಪಾಠಶಾಲೆಯ ಕಾರ್ಯಗಳು ಮುಂದುವರಿದು, ಮಹಾಸ್ವಾಮಿಯವರು ತಮ್ಮ ವಿದ್ಯಾಪ್ರೌಢಿಮೆಯಿಂದ ತಮ್ಮ ಅಧ್ಯಾಪ ಕರುಗಳನ್ನು ಬೆರಗುಮಾಡಿದ್ದಂತೆಯೇ ತಮ್ಮ ಸದಾಚಾರ ನಿಷ್ಠೆಯಿಂದಲೂ ಅವರನ್ನು ಬೆರಗು ಮಾಡಿದರು. ಮಹಾಸ್ವಾಮಿಯವರು ಬಾಲ್ಯದಲ್ಲಿ ಕೂಡ ಎಂದೂ "ಸೋಡಾವಾಟರ್" ಮುಂತಾದ ಪಾನೀಯಗಳನ್ನಾಗಲಿ, "ಬ್ರೆಡ್"

ಮುಂತಾದುವುಗಳನ್ನಾಗಲಿ ಸೇವಿಸುತ್ತಿರಲಿಲ್ಲ. ಹಬ್ಬಗಳ ದಿನಗಳಲ್ಲಿಯೂ ವ್ರತಾದಿಗಳನ್ನಾಚರಿಸತಕ್ಕ ದಿನಗಳಲ್ಲಿಯೂ ಬಹಳ ಹೊತ್ತು ನಿರಾಹಾರ ದಿಂದಿದ್ದು ಭಕ್ತಿಯಿಂದ ದೇವತಾರ್ಚನೆ ಮುಂತಾದುವುಗಳನ್ನು ನೆರವೇರಿ ಸುತ್ತಿದ್ದರು. ಉಪಾಕರ್ಮ ಮುಂತಾದ ಕರ್ಮಗಳನ್ನು ಸಾಂಗವಾಗಿ ಆಚರಿಸುತ್ತಿದ್ದರು. ಒಂದುಸಲ ನೀಲಗಿರಿಯಲ್ಲಿದ್ದಾಗ್ಗೆ, "ಫರ್ನ್ ಹಿಲ್" ಅರಮನೆಗೆ ಇಪ್ಪತ್ತೈದು ಮೈಲಿಗಳಿಗಿಂತಲೂ ಅಧಿಕ ದೂರದಲ್ಲಿದ್ದ ಕೋಟಗಿರಿಗೆ ಹೋಗಿಬರಬೇಕೆಂದು ಶ್ರೀಮಾನ್ ಫ್ರೇಸರ್ ಸಾಹೇಬರವರು ಗೊತ್ತುಮಾಡಿದರು. ಪ್ರಯಾಣಕ್ಕೆ ನಿಶ್ಚಿತವಾಗಿದ್ದ ವೇಳೆಯು ಮಹಾ ಸ್ವಾಮಿಗಳ ಸ್ನಾನಾದಿ ಪ್ರಾತರಾಹ್ನಿಕಗಳು ಪೂರೈಸುವುದಕ್ಕೆ ಅಸಾಧ್ಯ ವಾಗಿದ್ದಂತಹುದು. ಆ ವಿಚಾರವು ಶ್ರೀಮಾನ್ ಫ್ರೇಸರ್ ಸಾಹೇಬ ರವರಿಗೆ ಗೊತ್ತಿರಲಿಲ್ಲ. ಮಹಾಸ್ವಾಮಿಯವರು ಅವರಿಗೆ ಅದನ್ನು ತಿಳಿಸ ಲಿಚ್ಛಿಸದೆ ಅವರೊಡನೆಯೂ ತಮ್ಮ ಸಹಾಧ್ಯಾಯಿಗಳೊಡನೆಯೂ, ಅಶ್ವಾ ರೋಹಿಗಳಾಗಿ ಹೊರಟೇ ಹೊರಟರು. ಬೆಟ್ಟ ಗುಡ್ಡಗಳ— ಕಾಡು ಮೇಡುಗಳ— ದಾರಿಯಲ್ಲಿ ಇಪ್ಪತ್ತೈದು ಮೈಲಿಗಳಿಗಿಂತ ಹೆಚ್ಚು ದೂರ ಹೋಗಿ ಬರಬೇಕಾಗಿದ್ದ ಆ ಪ್ರಯಾಣವು ಪೂರೈಸಿ ಅರಮನೆಗೆ ಹಿಂತಿರು ಗುವ ವೇಳೆಗೆ ಅಪರಾಹ್ನ ನಾಲ್ಕು ಘಂಟೆಯಾಯಿತು. ಶ್ರೀಮಾನ್ ಎಸ್. ಎಂ. ಫ್ರೇಸರ್ ಸಾಹೇಬರವರು ವಿಧವಿಧವಾಗಿ ಹೇಳಿದರೂ ಮಹಾ ಸ್ವಾಮಿಯವರು ಅಲ್ಪಾಹಾರವನ್ನಾಗಲಿ, ಹಣ್ಣುಗಳನ್ನಾಗಲಿ, ಪಾನೀಯ ಗಳನ್ನಾಗಲಿ ಸ್ವೀಕರಿಸಲು ಸಮ್ಮತಿಸಲಿಲ್ಲ. ಮಾರ್ಗ ಮಧ್ಯದಲ್ಲಿ ಅವರ ಜೊತೆಯವರು ಬಗೆಬಗೆಯ ಫಲಾಹಾರ ವಸ್ತುಗಳನ್ನೂ, ಪಾನೀಯ ಗಳನ್ನೂ ಸೇವಿಸಿ ವಿಶ್ರಮಿಸಿಕೊಂಡೂ ಸಹ, ಅರಮನೆಗೆ ಹಿಂತಿರುಗುವ ವೇಳೆಗೆ ದಣಿದು ತಟ್ಟಾದರು. ಮಹಾಸ್ವಾಮಿಯವರು ನೀರನ್ನು ಕೂಡ ಕುಡಿಯದೆ, ಅವರೆಲ್ಲರೊಡನೆಯೂ ವಿನೋದವಾಗಿ ಮಾತನಾಡುತ್ತಾ, ಪ್ರಕೃತಿ ಸೌಂದರ್ಯವನ್ನು ನೋಡಿ ಆನಂದಿಸುತ್ತಾ, ಹರ್ಷಚಿತ್ತದಿಂದಿದ್ದು ಪ್ರಯಾಣವನ್ನು ಪೂರೈಸಿದರು.

ಅದೇ ರೀತಿಯಲ್ಲಿ, ಮಹಾಪ್ರಭುಗಳವರು ತಮ್ಮ ಸಾಹಸಪ್ರೇಮ ದಿಂದಲೂ ತಮ್ಮ ಅಧ್ಯಾಪಕರಿಗೆ ವಿಸ್ಮಯವನ್ನೂ, ಸಹಾಧ್ಯಾಯಿಗಳಿಗೆ ಆತಂಕವನ್ನೂ, ಮಹಾಮಾತೃಶ್ರೀಯವರಿಗೆ ಕಳವಳವನ್ನೂ, ಸೋದರ ಸೋದರಿಯರಿಗೆ ಭೀತಿ ಯನ್ನೂ ಉಂಟುಮಾಡುತ್ತಿದ್ದರು. ಹದಿನಾರು ವರ್ಷ ವಯಸ್ಸೂ ಪೂರ್ತಿಯಾಗಿಲ್ಲದಿದ್ದಾಗ್ಗೆ, ಸರ್ಕಸ್ಸಿನವನೊಬ್ಬನು

**ಸಾಹಸಪ್ರೇಮ**

ಮೇಲಿನಿಂದ ಹಿಂಗಣ್ಣು ಹೊಡೆದು ಕೆಳಕ್ಕೆ ಬಂದು ನಿಂತುದನ್ನು ಕಂಡು, ಮಾರನೆಯ ದಿನ ಅದನ್ನು ಅನುಕರಣ ಮಾಡಿ ಹಿಂಗಣ್ಣು ಹೊಡೆಯ ಲನುವಾದಾಗ, ಮಹಾಸ್ವಾಮಿಯವರ ಜ್ಯೇಷ್ಠ ಸಹೋದರಿಯವರು, "ಮುಂದೇನು ಗತಿ! ತಾಯಿ ಚಾಮುಂಡೇಶ್ವರಿಯೇ ಕಾಪಾಡಬೇಕು" ಎಂದು ಭೀತಿಗೊಂಡರು. "ಗರಡಿ ನಾಂ" ಮಾಡಿದ್ದ ಮಹಾಸ್ವಾಮಿ ಯವರು ಅತ್ಯಂತ ಎತ್ತರದಿಂದ ಹಿಂಗಣ್ಣು ಹೊಡೆದು ಸುರಕ್ಷಿತರಾಗಿ ಬಂದು ನಿಂತುದನ್ನು ಕಂಡಾಗ ಅವರು ಆನಂದಭರಿತರಾದರು. ಮೇಕೆಗಳು, ಕೋತಿಗಳು ಮುಂತಾದ ಪ್ರಾಣಿಗಳಿಗೆ ಬಗೆಬಗೆಯ ಶಿಕ್ಷಣಗಳನ್ನು ಕೊಟ್ಟು ಮಹಾಸ್ವಾಮಿಯವರು ಅವುಗಳ ಸಾಧಕಗಳನ್ನು ಆಪ್ತರ ಮುಂದೆ ಪ್ರದರ್ಶಿ ಸುತ್ತಿದ್ದರು. ತಾವು ಕುದುರೆಗಳ ಮೇಲೆ ಸವಾರಿಮಾಡುವಾಗ ಸಾಧಕಗಳನ್ನು ಮಾಡುತ್ತ, ಸರ್ಕಸ್ಸಿನವರನ್ನು ಮೀರಿಸುವ ಸಾಹಸ ಪ್ರದರ್ಶನಗಳಿಂದ ಅಧ್ಯಾಪಕರುಗಳನ್ನೂ, ಮಹಾಮಾತೃಶ್ರೀಯವರನ್ನೂ ಮತ್ತು ಇತರರನ್ನೂ ಅವರು ಸಂತೋಷಪಡಿಸುತ್ತಿದ್ದರು. ತಮ್ಮ ಜೊತೆಯವರಲ್ಲಿ ಸಾಹಸ ಪ್ರಿಯರಾದ ಕೆಲವು ಮಂದಿಗಳೊಡನೆ ಏರ್ಪಡಿಸಿದ್ದ ಸರ್ಕಸ್ಸಿಗೆ ಮಹಾ ಸ್ವಾಮಿಯವರು "ರಿಂಗ್ ಮಾಸ್ಟರ್" ಆಗಿ ದಸರಾ ಉತ್ಸವವು ಪೂರೈಸಿದ ಮೇಲೂ ಕ್ರಿಸ್ಮಸ್ ರಜಾ ಕಾಲಗಳಲ್ಲಿಯೂ ಮಹಾಮಾತೃಶ್ರೀಯವರೇ ಮುಂತಾದವರ ಸಮ್ಮುಖದಲ್ಲಿ ಪ್ರದರ್ಶನಗಳನ್ನೇರ್ಪಡಿಸುತ್ತಿದ್ದರು. ಕುದುರೆಗಳಿಗೂ ಇತರ ಪ್ರಾಣಿಗಳಿಗೂ ಶಿಕ್ಷಣಕೊಟ್ಟು ಸಾಹಸ ಕಾರ್ಯ ಗಳನ್ನು ಮಾಡಿಸುವುದರಲ್ಲಿ ಅವರು ನಿಸ್ಸೀಮರಾದರು. "ರಾಕೆಟ್ಸ್" ಚೆಂಡಾಟದಲ್ಲಿಯೂ, "ಪೋಲೋ" ಚೆಂಡಾಟದಲ್ಲಿಯೂ ದಕ್ಷಿಣ ಭಾರತದಲ್ಲಿ ಪ್ರಖ್ಯಾತರಾಗಿದ್ದವರಲ್ಲಿ ಮಹಾಸ್ವಾಮಿಯವರು ಪ್ರಥಮ ಪಜ್ತ್ತಿಯವರು. ನೀಲಗಿರಿಯಲ್ಲಿ ಅಶ್ವಾರೋಹಿಗಳಾಗಿ ಬೇಟೆ ನಾಯಿ ಗಳನ್ನು ಮುಂದೆ ಬಿಟ್ಟುಕೊಂಡು ಯೂರೋಪಿಯನ್ ಬೇಟೆಗಾರರೊಡನೆ ಹೊರಟಾಗ, ಪ್ರಾಣಾಪಾಯಕ್ಕೂ ಲಕ್ಷ್ಯಮಾಡದೆ ಹಳ್ಳಕೊಳ್ಳಗಳಲ್ಲಿಯೂ, ಕಡಿದಾದ ನಾನಾ ಪ್ರದೇಶಗಳಲ್ಲಿಯೂ ಅಸೀಮ ಧೈರ್ಯದಿಂದ ಕುದುರೆ ಯನ್ನು ಬಿಟ್ಟುಕೊಂಡು ನಾಯಿಗಳು ಹೋದಕಡೆಗೆ ಅದನ್ನು ಓಡಿಸುತ್ತ ಬೇಟೆಯನ್ನು ಹಿಂಬಾಲಿಸಿ ಹೊರಟುಹೋಗುತ್ತಿದ್ದರು. ಸಮಸ್ತ ವಿಚಾರ ಗಳಲ್ಲಿಯೂ ಪ್ರಥಮಶ್ರೇಣಿಯಲ್ಲಿರಬೇಕೆಂಬುದು ಮಹಾಸ್ವಾಮಿಯವರಿ ಗಿದ್ದ ಮನೋಜ್ಞವಾದ ಧ್ಯೇಯ.

ಯಾರ ಕೀರ್ತಿಜ್ಯೋತಿಗಳಂತೆ ಇಂದು ವಿದ್ಯುಚ್ಛಕ್ತಿಯ ದೀಪಗಳು ಮೈಸೂರು ಸಂಸ್ಥಾನದ ನಾನಾ ಪ್ರದೇಶಗಳಲ್ಲಿ ಬೆಳಗುತ್ತಿವೆಯೋ

ಆ ಮಹಾಮಾತೃಶ್ರೀ ವಾಣೀವಿಲಾಸ ಸನ್ನಿಧಾನದವರು ರೀಜೆಂಟರಾಗಿ ರಾಜ್ಯಭಾರವನ್ನು ವಹಿಸಿದ್ದ ಅವಧಿಯಲ್ಲಿ ಪ್ರಚಂಡ ಮೇಧಾವಿಗಳಾದ

**ವಿದ್ಯುಚ್ಛಕ್ತಿ ಉತ್ಪತ್ತಿ ಏರ್ಪಾಡಿಗೆ ಪ್ರೋತ್ಸಾಹ**

ಸರ್ ಕೆ. ಶೇಷಾದ್ರಿ ಐಯ್ಯರವರ ಸಲಹೆ ಸಾಹಸಗಳ ಫಲಿತಾಂಶವಾಗಿ ಶಿವನಸಮುದ್ರ ಜಲಪಾತದ ಬಳಿಯಲ್ಲಿ ಕಾವೇರೀ ನದಿಯ ಜಲದಿಂದ ವಿದ್ಯುಚ್ಛಕ್ತಿಯನ್ನು ಉತ್ಪತ್ತಿ ಮಾಡುವ ಯಂತ್ರಗಳು ಸ್ಥಾಪಿತವಾದುವು. ಆ ಏರ್ಪಾಡು ನಡೆದುದಕ್ಕೆ ಹದಿನಾರು ವರ್ಷ ವಯಸ್ಸು ಕೂಡ ತುಂಬದ ಮಹಾಸ್ವಾಮಿಯವರೂ ಸಹ ಎಷ್ಟುಮಟ್ಟಿಗೆ ಕಾರಣರೆಂಬುದು ಬಹುಶಃ ಅನೇಕರಿಗೆ ತಿಳಿದಿರಲಾರದು. ಈ ವಿಚಾರವನ್ನು ಇಲ್ಲಿ ಸೂಚಿಸಿದರೆ, ಮಹಾಸ್ವಾಮಿಯವರಿಗಿದ್ದ ದೂರದೃಷ್ಟಿಯೂ, ಸ್ಫೂರ್ತಿಯೂ, ಪ್ರತಿಭೆಯೂ, ದೇಶಾಭಿಮಾನವೂ, ಹೃದಯಂಗಮವಾಗಿ ವ್ಯಕ್ತವಾಗುವುವೆಂದು ತೋರುವುದು. ವಿದ್ಯುಚ್ಛಕ್ತಿಯನ್ನು ಉತ್ಪತ್ತಿಮಾಡುವ ಏರ್ಪಾಡನ್ನು ಮೈಸೂರು ಸಂಸ್ಥಾನದಲ್ಲಿ ನೆರವೇರಿಸಬೇಕೆಂದು ಸರ್ ಕೆ. ಶೇಷಾದ್ರಿ ಐಯ್ಯರವರು ಸಲಹೆಮಾಡಿದಾಗ್ಗೆ ವಿದ್ಯುಚ್ಛಕ್ತಿಯನ್ನು ಉತ್ಪತ್ತಿಮಾಡಿ ದೂರ ಪ್ರದೇಶಗಳಿಗೆ ಸಾಗಿಸುವ ಏರ್ಪಾಡು ಅಮೆರಿಕಾ ಖಂಡದ ನಯಾಗರ (Niagara) ಜಲಪಾತದ ಬಳಿಯಲ್ಲಿ ಹೊರತು ಪ್ರಪಂಚದ ಮತ್ತಾವ ದೇಶದಲ್ಲಿಯೂ ನಡೆದಿರಲಿಲ್ಲ. ಆದಕಾರಣ, ಪ್ರಪಂಚದಲ್ಲಿ ಎರಡನೆಯದಾದ ಅಂತಹದೊಂದು ಏರ್ಪಾಡು ಮೈಸೂರು ಸಂಸ್ಥಾನದಲ್ಲಿ ನಡೆಯಬೇಕೆಂಬ ಸರ್ ಕೆ. ಶೇಷಾದ್ರಿಐಯ್ಯರವರ ಸಲಹೆಯು ಅವರಂತೆ ಮೇಧಾವಿಗಳಲ್ಲದಿದ್ದ ಹಲವು ಮಂದಿ ಅಧಿಕಾರಿಗಳಿಗೆ ವಿಲಕ್ಷಣವಾಗಿ ತೋರಿತು. ಕೆಲವರು ಅವರನ್ನು ಅಪಹಾಸ್ಯಮಾಡಿ ಆ ಏರ್ಪಾಡನ್ನು "ಸರ್ ಕೆ. ಶೇಷಾದ್ರಿ ಐಯ್ಯರವರ ಶುಷ್ಕ ಪ್ರತಿಷ್ಠೆಯ ವೃಥಾ ಭ್ರಾಂತಿ" ಎಂದು ಕರೆದು ಗಹಗಹಿಸಿ ನಕ್ಕು ತೃಪ್ತಿಪಟ್ಟುಕೊಂಡರು. ಆದರೆ, "ಸರ್. ಕೆ. ಶೇಷಾದ್ರಿ ಐಯ್ಯರವರ ಶುಷ್ಕ ಪ್ರತಿಷ್ಠೆಯ ವೃಥಾ ಭ್ರಾಂತಿ"ಯಿಂದಲೇ ಇಂದು ಮೈಸೂರು ಸಂಸ್ಥಾನದಲ್ಲಿ ವಿದ್ಯುಚ್ಛಕ್ತಿಯ ದೀಪಗಳು ಬೆಳಗುತ್ತಿರುವುದು! ಪಾಶ್ಚಾತ್ಯರಲ್ಲಿ ಅಮೆರಿಕಾ ಖಂಡದವರಿಗೆ ಹೊರತು, ಉಳಿದ ನಾನಾ ದೇಶಗಳವರಿಗೂ ಜಲಪಾತದಿಂದ ವಿದ್ಯುಚ್ಛಕ್ತಿಯನ್ನು ಉತ್ಪತ್ತಿಮಾಡುವ ವಿಷಯದಲ್ಲಿ ಪರಿಶ್ರಮವಾಗಲಿ ಭರವಸೆಯಾಗಲಿ ಇರಲಿಲ್ಲ. ಅದರಲ್ಲಿಯೂ ಭಾರತೀಯರೊಬ್ಬರ ಸಲಹೆಯಮೇಲೆ ಮೈಸೂರು ಸಂಸ್ಥಾನದಂತಹ ಸಂಸ್ಥಾನದಲ್ಲಿ ಆ ರೀತಿ ಮಾಡುವ ವಿಷಯದಲ್ಲಿ ಅವಿಶ್ವಾಸವೇ ಆಗ ಭಾರಿ ಭಾರಿ

ಅಧಿಕಾರಗಳನ್ನಲಂಕರಿಸಿದ್ದ ಯೂರೋಪಿಯನ್ ಹುದ್ದೇದಾರರುಗಳ ಮನಸ್ಸಿನಲ್ಲಿ ಮೂಡಿದ್ದಿತು. ಆ ಉದ್ಯಮವು ಸಫಲವಾದೀತೆಂದು ಶ್ರೀಮಾನ್ ಎಡ್ಮಂಡ್ ಕ್ಯಾರಿಂಗ್ಟನ್, ಶ್ರೀಮಾನ್ ಹೋಮ್ಸ್, ಕರ್ನಲ್ ಪೆನಿಕ್ವಿಕ್, ಕ್ಯಾಪ್ಟನ್ ಲೊಬಿನಿಯರ್ ಮುಂತಾದವರೆಲ್ಲರ ಭರವಸೆಯ ಮಾತುಗಳಿಂದ ಕೂಡ ಅವರಿಗೆ ನಂಬಿಕೆ ಹುಟ್ಟಿರಲಿಲ್ಲ. ಮೈಸೂರು ಸಂಸ್ಥಾನದ ಭಾರಿ ಭಾರಿ ಅಧಿಕಾರಿಗಳಲ್ಲಿ ಬಹು ಮಂದಿಗಳು ಶಿವನಸಮುದ್ರ ದಲ್ಲಿ ವಿದ್ಯುಚ್ಛಕ್ತಿಯನ್ನು ಉತ್ಪತ್ತಿಮಾಡಬೇಕೆಂದಿದ್ದ ಆ ಏರ್ಪಾಡಿಗೆ ವಿರೋಧಿಗಳಾಗಿ ಹಣವನ್ನು ಹೊಳೆಯಲ್ಲಿ ಮುಳುಗಿಸುವ ಪ್ರಯತ್ನಕ್ಕೆ ತಮ್ಮ ಮನಸ್ಸೊಪ್ಪದೆಂದು ತಮ್ಮ "ತ್ರಿಕರಣ ಶುದ್ಧವಾದ" ಅಭಿಪ್ರಾಯ ವನ್ನು ಸೂಚಿಸಿದರು. ಸರ್ ಕೆ. ಶೇಷಾದ್ರಿ ಐಯರವರ ಅದ್ಭುತವಾದ ಶಿಲ್ಪಕಲಾ ಪ್ರಾಧಿಮೆಯು ಅವರುಗಳಲ್ಲಿ ಅಭಾವವಾಗಿದ್ದುದೇ ಅದಕ್ಕೆ ಕಾರಣ. ಅವರಲ್ಲೊಬ್ಬರಂತೂ, ಸರ್ ಕೆ. ಶೇಷಾದ್ರಿ ಐಯರವರು ತಮ್ಮ ಸ್ವಂತ ಹಣವನ್ನು ಬೇಕಾದರೆ ಲಕ್ಷಗಟ್ಟಲೆಯಾಗಿ ಅವಶ್ಯವಾಗಿ ಹಾಳು ಮಾಡಬಹುದೆಂದೂ, ಸಂಸ್ಥಾನದ ಹಣವನ್ನು ಪೋಲು ಮಾಡುವುದು ಉಚಿತವಲ್ಲವೆಂದೂ ಕಂಠೋಕ್ತವಾಗಿ ಹೇಳಿಬಿಟ್ಟರು. ಸರ್ ಕೆ. ಶೇಷಾದ್ರಿ ಐಯರವರು ಮೇಧಾವಿ ಶ್ರೇಷ್ಠರೆಂಬ ನಂಬಿಕೆಯು ಮಹಾಮಾತೃಶ್ರೀ ಯವರಿಗಿದ್ದಿತಾದರೂ ಈ ಬಗೆಯ ಭಿನ್ನಾಭಿಪ್ರಾಯದ ದೆಸೆಯಿಂದಲೂ ಆ ಏರ್ಪಾಡಿಗಾಗಿ ಅನೇಕ ಲಕ್ಷ ರೂಪಾಯಿಗಳ ಭಾರಿ ಮೊತ್ತವನ್ನು ವೆಚ್ಚಮಾಡಬೇಕಾಗಿದ್ದುದರಿಂದಲೂ ಅದಕ್ಕೆ ಸಮ್ಮತಿ ಕೊಡುವುದೇ ಬಿಡುವುದೇ ಎಂಬುದನ್ನು ಕುರಿತು ಅವರು ಚಿಂತಿಸುತ್ತಿದ್ದರು.

ಆ ಬಗೆಯ ಸಂಧಿಕಟ್ಟಿನ ಸಮಯದಲ್ಲಿ ಸರ್ ಕೆ. ಶೇಷಾದ್ರಿ ಐಯರವರ ಸಲಹೆಗೆ ಇನ್ನೂ ಅಪ್ರಾಪ್ತವಯಸ್ಕರಾಗಿದ್ದ ಶ್ರೀಮನ್ಮಹಾ ರಾಜರವರಿಂದ ಅಸಿರೀಕ್ಷಿತವಾಗಿ ಪ್ರೋತ್ಸಾಹವೂ, ಶ್ಲಾಘನೆಯೂ ಲಭಿಸಿದುವು. ಅವು ಲಭಿಸಿದ ಸನ್ನಿವೇಶವೂ ಬಂಧುರವಾದುದು: ಅಮೆರಿಕಾ ಖಂಡದಿಂದ ಭರತ ಖಂಡಕ್ಕೆ ಬಂದಿದ್ದ ಪ್ರವಾಸಿಯೊಬ್ಬರು ಮೈಸೂರು ಸಂಸ್ಥಾನಕ್ಕೂ ದಯಮಾಡಿದ್ದರು. ಅವರು ನಾನಾ ಪ್ರದೇಶ ಗಳನ್ನೂ ನೋಡಿ ಬಂದ ಬಳಿಕ, ಮಹಾಸ್ವಾಮಿಯವರು ಅವರನ್ನು ಕುರಿತು, "ತಮ್ಮ ದೇಶಕ್ಕೂ ನಮ್ಮ ಸಂಸ್ಥಾನಕ್ಕೂ ಸಾಮ್ಯವೇನಾದರೂ ಉಂಟೆ?" ಎಂದು ಪ್ರಶ್ನೆಮಾಡಿದರು. ಆಗ ಅವರು, "ದೊಡ್ಡ ದೊಂದು ಸಾಮ್ಯವಿದೆ. ನಮ್ಮ ದೇಶದಲ್ಲಿರುವಂತೆ ತಮ್ಮ ಸಂಸ್ಥಾನ ದಲ್ಲಿಯೂ ಜಲಪಾತಗಳಿವೆ. ಆದರೆ, ನಾವು ಧೈರ್ಯಮಾಡಿ ನಯಾಗರ

ಜಲಪಾತದಿಂದ ವಿದ್ಯುಚ್ಛಕ್ತಿಯನ್ನು ಉತ್ಪತ್ತಿಮಾಡಿ ಲಾಭ ಹೊಂದು ತ್ತಿದ್ದೇವೆ. ತಮ್ಮಲ್ಲಿ ಮಾತ್ರ ಇನ್ನೂ ಹಾಗೆ ಧೈರ್ಯ ಮಾಡಿಲ್ಲ" ಎಂದು ಉತ್ತರ ಹೇಳಿದರು. ಆ ಪ್ರತ್ಯುತ್ತರದಿಂದ, ಮಹಾಸ್ವಾಮಿಯವರ ಮನಸ್ಸಿನಮೇಲೆ ವಿಶೇಷವಾಗಿ ಪರಿಣಾಮವುಂಟಾಯಿತು. ವಿದೇಶದಲ್ಲಿ ಸಫಲವಾಗಿ ನೆರವೇರಿದ್ದ ಏರ್ಪಾಡು ಮೈಸೂರು ಸಂಸ್ಥಾನದಲ್ಲಿ ಸಹ ಏಕೆ ಸಫಲವಾಗಕೂಡದೆಂದು ತೀವ್ರಾಲೋಚನೆಗಾರಂಭಿಸಿದರು. ಅವರು ಶಿವನಸಮುದ್ರದ ವಿದ್ಯುಚ್ಛಕ್ತಿ ಏರ್ಪಾಡನ್ನು ರಚಿಸಬೇಕೆಂದಿದ್ದ ವಿವರಗಳ ಸಮಾಲೋಚನೆಯನ್ನೂ, ನಯಾಗರ ವಿದ್ಯುಚ್ಛಕ್ತಿಯ ಏರ್ಪಾಡಿನ ವಿಷಯಗಳನ್ನೂ ತಮಗೆ ಬೋಧಿಸಬೇಕೆಂದು ಶ್ರೀಮಾನ್ ಎಸ್. ಎಂ. ಫ್ರೇಸರ್ ಸಾಹೇಬರವರಲ್ಲಿ ವಿಜ್ಞಾಪಿಸಿಕೊಂಡರು. ಸರ್ ಕೆ. ಶೇಷಾದ್ರಿ ಐಯರವರೇ ಅದನ್ನು ಬೋಧಿಸಲು ತಕ್ಕವರೆಂದು ಭಾವಿಸಿ ಮಹಾಸ್ವಾಮಿ ಯವರ ವಿಜ್ಞಾಪನೆಯು ಅವರಲ್ಲಿ ಸೂಚಿತವಾಯಿತು. ಅವರು ಸಂತೋಷ ದಿಂದ ನಯಾಗರ ವಿದ್ಯುಚ್ಛಕ್ತಿ ಏರ್ಪಾಡಿನ ಯಂತ್ರಾಲಯದ ವಿಶಿಷ್ಟ ವಿವರಗಳನ್ನೂ ಸಚಿತ್ರವಾಗಿ ನಿರೂಪಿಸಿದ್ದ ದೊಡ್ಡ ಗ್ರಂಥವನ್ನು ಶ್ರೀಮಾನ್ ಪೂರ್ಣ ರಾಘವೇಂದ್ರರಾಯರವರ ವಶಕ್ಕೆ ಕೊಟ್ಟು ಅದನ್ನು ಸಮಗ್ರವಾಗಿ ಓದಿ ಅದರಲ್ಲಿದ್ದ ವಿಷಯಗಳನ್ನೆಲ್ಲ ಮಹಾಸ್ವಾಮಿಯವರಿಗೆ ಅರಿಕೆ ಮಾಡಬೇಕೆಂದು ಅಪ್ಪಣೆ ಮಾಡಿದರು. ಆ ಕಾರ್ಯವು ನೆರವೇರಿದ ಮೇಲೆ ಸರ್ ಕೆ. ಶೇಷಾದ್ರಿ ಐಯರವರು ಮಹಾಸ್ವಾಮಿಯವರಿಗೆ ಅನೇಕ ಪ್ರಶ್ನೆಗಳನ್ನು ಹಾಕಿ ತಮಗೆ ದೊರೆತ ಉತ್ತರಗಳಿಂದ ಸಂತುಷ್ಟ ರಾದರು. ಈ ಮಧ್ಯದಲ್ಲಿ ಸರ್ ಕೆ. ಶೇಷಾದ್ರಿ ಐಯರವರು ವಿದ್ಯುಚ್ಛಕ್ತಿಯ ಉತ್ಪತ್ತಿಯ ಯಂತ್ರಾಲಯದ ಪರಿಶೀಲನೆಗಾಗಿ ಅಮೆರಿಕಾ ಖಂಡಕ್ಕೆ ಕಳುಹಿಸಿದ್ದ ಶ್ರೀಮಾನ್ ಎ. ಜೆ. ಲೊಬಿನಿಯರವರು ಅಲ್ಲಿಂದ ಬಂದು ತಮ್ಮ ಸಲಹೆಗಳನ್ನೊಪ್ಪಿಸಿದರು. ಶಿವನಸಮುದ್ರದಲ್ಲಿ ವಿದ್ಯುಚ್ಛಕ್ತಿ ಯನ್ನುತ್ಪತ್ತಿಮಾಡುವ ಏರ್ಪಾಡು ಲಾಭದಾಯಕವೆಂದೂ, ಅಮೆರಿಕಾ ಖಂಡದಲ್ಲಿ ಸಫಲವಾಗಿದ್ದ ಏರ್ಪಾಡು ಮೈಸೂರು ಸಂಸ್ಥಾನದಲ್ಲಿ ನೆರವೇರದೆ ವಿಫಲವಾಗುವುದು ಅಸಂಭವವೆಂದೂ, ಒಂದುವೇಳೆ ಅದರಿಂದ ನಷ್ಟವೇ ಆಗುವುದೆಂದು ಭಾವಿಸಿದರೂ ಅಷ್ಟು ದೊಡ್ಡ ಕೆಲಸಕ್ಕೆ ಕೈಹಾಕಿದ ಪ್ರಯತ್ನವೇ ಯಶಸ್ಕರವೆಂದೂ, ವಿಧವಿಧವಾಗಿ ಸರ್. ಕೆ. ಶೇಷಾದ್ರಿ ಐಯರವರು ಭಕ್ತಿ ವಿಶ್ವಾಸಗಳಿಂದ ಮಹಾಮಾತೃಶ್ರೀಯವರಿಗೆ ಅರಿಕೆ ಮಾಡಿದರು. ಮಹಾಸ್ವಾಮಿಯವರೂ ಸಹ ಅದೇ ವಿಚಾರವನ್ನು ಪ್ರಸ್ತಾವಿಸಿ ಶಿವನಸಮುದ್ರದಲ್ಲಿ ವಿದ್ಯುಚ್ಛಕ್ತಿಯನ್ನು ಉತ್ಪತ್ತಿಮಾಡುವ

ವ್ಯವಸ್ಥೆಯು ಮೈಸೂರು ಸಂಸ್ಥಾನಕ್ಕೇ ಭೂಷಣಪ್ರಾಯವೆಂದೂ, ಅದು ಮಾತ್ರ ಸಫಲವಾದಲ್ಲಿ ಮೈಸೂರು ಸಂಸ್ಥಾನದ ಅಭ್ಯುದಯ ಸಾಧನೆಗೆ ಬಹಳ ಸಹಾಯವೆಂದೂ, ಅಮೇರಿಕಾ ಖಂಡದವರಂತೆಯೇ ಮೈಸೂರು ಸಂಸ್ಥಾನದವರೂ ಎದೆಗಾರಿಕೆಯನ್ನು ತೋರಿಸಿ ಕಾರ್ಯಾರಂಭ ಮಾಡಲೇ ಬೇಕೆಂದೂ ಹೃದಯಂಗಮವಾಗಿ ಮಹಾಮಾತೃಶ್ರೀಯವರಲ್ಲಿ ಅರಿಕೆ ಮಾಡಿದರು. ಅದರ ಪರಿಣಾಮವಾಗಿ ಮಹಾಮಾತೃಶ್ರೀಯವರು ಸಂತೋಷದಿಂದ ಅನುಜ್ಞೆಯನ್ನು ದಯಪಾಲಿಸಿದರು. ಈ ವಿಚಾರಕ್ಕೆ ಮಹಾಸ್ವಾಮಿಯವರು ಪ್ರವೇಶಿಸದೆ ತಟಸ್ಥರಾಗಿದ್ದ ಪಕ್ಷಕ್ಕೆ ಶಿವನ ಸಮುದ್ರದಲ್ಲಿ ವಿದ್ಯುಚ್ಛಕ್ತಿಯ ಉತ್ಪತ್ತಿಯ ಏರ್ಪಾಡೇ 'ಬಹುಶಃ ನೆರವೇರುತ್ತಿರಲಿಲ್ಲವೆಂದು ಧಾರಾಳವಾಗಿ ಹೇಳಬಹುದು.

**ಶ್ರದ್ಧಾಜ್ಯೋತಿಯ ತನಿ ಬೆಳಕು**

ಮಹಾಪ್ರಭುಗಳವರು ವಯಸ್ಕರಾಗುತ್ತ ಬಂದಂತೆಲ್ಲ, ತಮಗೆ ತರಗತಿಯಲ್ಲಿ ಭಗವದ್ಗೀತೆ ಮುಂತಾದ ಗ್ರಂಥಗಳಿಂದ ನಡೆಯುತ್ತಿದ್ದ ಪಾಠಪ್ರವಚನಗಳಿಂದಲೇ ತೃಪ್ತರಾಗದೆ, ಪಂಡಿತರುಗಳನ್ನು ತಮ್ಮ ಬಳಿಗೆ ಬರಮಾಡಿಕೊಂಡು ಅವರುಗಳಿಂದ ತತ್ತ್ವಾರ್ಥಗಳನ್ನು ತಿಳಿದುಕೊಂಡು ಸಮಗ್ರವಾಗಿ ಚರ್ಚಿಸುತ್ತಿದ್ದರು. ಅವರ ಧರ್ಮಶ್ರದ್ಧೆಯು ದಿನದಿನವೂ ವೃದ್ಧಿಗೊಂಡಿತು. ಒಂದು ಸಲ, ಮೇಧಾವಿ ಶ್ರೇಷ್ಠರಾದ ಸರ್. ಕೆ. ಶೇಷಾದ್ರಿ ಐಯರವರು ಶ್ರೀ ಶಂಕರಾಚಾರ್ಯರವರ ಬ್ರಹ್ಮಸೂತ್ರ ಭಾಷ್ಯವನ್ನು ವ್ಯಾಸಂಗ ಮಾಡಿದಾಗ್ಗೆ, ಜಟಿಲ ವಿಚಾರವೊಂದರಲ್ಲಿ ಆಚಾರ್ಯರ ವಾದ ಸರಣಿಯಲ್ಲಿ ಕುಂದುಂಟೆಂದು ಭಾವಿಸಿ ಆ ಘಟ್ಟದಲ್ಲಿ ಆಚಾರ್ಯರು ಮೋಸಹೋಗಿ ಎಡವಿದ್ದರೆಂದೇ ನಂಬಿದ್ದರು. ಒಂದು ದಿನ ರಾತ್ರಿ ಶ್ರೀಮನ್ಮಹಾರಾಜರವರ ಸಮಕ್ಷಮದಲ್ಲಿ ಪಂಡಿತರೊಬ್ಬರು ತತ್ತ್ವಾರ್ಥವನ್ನು ಬೋಧಿಸಲು ಪ್ರಾರಂಭಿಸಿದಾಗ ಅಲ್ಲಿಗೆ ದಯಮಾಡಿದ ಸರ್. ಕೆ. ಶೇಷಾದ್ರಿ ಐಯರವರು, "ಮಹಾಸ್ವಾಮಿಯವರ ಚಿತ್ತಕ್ಕೇಕೆ ಆಯಾಸಕೊಡುತ್ತೀರಿ? ಈ ದರ್ಶನಗಳು, ಈ ರಗಳೆ, ಇದೆಲ್ಲಾ ಸಾಕು. ಶಂಕರಾಚಾರ್ಯರೇ ಎಡವಿದ್ದಾರೆ. ಇನ್ನೇಕೆ, ಈ ವಾದಗಳು!" ಎಂದುಬಿಟ್ಟರು. ಅಲ್ಲದೆ ತಮ್ಮ ಅನುಮಾನವನ್ನೂ ಹೇಳಿದರು. ಆ ಪಂಡಿತರು ನೈಚ್ಯಾನುಸಂಧಾನ ಮಾಡುತ್ತ, ಬಲವಂತವಾಗಿ ನಗುತ್ತ, "ನಾವು ಯಾರನ್ನು ಬೇಕಾದರೂ ವಾದದಲ್ಲಿ ಸೋಲಿಸಬಹುದು. ದಿಗ್ಗಜಪಂಡಿತರುಗಳನ್ನೂ ಒಪ್ಪದ ದಿವಾನರವರನ್ನು ಮಾತ್ರ ಮೆಚ್ಚಿಸುವಹಾಗಿಲ್ಲ" ಎಂದರು. ಆಗ ಮಹಾಸ್ವಾಮಿಯವರು

"ಶೇಷಾದ್ರಿ ಐಯರವರೇ! ತಾವು ದೊಡ್ಡವರು; ಬಹಳ ತಿಳಿದವರು. ಆದಾಗ್ಯೂ ತಮಗೆ ಪೂರ್ತಿಯಾಗಿ ಅರ್ಥವಾಗದೆಹೋಗಿರಬಹುದು. ಮತ್ತೊಂದುಸಾರಿ ಓದಿದರೆ ತಮಗೇ ಹೊಳೆಯುಬಹುದು. ಆದ ಮಾತ್ರಕ್ಕೇ ಜಗತ್ತಿನಲ್ಲೇ ಸುಪ್ರಸಿದ್ಧರಾಗಿರುವ ಶ್ರೀ ಶಂಕರಾಚಾರ್ಯರಲ್ಲಿ ದೋಷ ವೆಣಿಸಬಹುದೆ?" ಎಂದರು. ಸರ್ ಕೆ. ಶೇಷಾದ್ರಿ ಐಯರವರು, "ಮಹಾಸ್ವಾಮಿ! ನನಗೆ ಅರ್ಥವಾಗುವುದಿರಲಿ. ಉದ್ದಾಮ ಪಂಡಿತ ರೆಂದು ಖ್ಯಾತಿಯನ್ನು ಪಡೆದಿರುವ ವಿದ್ವಾಂಸರಿಗೂ ನನ್ನ ಸಂದೇಹವನ್ನು ನಿವೃತ್ತಿಮಾಡಲು ಸಾಧ್ಯವಾಗಿಲ್ಲ" ಎಂದು ಉತ್ತರ ಹೇಳಿದರು. ಆಗ ಮಹಾಸ್ವಾಮಿಯವರು ನಕ್ಕು, ಅಲ್ಲಿದ್ದ ದೀಪವೊಂದನ್ನು ತೋರಿಸಿ, "ಈ ದೀಪದಲ್ಲಿ ತುಂಬ ಬೆಳಕಿದೆ. ಆ ವಿದ್ವಾಂಸರು ಈ ದೀಪದಂತೆ. ಈ ದೀಪವು ಬಹಳ ಪ್ರಕಾಶಮಾನವಾಗಿದೆ. ಅದೆಲ್ಲಾ ಸರಿ. ಆದರೆ, ಈ ದೀಪದ ಬೆಳಕಿನಲ್ಲಿ ಕಾಣದೆ ಇರುವ ದೂರದ ವಸ್ತುಗಳೆಲ್ಲಾ ಸೂರ್ಯನ ಬೆಳಕಿನಲ್ಲಿ ಕಾಣುವುದಿಲ್ಲವೆ? ಈ ದೀಪದ ಬೆಳಕಿನಿಂದ ಸೂರ್ಯನ ಬೆಳಕನ್ನು ಅಳೆದು, ಅದೂ ಇಷ್ಟೇ ಎಂದುಬಿಡಬಹುದೆ? ಅದು ನ್ಯಾಯವೆನಿಸೀತೆ?" ಎಂದು ಕೇಳಿ ಮೃದುವಾಗಿ ನಕ್ಕರು; ಕೊನೆಗೆ ಅವರಿಗೆ ಅಸಮಾಧಾನ ವಾಯಿತೇನೋ — ಎಂದು ಶಂಕಿಸಿ, "ತಾವು ದೊಡ್ಡವರು. ಚಿಕ್ಕವನ ಮಾತಿಗೆ ಬೇಸರಪಡದೆ ಮನ್ನಿಸಬೇಕು" ಎಂದರು. ಶ್ರೀಮಾನ್ ಶೇಷಾದ್ರಿ ಐಯರವರು ಆ ಮಾತುಗಳನ್ನು ಕೇಳಿ, "ಈ ವಿನಯವೇ ಮಹಾಸ್ವಾಮಿ ಯವರಿಗೆ ಭೂಷಣ. ನಾವೆಲ್ಲರೂ ಮಹಾಸ್ವಾಮಿಯವರಲ್ಲಿ ಭಕ್ತಿ ವಿಶ್ವಾಸ ಗಳುಳ್ಳ ಪ್ರಜೆಗಳು" ಎಂದು ಮುಂತಾಗಿ ಉತ್ತರ ಹೇಳಿ ಮನೆಗೆ ಹಿಂತಿರುಗಿ, ಅಂದು ರಾತ್ರಿ ಹನ್ನೊಂದೂವರೆ ಘಂಟೆಯ ತನಕ ಬ್ರಹ್ಮಸೂತ್ರ ಭಾಷ್ಯವನ್ನು ಓದುತ್ತ ಆಲೋಚನಾಮಗ್ನರಾಗಿ ಕುಳಿತರು. ನೂತನ ವಿಚಾರ ವೊಂದು ಹೊಳೆದು ಸಂದೇಹ ನಿವೃತ್ತಿಯಾದಾಗ, ಅವರು ಘಟ್ಟಿಯಾಗಿ ತಮಿಳಿನಲ್ಲಿ ಮಾತನಾಡಿಕೊಳ್ಳುತ್ತ, "ಹುಡುಗ ವಿವೇಕದ ಸಂಗತಿ ಯನ್ನು ಹೇಳಿಬಿಟ್ಟನೇ! ಶಂಕರಾಚಾರ್ಯನೇ ಮೋಸ ಹೋಗುವಾತ? ಜಗದ್ಗುರೋ! ಸರ್ವಾಪರಾಧವಾಯಿತು; ಕ್ಷಮಿಸಬೇಕು" ಎಂದರು; ಅವರ ಪತ್ನಿಯವರಾದ ಧರ್ಮಾಂಬೆಯವರು ಆತಂಕದಿಂದ ಓಡಿಬಂದು ಮಾತನಾಡಿಸಿದಾಗ, "ಪಂಡಿತರುಗಳನ್ನು ದೀಪಕ್ಕೂ ಶಂಕರಾಚಾರ್ಯ ರನ್ನು ಸೂರ್ಯನಿಗೂ ಹೋಲಿಸಿ ನನ್ನ ಕಣ್ಣಿಗೆ ಅಂಜನವನ್ನು ಹಾಕಿದ ಶ್ರೀಮನ್ಮಹಾರಾಜರ ಬಳಿಗೆ ಓಡಿಹೋಗಿ ಬಾಚಿ ತಬ್ಬಿಕೊಳ್ಳಲು ಅವರ ಪ್ರಭುಪದವಿಯು ಅಡ್ಡವಾಗಿದೆ" ಎಂದರು.

ಶ್ರೀಮದ್ಯುವರಾಜ ಶ್ರೀ ಕಂಠೀರವ ನರಸಿಂಹರಾಜ ಒಡೆಯರವರೂ ಸಹ, ತಮ್ಮ ಅಗ್ರಜರ ಮೇಲ್ಪಂಕ್ತಿಯನ್ನೇ ಅನುಸರಿಸಿ ದಿನದಿನವೂ ವ್ಯಾಸಂಗದಲ್ಲಿ ಶ್ರದ್ಧೆಯನ್ನು ತೋರಿಸುತ್ತ, ಕುದುರೆ ಸವಾರಿ, "ಪೋಲೋ" ಚೆಂಡಾಟ ಮುಂತಾದ ನಾನಾ ಸಾಹಸಕಾರ್ಯಗಳಲ್ಲಿಯೂ ಸಂಗೀತ, ಚಿತ್ರಲೇಖನ ಮುಂತಾದ ಲಲಿತಕಲೆಗಳಲ್ಲಿಯೂ ತೀವ್ರಾಸಕ್ತಿಯನ್ನು ಪ್ರದರ್ಶಿಸುತ್ತ ಬಂದರು. ಮಹಾಸ್ವಾಮಿಯವರ ಗುರುಭಕ್ತಿಯೂ ವಿನಯಶೀಲತೆಯೂ ಅವರ ಸಹಾಧ್ಯಾಯಿಗಳಿಗೆಲ್ಲ ಆದರ್ಶಪ್ರಾಯವಾಗಿದ್ದುವು. ಅವರ ಮಾತುಗಳಿಗೆ ಅಪಾರ್ಥವನ್ನು ಕಲ್ಪಿಸಿ ಅವರ ಸಹಾಧ್ಯಾಯಿಯವರೊಬ್ಬರು ಅಸಮಾಧಾನಮಾಡಿಕೊಂಡ ಒಂದು ಸಂದರ್ಭದಲ್ಲಿ ಮಹಾಸ್ವಾಮಿಯವರು, "ಖಂಡಿತವಾಗಿಯೂ ನನ್ನ ಅರ್ಥವು ಅದಲ್ಲವೇ ಅಲ್ಲ. ಇಷ್ಟರಮೇಲೂ ಸಮಾಧಾನವಾಗದಿರುವ ಪಕ್ಷಕ್ಕೆ ದಯವಿಟ್ಟು ಕ್ಷಮಿಸಿ" ಎಂದು ಹೇಳಿದರು. ಕುದುರೆಗಳ ಸಂಬಂಧವಾದ ಗ್ರಂಥಗಳನ್ನು ಎಷ್ಟು ಓದಿದರೂ ಅವರಿಗೆ ತೃಪ್ತಿಯಾಗುತ್ತಿರಲಿಲ್ಲ. ಆಹಾರವಸ್ತುಗಳ ಗುಣಾವಗುಣಗಳನ್ನು ತಿಳಿಸುವ ಆಹಾರ ವಿಜ್ಞಾನ ಪುಸ್ತಕಗಳನ್ನೂ ಅವರು ತೀವ್ರಾಸಕ್ತಿಯಿಂದ ಓದುತ್ತಿದ್ದರು.

**ಶ್ರೀಮದ್ಯುವರಾಜ ಶ್ರೀ ಕಂಠೀರವ ನರಸಿಂಹರಾಜ ಒಡೆಯರವರು**

ಶ್ರೀಮದ್ಯುವರಾಜ ಶ್ರೀ ಕಂಠೀರವ ನರಸಿಂಹರಾಜ ಒಡೆಯರವರು ತಮ್ಮ ಸಹಾಧ್ಯಾಯಿಗಳನ್ನು ತಮ್ಮ ಆತ್ಮೀಯರಂತೆ ಭಾವಿಸಿ ಸ್ನೇಹ ಮಮತೆಗಳನ್ನು ತೋರಿಸುತ್ತ, ತಮ್ಮ ಅಗ್ರಜರ ಮೇಲ್ಪಂಕ್ತಿಯನ್ನೇ ಅನುಸರಿಸುತ್ತಿದ್ದರು. ಒಂದು ಸಂದರ್ಭದಲ್ಲಿ, ಅವರು ತಮಗೆ ಪ್ರಾಣಾಪಾಯವುಂಟಾಗುವ ಸಂಭವವಿದ್ದುದನ್ನೂ ಲಕ್ಷ್ಯಮಾಡದೆ, ತಮ್ಮ ಸಹಾಧ್ಯಾಯಿಗಳಲ್ಲೊಬ್ಬರ ಅಪಾಯವನ್ನು ತಪ್ಪಿಸಿದರು. ಇನ್ನೊಂದುಸಲ "ರೋಡ್ ಮಾರ್ಚ್" ಮಾಡಲುದ್ಯುಕ್ತರಾಗಿ "ಬ್ಯಾಂಡ್" ನುಡಿಸಿಕೊಂಡು ತೆರಳುತ್ತಿದ್ದಾಗ ಎಳೆಬಿಸಿಲಿನಲ್ಲಿ ಹೆಡೆಯಾಡಿಸುತ್ತಿದ್ದ ದೊಡ್ಡ ನಾಗರಹಾವಿನಿಂದ ತಮ್ಮ ಸಹಾಧ್ಯಾಯಿಯೊಬ್ಬರಿಗೆ ವಿಪತ್ತು ಒದಗುವಂತಿದ್ದುದನ್ನು ತಪ್ಪಿಸುವ ಪ್ರಯತ್ನದಲ್ಲಿ ತಮಗೇ ಪ್ರಾಣಾಪಾಯ ಸಂಭವಿಸುವಂತಿದ್ದುದನ್ನೂ ಲಕ್ಷ್ಯಮಾಡದೆ ವರ್ತಿಸಿ ಅವರು ಕೃತಕಾರ್ಯರಾದರು.

ಶ್ರೀಮದ್ಯುವರಾಜ ಶ್ರೀ ಕಂಠೀರವ ನರಸಿಂಹರಾಜ ಒಡೆಯರವರು ತಮ್ಮ ಬಾಲ್ಯದಲ್ಲಿ ನಟರಿಗೆ ಪಾರಿತೋಷಿಕಗಳನ್ನು ಕೊಟ್ಟು ನಾಟಕ



**ಕುಳಿತಿರುವವರು:** ದಿವಂಗತರಾದ ಲೆಫ್ಟಿನೆಂಟ್ ಕರ್ನಲ್ ಬಿ. ಪಿ. ಕೃಷ್ಣೇ ಅರಸಿನವರು; ದಿವಂಗತರಾದ ಶ್ರೀಮದ್ಯುವರಾಜ ಶ್ರೀ ಕಂಠೀರವ ನರಸಿಂಹರಾಜ ಒಡೆಯರವರು ಮತ್ತು ಶ್ರೀಮಾನ್ ಎಂ. ಜಿ. ಮ್ಯಾಕ್ರಿಯವರು

**ನಿಂತಿರುವವರು:** ಶ್ರೀಮಾನ್ ಎಫ್. ಸಿ. ದೇವರಾಜ ಅರಸಿನವರು ಮತ್ತು ಶ್ರೀಮಾನ್ ಕೆ. ಸುಬ್ಬರಾಯರು

ಪ್ರದರ್ಶನಗಳಿಗೆ ಪ್ರೋತ್ಸಾಹವನ್ನಿತ್ತು, ಕಲಾಭಿಮಾನವನ್ನು ತೋರಿಸು ತ್ತಿದ್ದರು. ೧೯೦೦ನೆಯ ಇಸವಿಯಲ್ಲಿ "ಅಪ್ಪೂ ಕಂಪೆನಿ" ಎಂಬ ಹೆಸರಿನ ಪಾರ್ಸೀ ನಾಟಕ ಸಂಘದವರು ಮುಂಬಯಿ ನಗರದಿಂದ ಮೈಸೂರು ನಗರಕ್ಕೆ ಬಂದರು. ಅರಮನೆಯಲ್ಲಿ ಅವರಿಂದ ಹನ್ನೆರಡು ನಾಟಕ ಪ್ರದರ್ಶನಗಳು ನಡೆದುವು. ಆಗ ಆ ನಾಟಕ ಸಂಘಕ್ಕೆ ಭಾರಿ ಮೊತ್ತವನ್ನು ಮಹಾಮಾತೃಶ್ರೀಯರು ದಯಪಾಲಿಸಿದುದಲ್ಲದೆ, ತಮ್ಮ ಜ್ಯೇಷ್ಠಪುತ್ರ ರಿಂದಲೂ, ಶ್ರೀಮದ್ಯುವರಾಜರವರಿಂದಲೂ ನಟರಿಗೆ ಶಾಲುಗಳು, ವಜ್ರದುಂಗುರಗಳು ಮುಂತಾದ ಪಾರಿತೋಷಿಕಗಳನ್ನು ಕೊಡಿಸಿ ಪ್ರೋತ್ಸಾಹಿಸಿದರು. ಆಗ ಶ್ರೀಮದ್ಯುವರಾಜ ಶ್ರೀ ಕಂಠೀರವ ನರಸಿಂಹ ರಾಜ ಒಡೆಯರವರಿಗೆ ಹನ್ನೆರಡು ವರ್ಷ ವಯಸ್ಸು. "ಅಪ್ಪೂ ಕಂಪೆನಿ"ಯವರು ಮೈಸೂರು ನಗರದಿಂದ ಹೊರಟುಹೋದ ನಂತರ ಸ್ವಲ್ಪಕಾಲದ ಮೇಲೆ "ಪಟೇಲ್ಸ್ ಕಂಪೆನಿ" ಎಂಬ ಹೆಸರಿನ ಪಾರ್ಸೀ ನಾಟಕ ಸಂಘದವರು ಮೈಸೂರು ನಗರಕ್ಕೆ ಬಂದು ಪ್ರೋತ್ಸಾಹವನ್ನು ಪಡೆದರು. ಶ್ರೀಮದ್ಯುವರಾಜ ಶ್ರೀ ಕಂಠೀರವ ನರಸಿಂಹರಾಜ ಒಡೆಯರವರು ಆ ಸಂಘದ ನಟನಾದ ಕೃಷ್ಣನೆಂಬೊಬ್ಬ ಬಾಲಕನ ಅಭಿನಯ ಕೌಶಲ್ಯವನ್ನು ಮೆಚ್ಚಿ ಅವನಿಗೆ ಬಹಳ ಬೆಲೆಬಾಳುವ ಪಾರಿ ತೋಷಿಕಗಳನ್ನು ಕೊಟ್ಟುದಲ್ಲದೆ, ತಮ್ಮ ಜೊತೆಯವರೊಡನೆ ಅವನ ಪ್ರಶಂಸೆಗಾರಂಭಿಸಿದರು. ಅವರ ಜೊತೆಯವರು ಒಂದು ದಿನ ಕ್ರೈಸ್ತ ಶವಗಳನ್ನು ಮಲಗಿಸಿ ಸಮಾಧಿಯೊಳಕ್ಕಿಳಿಸುವ ಪೆಟ್ಟಿಗೆಯ ("ಕಾಫಿನ್") ಮಾದರಿಯಲ್ಲಿ ಚಿಕ್ಕದೊಂದು ಪೆಟ್ಟಿಗೆಯನ್ನು ಕಾಗದದ ರಟ್ಟಿನಲ್ಲಿ ಮಾಡಿ, ಮರದಲ್ಲಿ ರಚಿಸಿ ಸೀಸವನ್ನು ತುಂಬಿದ್ದ ಪಾಶ್ಚಾತ್ಯ ಚತುರಂಗದ ಕಾಯಿ ಯೊಂದನ್ನು ಅದರಲ್ಲಿ ಮಲಗಿಸಿ, ಮರಾಟಾಪಂಗಡದವರು ಶವಗಳನ್ನು ನಾಗಿಸುವಾಗ ಹೇಳುವ ಮಾತುಗಳನ್ನನುಕರಿಸುತ್ತ, "ರಾಂ ರಾಂ ಸತ್ಯ ಹೈ. ಕೃಷ್ಣಾ ಕೃಷ್ಣಾ ಚಿಟ್ ಹೈ" ಎಂದು ಚೀರಿಡಲಾರಂಭಿಸಿದರು. ಶ್ರೀಮದ್ಯುವರಾಜ ಶ್ರೀ ಕಂಠೀರವ ನರಸಿಂಹರಾಜ ಒಡೆಯರವರು, ತಾವು ಮೆಚ್ಚಿದ್ದ ನಟನಾದ ಕೃಷ್ಣನೆಂಬ ಬಾಲಕನಿಗೆ ತಮ್ಮ ಸಹಾಧ್ಯಾಯಿ ಗಳೇ ಹಾಗೆ ಅಮಂಗಳವನ್ನು ಕೋರಿದರಲ್ಲಾ ಎಂದು ಅಸಮಾಧಾನ ಹೊಂದಿ ಮತ್ತೊಂದು ಚತುರಂಗದ ಕಾಯಿಯನ್ನು ತೆಗೆದುಕೊಂಡು ಆ ಅಪಹಾಸ್ಯಕೂಟದ ನಾಯಕರಾಗಿದ್ದ ತಮ್ಮ ಸಹಾಧ್ಯಾಯಿಯೊಬ್ಬರ ಕಡೆಗೆ ಅದನ್ನೆಸೆದರು. ಅದು ಅವರ ಕಪಾಲಕ್ಕೆ (ಕೆನ್ನೆಯ ಮೇಲ್ಭಾಗಕ್ಕೆ) ತಾಕಿ ಪೆಟ್ಟಾದುದನ್ನು ಕಂಡಾಗ ಮಹಾಸ್ವಾಮಿಯವರು ವಿಷಾದಪಡುತ್ತ

ತಮ್ಮ ಕರವಸ್ತ್ರವನ್ನು ನೀರಿನಲ್ಲದ್ದಿ ಅವರಿಗೆ ಶೈತ್ಯೋಪಚಾರಮಾಡಿ ತಮ್ಮ ವಿಷಾದವನ್ನು ಸೂಚಿಸಿದರು.

ಆಳಿದ ಮಹಾಸ್ವಾಮಿಯವರಾದ ಶ್ರೀಮನ್ಮಹಾರಾಜರವರು ೧೯೦೦ನೆಯ ಇಸವಿ ನವೆಂಬರು ತಿಂಗಳಿನಲ್ಲಿ ತಮ್ಮ ಸಹಾಧ್ಯಾಯಿಗಳೊಡನೆಯೂ, ಅಧ್ಯಾಪಕರುಗಳಾಗಿದ್ದ ಶ್ರೀಮಾನ್ ಎಸ್. ಎಂ. ಫ್ರೇಸರ್ ಸಾಹೇಬರೇ ಮುಂತಾದವರೊಡನೆಯೂ ಸಂಸ್ಥಾನದ ನಾನಾ ಪ್ರದೇಶಗಳಿಗೂ ಸಂಚಾರಾರ್ಥವಾಗಿ ದಯಮಾಡಿ ನಂದೀದುರ್ಗ, ಮದ್ದಗಿರಿ,† ದೇವರಾಯನದುರ್ಗ, ತುಮಕೂರು, ಶಿವಗಂಗೆ, ಕುಣಿಗಲಿನ ಅಶ್ವಪಾಲನ ಕ್ಷೇತ್ರ, ಮೇಲುಕೋಟೆ, ಮುಂತಾದ ಸ್ಥಳಗಳನ್ನು ನೋಡಿಕೊಂಡು ಬೆಂಗಳೂರಿಗೆ ಚಿತ್ತೈಸಿದರು. ಮಧುಗಿರಿಯ ಬೆಟ್ಟವು ಬಹಳ ಕಡಿದಾಗಿರುವ ಕಾರಣ, ಅದನ್ನು ಹತ್ತಿ ಕುಂಭಿಯನ್ನು ಸೇರುವುದು ಅನೇಕರಿಗೆ ಸಾಧ್ಯವಿಲ್ಲ. ಸಾಧ್ಯವಿರುವ ಕೆಲವರಿಗೂ ಅದರಿಂದ ವಿಶೇಷ ಶ್ರಮವುಂಟಾಗುತ್ತದೆ. ಮಹಾಸ್ವಾಮಿಯವರು ಮಧುಗಿರಿಗೆ ಚಿತ್ತೈಸಿದ್ದಾಗ್ಗೆ ನಿರಾಯಾಸವಾಗಿ ಜೊತೆಯವರೆಲ್ಲರಿಗಿಂತಲೂ ಮುಂಚೆ ಕುಂಭಿಯನ್ನೇರಿದುದನ್ನು ಸ್ಮರಿಸಿ ಸ್ಮರಿಸಿ ಆನಂದಪಡುವ ವೃದ್ಧರು ಈಗಲೂ ಮಧುಗಿರಿಯಲ್ಲಿದ್ದಾರೆ. ಶಿವಗಂಗೆ ಬೆಟ್ಟದ ಕುಂಭಿಯ ಮೇಲಿರುವ ಕಲ್ಲಿನ ಬಸವನನ್ನು ಪ್ರದಕ್ಷಿಣೆ ಮಾಡುವುದಂತೂ, ಪ್ರಾಣತ್ಯಾಗಕ್ಕೆ ಸಿದ್ಧವಾಗಿದ್ದೇ ಕೈಕೊಳ್ಳಬೇಕಾದ ಸಾಹಸಕಾರ್ಯ. ಮಹಾಸ್ವಾಮಿಯವರು ಸಾಹಸಪ್ರೇಮದಿಂದ ಅದನ್ನು ಸಫಲ ರೀತಿಯಲ್ಲಿ ನೆರವೇರಿಸಿದರು. ಮಹಾಸ್ವಾಮಿಯವರು ತಮ್ಮ ಆ ಸಂಚಾರಕಾಲದಲ್ಲಿ ನಗರಗಳಲ್ಲಿಯ ಜನ ಜೀವನಕ್ಕೂ ಮತ್ತು ಗ್ರಾಮಾಂತರಗಳಲ್ಲಿಯ ಜನಜೀವನಕ್ಕೂ ಸಾಮ್ಯ ವೈಷಮ್ಯಗಳನ್ನು ಗ್ರಹಿಸುತ್ತ, ಬಿಡಾರಮಾಡಿದ ಕಡೆಗಳಲ್ಲೆಲ್ಲ ದರ್ಬಾರುಗಳನ್ನು ನಡೆಯಿಸಿ ತಮ್ಮ ದಿವ್ಯ ದರ್ಶನದಿಂದಲೂ ತಮ್ಮ ಭಾಷಣಗಳ ಸವಿನುಡಿಗಳಿಂದಲೂ ಪ್ರಜೆಗಳಿಗೆ ಆಹ್ಲಾದವನ್ನುಂಟುಮಾಡುತ್ತ, ಪಾಠಶಾಲೆಗಳಿಗೆ ಚಿತ್ತೈಸಿ ಬಾಲಕ ಬಾಲಕಿಯರಿಗೆ ಲಾಡುಗಳನ್ನು ಹಂಚಿಸಿ ಅರ್ಹರಾದವರಿಗೆ ಪಾರಿತೋಷಿಕಗಳನ್ನು ದಯಪಾಲಿಸುತ್ತ, ದೇವಾಲಯಗಳಿಗೂ, ಮಸೀತಿಗಳಿಗೂ, ಜೈನ ಬಸ್ತಿಗಳಿಗೂ, ಚರ್ಚುಗಳಿಗೂ ದಯಮಾಡಿ ದೈವಭಕ್ತಿಯನ್ನು ತೋರುತ್ತ, ತಮ್ಮ ಅನುಭವವನ್ನು ವೃದ್ಧಿಪಡಿಸಿಕೊಳ್ಳುತ್ತಿದ್ದರು.

**ನವೆಂಬರು ತಿಂಗಳಿನಲ್ಲಿ**

† ಆಗ್ಗೆ ಅದರ ಹೆಸರು ಮದ್ದಗಿರಿಯೆಂದಿದ್ದು ಈಚೆಗೆ ಮಧುಗಿರಿಯೆಂದು ಮಾರ್ಪಟ್ಟಿದೆ.

**ಲಾರ್ಡ್ ಕರ್ಜನ್ ರವರ ಆಗಮನ**

೧೯೦೦ನೆಯ ಇಸವಿಯ ಕೊನೆಯಲ್ಲಿ ಆಗ್ಗೆ ವೈಸ್ರಾಯಿಯವರಾಗಿದ್ದ ಲಾರ್ಡ್ ಕರ್ಜನ್‌ರವರು ರಾಜಧಾನಿಗೆ ದಯಮಾಡಿ, ಶ್ರೀ ಮಹಾರಾಜ್ಞೀ ರೀಜೆಂಟರವರ ಮತ್ತು ಆಳಿದ ಮಹಾಸ್ವಾಮಿಯವರಾದ ಶ್ರೀಮನ್ಮಹಾರಾಜರವರ ಆದರಾತಿಥ್ಯಗಳನ್ನು ಸ್ವೀಕರಿಸಿದರು. "ಟೌನ್‌ಹಾಲ್" ಚೌಕದಲ್ಲಿ ಅವರು ಶ್ರೀ ಚಾಮರಾಜೇಂದ್ರ ಒಡೆಯರವರ ಲೋಹಪ್ರತಿಮೆಯ ಅನಾವರಣ ಮಹೋತ್ಸವವನ್ನು ನೆರವೇರಿಸಿ, "ಜ್ಯೂಬಿಲಿ ಇನ್‌ಸ್ಟಿಟ್ಯೂಟ್" ಕಟ್ಟಡದಲ್ಲಿ ಏರ್ಪಡಿಸಿದ್ದ ವಸ್ತು ಪ್ರದರ್ಶನ ವ್ಯವಸ್ಥೆಯನ್ನು ಪರಾಂಬರಿಸಿ ಹಿಂದಕ್ಕೆ ತೆರಳಿದರು.

**ಬರ್ಮಾ ಪ್ರಯಾಣ**

ಮಹಾಪ್ರಭುಗಳವರು ತಮ್ಮ ಅನುಜರಾದ ಶ್ರೀಮದ್ಯುವರಾಜರವರೊಡನೆಯೂ ತಮ್ಮ ಅಧ್ಯಾಪಕರು, ಸಹಾಧ್ಯಾಯಿಗಳು, ಪರಿಜನರು ಮುಂತಾದವರೊಡನೆಯೂ ಬರ್ಮಾ ದೇಶಕ್ಕೆ ಪ್ರಯಾಣ ಮಾಡಲುದ್ಯುಕ್ತರಾದರು. ಮಹಾಮಾತೃಶ್ರೀಯವರ ಅಪ್ಪಣೆಯನ್ನೂ ಆಶೀರ್ವಾದಗಳನ್ನೂ ಪಡೆದು, ಅವರುಗಳು ೧೯೦೧ನೆಯ ಇಸವಿ ಜನವರಿ ತಿಂಗಳಿನಲ್ಲಿ ಮದರಾಸು ನಗರದಲ್ಲಿ "ಜಬಿಂಗ್ಲಾ" ಎಂಬ ಜಹಜನ್ನೇರಿದರು. ಬರ್ಮಾ ದೇಶದ ಮಹಾಜನರ ಪ್ರತಿನಿಧಿಗಳೂ ಭಾರಿ ಭಾರಿ ಅಧಿಕಾರಿಗಳೂ ರಂಗೂನ್ ನಗರದಿಂದ ಹದಿನೆಂಟು ಮೈಲಿಗಳ ದೂರ ಸಮುದ್ರಯಾನ ಮಾಡಿ ಬಂದು, ಪ್ರೀತಿ ಗೌರವಪುರಸ್ಸರವಾಗಿ ಮಹಾಸ್ವಾಮಿಯವರಿಗೆ ಆದರದಿಂದ ಸ್ವಾಗತವನ್ನು ನೀಡಿದರು. ಸಮುದ್ರತೀರದಲ್ಲಿ ಚಿತ್ತಾಕರ್ಷಕವಾಗಿ ನಿರ್ಮಿತವಾಗಿದ್ದ ಸುವಿಶಾಲವಾದ ಸ್ವಾಗತ ಮಂಟಪಕ್ಕೆ ಮಹಾಸ್ವಾಮಿಯವರನ್ನೂ ಅವರ ಜೊತೆಯವರನ್ನೂ ಬಿಜಯಮಾಡಿಸಿದರು. ಆ ಸ್ವಾಗತ ಮಂಟಪದ ಒಳಗೂ ಹೊರಗೂ ಹಲವು ಸಾವಿರ ಮಂದಿಗಳು ಕಿಕ್ಕಿರಿದು ತುಂಬಿ ಆಕಾಶವನ್ನಣೆಯುವಂತೆ ಜಯಘೋಷ ಮಾಡಿದರು. ಸರ್ಕಾರದ ಭಾರಿ ಭಾರಿ ಅಧಿಕಾರಿಗಳೂ, ಬರ್ಮಾ ಪ್ರಾಂತದ ಲೆಫ್ಟಿನೆಂಟ್ ಗವರ್ನರವರ ಪ್ರತಿನಿಧಿಗಳೂ, ಪ್ರಜಾಪ್ರಮುಖರೂ ಸಭೆಯನ್ನಲಂಕರಿಸಿದರು. ಭರತಖಂಡದಿಂದ ಬರ್ಮಾ ದೇಶಕ್ಕೆ ಹೋಗಿ ನೆಲಸಿದ್ದ ಹಿಂದೂ ಮುಸಲ್ಮಾನರ, ಚೀಣರ ಮತ್ತು ಬರ್ಮೀಯರ ಪರವಾದ ಪ್ರಮುಖ ಮಹನೀಯರು ಸದಸ್ಯರಾಗಿದ್ದ ಸ್ವಾಗತ ಸಮಿತಿಯವರು ಮಹಾಸ್ವಾಮಿಯವರಿಗೆ ಮನೋಹರವಾದ ರಜತ ಕರಂಡದಲ್ಲಿ ವಿಜ್ಞಾಪನಾ ಪತ್ರಿಕೆಯನ್ನು ಸಮರ್ಪಿಸಿದರು. ರಾಯ್ ಬಹದ್ದೂರ್ ಪಿ. ಎಂ. ಮಧುರೈ

ಪಿಳ್ಳೆಯವರು ಅದನ್ನು ಓದಿದ ತರುವಾಯ ಮಹಾಸ್ವಾಮಿಯವರು ಪ್ರತ್ಯುತ್ತರವಾಗಿ ಅಮೋಘವಾದೊಂದು ಭಾಷಣ ಮಾಡಿದರು. ಮಹಾಸ್ವಾಮಿಯವರಿಗೆ ಸಮರ್ಪಿತವಾದ ಆ ವಿಜ್ಞಾಪನಾ ಪತ್ರಿಕೆಯು ಮೈಸೂರು ಸಂಸ್ಥಾನದವರೆಲ್ಲರೂ ನೋಡಿ ಹೆಮ್ಮೆಪಡುವಂತಿದೆ. ಶ್ರೀ ಚಾಮರಾಜೇಂದ್ರ ಒಡೆಯರವರು ಮತ್ತು ಶ್ರೀ ವಾಣೀವಿಲಾಸ ಸನ್ನಿಧಾನ ದವರ ರಾಜ್ಯಭಾರದಲ್ಲಿ ಮೈಸೂರು ಸಂಸ್ಥಾನವು ಇತರ ಸಮಸ್ತ ಸಂಸ್ಥಾನ ಗಳಿಗಿಂತಲೂ ಹೆಚ್ಚಾಗಿ ಪುರೋಭಿವೃದ್ಧಿಹೊಂದಿ, ಜಾತಿ ಜನಾಂಗ ಭೇದವಿಲ್ಲದೆ ಸಮಸ್ತ ಪ್ರಜೆಗಳಿಗೂ ಸಮಾನವಾಗಿ ಪ್ರೋತ್ಸಾಹ ಕೊಟ್ಟ— ಪ್ರಪಂಚದಲ್ಲಿ ಅತ್ಯಂತ ನಾಗರಿಕವೆನಿಸಿದ್ದ ಜನಾಂಗಗಳವರು ಅನುಸರಿಸು ತ್ತಿದ್ದ ಅತ್ಯುತ್ತಮವಾದ ಕಾರ್ಯನಿಯಮಗಳು ಆಚರಣೆಯಲ್ಲಿದ್ದ— ಸುಖಾವಾಸವೆಂದು ಆ ವಿಜ್ಞಾಪನಾ ಪತ್ರಿಕೆಯಲ್ಲಿ ಸೂಚಿತವಾಗಿದೆ. ಮೈಸೂರು ಸಂಸ್ಥಾನವು ಭರತಖಂಡದ ರಮಣೀಯವಾದ ಉದ್ಯಾನ ವೆಂದು ವರ್ಣಿತವಾಗಿದೆ. ಮುಂದೆ ಸ್ವಲ್ಪಕಾಲದಲ್ಲೇ ರಾಜ್ಯಭಾರ ಸೂತ್ರ ಗಳನ್ನು ಸ್ವೀಕರಿಸುವವರಾಗಿದ್ದ ಮಹಾಸ್ವಾಮಿಯವರ ಪ್ರಭುತ್ವದಲ್ಲಿ ಮೈಸೂರು ಸಂಸ್ಥಾನವು ಮತ್ತಷ್ಟು ಪುರೋಭಿವೃದ್ಧಿಹೊಂದಿ, ಮಹಾ ಸ್ವಾಮಿಯವರು ತಮ್ಮ ಪೂರ್ವಜರಾದ ಯದುವಂಶೀಯ ಮಹಾರಾಜರು ಗಳೆಲ್ಲರಿಗಿಂತಲೂ ಅಧಿಕತರವಾದ ಖ್ಯಾತಿಯನ್ನು ಗಳಿಸುವಂತಾಗಬೇಕೆಂಬ ಶ್ರೇಯಃಪ್ರಾರ್ಥನೆಯಿದೆ.

ಸ್ವಾಗತ ಸಭೆಯು ಪೂರೈಸಿದ ಬಳಿಕ ಮಹಾಸ್ವಾಮಿಯವರು ತಮ್ಮ ಬಿಡಾರಕ್ಕೆ ಚಿತ್ತೈಸಿದರು. ಅನಂತರ ಲೆಫ್ಟಿನೆಂಟ್ ಗವರ್ನರವರು ಮಹಾಸ್ವಾಮಿಯವರ ಸಂದರ್ಶನಾರ್ಥವಾಗಿ ಅಲ್ಲಿಗೆ ಬಂದು ತೆರಳಿದ ಮೇಲೆ ಅವರ ಬಂಗಲೆಗೆ ಮಹಾಸ್ವಾಮಿಯವರೂ ಬಿಜಯಂಗೈದು ಹಿಂತಿರುಗಿದರು. ಅವರು ಆ ಬಳಿಕ ಒಂದು ದಿನ ಮಹಾಸ್ವಾಮಿಯವರ ಗೌರವಾರ್ಥವಾಗಿ ದೊಡ್ಡದೊಂದು ಸತ್ಕಾರ ಕೂಟವನ್ನೇರ್ಪಡಿಸಿದ್ದರು.

ಮಹಾಸ್ವಾಮಿಯವರೂ ಅವರ ಜೊತೆಯವರೂ ತಮ್ಮ ಬರ್ಮಾ ಪ್ರವಾಸಕಾಲದಲ್ಲಿ ಅಲ್ಲಿಯ ಪ್ರಸಿದ್ಧವಾದ ಬೌದ್ಧ ದೇವಾಲಯಗಳನ್ನೂ, ಸೀಮೆಯೆಣ್ಣೆ ಬುಗ್ಗೆಗಳು ಉಕ್ಕುವ ಪ್ರದೇಶಗಳನ್ನೂ, ಮನುಷ್ಯ ಪ್ರವೇಶಕ್ಕೇ ಅಸಾಧ್ಯವಾಗಿ ಪ್ರಾಚೀನ ಕಾಲದಿಂದಲೂ ಬೆಳೆದು ನಿಂತಿದ್ದ ಗಗನ ಚುಂಬಿಗಳಾದ ಮಹಾವೃಕ್ಷಗಳಿಂದ ಸಿಬಿಡವಾದ ಕಾನನಗಳನ್ನೂ ನೋಡಿ ಹರ್ಷಿಸಿದರು. ಮಿಚಿನಾ ನಗರದಿಂದ ಹಿಂತಿರುಗಿ ಇರವಾಡಿ ನದಿಯಮೇಲೆ "ಸ್ಟೀಂ ಲಾಂಚ್" ನೌಕೆಯಲ್ಲಿ ಚಿತ್ತೈಸಿದಾಗಿನ

ಪ್ರಯಾಣವು ಎದೆಯನ್ನು ಝುಲ್ಲೆನಿಸುವಂತಹದಾಗಿದ್ದಿತು. ಏಕೆಂದರೆ, ನದಿಯ ಪ್ರವಾಹವು ಎದುರಿಗಿರುವ ಬೆಟ್ಟದ ಬುಡಕ್ಕೇ ಹೋಗಿ ಅಪ್ಪಳಿಸುವುದೋ ಎಂದು ತೋರುತ್ತಿದ್ದು ಸರಕ್ಕನೆ ಮುಂದೆ ತಿರುಗುವ ಅಲ್ಲಿಯ ಭೀಕರ ದೃಶ್ಯವು ಹೃದಯವನ್ನು ನಡುಗಿಸುವುದು. ಆದರೆ ಪ್ರವಾಹವು ಬೆಟ್ಟದ ಬುಡಕ್ಕೆ ಹೋಗದೆ ಬೇರೆ ಕಡೆಗೆ ತಿರುಗಿದ ದೃಶ್ಯವನ್ನು ಕಂಡಾಗ ಮಾತ್ರ ಅದರ ಸೊಗಸು ಮನದಟ್ಟಾಗಿ ಉಲ್ಲಾಸವಾಗುವುದು.

ಮಹಾಸ್ವಾಮಿಯವರು ತಮ್ಮ ಜೊತೆಯವರೊಡನೆ ಮಾಂಡಲೆ, ಮಿಚಿನಾ, ಭಾಮೋ, ಪ್ರೋಮ್ ಮುಂತಾದ ನಗರಗಳನ್ನು ಪರಾಂಬರಿಸಿ, ಅಲ್ಲಲ್ಲಿ ದೊರೆತ ಸ್ವಾಗತ ಸತ್ಕಾರಗಳನ್ನೂ, ಆದರಾತಿಥ್ಯಗಳನ್ನೂ ಸ್ವೀಕರಿಸಿ ಪೆಕೋಕು ನಗರವನ್ನು ಸೇರಿದರು. ಅಲ್ಲಿಂದ ಮುಂದೆ ಮೋಗಾಕ್ ಎಂಬ ಸ್ಥಳಕ್ಕೆ ತೆರಳಿ ಮಾಣಿಕ್ಯದ ಗಣಿಗಳನ್ನು ನೋಡಬೇಕೆಂದಿರುವಷ್ಟರಲ್ಲಿ, ವಿಕ್ಟೋರಿಯಾ ಮಹಾರಾಣಿಯವರು ಮೃತರಾದ ವಿಷಾದ ವಾರ್ತೆಯು ಬಂದುದರಿಂದ ಪ್ರೋಮ್ ನಗರಕ್ಕೆ ಹಿಂತಿರುಗಿ ಅಲ್ಲಿ ಇರವಾಡೀ ನದಿಯ ಜಹಜಿನಿಂದಿಳಿದು ರಂಗೂನಿಗೆ ರೈಲಿನಲ್ಲಿ ಪ್ರಯಾಣಮಾಡಿ, ಅಲ್ಲಿ ಜಹಜನ್ನು ಹತ್ತಿ ಮಹಾಸ್ವಾಮಿಯವರೂ ಅವರ ಜೊತೆಯವರೂ ಮತ್ತೆ ಮದರಾಸು ನಗರವನ್ನು ಸೇರಿದರು. ಬರ್ಮಾದಲ್ಲಿರುವ ಸಿರಿಯಾ ದ್ವೀಪದಲ್ಲಿ ಸೀಮೆಯೆಣ್ಣೆಯನ್ನು ಶುದ್ಧೀಕರಿಸಿ ಪೆಟ್ರೋಲಿಯಂ, ವ್ಯಾಸೆಲೀನ್ ಮುಂತಾದುವುಗಳನ್ನು ತಯಾರಿಸುತ್ತಿದ್ದ ಯಂತ್ರಾಲಯಗಳನ್ನೂ ಮಹಾಸ್ವಾಮಿಯವರು ತೀವ್ರಾಸಕ್ತಿಯಿಂದ ಪರಾಂಬರಿಸಿದ್ದರು.

ಬರ್ಮಾ ಸ್ತ್ರೀಯರು ವ್ಯಾಪಾರ ಮುಂತಾದುವುಗಳಲ್ಲಿ ಉದ್ಯುಕ್ತರಾಗಿ ವಿಶೇಷ ಸ್ವಾತಂತ್ರ್ಯದಿಂದ ವ್ಯವಹರಿಸುತ್ತಿದ್ದುದನ್ನು ಬರ್ಮಾ ಪ್ರವಾಸ ಕಾಲದಲ್ಲಿ ಕಂಡು ಮಹಾಪ್ರಭುಗಳೇ ಮುಂತಾದವರೆಲ್ಲರೂ ಆಶ್ಚರ್ಯಚಕಿತರಾದರು. ಅಲ್ಲಿ ಮಹಿಳಾ ಸ್ವಾತಂತ್ರ್ಯದ ಭಾವನೆಯು ಎಷ್ಟು ದೂರ ಮುಂದುವರಿದಿದ್ದಿತೆಂಬುದಕ್ಕೊಂದು ನಿದರ್ಶನವನ್ನೂ ಇಲ್ಲಿ ಸೂಚಿಸಬಹುದಾಗಿದೆ: ಬರ್ಮಾದಲ್ಲಿಯ ರೈಲುಗಳಲ್ಲಿ ಸ್ತ್ರೀಯರಿಗಾಗಿ ಪ್ರತ್ಯೇಕಿಸಿದ್ದ ಬಂಡಿಗಳೇ ಇರಲಿಲ್ಲ. ಹಿಂದೆ ಆ ರೀತಿ ಬಂಡಿಗಳನ್ನೇರ್ಪಡಿಸಿದಾಗ, ಅಲ್ಲಿಯ ಸ್ತ್ರೀಯರು ತಾವು ಅವುಗಳಲ್ಲಿ ಪ್ರಯಾಣ ಮಾಡುವುದಿಲ್ಲವೆಂದು ನಿರಾಕರಿಸಿದರು. ಅದಕ್ಕೆ ಕಾರಣವೇನೆಂದು ವಿಚಾರಣೆ ನಡೆದಾಗ ಅವರು "ಪುರುಷರೊಡನೆ ಪ್ರಯಾಣಮಾಡಲು ನಮಗೆ ಅರ್ಹತೆಯಿಲ್ಲವೇನು?" ಎಂದು ಕೇಳಿದರು. ಪ್ರತ್ಯೇಕವಾಗಿ ಪ್ರಯಾಣಮಾಡುವುದು ಕ್ಷೇಮಕರವೆಂದು ಕೇಳಿ ಅಲ್ಲಿಯ ಮಹಿಳೆಯರು

ನಕ್ಕು, "ಓಹೋ ಹಾಗೇನು! ನಮಗೆ ಪುರುಷರೊಡನೆ ಪ್ರಯಾಣ ಮಾಡಲು ಭಯವೇನೂ ಇಲ್ಲವಲ್ಲಾ!" ಎಂದು ಉತ್ತರ ಹೇಳಿದರು. ಮೈಸೂರು ದೇಶದಿಂದ ಬರ್ಮಾ ದೇಶಕ್ಕೆ ಹೋದವರು ಕಂಡ ಸೋಜಿಗವೆಂದರೆ ಅಲ್ಲಿಯ ಬಾಲಕರಲ್ಲಿ ಬಹು ಮಂದಿ ದೊಡ್ಡ ದೊಡ್ಡ — ದೊಳ ದುದ್ದ — ಹೊಗೆ ಸುತ್ತುಗಳನ್ನು (ಸಿಗಾರುಗಳನ್ನು) — ಸೇದುತ್ತಿದ್ದುದು. ಅವರು ಬರ್ಮಾ ದೇಶದಲ್ಲಿ ಕಂಡ ವಿಸ್ಮಯಜನಕವಾದ ವಸ್ತುವೆಂದರೆ ಗೋಟಿಕ್ ಗಾರ್ಜ್ ರೈಲ್ವೇ ಸೇತುವೆ. ಅಲ್ಲಿ ಸ್ತಂಭಗಳನ್ನು ನಿರ್ಮಿಸುವುದೇ ಸಾಧ್ಯವಿಲ್ಲದ ೯೦೦ ಅಡಿಗಳ ಆಳದ ಕಮರಿಗೆ ಮೇಲ್ಭಾಗದಲ್ಲಿ ಸ್ತಂಭವೇ ಇಲ್ಲದೆ ಕಟ್ಟಿರುವ ಆ ಸೇತುವಿನ ಶಿಲ್ಪಕಲಾಕೌಶಲ್ಯವನ್ನೂ, ಅದರ ಮೇಲೆ ರೈಲುಗಳು ಹೋಗುತ್ತಿದ್ದುದನ್ನೂ ಕಂಡು ಆಶ್ಚರ್ಯ ಭರಿತರಾಗದವರಾರೂ ಇರಲಿಲ್ಲ.

**ಪ್ರಾಣದಾನ**

ಬರ್ಮಾ ದೇಶದ ಪ್ರವಾಸ ಕಾಲದಲ್ಲಿ ಜಹಜಿನ ಪ್ರಯಾಣವು ಬಳೆಯುತ್ತಿದ್ದಾಗ್ಗೆ ಒಂದು ದಿನ ಬಿಳಿಯ ಬಣ್ಣದ ಮೇಕೆಯೊಂದು ಮಹಾಸ್ವಾಮಿಯವರ ಬಳಿಗೆ ಓಡಿಬಂದು ಅವರನ್ನೇ ಹಿಂಬಾಲಿಸತೊಡಗಿತು. ಆ ಮೇಕೆಯು ಸೈನಿಕರ ಆಹಾರಕ್ಕಾಗಿ ವಧಿಸಲ್ಪಟ್ಟ ಇತರ ಮೇಕೆಗಳ ಗುಂಪಿನಿಂದ ಹೇಗೋ ನುಸುಳಿ ತಪ್ಪಿಸಿಕೊಂಡು ಓಡಿಬಂದಿದ್ದಿತೆಂದು ವಿಚಾರಣೆಯಿಂದ ತಿಳಿಯಲು, ಮಹಾಸ್ವಾಮಿಯವರು ಅದಕ್ಕೆ ಪ್ರಾಣದಾನ ಮಾಡುವ ಅಭಿಲಾಷೆಯಿಂದ ತಾವು ಅದನ್ನು ಕ್ರಯಕ್ಕೆ ತೆಗೆದುಕೊಳ್ಳುವುದಾಗಿ ಹೇಳಿದರು. ಜಹಜಿನ ಅಧಿಕಾರಿಯು ಮಾಂಸಾಹಾರಿಗಳಲ್ಲದ ಮಹಾರಾಜರಿಗೆ ಮೇಕೆಯ ಗೊಡವೆಯೇಕೆಂದು ಯೋಚಿಸಿ ಮಹಾಸ್ವಾಮಿಯವರು ಮೇಕೆಯನ್ನು ಕೊಳ್ಳುವುದಾಗಿ ಸೂಚಿಸಿದುದು ಪ್ರಾಯಶಃ ವಿನೋದಾರ್ಥವಾಗಿ ಮಾತ್ರವೇ ಎಂದು ಭಾವಿಸಿ — ಜಹಜಿನಲ್ಲಿ ಮೇಕೆಗೆ ಬಹಳ ಕ್ರಯವೆಂದು ಅರಿಕೆಮಾಡಿ ಅತ್ಯಂತ ಭಾರಿ ಮೊತ್ತವನ್ನು ಸೂಚಿಸಿದರು. ಅವರು ವಿನೋದಕ್ಕಾಗಿ ಅಷ್ಟು ಹೆಚ್ಚು ಬೆಲೆಯನ್ನು ಹೇಳಿದ್ದರೂ, ಮಹಾಸ್ವಾಮಿಯವರು ಆ ಮೊತ್ತವನ್ನೂ, (ಮೇಕೆಯನ್ನು ತಮಗೆ ವಿಕ್ರಯಿಸಲು ಸಮ್ಮತಿಸಿದ ಉಪಕಾರಕ್ಕಾಗಿ) ಪಾರಿತೋಷಿಕವನ್ನೂ ಕೊಡುವುದಾಗಿ ಹೇಳಿದರು. ಆತನು ಉಚಿತವಾಗಿಯೇ ಮೇಕೆಯನ್ನು ಸ್ವೀಕರಿಸಿ ಕೃಪೆಮಾಡಬೇಕೆಂದು ಕೇಳಿಕೊಂಡರೂ ಮಹಾಸ್ವಾಮಿಯವರು ಸಮ್ಮತಿಸದೆ ಅವುಗಳನ್ನು ಕೊಟ್ಟು ಮೇಕೆಯನ್ನು ಕ್ರಯಕ್ಕೆ ಪಡೆದರು. ಆ ಬಳಿಕ ಮಹಾಸ್ವಾಮಿಯವರು ಆ ಮೇಕೆಯನ್ನು ನಿರತಿಶಯ



ಬರ್ಮಾ ದೇಶದ ಪ್ರವಾಸಕಾಲದಲ್ಲಿ ಪ್ರಾಣದಾನಮಾಡಿದ ಮೇಕೆಯೊಡನೆ

ಪ್ರೀತಿಯಿಂದ ಆದರಿಸುತ್ತ, ಮೈಸೂರು ನಗರಕ್ಕೆ ಹಿಂತಿರುಗಿದಮೇಲೆ ಸಹ, ಅದಕ್ಕೆ ತಾವೇ ಮೇವನ್ನು ಹಾಕಿ ನೋಡಿಕೊಳ್ಳುತ್ತಿದ್ದರು.

೧೯೦೧ನೆಯ ಇಸವಿ ನವೆಂಬರು ತಿಂಗಳು ೧೮ನೆಯ ತಾರೀಖಿನ ದಿನ, ಮಹಾಸ್ವಾಮಿಯವರು ಹಾಸನ, ಬೇಲೂರು, ಗಂಗಾಮೂಲ, ಶೃಂಗಗಿರಿ (ಶೃಂಗೇರಿ), ಮುಂತಾದ ನಾನಾ ಪ್ರದೇಶಗಳಲ್ಲಿಯೂ ಸಂಚರಿಸಿಕೊಂಡು ಬರಲು ಮೈಸೂರು ನಗರದಿಂದ ಹೊರಟರು. ಸುಮಾರು ಎರಡು ತಿಂಗಳುಗಳ ಕಾಲ ನಡೆದ ಆ ಸಲದ ಸಂಚಾರ ಕಾಲದಲ್ಲಿಯೂ, ಅದರ ಹಿಂದೆ ಎರಡು ಸಾರಿ

**ಶಿಕ್ಷಣ ಸಂಬಂಧವಾಗಿ ಸಂಸ್ಥಾನದಲ್ಲಿ ಸಂಚಾರ**

ನಡೆದಿದ್ದ ಸಂಚಾರ ಕಾಲಗಳಲ್ಲಿಯೂ ಕೇವಲ ಉಲ್ಲಾಸಾರ್ಥವಾಗಿ ಪ್ರಯಾಣವು ಬಳೆಯಲಿಲ್ಲ. ಪ್ರಾಕೃತಿಕ ಸೌಂದರ್ಯವನ್ನೂ ಶಿಲ್ಪಕಲಾ ಕೌಶಲ್ಯವನ್ನೂ ಕಂಡು ಆನಂದಪಡುವುದರ ಜೊತೆಗೆ ಪ್ರಜೆಗಳ ಸ್ಥಿತಿಯನ್ನು ಪ್ರತ್ಯಕ್ಷವಾಗಿ ಪರಿಶೀಲಿಸಿ ಲೋಕಾನುಭವ ಕಾರ್ಯಾನುಭವಗಳನ್ನು ವೃದ್ಧಿಪಡಿಸಿಕೊಂಡು, ಪುಸ್ತಕದಲ್ಲಿ ವ್ಯಾಸಂಗಮಾಡಿದ್ದ ರಾಜ್ಯಶಾಸ್ತ್ರ ಮತ್ತು ರಾಜ್ಯಭಾರ ವಿಜ್ಞಾನಗಳ ನಿಯಮಗಳನ್ನು ಕಾರ್ಯರಂಗದಲ್ಲಿ ಪ್ರಯೋಗಿಸುವ ಶಿಕ್ಷಣವನ್ನೂ ಪಡೆಯುವುದು ಒಟ್ಟು ೧,೭೦೦ ಮೈಲಿಗಳಿಗಿಂತಲೂ ಅಧಿಕವಾಗಿದ್ದ ಆ ಸಂಚಾರಗಳ ಉದ್ದೇಶ. ಆ ಉದ್ದೇಶವು ಮಹಾಸ್ವಾಮಿಯವರ ಪ್ರತಿಭಾವಿವೇಕಗಳ ಪರಿಣಾಮವಾಗಿ ಅಧ್ಯಾಪಕರ ನಿರೀಕ್ಷೆಗಿಂತಲೂ ಅತ್ಯಧಿಕವಾಗಿ ನೆರವೇರಿತು.

೧೯೦೧ನೆಯ ಇಸವಿಯಲ್ಲಿ ಶ್ರೀಮಾನ್ ಎಸ್. ಎಂ. ಫ್ರೇಸರವರು ರಾಜ್ಯಾಡಳಿತ ವಿಧಾನವನ್ನೂ ನ್ಯಾಯಶಾಸನ ವಿಧಾನವನ್ನೂ ಕಾರ್ಯಕ್ಷೇತ್ರದಲ್ಲಿ ಪ್ರತ್ಯಕ್ಷವಾಗಿ ತೋರಿಸಲು ಕೋರ್ಟುಗಳಿಗೂ ಕಚೇರಿಗಳಿಗೂ ಮಹಾಸ್ವಾಮಿಯವರನ್ನು ಅನೇಕಸಾರಿ ಕರೆದುಕೊಂಡುಹೋಗಿ ಅಲ್ಲಿ ಕೆಲಸ ಮಾಡಿಸಿದ್ದರು. ಬೆಂಗಳೂರು ನಗರದ ಸಿಟಿ ಮ್ಯಾಜಿಸ್ಟ್ರೇಟ್ ಕೋರ್ಟಿನಲ್ಲಿ ನಡೆಯುತ್ತಿದ್ದ ದೊಡ್ಡ ಮೊಕದ್ದಮೆಯೊಂದರ ವಿಚಾರಣೆಯನ್ನು ಮಹಾಸ್ವಾಮಿಯವರು ಪರಾಂಬರಿಸಿ ನಾನಾ ಅಂಶಗಳನ್ನೂ ಗುರುತುಹಾಕಿಕೊಂಡ ಬಳಿಕ ತೀರ್ಮಾನವನ್ನು ಬರೆಯುವಂತೆ ಶ್ರೀಮಾನ್ ಫ್ರೇಸರವರು ಪ್ರಭುಗಳಿಗೆ ತಿಳಿಸಿದರು. ಆಗ ಅವರು ಸ್ವತಂತ್ರವಾಗಿ ಬರೆದ ತೀರ್ಪು ಅನುಭವಸ್ಥರಾದ ಸಿಟಿ ಮ್ಯಾಜಿಸ್ಟ್ರೇಟರವರು ಬರೆದು ತಂದಿದ್ದ ತೀರ್ಪಿನಂತೆಯೇ ಇದ್ದುದನ್ನು ಕಂಡು ಶ್ರೀಮಾನ್ ಫ್ರೇಸರವರೇ ಆಶ್ಚರ್ಯಚಕಿತರಾಗಿ ತಲೆದೂಗಿದರು.

೧೯೦೧ನೆಯ ಇಸವಿಯಲ್ಲಿ ನಡೆದ ಸಂಚಾರ ಕಾಲದಲ್ಲಿ ಒಂದು ಗ್ರಾಮದ ಚಾವಡಿಗೆ ಆಕಸ್ಮಿಕವಾಗಿ ದಯಮಾಡಿ ಅಲ್ಲಿದ್ದ ಒಬ್ಬ ರೈತನನ್ನು ಕುರಿತು ಅವನು ತನ್ನ ಪಟ್ಟಿಯನ್ನು ತರುವಂತೆ ಮಹಾಸ್ವಾಮಿಯವರು ಅಪ್ಪಣೆ ಮಾಡಿದರು. ಅವರು ರೆವೆನ್ಯೂ ಇಲಾಖೆಯ ಅಧಿಕಾರಿಗಳಲ್ಲೊಬ್ಬರಾಗಿರಬೇಕೆಂದು ಭಾವಿಸಿ ಆ ರೈತನು ಪಟ್ಟಿಯನ್ನು ತಂದುಕೊಟ್ಟು ತಾನು ಪೂರ್ತಿಯಾಗಿ ಕಂದಾಯವನ್ನು ಪಾವತಿ ಮಾಡಿದ್ದರೂ ಶಾನುಭೋಗರು ಕಡಮೆ ಮೊತ್ತವನ್ನು ಪಟ್ಟಿಯಲ್ಲಿ ಕಾಣಿಸಿ ಅನ್ಯಾಯಮಾಡಿದ್ದುದೂ ಅಲ್ಲದೆ ಎಷ್ಟು ಕೇಳಿಕೊಂಡರೂ ಪಟ್ಟಿಯನ್ನು ತಿದ್ದಿ ಸರಿಪಡಿಸಿಕೊಟ್ಟರಲಿಲ್ಲವೆಂದೂ ಅರಿಕೆ ಮಾಡಿದನು. ಆ ವೇಳೆಗೆ ಚಾವಡಿಯಲ್ಲಿ ಬಹು ಮಂದಿ ನೆರೆದರು. ಮಹಾಸ್ವಾಮಿಯವರು, ಸಮಸ್ತ ಲೆಕ್ಕಗಳನ್ನೂ ತೆಗೆದುಕೊಂಡುಬರುವಂತೆ ಶಾನುಭೋಗನಿಗೆ ಹೇಳಿಕಳುಹಿಸಿದರು. ವದಂತಿಯಿದ್ದಂತೆ ಹಳೆಯ ಅಮಲ್ದಾರರಿಗೆ ವರ್ಗವಾಗಿ ಹೊಸ ಅಮಲ್ದಾರರು ಬಂದಿರಬೇಕೆಂದು ಭಾವಿಸಿ ಶಾನುಭೋಗನು ಖಾತೆ, ಖಿರ್ದಿ ಮುಂತಾದ ಲೆಕ್ಕದ ಪುಸ್ತಕಗಳನ್ನು ತೆಗೆದುಕೊಂಡು ಬಂದನು. ಮಹಾಸ್ವಾಮಿಯವರು ಒಡನೆಯೇ ಖಿರ್ದಿಯನ್ನು ತೆಗೆದು ಪರಾಂಬರಿಸಲು ಪಟ್ಟಿಯಲ್ಲಿ ಕಾಣಿಸಿದ್ದ ಮೊಬಲಗು ಕೂಡ ಆ ರೈತನ ಲೆಕ್ಕಕ್ಕೆ ಖಿರ್ದಿಯಲ್ಲಿ ಸೇರಿರಲಿಲ್ಲ. ಅನಂತರ ಆ ನ್ಯೂನತೆಯು ಸರಿಹೋದುದನ್ನು ತಿಳಿಸಬೇಕಾದ ಆವಶ್ಯಕತೆಯೇ ಇಲ್ಲ. ಗ್ರಾಮ ಲೆಕ್ಕಗಳನ್ನು ಪರಾಂಬರಿಸುವುದರಲ್ಲಿ ಕೂಡ ಮಹಾಸ್ವಾಮಿಯವರಿಗೆ ವಿಶೇಷ ಪರಿಶ್ರಮವಿದ್ದ ಅಂಶವು ಮಹಾಸ್ವಾಮಿಯವರು ತಟಕ್ಕನೆ ಖಿರ್ದಿಯನ್ನು ತೆಗೆದು ಪರಿಶೀಲಿಸಿದುದರಿಂದ ವ್ಯಕ್ತವಾಗುತ್ತದೆ.

ಮತ್ತೊಂದು ಗ್ರಾಮಕ್ಕೆ ಮಹಾಸ್ವಾಮಿಯವರು ದಯಮಾಡಿದಾಗ್ಗೆ, ಆ ಗ್ರಾಮದ ನಕಾಶೆಯಲ್ಲಿ ಕೆಲವು ಹೊಲಗಳು ಎಲ್ಲಿ ನಕ್ಷೆಯಾಗಿದ್ದುವೆಂಬುದನ್ನು ತೋರಿಸಬೇಕೆಂದು ಶ್ರೀಮಾನ್ ಫ್ರೇಸರವರು ಅಲ್ಲಿದ್ದ ಗ್ರಾಮಾಧಿಕಾರಿಗಳಿಗೆ ತಿಳಿಸಿದರಂತೆ. ಅವರು ಅವುಗಳನ್ನು ತೋರಿಸಲಾರದೆ ಹುಡುಕಲಾರಂಭಿಸಿದರು. ಮಹಾಸ್ವಾಮಿಯವರು ಒಡನೆಯೇ ಅವುಗಳನ್ನು ತೋರಿಸಿದರು. ನಕಾಶೆಯಲ್ಲಿರುವುದೇನೆಂಬುದರ ಅನುಭವವೇ ಇಲ್ಲದವರ ಗ್ರಾಮಾಡಳಿತವು ಬಹಳ ವಿಚಕ್ಷಣೆಯಿಂದಿರುವುದೆಂದು ಸೂಚಿಸಿ ಹಾಸ್ಯಮಾಡಿ, ಶ್ರೀಮಾನ್ ಫ್ರೇಸರವರು ಆ ಅಧಿಕಾರಿಗಳ ಕಾರ್ಯದಕ್ಷತೆಯು ಹೆಚ್ಚುವ ಏರ್ಪಾಡನ್ನು ಮಾಡಿಸಿದರು.

ಮಹಾಸ್ವಾಮಿಯವರು ಹಾಸನ ಡಿಸ್ಟ್ರಿಕ್ಟಿನ ಡಿಸ್ಪೆನ್ಸರಿಯೊಂದಕ್ಕೆ (೧೯೦೧ನೆಯ ಇಸವಿಯಲ್ಲಿ) ದಯಮಾಡಿದಾಗ "ಇಂಜೆಕ್ಷನ್"




ಆಳಿದ ಮಹಾಸ್ವಾಮಿಯವರು

(ರಾಜ್ಯಭಾರಸೂತ್ರ ಸ್ವೀಕಾರಕ್ಕೆ ಸ್ವಲ್ಪ ಮುಂಚಿತವಾಗಿ ಕೈಕೊಂಡ ಪ್ರವಾಸದಲ್ಲಿ)

ಉಪಕರಣಗಳನ್ನು ತೆಗೆಯಿಸಿ ನೋಡಿ, ಅವುಗಳನ್ನು ತೋರಿಸಿದ ವೈದ್ಯರನ್ನು ಕುರಿತು, "ಇವುಗಳಿಂದ ಹೇಗೆ ಚಿಕಿತ್ಸೆಯನ್ನು ಮಾಡುತ್ತೀರಿ? ಇವು ಚಿಕಿತ್ಸೆ ಮಾಡಬಹುದಾದ ಸುಸ್ಥಿತಿಯಲ್ಲಿವೆಯಷ್ಟೆ?" ಎಂದು ಕೇಳಿದರು. ವೈದ್ಯರು ಅವುಗಳನ್ನು ದೃಷ್ಟಿಸಿ ನೋಡಿ, "ಆಹ! ಸರಿಯಾಗಿವೆ. ಕುದಿಯುವ ನೀರಿನಲ್ಲಿಟ್ಟು ಹೊರಕ್ಕೆ ತೆಗೆದು ಔಷಧ ದ್ರವವನ್ನು ಸೂಜಿಯ ಮೂಲಕ ಒಳಕ್ಕೆ ಸೆಳೆದುಕೊಂಡು ಸೂಜಿಯ ಮೊನೆಯನ್ನು ತೋಳಿಗೆ ಚುಚ್ಚಿ ಔಷಧ ದ್ರವವನ್ನು ರಕ್ತಕ್ಕೆ ಸೇರಿಸಿದರಾಯಿತು. ಔಷಧವು ವ್ಯಾಪಿಸಿ ರೋಗವನ್ನು ಹೊಡೆಯುತ್ತದೆ" ಎಂದರು. ಮಹಾಸ್ವಾಮಿಯವರು, "ಔಷಧವು ವ್ಯಾಪಿಸಿ ರೋಗವನ್ನೇನೊ ಹೊಡೆಯುತ್ತದೆ. ಆದರೆ ಅಷ್ಟರೊಳಗಾಗಿ ಸೂಜಿಯ ತುಕ್ಕು ರಕ್ತದೊಳಕ್ಕೆ ವ್ಯಾಪಿಸಿ ರೋಗಿಯ ಪ್ರಾಣವನ್ನು ಹಾರಿಸಿರುತ್ತದೆ" ಎಂದು ಹೇಳಿ, ತುಕ್ಕು ಹಿಡಿದು ಅಪ್ರಯೋಜಕವಾಗಿ ಪರಿಣಮಿಸಿದ್ದ ಆ ಸೂಜಿಯನ್ನು ಕಿಟಕಿಯಿಂದಾಚೆಗೆ ಬಿಸುಟರು. ಅನಂತರ, ಚಿಕಿತ್ಸೆಗಾಗಿ ಉಪಯೋಗಿಸುವ ವಿಷದ್ರವ್ಯಗಳನ್ನಿಟ್ಟು ಬೀಗಹಾಕಿದ್ದ ಅಲಮಾರಿನ ಬೀಗದ ಕೈಯನ್ನು ಕೊಡುವಂತೆ ವೈದ್ಯರನ್ನು ಮಹಾಸ್ವಾಮಿಯವರು ಕೇಳಿದರು. ಅದು ಸರ್ವದಾ ವೈದ್ಯರ ಬಳಿಯಲ್ಲಿ ಮಾತ್ರವೇ ಇರಬೇಕೆಂಬುದು ನಿಬಂಧನೆ. ಆದರೆ ಅದು ವೈದ್ಯರ ಬಳಿಯಲ್ಲಿಲ್ಲದೆ ಕಾಂಪೌಂಡರ ಬಳಿಯಲ್ಲಿದ್ದುದನ್ನು ಕಂಡು, "ಓಹೊ! ಇದೋ ಈ ವೈದ್ಯಶಾಲೆಯ ನಿಬಂಧನೆ!" ಎಂದರು.

ಅದೇ ಸಂವತ್ಸರದಲ್ಲಿ ಮಹಾಸ್ವಾಮಿಯವರು ಒಂದು ಪಾಠಶಾಲೆಯನ್ನು ಪರಾಂಬರಿಸಲು ಹೋಗಿದ್ದಾಗ, ಭೂಪಟದಲ್ಲಿ ಕೆಲವು ನಗರಗಳನ್ನೂ ನದಿಗಳನ್ನೂ ಉಪಾಧ್ಯಾಯರೇ ತೋರಿಸಲಾರದೆಹೋದರು. ಮಹಾಸ್ವಾಮಿಯವರು ಅವುಗಳನ್ನು ತೋರಿಸಿ, "ಹಿಂದಿನ ದಿನವೇ ಮ್ಯಾಪು ನೋಡಿಯಾದರೂ ಮಾರನೆಯ ದಿನ ಪಾಠ ಹೇಳಬಾರದೆ!" ಎಂದು ಅಪ್ಪಣೆ ಕೊಡಿಸಿ, ಭೂಪಟದಲ್ಲಿ ದಿಕ್ಕುಗಳನ್ನು ತೋರಿಸುವಂತೆ ಬಾಲಕರನ್ನು ಕೇಳಿದರು. ಅವರು ಅವುಗಳನ್ನು ಸರಿಯಾಗಿ ತೋರಿಸಿದಮೇಲೆ, "ಎಲ್ಲಿ ಮ್ಯಾಪಿನಮೇಲೆ ಬೇಡ. ನಿಜವಾದ ದಕ್ಷಿಣದಿಕ್ಕು ಉತ್ತರದಿಕ್ಕು ಯಾವುದು, ತೋರಿಸಿ" ಎಂದು ಕೇಳಿದಾಗ, ಒಬ್ಬ ಬಾಲಕನೂ ಸರಿಯಾಗಿ ತೋರಿಸಲಿಲ್ಲ. ಒಬ್ಬ ಬಾಲಕನು, "ಪೂರ್ವ ಪಶ್ಚಿಮವಾದರೆ ಸರಿಯಾಗಿ ಗೊತ್ತು, ಸಾರ್. ಸೂರ್ಯ ಹುಟ್ಟುವ ದಿಕ್ಕು ಪೂರ್ವ. ಸೂರ್ಯ ಮುಳುಗುವ ದಿಕ್ಕು ಪಶ್ಚಿಮ. ಅದಾದರೆ ತೋರಿಸ್ತೇನೆ. ಉತ್ತರ ದಕ್ಷಿಣ ಅದೆಲ್ಲಾ ಗೊತ್ತಿಲ್ಲ" ಎಂದಾಗಲೂ, ಮತ್ತೊಬ್ಬ

ಬಾಲಕನು ಭೂಪಟದಲ್ಲಿ ತೋರಿಸಿದ ಕ್ರಮದಲ್ಲೇ ಆಕಾಶದ ಕಡೆಗೆ ಕೈತೋರಿಸಿ ಅದು ಉತ್ತರವೆಂದೂ, ನೆಲದ ಕಡೆಗೆ ಕೈ ತೋರಿಸಿ ಅದು ದಕ್ಷಿಣವೆಂದೂ ಹೇಳಿದಾಗಲೂ, ಮಹಾಸ್ವಾಮಿಯವರು ನಕ್ಕರು

೧೯೦೧ನೆಯ ಇಸವಿ ಸೆಪ್ಟೆಂಬರು ತಿಂಗಳಿನಲ್ಲಿ ಮಹಾಸ್ವಾಮಿಯವರು ಶಿವನಸಮುದ್ರದಲ್ಲಿ ವಿದ್ಯುಚ್ಛಕ್ತಿಯನ್ನು ಉತ್ಪತ್ತಿ ಮಾಡುವ ಯಂತ್ರಾಲಯಕ್ಕೆ ದಯಮಾಡಿದರು. ಆಗ್ಗೆ ಅದರ ಮುಖ್ಯಾಧಿಕಾರಿಯವರಾಗಿದ್ದ ಶ್ರೀಮಾನ್ ಎಕ್ಸ್ತ್ರೋಮ್ ಎಂಬವರು ಅಮೆರಿಕಾಖಂಡದ ನಯಾಗರ (Niagara) ಜಲಪಾತದ ವಿದ್ಯುಚ್ಛಕ್ತಿಯ ಯಂತ್ರಾಲಯದಲ್ಲಿ ಕೆಲಸಮಾಡಿ ಪ್ರಖ್ಯಾತರಾಗಿದ್ದವರು. ಮಹಾಸ್ವಾಮಿಯವರು ತಮ್ಮನ್ನು ಕೇಳಿದ ಪ್ರಶ್ನೆಗಳಿಂದಲೇ ವಿದ್ಯುಚ್ಛಕ್ತಿಯನ್ನುತ್ಪತ್ತಿಮಾಡುವ ಯಂತ್ರಗಳ ಜೋಡಣೆ ಮುಂತಾದ ವಿಚಾರಗಳಲ್ಲಿ ಕೂಡ ಅವರಿಗೆ ಎಷ್ಟು ಹೆಚ್ಚಿನ ನಿಷ್ಕೃಷ್ಟಜ್ಞಾನವಿದ್ದಿತೆಂಬುದನ್ನು ಗ್ರಹಿಸಿ ಆಶ್ಚರ್ಯಪಟ್ಟ ಆ ಮಹಾಶಯರು, "ಮಹಾಸ್ವಾಮಿಯವರು ವಿಶದ ವಿವರಗಳನ್ನೆಲ್ಲ ಅರಿತಿದ್ದಾರೆ. ಪ್ರಭುಪದವಿಯಲ್ಲಿರುವ ತರುಣರೊಬ್ಬರಿಂದ ನಿರೀಕ್ಷಿಸಬಹುದಾದುದಕ್ಕಿಂತ ಅತ್ಯಂತ ಹೆಚ್ಚಿನ ಸಂಗತಿಗಳನ್ನು ಮಹಾಸ್ವಾಮಿಯವರು ಅರಿತಿದ್ದಾರೆ. ಪ್ರಭುಗಳು ನನ್ನನ್ನು ಕೇಳಿದ ಪ್ರಶ್ನೆಗಳನ್ನು ಕಂಡು ನನಗೆ ಪರಮಾಶ್ಚರ್ಯವುಂಟಾಗಿದೆ. ವಿದ್ಯುಚ್ಛಕ್ತಿಯ ಉತ್ಪತ್ತಿಗೆ ಸಂಬಂಧಪಟ್ಟ ಸಮಸ್ತ ವಿಚಾರಗಳನ್ನೂ ಅವರು ಸಮಗ್ರವಾಗಿ ಗೊತ್ತುಮಾಡಿಕೊಂಡಿರುವಂತಿದೆ" ಎಂದು ಸಮ್ಮುಖದ ಅಧಿಕಾರಿಗಳವರೊಡನೆ ಹೇಳಿದರು. ಶ್ರೀಮಾನ್ ಸರ್ ಕೆ. ಶೇಷಾದ್ರಿ ಐಯರವರು ೧೯೦೧ನೆಯ ಇಸವಿಯ ಮಾರ್ಚಿ ತಿಂಗಳಿನಲ್ಲಿ ತಮ್ಮ ಹುದ್ದೆಯಿಂದ ವಿಶ್ರಾಂತರಾಗಿ ಸೆಪ್ಟೆಂಬರು ತಿಂಗಳಿನಲ್ಲಿ ಮೃತಪಟ್ಟರು. ಶಿವನಸಮುದ್ರದಲ್ಲಿ ವಿದ್ಯುಚ್ಛಕ್ತಿಯನ್ನು ಉತ್ಪತ್ತಿಮಾಡುವುದಕ್ಕಾಗಿ ಅವರು ಅಪರಿಮಿತವಾದ ಉತ್ಸಾಹದಿಂದಲೂ ಶ್ರದ್ಧೆಯಿಂದಲೂ ನೆರವೇರಿಸಿದ್ದ ಏರ್ಪಾಡು ಫಲಿಸಿ ಯಶಸ್ವಿಯಾದುದನ್ನು ಅವರು ನೋಡುವುದಕ್ಕಿಲ್ಲದೆಹೋಯಿತಲ್ಲಾ — ಎಂದು ಮಹಾಸ್ವಾಮಿಯವರು ವಿಷಾದಿಸಿದರು.

ಮಹಾಪ್ರಭುಗಳವರ ಮತ್ತು ಅವರ ಸಹೋದರರ ವಿದ್ಯಾಭ್ಯಾಸ ಸಂಬಂಧವಾದ ವಿಚಾರಗಳನ್ನು ಕುರಿತು ಶ್ರೀಮಾನ್ ಫ್ರೇಸರವರು ಬ್ರಿಟಿಷ್ ರೆಸಿಡೆಂಟರವರಿಗೆ ನಿಯತ ಕಾಲಗಳಲ್ಲಿ ವರದಿಗಳನ್ನೊಪ್ಪಿಸುತ್ತಿದ್ದರು. ಆ ಕ್ರಮವನ್ನನುಸರಿಸಿ ಅವರು ೧೯೦೨ನೆಯ ಇಸವಿ ಜುಲೈ ೧೪ನೆಯ ತಾರೀಖಿನ ದಿನ ಬ್ರಿಟಿಷ್ ರೆಸಿಡೆಂಟರವರಿಗೆ ತಮ್ಮ ಏಳನೆಯ

ವರದಿಯನ್ನೊಪ್ಪಿಸಿದರು. ಅದೇ ಅವರು ಒಪ್ಪಿಸಿದ ಕೊನೆಯ ವರದಿ. ಶ್ರೀಮನ್ಮಹಾರಾಜರವರ ಪ್ರೌಢಿಮೆ ಪರಿಶ್ರಮಗಳ ವಿಷಯವಾಗಿ ಅನೇಕ ಸ್ವಾರಸ್ಯವಾದ ಸಂಗತಿಗಳು ಅದರಲ್ಲಿ ಸೂಚಿತವಾಗಿವೆ. ಭಾಷೆಗಳು, ವಿಜ್ಞಾನ, ಚರಿತ್ರೆ, ಗಣಿತ ಶಾಸ್ತ್ರ, ಚಿತ್ರಲೇಖನ, ದರ್ಶನಗಳು, ಮುಂತಾದ ವಿಷಯಗಳ ಜೊತೆಗೆ, ಖಗೋಳಶಾಸ್ತ್ರ, ವ್ಯವಹಾರ ವಿಜ್ಞಾನ, ಅಂತರ ರಾಷ್ಟ್ರೀಯ ಕಾನೂನು, ಭರತ ಖಂಡದ ರಾಜಕೀಯ ಕಾನೂನು, ರಾಜ್ಯಶಾಸನ ಸಿದ್ಧಾಂತಗಳು, ಮೈಸೂರು ಸಂಸ್ಥಾನದ ಜಮೀನು ಕಂದಾಯದ ಮತ್ತು ಸರ್ವೇ ಶಿಸ್ತಿನ ಇತಿಹಾಸ, ರೆವೆನ್ಯೂ ನಿಬಂಧನೆಗಳು, ಕ್ರಿಮಿನಲ್ ಮತ್ತು ಸಿವಿಲ್ ಕಾನೂನು, ಇನಾಂ ವ್ಯವಸ್ಥೆ, ಕಾಡುಗಳ ಆಡಳಿತ, ಕ್ಷಾಮನಿವಾರಣೆ ಕಾನೂನು, ಆಬ್ಕಾರಿ ಕಾನೂನು, ತೆರಿಗೆಗಳ ವಿಚಾರ, ಸ್ಟಾಂಪುಗಳ ಕಾನೂನು, ರಿಜಿಸ್ಟ್ರೇಷನ್ ಕಾನೂನು, ಹಿಂದೂ ಧರ್ಮಶಾಸ್ತ್ರ, ಮುಸಲ್ಮಾನರ ಧರ್ಮಶಾಸ್ತ್ರ, ಸರ್ಕಾರದ ನಾನಾ ಇಲಾಖೆಗಳ ಆಡಳಿತ—ಇವೇ ಮುಂತಾದುವುಗಳಲ್ಲಿಯೂ ಅತ್ಯಧಿಕ ಪರಿಶ್ರಮವುಂಟಾಗಿದ್ದ ಅಂಶವನ್ನೂ ಶ್ರೀಮಾನ್ ಫ್ರೇಸರವರು ಆ ವರದಿಯಲ್ಲಿ ಸೂಚಿಸಿದ್ದಾರೆ. ಮಹಾಸ್ವಾಮಿಯವರಿಗೆ ಶಿಕ್ಷಣ ಲಭಿಸಿದ್ದ ಸಮಸ್ತ ವಿಚಾರಗಳಲ್ಲಿಯೂ ಅವರ ವಯಸ್ಸಿನವರಿಂದ ನಿರೀಕ್ಷಿಸುವುದು ಸಾಧ್ಯವೇ ಇಲ್ಲದಷ್ಟುಮಟ್ಟಿಗೆ ಅವರ ಜ್ಞಾನಾನುಭವಗಳು ಅತ್ಯಧಿಕವಾಗಿದ್ದುವೆಂದೂ, ಅವರು ರಾಜ್ಯಭಾರ ನಿರ್ವಹಣದಲ್ಲಿ ತಮಗೆ ಎಂತಹ ಕ್ಲಿಷ್ಟ ಸಮಸ್ಯೆಗಳೊದಗಿದರೂ ಅವುಗಳನ್ನು ಬಗೆಹರಿಸಿಕೊಂಡು ಸಮರ್ಪಕವಾಗಿ ದಕ್ಷತೆಯಿಂದ ಪ್ರಭುತ್ವಮಾಡಲು ಸಮರ್ಥರಾಗಿದ್ದರೆಂದೂ, ಅವರ ವಿದ್ಯಾಪ್ರೌಢಿಮೆಯೂ, ಲೋಕಾನುಭವವೂ, ವಿವೇಚನಾ ಶಕ್ತಿಯೂ, ಸಚ್ಚಾರಿತ್ರವೂ ಕಾರ್ಯಶ್ರದ್ಧೆಯೂ ಸಂಯಮ ಸೌಶೀಲ್ಯಗಳೂ—ಅಸಾಧಾರಣವಾಗಿದ್ದ ಕಾರಣ ಅವರು ಪ್ರಜಾರಂಜಕರಾಗಿ ಅನನ್ಯ ಸುಲಭವಾದ ರೀತಿಯಲ್ಲಿ ವಿಚಕ್ಷಣೆಯಿಂದ ಪ್ರಭುತ್ವಮಾಡಬಲ್ಲವರಾಗಿದ್ದ ವಿಷಯವು ನಿಸ್ಸಂದೇಹವಾಗಿದ್ದಿತೆಂದೂ ಶ್ರೀಮಾನ್ ಫ್ರೇಸರವರು ಮುಕ್ತಕಂಠದಿಂದ ತಮ್ಮ ಅಭಿಪ್ರಾಯವನ್ನು ಆ ವರದಿಯಲ್ಲಿ ತಿಳಿಸಿದ್ದಾರೆ. ಮಹಾಸ್ವಾಮಿಯವರ ನಯವಿನಯಗಳೂ, ಸದ್ವರ್ತನೆಯೂ, ಗಾಂಭೀರ್ಯವೂ, ಸುಸಂಸ್ಕೃತ ಸ್ವಭಾವವೂ ಯೂರೋಪಿಯನ್ ಜನರೆಲ್ಲರಿಂದಲೂ ಅವರಿಗೆ ಪ್ರೀತಿ ಗೌರವಗಳನ್ನು ಗಳಿಸಿಕೊಟ್ಟದ್ದುವೆಂದೂ ಸಹ, ಆ ವರದಿಯಲ್ಲಿ ಸೂಚಿತವಾಗಿದೆ.

**ಶ್ರೀಮಾನ್ ಫ್ರೇಸರವರ ಏಳನೆಯ ವರದಿ**

ಶ್ರೀಮಾನ್ ಎಸ್. ಎಂ. ಫ್ರೇಸರವರು ಮಹಾಸ್ವಾಮಿಯವರಿಗೆ ಉತ್ತಮ ರೀತಿಯಲ್ಲಿ ಶಿಕ್ಷಣ ಕೊಟ್ಟುದನ್ನು ಮೆಚ್ಚಿ, ಆಗ್ಗೆ ಚಕ್ರವರ್ತಿ ಸಾರ್ವಭೌಮರಾಗಿದ್ದ ಏಳನೆಯ ಎಡ್ವರ್ಡ್ ಪ್ರಭುಗಳವರು ಅವರಿಗೆ "ಸಿ.ಐ.ಇ." ಎಂಬ ಘನವಾದ ಬಿರುದನ್ನು ದಯಪಾಲಿಸಿದರು.

೧೯೦೨ನೆಯ ಇಸವಿ ಆಗಸ್ಟ್ ತಿಂಗಳು ಎಂಟನೆಯ ತಾರೀಖಿನ ದಿನ ಮಹಾಸ್ವಾಮಿಯವರು ಮಹಾರಾಜ್ಞೀ ರೀಜೆಂಟರವರಿಂದ ರಾಜ್ಯಭಾರ ಸೂತ್ರಗಳನ್ನು ಸ್ವೀಕರಿಸಬೇಕೆಂದು ನಿಷ್ಕರ್ಷೆಯಾಯಿತು.

# ಆರನೆಯ ಅಧ್ಯಾಯ

## ಹಿನ್ನೆಲೆ

" ಕಸ್ಯಾತ್ಯನ್ತಂ ಸುಖಮುಪನತಂ ದುಃಖಮೇಕಾಂತತೋವಾ ।
ನೀಚೈರ್ಗಚ್ಛತ್ಯುಪರಿಚ ದಶಾ ಚಕ್ರ ನೇಮಿ ಕ್ರಮೇಣ ॥"
" ಚಕ್ರಾರ ಪಙ್ತ್ತಿರಿವ ಗಚ್ಛತಿ ಭಾಗ್ಯಪಙ್ತ್ತಿಃ ॥"

ಆಳಿದ ಮಹಾಸ್ವಾಮಿಯವರಾದ ಶ್ರೀಮನ್ಮಹಾರಾಜ ಶ್ರೀಮನ್ನಾಲ್ವಡಿ ಶ್ರೀ ಕೃಷ್ಣರಾಜೇಂದ್ರ ಒಡೆಯರವರು ರಾಜ್ಯಭಾರ ಸ್ವೀಕಾರ ಮಾಡುವವೇಳೆಗೆ ಸಂಸ್ಥಾನದ ಸ್ಥಿತಿಯು ಹೇಗಿದ್ದಿತೆಂಬುದನ್ನೂ, ಮಹಾಸ್ವಾಮಿಯವರ ಪೂಜ್ಯ ಮಾತಾಪಿತೃಗಳು ಸಂಸ್ಥಾನದ ಭಾಗ್ಯ ಪಙ್ತ್ತಿಯು ಉಚ್ಚಗತಿಯನ್ನಾಶ್ರಯಿಸಿ ಮೇಲಕ್ಕೇರಲನುಕೂಲಿಸುವಂತೆ ರಾಜ್ಯಭಾರ ಮಾಡಿ ಆಡಳಿತ ನಿರ್ವಹಿಸಿದ್ದ ವಿಧಾನವನ್ನೂ ಅತಿ ಸಂಕ್ಷೇಪವಾಗಿ ಸೂಚಿಸುವುದು ಆವಶ್ಯಕ. ಆ ಹಿನ್ನೆಲೆಯ ಪರಿಸ್ಥಿತಿಯು ಹೇಗಿದ್ದಿತೆಂಬುದನ್ನು ಸ್ವಲ್ಪ ಮಟ್ಟಿಗಾದರೂ ಮನದಟ್ಟುಮಾಡಿಕೊಂಡಲ್ಲದೆ, ಮಹಾಸ್ವಾಮಿಯವರ ರಾಜ್ಯಭಾರದಲ್ಲಿ ನೆರವೇರಿದ ದೇಶೋನ್ನತಿ ಸಾಧನೆಯ ಕಾರ್ಯಕಲಾಪಗಳ ಮಹತ್ವವನ್ನು ಗ್ರಹಿಸುವುದು ಕಷ್ಟ.

**ಪೂರ್ವವೃತ್ತ**

ಆಳಿದ ಮಹಾಸ್ವಾಮಿಯವರಾದ ಶ್ರೀ ಚಾಮರಾಜೇಂದ್ರ ಒಡೆಯರವರಿಗೆ ಸಂಸ್ಥಾನದ ಸಿಂಹಾಸನಾಧಿಕಾರವು ಲಭಿಸಿದುದಕ್ಕೆ ಪೂರ್ವಭಾವಿಯಾಗಿ ನಡೆದಿದ್ದ ಐತಿಹಾಸಿಕ ಘಟನೆಗಳು ಕೂಡ ಅತ್ಯಂತ ಸ್ವಾರಸ್ಯವಾಗಿ ಗಮನಾರ್ಹವಾಗಿವೆ: ಮೈಸೂರು ಸಂಸ್ಥಾನದ ರಾಜಮನೆತನದ ಮೂಲ ಪುರುಷರಾದ ಯದುರಾಯರು, ಅವರ ಸಹೋದರರಾದ ಕೃಷ್ಣರಾಯರೊಡನೆ ಸಂಸ್ಥಾನಕ್ಕೆ ದಯಮಾಡಿ ಮಾರನಾಯಕನನ್ನು ನಿಗ್ರಹಿಸಿ ಚಾಮರಾಜರ ಕುಟುಂಬದವರಿಗೆ ಅವನ ದೆಸೆಯಿಂದ ಉಂಟಾಗಿದ್ದ ಕಿರುಕುಳವನ್ನು ನಿವಾರಣೆಮಾಡಿ, ಚಾಮರಾಜರ ಕುಮಾರಿಯವರಾದ ಶ್ರೀ ದೇವಾಜಮ್ಮಣ್ಣಿಯವರನ್ನು ವಿವಾಹ ಮಾಡಿಕೊಂಡು ವಿಚಕ್ಷಣೆಯಿಂದ ರಾಜ್ಯಭಾರಮಾಡಿದುದು; ವೀರವರರಾಗಿದ್ದ ಆ ಮಹನೀಯರ ಮತ್ತು ಅವರ ಕಾಲಾನಂತರ ರಾಜ್ಯಭಾರವನ್ನು ವಹಿಸಿದ ಅವರ ಸಂತತಿಯವರನೇಕರ ಕ್ಷಾತ್ರ ತೇಜಸ್ಸಿನ ಮತ್ತು ಧಾರ್ಮಿಕತೆಯ

ಫಲಿತಾಂಶವಾಗಿ ಮೈಸೂರು ಸಂಸ್ಥಾನವು ಪುರೋಭಿವೃದ್ಧಿ ಹೊಂದಿದುದು; ರಾಜಒಡೆಯರವರು ಶ್ರೀರಂಗಪಟ್ಟಣ ಮುಂತಾದುವುಗಳನ್ನು ಸ್ವಾಧೀನ ಪಡಿಸಿಕೊಂಡು ರಾಜ್ಯವನ್ನು ವಿಸ್ತರಿಸಿ ವಿಜಯನಗರ ಸಾಮ್ರಾಜ್ಯವು ಊರ್ಜಿತಸ್ಥಿತಿಯಲ್ಲಿದ್ದಾಗ ಮೆರೆಯುತ್ತಿದ್ದ ಸತ್ಸಂಪ್ರದಾಯಗಳಿಗೆಲ್ಲ ಮೈಸೂರು ಸಂಸ್ಥಾನವು ಸಿರಿಬೀಡಾಗುವಂತೆ ಏರ್ಪಡಿಸಿದುದು; ಮಲ್ಲ ಯುದ್ಧದ ಸಂಬಂಧದಲ್ಲಿ ತಿರುಚನಾಪಳ್ಳಿಯ ರಾಜನ ಗರ್ವವನ್ನಿಳಿಸಿದ ಸಾಹಸಧನರಾದ ಕಂಠೀರವನರಸರಾಜ ಒಡೆಯರವರು ಬಿಜಾಪುರದಿಂದ ಬಂದು ಮುತ್ತಿಗೆ ಹಾಕಿದ ರಣದುಲ್ಲಾಖಾನನ್ನು ಸೋಲಿಸಿ ಓಡಿಸಿ, ಅರಿಭಯಂಕರರೂ ಆಶ್ರಿತ ರಕ್ಷಕರೂ ಆಗಿ ನೆರವೇರಿಸಿದ ರಾಜ್ಯವಿಸ್ತರ; ಮಧುರೆಯ ನಾಯಕನನ್ನು ಸೋಲಿಸಿ ಧಾರಾಪುರ ಮುಂತಾದುವುಗಳನ್ನು ಗೆದ್ದ ಪರರಾಯಭಯಂಕರ ದೊಡ್ಡದೇವರಾಜರ ರಣಪಾಂಡಿತ್ಯ; ಮೇಧಾವಿಶ್ರೇಷ್ಠರಾದ ಚಿಕ್ಕದೇವರಾಜ ಒಡೆಯರವರು ದುರಾರಾಧ್ಯನಾದ ಔರಂಗಜೇಬನ ಸಖ್ಯವನ್ನು ಕೂಡ ಪಡೆದು ಆತನಿಂದ ಜಗದೇವರಾಯ ನೆಂಬ ಬಿರುದನ್ನು ಗಳಿಸಿ ಸಂಸ್ಥಾನದ ಆಡಳಿತ ವಿಧಾನವನ್ನು ಪರಿಷ್ಕರಿಸಿ ಹದಿನೆಂಟು ಶಾಖೆಗಳನ್ನೇರ್ಪಡಿಸಿದುದು, ಪುಂಡರನ್ನು ಮೆಟ್ಟಿ ಸುವ್ಯವಸ್ಥೆ ಯನ್ನಳವಡಿಸಿ ರಾಜ್ಯಭಾರ ವೈಖರಿಯನ್ನು ಮೆರೆದುದು, ಸಂಸ್ಥಾನದ ವರಮಾನವನ್ನು ವೃದ್ಧಿಗೊಳಿಸಿ ಮಹಾಲಕ್ಷ್ಮಿಯನ್ನು ಸೇವಿಸಿದಂತೆಯೇ ಗ್ರಂಥ ರಚನೆಮಾಡಿ ಗ್ರಂಥರಚನೆಗೆ ಅಪರಿಮಿತವಾದ ಪ್ರೋತ್ಸಾಹವನ್ನಿತ್ತು ಮಹಾಸರಸ್ವತಿಯನ್ನಾರಾಧಿಸಿ ಕೀರ್ತಿಭಾಜನರಾದುದು, ಅಲ್ಲದೆ ಅಷ್ಟು ಹಿಂದಿನ ಕಾಲದಲ್ಲೇ ವಿಚಕ್ಷಣೆಯಿಂದ ಅಂಚೆಯ ಶಾಖೆಯನ್ನೇರ್ಪಡಿಸಿ ಸಂಸ್ಥಾನವು ತನ್ನ ಮುನ್ನಡೆಯಿಂದ ಪ್ರಖ್ಯಾತವಾಗುವಂತೆ ಮಾಡಿದುದು, ಈ ರೂಪಗಳಲ್ಲಿ ಮೆರೆದ ಶ್ರೇಷ್ಠ ರೀತಿಯ ರಾಜ್ಯಭಾರ ವಿಚಕ್ಷಣೆ; ಇವುಗಳು ದೇಶಾಭಿಮಾನಿಗಳಾದವರೆಲ್ಲರನ್ನೂ ಹುರಿದುಂಬಿಸುತ್ತ ಚಿರಸ್ಮರಣೀಯ ವಾಗಿರುವುವೆಂಬ ಅಂಶವನ್ನು ಸೂಚಿಸುವುದು ಮಾತ್ರವೇ ಇಲ್ಲಿಯ ಸ್ವಲ್ಪಾವಕಾಶದಲ್ಲಿ ಸಾಧ್ಯ.

ಚಿಕ್ಕದೇವರಾಜ ಒಡೆಯರವರ ಕಾಲಾನಂತರ ಪಟ್ಟಕ್ಕೆ ಬಂದವರು ಸಮರ್ಥರಾಗಿಲ್ಲದಿದ್ದ ಕಾರಣ, ಸಂಸ್ಥಾನದ ಆಡಳಿತ ಸೂತ್ರಗಳು ದಳವಾಯಿಗಳ ಕೈಸೇರುತ್ತ ಬಂದು, ಕೊನೆಗೆ ಹದಿನೇಳನೆಯ ಶತಮಾನದಲ್ಲಿ ಹೈದರಾಲಿಯವರ ಕೈಸೇರಿದುವು. ಅವರು ಮಹಾರಾಜರವರ ಸೇವಕ ರಾಗಿ ತಾವು ರಾಜ್ಯಾಡಳಿತವನ್ನು ನಿರ್ವಹಿಸುತ್ತಿದ್ದುದಾಗಿ ಹೇಳುತ್ತ ಅತುಳ ಪರಾಕ್ರಮದಿಂದಲೂ ಅಸಾಧಾರಣ ಚಾತುರ್ಯದಿಂದಲೂ

ರಾಜ್ಯವನ್ನು ವಿಸ್ತರಿಸಿ, "ಈಸ್ಟ್ ಇಂಡಿಯಾ ಕಂಪೆನಿ"ಯ ಕೈಕೆಳಗೆ ಕೆಲಸ ಮಾಡುತ್ತಿದ್ದ ಮದರಾಸು ಗವರ್ನರವರೇ ಮುಂತಾದವರು ಕೂಡ ಆಗಾಗ ಭೀತಿಯಿಂದ ತಲ್ಲಣಿಸುವಂತೆ ದಿಗ್ವಿಜಯಮಾಡತೊಡಗಿದರು. ಆತನ ದೂರದೃಷ್ಟಿಯಿಂದಲೂ ಪೂರ್ಣಯ್ಯನವರೇ ಮುಂತಾದವರ ವಿವೇಕ ವಿಚಕ್ಷಣೆಗಳಿಂದಲೂ ಸಂಸ್ಥಾನವು ದಿನದಿನವೂ ಅಭಿವೃದ್ಧಿಯನ್ನೈದಿತು. ಆತನ ಕಾಲಾನಂತರ ರಾಜ್ಯಾಡಳಿತವನ್ನು ವಹಿಸಿದ ಟಿಪ್ಪೂಸುಲ್ತಾನರಿಗೆ ತಂದೆಯ ದೂರದೃಷ್ಟಿಯಾಗಲಿ, ಅನ್ಯಮತ ಸಹಿಷ್ಣುತೆಯಾಗಲಿ, ವಿವೇಕ ವಾಗಲಿ ಇಲ್ಲದೆ ಹೋದುವು. ಯುದ್ಧೋದ್ಯೋಗದಿಂದ ರಾಷ್ಟ್ರವೇನೊ ಅತ್ಯಂತ ವಿಸ್ತರವಾದರೂ ಪ್ರಬಲರಾದ ಇಂಗ್ಲಿಷರೊಡನೆ ವಿರೋಧವು ಸಂಘಟಿಸಿತು. "ಟಿಪ್ಪೂಸುಲ್ತಾನ್" ಎಂಬ ಹೆಸರು ಇಸ್ಲಾಂ ಮತದ ಸಾಧು ಮಹಾಶಯನೊಬ್ಬನ ನಾಮಾಂಕಿತದಮೇಲೆ ಆತನಿಗಿಟ್ಟಿದ್ದ ಹುಟ್ಟು ಹೆಸರಾಗಿದ್ದ ಕಾರಣ, ಆತನು "ಸುಲ್ತಾನ್" ಎಂದು ಸಾರಿಸಿ ತಾವೇ ರಾಜರೆಂದು ಉದ್ಘೋಷಿಸಿದರೆಂಬ ಆಪಾದನೆಯು ಸತ್ಯವಲ್ಲ. ಆದರೂ ಮೈಸೂರು ಸಂಸ್ಥಾನದ ರಾಜಮನೆತನದವರಿಗೆ ವಿಧವಿಧವಾಗಿ ಕಿರುಕುಳಗಳು ಹೆಚ್ಚಿ, ಅವರಿಗೆ ಆತನಿಂದುಂಟಾದ ಬಾಧೆಯು ಸಹಿಸಲಶಕ್ಯ ವಾಯಿತು. ಆತನು ತಾವೇ ರಾಜರೆಂಬ ಅರ್ಥಕ್ಕೆ "ಸುಲ್ತಾನ್" ಎಂಬ ನಾಮಧೇಯವನ್ನು ಸ್ವೀಕರಿಸದಿದ್ದರೂ, ತಾವೇ ಮಹಾರಾಜ ರಾಗಿದ್ದರೆ ಹೇಗೋ ಹಾಗೆ ಸರ್ವಾಧಿಕಾರಗಳನ್ನೂ ಚಲಾಯಿಸಿ ರಾಜ್ಯ ಭಾರಮಾಡಲಾರಂಭಿಸಿದುದು ಸುಳ್ಳಲ್ಲ. ಟಿಪ್ಪೂಸುಲ್ತಾನರು ತಮ್ಮ ಅರಮನೆಯ ಎದುರಿಗೇ ಶ್ರೀರಂಗಪಟ್ಟಣದಲ್ಲಿ ಶ್ರೀರಂಗನಾಥಸ್ವಾಮಿ ಯವರ ದೇವಾಲಯವನ್ನು ಉಳಿಸಿದ್ದುದೂ, ನಾನಾ ದೇವಾಲಯಗಳಿಗೆ ತಮ್ಮ ವಿಳಾಸವನ್ನು ಕೆತ್ತಿಸಿದ ತೀರ್ಥದ ಬಟ್ಟಲುಗಳೇ ಮುಂತಾದು ವುಗಳನ್ನು ಸಮರ್ಪಿಸಿದುದೂ, ತಮಗೆ ಶುಭವನ್ನು ಕೋರಿ ಶ್ರೀ ಶಾರದಾ ಚಂದ್ರಮೌಳೀಶ್ವರರಿಗೆ ಸೇವಾರ್ಥವನ್ನು ನಡೆಯಿಸಬೇಕೆಂದು ವಿಜ್ಞಾಪಿಸಿ ಶ್ರೀ ಶೃಂಗಗಿರಿ ಮಠದ ಶ್ರೀ ಶ್ರೀಗಳವರಿಗೆ ಪತ್ರಗಳನ್ನು ಬರೆದಿದ್ದುದೂ ಸಹ, ಅವರಿಗೆ ಹಿಂದೂ ಮತದಲ್ಲಿ ಉತ್ಕಟ ದ್ವೇಷವಿದ್ದಿತೆಂಬ ಆಪಾದನೆಗೆ ಅಷ್ಟೇನೂ ಪ್ರಬಲವಾದ ಆಧಾರವಿಲ್ಲವೆಂಬುದನ್ನು ವ್ಯಕ್ತಗೊಳಿಸುವುದು ನಿಜ. ಆದರೂ ಅವರು ಅನೇಕರನ್ನು ಬಲಾತ್ಕಾರವಾಗಿ ಮುಸಲ್ಮಾನ ಮತಕ್ಕೆ ಸೇರಿಸಿಕೊಂಡುದರ ದೆಸೆಯಿಂದಲೂ ಸಹ, ಅವರಲ್ಲಿ ಪ್ರಜೆಗಳ ಅಭಿಮಾನವು ಕ್ಷೀಣದೆಸೆಗೆ ಬರಲು ಕಾರಣವಾಯಿತೆಂಬುದು ಸುಳ್ಳಲ್ಲ.

ಟಿಪ್ಪೂಸುಲ್ತಾನರ ಹಿಂಸೆಯಿಂದ ಪಾರಾಗಿ ರಾಜ್ಯವನ್ನು ಹಿಂದಕ್ಕೆ ಪಡೆಯುವುದಕ್ಕಾಗಿ ಮಹಾರಾಣಿ ಲಕ್ಷ್ಮಮ್ಮಣ್ಣಿಯವರು ತಮ್ಮ ಪತಿಯಾದ ಇಮ್ಮಡಿ ಕೃಷ್ಣರಾಜ ಒಡೆಯರವರ ಮರಣಾನಂತರ ನಡೆಯಿಸಿದ ಅಸಮ ಸಾಹಸವು ಚಿರಸ್ಮರಣೀಯವಾಗಿ ಮೈಸೂರು ಸಂಸ್ಥಾನದ ಇತಿಹಾಸವನ್ನು ಬೆಳಗುತ್ತದೆ. ಅವರ ವಿದ್ಯಾ ವಿವೇಕಗಳೂ ಲೋಕಾನುಭವವೂ ಆಗಿನ ಜನ ಜೀವನದಲ್ಲಿ ಪ್ರಮುಖರೆನಿಸಿದ್ದ ಮೇಧಾವಿಗಳನ್ನೆಲ್ಲ ವಿಸ್ಮಯಗೊಳಿಸುತ್ತಿದ್ದುವು. ಅವರ ಸ್ಥಿರಸಂಕಲ್ಪ, ಸಾಹಸ ಬುದ್ಧಿಗಳೆದುರಿಗೆ ವಿಘ್ನಗಳೆಲ್ಲ ಬಿಸಿಲಿನೆದುರಿನ ಮಂಜಿನಂತೆ ಮಾಯವಾಗುತ್ತಿದ್ದುವು. ತಿರುಮಲ ರಾಯರು ಮತ್ತು ನಾರಾಯಣರಾಯರೆಂಬೀರ್ವರು ಸಹೋದರರಿಗೆ ರಾಯಭಾರವನ್ನು ವಹಿಸಿ ಅವರ ಮೂಲಕ ಮದರಾಸು ಗವರ್ನರವರ ಸಖ್ಯವನ್ನು ಪಡೆದು, ಇಂಗ್ಲಿಷರೊಡನೆ—ಟಿಪ್ಪೂಸುಲ್ತಾನರಿಗೆ ಕೂಡ ಗೋಚರವಾಗದಷ್ಟು ಗೋಪ್ಯವಾಗಿ—ಒಪ್ಪಂದವನ್ನು ಮಾಡಿಕೊಂಡು, ಕೈಬಿಟ್ಟುಹೋಗಿದ್ದ ರಾಜ್ಯವು ಮತ್ತೆ ರಾಜಮನೆತನಕ್ಕೆ ಬರುವಂತೆ ವಿವೇಕ ವಿಚಕ್ಷಣೆಗಳಿಂದ ಏರ್ಪಾಡುಮಾಡಿ ಪರಿಣಾಮದಲ್ಲಿ ಕಾರ್ಯಸಿದ್ಧಿಯನ್ನು ಪಡೆದ ಮಹಾರಾಣಿ ಲಕ್ಷ್ಮಮ್ಮಣ್ಣಿಯವರ ಸಾಹಸದಿಂದ ಶ್ರೀ ಮುಮ್ಮಡಿ ಕೃಷ್ಣರಾಜ ಒಡೆಯರವರು ರಾಜ್ಯಲಕ್ಷ್ಮಿಯ ಕೃಪಾಕಟಾಕ್ಷಕ್ಕೆ ಪಾತ್ರರಾದರು; ಆಗ್ಗೆ ಅವರಿಗೆ ಐದು ವರ್ಷ ವಯಸ್ಸು. ಇಂಗ್ಲಿಷರು ೧೭೯೯ನೆಯ ಇಸವಿಯಲ್ಲಿ ಶ್ರೀರಂಗಪಟ್ಟಣವನ್ನು ಗೆದ್ದು ಸ್ವಾಧೀನಪಡಿಸಿಕೊಂಡು ಕದನದಲ್ಲಿ ಮೃತರಾಗಿದ್ದ ಟಿಪ್ಪೂಸುಲ್ತಾನರಿಗೆ ಅವರ ಮಾತಾಪಿತೃಗಳ ಸಮಾಧಿಗಳ ಬಳಿಯಲ್ಲಿ ಸಮಾಧಿ ಮಾಡಿಸಿ ಪೂರ್ವ ಪಶ್ಚಿಮಕ್ಕೆ ತಿರುಪತಿ ಬೆಟ್ಟದಿಂದ ಪಶ್ಚಿಮಘಟ್ಟಗಳವರೆಗೂ, ದಕ್ಷಿಣೋತ್ತರಕ್ಕೆ ಪಾಲಘಾಟಿನಿಂದ ಆದವಾನಿಯವರೆಗೂ ವ್ಯಾಪಿಸಿದ್ದ ಸುವಿಸ್ತಾರವಾದ ರಾಜ್ಯವನ್ನು ನಾಲ್ಕು ಭಾಗಗಳಾಗಿ ವಿಂಗಡಿಸಿ ಅವುಗಳಲ್ಲಿ ಒಂದು ಭಾಗವನ್ನು ತಾವು ತೆಗೆದುಕೊಂಡು ಯುದ್ಧದಲ್ಲಿ ತಮ್ಮ ಪಕ್ಷವನ್ನು ವಹಿಸಿದ್ದ ಮರಾಟೆಯವರಿಗೆ ಒಂದು ಭಾಗವನ್ನೂ ಮತ್ತು ನೈಜಾಮರವರಿಗೆ ಒಂದು ಭಾಗವನ್ನೂ ಕೊಟ್ಟರು. ಉಳಿದ ಭಾಗವೇ ಇಂಗ್ಲಿಷರು ಶ್ರೀ ಮುಮ್ಮಡಿ ಕೃಷ್ಣರಾಜ ಒಡೆಯರವರಿಗೆ ವಹಿಸಿದ ನಮ್ಮ ಮೈಸೂರು ಸಂಸ್ಥಾನ. ಟಿಪ್ಪೂಸುಲ್ತಾನರ ಮಕ್ಕಳು ಮಾಸಾಶನವನ್ನು ಪಡೆದು ವೆಲ್ಲೂರಿಗೆ ಹೋಗಿ ವಾಸಮಾಡಬೇಕೆಂದು ಗೊತ್ತಾಯಿತು ಅಲ್ಲದೆ ಮೈಸೂರು

**ಮಹಾರಾಣಿ ಲಕ್ಷ್ಮಮ್ಮಣ್ಣಿಯವರ ಸಾಹಸ**

ಸಂಸ್ಥಾನದಿಂದ ವರ್ಷಕ್ಕೆ ೨೪ ಲಕ್ಷ ರೂಪಾಯಿಗಳ ಪೊಗದಿಯು ಇಂಗ್ಲಿಷರಿಗೆ ಸಲ್ಲಬೇಕೆಂದೂ, ಅದರ ಜೊತೆಗೆ ಇಂಗ್ಲಿಷರಿಗೆ ಯುದ್ಧವು ಒದಗಿದಾಗಲೆಲ್ಲ ಮಹಾರಾಜರು ಅವರಿಗೆ ಸೈನ್ಯವನ್ನೊದಗಿಸಿ ಸಹಾಯ ಮಾಡಬೇಕೆಂದೂ ಗೊತ್ತಾಯಿತು. ಹೈದರಾಲಿಯವರು "ನಾನು ರಾಜ್ಯವನ್ನು ಕಟ್ಟಲು ಹುಟ್ಟಿದವನು. ನನ್ನ ಮಗ ಟಿಪ್ಪೂಸುಲ್ತಾನನು ರಾಜ್ಯವನ್ನು ಕಳೆದುಕೊಳ್ಳಲು ಹುಟ್ಟಿದ್ದಾನೆ" ಎಂದು ಹೇಳುತ್ತಿದ್ದರಂತೆ. ಅವರ ಭವಿಷ್ಯವಾಣಿಯು ದಿಟವಾಯಿತು. ಮೈಸೂರು ರಾಜಮನೆತನಕ್ಕೆ ರಾಜ್ಯವು ಹಿಂದಕ್ಕೆ ಲಭಿಸಿತು. ಶ್ರೀ ಮುಮ್ಮಡಿ ಕೃಷ್ಣರಾಜ ಒಡೆಯರವರು ಪ್ರಾಪ್ತವಯಸ್ಕರಾಗುವವರೆಗೂ ಪೂರ್ಣಯ್ಯನವರು ದಿವಾನರಾಗಿದ್ದು ರಾಜ್ಯಾಡಳಿತವನ್ನು ನೋಡಿಕೊಳ್ಳಬೇಕೆಂದು ವಿಧಾಯಕವಾಯಿತು.

**ಪೂರ್ಣಯ್ಯನವರು**

ದಿವಾನ್ ಪೂರ್ಣಯ್ಯನವರು, ಹೈದರಾಲಿಯವರಿಗೆ ಸಾಮಾನುಗಳನ್ನೊದಗಿಸಿ ಹಣವನ್ನು ಪಡೆಯುತ್ತಿದ್ದ ವರ್ತಕನೊಬ್ಬನ ಬಳಿಯಲ್ಲಿ ಮುತ್ಸದ್ದಿಯಾಗಿ ಕೆಲಸಕ್ಕೆ ಸೇರಿದ್ದು ಕಾಲಕ್ರಮದಲ್ಲಿ ಹೈದರಾಲಿಯವರ ಸೇವಾವಕಾಶವನ್ನು ಕಲ್ಪಿಸಿಕೊಂಡು ತಮ್ಮ ಬುದ್ಧಿ ಬಲದಿಂದಲೂ ಕಾರ್ಯದಕ್ಷತೆಯಿಂದಲೂ ಅವರ ಬಲ ಭುಜವೋ ಎನ್ನಿಸಿಕೊಳ್ಳುವ ಸ್ಥಿತಿಗೆ ಬಂದವರು. ಅವರ ವಿವೇಕ ವಿಚಕ್ಷಣೆಗಳಿಗೆ ಇಲ್ಲಿ ಮೂರು ನಿದರ್ಶನಗಳನ್ನು ಸೂಚಿಸಬಹುದಾಗಿದೆ. ಒಂದು ದಿನ ಕಾವೇರೀ ನದಿಯಲ್ಲಿ ದೊಡ್ಡದೊಂದು ಮರದ ದಿಮ್ಮಿಯು ತೇಲಿಹೋಗುತ್ತಿದ್ದುದನ್ನು ಕಂಡು ಹೈದರಾಲಿಯವರು ತಮ್ಮ ಸುತ್ತಲೂ ಇದ್ದ ದೊಡ್ಡದೊಡ್ಡ ಅಧಿಕಾರಿಗಳನ್ನು ಕುರಿತು, "ಒಂದು ಸಣ್ಣ ಕಬ್ಬಿಣದ ಗುಂಡನ್ನು ನೀರಿನಲ್ಲಿ ಹಾಕಿದರೂ ಮುಳುಗಿಹೋಗುತ್ತದೆ. ಆದರೆ ಅತ್ಯಂತ ಭಾರವಾದ ಇಷ್ಟು ದೊಡ್ಡ ಮರದ ದಿಮ್ಮಿಯೇ ನೀರಿನ ಮೇಲೆ ತೇಲಿಹೋಗುತ್ತಿದೆ. ಇದಕ್ಕೇನು ಕಾರಣ?" ಎಂದು ಕೇಳಿದರಂತೆ. ಅವರಲ್ಲಾರೂ ಅದಕ್ಕೆ ಉತ್ತರ ಹೇಳದಿರಲು, ಸಣ್ಣ ಅಧಿಕಾರದಲ್ಲಿದ್ದ ಪೂರ್ಣಯ್ಯನವರು, "ಖಾವಿಂದ್, ನೀರಿನ ಸಹಾಯದಿಂದಲೇ ಮರವು ಬೆಳೆದಿದೆ. ತಾನೇ ಬೆಳೆಯಿಸಿ ರಕ್ಷಿಸಿದ ಮರಕ್ಕೆ ವಿಪತ್ತು ಬಂದಿರುವ ಕಾರಣ, ನೀರು ಅದನ್ನು ಮುಳುಗಿಸಲಾರದೆ ತೇಲಿಸಿಕೊಂಡು ಪ್ರೀತಿಯಿಂದ ತನ್ನೊಡನೆ ಕರೆದುಕೊಂಡುಹೋಗುತ್ತಿದೆ" ಎಂದು ಹೇಳಿ ಹೈದರಾಲಿಯವರ ಪ್ರೀತಿಗೆ ಪಾತ್ರರಾದರಂತೆ. ಆರ್ಕಿಮಿಡೀಸ್ ನಿಯಮ ಮುಂತಾದ

ವೈಜ್ಞಾನಿಕ ನಿಯಮಗಳನ್ನರಿತವರಿಗೆ ಆ ಉತ್ತರವನ್ನು ಕೇಳಿ ನಗು ಬರ ಬಹುದಾದರೂ, ಪೂರ್ಣಯ್ಯನವರು ಎಷ್ಟು ವಿವೇಕದಿಂದ ಭಾವಗರ್ಭಿತ ವಾದ ಉತ್ತರವನ್ನು ಹೇಳಿದರೆಂಬುದು ಮಾತ್ರವೇ ಈ ಸಂದರ್ಭದಲ್ಲಿ ನಾವು ಗಮನಿಸಬೇಕಾದ ಅಂಶ. ಅವರು ಆ ಬಳಿಕ ತಮ್ಮ ಬುದ್ಧಿಬಲ ದಿಂದ ಭಾರಿ ಭಾರಿ ಅಧಿಕಾರಗಳಿಗೇರಿದರು. ಒಂದು ಸಲ ಹೈದರಾಲಿ ಯವರು ಚಾಡಿಯ ಮಾತುಗಳನ್ನು ನಿಜವೆಂದು ನಂಬಿದರು. ಅದರ ಪರಿಣಾಮವಾಗಿ ಒಬ್ಬನಿಗೆ ಅನ್ಯಾಯವಾಗುವಂತಿದ್ದಾಗ, ಪೂರ್ಣಯ್ಯ ನವರು ಅದನ್ನು ತಪ್ಪಿಸುವ ಸಾಹಸಕ್ಕೆ ತೊಡಗಿ ಹೈದರಾಲಿಯವರನ್ನು ಕುರಿತು ಸುಳ್ಳಾವುದು ನಿಜವಾವುದೆಂಬ ಅಂತರವನ್ನು ತಿಳಿದುಕೊಂಡು ಕೆಲಸಮಾಡ ಬೇಕಾದುದೇ ಯುಕ್ತವೆಂದು ಮುಂತಾಗಿ ತಿಳಿಸಿದರಂತೆ. ಹೈದರಾಲಿಯವರು ಅವರ ವಾದವನ್ನು ಮನಸ್ಸಿನಲ್ಲಿ ಮೆಚ್ಚಿ ತಮ್ಮ ಅಭಿಪ್ರಾಯವನ್ನು ಮಾರ್ಪಡಿಸಿಕೊಂಡರಾದರೂ, ಅಪಹಾಸ್ಯಮಾಡಿದಂತೆ ನಟಿಸುತ್ತ, "ಓಹೋ! ಹಾಗೇನು? ಹಾಗಾದರೆ ಸುಳ್ಳಿಗೂ ನಿಜಕ್ಕೂ ಅಂತರವೆಷ್ಟು? ಸರಿಯಾಗಿ ಹೇಳುತ್ತೀರಾ?" ಎಂದು ಕೇಳಿದರು. ಪೂರ್ಣಯ್ಯನವರು ಅತ್ಯಂತ ಧೈರ್ಯದಿಂದಲೂ ಸಮಯಸ್ಫೂರ್ತಿ ಯಿಂದಲೂ, "ಹೇಳುತ್ತೇನೆ, ಖಾವಿಂದ್. ಸುಳ್ಳಿಗೂ ನಿಜಕ್ಕೂ ಸರಿಯಾಗಿ ನಾಲ್ಕೂವರೆ ಬೆರಳುಗಳ ಅಂತರ ಮಾತ್ರವೇ. ಕಿವಿಗಳಿಂದ ಕೇಳಿದ ಮಾತು ಸುಳ್ಳಾಗಿರಬಹುದು. ಕಣ್ಣಿನಿಂದ ನೋಡಿದಮೇಲೆ ನಿಶ್ಚಯಿಸಿದುದೆಲ್ಲಾ ನಿಜ. ಕಿವಿಯಿಂದ ಕಣ್ಣಿನವರೆಗೆ ಅವರವರ ಕೈಬೆರಳುಗಳ ಅಳತೆಯಲ್ಲಿ ಸರಿಯಾಗಿ ನಾಲ್ಕೂವರೆ ಬೆರಳುಗಳಷ್ಟೇ ಅಂತರ" ಎಂದು ಉತ್ತರ ಹೇಳಿದ ರಂತೆ; ಆ ಮಾತುಗಳ ಇಂಗಿತವನ್ನರಿತು ಹೈದರಾಲಿಯವರು ತಾವು ಶಿಕ್ಷಿಸ ಬೇಕೆಂದಿದ್ದ ಮನುಷ್ಯನು ನಿರಪರಾಧಿಯಾಗಿದ್ದುದನ್ನು ನಿರ್ಧರಿಸಿ ಹರ್ಷಿಸಿದರಂತೆ. ಹೈದರಾಲಿಯವರು ಯುದ್ಧಕ್ಕಾಗಿ ಶ್ರೀರಂಗಪಟ್ಟಣದಿಂದ ದಕ್ಷಿಣ ಆರ್ಕಾಟಿಗೆ ಸೇನಾ ಸಮೇತರಾಗಿ ಹೋಗಿ ಹಿಂತಿರುಗುತ್ತಿದ್ದ ಕಾಲದಲ್ಲಿ ತಮ್ಮ ಶಿಬಿರದಲ್ಲಿ ಬೆನ್ನುಫಣೆಯಿಂದ ಮೃತರಾದ ಅಂಶವನ್ನೇ ರಹಸ್ಯವಾಗಿಟ್ಟು, ಅವರ ಶವವನ್ನು ಗೋಪ್ಯವಾಗಿ ಶ್ರೀರಂಗಪಟ್ಟಣಕ್ಕೆ ಕಳುಹಿಸಿ ಐನೂರು ಮೈಲಿಗಳಿಗಿಂತ ಹೆಚ್ಚಿನ ದೂರದಲ್ಲಿದ್ದ ಟಿಪ್ಪೂ ಸುಲ್ತಾನರಿಗೆ ಮರಣ ವಾರ್ತೆಯನ್ನು ಕಳುಹಿಸಿ ಹೈದರಾಲಿಯವರು ಜೀವ ದಿಂದಿದ್ದು ಆಜ್ಞೆಗಳನ್ನು ದಯಪಾಲಿಸುತ್ತಿದ್ದರೆಂದೇ ತೋರುವಂತೆ ನಟನೆಯನ್ನು ಹೂಡಿ ದಂಗೆಯ ಮತ್ತು ಅನಾಯಕತೆಯ ಸಂಭವ ವನ್ನು ತಪ್ಪಿಸಿದ ಪೂರ್ಣಯ್ಯನವರ ರಾಜನೀತಿ ಚಾತುರ್ಯವನ್ನೂ

ಸ್ವಾಮಿಸಿಸ್ವೆಯುನ್ನೂ ಶ್ರೀಮಾನ್ ಜಿ. ಡಿ. ಬಿ. ಗ್ರಿಬ್ಲ್ ಮುಂತಾದ ಮಹಾಶಯರುಗಳೆಲ್ಲ ಶ್ಲಾಘಿಸಿದ್ದಾರೆ.

ಪೂರ್ಣಯ್ಯನವರು ಶ್ರೀ ಮುಮ್ಮಡಿ ಕೃಷ್ಣರಾಜ ಒಡೆಯರವರ ದಿವಾನರಾಗಿ ನೇಮಕವಾದ ಕೆಲವು ವರ್ಷಗಳಲ್ಲಿ ರಾಜ್ಯವನ್ನು ಅಭಿವೃದ್ಧಿ ಸ್ಥಿತಿಗೆ ತಂದ ಬಗೆಯನ್ನೂ, ಆರಂಭದಲ್ಲಿ (ಎಂದರೆ, ೧೮೦೦ನೆಯ ಇಸವಿಯಲ್ಲಿ) ಬರಿದಾಗಿದ್ದ ಭಂಡಾರದಲ್ಲಿ ವಾರ್ಷಿಕ ವೆಚ್ಚವು ಕಳೆದು ವಿಶೇಷವಾಗಿ ಧನವು ಶೇಖರವಾಗುವಂತೆ ಮಾಡಿದ ವಿಚಕ್ಷಣೆಯನ್ನೂ ಜನರಲ್ ವೆಲ್ಲಿಸ್ಲಿಯವರೇ ಮುಂತಾದ ಮೇಧಾವಿಗಳೆಲ್ಲರೂ ಕೊಂಡಾಡಿ ಅಭಿನಂದಿಸಿದರು. ಪೂರ್ಣಯ್ಯನವರು ಒಟ್ಟು ಹನ್ನೊಂದು ವರ್ಷಗಳ ಕಾಲ ದಿವಾನ್ ಪದವಿಯಲ್ಲಿದ್ದರು. ಆ ಅವಧಿಯಲ್ಲಿ ತೆರಿಗೆಗಳಾವುವನ್ನೂ ಹೆಚ್ಚಿನದೆಯೇ ವಾರ್ಷಿಕ ವರಮಾನವು ಮೊದಲಿದ್ದುದರ ಒಂದೂವರೆಯಷ್ಟು ಹೆಚ್ಚುವಂತೆ ಸಂಸ್ಥಾನವನ್ನು ಅಭಿವೃದ್ಧಿಸ್ಥಿತಿಗೆ ತಂದರು. ಅವರು, ಕೆರೆಗಳ ಮತ್ತು ನಾಲೆಗಳ ಕೆಲಸಗಳು, ಬಾವಿಗಳು, ಸೇತುವೆಗಳು, ಛತ್ರಗಳು, ಕಚೇರಿ ಕಟ್ಟಡಗಳು, ಸಂಚಾರ ಮಾರ್ಗಗಳು, ಮುಂತಾದುವುಗಳಿಗಾಗಿ ಎಪ್ಪತ್ತೇಳು ಲಕ್ಷದ ಇಪ್ಪತ್ತೊಂಬತ್ತು ಸಾವಿರದ ಮುನ್ನೂರ ಹತ್ತು (೭೭,೨೯,೩೧೦) ರೂಪಾಯಿಗಳನ್ನು ವೆಚ್ಚಮಾಡಿದರು. ಅದೇ ಪ್ರಮಾಣದ ಸೇಕಡಾವಾರಿನಲ್ಲಿ ಆಗ್ಗೆ ಬ್ರಿಟಿಷ್ ಇಂಡಿಯಾದ ಹಲವು ಪ್ರಾಂತಗಳಲ್ಲಿ ಕೂಡ ಆ ಕೆಲಸಗಳಿಗಾಗಿ ಹಣವು ವೆಚ್ಚವಾಗುತ್ತಿರಲಿಲ್ಲ. ಆಗಿನ ಮಾತೂ ಹಾಗಿರಲಿ. ಮುಂದೆ ಅನೇಕ ವರ್ಷಗಳಾದ ಮೇಲೆ ಕೂಡ, ಸಂಚಾರ ಮಾರ್ಗಗಳನ್ನು ಹೆಚ್ಚಿಸಿ ಸೌಕರ್ಯವನ್ನೊದಗಿಸಬೇಕೆಂದು "ಈಸ್ಟ್ ಇಂಡಿಯಾ ಕಂಪೆನಿ"ಯ ಆಡಳಿತದಲ್ಲಿದ್ದ ಬ್ರಿಟಿಷ್ ಇಂಡಿಯಾ ಪ್ರಾಂತವೊಂದರಲ್ಲಿ ಸಲಹೆ ಬಂದಾಗ, "ಸಂಚಾರ ಮಾರ್ಗಗಳಿಗಾಗಿ ಇಷ್ಟೊಂದು ಹಣವನ್ನು ವೆಚ್ಚಮಾಡುವುದು ಆವಶ್ಯಕವೆಂದು ಗವರ್ನರವರು ಭಾವಿಸಿಲ್ಲ. ಈ ಸಂಚಾರ ಮಾರ್ಗಗಳನ್ನುಪಯೋಗಮಾಡಿಕೊಳ್ಳುವಷ್ಟು ಬಂಡಿಗಳೇ ಈಗಿಲ್ಲ" ಎಂದು ಉತ್ತರ ಹೋಯಿತು. ಹೀಗಿರುವಲ್ಲಿ, ಅದಕ್ಕಿಂತ ಎಷ್ಟೋ ಹಿಂದೆಯೇ ಪೂರ್ಣಯ್ಯನವರು ಪ್ರದರ್ಶಿಸಿದ ಆಡಳಿತ ವಿಚಕ್ಷಣೆಗಾಗಿ ಅಂದಿನ ರಾಜನೀತಿಕೋವಿದರೆಲ್ಲರೂ ಶ್ಲಾಘನೆಗಳನ್ನು ಸೂಚಿಸಿದುದರಲ್ಲಿ ಆಶ್ಚರ್ಯವಿಲ್ಲ. ಪೂರ್ಣಯ್ಯನವರನ್ನು ಪಡೆದ ಭಾಗ್ಯಕ್ಕಾಗಿ ಭರತಖಂಡವೇ ಹೆಮ್ಮೆಪಡುವುದು ಯುಕ್ತವೆಂದು* ರಾಜನೀತಿಜ್ಞರು ಅಭಿಪ್ರಾಯಪಟ್ಟುದರಲ್ಲಿ ಆಶ್ಚರ್ಯವೇನಿದೆಯುದು?

* ".. This eminent statesman of whom India may well be proud."

ದಿವಾನ್ ಪೂರ್ಣಯ್ಯನವರ ಆಡಳಿತದಲ್ಲಿ ಮೈಸೂರು ಸಂಸ್ಥಾನವು ಆ ರೀತಿ ಮುನ್ನಡೆಯಿಂದ ಮುಂದುವರಿಯುವಂತಾದುದಕ್ಕೆ ಮಹಾರಾಣಿ ಲಕ್ಷ್ಮಮ್ಮಣ್ಣಿಯವರ ವಿವೇಕಮಯವಾದ ಪ್ರೋತ್ಸಾಹವೂ ಕಾರಣ ವೆಂಬುದನ್ನು ನಾವು ನೆನಪಿನಲ್ಲಿಡಬೇಕು. ಅಷ್ಟು ಹಿಂದಿನ ಕಾಲದಲ್ಲಿದ್ದ ಮಹಾರಾಣಿ ಲಕ್ಷ್ಮಮ್ಮಣ್ಣಿಯವರ ದೃಷ್ಟಿಯು ನಮ್ಮ ನಿರೀಕ್ಷೆಗೆ ಮೀರಿದಷ್ಟು ವಿಶಾಲವಾಗಿದ್ದಿತು: ೧೮೦೬ನೆಯ ಇಸವಿಯಲ್ಲಿ ದೇವೀ ಹಾಕುವುದು ಭರತಖಂಡದಲ್ಲಿ ಮೊಟ್ಟಮೊದಲು ಪ್ರಚಾರಕ್ಕೆ ಬಂದಾಗ್ಗೆ, ಮೈಸೂರು ಸಂಸ್ಥಾನದ ಪ್ರಜೆಗಳು ಸಿಡುಬುಹಾಕಿಸಿಕೊಳ್ಳಲು ಭರತ ಖಂಡದ ಇತರ ಭಾಗಗಳ ಪ್ರಜೆಗಳಂತೆ ಭಯಪಡದಿರಲೆಂಬ ಉದ್ದೇಶ ದಿಂದ ಅವರು ಮುಂದೆ ತಮ್ಮ ಸೊಸೆಯಾಗಿ ಸ್ವೀಕರಿಸಲು ಉದ್ದೇಶಿಸಿದ್ದ ಕುಮಾರಿಯವರಿಗೆ ಮೊಟ್ಟಮೊದಲು ದೇವೀ ಹಾಕಿಸಿದರು. ಘನವಾದ ಆ ಮೇಲ್ಪಂಕ್ತಿಯಿಂದ ಮೈಸೂರು ಸಂಸ್ಥಾನದಲ್ಲಿ ದೇವೀ ಹಾಕುವ ಕಾರ್ಯವು ಸುಸೂತ್ರವಾಗಿ ನಡೆಯಿತು. ಅಷ್ಟೇ ಅಲ್ಲ. ಒಟ್ಟು ಭರತ ಖಂಡಕ್ಕೇ ಅದು ಮೇಲ್ಪಂಕ್ತಿಯಾಗಿ ಪ್ರಖ್ಯಾತವಾಯಿತು. ಪೂರ್ಣಯ್ಯ ನವರಿಂದ ಆ ವಿಚಾರವನ್ನು ಕೇಳಿ, ಮದರಾಸು ಆಧಿಪತ್ಯದ ಗವರ್ನರವ ರಾಗಿದ್ದ ಲಾರ್ಡ್ ವಿಲಿಯಂ ಬೆಂಟಂಕರವರೂ, ಅವರ ಮಂತ್ರಾಲೋಚನಾ ಸಭೆಯವರೂ ಘನವಾದ ಆ ಮೇಲ್ಪಂಕ್ತಿಯನ್ನು ಭಾರತೀಯರೆಲ್ಲರೂ ಅನುಸರಿಸಿ ದೇವೀ ಹಾಕಿಸಿಕೊಳ್ಳುವುದರಿಂದ ಅಪಾಯವೇನೂ ಆಗಲಾರ ದೆಂದು ಧೈರ್ಯದಿಂದಿರಬಹುದೆಂದು ಪ್ರಕಟಿಸಿದರು. ಲಾರ್ಡ್ ವಿಲಿಯಂ ಬೆಂಟಂಕರವರು, "ಮಹತ್ತರವಾದ ಸುಧಾರಿತ ನಿಯಮಗಳಿಂದ ಆಡಳಿತ ನಡೆಯುತ್ತಿರುವ ಮೈಸೂರು ಸರ್ಕಾರದವರಂತಹ ಸುಸಂಸ್ಕೃತ ಸರ್ಕಾರ ದವರ ನಿದರ್ಶನದಿಂದ ಭರತಖಂಡದ ಪ್ರಜೆಗಳ ಮನಸ್ಸಿನ ಮೇಲೆ ಸತ್ಪರಿಣಾಮವಾಗದಿರದು" ಎಂದು ಅಭಿಪ್ರಾಯಪಟ್ಟರು. ೧೮೦೭ನೆಯ ಇಸವಿಯಲ್ಲಿ ಮದರಾಸು ಆಧಿಪತ್ಯದ ಗವರ್ನರವರಾಗಿದ್ದ ಕರ್ನಲ್ ಮಾಕಂರವರ ಸಲಹೆಯನ್ನು ತಮ್ಮ ಚಿತ್ತಕ್ಕೆ ತಂದುಕೊಂಡು ಶ್ರೀ ಮುಮ್ಮಡಿ ಕೃಷ್ಣರಾಜ ಒಡೆಯರವರು ೧೮೦೭ನೆಯ ಇಸವಿ ಡಿಸೆಂಬರು ೨೭ನೆಯ ತಾರೀಖಿನ ದಿನ ನಡೆದ ದರ್ಬಾರಿನಲ್ಲಿ ದಿವಾನ್ ಪೂರ್ಣಯ್ಯನವರಿಗೆ ಯಳಂದೂರು ತಾಲ್ಲೂಕನ್ನು ಜಹಗೀರಿಯಾಗಿ ದಯಪಾಲಿಸಿದರು. "ಈಸ್ಟ್ ಇಂಡಿಯಾ ಕಂಪೆನಿ"ಯವರ ಪರವಾಗಿ ಅವರಿಗೆ ಒಂದು ಆನೆಯೂ, ಒಂದು ಕುದುರೆಯೂ, ಖಿಲ್ಲತ್ತೂ ದೊರೆತುವು.

**ಶ್ರೀ ಮುಮ್ಮಡಿ ಕೃಷ್ಣರಾಜ ಒಡೆಯರವರ ರಾಜ್ಯಭಾರ**

೧೮೧೧ನೆಯ ಇಸವಿಯಲ್ಲಿ ಶ್ರೀ ಮುಮ್ಮಡಿ ಕೃಷ್ಣರಾಜ ಒಡೆಯರವರು ರಾಜ್ಯಭಾರಸೂತ್ರ ಸ್ವೀಕಾರಮಾಡಿದರು. ವೃದ್ಧರಾಗಿದ್ದ ಪೂರ್ಣಯ್ಯನವರು ಮುಂದೆ ಕೆಲಸಮಾಡುವ ಚೈತನ್ಯವಿಲ್ಲದೆ ಅದೇ ವರ್ಷದ ಡಿಸೆಂಬರು ತಿಂಗಳಿನಲ್ಲಿ ದಿವಾನ್ ಹುದ್ದೆಯಿಂದ ವಿಶ್ರಾಂತರಾದರು. ಅವರು ಆ ಬಳಿಕ ಮೂರು ತಿಂಗಳುಗಳಮೇಲೆ (೧೮೧೨ನೆಯ ಇಸವಿ ಮಾರ್ಚಿ ೨೭ನೆಯ ತಾರೀಖಿನ ರಾತ್ರಿ) ದಿವಂಗತರಾದರು. ಇಂಡಿಯಾ ಗವರ್ನರ್ ಜನರಲ್‌ರವರೂ, ಶ್ರೀ ಮುಮ್ಮಡಿ ಕೃಷ್ಣರಾಜ ಒಡೆಯರವರೂ ತಮ್ಮ ಸಂತಾಪವನ್ನು ಸೂಚಿಸಿದರು. ಆಶ್ರಿತಾಭಿಮಾನಿಗಳಾಗಿದ್ದ ಶ್ರೀಮುಮ್ಮಡಿ ಕೃಷ್ಣರಾಜ ಒಡೆಯರವರು ಪೂರ್ಣಯ್ಯನವರಿಗೆ ಪ್ರತಿ ತಿಂಗಳೂ ಸಲ್ಲುತ್ತಿದ್ದ ಸುಮಾರು ಸಾವಿರ ರೂಪಾಯಿಗಳ ವಿಶ್ರಾಂತಿ ವೇತನವು ಅವರ ಮಕ್ಕಳಿಗೆ ಸಲ್ಲಬೇಕೆಂದು ಅಪ್ಪಣೆಮಾಡಿ ತಮ್ಮ ಔದಾರ್ಯವನ್ನು ತೋರಿಸಿದರು.

ಪೂರ್ಣಯ್ಯನವರ ತರುವಾಯ ಬಾಲಾಜಿರಾಯರೂ, ಸವಾರ್ ಬಕ್ಷಿ ರಾಮರಾಯರೂ, ಬಾಬೂರಾಯರೂ, ಸಿದ್ದರಾಜ ಅರಸಿನವರೂ, ಇತರರೂ ದಿವಾನ್ ಹುದ್ದೆಯನ್ನಲಂಕರಿಸಿದವರಲ್ಲಿ ಕೆಲವರು. ಶ್ರೀ ಮುಮ್ಮಡಿ ಕೃಷ್ಣರಾಜ ಒಡೆಯರವರು ರಾಜ್ಯಭಾರಸೂತ್ರ ಸ್ವೀಕಾರ ಮಾಡಿದ ಬಳಿಕ ಕೆಲವು ವರ್ಷಗಳ ಕಾಲ ಸಂಸ್ಥಾನದಲ್ಲಿ ಶಾಂತಿಯು ನೆಲಸಿ ಪ್ರಜೆಗಳೆಲ್ಲರೂ ಸುಖ ಸಂತೋಷಗಳಿಂದಿರುವಂತೆ ವಿಚಕ್ಷಣೆಯಿಂದ ರಾಜ್ಯಭಾರವು ನಡೆಯಿತು. ೧೮೧೭ನೆಯ ಇಸವಿಯಲ್ಲಿ ನಡೆದ ಮರಾಟಿ ಯುದ್ಧದ ಕಾಲದಲ್ಲಿ ಇಂಗ್ಲಿಷರ ಸಹಾಯಕ್ಕಾಗಿ ಶ್ರೀ ಮುಮ್ಮಡಿ ಕೃಷ್ಣರಾಜ ಒಡೆಯರವರು ಕಳುಹಿಸಿದ ಸೈನ್ಯವು ಪರಾಕ್ರಮವನ್ನು ತೋರಿಸಿ ಗವರ್ನರ್ ಜನರಲ್‌ರವರ ಶ್ಲಾಘನೆಯನ್ನು ಗಳಿಸಿತು. ಶ್ರೀ ಮುಮ್ಮಡಿ ಕೃಷ್ಣರಾಜ ಒಡೆಯರವರು ಅನನ್ಯ ಸಾಧಾರಣವಾಗಿದ್ದ ತಮ್ಮ ಔದಾರ್ಯದ ಪರಿಣಾಮವಾಗಿ ಪ್ರಜೆಗಳ ಭಕ್ತಿವಿಶ್ವಾಸಗಳಿಗೆ ಪಾತ್ರರಾದರು; ವೈದ್ಯರು, ವಿದ್ವಾಂಸರು, ಶಿಲ್ಪಿಗಳು, ಕವಿಗಳು, ಕಲಾವಿದರು, ಸಂಗೀತಗಾರರು ಮುಂತಾದವರಿಗೆ ದಾನವೀರರಾಗಿ ಮಾನ್ಯಗಳನ್ನೂ ಸಂಭಾವನೆಗಳನ್ನೂ ಕೊಟ್ಟು ತಮ್ಮ ಯಶೋದುಂದುಭಿಯು ಮೊಳಗುವಂತೆ ಮಾಡಿಕೊಂಡರು. ದೇವಾಲಯಗಳನ್ನೂ ಅಗ್ರಹಾರಗಳನ್ನೂ ವಾಪೀಕೂಪ ತಟಕಾದಿಗಳನ್ನೂ ನಿರ್ಮಿಸಿ ತಮ್ಮ ಪ್ರಜಾವಾತ್ಸಲ್ಯವನ್ನು ತೋರಿಸಲು ಪೂರ್ಣಯ್ಯನವರ ಕಾಲದಲ್ಲಿ ವೆಚ್ಚವಾಗುತ್ತಿದ್ದುದಕ್ಕಿಂತಲೂ

ಹೆಚ್ಚಿನ ಪ್ರಮಾಣದಲ್ಲಿ ಹಣವನ್ನು ವೆಚ್ಚಮಾಡಲು ಪ್ರಾರಂಭಿಸಿದರು. ೧೮೧೦ನೆಯ ಇಸವಿಯಿಂದ ಮುಂದಿನ ಇಪ್ಪತ್ತು ವರ್ಷಗಳ ಅವಧಿಯಲ್ಲಿ, ಪ್ರತಿ ವರ್ಷವೂ ಜನೋಪಯುಕ್ತ ಕಾಮಗಾರಿಗಳಿಗಾಗಿ ವೆಚ್ಚವಾಗುತ್ತಿದ್ದ ಮೊತ್ತವೇ ಸುಮಾರು ನಲವತ್ತೆರಡೂವರೆಸಾವಿರ ವರಹಗಳಿಗಿಂತಲೂ ಅಧಿಕವಾಯಿತು.

೧೮೨೦ನೆಯ ಇಸವಿಯಿಂದಾಚೆಗೆ ಮಳೆ ಬೆಳೆಗಳು ಸರಿಯಾಗಿ ನಡೆಯದೆಹೋದಕಾರಣ, ಸಂಸ್ಥಾನದ ವಾರ್ಷಿಕ ವರಮಾನವು ಎಂಬತ್ತೇಳು ಲಕ್ಷ ರೂಪಾಯಿಗಳಿಂದ ಎಪ್ಪತ್ತಾರು

**ಕಾರ್ಮುಗಿಲು**

ಲಕ್ಷ ರೂಪಾಯಿಗಳಿಗೆ ತಗ್ಗಿತು. ೧೮೨೩ನೆಯ ಇಸವಿಯಲ್ಲಂತೂ, ಕ್ಷಾಮವೇ ಸಂಭವಿಸಿ ಆಯ ವ್ಯಯಗಳು ಸಮತೆ ತಪ್ಪಿದುವು. ಆಗ ಶ್ರೀ ಮುಮ್ಮಡಿ ಕೃಷ್ಣರಾಜ ಒಡೆಯರವರು ಪ್ರಜೆಗಳ ಕಷ್ಟಕಾರ್ಪಣ್ಯಗಳಿಗಾಗಿ ಮನನೊಂದು, ಮುಕ್ತ ಹಸ್ತದಿಂದ ಧನವ್ಯಯಮಾಡಿ ಲಕ್ಷೋಪಲಕ್ಷ ಮಂದಿಗಳ ಪ್ರಾಣವನ್ನುಳಿಸಿದರು. ಅದರ ಪರಿಣಾಮದಿಂದ ಅಪರಿಮಿತವಾಗಿ ಧನವ್ಯಯವಾಯಿತು. ಶ್ರೀ ಮುಮ್ಮಡಿ ಕೃಷ್ಣರಾಜ ಒಡೆಯರವರ ಆಜ್ಞೆಯ ಮೇರೆಗೆ ಬಕ್ಷಿ ನರಸಪ್ಪನವರೇ ಮುಂತಾದ ಅಧಿಕಾರಿಗಳು ಕ್ಷಾಮ ಪೀಡಿತರಿಗೆ ಸಹಾಯ ಮಾಡಿದ ವಿತರಣೆ ವಿಚಕ್ಷಣೆಗಳನ್ನು ಅಶೇಷ ಪ್ರಜಾಸಿವಹವೇ ಕೊಂಡಾಡಿತು. ಆದರೆ ವಾರ್ಷಿಕ ವರಮಾನವು ಆ ಮೊದಲೇ ಹನ್ನೊಂದು ಲಕ್ಷ ರೂಪಾಯಿಗಳಷ್ಟು ಕಡಮೆಯಾಗಿ ಎಪ್ಪತ್ತಾರು ಲಕ್ಷ ರೂಪಾಯಿಗಳಿಗೆ ಇಳಿದಿದ್ದುದರ ಜೊತೆಗೆ ವಾರ್ಷಿಕ ವೆಚ್ಚವು ತೊಂಬತ್ತು ಲಕ್ಷ ರೂಪಾಯಿಗಳಿಗೆ ಏರಿತು. ಅದರಮೇಲೂ ಆಗಾಗ ಇಂಗ್ಲಿಷರ ಸಹಾಯಕ್ಕಾಗಿ ಸೈನ್ಯವನ್ನು ಕೂಡಿಸಿ ಕಳುಹಿಸಬೇಕಾಗಿದ್ದುದರ ದೆಸೆಯಿಂದ ಹೆಚ್ಚು ವೆಚ್ಚವು ಸಂಘಟಿಸಿತು. ಮಾರಿಕಾ ಜಾಡ್ಯವು (ಕಾಲರಾ ರೋಗವು) ಬೇರೆ ತಲೆಹಾಕಿ ಪ್ರಜೆಗಳಲ್ಲಿ ಹಾಹಾಕಾರ ಉಂಟಾಗಿ ಅದರ ನಿವಾರಣೆಗಾಗಿಯೂ ಬಹಳ ಧನವು ವ್ಯಯವಾಯಿತು.

ಆಗಿನ ಕಾಲದಲ್ಲಿ ಭೂಕಂದಾಯವನ್ನು ಬರಮಾಡಿಕೊಳ್ಳುವುದಕ್ಕಾಗಿ "ಷರತ್ತು" ಶಿಸ್ತು ಆಚರಣೆಯಲ್ಲಿದ್ದಿತು. ಅದರ ಮೇರೆಗೆ ಪ್ರತಿ ವರ್ಷವೂ ಭೂಕಂದಾಯಕ್ಕಾಗಿ ಕ್ಲುಪ್ತವಾದೊಂದು ಮೊತ್ತವನ್ನು ಸುಬೇದಾರರುಗಳು ವ್ಯವಸಾಯಗಾರರಿಂದ ಬರಮಾಡಿಕೊಂಡು ಸರ್ಕಾರಕ್ಕೆ ಕಟ್ಟಬೇಕೆಂದೂ, ಹಣವು ಆ ಕ್ಲುಪ್ತ ಮೊತ್ತಕ್ಕೆ ಕಡಮೆಯಾದರೆ, ಹಾಗೆ ಕಡಮೆಯಾದ ಮೊಬಲಗನ್ನು ಅವರು ತಮ್ಮ ಕೈಯಿಂದ

ಕೊಡಬೇಕೆಂದೂ ಗೊತ್ತಾಗಿದ್ದಿತು. ಈ ಗುತ್ತಿಗೆಯ "ಷರತ್ತು" ಶಿಸ್ತು ಮೈಸೂರು ಸಂಸ್ಥಾನದಲ್ಲಿ ಮಾತ್ರವೇ ಅಲ್ಲದೆ, ಇಂಗ್ಲಿಷರ ಆಡಳಿತಕ್ಕೆ ಸೇರಿದ್ದ ಅನೇಕ ನೆರೆಹೊರೆಯ ಪ್ರಾಂತಗಳಲ್ಲಿ ಸಹ ಆಚರಣೆಯಲ್ಲಿದ್ದುದನ್ನೂ ಗಮನಿಸಬೇಕಾದುದು ಅವಶ್ಯಕ. ಹೀಗೆ ಗುತ್ತಿಗೆ ವಹಿಸಿಕೊಂಡ ಸುಬೇದಾರರುಗಳು ವ್ಯವಸಾಯಗಾರರಿಗೆ ಹಿಂಸೆಯಾಗದಂತೆ ಯುಕ್ತವಾದಷ್ಟು ಮೊಬಲಗನ್ನು ಯುಕ್ತ ರೀತಿಯಲ್ಲಿ ಬರಮಾಡಿಕೊಳ್ಳಬೇಕೆಂದು ಕರಾರು ಪತ್ರದಲ್ಲಿ ಬರೆದಿರುತ್ತಿದ್ದುದೂ ವಾಡಿಕೆ. ಸುಬೇದಾರರು ಭೂತದಯೆಯುಳ್ಳವರಾಗಿದ್ದರೆ ಗಿಡಕ್ಕೆ ನೋವಾಗದಂತೆ ಹೂಗಳನ್ನು ಬಿಡಿಸಿಕೊಂಡು ಸ್ವಾಮಿಕಾರ್ಯ ಸ್ವಕಾರ್ಯಗಳೆರಡನ್ನೂ ಮಾಡಿಕೊಳ್ಳುತ್ತಿದ್ದರು. ದುರಾಶಾಗ್ರಸ್ತರಾದ ಸುಬೇದಾರರುಗಳು ಗ್ರಾಮ ಗ್ರಾಮಗಳಲ್ಲಿಯೂ ಮಿತಿಮೀರಿದಷ್ಟು ಮೊಬಲಗು ಕೈಸೇರುವಂತೆ ತಮ್ಮ ಕೈಕೆಳಗೆ ಗುತ್ತಿಗೆದಾರರುಗಳನ್ನು ನೇಮಕಮಾಡಿಕೊಂಡು ವ್ಯವಸಾಯಗಾರರಿಗೆ ಕಿರುಕುಳವಾಗಲು ಅವಕಾಶವನ್ನುಂಟುಮಾಡಿ ತಮ್ಮ ಮನೆಗಳಿಗೆ ಹೊನ್ನಿನ ಹೊಳೆಯನ್ನು ಹರಿಸಿಕೊಳ್ಳುತ್ತಿದ್ದರು. ಅವರ ಕೈಕೆಳಗಿನ ಗುತ್ತಿಗೆದಾರರು ವ್ಯವಸಾಯಗಾರರಿಗೆ ಚಿತ್ರಹಿಂಸೆಯನ್ನು ವಿಧಿಸುತ್ತಿದ್ದರು. ತಲೆಯಮೇಲೆ ಕಲ್ಲು ಹೊರಿಸಿ ಬಿಸಿಲಿನಲ್ಲಿ ನಿಲ್ಲಿಸುವುದು, ಕೊರಡೆಯ ಪೆಟ್ಟುಗಳನ್ನು ಹಾಕಿಸುವುದು, ಸೆರೆಮನೆಗಳಲ್ಲಿಟ್ಟು ಹಿಂಸಿಸುವುದು, ಸ್ವತ್ತುಗಳನ್ನು ಹಿಡಿದು ವಿಕ್ರಯಿಸುವುದು ಮುಂತಾದ ರೀತಿಗಳಲ್ಲ ಅವರನ್ನು ಪೀಡಿಸಿ ಗುತ್ತಿಗೆದಾರರು ಅತ್ಯಧಿಕವಾದ ಮೊಬಲಗುಗಳನ್ನು ಬರಮಾಡಿಕೊಳ್ಳುತ್ತಿದ್ದರು. ವ್ಯವಸಾಯಗಾರರಿಂದ ಹಣಗಳ ಸುಲಿಗೆಯು ಪ್ರಾರಂಭವಾಗಿ ಶಿವಮೊಗ್ಗ ಜಿಲ್ಲೆಯ ನಗರ ಪ್ರಾಂತದಲ್ಲಿಯೂ ಇತರ ಪ್ರದೇಶಗಳಲ್ಲಿಯೂ ಜನರಿಗೆ ಬಹಳ ಹಿಂಸೆಯಾಯಿತು. ಮಿತಿಮೀರಿದ ಆ ಹಿಂಸೆಯನ್ನು ಸಹಿಸಲಾರದೆ ಜನರು ದಂಗೆಯೆದ್ದರು. ಇತಿಹಾಸ ವ್ಯಾಸಂಗ ಮಾಡಿಲ್ಲದ ಅನೇಕ ಮಂದಿಗಳು ಇಂದಿಗೂ ಹಿಂದಿನಿಂದ ಸಾಗಿಬಂದಿರುವ ಜನಶ್ರುತಿಯನ್ನೇ ನಿಜವೆಂದು ನಂಬಿಕೊಂಡು, ಅದಕ್ಕೆಲ್ಲ ಶ್ರೀ ಮುಮ್ಮಡಿ ಕೃಷ್ಣರಾಜ ಒಡೆಯರವರ ರಾಜ್ಯಭಾರವು ದಕ್ಷತೆಯಿಂದ ನಡೆಯದೆ ಹೋದುದೇ ಕಾರಣವೆಂಬ ತಪ್ಪುಭಾವನೆಯನ್ನಿಟ್ಟುಕೊಂಡಿದ್ದಾರೆ. ಅಧಿಕಾರಿಗಳ ಕ್ರೂರ ವರ್ತನೆಗೆ ಅವಕಾಶ ಕೊಟ್ಟ "ಷರತ್ತು" ಶಿಸ್ತು ಪೂರ್ಣಯ್ಯನವರ ಕಾಲಕ್ಕಿಂತ ಮುಂಚಿನಿಂದಲೂ ಆಚರಣೆಯಲ್ಲಿದ್ದಿತು. ನಗರ ಪ್ರಾಂತ ಮುಂತಾದ ಪ್ರದೇಶಗಳಲ್ಲಿ ದಂಗೆಗೆ ಆಸ್ಪದವಾದ ಕಾರಣಗಳಿಂದಲೇ ಅದೇ ಸಮಯದಲ್ಲಿ ಕನ್ನಡ ಜಿಲ್ಲೆ ಮುಂತಾದ ಬ್ರಿಟಿಷ್

ಇಂಡಿಯಾ ಪ್ರಾಂತಗಳಲ್ಲಿ ಕೂಡ ದಂಗೆಗಳು ನಡೆದುದನ್ನೂ ನಾವು ಗಮನಿಸಬೇಕು.

ದಂಗೆಯ ಜ್ವಾಲೆಯು ಕಾಡುಗಿಚ್ಚಿನಂತೆ ಪ್ರಜ್ವಲಿಸಿ ವ್ಯಾಪಿಸಿ ದುದಕ್ಕೆ ತರೀಕರೆ ಪಾಳೆಯಗಾರ ರಂಗಪ್ಪನಾಯಕನ ದ್ರೋಹ ಬುದ್ಧಿಯೂ, ಆತನ ಮಿತ್ರನಾಗಿದ್ದ ಹೈಗಮಲ್ಲನೆಂಬ ಕೇಡಿಗನು ಹೈದರಾಲಿಯವರಿಂದ ಪರಾಜಿತವಾದ ನಗರ ಸಂಸ್ಥಾನದ ಪ್ರಭುಗಳ ದತ್ತಪುತ್ರನಾದ ಬೂದಿಬಸಪ್ಪನೆಂಬವನು ತಾನೆಂದು ನಟನೆಯನ್ನು ಹೂಡಿದ ಹಗರಣವೂ ಕಾರಣಗಳಾದುವು. ಆ ವೇಷಧಾರಿ ಹೈಗಮಲ್ಲನು ನಗರ ಸಂಸ್ಥಾನದ ರಾಜನೆಂದು ಉದ್ಘೋಷಿಸಿ ಅವನಿಗೆ ಪಟ್ಟವನ್ನು ಕಟ್ಟಿದ ಸಂರಂಭವೊಂದು ೧೮೩೦ನೆಯ ಇಸವಿಯಲ್ಲಿ ನಡೆದು, ಅದಕ್ಕೆ ರಾಜದ್ರೋಹಿಗಳಾದ ಸುಬೇದಾರರು ಪಟೇಲರು ಮುಂತಾದವರ ಪ್ರೋತ್ಸಾಹ ಸಹಾಯಗಳು ದೊರೆತುವು. ಚನ್ನರಾಯಪಟ್ಟಣ, ದೊಡ್ಡ ಬಳ್ಳಾಪುರ, ಚನ್ನಗಿರಿ, ನಗರ ಮುಂತಾದ ಅನೇಕ ಸ್ಥಳಗಳಲ್ಲಿ ದಂಗೆಗಳು ನಡೆದುವು. ದಂಗೆಯೆದ್ದ ಜನರು ಅನೇಕ ದಾಂಧಲೆಗಳನ್ನೂ ಅತ್ಯಾಚಾರ ಗಳನ್ನೂ ನಡೆಯಿಸಿ ಹಾವಳಿಮಾಡಿದರು.

ಆಗಿನ ಬ್ರಿಟಿಷ್ ರೆಸಿಡೆಂಟರವರು ಯುಕ್ತವೆಂದು ಭಾವಿಸಿ ಸಲಹೆ ಮಾಡಿದ ಮೇರೆಗೆ, ಶ್ರೀ ಮುಮ್ಮಡಿ ಕೃಷ್ಣರಾಜ ಒಡೆಯರವರು ಸೈನ್ಯ ಸಮೇತರಾಗಿ ಸಂಚಾರ ಹೊರಟು, ದಂಗೆಯನ್ನಡ

**ಪ್ರಭುಗಳ ಸಂಚಾರ**

ಗಿಸುವ ಪ್ರಯತ್ನ ಮಾಡಿದರು. ಆ ಸಮಯದಲ್ಲಿ ತಮ್ಮ ಸಹಾಯಕ್ಕಾಗಿ "ಈಸ್ಟ್ ಇಂಡಿಯಾ ಕಂಪೆನಿ"ಯ ಸೈನ್ಯವನ್ನು ಕಳುಹಿಸಬೇಕೆಂದು ಪ್ರಭುಗಳವರು ಕೇಳಿದರು. ಅದಕ್ಕೆ ಬ್ರಿಟಿಷ್ ರೆಸಿಡೆಂಟರವರೂ ಮದರಾಸು ಸರ್ಕಾರದವರೂ ಗಮನ ಕೊಡದೆ ಮೈಸೂರು ಸರ್ಕಾರದ ಸೈನ್ಯ ಮುಂತಾದುವುಗಳೇ ದಂಗೆ ಯನ್ನಡಗಿಸಲು ಸಾಕಾಗಬಹುದೆಂದು ಭಾವಿಸಿದರು. ಶ್ರೀ ಮುಮ್ಮಡಿ ಪ್ರಭುಗಳವರು ೧೮೩೦ನೆಯ ಇಸವಿ ಡಿಸೆಂಬರು ೧೪ನೆಯ ತಾರೀಖಿನ ದಿನ ಮೈಸೂರಿನಿಂದ ದರಸುಗುಪ್ಪೆಗೆ ಚಿತ್ತೈಸಿ, ಅಲ್ಲಿಯ ವ್ಯವಸಾಯ ಗಾರರ ಕಷ್ಟ ಸುಖಗಳನ್ನು ವಿಚಾರಿಸಿ ಅನ್ಯಾಯವಾದ ಸುಂಕದ ತೆರಿಗೆ ಗಳನ್ನು ತಪ್ಪಿಸಿ ಸಹಾಯಮಾಡಿದರು. ಅದೇ ತಿಂಗಳು ೧೭ನೆಯ ತಾರೀಖಿನ ದಿನ ಬೂಕಿನ ಕೆರೆಯ ಶಿರಸ್ತೇದಾರನನ್ನೂ ಸುಬೇದಾರನನ್ನೂ ಅವರ ಅನ್ಯಾಯ ಪ್ರವರ್ತನೆಗಾಗಿ ಕೆಲಸದಿಂದ ತೆಗೆದುಹಾಕಿ ೧೮ನೆಯ ತಾರೀಖಿನ ದಿನ ಚನ್ನರಾಯಪಟ್ಟಣವನ್ನು ಸೇರಿದರು. ಆ ವೇಳೆಗೆ

ಬ್ರಿಟಿಷ್ ರೆಸಿಡೆಂಟರವರೂ ಅಲ್ಲಿಗೆ ಬಂದಿದ್ದರು. ಪ್ರಭುಗಳು ಪ್ರಜೆಗಳ ಅರಿಕೆಗಳನ್ನು ಲಾಲಿಸಿ ಕಿಕ್ಕೇರಿಯ ಸುಬೇದಾರನು ಪ್ರಜಾಹಿಂಸಕನಾಗಿದ್ದ ನೆಂಬ ಅಪರಾಧಕ್ಕಾಗಿ ಅವನನ್ನು ಕೆಲಸದಿಂದ ತೆಗೆದುಹಾಕಿದರು. ಅವನು ನೂರಾರು ಮಂದಿ ವ್ಯವಸಾಯಗಾರರನ್ನು ಬಂಧಿಸಿ ಸೆರೆಯಲ್ಲಿಟ್ಟು ಅವರಿಗೆ ಆಹಾರವನ್ನು ಕೂಡ ಕೊಡದೆ ಹಿಂಸಿಸುತ್ತಿದ್ದುದಕ್ಕಾಗಿ ವ್ಯಥೆಪಟ್ಟು ಒಡನೆಯೇ ಖಾಸಾ ಬಿಡದಿಯಿಂದ ಮೊಸರವಲಕ್ಕಿಯನ್ನೂ ಇತರ ಆಹಾರ ವಸ್ತುಗಳನ್ನೂ ತರಿಸಿಕೊಟ್ಟು ಅವರನ್ನು ಬಂಧನದಿಂದ ಬಿಡಿಸಿದರು.

ಶ್ರೀ ಮುಮ್ಮಡಿ ಕೃಷ್ಣರಾಜ ಒಡೆಯರವರ ಕಾರುಣ್ಯ ಪ್ರವೃತ್ತಿಯು ಅದೇ ಮೇರೆಗೆ ಕಾರ್ಯರೂಪಕ್ಕೆ ಬರುತ್ತಾ ಹೋಗಿದ್ದರೆ, ಅತಿ ಶೀಘ್ರ ವಾಗಿ ಶಾಂತಿಸ್ಥಾಪನೆಯಾಗುತ್ತಿದ್ದುದು ನಿರ್ವಿವಾದವಾದ ವಿಷಯ. ಅವರ ಕಾರುಣ್ಯದಿಂದ ಕಾರ್ಯವು ಹದಗೆಡುತ್ತಿದ್ದಿತೆಂದೂ ನಿರ್ದಾಕ್ಷಿಣ್ಯ ದಿಂದ ಪುಂಡರನ್ನು ನೆಗ್ಗಬೇಕಾದುದು ಆವಶ್ಯಕವೆಂದೂ ಬ್ರಿಟಿಷ್ ರೆಸಿಡೆಂಟರು ಅಭಿಪ್ರಾಯಪಟ್ಟರು. ಅದರ ಪರಿಣಾಮವಾಗಿ ದಿವಾನ್ ವೆಂಕಟೇ ಅರಸಿನವರೂ ಅವರ ಮುತ್ಸದ್ದಿಗಳೂ ವಿಚಾರಣೆ ನಡೆಯಿಸಿ ಬ್ರಿಟಿಷ್ ರೆಸಿಡೆಂಟರ ಸಲಹೆಯಂತೆ ಚನ್ನರಾಯಪಟ್ಟಣದಲ್ಲಿಬ್ಬರನ್ನೂ ಹೊಳೆನರಸೀಪುರದಲ್ಲಿಬ್ಬರನ್ನೂ ಮರಣದಂಡನೆಗೆ ಗುರಿಪಡಿಸಿದರು. ಈ ಬಗೆಯ ಕ್ರೂರ ದಂಡನೆಗಳಿಂದ ಪ್ರಜೆಗಳ ಮನಸ್ಸು ಕ್ಷೋಭೆಗೊಂಡು ದಂಗೆಯ ದಾಂಧಲೆಗಳು ಹೆಚ್ಚಿದುವು. ಪ್ರಭುಗಳವರು ಚನ್ನರಾಯ ಪಟ್ಟಣದಲ್ಲಿದ್ದಾಗಲೇ ದಂಗೆಯು ಕುಂಸಿ, ಆನಂದಪುರ ಮುಂತಾದ ಊರುಗಳಿಗೆಲ್ಲ ವ್ಯಾಪಿಸುತ್ತಿದ್ದುದಾಗಿ ವಾರ್ತೆಯು ಬಂದಿತು. ದಂಗೆ ಯನ್ನಡಗಿಸಲು ಸಾಹಸಿಯೂ ಧೈರ್ಯಶಾಲಿಯೂ ಆಗಿದ್ದ ಅಣ್ಣಪ್ಪ ನೆಂಬಾತನನ್ನು ಅವರು ಸೈನ್ಯದೊಡನೆ ಕಳುಹಿಸಿದರು. ಅವರು ಮೊದಲೇ ಸಲಹೆಮಾಡಿದ್ದಂತೆ "ಈಸ್ಟ್ ಇಂಡಿಯಾ ಕಂಪೆನಿ"ಯ ಸೈನ್ಯವನ್ನು ಕರೆಯಿಸ ಬೇಕಾಗಿದ್ದುದೇ ಯುಕ್ತವೆಂದೂ, ಹಾಗೆ ಮಾಡದೆಹೋದರೆ ನೆರೆಹೊರೆಯ ಬ್ರಿಟಿಷ್ ಪ್ರಾಂತಗಳಿಗೂ ದಂಗೆಯು ಹರಡಬಹುದೆಂದೂ ಆಗ ಬ್ರಿಟಿಷ್ ರೆಸಿಡೆಂಟರಿಗೆ ತೋರಿತು. ಕರ್ನಲ್ ಇವ್ಯಾನ್ಸ್ ಅವರ ಕೈ ಕೆಳಗೆ ಸೈನ್ಯವನ್ನು ರೆಸಿಡೆಂಟರು ಬೆಂಗಳೂರಿನಿಂದ ಶಿವಮೊಗ್ಗಿಗೆ ಕಳುಹಿಸಿದರು. ಪ್ರಭು ಗಳವರು ನಾನಾ ಸ್ಥಳಗಳಿಗೂ ಹೋಗಿ ೧೮೩೧ನೆಯ ಇಸವಿ ಜನವರಿ ೧೧ನೆಯ ತಾರೀಖಿನ ದಿನ ಮೈಸೂರು ನಗರಕ್ಕೆ ಚಿತ್ತೈಸಿದರು. ಅವರು ದಯಮಾಡಿದ್ದ ಸ್ಥಳಗಳಲ್ಲೆಲ್ಲ ಶಾಂತಿ ಸ್ಥಾಪನೆಯಾಯಿತಾದರೂ, ರಂಗಪ್ಪ ನಾಯಕನೂ ಹೈಗಮಲ್ಲನೂ ಹೂಡಿದ ಹಾವಳಿಯು ಅಡಗಲಿಲ್ಲ.

ಹೊನ್ನಾಳಿಯ ಸುಬೇದಾರರೇ ಮುಂತಾದ ಸರ್ಕಾರಿ ಅಧಿಕಾರಿಗಳೇ ರಹಸ್ಯ ವಾಗಿ ಅವರಿಗೆ ಸಹಾಯಮಾಡುತ್ತ ಕರ್ತವ್ಯಭ್ರಷ್ಟರಾಗಿ ರಾಜದ್ರೋಹಿ ಗಳಾಗಿದ್ದ ಕಾರಣ, ದಂಗೆಯನ್ನಡಗಿಸುವುದು ಶೀಘ್ರವಾಗಿ ಸಾಧ್ಯ ವಾಗಲಿಲ್ಲ.

**ಆಡಳಿತ ಸೂತ್ರಗಳು ಕೈಬಿಟ್ಟುದು**

ಈ ಮಧ್ಯದಲ್ಲಿ ಮದರಾಸು ಆಧಿಪತ್ಯದ ಗವರ್ನರರವರು, ೧೮೩೧ನೆಯ ಇಸವಿ ಏಪ್ರಿಲ್ ೨೨ನೆಯ ತಾರೀಖಿನ ದಿನ. ಆಗ್ಗೆ ಇಂಡಿಯಾ ಗವರ್ನರ್ ಜನರಲ್‌ರವರಾಗಿದ್ದ ಲಾರ್ಡ್ ವಿಲಿಯಂ ಬೆಂಟಿಂಕ ರವರಿಗೆ ಬರೆದ ಪತ್ರದಲ್ಲಿ ಮೈಸೂರು ಸಂಸ್ಥಾನ ದಿಂದ ಬರಬೇಕಾಗಿದ್ದ ಪೊಗದಿಯ ಹಣವು ಒಪ್ಪಂದದ ಮೇರೆಗೆ ಕಾಲಕ್ಕೆ ಸರಿಯಾಗಿ ತಿಂಗಳು ತಿಂಗಳಿಗೂ ಬರಲಿಲ್ಲವೆಂದೂ, ಅವರಿಂದ ಸೈನಿಕರಿಗೆ ಸಂಬಳಗಳು ಸಕಾಲ ದಲ್ಲಿ ಪಾವತಿಯಾಗಲು ಅವಕಾಶತಪ್ಪಿ ಅವರು ದಂಗೆಯೇಳುವ ಸಂಭವ ವುಂಟಾಗಿದ್ದಿತೆಂದೂ ಸೂಚಿಸಿದ್ದರು. ಅದು ಪ್ರಮಾದವಶದಿಂದ ನಡೆದ ಅನ್ಯಾಯವಾದ ಆರೋಪಣೆ. ಏಕೆಂದರೆ, ಪೊಗದಿಯ ಹಣವನ್ನು ಸಕಾಲದಲ್ಲಿ ಪಾವತಿಮಾಡದೆ ಶ್ರೀ ಮುಮ್ಮಡಿ ಕೃಷ್ಣರಾಜ ಒಡೆಯ ರವರು ಒಂದು ತಿಂಗಳೂ ನಿಲ್ಲಿಸಿಕೊಂಡಿರಲಿಲ್ಲವೆಂದು ಮುಂದೆ "ಈಸ್ಟ್ ಇಂಡಿಯಾ ಕಂಪೆನಿ"ಯವರ ಲೆಕ್ಕದಿಂದಲೇ ವ್ಯಕ್ತವಾಯಿತು. ಲಾರ್ಡ್ ವಿಲಿಯಂ ಬೆಂಟಿಂಕರವರು ಮದರಾಸು ಗವರ್ನರರವರ ಹೇಳಿಕೆಯನ್ನೇ ನಂಬಿ ೧೮೩೧ನೆಯ ಇಸವಿ ಸೆಪ್ಟೆಂಬರು ಏಳನೆಯ ತಾರೀಖಿನ ದಿನ ಶ್ರೀ ಮುಮ್ಮಡಿ ಕೃಷ್ಣರಾಜ ಒಡೆಯರವರಿಗೆ ಒಂದು ಪತ್ರವನ್ನು ಬರೆದರು. ಆಳಿದ ಮಹಾಸ್ವಾಮಿಯವರು ಒಪ್ಪಂದದ ಮೇರೆಗೆ ಕಾಲಕ್ಕೆ ಸರಿಯಾಗಿ ಪೊಗದಿ ಹಣವನ್ನು ಸಲ್ಲಿಸಲಿಲ್ಲವೆಂದೂ, ದಂಗೆಯೆದ್ದವರ ಕೊಲೆಗಳು ಅಭೂತಪೂರ್ವವಾಗಿ ಅಪರಿಮಿತವೆನಿಸುವ ಮಟ್ಟಿಗೆ ನಡೆದು ವೆಂದೂ ಆಳಿದ ಮಹಾಸ್ವಾಮಿಯವರು ತಮ್ಮ ಸೈನ್ಯದಿಂದ ದಂಗೆಗಳನ್ನಡ ಗಿಸಲಾರದೆ ಹೋದಕಾರಣ ಬ್ರಿಟಿಷ್ ಸೈನ್ಯವನ್ನು ಕಳುಹಿಸಬೇಕಾಯಿ ತೆಂದೂ, ಸಂಸ್ಥಾನವು ಸುರಕ್ಷಿತವಾಗಿರಬೇಕಾಗಿದ್ದ ಕಾರಣ ಆ ಪತ್ರವು ತಲಪಿದ ತರುವಾಯ ಹತ್ತು ದಿನಗಳೊಳಗಾಗಿ ಬ್ರಿಟಿಷ್ ಕಮಿಷನರು ಗಳಿಗೆ ರಾಜ್ಯಾಡಳಿತ ಸೂತ್ರಗಳನ್ನೊಪ್ಪಿಸುವಂತೆ ಪ್ರಭುಗಳವರು ಅಧಿಕಾರಿ ಗಳಿಗೆ ಅಪ್ಪಣೆಮಾಡಿ ರಾಜಶಾಸನ ಪತ್ರಿಕೆಯನ್ನು ಪ್ರಕಟಿಸಬೇಕೆಂದೂ ಆ ಪತ್ರದಲ್ಲಿ ಸೂಚಿತವಾಗಿದ್ದಿತು. ಪೊಗದಿಯ ಹಣವು ಕಾಲಕಾಲಕ್ಕೆ ಪಾವತಿಯಾಗಿದ್ದ ಕಾರಣ, ಮೊದಲನೆಯ ಆಪಾದನೆಗೆ ಆಧಾರವಿರಲಿಲ್ಲ.

ಸೈನ್ಯಾಧಿಕಾರಿಗಳಾದ ಅಣ್ಣಪ್ಪ ಮುಂತಾದವರು ದಂಗೆಯೆದ್ದವರನ್ನು ಸೋಲಿಸಿ ಅವರಲ್ಲನೇಕರನ್ನು ನೇಣುಹಾಕಿಸಿದುದು ನಿಜ. ಆದರೆ ತರೀಕೆರೆ ಪಾಳೆಯಗಾರನೇ ಮುಂತಾದವರು ಅಸಂಖ್ಯಾತ ಮಂದಿ ಅಧಿಕಾರಿಗಳನ್ನು ಕೊಲೆಮಾಡಿದ ಘೋರ ಕೃತ್ಯಕ್ಕೆ ಆ ಬಗೆಯ ಪ್ರತೀಕಾರವು ನಡೆಯಿತು. ಆಳಿದ ಮಹಾಸ್ವಾಮಿಯವರು ಚನ್ನರಾಯಪಟ್ಟಣದಲ್ಲಿ ಅಪರಾಧಿಗಳಿಗೆ ಕೃಪೆತೋರಿದ ಬಗೆಯನ್ನು ನೋಡಿ ಅದು ಉಚಿತವಲ್ಲವೆಂದು ಬ್ರಿಟಿಷ್ ರೆಸಿಡೆಂಟರವರು ಅಭಿಪ್ರಾಯಪಟ್ಟುದರ ಪರಿಣಾಮವಾಗಿ ಮರಣದಂಡನೆಗಳಾದುವು. ಶ್ರೀ ಮುಮ್ಮಡಿ ಕೃಷ್ಣರಾಜ ಒಡೆಯರವರು ಸೂಚಿಸಿದ್ದಂತೆ ಬ್ರಿಟಿಷ್ ರೆಸಿಡೆಂಟರವರು ಸಕಾಲದಲ್ಲಿ ಸೈನ್ಯವನ್ನೊದಗಿಸಿದ್ದರೆ, ದಂಗೆಯೆದ್ದವರಿಗೆ ಮರಣದಂಡನೆ ಮೊದಲಾದ ಕ್ರೂರ ಶಿಕ್ಷೆಗಳಾಗಬೇಕೆಂದು ಛಲಹಿಡಿಯದೆಯೂ ಹೋಗಿದ್ದರೆ, ದಂಗೆಯು ಶಾಂತವಾಗುತ್ತಿದ್ದಿತೋ ಏನೋ! ಏನೇ ಆಗಲಿ, ಬ್ರಿಟಿಷ್ ಸೈನ್ಯದಿಂದಲೂ ದಂಗೆಯನ್ನಡಗಿಸಲು ಸಾಧ್ಯವಿಲ್ಲದೆಹೋಗಿದ್ದೂ, ದಂಗೆಯನ್ನಡಗಿಸದೆ ಹೋದುದಕ್ಕೆ ಶ್ರೀ ಮುಮ್ಮಡಿ ಕೃಷ್ಣರಾಜ ಒಡೆಯರವರು ಉತ್ತರವಾದಿಗಳೆಂದು ಭಾವಿಸಿದುದು ದುಡುಕಿನ ವರ್ತನೆಯೇ ಸರಿ. ೧೮೩೧ನೆಯ ಇಸವಿ ಅಕ್ಟೋಬರು ೧೯ನೆಯ ತಾರೀಖಿನಿಂದ ರಾಜ್ಯಭಾರವು ಶ್ರೀ ಮುಮ್ಮಡಿ ಕೃಷ್ಣರಾಜ ಒಡೆಯರವರ ಕೈತಪ್ಪಿ ಕಮಿಷನರೀರ್ವರಿಗೆ ಸೇರಿಹೋಯಿತು. ಅವರಲ್ಲೊಬ್ಬರಾದ ಕರ್ನಲ್ ಬ್ರಿಗ್ಸ್‌ರವರು ದಂಗೆಯನ್ನಡಗಿಸಿ ಶಾಂತಿಯನ್ನು ಸ್ಥಾಪಿಸಲು ಏರ್ಪಾಡನ್ನು ಮಾಡಿದರು. ಹೈಗಮಲ್ಲ ಮುಂತಾದವರ ಹಾವಳಿಯು ಅಡಗಲು ೧೮೩೨ನೆಯ ಇಸವಿ ಜನವರಿ ತಿಂಗಳಿನವರೆಗೂ ಹಿಡಿಯಿತು.

ಸಂಸ್ಥಾನದ ರಾಜ್ಯಭಾರವನ್ನು ಕಮಿಷನರುಗಳೀರ್ವರ ಆಡಳಿತಕ್ಕೆ ವಹಿಸಿಕೊಂಡನಂತರ ಲಾರ್ಡ್ ವಿಲಿಯಂ ಬೆಂಟಿಂಕರವರು ದಂಗೆಯ ಕಾರಣಗಳೇನೆಂಬುದೇ ಮುಂತಾದ ವಿವರಗಳನ್ನು ನಿರ್ಧರಿಸಿ ವರದಿ ಮಾಡಲು ಒಂದು ಸಮಿತಿಯನ್ನು ನೇಮಕಮಾಡಿದರು. ಸಮಿತಿಯವರ ವರದಿಯನ್ನು ನೋಡಿದಾಗ ತಾವು ದುಡುಕಿ ವರ್ತಿಸಿದುದು ಅನ್ಯಾಯವಾಯಿತೆಂದು ಅವರಿಗೆ ತೋರಿರಲೇಬೇಕು. ಶ್ರೀ ಮುಮ್ಮಡಿ ಕೃಷ್ಣರಾಜ ಒಡೆಯರವರು ಲೇಶವಾದರೂ ಅಸಮಾಧಾನವನ್ನು ತೋರದೆ ರಾಜ್ಯಭಾರವನ್ನೊಪ್ಪಿಸಿ ಪ್ರದರ್ಶಿಸಿದ ತಾಳ್ಮೆಯು ಅವರ ಮನಸ್ಸನ್ನು ಮಿಡಿದಿರಬೇಕು. ಶ್ರೀ ಮುಮ್ಮಡಿ ಕೃಷ್ಣರಾಜ ಒಡೆಯರವರು ಮೇಧಾವಿಗಳೆಂದೂ ಪರಮ ಕರುಣಾಳುಗಳೆಂದೂ ಅವರೇ ಶ್ಲಾಘಿಸಿದರು. ಲಾರ್ಡ್

ವಿಲಿಯಂ ಬೆಂಟಿಂಕರವರು ಸಮಿತಿಯ ವರದಿಯನ್ನು ಪರಿಶೀಲಿಸಿ ೧೮೩೪ನೆಯ ಇಸವಿ ಏಪ್ರಿಲ್ ತಿಂಗಳಿನಲ್ಲಿ ಶ್ರೀ ಮುಮ್ಮಡಿ ಪ್ರಭುಗಳವರನ್ನು ಸಂದರ್ಶಿಸಿದ ತರುವಾಯ "ಈಸ್ಟ್ ಇಂಡಿಯಾ ಕಂಪೆನಿ"ಯ ಡೈರೆಕ್ಟರುಗಳಿಗೆ ಬರೆದ ಪತ್ರದಲ್ಲಿ, ಮೈಸೂರು, ಮಂಜರಾಬಾದು ಮತ್ತು ಅಷ್ಟಗ್ರಾಮ ಡಿವಿಜನ್ನುಗಳನ್ನು ಕೂಡಲೆ ಹಿಂದಕ್ಕೆ ಕೊಟ್ಟು ಸಂಸ್ಥಾನದ ಉಳಿದ ಭಾಗವನ್ನು ಕಂಪೆನಿಯ ಆಡಳಿತಕ್ಕೆ ಸೇರಿಸಿಕೊಳ್ಳಬೇಕೆಂದು ಸಲಹೆ ಮಾಡಿದರು. ಆ ಸಲಹೆಗೆ ಪುರಸ್ಕಾರ ದೊರೆತಿದ್ದರೆ ಶ್ರೀ ಮುಮ್ಮಡಿ ಕೃಷ್ಣರಾಜ ಒಡೆಯರವರಿಗೆ ಮತ್ತೆ ರಾಜ್ಯಭಾರ ಸೂತ್ರಗಳೇನೊ ಲಭಿಸುತ್ತಿದ್ದುವಾದರೂ ಸಂಸ್ಥಾನದ ವಿಸ್ತೀರ್ಣವು ಮಾತ್ರ ತೀರ ಕಡಮೆಯಾಗಿ ಈಗಿನ ಉಚ್ಛ್ರಾಯಸ್ಥಿತಿಯ ಮೇಲ್ಮೆಯನ್ನು ಕಾಣುವ ಭಾಗ್ಯವೇ ಮೈಸೂರಿನ ಪ್ರಜೆಗಳಿಗಿರುತ್ತಿರಲಿಲ್ಲವೆನ್ನಬಹುದು. ಲಾರ್ಡ್ ವಿಲಿಯಂ ಬೆಂಟಿಂಕರವರು ತಮ್ಮ ಆಶ್ರಿತರಲ್ಲೊಬ್ಬರಾಗಿದ್ದ ಆಗಿನ ಬ್ರಿಟಿಷ್ ರೆಸಿಡೆಂಟರವರನ್ನು ಅಪಖ್ಯಾತಿಯಿಂದುದ್ಧರಿಸುವ ಪ್ರಯತ್ನದಲ್ಲಿ ಆಳಿದ ಮಹಾಸ್ವಾಮಿಯವರಿಗೆ ಅನ್ಯಾಯಮಾಡಿದರೆಂಬುದು ಮೊಟ್ಟಮೊದಲನೆಯ ಬ್ರಿಟಿಷ್ ಕಮಿಷನರವರಾದ ಕರ್ನಲ್ ಬ್ರಿಗ್ಸ್‌ರವರ ನಿಷ್ಪಕ್ಷಪಾತ ವಾಣಿಗಳಿಂದ* ಸ್ಪಷ್ಟವಾಗಿ ಗೋಚರವಾಗುತ್ತದೆ. ಅಲ್ಲದೆ ರೆಸಿಡೆಂಟರವರ ಅನ್ಯಾಯವನ್ನು ಹೊರಗೆಡಹಲು ಪ್ರಯತ್ನಿಸಿದ ಆ ಮಹಾಶಯರಿಗೆ ಲಾರ್ಡ್ ವಿಲಿಯಂಬೆಂಟಿಂಕರವರು ಅಡಚಣೆಯನ್ನು ತಂದೊಡ್ಡಿದರೆಂಬುದೂ ವ್ಯಕ್ತವಾಗುತ್ತದೆ.

**ಮುಮ್ಮಡಿ ಪ್ರಭುಗಳ ಪ್ರಜೋಪಕಾರಗಳು**

ಶ್ರೀ ಮುಮ್ಮಡಿ ಕೃಷ್ಣರಾಜ ಒಡೆಯರವರು ರಾಜ್ಯಭಾರ ಸೂತ್ರಗಳನ್ನೊಪ್ಪಿಸಿದಾಗಲೂ ಆ ಬಳಿಕಲೂ ಇಂಗ್ಲಿಷರಲ್ಲಿ ದ್ವೇಷಾಸೂಯೆಗಳ ಲವಲೇಶವನ್ನೂ ಮನಸ್ಸಿನಲ್ಲಿಟ್ಟುಕೊಳ್ಳದೆ, ತ್ರಿಕರಣಶುದ್ಧವಾದ ಮೈತ್ರಿಯಿಂದ ವರ್ತಿಸಿದರು. ೧೮೧೩ನೆಯ ಇಸವಿಯಲ್ಲೇ, ಎಂದರೆ ತಾವು ರಾಜ್ಯಭಾರಸೂತ್ರಗಳನ್ನು ವಹಿಸಿದ ಮೂರನೆಯ ವರ್ಷದಲ್ಲೇ, ಅವರು ಮೈಸೂರು ಸಂಸ್ಥಾನದಲ್ಲಿ ಮೊಟ್ಟಮೊದಲನೆಯ

* "The Governor-General, as I did not understand till lately, was excessively anxious from the first and all through the business to screen the Resident Casamajor an old protege and favourite of his own, so that while his despatches demonstrated that gentleman's incapacity to the perception of the Court of Directors, he still supported him both publicly and privately and was glad to get me out of the way, because I frankly avowed my aversion to the Residency party and my conviction that they were answerable for the misrule of Mysore."—*Modern Mysore*, page 469.

ಆಸ್ಪತ್ರೆಯನ್ನು ಸ್ಥಾಪಿಸಿದರು. ರಾಜ್ಯಭಾರಸೂತ್ರಗಳು ಕೈಬಿಟ್ಟುಹೋದ ಮೇಲೆ ಸಹ, ಪ್ರಭುಗಳವರು ೧೮೪೦ನೆಯ ಇಸವಿ ಅಕ್ಟೋಬರು ೧ನೆಯ ತಾರೀಖಿನ ದಿನ ಮೈಸೂರು ನಗರದಲ್ಲಿ ಮೊಟ್ಟಮೊದಲನೆಯ ಇಂಗ್ಲಿಷ್ ಪಾಠಶಾಲೆಯನ್ನು ಸ್ಥಾಪಿಸಿ ಪ್ರೋತ್ಸಾಹಿಸಿದರು. ಅದೇ ಮೇಲ್ಪಂಕ್ತಿಯನ್ನು ನೋಡಿಕೊಂಡು ಕಮಿಷನರವರು ವೆಸ್ಲಿಯನ್ ಮಿಷನಿಗೆ ಸೇರಿದ್ದ ರೆವರೆಂಡ್ ಜೆ. ಗ್ಯಾರಟ್‌ರವರಿಂದ ಬೆಂಗಳೂರು ನಗರದಲ್ಲಿ ಸ್ಥಾಪಿತವಾಗಿದ್ದ ಇಂಗ್ಲಿಷ್ ಪಾಠಶಾಲೆಗೆ ಪ್ರೋತ್ಸಾಹವನ್ನಿತ್ತರು. ಶ್ರೀ ಮುಮ್ಮಡಿ ಕೃಷ್ಣರಾಜ ಒಡೆಯರವರು ನೆರವೇರಿಸಿದ ಧರ್ಮಕಾರ್ಯಗಳು ಅಸಂಖ್ಯಾತವಾಗಿದ್ದುವು. ರಾಜ್ಯಭಾರಸೂತ್ರಗಳು ಕೈಬಿಟ್ಟ ಬಳಿಕ, ಅವರಿಗೆ ವರ್ಷಕ್ಕೆ ೧೩ ಲಕ್ಷ ರೂಪಾಯಿಗಳು ಮಾತ್ರವೇ ಸಂದಾಯವಾಗುತ್ತಿದ್ದಾಗ ಕೂಡ, ಅವರು ತೀರ ಮಿತವ್ಯಯದಿಂದ ಸ್ವಂತ ವೆಚ್ಚಗಳನ್ನು ನೆರವೇರಿಸಿ ಪ್ರಜೆಗಳ ಹಿತಸಾಧನೆಗಾಗಿ ಅನೇಕ ಧರ್ಮಕಾರ್ಯಗಳನ್ನಾಚರಿಸಿದರು.

**ರಾಜ್ಯ ಲಾಭಕ್ಕಾಗಿ ಸಂತತ ಪ್ರಯತ್ನ**

ಸಂಸ್ಥಾನದ ಆಡಳಿತ ಸೂತ್ರಗಳನ್ನು ಮತ್ತೆ ಹಿಂದಕ್ಕೆ ಪಡೆಯಲು ಶ್ರೀ ಮುಮ್ಮಡಿ ಕೃಷ್ಣರಾಜ ಒಡೆಯರವರು ಪ್ರಬಲವಾಗಿ ಪ್ರಯತ್ನ ಮಾಡಲಾರಂಭಿಸಿದರು. ೧೮೩೩ನೆಯ ಇಸವಿ ಜೂನ್ ತಿಂಗಳಿನಲ್ಲಿ ಮೈಸೂರು ಸಂಸ್ಥಾನದ ಬ್ರಿಟಿಷ್ ರೆಸಿಡೆಂಟ್ ಮತ್ತು ಕಮಿಷನರವರಾಗಿ ನೇಮಕವಾದ ಕರ್ನಲ್ ಜೆ. ಎಸ್. ಫ್ರೇಸರವರು ಆ ತರುವಾಯ ಎರಡು ವರ್ಷಗಳಮೇಲೆ ಮದರಾಸು ಗವರ್ನರವರಿಗೆ ಬರೆದ ಪತ್ರದಲ್ಲಿ, "ತೀರ ತಾಟಸ್ಥ್ಯವನ್ನು ವಹಿಸಿದ್ದ ನಮ್ಮ ಕಾರ್ಯನೀತಿಯು—ಅಥವಾ ಕೊನೆಯಪಕ್ಷ ಮಹಾರಾಜರು ಚಿಕ್ಕ ವಯಸ್ಸಿನವರಾಗಿದ್ದಾಗ್ಗೆ ದೀರ್ಘಾಲೋಚನೆಯಿಂದ ಕ್ರಮವಾದ ಮಾರ್ಗದರ್ಶನ ಮಾಡದೆ ಸುಮ್ಮನಿದ್ದ ಕಾರ್ಯನೀತಿಯು—ಪರಿಣಾಮವಾಗಿ ರಗಳೆಯಾಯಿತು. ಅನಂತರ ನಮ್ಮ ಕಾರ್ಯನೀತಿಯ ಫಲಿತಾಂಶವಾಗಿಯೋ ಅವರು ತೊಂದರೆಗೆ ಸಿಕ್ಕಿದ ಸಮಯದಲ್ಲಿ ರಾಜ್ಯವನ್ನು ಕಸಿದುಕೊಂಡೆವು. ....ವಿವಾಹ, ದತ್ತುಸ್ವೀಕಾರ ಮುಂತಾದ ಮತಧರ್ಮಾಚರಣೆಗಳ ವಿಷಯದಲ್ಲಿ ಅವರಿಗೆ ಪೂರ್ಣಾಧಿಕಾರವಿದೆಯೆಂಬುದರಲ್ಲಿ ಸಂದೇಹವೇ ಇಲ್ಲವೆಂದು ನನಗೆ ತೋರುತ್ತಿದೆ. ..ಅವರಿಗೆ ಮುಂದೆ ಯಾವಾಗಲಾದರೂ ಸಂಸ್ಥಾನಾಧಿಪತ್ಯವನ್ನು ಹಿಂದಕ್ಕೆ ವಹಿಸಬೇಕೆ ಅಥವಾ ಬೇಡವೆ? ನಾವುಗಳು, ಅವರೇ ನ್ಯಾಯವಾದ ರಾಜ್ಯಾಧಿಕಾರವುಳ್ಳ ಪ್ರಭುಗಳೆಂಬ ಭಾವನೆಯನ್ನಿಟ್ಟುಕೊಂಡು ರಾಜ್ಯದಲ್ಲಿ ಪ್ರಜಾನೆಮ್ಮದಿಯನ್ನು

ಸ್ಥಾಪಿಸಿ ಮುಂದೆ ನಮಗೆ ಪ್ರೋಗದಿಯೂ ನಷ್ಟವಾಗದಂತಿರುವುದು ದೃಢವಾಗುವವರೆಗೂ ರಾಜ್ಯಾಡಳಿತವನ್ನು ನಿರ್ವಹಿಸುತ್ತಿರುವುದಾಗಿ ಹೇಳುತ್ತಿದ್ದೇವೆಂದು ನಾನು ನಂಬಿದ್ದೇನೆ. ಆದಕಾರಣ, ತಾವು ಸೂಚಿಸಿರುವ ವಿಚಾರದಲ್ಲಿ ಅವರಿಗೆ ಪೂರ್ಣಾಧಿಕಾರವಿರುವುದೆಂಬುದನ್ನು ನಾವು ಅಂಗೀಕರಿಸಬೇಕೆಂದು ಹೇಳುವುದರಲ್ಲಿ ನನಗೆ ಯಾವ ಸಂದೇಹವೂ ಉಳಿದಿಲ್ಲ" ಎಂದು ಬರೆದಿದ್ದರು. ಆದರೆ ಆ ರೀತಿ ನಿಷ್ಪಕ್ಷಪಾತವಾದ ಅಭಿಪ್ರಾಯವನ್ನಿಟ್ಟುಕೊಂಡಿದ್ದ ಮಹನೀಯರ ಸಂಖ್ಯೆಯು ತೀರ ಪರಿಮಿತವಾಗಿದ್ದು ಅದಕ್ಕೆ ವಿರುದ್ಧಾಭಿಪ್ರಾಯವುಳ್ಳವರೇ ಅಸಂಖ್ಯಾತ ಮಂದಿಗಳಿದ್ದುದರಿಂದ ಪ್ರಭುಗಳ ಪ್ರಯತ್ನಕ್ಕೆ ಫಲವಾಗದೆ, ಅದು ಮತ್ತೆ ಮತ್ತೆ ಪ್ರತಿಹತವಾಯಿತು. ಆದಾಗ್ಯೂ ಅವರು ಧೃತಿಗೆಡದೆ ಸ್ತುತ್ಯವಾದ ರೀತಿಯಲ್ಲಿ ತಮ್ಮ ಪ್ರಯತ್ನಗಳನ್ನು ಮುಂದುವರಿಸಿದರು. ಕಮಿಷನರುಗಳು ಸಂಸ್ಥಾನದಲ್ಲಿ ಅಚ್ಚುಕಟ್ಟಾದ ಶಿಸ್ತನ್ನು ನೆಲೆಗೊಳಿಸಿ ವಿಚಕ್ಷಣೆಯಿಂದ ನಾನಾ ಇಲಾಖೆಗಳ ಆಡಳಿತವನ್ನೂ ನಡೆಯಿಸಲುಪಕ್ರಮಿಸಿದುದನ್ನು ಮೆಚ್ಚಿ ಹರ್ಷಿಸಿದರು. ೧೮೫೭ನೆಯ ಇಸವಿಯಲ್ಲಿ ಘೋರವಾದ ಸಿಪಾಯಿ ದಂಗೆಯು ನಡೆದ ಕಾಲದಲ್ಲಿ ಅವರು ಬ್ರಿಟಿಷರಿಗೆ ಸಹಾಯಮಾಡಿದರು. ಅದಕ್ಕೆ ಕೆಲವು ವರ್ಷಗಳ ಹಿಂದೆ ಮೈಸೂರಿಗೆ ಬಂದಿದ್ದ ಲಾರ್ಡ್ ಡಾಲ್‌ಹೌಸಿಯವರು ಪರಿಣಾಮದಲ್ಲಿ ಮೈಸೂರು ಸಂಸ್ಥಾನವು ಬ್ರಿಟಿಷ್ ಇಂಡಿಯಾಕ್ಕೆ ಸೇರಿಹೋಗಬೇಕೆಂಬ ದಾರುಣವಾದ ಅಭಿಮತವನ್ನು ಸೂಚಿಸಿದ್ದೂ ಪ್ರಭುಗಳವರು ಆ ರೀತಿ ಮಾಡಿ, ಆಗಿನ ಕಮಿಷನರವರಾದ ಸರ್ ಮಾರ್ಕ್ ಕಬ್ಬನ್ ಸಾಹೇಬರವರು ಆಶ್ಚರ್ಯ ಸಂತೋಷಗಳಿಂದ ಬೆರಗಾಗುವಂತೆ ವರ್ತಿಸಿದುದು ಸಾಮಾನ್ಯ ವಿಚಾರವಲ್ಲ. ಹಾಗಿದ್ದೂ ಆಗಿನ ಗವರ್ನರ್ ಜನರಲ್‌ರವರಾಗಿದ್ದ ಲಾರ್ಡ್ ಕ್ಯಾನಿಂಗ್‌ರವರು ಶುಷ್ಕೋಪಚಾರದ ಶ್ಲಾಘನೆಯ ಮಾತುಗಳನ್ನು ಸೂಚಿಸಿ ಸಂಸ್ಥಾನವನ್ನು ಹಿಂದಕ್ಕೆ ಕೊಡಕೂಡದೆಂದೇ ಸಲಹೆಮಾಡಿ ಶೂನ್ಯ ಹಸ್ತವನ್ನೇ ತೋರಿಸಿದರು. ರಾಜ ಮಹಾರಾಜರುಗಳು ದತ್ತು ಮಾಡಿಕೊಂಡರೆ ಆ ಮಕ್ಕಳು ಸಿಂಹಾಸನಕ್ಕೆ ಬರಬಹುದೆಂಬ ನಿಯಮವು ೧೮೫೮ನೆಯ ಇಸವಿಯಲ್ಲಿ ಪ್ರಭುತ್ವಮಾಡುತ್ತಿದ್ದವರಿಗೆ ಮಾತ್ರ ಅನ್ವಯಿಸಬೇಕೆಂದು ಅಧಿಕಾರಿಗಳು ಅರ್ಥಮಾಡಿದರು. ಭರತಖಂಡದ ಆಡಳಿತವನ್ನು "ಈಸ್ಟ್ ಇಂಡಿಯಾ ಕಂಪೆನಿ"ಯಿಂದ ಬ್ರಿಟಿಷ್ ಸರ್ಕಾರಕ್ಕೆ ವಹಿಸಿಕೊಂಡ ಬಳಿಕ ವಿಕ್ಟೋರಿಯಾ ಮಹಾರಾಜ್ಞಿಯವರು ಪ್ರಭುಗಳಿಗೆ "ಜಿ.ಸಿ.ಎಸ್.ಐ." ಬಿರುದನ್ನೂ ರತ್ನಖಚಿತವಾದ ಗಡಿಯಾರ ಮುಂತಾದ

ಸುವಸ್ತುಗಳನ್ನೂ ಕೊಟ್ಟು ಗೌರವಿಸಿದರು. ಅದರಿಂದ ಉತ್ತೇಜನ ಹೊಂದಿ ಪ್ರಭುಗಳವರು ತಮ್ಮ ಪ್ರಯತ್ನವನ್ನು ಮುಂದುವರಿಸಿದರು. ಅವರು ಕೈಕೊಂಡ ಪ್ರಯತ್ನದಲ್ಲಿ ಶ್ರೀಮಾನ್ ಅಲೀ ಆಸ್ಕರ್ ಎಂಬ ಮಹಾಶಯರಿಂದ ಲಭಿಸಿದ ಸೇವೆಯೂ ಸಹಾಯವೂ ಅಷ್ಟಿಷ್ಟಲ್ಲ. ರಹಸ್ಯವಾಗಿ ಪತ್ರಗಳನ್ನು ಕಳುಹಿಸುವುದು ಮೊದಲಾಗಿ ಭಾರಿ ಭಾರಿ ಇಂಗ್ಲಿಷ್ ಅಧಿಕಾರಿಗಳೊಡನೆ ಸಂಧಾನಮಾಡುವುದರ ವರೆಗೂ ಅನೇಕ ಕಾರ್ಯಗಳು ಅವರಿಂದ ನಡೆದುವು. ಅವರು ಈಗಿನ ದಿವಾನ್‌ರವರಾದ ಅಮೀನ್ - ಉಲ್ - ಮುಲ್ಕ್ ಸರ್ ಮಿರ್ಜಾ ಎಂ. ಇಸ್ಮಾಯಿಲ್, ಕೆ.ಸಿ.ಐ.ಇ., ಓ.ಬಿ.ಇ. ಅವರ ಪಿತಾಮಹರು. ಸಂಸ್ಥಾನದ ಸುಪ್ರಸಿದ್ಧರಾದ ವರ್ತಕರಲ್ಲೊಬ್ಬರಾಗಿ ಅವರು ಸಂಸ್ಥಾನದ ಪ್ರಜೆಗಳ ಆದರ ಗೌರವಗಳಿಗೆ ಪಾತ್ರರಾಗಿದ್ದರು. ಶ್ರೀ ಮುಮ್ಮಡಿ ಕೃಷ್ಣರಾಜ ಒಡೆಯರವರಿಗೆ ಅವರಲ್ಲಿ ಪೂರ್ಣವಿಶ್ವಾಸ. ಪ್ರಭುಗಳವರು ಇಂಗ್ಲೆಂಡಿಗೆ ಹೋಗಬೇಕಾಗಿದ್ದ ಪತ್ರಗಳನ್ನು ಅವರ ಮೂಲಕ ಮದರಾಸು ಆಧಿಪತ್ಯಕ್ಕೆ ಸೇರಿದ ಹೊಸೂರಿನಲ್ಲಿ ರಹಸ್ಯವಾಗಿ ಅಂಚೆಗೆ ಹಾಕಿಸುತ್ತಿದ್ದರು. ೧೮೬೪ನೆಯ ಇಸವಿಯಲ್ಲಿ ಮೈಸೂರು ಪ್ರಜೆಗಳಲ್ಲಿ ಗಣ್ಯರಾಗಿದ್ದ ಏಳು ಸಾವಿರ ಮಂದಿಗಳು ರುಜುಹಾಕಿದ್ದ ಅರ್ಜಿಯೊಂದು ವೈಸ್ರಾಯಿಯವರಿಗೆ ತಲಪಿತು. ರಾಜ್ಯಭಾರವನ್ನು ಪ್ರಭುಗಳಿಗೆ ವಹಿಸಬೇಕೆಂದು ಅವರುಗಳು ಅದರಲ್ಲಿ ವಿಜ್ಞಾಪಿಸಿಕೊಂಡಿದ್ದರು. ಡಾಕ್ಟರ್ ಕ್ಯಾಂಬೆಲ್‌ರವರೂ, ಮದರಾಸು ನ್ಯಾಯವಿಧಾಯಕ ಸಭೆಯ ಸದಸ್ಯರಾಗಿದ್ದ ಶ್ರೀಮಾನ್ ಜಿ. ಲಕ್ಷ್ಮೀನರಸ ಶೆಟ್ಟಿಯವರೂ, ಇತರ ಕೆಲವು ಮಂದಿಗಳೂ ಪ್ರಭುಗಳವರ ಪಕ್ಷವನ್ನು ವಹಿಸಿ ಹೋರಾಡತೊಡಗಿದರು. ಆತಂಕ ವಿಷಾದಗಳಿಗೆ ಕಾರಣವಾಗಿದ್ದ ಅಂತಹ ಸಮಯದಲ್ಲಿ ಕೂಡ ಪ್ರಭುಗಳವರ ಮನಸ್ಸು ಸಮತೆಗೆಡದೆ ಪ್ರಶಾಂತವಾಗಿದ್ದಿತು; ಅವರು ಸರ್ ಮಾರ್ಕ್ ಕಬ್ಬನ್‌ರವರ ಲೋಹ ಪ್ರತಿಮೆಯ ಸ್ಥಾಪನೆಗಾಗಿ ಹತ್ತು ಸಾವಿರ ರೂಪಾಯಿಗಳ ಸಹಾಯ ದ್ರವ್ಯವನ್ನು ಅನುಗ್ರಹಿಸಿದರು. ೧೮೬೫ನೆಯ ಇಸವಿಯಲ್ಲಿ ದತ್ತುಸ್ವೀಕಾರವು ನಡೆದಮೇಲೆ ಪ್ರಭುಗಳವರ ಪುತ್ರರಾದ ಶ್ರೀ ಚಾಮರಾಜೇಂದ್ರ ಒಡೆಯರವರು ಪಿತ್ರಾರ್ಜಿತವಾದ ಸ್ವತ್ತುಗಳಿಗೆ ಮಾತ್ರವೇ ಅಧಿಕಾರಿಗಳಾಗಬೇಕೇ ಹೊರತು ರಾಜ್ಯಾಧಿಕಾರಿಗಳಲ್ಲವೆಂಬ ತೀರ್ಮಾನವು ನಡೆದುದರಿಂದ ಪ್ರಭುಗಳಿಗೆ ಬಹಳ ವಿಷಾದವುಂಟಾಯಿತು. ಅವರು ತಮಗೆ ನ್ಯಾಯವು ದೊರೆಯಬೇಕೆಂದು ನಿರ್ಭಯವಾಗಿ ವಾದಿಸಿ ಮತ್ತೊಂದು ಪತ್ರವನ್ನು ವೈಸ್ರಾಯಿಯವರಿಗೆ ಬರೆದರು. ಮೈಸೂರು

ಸಂಸ್ಥಾನವನ್ನು ಹಿಂದಕ್ಕೆ ಕೊಡದೆ ಬ್ರಿಟಿಷ್ ಇಂಡಿಯಾಕ್ಕೆ ಸೇರಿಸಿ ಕೊಳ್ಳುವುದು ನಾಚಿಕೆಕೇಡೆಂದು ಸ್ವದೇಶ ವಿದೇಶಗಳ ಪತ್ರಿಕೆಗಳು ಪ್ರಕಟಿಸಿದುವು. ರಾವ್ ಸಾಹೇಬ್ ವಿಶ್ವನಾಥ ಮಾಂಡಲಿಕರು, ಲಾರ್ಡ್ ಮಾರ್ಲಿಯವರು ಮುಂತಾದ ಪ್ರಸಿದ್ಧ ಪುರುಷರು ಪ್ರಭುಗಳವರ ಪಕ್ಷ ವನ್ನು ಹಿಡಿದು ವಾದಿಸತೊಡಗಿದರು. ಬ್ರಿಟಿಷ್ ಸರ್ಕಾರದಲ್ಲಿ ಸಂಕುಚಿತ ಮನೋಧರ್ಮದ ಮಂತ್ರಿಮಂಡಲವು ಮುಕ್ತಾಯವಾಗಿ ಬೇರೆ ಮಂತ್ರಿ ಮಂಡಲವು ಏರ್ಪಟ್ಟುದರಿಂದಲೂ ಅನುಕೂಲವಾಯಿತು.

**ಫಲಪ್ರಾಪ್ತಿ**

ಕೊನೆಗೆ ಬ್ರಿಟಿಷ್ ಸರ್ಕಾರದವರು ಶ್ರೀ ಮುಮ್ಮಡಿ ಕೃಷ್ಣರಾಜ ಒಡೆಯರವರಿಗೆ ರಾಜ್ಯಾಡಳಿತವನ್ನೊಪ್ಪಿಸಬೇಕಾದುದಿಲ್ಲವೆಂದೂ, ಆದರೆ ಶ್ರೀ ಚಾಮರಾಜೇಂದ್ರ ಒಡೆಯರವರು ಪ್ರಾಪ್ತ ವಯಸ್ಕರಾದಮೇಲೆ ರಾಜ್ಯಭಾರವನ್ನು ಅವರಿಗೆ ಒಪ್ಪಿಸುವುದಾಗಿಯೂ, ಮುಂದೆ ಸಂಸ್ಥಾನದಿಂದ ಸಲ್ಲಬೇಕಾದ ಪೊಗದಿಯು ಇಪ್ಪತ್ತನಾಲ್ಕೂವರೆ ಲಕ್ಷ ರೂಪಾಯಿಗಳಿಗೆ ಪ್ರತಿಯಾಗಿ ಮೂವತ್ತೈದು ಲಕ್ಷ ರೂಪಾಯಿಗಳಾಗಿರಬೇಕೆಂದೂ ತೀರ್ಮಾ ನಿಸಿದರು. ರಾಜ್ಯಭಾರ ಸೂತ್ರಗಳು ಮತ್ತೆ ತಮ್ಮ ಕೈಗೆ ಬಾರದೆಹೋದು ದಕ್ಕಾಗಿ ಆಳಿದ ಶ್ರೀ ಮುಮ್ಮಡಿ ಕೃಷ್ಣರಾಜ ಒಡೆಯರವರು ವ್ಯಸನಾ ಕ್ರಾಂತರಾದರೂ ಮುಂದೆ ಅವು ತಮ್ಮ ಸ್ವೀಕೃತಪುತ್ರರಿಗಾದರೂ ಲಭಿಸು ವಂತಾಯಿತಲ್ಲಾ — ಎಂದು ಸಮಾಧಾನಮಾಡಿಕೊಂಡರು. ಆ ಬಳಿಕ ಸ್ವಲ್ಪ ಕಾಲದಲ್ಲಿ ಶ್ರೀ ಮುಮ್ಮಡಿ ಕೃಷ್ಣರಾಜ ಒಡೆಯರವರು (೧೮೬೮ನೆಯ ಇಸವಿ ಮಾರ್ಚಿ ೨೭ನೆಯ ತಾರೀಖಿನ ರಾತ್ರಿ ಹನ್ನೊಂದು ಘಂಟೆಯ ವೇಳೆಗೆ) ದಿವಂಗತರಾದರು. ಆಗ್ಗೆ ಅವರಿಗೆ ಎಪ್ಪತ್ತನಾಲ್ಕು ವರ್ಷ ವಯಸ್ಸು. ಉದಾರಿಗಳೂ, ಧರ್ಮಾಭಿಮಾನಿಗಳೂ, ವಿದ್ವತ್ಪಕ್ಷಪಾತಿಗಳೂ, ಪ್ರಜಾ ವತ್ಸಲರೂ ಆಗಿದ್ದ ಶ್ರೀ ಮುಮ್ಮಡಿ ಕೃಷ್ಣರಾಜ ಪ್ರಭುಗಳ ಮರಣದಿಂದ ಮೈಸೂರು ಸಂಸ್ಥಾನವೇ ಶೋಕದಲ್ಲಿ ಮುಳುಗಿತು; ತಾವು, "ಕೃಷ್ಣರಾಜ ಭೂಪ, ಬೀದೀಲೆಲ್ಲ ದೀಪ"* ಎಂದು ಮುಂತಾಗಿ ಹಾಡಿ ಕೊಂಡಾಡು ತ್ತಿದ್ದ ಪ್ರಭುಗಳನ್ನು ಇನ್ನು ಕಾಣುವಂತಿಲ್ಲದೆ ಹೋಯಿತಲ್ಲಾ — ಎಂದು ವಿಷಾದಿಸಿ ಪ್ರಜೆಗಳು ಸಂಕಟಪಟ್ಟರು.

* ಶ್ರೀ ಮುಮ್ಮಡಿ ಕೃಷ್ಣರಾಜ ಒಡೆಯರವರು ಬೀದಿ ಬೀದಿಗಳಿಗೂ ಪ್ರಕಾಶಮಾನವಾದ ದೀಪಗಳನ್ನಿಡಿಸಿದುದನ್ನು ಕಂಡು ಈ ರೀತಿ ಹಾಡನ್ನು ಕಟ್ಟಿ ಪ್ರಜೆಗಳು ಹಾಡುತ್ತಿದ್ದರಂತೆ. "ಕೃಷ್ಣರಾಜ ಭೂಪ, ಮನೆಗೆಲ್ಲ ದೀಪ" ಎಂಬ ಹೇಳಿಕೆಯೊಂದೂ ಆಗಿನ ಕಾಲದಲ್ಲಿದ್ದಂತೆ ತೋರುತ್ತದೆ.

ಇಂಡಿಯಾ ಸರ್ಕಾರದವರ ಅಪೇಕ್ಷೆಯಂತೆ ಶ್ರೀ ಚಾಮರಾಜೇಂದ್ರ ಒಡೆಯರವರ ವಿದ್ಯಾಭ್ಯಾಸಕ್ಕೆ ತಕ್ಕ ಏರ್ಪಾಡುಗಳು ನಡೆದುವು. ಅವರಿಗೆ ಹದಿನಾರು ವರ್ಷ ವಯಸ್ಸಾದ ತರುವಾಯ ಶ್ರೀ ವಾಣೀವಿಲಾಸ ಸನ್ನಿಧಾನ ಶ್ರೀ ಕೆಂಪನಂಜಮ್ಮಣ್ಣಿಯವರೊಡನೆ ವಿವಾಹವು ಬಳೆಯಿತು. ವಿವಾಹ ಮಹೋತ್ಸವದ ಆ ಶುಭ ಸಮಯದಲ್ಲಿ ಸುವೃಷ್ಟಿಯಾಗಿ ಅನಾವೃಷ್ಟಿಯ ದೆಸೆಯಿಂದ ಕಂದಿಹೋಗಿದ್ದ ಸಂಸ್ಥಾನಕ್ಕೆ ನವಚೈತನ್ಯವುಂಟಾಗಿ ಮಂಗಳದ ಸಿರಿಯು ಮೆರೆಯಿತು. ಹಿಂದೆಯೇ ಸೂಚಿತವಾಗಿರುವಂತೆ ೧೮೮೧ನೆಯ ಇಸವಿಯಲ್ಲಿ ರಾಜ್ಯಭಾರಸೂತ್ರಗಳು ಶ್ರೀ ಚಾಮರಾಜೇಂದ್ರ ಒಡೆಯರವರ ಕೈಸೇರಿದುವು.

**ಮಂಗಳ ಸಿರಿ**

ಆಳಿದ ಮಹಾಸ್ವಾಮಿಯವರಾದ ಶ್ರೀ ಚಾಮರಾಜೇಂದ್ರ ಒಡೆಯರವರು ರಾಜ್ಯಭಾರವನ್ನು ವಹಿಸಿದಾಗಿನ ವಿಷಮ ಸನ್ನಿವೇಶದಲ್ಲಿಯೂ ಅವರೂ ಅವರ ದಿವಾನರುಗಳೇ ಮುಂತಾದವರೂ ವಿಚಕ್ಷಣೆಯಿಂದ ರಾಜ್ಯಾಡಳಿತವನ್ನು ನಿರ್ವಹಿಸಿದುದರ ಪರಿಣಾಮವಾಗಿ ಕೇವಲ ಹದಿನಾಲ್ಕು ವರ್ಷಗಳ ಅಲ್ಪಾವಧಿಯಲ್ಲಿ ಮೈಸೂರು ಸಂಸ್ಥಾನವು ಮಾದರಿ ಸಂಸ್ಥಾನವೆಂದು ಪ್ರಖ್ಯಾತವಾಯಿತು. ಆಗ್ಗೆ ಇತರ ಭಾರತೀಯ ಸಂಸ್ಥಾನಗಳಿದ್ದ ಪರಿಸ್ಥಿತಿಯನ್ನು ನೋಡಿದವರೆಲ್ಲರೂ ಮೈಸೂರು ಸಂಸ್ಥಾನದ ಮುನ್ನಡೆಯಿಂದ ಅಚ್ಚರಿಗೊಂಡು ಅದನ್ನು ಶ್ಲಾಘಿಸುವವರೇ ಆದರು. ಬ್ರಿಟಿಷ್ ಕಮಿಷನರುಗಳ ಆಡಳಿತವು (೧೮೩೧ರಿಂದ ೧೮೮೧ರ ವರೆಗೆ) ಐವತ್ತು ವರ್ಷಗಳ ಕಾಲ ನಡೆದು ಸಂಸ್ಥಾನದಲ್ಲಿ ಸರ್ಕಾರದ ಶಿಸ್ತು ಸುಸಜ್ಜಿತ ರೂಪಕ್ಕೆ ಬಂದು ಪರಮೋಪಕಾರವಾಗಿದ್ದುದೇನೋ ನಿಜ. ಆದರೆ ದುರ್ದೈವ ವಶದಿಂದ ೧೮೭೬, ೧೮೭೭, ೧೮೭೮ — ಈ ಮೂರು ಸಂವತ್ಸರಗಳಲ್ಲಿ ಅಭೂತಪೂರ್ವವಾದ ಘೋರ ಕ್ಷಾಮವು ಸಂಭವಿಸಿದ್ದ ಕಾರಣ, ೧೦,೫೦,೦೦೦ ಮಂದಿಗಳು (ಎಂದರೆ, ಸಂಸ್ಥಾನದಲ್ಲಿಯ ಆಗಿನ ಜನಸಂಖ್ಯೆಯಲ್ಲಿ ನಾಲ್ಕರಲ್ಲೊಂದು ಭಾಗದ ಜನರು) ಮೃತರಾಗಿದ್ದರು; ಒಟ್ಟು ಹತ್ತು ಕೋಟಿ ರೂಪಾಯಿಗಳ ಸ್ವತ್ತುಗಳು ನಷ್ಟವಾಗಿದ್ದವು. ಭಂಡಾರದಲ್ಲಿ ಶೇಖರವಾಗಿದ್ದ ಸುಮಾರು ಒಂದು ಕೋಟಿ ರೂಪಾಯಿಗಳಷ್ಟು ಧನವೂ ಕ್ಷಾಮಪೀಡಿತರ ಸಹಾಯಕ್ಕಾಗಿ ವಿನಿಯೋಗವಾಗಿದ್ದುದಲ್ಲದೆ, ಬ್ರಿಟಿಷ್ ಸರ್ಕಾರದಲ್ಲಿ ೮೦ ಲಕ್ಷ ರೂಪಾಯಿಗಳ ಸಾಲವೂ ಆಗಿದ್ದಿತು. ನಾನಾ ಬಾಬುಗಳ ವರಮಾನಗಳೂ ಇಳಿದುಹೋಗಿದ್ದುವು. ಹೊಗದಿಯ

**ಆಗಿನ ಸನ್ನಿವೇಶ**

ಹಣದ ಭಾರವು ವರ್ಷಕ್ಕೆ ಹತ್ತೂವರೆ ಲಕ್ಷ ರೂಪಾಯಿಗಳಷ್ಟು ಅಧಿಕ ವಾಗಿದ್ದಿತು. ಆದರೆ ಇಂಡಿಯಾ ಸರ್ಕಾರದವರು ಮೈಸೂರು ಸಂಸ್ಥಾನ ದಲ್ಲಿ ಒದಗಿದ್ದ ಕಷ್ಟಗಳನ್ನು ಮನಗಂಡು ೧೮೯೬ನೆಯ ಇಸವಿಯವರೆಗೂ ಆ ಹೆಚ್ಚಿಗೆ ಮೊತ್ತವನ್ನು ಕೊಡಬೇಕಾದುದಿಲ್ಲವೆಂದು ಸಮ್ಮತಿಸಿದರು. ನಿಷ್ಪಕ್ಷಪಾತದೃಷ್ಟಿಯಿಂದ ನಿಜವನ್ನು ನುಡಿಯುತ್ತಿದ್ದ ಯೂರೋಪಿಯನ್ ದೊಡ್ಡಮನುಷ್ಯರು ಕೆಲವರಿದ್ದರಾದರೂ, ಬಹು ಮಂದಿ ಯೂರೋಪಿ ಯನ್ನರಿಗೆ ರಾಜ್ಯಭಾರವು ಶ್ರೀ ಚಾಮರಾಜೇಂದ್ರ ಒಡೆಯರವರಿಗೆ ಸಮರ್ಪಿತವಾದುದೇ ಇಷ್ಟವಿರಲಿಲ್ಲ. ಅದನ್ನು ಬಹಳ ಚೆನ್ನಾಗಿ ವ್ಯಕ್ತ ಗೊಳಿಸುವ ನಿದರ್ಶನವೊಂದನ್ನೂ ಇಲ್ಲಿ ಸೂಚಿಸಬಹುದಾಗಿದೆ: ಶ್ರೀ ಚಾಮರಾಜೇಂದ್ರ ಒಡೆಯರು ರಾಜ್ಯಭಾರಸೂತ್ರಗಳನ್ನು ಸ್ವೀಕರಿಸಿದ ಪ್ರಾರಂಭದಲ್ಲಿ ಒಂದು ದಿನ, ದಿವಾನ್‌ರೊಡನೆಯೂ ದರ್ಬಾರು ಬಕ್ಷಿಯವ ರೊಡನೆಯೂ ಮತ್ತು ಒಬ್ಬರು ಯೂರೋಪಿಯನ್ ದೊಡ್ಡಮನುಷ್ಯ ರೊಡನೆಯೂ "ವಿಕ್ಟೋರಿಯಾ" ಬಂಡಿಯಲ್ಲಿ ಕುಳಿತು ಚಿತ್ತೈಸುತ್ತಿದ್ದರು. ಪ್ರಕೃತಿ ಸೌಂದರ್ಯದ ದೃಶ್ಯವೈಖರಿಗೆ ಮನಸೋತು, ತಂಗಾಳಿಯ ಸೊಬಗಿಗೆ ಹೃದಯವನ್ನು ಸೂರೆಗೊಟ್ಟು, ಸ್ವಂತ ಜನಾಂಗದ ಅಭ್ಯುದಯ ದೃಷ್ಟಿಯ ಸಮಾಲೋಚನೆಯ ಆವೇಶಭರದಲ್ಲಿ ಮೈಮರೆತು ಆ ಯೂರೋಪಿಯನ್ ದೊಡ್ಡಮನುಷ್ಯರು, "ಸಾಧನ ಸಂಪತ್ತುಗಳಿಂದ ತುಂಬಿ ಜಗಜಗಿಸುತ್ತಿರುವ ಇಂತಹ ಮೈಸೂರು ಸಂಸ್ಥಾನವನ್ನು ದೇಶೀ ಯರ ಆಡಳಿತಕ್ಕೆ ಬಿಟ್ಟುಕೊಟ್ಟ ಬ್ರಿಟಿಷ್ ರಾಜನೀತಿಕೋವಿದರೆಷ್ಟು ಪೆದ್ದರು"* ಎಂದು ಗಟ್ಟಿಯಾಗಿ ಹೇಳಿದರಂತೆ. ದಿವಾನ್‌ರವರೂ ದರ್ಬಾರು ಬಕ್ಷಿಯವರೂ ಅತಿ ಕಷ್ಟದಿಂದ ನಗುವನ್ನು ತಡೆದು ಕೊಂಡರಂತೆ. ಮಂದಸ್ಮಿತವದನರಾಗಿ ಒಂದು ಪಾರ್ಶ್ವಕ್ಕೆ ಮುಖವನ್ನು ಶ್ರೀ ಚಾಮರಾಜೇಂದ್ರ ಒಡೆಯರವರು ತಿರುಗಿಸಿ ಅನ್ಯಾಕ್ರಾಂತಚಿತ್ತ ರಾಗಿದ್ದಂತೆ ನಟಿಸಿದರಂತೆ. ಪ್ರಭುಸನ್ನಿಧಿಯಲ್ಲಿದ್ದುದನ್ನೂ ಮರೆತು ಗಟ್ಟಿಯಾಗಿ ಆ ರೀತಿ ಮಾತನಾಡಿದ ಆ ಯೂರೋಪಿಯನ್ ದೊಡ್ಡ ಮನುಷ್ಯರ ತೊಡೆಯನ್ನು ಚಿವುಟಿ ದರ್ಬಾರು ಬಕ್ಷಿಯವರು ಅವರನ್ನು ಎಚ್ಚರಿಸಿದರಂತೆ. ಕಾರ್ಯದಕ್ಷತೆಯಿಂದಲೂ ವಿಚಕ್ಷಣೆಯಿಂದಲೂ ರಾಜ್ಯಭಾರಮಾಡಿ ಪ್ರಜಾಹಿತವನ್ನು ಸಾಧಿಸುವುದು ಭಾರತೀಯರಾದ

---

*"What fools, these British Statesmen to hand over to Native rule such a prosperous rattling country like Mysore!" —*Revised Memories.*

ಪ್ರಭುಗಳಿಗೆ ಸಾಧ್ಯವೆ— ಎಂದು ಕೂಡ ಅನೇಕ ಮಂದಿ ಯುರೋಪಿಯನ್ ದೊಡ್ಡ ಮನುಷ್ಯರಿಗೆ ಸಂದೇಹವಿದ್ದಿತು. ಅದರಮೇಲೋ, ಭಾರಿ ಭಾರಿ ಹುದ್ದೆಗಳನ್ನಲಂಕರಿಸಿ ಆಡಳಿತವನ್ನು ನಿರ್ವಹಿಸುತ್ತಿದ್ದ ಸಮರ್ಥರಾದ ಬ್ರಿಟಿಷ್ ಅಧಿಕಾರಿಗಳಿಗೆ ಸರಿದೂಗುವಷ್ಟು ಶಕ್ತರಾದ ಭಾರತೀಯರನ್ನು ಅವಕ್ಕೆ ನೇಮಕಮಾಡಬೇಕಾದ ಸುಲಭಸಾಧ್ಯವಲ್ಲದ ಕಾರ್ಯವೂ ಇದ್ದಿತು. ಎಲ್ಲಕ್ಕೂ ಮಿಗಿಲಾಗಿ, ದ್ರವ್ಯಾನುಕೂಲತೆಯು ಬಹಳ ಕಡಮೆಯಾಗಿದ್ದ ಆಗಿನ ಸಮಯದಲ್ಲಿ ರಾಜಾಸ್ಥಾನದ ಅಟ್ಟಹಾಸವನ್ನೂ ವಿಜೃಂಭಣೆಯನ್ನೂ ಹಿಂದಿನಂತೆಯೇ ನಡೆಯಿಸಿಕೊಂಡುಬರಬೇಕಾಗಿದ್ದ ಆವಶ್ಯಕತೆಯೂ ಇದ್ದಿತು.

ಆ ಬಗೆಯ ವಿಷಮಪರಿಸ್ಥಿತಿಯಲ್ಲಿ ಶ್ರೀಮನ್ಮಹಾರಾಜ ಶ್ರೀ ಚಾಮರಾಜೇಂದ್ರ ಒಡೆಯರ್ ಬಹದ್ದೂರರವರು ರಾಜ್ಯಾಡಳಿತ ನಿರ್ವಹಣದ ಗುರುತರವಾದ ಕಾರ್ಯಭಾರವನ್ನು ವಹಿಸಿದರು. ಅವರು ಅದೇ ವರ್ಷವೇ ಪ್ರಜಾಪ್ರತಿನಿಧಿ ಸಭೆಯನ್ನೂ ಬಾಲಿಕಾ ಪಾಠಶಾಲೆಯನ್ನೂ ಸ್ಥಾಪಿಸಿದುದನ್ನು ಹಿಂದೆಯೇ ಸೂಚಿಸಲಾಗಿದೆ. ಅವೆರಡು ಮಹತ್ತರ ಕಾರ್ಯಗಳ ಜೊತೆಗೆ ಅನೇಕ ಹೊಸಹೊಸ ಇಲಾಖೆಗಳನ್ನೇರ್ಪಡಿಸಿದುದರಿಂದಲೂ, ಬಾಲ್ಯವಿವಾಹ ನಿಷೇಧ ಮುಂತಾದ ಸಾಮಾಜಿಕ ವಿಚಾರಗಳಲ್ಲಿ ಕಾನೂನುಗಳನ್ನು ಮಾಡಿದುದರಿಂದಲೂ, ಇತರ ಅಭಿವೃದ್ಧಿ ಕಾರ್ಯಗಳನ್ನಾಚರಿಸಿದುದರಿಂದಲೂ, ಮಹಾಪ್ರಭುಗಳವರ ಕೀರ್ತಿಯು ದಿನದಿನವೂ ಅಧಿಕವಾಗಲುಪಕ್ರಮಿಸಿತು. ಅವರ ರಾಜ್ಯಭಾರವು ಉಪಕ್ರಮವಾದ ನಾಲ್ಕೇ ವರ್ಷಗಳಲ್ಲಿ ನಡೆದ ಅಭ್ಯುದಯಸಾಧನೆಯನ್ನು ಕಂಡು, ಭಾರತೀಯರೂ ಬ್ರಿಟಿಷರೂ ಬೆರಗಾದರು. ಆಡಳಿತ ನಿರ್ವಹಣಕೋವಿದರಾದ ಬ್ರಿಟಿಷ್ ಅಧಿಕಾರಿಯವರೊಬ್ಬರು ಮಹಾಪ್ರಭುಗಳ ರಾಜ್ಯಭಾರವು ಉಪಕ್ರಮವಾದ ಬಳಿಕ ನಾಲ್ಕು ವರ್ಷಗಳಾದಮೇಲೆ ಪತ್ರಿಕೆಗೆ ಬರೆದ ಲೇಖನದಲ್ಲಿ, ಸರಳಸುಂದರವಾಗಿದ್ದ ಅವರ ನಡೆನುಡಿಗಳು ಅವರ ಶಿಕ್ಷಣಕ್ಕೆ ಗೌರವ ತರುವಂತಿದ್ದುದನ್ನೂ, ಅವರ ರಾಜ್ಯಭಾರದ ಆರಂಭದಲ್ಲೇ ನಡೆದ ಮಹತ್ತರವಾದ ಕಾರ್ಯಸಾಧನೆಯನ್ನೂ ಕೊಂಡಾಡಿ ಕೊನೆಗೆ, "ಮಹಾಸ್ವಾಮಿಯವರು ರಾಜ್ಯಭಾರಮಾಡುತ್ತಿರುವ ಸಂಸ್ಥಾನವು ಸೊಗಸಾಗಿದೆ. ಮತ್ತೆ ಪುರೋಭಿವೃದ್ಧಿಸಾಧನೆ ಮಾಡುವ ಸುಯೋಗವು ಅವರದಾಗುವ ಪಕ್ಷಕ್ಕೆ, ಶಕ್ತರಾದವರು ಕಾರ್ಯಭಾರವನ್ನು ವಹಿಸಿದಾಗ್ಗೆ

**ಶ್ರೀ ಚಾಮರಾಜೇಂದ್ರ ಒಡೆಯರವರ ರಾಜ್ಯಭಾರ ಕೌಶಲ್ಯ**

ಭಾರತೀಯರ ಆಡಳಿತವು ಇಂಗ್ಲಿಷರ ಆಡಳಿತಕ್ಕೆ ಸರಿದೂಗಬಲ್ಲುದೆಂಬು ದನ್ನು ಅವರು ದೃಢಪಡಿಸಿಕೊಡುವುದು ಖಂಡಿತ"* ಎಂದು ಬರೆದಿದ್ದರು. ದಿವಾನ್ ಹುದ್ದೆಯನ್ನಲಂಕರಿಸಿದ್ದ ಸರ್ ಕೆ. ಶೇಷಾದ್ರಿ ಐಯರವರ ಆಪ್ತ ಮಿತ್ರರೊಬ್ಬರು ಮತ್ತೊಂದು ಸಂಸ್ಥಾನದ ಮಹಾರಾಜರ ವಿಚಾರವನ್ನು ಪ್ರಸ್ತಾಪಿಸಿ, "ಅವರ ಸಂಸ್ಥಾನದಲ್ಲಾಗಲಿ ಅಥವಾ ಇತರ ಮತ್ತಾವು ದಾದರೂ ಸಂಸ್ಥಾನದಲ್ಲಾಗಲಿ ನಿಮಗೆ ದಿವಾನ್ ಪದವಿ ದೊರೆತಿದ್ದರೊ?" ಎಂದು ಕೇಳಿದರು. ಆಗ ಅವರು ಗಹಗಹಿಸಿ ನಕ್ಕು, "ಅಲ್ಲಿ ಮೂರೇ ಮೂರು ತಿಂಗಳು ಕೆಲಸಮಾಡುವುದೂ ಸಾಧ್ಯವಾಗುತ್ತಿರಲಿಲ್ಲ. ಮೈಸೂರು ಸಂಸ್ಥಾನವೆಲ್ಲಿ, ಅದೆಲ್ಲಿ? ಮೈಸೂರು ಸಂಸ್ಥಾನದಲ್ಲಿ ಮಾತ್ರವೇ— ಇಲ್ಲಿಯ ಪ್ರಭುಗಳ ಆದರ ಪ್ರೋತ್ಸಾಹಗಳ ಮತ್ತು ಕಾರ್ಯದಕ್ಷತೆಯ ಶ್ರೇಷ್ಠ ಸನ್ನಿವೇಶದಿಂದ ಮಾತ್ರವೇ— ನಾನು ಇಷ್ಟು ಮಟ್ಟಿಗೆ ಕೆಲಸ ಮಾಡುವುದು ಸಾಧ್ಯವಾಯಿತು" ಎಂದರು. ಆಳಿದ ಮಹಾಸ್ವಾಮಿ ಯವರ ರಾಜ್ಯಭಾರ ಕೌಶಲ್ಯವೆಷ್ಟು ಶ್ರೇಷ್ಠವಾಗಿದ್ದಿತೆಂಬುದಕ್ಕೆ ಈ ಇಬ್ಬರು ಮಹನೀಯರ ವಾಣಿಗಳಿಗಿಂತ ಹೆಚ್ಚಿನ ಸಾಕ್ಷ್ಯವಾವುದೂ ಬೇಡ. ಶ್ರೀ ಚಾಮರಾಜೇಂದ್ರ ಒಡೆಯರವರು ಆಡಳಿತವಿಧಾನ ದಲ್ಲೊಂದು ದೊಡ್ಡ ಸುಧಾರಣೆಯಾಗಿ ಒಂದು ಮಂತ್ರಾಲೋಚನಾ ಸಭೆಯನ್ನೇರ್ಪಡಿಸಿಕೊಂಡು, ಅದರ ಸಲಹೆಗಳನ್ನು ಲಾಲಿಸಿ ಪ್ರಭುತ್ವ ಮಾಡಲು ಪ್ರಾರಂಭಿಸಿದರು. ದಿವಾನ್ ರಂಗಾಚಾರ್ಯರವರು ಅದರ ಅಧ್ಯಕ್ಷರಾಗಿಯೂ, ನ್ಯಾಯಾಧಿಪತಿಗಳಾಗಿದ್ದ ಶ್ರೀಮಾನ್ ಟಿ. ಆರ್. ಎ. ತಂಬೂಚೆಟ್ಟಿಯವರು ಅದರ ಸದಸ್ಯರಾಗಿಯೂ ನೇಮಕ ವಾದರು. ಅವರ ಜೊತೆಗೆ ಶ್ರೀಮಾನ್ ಪೂರ್ಣ ಕೃಷ್ಣರಾಯರು ಮತ್ತು ಶ್ರೀಮಾನ್ ರತ್ನಸಭಾಪತಿ ಮೊದಲಿಯಾರರು ಅದರ ಸದಸ್ಯರಾಗಿ ನೇಮಕವಾದರು. ಮಂತ್ರಾಲೋಚನಾ ಸಭೆಯವರು ಕಾನೂನು, ತೆರಿಗೆಗಳು ಮತ್ತು ಇತರ ಮುಖ್ಯ ಮುಖ್ಯ ವಿಚಾರಗಳ ಸಂಬಂಧವಾಗಿ ಪ್ರಭುಗಳಿಗೆ ಸಲಹೆ ಹೇಳಬೇಕೆಂದು ಗೊತ್ತಾಯಿತು. ಅರಮನೆಯ ವೆಚ್ಚಗಳಿಗಾಗಿ ಪ್ರತಿ ವರ್ಷವೂ ಖಾಸಾಭಂಡಾರಕ್ಕೆ (ಸಂಸ್ಥಾನದ ಸರಾಸರಿ ಹುಟ್ಟುವಳಿಯಲ್ಲಿ ಐದನೆಯ ಒಂದು ಭಾಗದ ಮೊತ್ತವೆಂಬ ನಿಯಮದಮೇಲೆ) ಹದಿಮೂರು ಲಕ್ಷ ರೂಪಾಯಿಗಳು ಸಲ್ಲಬೇಕೆಂದು

---

* "In his personal life the Maharajah does credit to the careful training which he received. ..He has a fine Province to rule over, and should it be his good fortune to bring it again to a state of prosperity, he will do much to establish the fact that in good hands native government can compare well with English administration."

ತೀರ್ಮಾನವಾಯಿತು. ಆದರೆ ೧೮೮೧ನೆಯ ಇಸವಿಯಲ್ಲಿ ಒದಗಿದ್ದ ಕಷ್ಟದಾಯಕವಾದ ಪರಿಸ್ಥಿತಿಯನ್ನು ಶ್ರೀ ಚಾಮರಾಜೇಂದ್ರ ಒಡೆಯರವರು ತಮ್ಮ ಚಿತ್ತಕ್ಕೆ ತಂದುಕೊಂಡು, ಆಗಿನಿಂದ ಐದು ವರ್ಷಗಳ ಕಾಲ ಪ್ರತಿ ವರ್ಷವೂ ಹತ್ತು ಲಕ್ಷ ರೂಪಾಯಿಗಳನ್ನು ಮಾತ್ರವೇ ಸ್ವೀಕರಿಸುವುದಾಗಿ ಸಮ್ಮತಿಸಿ ಕೃಪೆತೋರಿದರು. ಅವರು ಮೇಧಾವಿಶ್ರೇಷ್ಠರೂ ಕಾರ್ಯದಕ್ಷರೂ ಆಗಿದ್ದ ಮಹಾಶಯರುಗಳನ್ನೇ ದೊಡ್ಡ ದೊಡ್ಡ ಹುದ್ದೆಗಳಿಗೆ ನೇಮಿಸಿದ್ದರು. ಮೊದಲು ಶ್ರೀಮಾನ್ ರಂಗಾಚಾರ್ಯರೂ, ಅವರ ಮರಣಾನಂತರ ಶ್ರೀಮಾನ್ ಶೇಷಾದ್ರಿ ಐಯರವರೂ ದಿವಾನ್ ಪದವಿಗೆ ನೇಮಕವಾದುದು ಮೈಸೂರು ಸಂಸ್ಥಾನದ ಸುಯೋಗ. ಅವರಷ್ಟು ಮಟ್ಟಿಗೆ ರಾಜ್ಯಾಡಳಿತ ನಿಪುಣರಾದ ಭಾರತೀಯರ ಸಂಖ್ಯೆಯು ಆಗ ತೀರ ಕಡಮೆಯಾಗಿದ್ದಿತೆಂದು ಧಾರಾಳವಾಗಿ ಹೇಳಬಹುದು.

ಶ್ರೀಮಾನ್ ರಂಗಾಚಾರ್ಯರವರ ದೇಶಾಭಿಮಾನವೂ ರಾಜನಿಷ್ಠೆಯೂ ಸ್ತುತ್ಯವಾಗಿದ್ದುವು. ಅವರು ಕೊನೆಯಸಾರಿ ರೋಗಗ್ರಸ್ತರಾಗಿ ತಮಗೆ ರೋಗವು ಗುಣವಾಗುವಂತಿರಲಿಲ್ಲವೆಂದು ತೋರಿದಾಗ, ತಮ್ಮ ಅವಸಾನ ಕಾಲವು ಸಮೀಪಿಸಿದ್ದುದಕ್ಕಾಗಲಿ ಅಥವಾ ತಮ್ಮ ಪತ್ನೀಪುತ್ರರು ಅನಾಥರಾಗುವಂತಿದ್ದುದಕ್ಕಾಗಲಿ ದುಃಖಿಸದೆ ತಮ್ಮಲ್ಲಿ ಪೂರ್ಣವಿಶ್ವಾಸವನ್ನಿಟ್ಟುಕೊಂಡಿದ್ದು ಕೃಪೆತೋರಿದ್ದ ಪ್ರಭುವರ್ಯರಿಗೆ ತಾವು ಉದ್ದೇಶಿಸಿದ್ದಷ್ಟು ಮಟ್ಟಿಗೂ ಸೇವೆಯನ್ನು ಸಮರ್ಪಿಸುವುದಕ್ಕಿಲ್ಲದೆ ಹೋಯಿತೆಂದು ವಿಷಾದಿಸಿದರು.

**ದಿವಾನ್ ರಂಗಾಚಾರ್ಯರು**

ಶ್ರೀಮಾನ್ ರಂಗಾಚಾರ್ಯರವರು ಅರಮನೆಯ ಕಂಟ್ರೋಲರವರಾಗಿದ್ದಾಗ, ಅರಮನೆಯಲ್ಲಿ ನಡೆಯುತ್ತಿದ್ದ ಅನವಶ್ಯವಾದ ವೆಚ್ಚವನ್ನೆಲ್ಲ ತಪ್ಪಿಸಿ ಅಲ್ಲಿಯ ಆಡಳಿತವು ಶಿಸ್ತಿನಿಂದ ನಡೆಯುವಂತೆ ಏರ್ಪಡಿಸಿದ್ದರು. ದಿವಾನ್ ಪದವಿಗೆ ಬಂದಮೇಲೆ, ಅವರು ಕೇವಲ ಒಂದು ವರ್ಷ ಹತ್ತು ತಿಂಗಳುಗಳ ಕಾಲ ಮಾತ್ರವೇ ಜೀವಿಸಿದ್ದರು. ಆ ಅಲ್ಪಾವಧಿಯಲ್ಲಿ ಅವರು ಸಾಧಿಸಿದ ಮಹತ್ತರ ಕಾರ್ಯಗಳು ವಿಸ್ಮಯಜನಕವಾಗಿವೆ. ಮುಂದೆ ಕ್ಷಾಮ ಸಂಭವಿಸಿದ ಪಕ್ಷದಲ್ಲಿ ಇತರ ಪ್ರದೇಶಗಳಿಂದ ಆಹಾರ ವಸ್ತುಗಳನ್ನು ತರಿಸಿ ಸ್ಥಳದಿಂದ ಸ್ಥಳಕ್ಕೆ ಸಾಗಿಸಲನುಕೂಲಿಸುವಂತೆ ೧೮೮೨ನೆಯ ಇಸವಿ ಫೆಬ್ರುವರಿ ತಿಂಗಳಿನವೇಳೆಗೇ ಬೆಂಗಳೂರಿನಿಂದ ಮೈಸೂರಿನವರೆಗೆ ರೈಲುಹಾಕಿಸಿ, ಬೆಂಗಳೂರಿನಿಂದ ತಿಪಟೂರಿನವರೆಗೆ ರೈಲುಹಾಕಿಸಲು ಅದೇ ವರ್ಷ ಇಪ್ಪತ್ತು ಲಕ್ಷ ರೂಪಾಯಿಗಳ ಸರ್ಕಾರಿ

ಸಾಲವನ್ನೇರ್ಪಡಿಸಿದುದು ಅವುಗಳಲ್ಲೊಂದು. ಆಗ್ಗೆ ನಾಲ್ಕು ವರ್ಷಗಳಿಗೆ ಹಿಂದೆ ಸಂಭವಿಸಿದ್ದ ಧಾತು ಈಶ್ವರ ಸಂವತ್ಸರಗಳ ಘೋರ ಕ್ಷಾಮದಲ್ಲಿ ಸ್ಥಳದಿಂದ ಸ್ಥಳಕ್ಕೆ ಧಾನ್ಯಗಳನ್ನು ಸಾಗಿಸಲು ರೈಲ್ವೆ ಸೌಕರ್ಯವಿಲ್ಲದಿದ್ದ ಕಾರಣದಿಂದಲೇ ಮರಣ ಸಂಖ್ಯೆಯು ಮಿತಿಮೀರಿ ಹೆಚ್ಚಾಗಿದ್ದುದು. ೧೮೮೧ನೆಯ ಇಸವಿ ಅಕ್ಟೋಬರು ೭ನೆಯ ತಾರೀಖಿನ ದಿನ, ಪ್ರಜಾಪ್ರತಿನಿಧಿಯ ಮೊಟ್ಟಮೊದಲನೆಯ ಅಧಿವೇಶನದ ಭಾಷಣದಲ್ಲಿ ದಿವಾನ್ ರಂಗಾಚಾರ್ಯರು, "ಪ್ರಜೆಗಳ ಬಳಕೆಗೆ ಸಾಕಾಗುವಷ್ಟಕ್ಕಿಂತಲೂ ಹೆಚ್ಚಾಗಿ ಆಹಾರವಸ್ತುಗಳನ್ನು ಬೆಳೆದಲ್ಲದೆ, ಸಂಸ್ಥಾನದ ಅಭ್ಯುದಯ ಸಾಧನೆಗೆ ಪೂರ್ಣಾವಕಾಶವಿರದೆಂಬ ಸತ್ಯವಾದ ಅಂಶವನ್ನೂ ನಿಮ್ಮ ಗಮನಕ್ಕೆ ತರಬೇಕಾಗಿದೆ. ನಮ್ಮ ಸಂಸ್ಥಾನದ ರೈತರು ತಮ್ಮ ಅಹನ್ಯಹನಿ ಕಾಲಕ್ಷೇಪಕ್ಕೂ ಸಾಕಾಗದಷ್ಟು ಧಾನ್ಯಗಳನ್ನು ಬೆಳೆದು ತೃಪ್ತರಾಗುತ್ತಿರುವವರೆಗೂ, ಕ್ಷಾಮಡಾಮರಗಳು ಸಂಭವಿಸಿದೊಡನೆಯೇ ಅವರು ವಿಪತ್ತಿಗೊಳಗಾಗುವುದು ತಪ್ಪುವಂತೆಯೇ ಇಲ್ಲ" ಎಂದು ಹೇಳಿದ್ದಾರೆ. ಅದರ ಮೂರನೆಯ ವರ್ಷದ ಅಧಿವೇಶನದ ಭಾಷಣದಲ್ಲಿರುವ ಮಾತುಗಳಿವು: "ಪ್ರಪಂಚದ ಇತರ ದೇಶಗಳ ಜನರೆಲ್ಲರೂ ಆಶ್ಚರ್ಯಕರವಾದ ರೀತಿಯಲ್ಲಿ ಮುಂದುವರಿಯುತ್ತಿರುವಾಗ ಭರತಖಂಡದ ಇಪ್ಪತ್ತು ಕೋಟಿ ಜನರೂ ಎರಡು ಸಾವಿರ ವರ್ಷಗಳ ಹಿಂದಿದ್ದ ತಮ್ಮ ಪೂರ್ವಿಕರ ಸಂಪ್ರದಾಯಗಳನ್ನೇ ಅನುಸರಿಸಿಕೊಂಡು ಕಾರ್ಪಣ್ಯದಿಂದ ಹೊಟ್ಟೆ ಹೊರೆಯುತ್ತ, ಕ್ಷಾಮವೋ ರೋಗಾದಿಗಳೋ ಸಂಭವಿಸಿದ ಮರುಕ್ಷಣದಲ್ಲೇ ಪ್ರಾಣವನ್ನೊಪ್ಪಿಸಲು ಸಿದ್ಧರಾಗಿ ಹೀಗೆ ಇನ್ನು ಹೆಚ್ಚುಕಾಲ ನಿದ್ರಿಸುವುದು ಯುಕ್ತವಲ್ಲ. ಯಂತ್ರಚಾಲನ ಶಕ್ತಿಗಾಗಿ ನೀರಿನ ಆವಿಯನ್ನುಪಯೋಗಿಸಲು ಯೂರೋಪು ಖಂಡದವರು ಈ ಹತ್ತೊಂಬತ್ತನೆಯ ಶತಮಾನದ ಆದಿಭಾಗದಲ್ಲಿ ಮಾತ್ರವೇ ಪ್ರಾರಂಭಿಸಿದರು. ಆಗ ಭರತಖಂಡದಿಂದ ಇಂಗ್ಲೆಂಡಿಗೆ ಬಟ್ಟೆಗಳು ರಫ್ತಾಗುತ್ತಿದ್ದುವು. ಅದೇ ಇಂಗ್ಲೆಂಡ್ ದೇಶವೇ—ಯೂರೋಪಿನ ಇತರ ದೇಶಗಳಿಂದಲೂ ಅಮೇರಿಕಾ ಖಂಡದಿಂದಲೂ ಪ್ರಬಲವಾದ ಪೈಪೋಟಿಯಿದ್ದೂ ಸಹ—ಒಟ್ಟು ಪ್ರಪಂಚದ ಅಧಿಕ ಭಾಗಕ್ಕೇ ಬಟ್ಟೆಗಳನ್ನೂ ಇತರ ವಸ್ತುಗಳನ್ನೂ ಈಗ ಒದಗಿಸುತ್ತಿದೆ. ಯಾರೋ ಒಬ್ಬಿಬ್ಬರು ಸಂಶೋಧನ ನಡೆಯಿಸಿ ಭಾರಿ ಭಾರಿ ವಿಷಯಗಳನ್ನು ಕಂಡುಹಿಡಿದ ಫಲಿತಾಂಶವಾಗಿ ಮಾತ್ರವೇ ಇದಿಷ್ಟೂ ನಡೆದಿಲ್ಲ. ಅನೇಕ ಮಂದಿಗಳು ತಮ್ಮ ಬುದ್ಧಿಯನ್ನುಪಯೋಗಿಸಿ ಸಣ್ಣ ಪುಟ್ಟ ನೂತನ ವಿಚಾರಗಳನ್ನು ಕಂಡುಹಿಡಿದು ತಮ್ಮ ತಮ್ಮ

ವೃತ್ತಿಗಳಲ್ಲಿ ಕೆಲ ಕೆಲವು ಮೇಲಾಟುಗಳನ್ನು ಮಾಡಿಕೊಳ್ಳಲು ಪ್ರಯತ್ನಿಸಿದುದರ ಒಟ್ಟು ಫಲಿತಾಂಶವಾಗಿ ಇದಿಷ್ಟೂ ನಡೆದಿದೆ. ಅಸಂಖ್ಯಾತ ಮಂದಿಗಳು ಸೇರಿ ಹಾಗೆ ಪ್ರಯತ್ನಿಸಿದುದರ ಪರಿಣಾಮವಾಗಿ ಅದ್ಭುತ ರೀತಿಯಲ್ಲಿ ಸಂಪದಭ್ಯುದಯವಾಗಿ ಪ್ರಗತಿಸಾಧನೆಯು ಮುಂದುವರಿಯುತ್ತಿದೆ. ಭರತಖಂಡದ ಅಸಂಖ್ಯಾತ ಜನರೂ ಆ ಬಗೆಯ ಪುರೋಭಿವೃದ್ಧಿಯ ಪ್ರಯತ್ನಮಾಡಿದರೆ ಯಾವ ಮಹತ್ತರ ಕಾರ್ಯವನ್ನುತಾನೆ ಸಾಧಿಸಲಾಗದೆಹೋದೀತು ? ''

ವೆಚ್ಚವನ್ನು ಕಡಮೆಮಾಡುವ ಉದ್ದೇಶದಿಂದ ದಿವಾನ್ ರಂಗಾಚಾರ್ಯರವರು ಎರಡು ಡಿಸ್ಟ್ರಿಕ್ಟುಗಳನ್ನೂ, ಒಂಬತ್ತು ತಾಲ್ಲೂಕುಗಳನ್ನೂ, ಕೆಲವು ಸಬಾರ್ಡಿನೇಟ್ ಜಡ್ಜಿಗಳ ಕೋರ್ಟುಗಳನ್ನೂ ತೆಗೆದುಹಾಕಿದರು. ಮುಂದೆ ಅತ್ಯಾವಶ್ಯಕವೆಂದು ಕಂಡುಬಂದಾಗ ಮತ್ತೆ ಎಂಟು ಡಿಸ್ಟ್ರಿಕ್ಟುಗಳೇ ಯಥಾಪ್ರಕಾರ ಏರ್ಪಟ್ಟುವು. ಅವರು ಕಾರಾಗೃಹಗಳ ಸಂಖ್ಯೆಯನ್ನು ಒಂಬತ್ತರಿಂದ ಮೂರಕ್ಕೆ ತಗ್ಗಿಸಿದರು. ಅನೇಕ ಭಾರಿ ಭಾರಿ ಹುದ್ದೆಗಳನ್ನು ತೆಗೆದುಹಾಕಿ ಅವುಗಳ ಕರ್ತವ್ಯಗಳನ್ನು ಇತರ ಹುದ್ದೇದಾರರುಗಳೇ ನೆರವೇರಿಸುವಂತೆ ಹಂಚಿಹಾಕಿದರು. ಸಿಲೇದಾರಿ ರೆಜಿಮೆಂಟುಗಳ ಸಂಖ್ಯೆಯನ್ನು ಮೂರರಿಂದ ಎರಡಕ್ಕೆ ತಗ್ಗಿಸಿದರು. ಈ ಬಗೆಯ ಮಾರ್ಪಾಡುಗಳಿಂದ ಹಲವರಿಗೆ ಅಸಮಾಧಾನವಾಯಿತಾದರೂ ಒಟ್ಟಿನಲ್ಲಿ ಸಂಸ್ಥಾನಕ್ಕೆ ಒಳ್ಳೆಯದಾಯಿತು. ದಿವಾನ್ ರಂಗಾಚಾರ್ಯರವರು ಅಧಿಕಾರಿಗಳ ಆಲಸತನವನ್ನೂ, ಲಂಚ ಮುಂತಾದ ಅಕ್ರಮಗಳನ್ನೂ ಅಡಗಿಸಿ, ಭಾರತೀಯರಾದ ಅಧಿಕಾರಿಗಳು ಇಂಗ್ಲಿಷ್ ಅಧಿಕಾರಿಗಳಿಗೆ ಕಡಮೆಯಿಲ್ಲದೆ ಕಾರ್ಯವಿಚಕ್ಷಣೆಯನ್ನು ತೋರಿಸುವಂತೆ ಮಾಡಿದರು. ರಂಗಾಚಾರ್ಯರೆಂದರೆ ಅಧಿಕಾರಿಗಳಿಗೆ ಸಿಂಹಸ್ವಪ್ನ.

ತಮ್ಮ ಕಾರ್ಯದಕ್ಷತೆಯಿಂದಲೂ, ಸೌಶೀಲ್ಯದಿಂದಲೂ, ದಯಾರ್ದ್ರಹೃದಯದಿಂದಲೂ, ಸರ್ವರ ಗೌರವಕ್ಕೂ ಪಾತ್ರರಾಗಿದ್ದ ದಿವಾನ್ ರಂಗಾಚಾರ್ಯರವರು ೧೮೮೩ನೆಯ ಇಸವಿ ಜನವರಿ ತಿಂಗಳು ೨೦ನೆಯ ತಾರೀಖಿನ ದಿನ ದಿವಂಗತರಾದರು. ಆಗ್ಗೆ ಅವರಿಗೆ ಐವತ್ತೆರಡು ವರ್ಷ ವಯಸ್ಸು. ಅವರ ಮರಣದಿಂದ ಸಂತಪ್ತರಾದ ಪ್ರಭುಗಳವರು ಅವರ ಕುಟುಂಬದವರಿಗೆ ಒಂದು ಲಕ್ಷ ರೂಪಾಯಿಗಳನ್ನು ದಯಪಾಲಿಸಿದರು. ಅವರ ಸ್ಮಾರಕವಾಗಿ ಮೈಸೂರು ನಗರದಲ್ಲಿ ''ರಂಗಾಚಾರ್ಲು ಮೆಮೋರಿಯಲ್ ಹಾಲ್'' ಎಂಬ ಭವ್ಯ ಮಂದಿರವು ಮಹಾಜನರ ಚಂದಾ ಹಣಗಳಿಂದ ನಿರ್ಮಿತವಾಯಿತು. ಮೈಸೂರು ಸಂಸ್ಥಾನದ

ಅಭ್ಯುದಯ ಸಾಧನೆಗೂ ಸಾರ್ವಜನಿಕ ಕಾರ್ಯಕಲಾಪಗಳ ಪುರೋಭಿವೃದ್ಧಿಗೂ ಪ್ರಬಲವಾದ ಅಸ್ತಿಭಾರವನ್ನು ಹಾಕಿದವರೇ ಶ್ರೀಮಾನ್ ರಂಗಾಚಾರ್ಯರು.

ದಿವಾನ್ ರಂಗಾಚಾರ್ಯರು ಮೃತಪಡುವುದಕ್ಕೆ ಮುಂಚೆ, ಶ್ರೀಮಾನ್ ಕೆ. ಶೇಷಾದ್ರಿ ಐಯರವರನ್ನೇ ದಿವಾನ್ ಪದವಿಗೆ ನೇಮಿಸುವಂತೆ ಪ್ರಭುಗಳಿಗೆ ವಿಜ್ಞಾಪನಾ ಪತ್ರಿಕೆಯನ್ನು ಬರೆದುಕೊಂಡಿದ್ದರು. ಅವರ ಮರಣಾನಂತರ, ಆಗ್ಗೆ ಡೆಪ್ಯುಟಿ ಕಮಿಷನರ ಹುದ್ದೆಯಲ್ಲಿದ್ದ ಶ್ರೀಮಾನ್ ಕೆ. ಶೇಷಾದ್ರಿ ಐಯರವರೇ ದಿವಾನ್ ಪದವಿಗೆ ನೇಮಕನಾದರು.

ಶ್ರೀಮಾನ್ ಕೆ. ಶೇಷಾದ್ರಿ ಐಯರವರು ದಿವಾನ್ ಪದವಿಗೆ ನೇಮಕನಾದಾಗ ಅವರಿಗೆ ಮೂವತ್ತೆಂಟೇ ವರ್ಷ ವಯಸ್ಸು. ಅವರು ಪ್ರಚಂಡ

**ಶ್ರೀಮಾನ್ ಶೇಷಾದ್ರಿ ಐಯರವರು**

ಮೇಧಾವಿಗಳಾಗಿದ್ದುದು ನಿಜವಾದರೂ, ತಮಗಿಂತ ಹಿರಿಯರಾಗಿದ್ದ ಅಧಿಕಾರಿಗಳನ್ನೆಲ್ಲ ಬಿಟ್ಟು ಡೆಪ್ಯುಟಿ ಕಮಿಷನರವರಾಗಿದ್ದ ಚಿಕ್ಕವಯಸ್ಸಿನವರಾದ ತಮಗೆ ದಿವಾನ್ ಪದವಿಯನ್ನು ಪ್ರಭುಗಳವರು ಅನುಗ್ರಹಿಸಿದುದನ್ನು ಕಂಡು ಅವರಿಗೇ ಆಶ್ಚರ್ಯವಾಯಿತು. ಪ್ರಭುಗಳ ಪರಮಾನುಗ್ರಹಕ್ಕಾಗಿ ಅವರು ರಾಜ ಭಕ್ತಿವಿಶ್ವಾಸಗಳಿಂದ ಕೂಡಿದ್ದರಾದರೂ, ಮೂರು ವರ್ಷಗಳ ಅಥವಾ ಐದು ವರ್ಷಗಳ ಮೇಲೆ ದಿವಾನ್ ಹುದ್ದೆಯು ಮುಕ್ತಾಯವಾಗಿ "ಪೆನ್ಷನ್" ಪಡೆಯಲು ಹಕ್ಕೇ ಬರದೆ ಹೋದರೆ ತಮ್ಮ ಗತಿಯೇನೆಂದು ಆತಂಕಪಟ್ಟರು. ದಯಾಳುಗಳಾದ ಧರ್ಮ ಪ್ರಭುಗಳವರು ಅದನ್ನು ಕೇಳಿ ಅವರು ಆ ವಿಚಾರವನ್ನೆಲ್ಲ ತಮಗೇ ಬಿಟ್ಟು ನಿರಾತಂಕವಾಗಿ ಕೆಲಸಮಾಡಬಹುದೆಂದು ಅಭಯವನ್ನಿತ್ತರು. ಶ್ರೀಮಾನ್ ಶೇಷಾದ್ರಿ ಐಯರವರೆಷ್ಟು ಸಹೃದಯರಾದ ಸರಳಸ್ವಭಾವದವರಾಗಿದ್ದರೆಂಬುದನ್ನು ವಿಶದಪಡಿಸುವ ಎರಡು ಸಂಗತಿಗಳನ್ನು ಇಲ್ಲಿ ಸೂಚಿಸಬಹುದಾಗಿದೆ. ಅವರು ದಿವಾನ್ ಹುದ್ದೆಯನ್ನಲಂಕರಿಸಿದ ಮಾರನೆಯ ದಿನ ಹರ್ಷಚಿತ್ತರಾಗಿರದೆ, ಚಿಂತಾಕ್ರಾಂತರಾಗಿ ಮುಖವನ್ನು ಜೋಲು ಹಾಕಿಕೊಂಡಿದ್ದರಂತೆ. ಶ್ರೀಮಾನ್ ಅಂಬಿಲ್ ನರಸಿಂಹ ಐಯಂಗಾರ್ಯರವರು ಅದನ್ನು ಕಂಡು ಆಶ್ಚರ್ಯಚಕಿತರಾಗಿ, "ಅತ್ಯಪೂರ್ವವಾದ ಸೇವಾವಕಾಶವು ಲಭಿಸಿರುವ ಈ ಸಂತೋಷ ಸಮಯದಲ್ಲಿ ನೀಗೇಕೆ ವಿಷಾದ?" ಎಂದು ಕೇಳಿದರಂತೆ. ಆಗ ಶ್ರೀಮಾನ್ ಶೇಷಾದ್ರಿ ಐಯರವರು ನಿಟ್ಟುಸಿರುಬಿಟ್ಟು, ವಿಷಾದಪೂರಿತವಾದ ಧ್ವನಿಯಲ್ಲಿ,

"ನಿನ್ನೆಯವರೆಗೂ ನಾನೂ ನಿಮ್ಮಲ್ಲೊಬ್ಬನಾಗಿ ನಿಮ್ಮ ಜೊತೆಯವನಾಗಿದ್ದೆ. ನಾನು ನನ್ನ ಅಧಿಕಾರದ ಲಾಂಛನ ಮುಂತಾದುವುಗಳನ್ನು ಪಡೆದು ಅರಮನೆಯಿಂದ ಹಿಂತಿರುಗಿದಾಗ ನೀವುಗಳೆಲ್ಲರೂ ಬೇರೆ ನಿಂತಿರಿ. ನಿಮ್ಮಲ್ಲೊಬ್ಬರೂ ನನ್ನ ಬಳಿಗೇ ಬಾರದೆಹೋದಿರಿ. ನನಗೆ ಸಮಾನರಾದ ಸಂಗಡಿಗರಿಲ್ಲವಾಯಿತು. ಹೀಗೆ ಸಮಾನಸ್ಕಂಧರಾದ ಜೊತೆಯವರೇ ಇಲ್ಲದೆ ಏಕಾಕಿಯಾಗಿರುವ ವೈಭವವು ನನ್ನದಾಗಿರುವುದರಿಂದಲೂ, ಹೊಸ ಹುದ್ದೆಯ ಕರ್ತವ್ಯಗಳು ಗುರುತರವಾಗಿರುವುದರಿಂದಲೂ ವಿಷಾದವುಂಟಾಗಿದೆ. ಮಹಾಸ್ವಾಮಿಯವರ ವಿಶ್ವಾಸವನ್ನೂ, ಅವರ ಪ್ರಜೆಗಳ ಸೌಹಾರ್ದವನ್ನೂ, ನನ್ನ ಕೆಳಗಿನ ಅಧಿಕಾರಿಗಳ ಸೌಮನಸ್ಯವನ್ನೂ ಗಳಿಸಿ ಉಳಿಸಿಕೊಳ್ಳುವ ಬಗೆ ಹೇಗೆಂದು ಆತಂಕಪಡುತ್ತಿದ್ದೇನೆ" ಎಂದರು. ಅದಕ್ಕೆ ಶ್ರೀಮಾನ್ ಅಂಬಿಲ್ ನರಸಿಂಹ ಐಯಂಗಾರ್ಯರವರು, "ಈಗ ನೀವು ನಮ್ಮೆಲ್ಲರಿಗಿಂತಲೂ ಬಹಳ ಮೇಲಿದ್ದೀರಿ. ನಿಮ್ಮನ್ನು ಗೌರವಿಸಿ ದೂರದಲ್ಲಿ ನಿಂತಿರುವುದೇ ನಮ್ಮ ಪ್ರಥಮ ಕರ್ತವ್ಯ. ನಾವೇ ಹಾಗೆ ಮಾಡದೆಹೋದರೆ ಜನಸಾಮಾನ್ಯದವರು ನಿಮ್ಮಲ್ಲಿ ಗೌರವ ತೋರುವಂತೆ ನಿರೀಕ್ಷಿಸುವ ಬಗೆ ಹೇಗೆ? ಕಾಲವು ಕಳೆದಂತೆಲ್ಲಾ ನಿಮ್ಮ ಕಾರ್ಯಗೌರವದಲ್ಲಿ ಮಗ್ನರಾಗಿ, ನಿಮ್ಮ ಪ್ರಜೋಪಕಾರಗಳ ಪ್ರಭಾವವು ಪಸರಿಸುತ್ತಾ ಬರುವುದನ್ನು ಕಂಡು ನೀವೇ ಹರ್ಷಿಸುವಿರಿ" ಎಂದು ಹೇಳಿ ಅವರ ಮನಸ್ಸಿನ ಚಿಂತೆಯನ್ನು ಪರಿಹಾರಮಾಡಿದರು. ಒಂದು ದಿನ ಅವರೀರ್ವರೂ ಮತ್ತೆ ಕೆಲವರೂ ಬಿಳಿಗಿರಿರಂಗನ ಬೆಟ್ಟಕ್ಕೆ ಹೋಗಿದ್ದಾಗ್ಗೆ, ದೀರ್ಘಕಾಯನೂ ಬಲಶಾಲಿಯೂ ಆದ ಶ್ರೀವೈಷ್ಣವ ಬ್ರಾಹ್ಮಣನೊಬ್ಬನು ಬಾಳೆಯ ಎಲೆಗಳನ್ನೂ, ಹಣ್ಣುಗಳನ್ನೂ ಬೆನ್ನಿಗೆ ಬಿಗಿದುಕೊಂಡು, ತಲೆಯ ಮೇಲೆ ಉಪಾಹಾರ ಸಾಮಗ್ರಿಗಳಿಂದ ತುಂಬಿದ ಎರಡು ದೊಡ್ಡ ಪಾತ್ರೆಗಳನ್ನು ಹೊತ್ತುಕೊಂಡು, ಎರಡು ತುಂಬಿದ ಪಾತ್ರೆಗಳನ್ನು ಕೈಗಳಲ್ಲಿ ಹಿಡಿದುಕೊಂಡು, ಮೆಲ್ಲಮೆಲ್ಲಗೆ ಮೆಟ್ಟಲುಗಳನ್ನು ಹತ್ತುತ್ತ, ಶ್ರಮದಿಂದ ಮೇಲಕ್ಕೇರಿ ಬರುತ್ತಿದ್ದುದನ್ನು ಶ್ರೀಮಾನ್ ಶೇಷಾದ್ರಿ ಐಯರವರು ಕಂಡರು. ಆಗ ಅವರು ಶ್ರೀಮಾನ್ ಅಂಬಿಲ್ ನರಸಿಂಹ ಐಯಂಗಾರ್ಯರೊಡನೆ, "ಇಲ್ಲಿ ನೋಡಿ, ನರಸಿಂಹ ಐಯಂಗಾರ್ಯರೆ! ಇಂಗ್ಲಿಷ್ ವಿದ್ಯಾಭ್ಯಾಸದಿಂದ ನಮ್ಮ ಜೀವನದಲ್ಲೆಷ್ಟು ವ್ಯತ್ಯಾಸವುಂಟಾಗಿದೆ, ನೋಡಿ. ಇಂಗ್ಲಿಷ್ ವಿದ್ಯಾಭ್ಯಾಸವನ್ನು ನಾನೂ ನೀವೂ ಮಾಡದೆ ಹೋಗಿದ್ದರೆ, ಕೈ ತುಂಬ ಸಂಬಳ ಬಂದು ನಮ್ಮದೇ ಮೇಲುಗೈಯಾಗಿರುವ ಅಧಿಕಾರಗಳನ್ನು ನಾವು ಪಡೆಯುತ್ತಲೇ ಇರಲಿಲ್ಲ. ಒಂದುವೇಳೆ ನಾವು

ಪಂಡಿತರೋ ಯೋಗಿಗಳೋ ಆಗುತ್ತಿದ್ದೆವೋ ಏನೊ! ಏನೇ ಆಗಲಿ, ಆಗ್ಗೆ ನಾವು ಮೈಸೂರು ಸಂಸ್ಥಾನದಲ್ಲಿ ಅಧಿಕಾರಿಗಳೇನೊ ಆಗಿರುತ್ತಿರಲಿಲ್ಲ. ಹೊರೆಯನ್ನು ಹೊತ್ತು ಅತಿ ಕಷ್ಟಪಡುತ್ತಿರುವ ಆ ನಮ್ಮ ಸಹೋದರನನ್ನು ನೋಡಿ. ಆತನು ಮತ್ತಾವುದರಲ್ಲಿ ನೋಡಿದರೂ ನಮಗೆ ಸಮಾನವಾಗಿಯೇ ಇದ್ದಾನೆ. ಆದರೆ ಇಂಗ್ಲಿಷ್ ವಿದ್ಯಾಭ್ಯಾಸ ಮಾಡಿ, ಪರೀಕ್ಷೆಗಳಲ್ಲಿ ತೇರ್ಗಡೆ ಹೊಂದದೆಹೋಗಿರುವ ಕಾರಣವೊಂದರಿಂದ ಈ ಹೀನಸ್ಥಿತಿಯಲ್ಲುಳಿದು ನಮಗಾಗಿ ಭಾರವನ್ನು ಹೊರುತ್ತಿದ್ದಾನೆ" ಎಂದು ಹೇಳಿದರಂತೆ. ಅವರ ಸರಳಸ್ವಭಾವವೂ ದಯಾರ್ದ್ರಚಿತ್ತವೂ ಆ ಮಾತುಗಳಿಂದ ನಮ್ಮ ಕಣ್ಣೆದುರಿಗೇ ನಿಲ್ಲುವಂತಾಗುತ್ತವೆ. ಶ್ರೀಮಾನ್ ಅಂಬಿಲ್ ನರಸಿಂಹ ಐಯಂಗಾರ್ಯರವರು, "ಬಲಿಷ್ಠನಾಗಿರುವ ಆ ಬಡ ಬ್ರಾಹ್ಮಣನ ಕಷ್ಟಗಳನ್ನು ಕುರಿತು ನೀವು ಈ ರೀತಿ ತತ್ತ್ವಜಿಜ್ಞಾಸೆ ಮಾಡುತ್ತಿರುವುದೇನೋ ಸರಿ. ಅವನಿಗೆ ಯೋಗ್ಯತೆಯಿರುವ ಯಾವುದಾದರೂ ಸಣ್ಣ ಕೆಲಸವನ್ನಾದರೂ ಕೊಟ್ಟರೆ ಅವನಿಗೆ ಸಂತೋಷವಾದೀತು. ಅವನ ದುರ್ದಶೆಯನ್ನು ಕಂಡು ಮರುಕಪಟ್ಟುದಕ್ಕೆ ಆಗ ಸಾರ್ಥಕ" ಎಂದರು. ಮಾರನೆಯ ದಿನದಿಂದಲೇ ಅವನಿಗೆ ತಿಂಗಳಿಗೆ ಹದಿನೈದು ರೂಪಾಯಿಗಳ ಸಂಬಳದ ಕೆಲಸವಾಯಿತು.

ಶ್ರೀಮಾನ್ ಶೇಷಾದ್ರಿ ಐಯರವರಿಗೆ ಗಣಿತಶಾಸ್ತ್ರದಲ್ಲಿಯೂ, ಜ್ಯೋತಿಷದಲ್ಲಿಯೂ, ಅಸೀಮ ಪಾಂಡಿತ್ಯ. ಸರ್ಕಾರದ ಸಮಸ್ತ ಇಲಾಖೆಗಳ ಆಡಳಿತವೂ ಅವರಿಗೆ ಕರತಲಾಮಲಕ. ಸುಪ್ರಸಿದ್ಧರಾದ "ರಾಯಲ್" ಇಂಜನಿಯರುಗಳು ಕೂಡ ಅವರೆದುರಿಗೆ ಸೋಲನ್ನೊಪ್ಪಿಕೊಳ್ಳಬೇಕಾಗುತ್ತಿದ್ದಮಟ್ಟಿಗೆ ಅವರಿಗೆ ಶಿಲ್ಪಕಲಾ ಪರಿಶ್ರಮ; ಅನೇಕ ಲಕ್ಷ ರೂಪಾಯಿಗಳು ವೆಚ್ಚವಾಗುವಂತಿದ್ದ ಶಿಲ್ಪಕಾರ್ಯಗಳ ಅಂದಾಜನ್ನಾದರೂ ಅವರು ಲೀಲಾಜಾಲವಾಗಿ ಸಿದ್ಧಪಡಿಸಲು ಸಮರ್ಥರಾಗಿದ್ದರು. ಹೆಸರಘಟ್ಟದ ಕೆರೆಯಿಂದ ಬೆಂಗಳೂರಿಗೆ ನೀರನ್ನು ಸಾಗಿಸಿ ತರುವುದು ಸಾಧ್ಯವಿಲ್ಲವೆಂದು ಅನೇಕ ಮಂದಿ ಇಂಜನಿಯರುಗಳೇ ಹೇಳಿದ್ದರೂ ಅವರು ಧೈರ್ಯವಾಗಿ ಕಾರ್ಯಾರಂಭಮಾಡಿ, ತಾವು ಹೇಳಿದಂತೆ ಕೆಲಸಗಳನ್ನು ನಡೆಯಿಸಿದರೆ ಸಾಕೆಂದು ತಮ್ಮ ಕೈಕೆಳಗಿನ ರಾಯಲ್ ಇಂಜನಿಯರವರಿಗೆ ಬೆಸಸಿ ತಮ್ಮ ಪ್ರಯತ್ನದಲ್ಲಿ ಕೃತಕಾರ್ಯರಾದರು. ಆ ಇಂಜನಿಯರವರು ತೃಪ್ತಿಕರವಾಗಿ ಕೆಲಸಮಾಡಿದುದಲ್ಲದೆ, ಸರ್ ಕೆ. ಶೇಷಾದ್ರಿ ಐಯರವರ ಕೈಕೆಳಗೆ ಕೆಲಸಮಾಡಿದಮೇಲೆ ಮತ್ತೊಬ್ಬರ ಕೈಕೆಳಗೆ ಕೆಲಸಮಾಡುವುದಿಲ್ಲವೆಂದು ತಮ್ಮ ಆಪ್ತರೊಡನೆ ಹೇಳಿಕೊಂಡರಂತೆ.

ಚಾಮುಂಡೀ ಬೆಟ್ಟಕ್ಕೆ ಮಾರ್ಗವನ್ನು ಮಾಡಿಸುವುದು ಸಾಧ್ಯವಿಲ್ಲವೆಂದು ಇಂಜನಿಯರುಗಳೇ ಹಲವರು ಅಭಿಪ್ರಾಯಪಟ್ಟಾಗ, ಕೇವಲ ಸಾಮಾನ್ಯ ಸರ್ವೇಯರೊಬ್ಬರ ಸಹಾಯದಿಂದ ಶ್ರೀಮಾನ್ ಶೇಷಾದ್ರಿ ಐಯರವರು ಬೆಟ್ಟದಮೇಲೆ ನಾನಾ ಮಟ್ಟಗಳನ್ನು ದಿನದಿನವೂ ನಿರ್ಧರಿಸಿ, ಇಂಜನಿಯರುಗಳಿಗೇ ತಿಳಿವಳಿಕೆ ಹೇಳಿ, ಸುಗಮವಾದ ಸಂಚಾರ ಮಾರ್ಗವನ್ನು ಮಾಡಿಸಿದರು; ಮೊದಲು ಶ್ರೀ ಚಾಮರಾಜೇಂದ್ರ ಒಡೆಯರವರೇ ಅಶ್ವರಥಾರೂಢರಾಗಿ ಬೆಟ್ಟದಮೇಲಕ್ಕೆ ಚಿತ್ತೈಸುವಂತೆ ಪ್ರಾರ್ಥಿಸಿ ಹರ್ಷಿಸಿದರು. ಮೇಜರ್ ಹ್ಯಾನ್‌ಕಾಕ್ ಎಂಬವರು ಪರಿಚಯಮಾಡಿಸಿಕೊಟ್ಟ ಇಟಲಿಯ ಗಣಿಗಳ ಕಾರ್ಯನಿಷ್ಣಾತನೊಬ್ಬನು ಸರ್ ಕೆ. ಶೇಷಾದ್ರಿ ಐಯರವರ ಪ್ರಶ್ನೆಗಳ ರೀತಿಯನ್ನೂ ವ್ಯಾಪ್ತಿಯನ್ನೂ ಕಂಡು ಬೆರಗಾಗಿ, "ಇವರು ಗಣಿಗಳಲ್ಲಿ ಕೆಲಸಮಾಡಿರಬೇಕಲ್ಲವೆ?" ಎಂದು ಕೇಳಿದನಂತೆ. ಶಿವನಸಮುದ್ರದಲ್ಲಿ ವಿದ್ಯುಚ್ಛಕ್ತಿಯನ್ನು ಉತ್ಪತ್ತಿಮಾಡುವ ಕಾರ್ಯವಿಧಾನವನ್ನೂ, ಮಾರಿಕಣಿವೆಯ ವಾಣೀವಿಲಾಸ ಸಾಗರ ಜಲಾಶಯ ನಿರ್ಮಾಣ ವಿಧಾನವನ್ನೂ, ನಿರ್ಧರಿಸಿ ಗೊತ್ತುಮಾಡಿದ ಅದ್ಭುತವಾದ ಶಿಲ್ಪಕಲಾಪ್ರೌಢಿಮೆಯೂ ಕಾರ್ಯವಿಚಕ್ಷಣೆಯೂ ಅವರವು. ಬ್ರಿಟಿಷ್ ಇಂಡಿಯಾದಲ್ಲಿ ಪ್ರಖ್ಯಾತರಾಗಿದ್ದ ರಾಯಲ್ ಇಂಜನಿಯರುಗಳು ಒಪ್ಪಿಸಿದ ಅಂದಾಜುಗಳಲ್ಲಿ ಕೂಡ ನ್ಯೂನತೆಗಳನ್ನು ಕಂಡುಹಿಡಿದು ತಿದ್ದುತ್ತಿದ್ದ ಕಾರ್ಯಸಾಮರ್ಥ್ಯವು ಅವರದು. ಪಾಶ್ಚಾತ್ಯ ವೈದ್ಯ ವಿಚಾರದ ಸ್ಥೂಲಾಂಶಗಳಾಗಲಿ, ಆಯುರ್ವೇದ ವೈದ್ಯ ವಿಚಾರದ ಸ್ಥೂಲಾಂಶಗಳಾಗಲಿ ಅವರಿಗೆ ಹೊಸವಾಗಿರಲಿಲ್ಲ. ಒಂದು ದಿನ ವೈದ್ಯಶಾಖೆಯ ಆಗಿನ ಮುಖ್ಯಾಧಿಕಾರಿಗಳಾಗಿದ್ದ ಯೂರೋಪಿಯನ್ ದೊಡ್ಡಮನುಷ್ಯರು ಕೇವಲ ವೈದ್ಯರಿಗೆ ಮಾತ್ರವೇ ಮನವರಿಕೆಯಾಗುವಂತಿದ್ದ ತಮ್ಮ ನಲಹೆಗಳಿಗೆ ದಿವಾನ್ ಶೇಷಾದ್ರಿ ಐಯರವರನ್ನು ಅತಿ ಸುಲಭವಾಗಿ ಒಪ್ಪಿಸಿಕೊಂಡು ಬರುವ ಭರವಸೆಯಿಂದ ಅವರ ಬಳಿಗೆ ಹೋದವರು ಪೆಚ್ಚುಮುಖದಿಂದ ಹಿಂತಿರುಗಿ, "ಈ ಮಹಾರಾಯ ವೈದ್ಯ ಸಂಬಂಧದ ವಿಚಾರಗಳನ್ನೂ ಇಷ್ಟು ಕೂಲಂಕಷವಾಗಿ ಬಲ್ಲ ಪೆಡಂಭೂತದಂತಿರುವುದನ್ನು ನಾನು ಅರಿತಿರಲಿಲ್ಲ; ನಾನು ಅರಿತಿರಲಿಲ್ಲ" ಎಂದು ಗಟ್ಟಿಯಾಗಿ ಹೇಳುವಮಟ್ಟಿಗೆ ಭಾವಪಾರವಶ್ಯದಿಂದ ಮೈಮರೆತರು. ವೈದ್ಯರಾಗಲಿ, ಪಂಡಿತರುಗಳಾಗಲಿ, ಲಾಯರುಗಳಾಗಲಿ, ನ್ಯಾಯಾಧಿಪತಿಗಳಾಗಲಿ, ಇಂಜನಿಯರುಗಳಾಗಲಿ, ಶಾಸ್ತ್ರನಿಪುಣರಾಗಲಿ, ಭಾರಿ ಅಧಿಕಾರಿಗಳಾಗಲಿ, ವ್ಯವಸಾಯಗಾರರಾಗಲಿ, ಇತರ ನಾನಾ ವೃತ್ತಿಗಳವರಾಗಲಿ— ಯಾರೇ ದಿವಾನ್ ಶೇಷಾದ್ರಿ

ಐಯುರವರ ಬಳಿಗೆ ಹೋದರೂ ತಮ್ಮ ವೃತ್ತಿಯ ಸಂಬಂಧದ ಸಮಗ್ರ ವಿಚಾರಗಳೂ ಅವರಿಗೆ ತಿಳಿದಿದ್ದುವೆಂಬುದನ್ನು ಅನುಭವಮಾಡಿಕೊಂಡು ಹಿಂತಿರುಗುತ್ತಿದ್ದರು. ಅವರ ಬರೆವಣಿಗೆಯನ್ನು ನೋಡಿ ಮೇಧಾವಿ ಶ್ರೇಷ್ಠರಾದ ಇಂಗ್ಲಿಷ್ ಅಧಿಕಾರಿಗಳು ಕೂಡ ಮುಗ್ಧರಾಗುತ್ತಿದ್ದರು. ಲಾರ್ಡ್ ಕರ್ಜನರವರೇ ಮುಂತಾದ ಪ್ರಚಂಡ ಮೇಧಾವಿಗಳು ಕೂಡ ಅವರನ್ನು ಬಾಯಿತುಂಬ ಹೊಗಳುತ್ತಿದ್ದರು. ಅವರ ಕಾರ್ಯದಕ್ಷತೆಯನ್ನು ಚೆನ್ನಾಗಿ ಬಲ್ಲವರಾಗಿದ್ದ ಬ್ರಿಟಿಷ್ ರೆಸಿಡೆಂಟರವರೊಬ್ಬರು "ಕರಿಯ ಜನರಾಗಲಿ, ಬಿಳಿಯ ಜನರಾಗಲಿ, ಶೇಷಾದ್ರಿ ಐಯುರವರಿಗೆ ಸಮಾನರಾದವರಾರೂ ಇಲ್ಲ"* ಎಂದು ಹೇಳಿದರು.

ಶ್ರೀಮಾನ್ ಶೇಷಾದ್ರಿ ಐಯುರವರು ನಿರ್ಭೀತಿಯಿಂದ ಕೆಲಸ ಮಾಡುತ್ತಿದ್ದರು. ರಾಯ್‌ಬಹದ್ದೂರ್ ಅಂಬಿಲ್ ನರಸಿಂಹ ಐಯ್ಯಂಗಾರ್ಯ ರವರ ಮಾತುಗಳನ್ನು ಉದಾಹರಿಸುವುದಕ್ಕಿಂತ ಉತ್ತಮ ರೀತಿಯಲ್ಲಿ ಇದನ್ನು ಸ್ಪಷ್ಟಪಡಿಸುವುದು ಸಾಧ್ಯವೇ ಇಲ್ಲ. ಒಂದು ಸಂದರ್ಭದಲ್ಲಿ ಅವರು ಹೇಳಿದುದೇನೆಂದರೆ: "ಶೇಷಾದ್ರಿ ಐಯುರವರು ಯಾವ ಭಾರತೀಯನಿಗಾಗಲಿ ಅಥವಾ ಐರೋಪ್ಯನಿಗಾಗಲಿ ಹೆದರುತ್ತಿರಲಿಲ್ಲ. ಮೈಸೂರು ಸಂಸ್ಥಾನದಲ್ಲಿ ಸ್ವಲ್ಪ ಕಾಲ ಕೆಲಸಮಾಡಲು ಬ್ರಿಟಿಷ್ ಇಂಡಿಯಾದಿಂದ ಬಂದಿದ್ದ ಐರೋಪ್ಯರಾದ ಇಲಾಖಾ ಮುಖ್ಯಾಧಿಕಾರಿಯೊಬ್ಬರು ಬಹು ಮುಖ್ಯವಾದೊಂದು ದೊಡ್ಡ ಕೆಲಸವನ್ನು ನಿರ್ದಿಷ್ಟವಾದೊಂದು ಅವಧಿಯಲ್ಲಿ ಪೂರೈಸುವುದಾಗಿ ಒಪ್ಪಿದ್ದರು. ಆದರೆ ಕೆಲಸವು ನಿಧಾನವಾಯಿತು; ಆ ಅವಧಿಯು ಮುಗಿಯುವುದರಲ್ಲಿದ್ದಿತು. ಶ್ರೀಮಾನ್ ಶೇಷಾದ್ರಿ ಐಯುರವರು, ಆ ಕೆಲಸವು ಎಷ್ಟೆಷ್ಟು ಮುಂದುವರಿಯಿತೆಂಬುದನ್ನು ಪ್ರತಿ ದಿನವೂ ಪರಿಶೀಲಿಸುತ್ತಿದ್ದರು. ಒಂದು ದಿನ ಅವರು ಆ ಅಧಿಕಾರಿಗಳನ್ನು ಕುರಿತು, ಕ್ಲುಪ್ತಕಾಲದೊಳಗೆ ಅವರು ತಮ್ಮ ಕೆಲಸವನ್ನು ಮುಗಿಸದೆಹೋದರೆ ಪರಿಣಾಮವಾಗಲಾರದೆಂದು ಎಚ್ಚರಿಕೆ ಕೊಟ್ಟರು. ಆತನು ತಮ್ಮ ಕೈಯಲ್ಲಾದಷ್ಟು ಮಟ್ಟಿಗೂ ಶ್ರದ್ಧೆಯಿಂದ ಕೆಲಸಮಾಡುತ್ತಿದ್ದುದಾಗಿಯೂ, ತಮ್ಮಿಂದ ಸಾಧ್ಯವಿರುವ ಪ್ರಯತ್ನಗಳನ್ನು ಮಾಡಿಯೂ ಕಾಲಕ್ಕೆ ಸರಿಯಾಗಿ ಕೆಲಸ ಮುಗಿಯದಿದ್ದರೆ ತಮ್ಮ ತಪ್ಪೇನೂ ಅಲ್ಲವೆಂದೂ, ದಿವಾನ್‌ರವರು ಕೋರಿದಲ್ಲಿ ತಾವು ತಮ್ಮ ಕೆಲಸಕ್ಕೆ ಬ್ರಿಟಿಷ್ ಇಂಡಿಯಾಕ್ಕೆ ಹೊರಟುಹೋಗುವುದಾಗಿಯೂ ಉತ್ತರ ಹೇಳಿದರು. ಆ ಬಗೆಯ ಪ್ರತ್ಯುತ್ತರಕ್ಕೆ ಶ್ರೀಮಾನ್‌ಶೇಷಾದ್ರಿ ಐಯುರವರು

* "Black or white there is no equal to Seshadri."

ಸಡ್ಡೆಮಾಡುವವರಾಗಿರಲಿಲ್ಲ. ಅವರು ಒಡನೆಯೇ 'ಎಚ್ಚರಿಕೆ! ನೀವು ಒತ್ತಡವೆಗೇ ಕೆಲಸವನ್ನು ಕಳೆದುಕೊಳ್ಳುವಿರಿ. ನೀವು ಇಲ್ಲಿ ಮಾಡಿದ ತಪ್ಪುಗಳನ್ನು ಬ್ರಿಟಿಷ್ ಸರ್ಕಾರದವರು ಕ್ಷಮಿಸದಂತೆ ನಾನು ನೋಡಿ ಕೊಳ್ಳುತ್ತೇನೆ. ನೀವು ಬೇಕಾದರೆ ವಿಲಾಯಿತಿಗೆ ಹೊರಟುಹೋಗಬಹುದು. ಆದರೆ ಬ್ರಿಟಿಷ್ ಇಂಡಿಯಾದಲ್ಲಾಗಲಿ ಅಥವಾ ಮತ್ತಾವ ಸಂಸ್ಥಾನ ದಲ್ಲಾಗಲಿ ಈ ಭರತಭೂಮಿಯಲ್ಲಿ ಬೇರೆ ನೀವು ಕೆಲಸದಲ್ಲಿರುವುದು ಸಾಧ್ಯವಾಗುವುದಿಲ್ಲ' ಎಂದು ಹೇಳಿ ಒಂದು ಕ್ಷಣವೂ ಅಲ್ಲಿ ನಿಲ್ಲದೆ ಬಂಡಿಯಲ್ಲಿ ಕುಳಿತು ಮನೆಗೆ ತೆರಳಿದರು. ಅವರ ಮಾತುಗಳಿಂದ ತಕ್ಕ ಪರಿಣಾಮವಾಗದೆಹೋಗಲಿಲ್ಲ. ಆ ಅಧಿಕಾರಿಯು ವಿಶೇಷವಾಗಿ ಶ್ರಮಿಸಿ ಸಕಾಲದಲ್ಲಿ ಆ ಕೆಲಸವನ್ನು ಪೂರೈಸಿದರು. ದಿವಾನ್ ಶೇಷಾದ್ರಿ ಐಯರವರು ಅದರಿಂದ ಸುಪ್ರೀತರಾಗಿ ಆತನಿಗೆ ತಕ್ಕ ಪುರಸ್ಕಾರವನ್ನು ಕರುಣಿಸಿ ಸಂಭಾವಿಸಿದರು."*

ಐರೋಪ್ಯ ಜನಾಂಗಕ್ಕೆ ಸೇರಿದವರೂ ಪ್ರಖ್ಯಾತರಾದ ಇಂಜನಿಯರೂ ಆಗಿದ್ದ ಮಹಾಶಯರೊಬ್ಬರು, "ಸರ್ ಶೇಷಾದ್ರಿ ಐಯರವರು ದಿವಾನ್ ಪದವಿಯಲ್ಲಿರುವವರೆಗೂ ಮೈಸೂರು ಸಂಸ್ಥಾನದಲ್ಲಿ ಚೀಫ್ ಇಂಜನಿಯ ರೊಬ್ಬರು ಇರಬೇಕಾದ ಆವಶ್ಯಕತೆಯೇ ಇಲ್ಲ"† ಎಂದು ಹೇಳಿದರು. ಸರ್ ವಿಲಿಯಂ ಹಂಟರ್ ಎಂಬ ಮಹಾಶಯರು, "ಸರ್ ಶೇಷಾದ್ರಿ ಐಯರವರು ತಮ್ಮ ಮಿದುಳನ್ನು ಹರ್ಬರ್ಟ್ ಸ್ಪೆನ್ಸರನ ಗ್ರಂಥಗಳಿಗೂ ತಮ್ಮ ಹೃದಯವನ್ನು ಪರಬ್ರಹ್ಮನಿಗೂ ಮೀಸಲಾಗಿಟ್ಟಿದ್ದ ರಾಜನೀತಿ ಕೋವಿದರು"‡ ಎಂದು ಕೊಂಡಾಡಿದರು.

ಶ್ರೀಮಾನ್ ಪೂರ್ಣ ಕೃಷ್ಣರಾಯರು, ಶ್ರೀಮಾನ್ ಅಂಬಿಲ್ ನರಸಿಂಹ ಐಯಂಗಾರ್ಯರು, ಶ್ರೀಮಾನ್ ಚನ್ಸಲರಾಯರು, ಶ್ರೀಮಾನ್ ಟಿ. ಆರ್. ಎ. ತಂಬೂಚೆಟ್ಟಿಯವರು, ಮುಂತಾದ ಮಹಾಶಯರುಗಳ ಸಲಹೆ ಸಹಕಾರಗಳು ವಿಪುಲವಾಗಿ ದೊರೆತು ಶ್ರೀಮಾನ್ ಶೇಷಾದ್ರಿ ಐಯರವರ ಆಡಳಿತವು ಸುಸೂತ್ರವಾಗಿ ನಡೆಯಿತು. ಎಲ್ಲಕ್ಕೂ ಮಿಗಿಲಾಗಿ, ಶ್ರೀ ಚಾಮರಾಜೇಂದ್ರ ಒಡೆಯರವರ ಕೃಪಾವಲಂಬನವು ಲಭಿಸಿದುದ ರಿಂದ ಅವರ ಪ್ರಯತ್ನಗಳು ಅಪ್ರತಿಹತವಾಗಿಯೂ ಸಾಂಗವಾಗಿಯೂ

---

* *Vide* pages **349–50**, *Revived Memories.*

† "As an eminent European remarked, Mysore did not require a Chief Engineer so long as Sir Seshadri Iyer was Dewan"—*Madras Standard* (27th September, 1902)

‡ "In the happy phrase which the late Sir William Hunter applied to him nine years ago, Sir Seshadri was a Statesman who gave his head to Herbert Spencer and his heart to *Parabrahman.*"

ಮುಂದುವರಿದು ಸಫಲವಾದುವು. ಶ್ರೀ ವಿಕ್ಟೋರಿಯಾ ಮಹಾರಾಣಿಯವರು ಅವರಿಗೆ ೧೮೮೭ನೆಯ ಇಸವಿಯಲ್ಲಿ "ಸಿ.ಎಸ್.ಐ." ಬಿರುದನ್ನೂ, ೧೮೯೩ನೆಯ ಇಸವಿಯಲ್ಲಿ "ಕೆ.ಸಿ.ಎಸ್.ಐ." ಬಿರುದನ್ನೂ ದಯಪಾಲಿಸಿದರು. ಆಳಿದ ಶ್ರೀ ಚಾಮರಾಜೇಂದ್ರ ಒಡೆಯರವರು ದಿವಂಗತರಾದ ಕಾಲದವರೆಗೆ ಹನ್ನೊಂದು ವರ್ಷಗಳೂ, ಆ ಬಳಿಕ ಶ್ರೀ ಮಹಾರಾಣಿ ರೀಜೆಂಟರವರ ಕಾಲದಲ್ಲಿ ಏಳು ವರ್ಷಗಳೂ ಅವರು ದಿವಾನ್ ಪದವಿಯನ್ನಲಂಕರಿಸಿದ್ದರು.

**ಶ್ರೀ ಚಾಮರಾಜೇಂದ್ರ ಒಡೆಯರವರ ಕಾಲದ ಪುರೋಭಿವೃದ್ಧಿ ಸಾಧನೆ**

ಶ್ರೀ ಚಾಮರಾಜೇಂದ್ರ ಒಡೆಯರವರ ರಾಜ್ಯಭಾರವು ನಡೆದ ಹದಿಮೂರು ವರ್ಷಗಳ ಅವಧಿಯಲ್ಲಿ ಉಂಟಾದ ಪುರೋಭಿವೃದ್ಧಿಯನ್ನು ಅತ್ಯಂತಸಂಕ್ಷೇಪವಾಗಿ ಇಲ್ಲಿ ಸೂಚಿಸಲಾಗುವುದು. ಅವರು ರಾಜ್ಯಭಾರವನ್ನು ವಹಿಸಿದ ಕಾಲದಲ್ಲಿ ಸಂಸ್ಥಾನಕ್ಕೆ ಎಂಬತ್ತು ಲಕ್ಷ ರೂಪಾಯಿಗಳ ಸಾಲವಿದ್ದಿತು. ಸಂಸ್ಥಾನದ ಆಸ್ತಿಗಳ ರೂಪದ ಸ್ವತ್ತುಗಳ ಮೂಲ್ಯವು ನಲವತ್ತೊಂಬತ್ತೂ ಕಾಲು ಲಕ್ಷ ರೂಪಾಯಿಗಳು ಮಾತ್ರವೇ. ಆದ ಕಾರಣ, ಒಟ್ಟಿನಲ್ಲಿ ಧನ ಭಾಗಕ್ಕಿಂತ ಋಣ ಭಾಗವೇ ಮೂವತ್ತೂ ಮುಕ್ಕಾಲು ಲಕ್ಷ ರೂಪಾಯಿಗಳಷ್ಟು ಹೆಚ್ಚಾಗಿದ್ದಿತು. ಶ್ರೀ ಚಾಮರಾಜೇಂದ್ರ ಒಡೆಯರವರು ದಿವಂಗತರಾದವೇಳೆಗೆ (ಎಂದರೆ, ೧೮೯೪ನೆಯ ಇಸವಿಯ ಕೊನೆಯ ವೇಳೆಗೆ) ಋಣಭಾಗವು ಕಳೆದು ಕೇವಲ ಧನ ಭಾಗವೇ ಎರಡು ಕೋಟಿ ಎಪ್ಪತ್ತಾರೂವರೆ ಲಕ್ಷ ರೂಪಾಯಿಗಳಿಗೆ ಏರಿದ್ದಿತು. ಇಷ್ಟು ಮಟ್ಟಿನ ಉಚ್ಛ್ರಾಯಸ್ಥಿತಿಯನ್ನು, ಇದ್ದ ತೆರಿಗೆಗಳನ್ನು ಹೆಚ್ಚಿಸದೆಯೂ ಹೊಸ ತೆರಿಗೆಗಳನ್ನು ವಿಧಿಸದೆಯೂ ಸಂಸ್ಥಾನದ ಸಾಧನ ಸಂಪತ್ತುಗಳನ್ನು ರೂಢಿಸುವುದರಿಂದಲೇ ಅವರು ಸಾಧಿಸಿದರು.

೧೮೮೧ನೆಯ ಇಸವಿಯಿಂದ ೧೮೯೪ನೆಯ ಇಸವಿಯ ಕೊನೆಯವರೆಗಿನ ಅವಧಿಯಲ್ಲಿ ಮೊದಲಿದ್ದ ರೈಲ್ವೇ ಮಾರ್ಗದ ಜೊತೆಗೆ ಸದರನ್ ಮರಾಟಾ ರೈಲ್ವೇ ಕಂಪೆನಿಯವರ ಸಹಾಯದಿಂದಲೂ, ಸರ್ಕಾರಿ ಸಾಲದ ಇಪ್ಪತ್ತು ಲಕ್ಷ ರೂಪಾಯಿಗಳಿಂದಲೂ ೩೧೫ ಮೈಲಿಗಳ ದೂರದ ಹೊಸ ರೈಲ್ವೇ ಮಾರ್ಗಗಳೂ, ಮೊದಲಿದ್ದ ಸಂಚಾರ ಮಾರ್ಗಗಳ ಜೊತೆಗೆ ೧,೧೦೦ ಮೈಲಿಗಳ ದೂರದ ಸಂಚಾರ ಮಾರ್ಗಗಳೂ ನಿರ್ಮಿತವಾದುವು. ಕೆರೆಗಳ ಕಾಮಗಾರಿ, ನಾಲೆಗಳ ಕಾಮಗಾರಿ, ಮುಂತಾದ ನೀರಾವರಿ ಕಾರ್ಯಗಳಿಗಾಗಿ ಮಾಡುತ್ತಿದ್ದ ವಾರ್ಷಿಕ ವೆಚ್ಚವು ಮೂರು ಲಕ್ಷ

ರೂಪಾಯಿಗಳಿಂದ ಹದಿಮೂರೂವರೆ ಲಕ್ಷ ರೂಪಾಯಿಗಳಿಗೆ ಏರಿತು. ಭಾರಿ ಭಾರಿ ಜಲಾಶಯಗಳ ನಿರ್ಮಾಣದ ಹೊಸ ಕಾಮಗಾರಿಗಳಾಗಿ ಒಂದು ಕೋಟಿ ರೂಪಾಯಿಗಳಷ್ಟು ಧನ ವ್ಯಯವಾಗಿ, ಮುನ್ನೂರೈವತ್ತೈದು ಚದರ ಮೈಲಿಗಳಷ್ಟು ವಿಸ್ತೀರ್ಣದ ಭೂಮಿಗಳು ನೀರಾವರಿ ಸಾಗುವಳಿಗೆ ಬಂದುವು. ಆ ಅವಧಿಯಲ್ಲಿ ವ್ಯವಸಾಯ ನಡೆಯುತ್ತಿದ್ದ ಭೂವಿಸ್ತೀರ್ಣವು ಸೇಕಡ ಅರವತ್ತರಷ್ಟು ಹೆಚ್ಚಿತು. ಭೂಕಂದಾಯದ ವರಮಾನವು ಸೇಕಡ ಮೂವತ್ತೊಂಬತ್ತರಷ್ಟು ಅಧಿಕವಾಯಿತು. ಸರ್ಕಾರಕ್ಕೆ ಬರುತ್ತಿದ್ದ ವಾರ್ಷಿಕ ಹುಟ್ಟುವಳಿಯು ಒಂದುಕೋಟಿ ಮೂರು ಲಕ್ಷ ರೂಪಾಯಿಗಳಿಂದ ಒಂದು ಕೋಟಿ ಎಂಬತ್ತು ಲಕ್ಷ ರೂಪಾಯಿಗಳಿಗೆ ಹೆಚ್ಚಿತು. ವಾರ್ಷಿಕ ವೆಚ್ಚವು ಒಂದು ಕೋಟಿ ಮೂರು ಲಕ್ಷರೂಪಾಯಿಗಳಿಂದ ಒಂದುಕೋಟಿ ಅರವತ್ತಮೂರು ಲಕ್ಷ ರೂಪಾಯಿಗಳಿಗೆ ಹೆಚ್ಚಿತು. ಸರ್ಕಾರಿ ವಿದ್ಯಾ ಸಂಸ್ಥೆಗಳ ಮತ್ತು ಸರ್ಕಾರಿ ದ್ರವ್ಯಪೋಷಿತವಾದ ವಿದ್ಯಾಸಂಸ್ಥೆಗಳ ಸಂಖ್ಯೆಯು ಸಾವಿರದ ನಲವತ್ತೇಳರಿಂದ ಮೂರು ಸಾವಿರದ ತೊಂಬತ್ತೇಳಕ್ಕೆ ಏರಿತು. ಸ್ಥಳದ ಕೈಗಾರಿಕೆಗಳಿಗೆ ವಿಶೇಷ ಪ್ರೋತ್ಸಾಹವು ದೊರೆಯಿತು. ೧೮೮೪ನೆಯ ಇಸವಿಯಲ್ಲಿ ಚೀಫ್ ಕೋರ್ಟಿಗೆ ಮೂವರು ನ್ಯಾಯಾಧೀಶರುಗಳು ನೇಮಕವಾದರು. (ಅದೇ ಈಗ ಹೈಕೋರ್ಟಾಗಿ ಪರಿಣಾಮ ಹೊಂದಿದೆ.) ೧೮೮೫ನೆಯ ಇಸವಿಯಲ್ಲಿ ಪೋಲೀಸು ಇಲಾಖೆಗೂ ಫಾರೆಸ್ಟು ಇಲಾಖೆಗೂ ಪ್ರತ್ಯೇಕವಾಗಿ ಇನ್‌ಸ್ಪೆಕ್ಟರ್ ಜನರಲ್ ಎಂಬ ಮತ್ತು ಕನ್ಸರ್ವೇಟರೆಂಬ ಮುಖ್ಯಾಧಿಕಾರಿಗಳು ನೇಮಕವಾದರು. ೧೮೮೬ನೆಯ ಇಸವಿಯಲ್ಲಿ ವ್ಯವಸಾಯದ ಇಲಾಖೆಯು ಹೊಸದಾಗಿ ಏರ್ಪಟ್ಟಿತು. ಕೋಲಾರದ ಚಿನ್ನದಗಣಿ ಕೈಗಾರಿಕೆಯು ೧೮೮೬ನೆಯ ಇಸವಿಯಿಂದ ಪ್ರಾರಂಭವಾಗಿ ವೃದ್ಧಿಹೊಂದಿತು. ಹತ್ತಿಯ ಮತ್ತು ಉಣ್ಣೆಯ ಬಟ್ಟೆಗಳ ಗಿರಣಿಗಳು ಏರ್ಪಟ್ಟುವು. ವೈದ್ಯದ ಇಲಾಖೆಯಲ್ಲಿಯೂ ವಿದ್ಯಾಭ್ಯಾಸದ ಇಲಾಖೆಯಲ್ಲಿಯೂ ಅನೇಕ ಸುಧಾರಣೆಗಳು ನಡೆದುವು. ಎಕ್ಸೈಜು ಇಲಾಖೆ, ಸೈನ್ಯದ ಇಲಾಖೆ, ಮುಜರಾಯಿ ಇಲಾಖೆ, ಗಣಿ ಇಲಾಖೆ, ಮುಂತಾದ ಅನೇಕ ಹೊಸ ಶಾಖೆಗಳು ಏರ್ಪಟ್ಟುವು. "ಲ್ಯಾಂಡ್ ರೆವೆನ್ಯೂ" ಏರ್ಪಾಡು ಪರಿಷ್ಕೃತವಾಗಿ ಲ್ಯಾಂಡ್ ರೆವೆನ್ಯೂ ಕೋಡು ಉತ್ತಮಗೊಂಡಿತು. ಜೀವವಿಮೆ ಏರ್ಪಾಡು ನಡೆಯಿತು. ೧೮೯೧ನೆಯ ಇಸವಿಯಲ್ಲಿ "ಸಿವಿಲ್ ಸರ್ವಿಸ್" ಪರೀಕ್ಷೆಯನ್ನೇರ್ಪಡಿಸಿ, ಅದರಲ್ಲಿ ಉತ್ತಮ ರೀತಿಯಲ್ಲಿ ತೇರ್ಗಡೆಹೊಂದಿದವರನ್ನು "ಪ್ರೊಬೇಷನರಿ ಅಸಿಸ್ಟೆಂಟ್ ಕಮಿಷನರು"ಗಳನ್ನಾಗಿ ನೇಮಿಸಿಕೊಳ್ಳುವ

ಕಾರ್ಯಕ್ರಮವು ಪ್ರಾರಂಭವಾಯಿತು. ಹಿಂದಿನಿಂದ ನಡೆದುಬಂದಿದ್ದ ಅಂಚೆಯ ಏರ್ಪಾಡನ್ನು ತಪ್ಪಿಸಿ, ಬ್ರಿಟಿಷ್ ಇಂಡಿಯಾದ ಅಂಚೆ ಏರ್ಪಾಡೇ ಸಂಸ್ಥಾನದಲ್ಲಿರತಕ್ಕುದೆಂದು ಗೊತ್ತಾಯಿತು. ರೈತರಿಗೆ ಸಹಾಯ ಮಾಡುವುದಕ್ಕಾಗಿ ೧೮೯೪ನೆಯ ಇಸವಿಯಲ್ಲಿ ವ್ಯವಸಾಯದ ಬ್ಯಾಂಕುಗಳು ಏರ್ಪಟ್ಟುವು. ವಾಯುಮಾಪನ ಯಂತ್ರಸಾಧನಗಳಿಂದ ಸುಸಜ್ಜಿತವಾದ ಕಾರ್ಯಶಾಲೆಯೊಂದು ನಿರ್ಮಿತವಾಯಿತು. ೧೮೯೪ನೆಯ ಇಸವಿಯಲ್ಲಿ ರೆವೆನ್ಯೂ ಕಮಿಷನರ್ ಹುದ್ದೆಯು ಏರ್ಪಟ್ಟಿತು. ವಿದ್ಯಾಭ್ಯಾಸದ ವೆಚ್ಚವು ೧೮೮೧ನೆಯ ಇಸವಿಯಲ್ಲಿ ಮೂರು ಲಕ್ಷದ ಹದಿನೈದು ಸಾವಿರ ರೂಪಾಯಿಗಳಾಗಿದ್ದುದು ೧೮೯೪ನೆಯ ಇಸವಿಯಲ್ಲಿ ಎಂಟು ಲಕ್ಷದ ಇಪ್ಪತ್ತು ಸಾವಿರದ ಎಂಟನೂರ ಹತ್ತು ರೂಪಾಯಿಗಳಿಗೆ ಹೆಚ್ಚಿತು. ವಿದ್ಯಾರ್ಥಿಗಳ ಸಂಖ್ಯೆಯು ಮೂವತ್ತೊಂಬತ್ತು ಸಾವಿರದ ನಾನೂರ ಹದಿಮೂರರಿಂದ ಎಪ್ಪತ್ತೊಂದು ಸಾವಿರದ ನೂರ ಅರವತ್ತೇಳಕ್ಕೂ, ವಿದ್ಯಾರ್ಥಿನಿಯರ ಸಂಖ್ಯೆಯು ಮೂರು ಸಾವಿರದಿಂದ ಹನ್ನೆರಡು ಸಾವಿರಕ್ಕೂ ಹೆಚ್ಚಿದುವು. ೧೮೮೧ನೆಯ ಇಸವಿಯಲ್ಲಿದ್ದ ರೈಲು ಮಾರ್ಗವು ಒಟ್ಟು ಐವತ್ತೆಂಟು ಮೈಲಿಗಳು ಮಾತ್ರ. ೧೮೯೪ನೆಯ ಇಸವಿಯಲ್ಲಿ ಅದು ನೂರ ಎಪ್ಪತ್ತ ಮೂರು ಮೈಲಿಗಳ ದೂರಕ್ಕೆ ಹೆಚ್ಚಿತು. ಹೀಗೆ ರೈಲು ಮಾರ್ಗವನ್ನು ಹೆಚ್ಚಿಸಿದುದಕ್ಕೆ ಒಂದು ಕೋಟಿ ಅರವತ್ತನಾಲ್ಕು ಲಕ್ಷ ರೂಪಾಯಿಗಳಿಗಿಂತಲೂ ಹೆಚ್ಚು ಹಣವು ವೆಚ್ಚವಾಯಿತು. ಸ್ಥಳೀಯ ಪ್ರಜಾಧಿಕಾರದ ("ಲೋಕಲ್ ಸೆಲ್ಫ್ ಗವರ್ನಮೆಂಟ್") ಏರ್ಪಾಡು ಅಭಿವೃದ್ಧಿಹೊಂದಿ ಪೌರ ಸಭೆಗಳ ಸಂಖ್ಯೆಯು ಎಂಬತ್ತುಮೂರರಿಂದ ನೂರೇಳಕ್ಕೆ ಹೆಚ್ಚಿತು. ಬೆಂಗಳೂರು ಮೈಸೂರು ನಗರಗಳಿಗೆ ಜಲವಸತಿ ಯನ್ನುಂಟುಮಾಡುವ ಕಾರ್ಯಕಲಾಪಗಳು ನಡೆದುವು. ನಾಲ್ಕು ವರ್ಷ ಅಥವಾ ಐದು ವರ್ಷ ವಯಸ್ಸಿನ ಮಕ್ಕಳಿಗೇ ವಿವಾಹ ನಡೆದ ಸಂದರ್ಭಗಳು ಕಂಡುಬಂದ ಕಾರಣದಿಂದಲೂ ಮತ್ತು ವೃದ್ಧರಿಗೆ ಬಾಲಕಿಯರನ್ನು ಕೊಟ್ಟು ವಿವಾಹಗಳು ನಡೆಯುತ್ತಿದ್ದ ಕಾರಣದಿಂದಲೂ ಪ್ರಜಾಪ್ರತಿನಿಧಿ ಸಭೆಯ ಅನುಮತಿಯೊಡನೆ ೧೮೯೪ನೆಯ ಇಸವಿಯಲ್ಲಿ ಬಾಲ್ಯವಿವಾಹ ನಿಷೇಧದ ಕಾನೂನು ಆಚರಣೆಗೆ ಬಂದಿತು. ನಾಲ್ಕು ವರ್ಷ ವಯಸ್ಸಿಗೇ ವಿವಾಹ ವಾಗಿದ್ದ ಬಾಲಕಿಯರ ಸಂಖ್ಯೆಯು ೧೮೯೧ನೆಯ ಇಸವಿಯಲ್ಲಿ ೧೧,೧೩೭ ಆಗಿದ್ದಿತು. ಒಂಬತ್ತು ವರ್ಷ ವಯಸ್ಸಿಗೇ ವಿಧವೆಯರಾಗಿದ್ದ ಹಸುಮಕ್ಕಳ ಸಂಖ್ಯೆಯು ಮೂರು ಸಾವಿರದ ಐನೂರ ಅರವತ್ತು ಆಗಿದ್ದಿತು. ಎಂಟು ವರ್ಷ ವಯಸ್ಸಿಗೆ ಕಡಮೆಯಾಗಿರುವ ಬಾಲಕಿಯರಿಗೆ ವಿವಾಹವು ನಡೆಯು

ಕೂಡದೆಂದೂ, ಐವತ್ತು ವರ್ಷಗಳಿಗಿಂತ ಹೆಚ್ಚು ವಯಸ್ಸಿನವನು ಹದಿನಾರು ವರ್ಷಗಳಿಗಿಂತ ಕಡಮೆ ವಯಸ್ಸಿನವಳನ್ನು ವಿವಾಹ ಮಾಡಿಕೊಳ್ಳಕೂಡ ದೆಂದೂ ಅದರಲ್ಲಿ ವಿಧಾಯಕವಾಗಿದ್ದಿತು. ಈ ಕಾನೂನಿನಿಂದ ಪ್ರಜೆಗಳಿಗೆ ಪರಮೋಪಕಾರವಾಯಿತು. ಆಳಿದ ಮಹಾಸ್ವಾಮಿಯವರ ರಾಜ್ಯಭಾರದ ಅವಧಿಯಲ್ಲಿ ಮೈಸೂರು ಸಂಸ್ಥಾನದಲ್ಲಿ ನಡೆದಷ್ಟು ಅಭಿವೃದ್ಧಿಕಾರ್ಯಗಳು ಆಗ್ಗೆ ಮತ್ತಾವ ಸಂಸ್ಥಾನದಲ್ಲಿಯೂ ನಡೆಯಲಿಲ್ಲ. ಆದಕಾರಣ, "ಪಯನೀರ್" ಎಂಬ ಪತ್ರಿಕೆಯಲ್ಲಿ ಪ್ರಕಟವಾಗಿದ್ದ "ಉದಾರ ಭಾವನೆ ಗಳಿಂದ ಕೂಡಿದ ಮಹಾರಾಜರ ಪ್ರಭುತ್ವದಲ್ಲಿ ದಿವಾನ್‌ರವರ ಶಕ್ತಿಸಾಮರ್ಥ್ಯಗಳ ಪ್ರಯೋಗಕ್ಕೆ ಪೂರ್ಣಾವಕಾಶವು ದೊರೆಯಿತು. ಸಂಸ್ಥಾನದ ಪುರೋಭಿವೃದ್ಧಿಯು ಬಹುತರವಾಗಿ ಅನನ್ಯ ಸಾಧಾರಣ ರೀತಿಯಲ್ಲಿ ಮುಂದುವರಿದು ಅಭ್ಯುದಯವುಂಟಾಯಿತು"* ಎಂಬ ಮಾತುಗಳು ಅಕ್ಷರಶಃ ನಿಜ. ಶ್ರೀ ಚಾಮರಾಜೇಂದ್ರ ಒಡೆಯರವರ ರಾಜ್ಯಭಾರವು ಭಾರತೀಯರ ಉಚ್ಚಹಂತದ ಕ್ರಿಯಾಶಕ್ತಿಗೇ ನಿದರ್ಶನ ವಾಯಿತು; ಅವರು ತಮ್ಮ ಸಾಮರ್ಥ್ಯ ಸೌಜನ್ಯಗಳಿಂದ ಭಾರತೀ ಯರಿಗೆ ಅಚ್ಚುಮೆಚ್ಚಾದರು. ಮಹಾಪ್ರಭುಗಳವರ ಅಕಾಲ ಮರಣಕ್ಕಾಗಿ ಒಟ್ಟು ಭರತಖಂಡವೇ ಶೋಕದಲ್ಲಿ ಮುಳುಗಿತು.

**ಶ್ರೀ ಮಹಾರಾಣಿ ರೀಜೆಂಟರವರ ರಾಜ್ಯಭಾರ**

ಮಹಾಮಾತೃಶ್ರೀ ವಾಣೀವಿಲಾಸ ಸನ್ನಿಧಾನ, ಸಿ.ಐ. ಅವರು ದುಸ್ಸಹವಾದ ಪತಿವಿಯೋಗ ದುಃಖದಿಂದ ಕಂಬನಿಗರೆಯುತ್ತಿದ್ದಾಗಲೇ ಅನನ್ಯ ಸುಲಭವಾದ ಚಿತ್ತ ದಮನದಿಂದ ರೀಜೆಂಟ್ ಪದವಿಯನ್ನಲಂಕರಿಸಿ, ಆಳಿದ ಮಹಾಸ್ವಾಮಿ ಯವರಾದ ಶ್ರೀ ಕೃಷ್ಣರಾಜೇಂದ್ರ ಒಡೆಯರವರ ಬಾಲ್ಯವು ಕಳೆಯುವವರೆಗೂ ಸುಮಾರು ಎಂಟು ವರ್ಷಗಳ ಕಾಲ ವಿವೇಕ ವಿಚಕ್ಷಣೆಗಳಿಂದ ರಾಜ್ಯಭಾರಮಾಡಿದರು. ಆ ಸನ್ನಿವೇಶದಲ್ಲಿ ರಾಜ್ಯಭಾರವನ್ನು ವಹಿಸುವುದಕ್ಕೆ ಅಸಾಧಾರಣವಾದ ಧೈರ್ಯಸ್ಥೈರ್ಯಗಳು ಆವಶ್ಯಕವಾಗಿದ್ದುವು. ಮಹಾಮಾತೃಶ್ರೀಯವರು ಶ್ಲಾಘ್ಯತರವಾದ ಪ್ರಜಾವಾತ್ಸಲ್ಯದಿಂದಲೂ, ಸ್ತುತ್ಯವಾದ ಶಕ್ತಿಸಾಮರ್ಥ್ಯ ಗಳಿಂದಲೂ, ಅಸಾಧಾರಣವಾದ ಅನುನಯದಿಂದಲೂ ರಾಜ್ಯವಾಳಿ, ಪ್ರಜೆಗಳಲ್ಲಿ ಸಮಸ್ತ ವರ್ಗಗಳವರ ಭಕ್ತಿಗೌರವಗಳಿಗೂ ಪಾತ್ರರಾದರು. ಸಾರ್ವಜನಿಕ ಕಾರ್ಯಕಲಾಪಗಳಲ್ಲಿ ಭಾಗವಹಿಸಲು ಸ್ತ್ರೀಯರಿಗೆ ಹೆಚ್ಚಿನ

* "Under a Maharaja of liberal views the abilities of the Minister had full scope and the record of the State was one of unparalleled progress and prosperity."—*The Pioneer*.

ಅವಕಾಶವೇ ಇಲ್ಲದಿದ್ದ ಭರತಖಂಡದಲ್ಲಿ— ಘೋಷಾ ಪದ್ಧತಿಗೊಳ ಪಟ್ಟಿದ್ದೂ ಸಹ— ಅಸಾಧಾರಣವಾದ ರೀತಿಯಲ್ಲಿ ರಾಜ್ಯಭಾರಕೌಶಲ್ಯ ವನ್ನು ಪ್ರದರ್ಶಿಸಿದುದು ಮಹಾಮಾತೃಶ್ರೀಯವರಿಗೆ ಸಾಧ್ಯವಾದುದೇ ವಿಸ್ಮಯಕರವಾದ ಅಂಶವೆಂದು "ಇಂಗ್ಲಿಷ್ಮನ್" ಮುಂತಾದ ಪತ್ರಿಕೆ ಗಳೆಲ್ಲ ಕೊಂಡಾಡಿದುವು. ಭರತಖಂಡದಲ್ಲಿ ಪ್ರಖ್ಯಾತವಾಗಿ ಪ್ರಪಂಚದಲ್ಲಿ ಪ್ರಸಿದ್ಧವಾದ ಪತ್ರಿಕೆಯೊಂದು ಮಹಾಮಾತೃಶ್ರೀಯವರ ರಾಜ್ಯಭಾರ ನಿರ್ವಹಣ ಸಾಮರ್ಥ್ಯವನ್ನು ಮನವಾರೆ ಕೊಂಡಾಡಿ ಅವರನ್ನು ಶ್ರೀ ವಿಕ್ಟೋರಿಯಾ ಮಹಾರಾಣಿಯವರಿಗೆ ಹೋಲಿಸಿತು. ಭರತಖಂಡದಲ್ಲೆಲ್ಲ ಸುಪ್ರಸಿದ್ಧವಾಗಿದ್ದ ಅದೇ ಬಗೆಯ ಪತ್ರಿಕೆಯೊಂದು, ಮಹಾಮಾತೃ ಶ್ರೀ ಯವರ ರಾಜ್ಯಭಾರದ ಸತ್ಫಲಗಳಲ್ಲೆರಡಾದ ಶಿವನಸಮುದ್ರದ ವಿದ್ಯುಚ್ಛಕ್ತಿಯ ಏರ್ಪಾಡೂ, ಮಾರಿಕಣಿವೆಯ ವಾಣೀವಿಲಾಸ ಸಾಗರದ ನಿರ್ಮಾಣವೂ, ಒಟ್ಟು ಪ್ರಪಂಚದಲ್ಲೇ ಅಸಾಧಾರಣ ಕಾರ್ಯಗಳ ಗುಂಪಿಗೆ ಸೇರಿದವುಗಳೆಂದು* ಕೊಂಡಾಡಿತು. ಆಳಿದ ಮಹಾಸ್ವಾಮಿ ಯವರ ಕಾಲದಲ್ಲಿಯೂ, ಮಹಾಮಾತೃಶ್ರೀಯವರು ರೀಜೆಂಟ್ ಪದವಿ ಯಲ್ಲಿದ್ದಾಗಲೂ ಮೈಸೂರು ಸಂಸ್ಥಾನದಲ್ಲಿ ನಡೆದ ಜನೋಪಯುಕ್ತ ಕಾರ್ಯಗಳು ಬ್ರಿಟಿಷ್ ಇಂಡಿಯಾದ ಯಾವ ಪ್ರಾಂತದವರಾದರೂ ಕರುಬುವಂತಿದ್ದುವೆಂದು† ಸೂಚಿಸಿತು. ಅಷ್ಟೇ ಅಲ್ಲ. "ಈಚಿನವರೆಗೂ ಇಂಡಿಯಾ ಸರ್ಕಾರದವರು ಕೈಕೊಳ್ಳುವುದಕ್ಕೆ ಕೂಡ ಹಿಂತೆಗೆಯು ತ್ತಿದ್ದಂಥ ಭಾರಿ ಭಾರಿ ಕಾರ್ಯಕಲಾಪಗಳ ಪ್ರಯೋಗ ಪರೀಕ್ಷೆಗಳನ್ನು ಕೈಕೊಂಡು ಇತರ ಸಂಸ್ಥಾನಗಳೆಲ್ಲಕ್ಕಿಂತ ಹೆಚ್ಚಿನ ಸೇವೆಯನ್ನು ಇಂಡಿಯಾ ಚಕ್ರಾಧಿಪತ್ಯಕ್ಕೆ ಸಲ್ಲಿಸುತ್ತಿರುವ ಯಶಸ್ಸು ಮೈಸೂರು ಸಂಸ್ಥಾನಕ್ಕೆ ಸಲ್ಲಬೇಕು"‡ ಎಂದು ಉದ್ಘೋಷಿಸಿತು. ಮತ್ತೊಂದು ಪತ್ರಿಕೆಯು, ಮಹಾಮಾತೃಶ್ರೀಯವರು ರೀಜೆಂಟ್ ಪದವಿಯನ್ನಲಂಕರಿಸಿ ನೆರವೇರಿಸಿದ ಪ್ರಜಾಭ್ಯುದಯ ಸಾಧನೆಯು ಹೆಮ್ಮೆಪಡುವಂತಿದ್ದಿತೆಂದು ಶ್ಲಾಘಿಸಿತು.

ಮಹಾಮಾತೃಶ್ರೀಯವರ ಕಾರ್ಯಸಾಧನೆಯು ಸುಲಲಿತವಾಗಿ ನೆರವೇರಿದುದಕ್ಕೆ ಅವರಲ್ಲಿ ನೆಲಸಿದ್ದ ಪುತ್ರ ನಿರ್ವಿಶೇಷವಾದ ಪ್ರಜಾ ವಾತ್ಸಲ್ಯವೇ ಮುಖ್ಯಕಾರಣ. ಮಹಾಮಾತೃಶ್ರೀಯವರು ರೀಜೆಂಟ್

* "....two of the most remarkable projects of their kind in the world."

† ".......a splendid system of public works that might be envied from any part of British India."

‡ "Further it must be placed to the credit of Mysore that, more than any other State, it is rendering to the Indian Empire the service of trying experiments which till recently the Imperial Government have hesitated to attempt."

ಪದವಿಯನ್ನಲಂಕರಿಸಿದೊಡನೆಯೇ, ಮಲೆನಾಡಿನ ಅಡಿಕೆ ತೋಟಗಳಿಗೆ ವಿಧಾಯಕವಾಗಿದ್ದ ಕಂದಾಯದ ದರಗಳು ಬಹಳ ಹೆಚ್ಚಾಗಿದ್ದುದನ್ನು ತಮ್ಮ ಚಿತ್ತಕ್ಕೆ ತಂದುಕೊಂಡು ಅನುಕ್ರೋಶ ಬುದ್ಧಿಯಿಂದ ಅವುಗಳನ್ನು ಸೇಕಡ ೨೫ರಂತೆ ತಗ್ಗಿಸಿ ಸಹಾಯಮಾಡಿದರು. ೧೮೯೮ನೆಯ ಇಸವಿಯಲ್ಲಿ ಮೈಸೂರು ನಗರದಲ್ಲಿಯೂ ಬೆಂಗಳೂರು ನಗರದಲ್ಲಿಯೂ ಸಂಸ್ಥಾನದ ಇತರ ಸ್ಥಳಗಳಲ್ಲಿಯೂ ಪ್ಲೇಗು ರೋಗದ ಹಾವಳಿಯು ಭೀಕರಸ್ಥಿತಿಯೊದಗಿದಾಗ ಅವರೂ, ಆಗ್ಗೆ ಇನ್ನೂ ಹದಿನಾಲ್ಕೇ ವರ್ಷ ವಯಸ್ಸಿನ ಬಾಲಕರಾಗಿದ್ದ ಆಳಿದ ಮಹಾಸ್ವಾಮಿಯವರೂ ತೋರಿಸಿದ ಅನುಕಂಪವೂ, ಮಾಡಿದ ಸಹಾಯಗಳೂ ಅಸಾಧಾರಣವಾಗಿದ್ದುವು. ಭರತಖಂಡದಲ್ಲಿ ಮೊಟ್ಟಮೊದಲು ಪ್ಲೇಗು ರೋಗವು ದಾಂಧಲೆ ಮಾಡಿದಾಗ್ಗೆ (ಎಂದರೆ, ೧೮೯೭ನೆಯ ಇಸವಿಯಲ್ಲಿ) ವೈಸ್ರಾಯಿಯವರಾಗಿದ್ದ ಲಾರ್ಡ್ ಕರ್ಸನ್ರವರಂಥ ಕಾರ್ಯಪಟುಗಳು ಕೂಡ, ಆ ರೋಗದ ಸ್ವಭಾವವೇ ತಿಳಿಯಲೊಲ್ಲದೆಂದೂ, ವೈದ್ಯರುಗಳೂ ಅಧಿಕಾರಿಗಳೂ ಎಷ್ಟು ಪ್ರಯತ್ನಪಟ್ಟರೂ ಅದನ್ನು ಹತೋಟಿಗೆ ತರುವುದು ಸಾಧ್ಯವಾಗಲೊಲ್ಲದೆಂದೂ, ಭಯಂಕರವಾದ ಆರೋಗದ ಹಾವಳಿಗೆ ಗೊತ್ತುಗುರಿಯೇ ಇಲ್ಲದೆ ದಿನದಿನವೂ ಸಾವಿರಗಟ್ಟಲೆಯಾಗಿ ಜನರು ಬಲಿಯಾಗುತ್ತಿದ್ದರೆಂದೂ ವಿಷಾದಿಸಬೇಕಾದ ಪರಿಸ್ಥಿತಿಯೊದಗಿದ್ದಿತು. ಮೈಸೂರು ಸಂಸ್ಥಾನದಲ್ಲಿ ಮೊಟ್ಟಮೊದಲು ಪ್ಲೇಗಿನ ಹಾವಳಿಯು ಕಾಣಿಸಿಕೊಂಡಾಗ, ಭರತಖಂಡದ ಇತರ ಪ್ರದೇಶಗಳಲ್ಲಿದ್ದಂತೆಯೇ ಪ್ಲೇಗು ರೋಗ ನಿವಾರಣೆಯ ನಿಬಂಧನೆಗಳು ಬಹಳ ಕಟ್ಟುನಿಟ್ಟಾಗಿದ್ದುವು. ಪ್ಲೇಗು ರೋಗದಿಂದ ಮೃತಪಟ್ಟವರ ಸಂಖ್ಯೆಯು ಅಪರಿಮಿತವಾಗಿದ್ದು ವೈದ್ಯರುಗಳೇ ದಿಕ್ಕುತೋರದೆ ಪಾಡುಪಡುತ್ತಿದ್ದರು. ಪ್ಲೇಗು ರೋಗವು ಬಾರದಂತೆ ನಿವಾರಿಸುವುದಕ್ಕಾಗಿ "ಇನಾಕ್ಯುಲೇಷನ್" ಎಂಬ ಸೂಚೀಮುಖ ಚಿಕಿತ್ಸೆ ಮಾಡುವುದು, ಪ್ಲೇಗು ರೋಗ ಬಂದವರನ್ನು ಪ್ರತ್ಯೇಕ ಸ್ಥಳಗಳಿಗೆ ಸಾಗಿಸುವುದು, ರೋಗದ ಸೋಂಕು ಇರಬಹುದೆಂಬ ಸಂದೇಹಾಸ್ಪದವಾದ ಸನ್ನಿವೇಶದಲ್ಲಿ ಜನಗಳನ್ನು ಮನೆಗಳಿಂದ ಹೊರಡಿಸುವುದು, ಮುಂತಾದ ಕಾರ್ಯಗಳು ನಡೆಯುವಾಗ್ಗೆ ಮೊದಲೇ ಕಟ್ಟುನಿಟ್ಟಾಗಿದ್ದ ನಿಬಂಧನೆಗಳನ್ನು ಮತ್ತಷ್ಟು ಬಿಕ್ಕಟ್ಟಿನಿಂದ ಅಧಿಕಾರಿಗಳು ಆಚರಣೆಗೆ ತಂದರು. ಹಾಗೆ ಮಾಡುವಲ್ಲಿ ಅವರು ಸದುದ್ದೇಶದಿಂದಲೇ ವರ್ತಿಸುತ್ತಿದ್ದರು. ಆದರೂ ಜ್ವರ ಬಂದವರನ್ನೆಲ್ಲ "ಕ್ಯಾಂಪಿಗೆ" ಸಾಗಿಸುವುದೇ ಮುಂತಾದ ರೀತಿಗಳಲ್ಲಿ ಪ್ರಜೆಗಳಿಗೆ ಅನವಶ್ಯವಾಗಿ ಅನನುಕೂಲಗಳುಂಟಾದುದನ್ನು ಮಹಾಮಾತೃಶ್ರೀ

ಯವರೂ, ಆಗ್ಗೆ ಇನ್ನೂ ಬಾಲಕರಾಗಿದ್ದ ಶ್ರೀಮನ್ಮಹಾರಾಜ ಶ್ರೀ ಕೃಷ್ಣರಾಜೇಂದ್ರ ಒಡೆಯರವರೂ ಚಿತ್ತಕ್ಕೆ ತಂದುಕೊಂಡು ಅವುಗಳನ್ನು ನಿವಾರಣೆಮಾಡಿಸಿದರು. ಪ್ಲೇಗು ರೋಗದ ನಿವಾರಣೆಯ ಪ್ರಯತ್ನಗಳಿಗಾಗಿ ಜನರಿಗೆ ಒದಗಿಸಿದ ಸಹಾಯಗಳಿಗೂ ಸೇರಿ ಒಟ್ಟು ೨೦ ಲಕ್ಷರೂಪಾಯಿಗಳು ವೆಚ್ಚವಾದುವು. ಮೂಕಪ್ರಾಣಿಗಳಿಗೆ ಕ್ರೌರ್ಯ ವನ್ನು ತೋರಿಸಿದವರಿಗೆ ದಂಡನೆಯನ್ನು ವಿಧಿಸುವ ಕಾನೂನು ವಿಧಾಯಕ ವಾಗಿ ಆಚರಣೆಗೆ ಬಂದುದೂ ಮಹಾಮಾತೃಶ್ರೀಯವರ ಪ್ರೇರಣೆ ಯಿಂದಲೇ. ಕಾಡುಮೃಗಗಳನ್ನು ಕೂಡ ಮನಸ್ವಿಯಾಗಿ ಕೊಲ್ಲಲವಕಾಶ ವಿಲ್ಲದಂತೆ ನಿಬಂಧನೆಗಳು ರಚಿತವಾದುದೂ ಅವರ ಆಜ್ಞೆಯಿಂದಲೇ. ಮಾತೃವಾತ್ಸಲ್ಯವೇ ಮಹಾಮಾತೃಶ್ರೀಯವರ ಮನೋಧರ್ಮ; ದಯಾ ದಾಕ್ಷಿಣ್ಯಪೂರಿತವಾದ ಅನುಕಂಪವೇ ಅವರ ಚಿತ್ತವೃತ್ತಿ. ಒಂದು ಸಲ ಬಡವನೊಬ್ಬನಿಗೆ ಅರಮನೆಯಲ್ಲಿ ಚಾಕರಿಯನ್ನು ಬೇಗ ಕೊಡಬಹು ದಾಗಿದ್ದೂ ಅಧಿಕಾರಿಯವರೊಬ್ಬರು ಆಲಸ್ಯಮಾಡಿ, ಆತನು ಕೆಲಸಕ್ಕಾಗಿ ಬೇಡಿದಾಗ ಬಿರುನುಡಿಗಳನ್ನಾಡಿ ಗದರಿಸಿದರೆಂದು ಕೇಳಿ ಮಹಾಮಾತೃಶ್ರೀ ಯವರು, "ಅವರಿಗೆ ಒಂದನೆಯ ತಾರೀಖಿಗೆ ಸರಿಯಾಗಿ ತಿಂಗಳು ತಿಂಗಳೂ ಸಂಬಳ ಬರುತ್ತಿರುವಲ್ಲಿ ಆ ಬಡಪಾಯಿಯ ಕಷ್ಟಗಳು ಗಮನಕ್ಕೆ ಬಂದಾವೆ? ಅವರ ಸಂಬಳ ನಿಲ್ಲಿಸಿದರೆ ಆಗ ಬಡವರ ಕಷ್ಟಗಳೆಷ್ಟೆಂಬುದನ್ನು ತಿಳಿದಾರು" ಎಂದು ಅಪ್ಪಣೆಕೊಡಿಸಿ, ಕೂಡಲೆ ಅವನಿಗೆ ಚಾಕರಿ ದೊರೆಯುವಂತೆ ಮಾಡಿದರು.

ಶ್ರೀ ಮಹಾರಾಣಿ ರೀಜೆಂಟರವರು ಎಷ್ಟು ವಿಚಕ್ಷಣೆಯಿಂದ ಕೂಡಿ ರಾಜ್ಯಭಾರ ನಡೆಯಿಸಿದರೆಂಬುದಕ್ಕೆ ಅವರ ರಾಜ್ಯಭಾರ ಕಾಲದ ಎಂಟು ವರ್ಷಗಳ ಅವಧಿಯಲ್ಲಿ ಸಂಸ್ಥಾನದ ವಾರ್ಷಿಕ ಹುಟ್ಟುವಳಿಯು ಒಟ್ಟು ೩೬ ಲಕ್ಷ ರೂಪಾಯಿ ಗಳಷ್ಟು ಹೆಚ್ಚಾದುದೇ ದೊಡ್ಡದೊಂದು ನಿದರ್ಶನ. ವ್ಯವಸಾಯವು ವೃದ್ಧಿಹೊಂದಿ ಭೂಕಂದಾಯದ ಹುಟ್ಟುವಳಿಯು ಹೆಚ್ಚಿದುದೂ, ಚಿನ್ನದ ಗಣಿಯ ರಾಜಾದಾಯವು ಹೆಚ್ಚಿ ದುದೂ ಈ ಆಧಿಕ್ಯಕ್ಕೆ ಮುಖ್ಯ ಕಾರಣಗಳು. ಸದರನ್ ಮರಾಟಾ ರೈಲ್ವೇ ಕಂಪೆನಿಯವರ ಸಾಲವನ್ನು ತೀರಿಸುವುದಕ್ಕಾಗಿ ಏರ್ಪಡಿಸಿದ ಸಾಲತೀರ್ವೆ ನಿಧಿಗೆ ಹಣವನ್ನು ಸೇರಿಸಬೇಕಾದುದೂ, ವಿದ್ಯುಚ್ಛಕ್ತಿ ಏರ್ಪಾಡು ಮುಂತಾದುವುಗಳಿಗೆ ಹಣವನ್ನು ಕೊಡಬೇಕಾದುದೂ ವೆಚ್ಚವು ಹೆಚ್ಚಲು ಕಾರಣಗಳಾದುವು.

**ಪುರೋಭಿವೃದ್ಧಿ ಸಾಧನೆ**

ಹೊಸಹೊಸ ಭೂ ಪ್ರದೇಶಗಳಲ್ಲಿ ವ್ಯವಸಾಯವು ನಡೆಯಲುಪ ಕ್ರಮವಾಗಿ ವ್ಯವಸಾಯವು ನಡೆಯುತ್ತಿದ್ದ ವಿಸ್ತೀರ್ಣವು ೧೮೯೫ನೆಯ ಇಸವಿಯಲ್ಲಿ ೬೩ ಲಕ್ಷ ಎಕರೆಗಳಾಗಿದ್ದುದು, ೧೯೦೭ನೆಯ ಇಸವಿಯ ವೇಳೆಗೆ ೬೬ ಲಕ್ಷ ಎಕರೆಗಳಿಗೆ ಹೆಚ್ಚಿತು. ಮಾವತ್ತೂರು ಕೆರೆ, ಪರಶುರಾಮ ಪುರದ ಕೆರೆ, ಮಾರಸಾಬಿಹಳ್ಳಿ ಕೆರೆ— ಈ ಮೂರು ಕೆರೆಗಳಿಗಾಗಿ ಐದೂವರೆ ಲಕ್ಷ ರೂಪಾಯಿಗಳು ವೆಚ್ಚವಾದುವು. ೧೮೯೬ನೆಯ ಇಸವಿಯಲ್ಲಿ ಅನಾವೃಷ್ಟಿಯುಂಟಾಗುವ ಸಂಭವವಿದ್ದ ಕಾರಣ, ಗ್ರಾಮಾಂತರ ಪ್ರದೇಶ ಗಳಲ್ಲಿ ಬಾವಿಗಳನ್ನು ತೋಡಿಸುವುದಕ್ಕಾಗಿಯೂ, ವ್ಯವಸಾಯಗಾರರಿಗೆ ಸಾಲಗಳನ್ನು ಕೊಡುವುದಕ್ಕಾಗಿಯೂ ಹೇರಳವಾಗಿ ಹಣವು ಮಂಜೂರಾ ಯಿತು. ಸುಮಾರು ೫೦೦ ವಿದ್ಯಾಸಂಸ್ಥೆಗಳು ನೂತನವಾಗಿ ಸ್ಥಾಪಿತವಾಗಿ ವಿದ್ಯಾಭ್ಯಾಸದ ಒಟ್ಟು ವೆಚ್ಚವು ಎಂಟೂಕಾಲು ಲಕ್ಷ ರೂಪಾಯಿಗಳಿಂದ ಹನ್ನೊಂದೂವರೆ ಲಕ್ಷ ರೂಪಾಯಿಗಳಿಗೆ ಹೆಚ್ಚಿತು. ವಯಸ್ಕರಾದ ಹಿಂದೂ ವಿಧವೆಯರ ವಿದ್ಯಾಭ್ಯಾಸಕ್ಕಾಗಿ ಮೈಸೂರು ನಗರದ ಮಹಾರಾಣಿ ಬಾಲಿಕಾ ಪಾಠಶಾಲೆಯಲ್ಲಿ ವಿಶೇಷ ವಿಧದ ಎರಡು ತರಗತಿಗಳು ಪ್ರಾರಂಭವಾದುವು. ಅಮೇರಿಕಾ ಖಂಡದಲ್ಲಿ ವಿದ್ಯುಚ್ಛಕ್ತಿ ಉತ್ಪತ್ತಿಯ ಯಂತ್ರಾಲಯಗಳಲ್ಲಿ ಶಿಕ್ಷಣಹೊಂದಿ ಬರಲು ಸಂಸ್ಥಾನದಿಂದ ನಾಲ್ವರನ್ನು ಸರ್ಕಾರದ ವೆಚ್ಚದಲ್ಲಿ ಕಳುಹಿಸಿಕೊಟ್ಟರು. ಅನೇಕ ಸಂಚಾರ ಮಾರ್ಗಗಳು ಹೊಸದಾಗಿ ನಿರ್ಮಿತವಾದುದಲ್ಲದೆ, ತಡಸದ ಬಳಿಯಲ್ಲಿ ಭದ್ರಾ ನದಿಗೂ, ಎಡತೊರೆಯ (ಈಗಿನ ಕೃಷ್ಣರಾಜನಗರದ) ಬಳಿಯಲ್ಲಿ ಕಾವೇರೀ ನದಿಗೂ, ಹೊಳೆನರಸೀ ಪುರದ ಬಳಿಯಲ್ಲಿ ಹೇಮಾವತೀ ನದಿಗೂ ಭಾರಿ ಭಾರಿ ಸೇತುವೆಗಳಾದುವು. ಬೀರೂರಿನಿಂದ ಶಿವಮೊಗ್ಗೆಗೆ ರೈಲು ಮಾರ್ಗಗಳು ಏರ್ಪಟ್ಟು ೧೮೯೯ನೆಯ ಇಸವಿ ಡಿಸೆಂಬರು ತಿಂಗಳು ೧ನೆಯ ತಾರೀಖಿನ ದಿನ ಅಲ್ಲಿಯ ರೈಲು ಸಂಚಾರವು ಪ್ರಾರಂಭವಾಯಿತು. ಪೌರಸಭೆಗಳ ಸಂಖ್ಯೆಯು ೧೦೭ರಿಂದ ೧೨೪ಕ್ಕೆ ಹೆಚ್ಚಿತು. ''ಲೋಕಲ್ ಬೋರ್ಡುಗಳ ರೆಗ್ಯುಲೇಷನ್'' ವಿಧಾಯಕ ವಾಯಿತು. ಬೆಂಗಳೂರಿನಲ್ಲಿ ವಿಕ್ಟೋರಿಯಾ ಆಸ್ಪತ್ರೆಯ ಕಟ್ಟಡವು ಪೂರೈಸಿ, ಲಾರ್ಡ್ ಕರ್ಸನ್‌ರವರು ಅದರ ಪ್ರವೇಶ ಮಹೋತ್ಸವವನ್ನು ೧೯೦೦ನೆಯ ಇಸವಿಯಲ್ಲಿ ನೆರವೇರಿಸಿದರು. ಆಸ್ಪತ್ರೆಗಳ ಮತ್ತು ಡಿಸ್ಪೆನ್ಸರಿಗಳ ಸಂಖ್ಯೆಯು ೧೧೬ರಿಂದ ೧೩೫ಕ್ಕೆ ಹೆಚ್ಚಿತು. ಬೆಂಗಳೂರು ನಗರದಲ್ಲಿ ನೇತ್ರರೋಗ ಚಿಕಿತ್ಸಾಲಯವೊಂದು ೧೮೯೦ನೆಯ ಇಸವಿಯಲ್ಲಿ ಏರ್ಪಟ್ಟಿತು. ವಿದ್ಯುಚ್ಛಕ್ತಿಯನ್ನುತ್ಪತ್ತಿಮಾಡುವ ಕಾಮಗಾರಿಗಳು ಪೂರೈಸಿ, ತಿಂಗಳಿಗೆ ಒಂದೂವರೆ ಲಕ್ಷ ರೂಪಾಯಿಗಳ ಹುಟ್ಟುವಳಿಯು

ಬರುವಂತಾಯಿತು. ಶಿವನಸಮುದ್ರದ ಗಗನಚುಕ್ಕಿ ಜಲಪಾತದ ಸೊಗಸನ್ನು ತಮ್ಮ ಆಯುಷ್ಯವೆಲ್ಲ ಕಳೆಯುವವರೆಗೂ ಹಗಲಿರುಳೂ ನೋಡಿದರೂ ತೃಪ್ತಿಯಾಗುವಂತಿರಲಿಲ್ಲವೆಂದು ಸೌಂದರ್ಯ ಪ್ರೇಮಿಗಳೊಬ್ಬರು ಹೇಳಿದರೆ, ಶಿವನಸಮುದ್ರದ ವಿದ್ಯುಚ್ಛಕ್ತಿಯ ಯಂತ್ರಾಲಯವನ್ನು ಕಂಡು ಹರ್ಷಿಸಿದ ಶ್ರೀಮಾನ್ ಸಿಡ್ನಿ ಲೋ ಎಂಬವರು "ಭರತ ಖಂಡದ ಭೂತ ಭವಿಷ್ಯದ್ವರ್ತಮಾನಗಳಲ್ಲಿ ಆಸಕ್ತಿಯಿರತಕ್ಕವರು ದೂರ ದೇಶಗಳಿಂದ ಬಂದು ನೋಡಲರ್ಹವಾದ ದೃಶ್ಯವದು"* ಎಂದು ಕೊಂಡಾಡಿದರು. ಗಣಿಗಳ ಇಲಾಖೆ, ಸೈನ್ಯದ ಇಲಾಖೆ ಮುಂತಾದುವುಗಳೆಲ್ಲ ಉತ್ತಮಗೊಂಡು ಸುಧಾರಣೆಹೊಂದಿದುವು. ಮಹಾಮಾತೃಶ್ರೀಯವರು ತಮ್ಮ ಪುತ್ರಪುತ್ರಿಯರಿಗೆ ಮಾತ್ರವೇ ಅಲ್ಲದೆ, ಆಗ್ಗೆ ಐವತ್ತೈದೂವರೆ ಲಕ್ಷ ಮಂದಿಗಳಿಗಿಂತಲೂ ಅಧಿಕವಾಗಿದ್ದ ತಮ್ಮ ಪ್ರಜೆಗಳಿಗೆಲ್ಲ ಮಾತೃಶ್ರೀಯವರಾಗಿ ಅಭ್ಯುದಯಸಾಧನೆ ಮಾಡಿ ಚರಿತಾರ್ಥರಾದರು.

**ಸರ್ ಕೆ. ಶೇಷಾದ್ರಿ ಐಯುರವರು ದಿವಾನ್ ಪದವಿಯಿಂದ ವಿಶ್ರಾಂತರಾದುದು**

ದಿವಾನ್ ಸರ್ ಕೆ. ಶೇಷಾದ್ರಿ ಐಯುರವರು ದೇಹಾಲಸ್ಯ ನಿಮಿತ್ತವಾಗಿ ೧೯೦೦ನೆಯ ಇಸವಿ ಆಗಸ್ಟ್ ೧೧ನೆಯ ತಾರೀಖಿನಿಂದ ರಜವನ್ನು ಪಡೆದಿದ್ದು ೧೯೦೧ನೆಯ ಇಸವಿ ಮಾರ್ಚಿ ೧೮ನೆಯ ತಾರೀಖಿನ ದಿನ ಕೆಲಸದಿಂದ ವಿಶ್ರಾಂತರಾದರು. ಶ್ರೀ ಮಹಾರಾಣಿ ರೀಜೆಂಟರವರು ಅವರಿಗೆ ವಿಶ್ರಾಂತಿ ಸುಖವನ್ನು ಕೋರುವಾಗ್ಗೆ ಅವರಿಂದ ಮೈಸೂರು ಸಂಸ್ಥಾನಕ್ಕೆ ಲಭಿಸಿದ್ದ ಮಹತ್ತರವಾದ ಸೇವೆಯನ್ನು ಶ್ಲಾಘಿಸಿ, ಮೈಸೂರು ಸಂಸ್ಥಾನದ ಆಡಳಿತವು ಉಚ್ಚಹಂತಕ್ಕೇರಲು ಕಾರಣಗಳಾಗಿ ಪರಿಣಮಿಸಿದ ಅನೇಕ ಸುಧಾರಣೆಗಳಿಗೆಲ್ಲ ಅವರ ಶಕ್ತಿ ಸಾಮರ್ಥ್ಯಗಳೂ, ದೀರ್ಘಾಲೋಚನೆಯೂ, ಸಮಯಸ್ಫೂರ್ತಿಯೂ ಮುಖ್ಯ ಕಾರಣಗಳಾಗಿದ್ದುವೆಂದು ಸೂಚಿಸಿ, ಸಂಸ್ಥಾನದ ಮುಖ್ಯಮುಖ್ಯವಾದ ಆಡಳಿತ ಶಾಖೆಗಳಲ್ಲೆಲ್ಲ ಅವರ ಪ್ರಭಾವವು ಮುದ್ರಿತವಾಗಿದ್ದಿತೆಂದು ಶ್ಲಾಘಿಸಿ ಅಭಿನಂದಿಸಿದರು. ಅನಂತರ ಲಾರ್ಡ್ ಕರ್ಸನ್‌ರವರೂ, ಈಚೆಗೆ ದಿವಂಗತರಾದ ಐದನೆ ಜಾರ್ಜ್ ಪ್ರಭುಗಳವರೂ, ಸರ್ ಶೇಷಾದ್ರಿ ಐಯುರವರ ಶಕ್ತಿ ಸಾಮರ್ಥ್ಯಗಳನ್ನು ಶ್ಲಾಘಿಸಿದರು. ಆದರೆ ಅವರುಗಳ ಶ್ಲಾಘನೆಯ ವಾಣಿಗಳನ್ನು ಕೇಳಿ ಹರ್ಷಿಸಲು ಸರ್ ಕೆ. ಶೇಷಾದ್ರಿ ಐಯುರವರು ಜೀವಿಸಿರಲಿಲ್ಲ.

* "....is worth coming a long way to see, by those who are interested in the future, as well as the present and the past of India."

ಅವರು ೧೯೦೧ನೆಯ ಇಸವಿ ಸೆಪ್ಟೆಂಬರು ೧೩ನೆಯ ತಾರೀಖಿನ ದಿನವೇ ದಿವಂಗತರಾಗಿದ್ದರು. ಮುಂದೆ ೧೯೧೩ನೆಯ ಇಸವಿಯಲ್ಲಿ ಬೆಂಗಳೂರು ನಗರದಲ್ಲಿ ಮಹಾಜನರ ಚಂದಾ ಹಣದ ಸಹಾಯದಿಂದ ನಿರ್ಮಿತವಾಗಿದ್ದ ಅವರ ಲೋಹ ಪ್ರತಿಮೆಯನ್ನು ಅನಾವರಣಗೊಳಿಸಿದಾಗ್ಗೆ ಆಗಿನ ವೈಸ್ರಾಯಿಯವರಾಗಿದ್ದ ಲಾರ್ಡ್ ಹಾರ್ಡಿಂಜ್‌ರವರು, "ಆ ಕಾಲದ ಇತಿಹಾಸದ ಪ್ರತಿಯೊಂದು ಪುಟದಲ್ಲಿಯೂ ಅವರ ಕಾರ್ಯಸಾಧನೆಯು ಸ್ಫುಟವಾಗಿ ಮುದ್ರಿತವಾಗಿದೆ....ಹಿಂದಿನ ಘೋರ ಕ್ಷಾಮದ ಘೋರ ಪರಿಣಾಮವು ಇನ್ನೂ ಉಳಿದಿದ್ದ ಕಾರಣ, ಆಡಳಿತ ನಿರ್ವಹಣವು ಸುಲಭ ವಲ್ಲದಿದ್ದ ಕಾಲದಲ್ಲಿ ಅವರು ದಿವಾನ್ ಪದವಿಗೆ ಬಂದರು. ಆದಾಗ್ಗೂ ಆಳಿದ ಮಹಾಸ್ವಾಮಿಯವರಾದ ಶ್ರೀಮನ್ಮಹಾರಾಜ ಶ್ರೀ ಚಾಮರಾಜೇಂದ್ರ ಒಡೆಯರವರ ಕೃಪಾವಲಂಬನ ಮತ್ತು ಮಾರ್ಗದರ್ಶಿತ್ವಗಳಿಂದ ಭಾರತೀಯರ ರಾಜನೀತಿ ನೈಪುಣ್ಯಕ್ಕೆ ಭೂಷಣಪ್ರಾಯವಾದ ರೀತಿಯಲ್ಲಿ ಅವರು ಕಾರ್ಯಸಾಧನೆ ಮಾಡಿದರು. ಅವರು ದಿವಾನ್ ಪದವಿಗೆ ಬಂದಾಗ ಸಂಸ್ಥಾನದ ವಾರ್ಷಿಕ ಹುಟ್ಟುವಳಿಯು ೧ ಕೋಟಿ ರೂಪಾಯಿಗಳಾ ಗಿದ್ದುದು, ಅವರು ಆ ಹುದ್ದೆಯನ್ನು ಬಿಡುವ ವೇಳೆಗೆ ೧ ಕೋಟಿ ೮೦ ಲಕ್ಷ ರೂಪಾಯಿಗಳಿಗೆ ಹೆಚ್ಚಿದ್ದಿತು. ವ್ಯವಸಾಯವೂ ವ್ಯಾಪಾರವೂ ವೃದ್ಧಿ ಹೊಂದಿದುವು. ಪ್ರತಿಯೊಂದು ಆಡಳಿತ ಶಾಖೆಯಲ್ಲಿಯೂ ಅವರ ಕ್ರಿಯಾ ಶಕ್ತಿಯ ಕೈಚಳಕವು ಕಂಡುಬಂದು ಮಾರ್ಗದರ್ಶನವು ನಡೆಯಿತು. ಕ್ಷಾಮನಿವಾರಣೆಯ ಉದ್ದೇಶದಿಂದ ಭಾರಿ ಭಾರಿ ಸಾರ್ವಜನಿಕ ಕಾಮ ಗಾರಿಗಳು ನಡೆದು, ಸಂಸ್ಥಾನದ ನಾನಾ ಭಾಗಗಳಲ್ಲಿಯೂ ಸಂಚಾರ ಸೌಕರ್ಯವು ಕಲ್ಪಿತವಾಯಿತು. ವಿದ್ಯಾಭ್ಯಾಸದ ಅನುಕೂಲವೂ, ವೈದ್ಯ ಸಹಾಯದ ಸೌಕರ್ಯವೂ ಅಧಿಕವಾದುವು. ಬೆಂಗಳೂರು ಮೈಸೂರು ನಗರಗಳಲ್ಲಿಯ ಈಗಿನ ಸಮೃದ್ಧವಾದ ಜಲವಸತಿಯ ಏರ್ಪಾಡುಗಳಿಗೆ ಸರ್ ಶೇಷಾದ್ರಿ ಐಯರವರಿಂದ ಬಹಳ ಸಹಾಯವಾಯಿತು....... ಅವರ ಸಾಧನೆಗಳಲ್ಲೆಲ್ಲ ಅತ್ಯಂತ ಅಸಾಧಾರಣವಾದುದು, ಮೇಜರ್ ಜೆ. ಡಿ. ಲೊಬಿನಿಯರವರ ಸಹಾಯದಿಂದ ಅವರು ಏರ್ಪಡಿಸಿದ ವಿದ್ಯುಚ್ಛಕ್ತಿಯ ಉತ್ಪತ್ತಿಯ ವ್ಯವಸ್ಥೆ....ಇಂತಹ ಮಹಾಶಯರ ಪ್ರತಿಮೆಯ ಅನಾವರಣ ಮಹೋತ್ಸವವನ್ನು ನೆರವೇರಿಸುವ ಸುಯೋಗವನ್ನು ಪಡೆದಿರುವುದಕ್ಕಾಗಿ ನಾನು ಹೆಮ್ಮೆ ಪಡುತ್ತೇನೆ" ಎಂದರು.

ಸರ್ ಕೆ. ಶೇಷಾದ್ರಿ ಐಯರವರು ದಿವಾನ್ ಪದವಿಯಿಂದ ವಿಶ್ರಾಂತರಾದ ಮೇಲೆ ಶ್ರೀಮಾನ್ ಪಿ. ಎನ್. ಕೃಷ್ಣಮೂರ್ತಿಯವರು ದಿವಾನ್‌ರಾಗಿ ನೇಮಕವಾದರು.

**ಹೊಸ ದಿವಾನರು**

ದಿವಾನ್ ಪೂರ್ಣಯ್ಯನವರ ವಂಶೀಯರು ದಿವಾನ್ ಹುದ್ದೆಗೆ ಬಂದರೆಂದು ಮೈಸೂರು ಸಂಸ್ಥಾನದ ಪ್ರಜೆಗಳು ಹರ್ಷಿಸಿದರು.

## ಏಳನೆಯ ಅಧ್ಯಾಯ

## ರಾಜ್ಯಭಾರಸೂತ್ರ ಸ್ವೀಕಾರ ಮಹೋತ್ಸವ

**ರಾಜಾಧಿರಾಜಾಯ ಪ್ರಸಹ್ಯ ಸಾಹಿನೇ ನಮೋ ವಯಂ ವೈಶ್ರವಣಾಯ ಕುರ್ಮಹೇ।**
**ಸಮೇ ಕಾಮಾನ್ಕಾಮ ಕಾಮಾಯ ಮಹ್ಯಂ ಕಾಮೇಶ್ವರೋ ವೈಶ್ರವಣೋ ದದಾತು।**
**ಕುಬೇರಾಯ ವೈಶ್ರವಣಾಯ ಮಹಾರಾಜಾಯ ನಮಃ ॥**

ಶ್ಲಾಘ್ಯತರಾದ ರಾಜ್ಯಭಾರ ಕೌಶಲ್ಯದ ಫಲವಾಗಿ ಮಾದರಿ ಸಂಸ್ಥಾನವೆಂದು ಸುಪ್ರಸಿದ್ಧವಾದ ಮೈಸೂರು ಸಂಸ್ಥಾನದ ಪ್ರಭುತ್ವವನ್ನು ಸ್ವೀಕರಿಸಿ ಅದರ ಖ್ಯಾತಿಯನ್ನು ಸರ್ವ ವಿಧಗಳಲ್ಲಿಯೂ ವೃದ್ಧಿಗೊಳಿಸಬಲ್ಲ ಶಕ್ತಿ ಸಾಮರ್ಥ್ಯಗಳನ್ನು ತರುಣ ಮಹಾರಾಜರವರಾಗಿದ್ದ ಶ್ರೀ ಕೃಷ್ಣರಾಜೇಂದ್ರ ಒಡೆಯರ್ ಬಹದ್ದೂರರವರು ಸಂಪಾದಿಸಿದ್ದರು. ಸಾಮಾನ್ಯವಾದ ಪಠ್ಯ ವಿಷಯಗಳಲ್ಲಿಯ ಪ್ರೌಢಿಮೆಯ ಜೊತೆಗೆ, ವ್ಯವಹಾರ ಧರ್ಮಶಾಸ್ತ್ರ, ರೆವೆನ್ಯೂ ನಿಬಂಧನೆಗಳು, ರಾಜ್ಯಾಡಳಿತ ನಿರ್ವಹಣ ನಿಯಮಗಳು ಮುಂತಾದುವುಗಳು ಕರತಲಾಮಲಕವಾಗಿ ಅವುಗಳನ್ನು ಕಾರ್ಯರಂಗದಲ್ಲಿ ಅನ್ವಯಿಸಿ ರಾಜ್ಯಭಾರ ಮಾಡುವ ಕೌಶಲ್ಯವನ್ನೂ ಅವರು ಪಡೆದಿದ್ದರು. ಮೈಸೂರು ಸಂಸ್ಥಾನದಲ್ಲಿಯೂ ಭರತಖಂಡದ ಇತರ ಪ್ರದೇಶಗಳಲ್ಲಿಯೂ ಸಂಚಾರ ಕಾಲಗಳಲ್ಲಿ ನಡೆದ ಪರಿಶೀಲನೆಗಳಿಂದ ಆ ಕೌಶಲ್ಯಕ್ಕೆ ಒಪ್ಪ ಬಿಟ್ಟಂತಾಗಿದ್ದಿತು. ಭರತಖಂಡದ ಆಗಿನ ಕಾಲದ ಮತ್ತಾವ ಸಿಂಹಾಸನಾಧಿಕಾರಿಗಳಿಗೂ ಆ ಬಗೆಯ ಉಚ್ಚ ಶಿಕ್ಷಣವು ಲಭಿಸಿರಲಿಲ್ಲವೆಂದು "ಮದ್ರಾಸ್ ಮೇಲ್" ಮುಂತಾದ ಅನೇಕ ಪತ್ರಿಕೆಗಳು ಪ್ರಕಟಿಸಿದ್ದುವು. ಪ್ರಭುತ್ವವು ಸುಸೂತ್ರವಾಗಿ ನಡೆಯಲು ಸಾಧಕವಾಗಿದ್ದ ಆ ಶಿಕ್ಷಣದಿಂದ ಲಭಿಸಿದ್ದ ಪ್ರೌಢಿಮೆಯ ಜೊತೆಗೆ, ಪ್ರಜೆಗಳಲ್ಲಿ ಸಮಸ್ತ ವರ್ಗಗಳವರ ಹೃದಯವನ್ನೂ ಅರಿತು ಸಹಾಯಕರಾಗಿರಬೇಕೆಂಬ ಮನೋಧರ್ಮವು ವೃದ್ಧಿಯಾಗಿದ್ದಿತು. ಮಹಾಸ್ವಾಮಿಯವರು ಸಾಮಾನ್ಯರಂತೆ ಉಡುಪನ್ನು ಧರಿಸಿ ರೈತರು ಮುಂತಾದವರೊಡನೆ ಮಾತನಾಡಿ ಅವರ ಕಷ್ಟ ಸುಖಗಳನ್ನರಿತುಕೊಳ್ಳುತ್ತಿದ್ದರು. ಒಂದು ಸಲ ಅವರು ಹೀಗೆ ಅಶ್ವಾರೋಹಿಗಳಾಗಿ ಒಬ್ಬರೇ ಗ್ರಾಮಾಂತರ ಪ್ರದೇಶಕ್ಕೆ ಹೋಗಿದ್ದಾಗ ಒಂದು ಜೋಡೆತ್ತಿನ ಬಂಡಿಯ ಚಕ್ರಗಳು ಕೆಸರಿನಲ್ಲಿ ಹೂತುಕೊಂಡಿದ್ದುದನ್ನೂ,

**ಶಿಕ್ಷಣದ ವೈಶಿಷ್ಟ್ಯ**

ಬಂಡಿಯವನು ಎತ್ತುಗಳನ್ನು ಹೊಡೆದು ಅವುಗಳ ಬಾಲಗಳನ್ನು ನುಲಿಯು ತ್ತಿದ್ದುದನ್ನೂ ಕಂಡರು. ಸಮೀಪದಲ್ಲಿ ಸುಮ್ಮನೆ ನಿಂತಿದ್ದ ಕೆಲವರನ್ನು ಕುರಿತು, "ಎತ್ತುಗಳು ಬಂಡಿಯನ್ನೆಳೆಯಲಾರದೆ ಮುಕ್ಕರಿಯುತ್ತಿವೆ. ಪಾಪ, ಹಿಂಸೆಪಡುತ್ತಿವೆ. ಚಕ್ರಗಳನ್ನೆತ್ತಿ ಸಹಾಯ ಮಾಡಬಾರದೆ?" ಎಂದರು. ಅವರಲ್ಲೊಬ್ಬನು ತಮ್ಮೊಡನೆ ಮಾತನಾಡಿದವರಾರೆಂಬು ದನ್ನರಿಯದೆ, "ನಮ್ಮ ಗಾಡೀನಾ ನಾವು ಚಕ್ರಾ ಹೊಡೆಯಾಕೆ! ಯಾರದೋ ಗಾಡಿ" ಎಂದನು. ಅದಕ್ಕವರು, "ಬಂಡಿಯು ನಿಮ್ಮದಲ್ಲ. ಆದರೇನು? ಮೂಗು ಜೀವಿಗಳಿಗೆ ಸಹಾಯ ಮಾಡುವುದು ಧರ್ಮವಲ್ಲವೆ?" ಎಂದು ಕೇಳಿದರು. ಆತನು, "ಹಿಂಗೆ ಧರ್ಮಾ ಕರ್ಮಾ ಹೇಳೋದು ಸುಲಭಾನೇ. ಕುದುರೆ ಮ್ಯಾಗೆ ಕುಂತು ಹೇಳೋಕೇನಂತೆ" ಎಂದು ಪ್ರತ್ಯುತ್ತರ ಹೇಳಿದನು. ಮಹಾಸ್ವಾಮಿಯವರು ನಂಗಡಲೇ ಕುದುರೆಯಿಂದಿಳಿದು ಬಂಡಿಯ ಚಕ್ರಗಳು ಹೂತುಕೊಂಡಿದ್ದ ಸ್ಥಳಕ್ಕೆ ದಯಮಾಡಿ ಒಂದು ಕಡೆಯ ಚಕ್ರದ ಅರೇಕಾಲುಗಳನ್ನು ಹಿಡಿದು, "ಬನ್ನಿ, ಆ ಕಡೆಯ ಚಕ್ರಕ್ಕೆ ಈಗಲಾದರೂ ಕೈ ಹಾಕಿ" ಎಂದರು. ದುಡುಕಿ ಮಾತನಾಡಿ ದವನೂ ಅವನ ಸಂಗಡಿಗರೂ ನಾಚಿ ಓಡಿಬಂದು, ಹೂತುಹೋಗಿದ್ದ ಚಕ್ರಗಳನ್ನು ಮೇಲಕ್ಕೆತ್ತಲು ಸಹಾಯ ಮಾಡಿದರು. ಬಂಡಿಯು ಮುಂದೆ ಸಾಗಿದಮೇಲೆ ಮಹಾಪ್ರಭುಗಳು ಕುದುರೆಯನ್ನೇರಿದರು. ಆಗ ಆ ರೈತರಲ್ಲಿ ಮತ್ತೊಬ್ಬನು, "ನೀವು ಯಾರೋ ಏನೋ! ಅಯ್ಯೋ ನಮ್ಮಪ್ಪ, ಜೇಡನ ಪರೇ ಹಂಗೆ ಬೆಳ್ಳಗಿದ್ದ ಇಜಾರವೂ, ಕನ್ನಡೀ ಹಂಗೆ ಹೊಳೀತಿದ್ದ ಜೋಡುಗಳೂ, ಕೆಸರು ಮುದ್ದೆಯಾಗಿ ಹೋಯ್ತೇ!" ಎಂದನು. ಮಹಾಪ್ರಭುಗಳು ಮಂದಸ್ಮಿತದಿಂದ ಅವನ ಕಡೆಗೆ ನೋಡಿ ಕುದುರೆಯನ್ನು ಓಡಿಸಿಕೊಂಡು ದಯಮಾಡಿದರು.

ಸ್ವಭಾವದಿಂದ ಮಹೋನ್ನತರಾಗಿ, ಶಿಕ್ಷಣದಿಂದ ಸುಸಂಸ್ಕೃತರಾಗಿ, ಮೈಸೂರಿನ ಭಾಗ್ಯದಂತಿದ್ದ ಮಹಾಪ್ರಭುಗಳ ರಾಜ್ಯಭಾರಸೂತ್ರ ಸ್ವೀಕಾರ ಮಹೋತ್ಸವದ ಸುದಿನವು ಚಿರಸ್ಮರಣೀಯವಾದುದು. ೧೯೦೨ನೆಯ ಇಸವಿಯ ಆಗಸ್ಟ್ ೮ನೆಯ ತಾರೀಖಿನ ದಿನ ನಡೆಯಬೇಕಾಗಿದ್ದ ಆ ಮಹೋತ್ಸವದ ವೇಳೆಗೆ ವೈಸ್ರಾಯಿಯವರಾದ ಲಾರ್ಡ್ ಕರ್ಸನ್ ರವರು ದಯಮಾಡುವವರಾಗಿದ್ದರು.

ವೈಸ್ರಾಯಿಯವರಾಗಿದ್ದ ಲಾರ್ಡ್ ಕರ್ಸನ್‌ರವರ ಆಗಮನದ ವಾರ್ತೆಯು ಮೊದಲೇ ಬಂದಿದ್ದುದರಿಂದ, ಅಸಿಸ್ಟೆಂಟ್ ರೆಸಿಡೆಂಟ ರವರಾಗಿದ್ದ ಶ್ರೀಮಾನ್ ಸಿ. ಎಲ್. ಎಸ್. ರಸ್ಸಲ್‌ರವರೂ, ಶ್ರೀಮಾನ್

ವಿ. ಪಿ. ಮಾಧವರಾಯರವರೂ, ರಾಜಸೇನಾಭೂಷಣ ಶ್ರೀಮಾನ್ ಬಸವಪ್ಪಾಜಿ ಅರಸಿನವರೂ, ಅವರಿಗೆ ಸುಖಾಗಮನವನ್ನು ಬಯಸಲು

**ಲಾರ್ಡ್ ಕರ್ಸನ್ ರವರ ಆಗಮನ**

೧೯೦೨ನೆಯ ಇಸವಿ ಆಗಸ್ಟ್ ೩ನೆಯ ತಾರೀಖಿನ ದಿನವೇ ಹಿಂದೂಪುರಕ್ಕೆ ಹೋಗಿದ್ದರು. ವೈಸ್ರಾಯಿಯವರು ಮಾರನೆಯ ದಿನ ಬೆಳಗ್ಗೆ ಎಂಟೂವರೆ ಘಂಟೆಗೆ ಸ್ಪೆಷಲ್ ರೈಲಿನಲ್ಲಿ ಬೆಂಗಳೂರಿಗೆ ಬಂದರು. ಆಗ್ಗೆ ಬ್ರಿಟಿಷ್ ರೆಸಿಡೆಂಟರವರಾಗಿದ್ದ ಕರ್ನಲ್ ರಾಬರ್ಟ್ಸನ್‌ರವರೂ, ದಿವಾನ್‌ರಾಗಿದ್ದ ಶ್ರೀಮಾನ್ ಪಿ. ಎನ್. ಕೃಷ್ಣಮೂರ್ತಿಯವರೂ ಅವರನ್ನು ಸ್ವಾಗತಿಸಿದರು. ವೈಸ್ರಾಯಿಯವರು ರೆಸಿಡೆನ್ಸಿ ಬಂಗಲೆಗೆ ತೆರಳಿದರು. ಮಾರನೆಯ ದಿನ ಅವರು ಬೆಂಗಳೂರಿನಿಂದ ಹೊರಟು, ಆರನೆಯ ತಾರೀಖು ಶಿವನ ಸಮುದ್ರಕ್ಕೆ ತೆರಳಿ, ಏಳನೆಯ ತಾರೀಖು ಬೆಳಗ್ಗೆ ಎಂಟೂವರೆ ಘಂಟೆಗೆ ಸ್ಪೆಷಲ್ ರೈಲಿನಲ್ಲಿ ಮೈಸೂರು ನಗರಕ್ಕೆ ತಲಪಿದರು.

ಆಳಿದ ಮಹಾಸ್ವಾಮಿಯವರ ರಾಜ್ಯಭಾರಸೂತ್ರ ಸ್ವೀಕಾರ ಮಹೋತ್ಸವವು ೧೯೦೨ನೆಯ ಇಸವಿ ಆಗಸ್ಟ್ ೮ನೆಯ ತಾರೀಖಿನ ದಿನ

**ರಾಜ್ಯಭಾರಸೂತ್ರ ಸ್ವೀಕಾರ**

(ಶುಭಕೃನ್ನಾಮ ಸಂವತ್ಸರದ ಶ್ರಾವಣ ಶುದ್ಧ ಪಂಚಮೀ ಶುಕ್ರವಾರದ ದಿನ) ಮೈಸೂರು ನಗರದಲ್ಲಿರುವ ಜಗನ್ಮೋಹನ ಪ್ರಾಸಾದದಲ್ಲಿ ಮಹತ್ತರವಾದ ವೈಭವ ವಿಜೃಂಭಣೆಗಳಿಂದ ನಡೆಯಿತು. ವೈಸ್ರಾಯಿಯವರು ಅಂದು ಪ್ರಾತಃಕಾಲ ಒಂಬತ್ತೂಮುಕ್ಕಾಲು ಘಂಟೆಗೆ ಸಪರಿವಾರರಾಗಿ ಜಗನ್ಮೋಹನ ಪ್ರಾಸಾದಕ್ಕೆ ಬಂದರು. ಆಳಿದ ಮಹಾಸ್ವಾಮಿಯವರಾದ ಶ್ರೀಮನ್ಮಹಾರಾಜರವರೂ, ಬ್ರಿಟಿಷ್ ರೆಸಿಡೆಂಟರವರೂ ಅವರನ್ನು ಸ್ವಾಗತಿಸಿದರು.

ಜಗನ್ಮೋಹನ ಪ್ರಾಸಾದದಲ್ಲಿ ಉತ್ಸವ ಮಂಟಪವು ಮನೋಹರವಾಗಿರುವಂತೆ ಅಲಂಕೃತವಾಗಿ ಪ್ರಶಸ್ತವಾದೊಂದು ವೇದಿಕೆಯು ನಿರ್ಮಿತವಾಗಿದ್ದಿತು. ಮಹಾಸ್ವಾಮಿಯವರಿಗೂ ವೈಸ್ರಾಯಿಯವರಿಗೂ ಎರಡು ದಿವ್ಯಾಸನಗಳು ಸಿದ್ಧವಾಗಿದ್ದುವು. ಅವುಗಳ ಉಭಯ ಪಾರ್ಶ್ವಗಳಲ್ಲಿಯೂ ಸಾಲು ಸಾಲಾಗಿ ಕುರ್ಚಿಗಳಿದ್ದುವು. ಬಲಪಾರ್ಶ್ವದ ಕುರ್ಚಿಗಳಲ್ಲಿ ಬ್ರಿಟಿಷ್ ರೆಸಿಡೆಂಟರವರೂ, ಅವರ ಪರಿವಾರದವರೂ, ಬ್ರಿಟಿಷ್ ಸೇನೆಯ ಅಧಿಕಾರಿಗಳೂ, ಯೂರೋಪಿಯನ್ ದೊಡ್ಡಮನುಷ್ಯರುಗಳೂ ಮಂಡಿಸಿದ್ದರು. ಎಡಗಡೆ ಸಾಲಿನ ಕುರ್ಚಿಗಳಲ್ಲಿ ಆಗಿನ ದಿವಾನ್‌ರವರೂ, ಕೌನ್ಸಿಲ್ ಮೆಂಬರುಗಳೂ, ಇತರ ದೊಡ್ಡದೊಡ್ಡ ಅಧಿಕಾರಿಗಳೂ ಮತ್ತು ಅತಿಥಿಗಳೂ

ಮಂಡಿಸಿದ್ದರು. ಕಿಂಕಾಪಿನ ತೆರೆಯ ಹಿಂದೆ ಮಹಾಮಾತೃಶ್ರೀಯವರೂ, ಮಹಾಸ್ವಾಮಿಯವರ ಸಹೋದರಿಯರೂ, ಶ್ರೀ ಮಹಾರಾಣಿಯವರೂ, ಅರಸು ಪಂಗಡದ ಮಹಿಳೆಯರೂ ಕುಳಿತಿದ್ದರು. ಬ್ರಿಟಿಷ್ ಸೈನ್ಯದ ಬ್ಯಾಂಡಿನವರು ವಾದ್ಯಗಳನ್ನು ನುಡಿಸುತ್ತಿದ್ದರು. ಇತರ ಸಂಸ್ಥಾನಗಳ ಪ್ರಭುಗಳ ಪ್ರತಿನಿಧಿಗಳಾಗಿ ಬಂದಿದ್ದ ಮಹಾಶಯರುಗಳ ಮತ್ತು ಅತಿಥಿಗಳ ವಿವಿಧ ವರ್ಣರಂಜಿತಗಳಾದ ಉಡುಪುಗಳೂ, ಸೈನಿಕರೇ ಮುಂತಾದವರ ಉಡುಪುಗಳೂ ಉತ್ಸವದ ವೈಭವವನ್ನು ಹೆಚ್ಚಿಸಿದುವು. ಮಹಾಸ್ವಾಮಿಯವರಿಗೆ ಇತರ ಸಂಸ್ಥಾನಾಧೀಶರುಗಳೇ ಮುಂತಾದವರು ಒಪ್ಪಿಸಿದ್ದ ಖಿಲ್ಲತ್ತುಗಳ ಹರಿವಾಣಗಳು ನಾಲು ಸಾಲಾಗಿ ಶೋಭಿಸುತ್ತಿದ್ದುವು. ಉತ್ಸವವನ್ನವಲೋಕಿಸಲು ದರ್ಬಾರಿಗೆ ಬಂದಿದ್ದವರೆಲ್ಲರೂ ಎದ್ದುನಿಂತಿರುವಲ್ಲಿ ವೈಸ್ರಾಯಿಯವರೂ, ಶ್ರೀಮನ್ಮಹಾರಾಜ ಶ್ರೀ ಕೃಷ್ಣರಾಜೇಂದ್ರ ಒಡೆಯರವರೂ, ಒಬ್ಬರ ಪಾರ್ಶ್ವದಲ್ಲಿ ಮತ್ತೊಬ್ಬರು ಮೆಲುನಡೆಯಲ್ಲಿ ಬಿಜಯಂಗೈದರು. ವೈಸ್ರಾಯಿಯವರೂ, ಅವರೂ ವೇದಿಕೆಯ ಮುಂದಿದ್ದ ದಿವ್ಯಾಸನಗಳಲ್ಲಿ ಮಂಡಿಸಿದಮೇಲೆ ಇತರರೆಲ್ಲರೂ ಯಥಾಕ್ರಮವಾಗಿ ತಮ್ಮತಮ್ಮ ಸ್ಥಾನಗಳಲ್ಲಿ ಕುಳಿತರು. ವೈಸ್ರಾಯಿಯವರ ಫಾರಿನ್ ಸೆಕ್ರೆಟರಿಯವರು ಬಂದಿರಲಿಲ್ಲವಾದಕಾರಣ, ಅವರ ಪರವಾಗಿ ಇಂಡಿಯಾ ಸರ್ಕಾರದ "ಫಾರಿನ್" ಇಲಾಖೆಯ ಅಂಡರ್ ಸೆಕ್ರೆಟರಿಯವರು ಎದ್ದುನಿಂತು, ದರ್ಬಾರು ಉಪಕ್ರಮವಾಯಿತೆಂದು ಸೂಚಿಸಿದರು. ಕೂಡಲೆ ವೈಸ್ರಾಯಿಯವರು ಎದ್ದುನಿಂತು ಸ್ಫೂರ್ತಿದಾಯಕವಾದ ಭಾಷಣವನ್ನು ಮಾಡಿದರು. ಪ್ರಚಂಡ ಮೇಧಾವಿಗಳಾದವರ ಗುಂಪಿಗೆ ಸೇರಿದ್ದ ಲಾರ್ಡ್ ಕರ್ಜನ್‌ರವರು ಅಪ್ಪಣೆ ಕೊಡಿಸಿದ ಅಷ್ಟು ಉತ್ತಮವಾದ ಭಾಷಣವನ್ನು ಕೇಳಿದುದೇ ಒಂದು ಸುಯೋಗವೆಂದು ಸಮಸ್ತರೂ ಭಾವಿಸಿದರು. ಲಾರ್ಡ್ ಕರ್ಜನ್‌ರವರು ತಮ್ಮ ಬಾಲ್ಯದಲ್ಲೇ ವಾಗ್ಮಿಕಲೆಗೆ ಸುಪ್ರಸಿದ್ಧರಾಗಿದ್ದವರೆಂದಮೇಲೆ, ಅವರು ಪರಿಣತರಾಗಿ ಪ್ರತಿಭೆ ಪಾಂಡಿತ್ಯಗಳ ಜೊತೆಗೆ ಅನುಭವವನ್ನೂ ಪಡೆದಿದ್ದಾಗ್ಗೆ ಮಾಡಿದ ಭಾಷಣದ ಸೊಬಗನ್ನು ವರ್ಣಿಸಬೇಕಾದ ಪ್ರಕೃತವೇ ಇಲ್ಲ.

ವೈಸ್ರಾಯಿವರ ಭಾಷಣದ ಮುಖ್ಯ ಭಾಗಗಳ ಸಾರಾಂಶವನ್ನು ಇಲ್ಲಿ ಸೂಚಿಸಬಹುದಾಗಿದೆ: ಭರತಖಂಡದಲ್ಲಿ ಮಹಾರಾಜರೊಬ್ಬರಿಗೆ ರಾಜ್ಯಭಾರಸೂತ್ರಗಳನ್ನೊಪ್ಪಿಸುವ ಉತ್ಸವದಲ್ಲಿ ತಾವು ಭಾಗವಹಿಸಿದುದು ಅದೇ ಮೊದಲೆಂದು ಹೇಳಿ, ಮೈಸೂರು ಸಂಸ್ಥಾನದ ವಿಷಯದಲ್ಲಿಯೂ ಮತ್ತು ಶ್ರೀಮನ್ಮಹಾರಾಜ ಶ್ರೀ ಕೃಷ್ಣರಾಜೇಂದ್ರ ಒಡೆಯರವರ

ವಿಷಯದಲ್ಲಿಯೂ ತಮಗೆ ತೀವ್ರಾಸಕ್ತಿಯಿಲ್ಲದೆ ಹೋಗಿದ್ದರೆ ತಾವು ಆ ಸಮಯದಲ್ಲಿ ಸಿಮ್ಲಾ ನಗರದಿಂದ ಮೈಸೂರು ನಗರಕ್ಕೆ ಬರುತ್ತಿರಲಿಲ್ಲ ವೆಂದೂ ಅವರು ಹೇಳಿದರು. ಬ್ರಿಟಿಷ್ ಸರ್ಕಾರದ ಪ್ರಧಾನ ಸಚಿವರಾಗಿದ್ದ ಲಾರ್ಡ್ ಸ್ಯಾಲಿಸ್ಬರಿಯವರು, ಮೈಸೂರು ಸಂಸ್ಥಾನವನ್ನು ಶ್ರೀಚಾಮರಾಜೇಂದ್ರ ಒಡೆಯರವರ ಪ್ರಭುತ್ವಕ್ಕೊಪ್ಪಿಸಿದ

**ವೈಸ್ರಾಯಿವರ ಭಾಷಣದ ಸಾರಾಂಶ**

ನ್ಯಾಯವಾದ ಮತ್ತು ಔದಾರ್ಯಯುತವಾದ ಕಾರ್ಯಕ್ಕೆ ಮುಖ್ಯ ಕಾರಣಕರ್ತರು; ಅದು ಪರೀಕ್ಷಾರ್ಥವಾಗಿ ನಡೆದ ಕಾರ್ಯ; ಶ್ರೀ ಚಾಮರಾಜೇಂದ್ರ ಒಡೆಯರವರ ರಾಜ್ಯಭಾರವು ಮಾತ್ರ ಸಫಲವಾಗಿ ನೆರವೇರದೆ ಹೋಗಿದ್ದರೆ, ಆ ಔದಾರ್ಯವನ್ನು ತೋರಿದುದು ಅಯುಕ್ತವೆಂಬ ಆಕ್ಷೇಪಣೆಯು ಬರುತ್ತಿದ್ದುದರ ಜೊತೆಗೆ ಭಾರತೀಯ ಸಂಸ್ಥಾನಗಳ ಮತ್ತು ಭಾರತೀಯರ ಆಡಳಿತ ನಿರ್ವಹಣ ಸಾಮರ್ಥ್ಯದ ವಿಚಾರದಲ್ಲೇ ಕಳಂಕವು ಹೊರುವಂತಾಗುತ್ತಿದ್ದಿತು — ಎಂದು ಹೇಳಿದರು. ಅನಂತರ ಅವರು, ''ಆದಕಾರಣ, ಪ್ರತಿಯೊಬ್ಬರ ದೃಷ್ಟಿಯೂ ಮೈಸೂರು ಸಂಸ್ಥಾನದ ಕಡೆಗೇ ತಿರುಗಿದ್ದಿತು; ಪರೀಕ್ಷಾರ್ಥವಾಗಿ ಮಾಡಿದ ಆ ದೊಡ್ಡ ಏರ್ಪಾಡು ಯಾವ ರೀತಿ ಪರಿಣಮಿಸುವುದೆಂಬುದನ್ನೂ, ಮತ್ತು ಬ್ರಿಟಿಷ್ ಸರ್ಕಾರದವರು ನಿರ್ಭರಚಿತ್ತದಿಂದ ನೆರವೇರಿಸಿದ ಕಾರ್ಯವು ಹೇಗೆ ಸಾರ್ಥಕವಾಗುವುದೆಂಬುದನ್ನೂ ಸಮಸ್ತರೂ ನಿರೀಕ್ಷಿಸಿ ನೋಡುತ್ತಿದ್ದರು. ಸಂಸ್ಥಾನದ ಆಡಳಿತದಲ್ಲಿ ಲೇಶಮಾತ್ರವೂ ನ್ಯೂನತೆಗಳೇ ಇರಲಿಲ್ಲವೆಂದಾಗಲಿ, ಸ್ವಲ್ಪ ಮಾತ್ರವೂ ಆಕ್ಷೇಪಣೀಯವಲ್ಲದ ಮಟ್ಟಿಗೆ ಪರಿಪೂರ್ಣವಾದ ಶಿಸ್ತಿನಿಂದಲೇ ಸಮಸ್ತ ಕಾರ್ಯಗಳೂ ನಡೆದಿವೆಯೆಂದಾಗಲಿ ನಾನು ಹೇಳುವುದಿಲ್ಲ. ನಾವುಗಳು ಧ್ಯೇಯಗಳನ್ನು ಜನಜೀವನದ ಕಾರ್ಯರಂಗದಲ್ಲಿ ಸಾಧಿಸುವುದಕ್ಕಿಂತಲೂ ಅವುಗಳನ್ನು ಕುರಿತು ಮಾತನಾಡುವುದೇ ಹೆಚ್ಚು. ಆದರೆ, ಲೇಶವೂ ಸಂದೇಹವಿಲ್ಲದೆ ಇಷ್ಟನ್ನೇನೊ ನಾನು ಹೇಳಬಹುದಾಗಿದೆ: ಈ ಸಂಸ್ಥಾನದಲ್ಲಿ ಪ್ರಭುತ್ವ ಮಾಡಿದವರೂ, ಪ್ರಭುನಿಷ್ಠರಾಗಿ ದೇಶಾಭಿಮಾನದಿಂದ ಕೂಡಿದ್ದ ಸಚಿವರುಗಳೂ ಸಂಸ್ಥಾನದ ಆಡಳಿತವನ್ನು ಬಹು ಚೆನ್ನಾಗಿ ನಿರ್ವಹಿಸಿದ್ದಾರೆ. ಮೊದಲನೆಯ ದಿವಾನ್‌ರವರಾದ ಶ್ರೀಮಾನ್ ರಂಗಾಚಾರ್ಯರವರು (ಹಿಂದಿನ ಮಹಾರಾಜರವರಿಗೆ ಸಂಸ್ಥಾನವು ಸಮರ್ಪಿತವಾದ ಬಳಿಕ) ಹೆಚ್ಚು ಕಾಲ ಜೀವಿಸಿರಲಿಲ್ಲ. ಅವರ ತರುವಾಯ ದಿವಾನ್ ಪದವಿಗೆ ಬಂದ ಸರ್ ಶೇಷಾದ್ರಿ ಐಯರವರು ತಮ್ಮ ಕಾರ್ಯದಕ್ಷತೆಯ

ಮತ್ತು ಶಕ್ತಿ ಸಾಮರ್ಥ್ಯಗಳ ಧೋರಣೆಗನುರೂಪವಾದ ರೀತಿಯಲ್ಲಿ ಅಧಿಕಾರವನ್ನು ಹದಿನೆಂಟು ವರ್ಷಗಳ ಕಾಲ ಚಲಾಯಿಸಿ ಪ್ರತಿಯೊಂದು ಆಡಳಿತ ಶಾಖೆಯಮೇಲೂ ಅದರ ವರ್ಚಸ್ಸು ಬೀಳುವಂತೆ ಮಾಡಿದರು. ಹಿಂದಿನ ಮಹಾರಾಜರವರು ಸ್ನಿಗ್ಧಮಧುರವಾದ ತಮ್ಮ ಸುಸ್ವಭಾವದ ದೆಸೆಯಿಂದ ಸಮಸ್ತರ ಪ್ರೀತಿಗೌರವಗಳಿಗೂ ಪಾತ್ರರಾದರು. ಅವರು ಪೂರ್ವವಯಸ್ಸಿನಲ್ಲೇ ಅಕಾಲ ಮರಣಕ್ಕೆ ಗುರಿಯಾದುದು ಶೋಚನೀಯ ವಾದ ಅಂಶ" ಎಂದರು. ಅನಂತರ ಅವರು ಮಹಾಮಾತೃಶ್ರೀಯವರ ರಾಜ್ಯಭಾರ ಕೌಶಲ್ಯವನ್ನು ಶ್ಲಾಘಿಸಿ ಹೇಳಿದುದೇನೆಂದರೆ: "ಶ್ರೀಮನ್ಮಹಾ ರಾಜರವರು ಪ್ರಾಪ್ತವಯಸ್ಕರಾಗುವವರೆಗೂ ರಾಜ್ಯಾಡಳಿತವು ಸುಸೂತ್ರ ವಾಗಿ ಮುಂದುವರಿದಿರುವುದಕ್ಕೆ ಶ್ರೀ ಮಹಾರಾಣಿ ರೀಜೆಂಟರವರ ಸಂತತ ವಾದ ಅನುನಯ ವಿವೇಚನೆಗಳೇ ಮುಖ್ಯ ಕಾರಣಗಳೆಂದು ಹೇಳಲು ಇಂಡಿಯಾ ಸರ್ಕಾರದ ಆಡಳಿತದ ಅಧಿಪತಿಯಾಗಿ ನಾನು ಹರ್ಷಿಸುವೆನು. ರಾಜ್ಯಾಡಳಿತವನ್ನೂ ಕುಟುಂಬದ ಆಡಳಿತವನ್ನೂ ನಿರ್ವಹಿಸುವುದರಲ್ಲಿ ಆದರ್ಶ ರೀತಿಯಲ್ಲಿ ಅವರು ವರ್ತಿಸಿರುವುದು, ಪ್ರಜೆಗಳಿಗೂ ರಾಜಕುಟುಂಬ ದವರಿಗೂ ಸಮಾನವಾಗಿಯೇ ಅಮೂಲ್ಯವೆನಿಸಿ ಅಮೋಘವಾದ ಪ್ರಯೋಜನಗಳನ್ನುಂಟುಮಾಡಿದೆ; ಅಲ್ಲದೆ, ಮಹಾರಾಣಿ ರೀಜೆಂಟರವರ ವಿಷಯದಲ್ಲಿ ಸಮಸ್ತರ ಗೌರವವನ್ನೂ ಮೆಚ್ಚಿಕೆಯನ್ನೂ ಗಳಿಸಿಕೊಟ್ಟಿದೆ. ಈ ರೀತಿ ಉತ್ಕೃಷ್ಟವಾದ ಅವರ ರಾಜ್ಯಾಡಳಿತ ನಿರ್ವಹಣದ ವಿಚಾರದಲ್ಲಿ ಗೌರವ ಸೂಚಕವಾಗಿರುವಂತೆ ಈಗಿನ ೧೯ ಕುಶಾಲು ತೋಪುಗಳ ಮರ್ಯಾದೆಯೇ ಯಾವಜ್ಜೀವವೂ ಅವರಿಗೆ ಸಲ್ಲುವಂತೆ ಅಪ್ಪಣೆಯನ್ನು ದಯಪಾಲಿಸಬೇಕೆಂದು ನಾನು ಚಕ್ರವರ್ತಿ ಸಾರ್ವಭೌಮರಿಗೆ ಅರಿಕೆ ಮಾಡಿಕೊಂಡಿದ್ದುದನ್ನೂ, ಅಸಾಧಾರಣವಾದ ಈ ಗೌರವವು ಅವರಿಗೆ ಸಲ್ಲಬಹುದೆಂದು ಚಕ್ರವರ್ತಿ ಸಾರ್ವಭೌಮರು ಸಂತೋಷದಿಂದ ಆಜ್ಞಾಪಿಸಿ ಉಪಕರಿಸಿರುವುದನ್ನೂ ತಿಳಿಸಲು ನನಗೆ ಹರ್ಷವುಂಟಾಗಿದೆ. ಇಷ್ಟು ದೀರ್ಘ ಕಾಲ, ಗುರುತರವಾದ ಕರ್ತವ್ಯಭಾರವುಳ್ಳ ರೀಜೆಂಟ್ ಪದವಿಯನ್ನಲಂಕರಿಸಿ ರಾಜ್ಯಾಡಳಿತವನ್ನು ಅವರು ಯಶಸ್ವಿಯಾಗಿ ನಿರ್ವಹಿಸಿ ಈಗ ಅದನ್ನು ಬಿಟ್ಟುಬಿಡುವವರಾಗಿದ್ದಾರೆ. ಶ್ರೀ ಮಹಾರಾಣಿ ರೀಜೆಂಟರವರು ವಿವೇಕಮಯವಾದ ತಮ್ಮ ಮೇಲ್ವಿಚಾರಣೆಯ ಪರಿಣಾಮ ವಾದ ಸತ್ಫಲಗಳನ್ನು ಇನ್ನು ಮುಂದೆ ಪರಾಂಬರಿಸುತ್ತ ಬರುವಂತಾಗ ಲೆಂಬುದೂ ಮತ್ತು ಅವರ ಪುತ್ರರಾದ ಶ್ರೀಮನ್ಮಹಾರಾಜರವರ ರಾಜ್ಯ ಭಾರವು ಖ್ಯಾತಿವೆತ್ತು ಬೆಳಗುವುದನ್ನು ನೋಡಿ ಆನಂದಿಸಿ, ಆ ಆನಂದದ

ರೂಪದಲ್ಲಿ ತಮ್ಮ ಮಾತೃವಾತ್ಸಲ್ಯದ ಅಮೃತ ಫಲವನ್ನು ಪಡೆಯು ವಂತಾಗಲೆಂಬುದೂ ನಮ್ಮ ಹಾರೈಕೆ.''

ಅನಂತರ ವೈಸ್ರಾಯಿಯವರು ಶ್ರೀಮನ್ಮಹಾರಾಜ ಶ್ರೀಕೃಷ್ಣ ರಾಜೇಂದ್ರ ಒಡೆಯರವರಿಗೆ ಪಿತೃವಿಯೋಗಾನಂತರ ಎಂಟು ವರ್ಷಗಳ ಕಾಲ ಲಭಿಸಿದ ಶಿಕ್ಷಣದ ವಿಚಾರವನ್ನು ಪ್ರಸ್ತಾವಿಸಿ, "ಅವುಗಳು ಅಲಸತನದಿಂದಲೇ ಆಗಲಿ, ಅಥವಾ ಸುಖಪರಾಯಣತೆಯಿಂದಲೇ ಆಗಲಿ ಕಳೆದ ಸಂವತ್ಸರಗಳಲ್ಲ. ಶ್ರೀಮನ್ಮಹಾರಾಜರವರು ಗುರುತರವಾದ ಕಾರ್ಯಭಾರವನ್ನು ವಹಿಸುವುದಕ್ಕೆ ತಕ್ಕ ಸಾಮರ್ಥ್ಯವುಂಟಾಗಲನು ಕೂಲಿಸುವಂತಿದ್ದ ವ್ಯಾಸಂಗನಿಷ್ಠೆಯ ಸಂವತ್ಸರಗಳವು. ಮಹತ್ತರವಾದ ಮಹಾರಾಜ ಪದವಿಗೆ ಭೂಷಣಪ್ರಾಯರಾಗಿ ರಾಜ್ಯಭಾರವನ್ನು ನಿರ್ವಹಿ ಸುವ ಯೋಗ್ಯತಾಸಿದ್ಧಿಗಾಗಿ ಶ್ರಮಾವಹವಾಗಿದ್ದ ಸುಶಿಕ್ಷಣದ ಸಂವತ್ಸರ ಗಳವು. ಐವತ್ತು ಲಕ್ಷ ಪ್ರಜೆಗಳ ಯೋಗಕ್ಷೇಮ ಸಾಧನೆಯ ಭಾರವನ್ನು ವಹಿಸಿ ರಾಜ್ಯಭಾರ ಮಾಡುವುದು ಸುಲಭ ಕಾರ್ಯವಲ್ಲ. ಸತ್ವವಿಹೀನ ವಾಗಿರುವ ಕೇವಲ ಊನವಾದ ಶಿಕ್ಷಣ ದೊರೆತಲ್ಲಿ ಅದೆಂದಿಗೂ ಸಾಧು ವಾಗದು. ಶ್ರೀಮನ್ಮಹಾರಾಜರವರ ಶಿಕ್ಷಕರಾಗಿರಲು ಶ್ರೀಮಾನ್ ಫ್ರೇಸರರವರು ದೊರೆತುದು ನಮ್ಮ ಸುಯೋಗ. ಅವರು ಪೂರ್ಣನಿಷ್ಠೆಯ ಕರ್ತವ್ಯ ಬುದ್ಧಿಯುಳ್ಳವರು; ಅವರು ತಮ್ಮ ಶಿಷ್ಯರ ವಿಶ್ವಾಸಕ್ಕೆ ಪಾತ್ರ ರಾದುದರ ಜೊತೆಗೆ ತಮ್ಮ ಶಿಷ್ಯರ ಅವ್ಯಕ್ತ ಶಕ್ತಿ ಸಾಮರ್ಥ್ಯಗಳನ್ನು ವ್ಯಕ್ತರೂಪಕ್ಕೆ ತಂದು ವಿಕಾಸಗೊಳಿಸಲು ದಕ್ಷರೂ ಆಗಿದ್ದು ಕೆಲಸ ಮಾಡಿದರು. ಸಹಾನುಭೂತಿಯುಳ್ಳವರೂ ವಿವೇಕಶಾಲಿಗಳೂ ಆದ ಕರ್ನಲ್ ರಾಬರ್ಟ್ಸನ್‌ರವರು ಬ್ರಿಟಿಷ್ ರೆಸಿಡೆಂಟರಾಗಿದ್ದುಕೊಂಡು ಶ್ರೀಮನ್ಮಹಾರಾಜರವರಿಗೆ ಆಪ್ತರಾದ ಮಂತ್ರಾಲೋಚಕರಾಗಿದ್ದರು. ಶಿಕ್ಷಣ ಸಲಹೆಗಳ ರೂಪದ ಇವೆರಡು ಸಹಾಯದ ಜೊತೆಗೆ ಶ್ರೀಮನ್ಮಹಾ ರಾಜರವರಿಗೆ ಅರಮನೆಯಲ್ಲಿ ಶ್ರೀಮನ್ಮಹಾರಾಣಿ ರೀಜೆಂಟರವರ ವಾತ್ಸಲ್ಯಪೂರಿತವಾದ ಶಿಕ್ಷಣವೂ ಬುದ್ಧಿವಾದವೂ ಲಭಿಸಿದುವು. ಇವುಗಳ ಪರಿಣಾಮವಾಗಿ ಶ್ರೀಮನ್ಮಹಾರಾಜರವರ ಪ್ರಕೃತಿಸಿದ್ಧವಾದ ವಿವೇಚನೆ ವಿಚಕ್ಷಣೆಗಳು ಕ್ರಮಕ್ರಮವಾಗಿ ವಿಕಾಸ ಹೊಂದಿ, ಅವರೇ ರಾಜ್ಯಭಾರ ಸೂತ್ರಗಳನ್ನು ವಹಿಸಿ ಪ್ರಜಾಪರಿಪಾಲನ ಮಾಡುವ ಪೂರ್ಣ ಸಾಮರ್ಥ್ಯ ವನ್ನು ಪಡೆದಿದ್ದಾರೆಂಬುದನ್ನೂ ನನ್ನ ಮನಸ್ಸಿಗೆ ದೃಢಪಡಿಸಿಕೊಂಡಿದ್ದೇನೆ. ಅವರು ಸಂಸ್ಥಾನದ ನಾನಾ ಪ್ರದೇಶಗಳಲ್ಲಿಯೂ ಅನೇಕ ವೇಳೆ ಸಂಚರಿಸಿ ಪ್ರಜೆಗಳ ಸ್ಥಿತಿಯನ್ನು ನೋಡಿ ಅನುಭವಪಡೆದಿದ್ದಾರೆ; ಪ್ರಜೆಗಳ

ಕುಂದುಕೊರತೆಗಳನ್ನು ಪ್ರತ್ಯಕ್ಷವಾಗಿ ಪರಿಶೀಲಿಸಿ ಮನದಟ್ಟುಮಾಡಿ ಕೊಂಡಿದ್ದಾರೆ. ಅದರಿಂದ ಅವರಿಗುಂಟಾಗಿರುವ ತಿಳಿವಳಿಕೆಯ ದೆಸೆಯಿಂದ, ಅವರು ಇತ್ಯರ್ಥಪಡಿಸಬೇಕಾಗುವ ಕ್ಲಿಷ್ಟ ವಿಚಾರಗಳನ್ನು ಇತ್ಯರ್ಥಪಡಿಸಲು ಅನುಕೂಲವಾಗುತ್ತದೆ. ಶ್ರೀಮನ್ಮಹಾರಾಜರವರು ಈ ತಿಳಿವಳಿಕೆಯ ಸಹಾಯದಿಂದಲೂ, ಸಹಜವಾಗಿ ತಮ್ಮಲ್ಲಿ ನೆಲಸಿರುವ ಉದ್ಯೋಗಶೀಲತೆಯ ಮತ್ತು ಆತ್ಮ ಭರವಸೆಯ ಸಹಾಯದಿಂದಲೂ ವಿಚಕ್ಷಣೆಯಿಂದ ರಾಜ್ಯವನ್ನಾಳುವುದು ಅವರಿಗೆ ಸಾಧ್ಯವಾಗುತ್ತದೆ.. .................ಮಹತ್ತರವಾದ ಈ ಕಾರ್ಯವು ಸುಗಮವಾಗಿ ನೆರವೇರಿ, ಶ್ರೀಮನ್ಮಹಾರಾಜರವರು ಋಜುಮಾರ್ಗಾವಲಂಬಿಗಳಾಗಿ ಪ್ರಜಾಪಾಲನಮಾಡುವಂತೆ ಭಗವಂತನು ಪ್ರೇರಿಸಿ ಕೃಪೆಮಾಡಲಿ!" ಎಂದರು.

ಅನಂತರ, ಲಾರ್ಡ್ ಕರ್ಸನ್‌ರವರು ಮಹಾಸ್ವಾಮಿಯವರನ್ನು ಕುರಿತು ತಾವು ಕೆಲವು ಹಿತೋಕ್ತಿಗಳನ್ನಾಡುವ ಸಾಹಸ ಮಾಡುವುದಾಗಿ ಹೇಳಿ, ಅವುಗಳನ್ನು ಉಪದೇಶವೆಂದು ಭಾವಿಸಕೂಡದೆಂದು ವಿಜ್ಞಾಪಿಸಿ, ಅಮೂಲ್ಯವಾದ ಹಲವು ಹಿತೋಕ್ತಿಗಳನ್ನು ಸೂಚಿಸಿ, ತಾವು ವೈಸ್ರಾಯಿ ಹುದ್ದೆಯಲ್ಲಿರುವವರೆಗೂ ಆಪ್ತರಾಗಿದ್ದುಕೊಂಡು ಒತ್ತಾಸೆ ಕೊಡುವ ವಿಷಯದಲ್ಲಿ ಮಹಾಸ್ವಾಮಿಯವರು ಭರವಸೆಯನ್ನಿಟ್ಟುಕೊಳ್ಳಬಹು ದೆಂದರು. ಅವರು ಹೇಳಿದ ಹಿತೋಕ್ತಿಗಳಲ್ಲಿ ಕೆಲವನ್ನು ಇಲ್ಲಿ ಉದಾಹರಿಸ ಬಹುದು: "ತಮ್ಮ ದೇಶಬಾಂಧವರಾದ ಅನೇಕಾನೇಕ ಲಕ್ಷ ಪ್ರಜೆಗಳ ಸುಖಸಂತೋಷಗಳು ತಮ್ಮನ್ನವಲಂಬಿಸಿವೆ. ಅವರಾಗಲೇ ತಮ್ಮಲ್ಲಿ ಭಕ್ತಿವಿಶ್ವಾಸಯುತರಾಗಿದ್ದಾರೆ. ತಾವು ಚೆನ್ನಾಗಿ ರಾಜ್ಯಭಾರ ಮಾಡಿದರೆ ಅವರು ನಿಷ್ಠೆಯಿಂದ ನಡೆಯುತ್ತಾರೆ. ರಾಜ್ಯಭಾರವು ಚೆನ್ನಾಗಿಲ್ಲದೆ ಹೋದರೆ, ಅವರು ಔದಾಸೀನ್ಯವನ್ನು ತೋರಿಸಿ ಹತಾಶರಾಗುತ್ತಾರೆ. ತಮಗೆ ಮಹಾರಾಜ ಪದವಿಯು ಲಭಿಸಿರುವುದು ಸ್ವಂತ ಸುಖಕ್ಕಲ್ಲ. ಸ್ವಂತ ಸುಖಕ್ಕೆಂದು ಭಾವಿಸುವುದು ಮಾನವನು ಮಾಡಬಹುದಾದ ಪ್ರಮಾದಗಳಲ್ಲೆಲ್ಲ ಅತ್ಯಂತ ದುಷ್ಪರಿಣಾಮವುಳ್ಳುದಾಗಿದೆ. ತಮಗೆ ಮಹಾರಾಜ ಪದವಿಯು ಲಭಿಸಿರುವುದು, ಅವರ ಯೋಗಕ್ಷೇಮ ಸಾಧನೆ ಗಾಗಿ. ಆತ್ಮಸಾಕ್ಷಿಯಾಗಿ ಕರ್ತವ್ಯಪರಾಯಣತೆಯಿಂದ ತಾವು ರಾಜ್ಯ ಭಾರಮಾಡಿದರೆ ತಮ್ಮ ನಾಮಧೇಯವು ತಮ್ಮ ಪ್ರಜೆಗಳ ಹೃದಯದಲ್ಲಿ ಚಿರಸ್ಮರಣೀಯವಾಗಿರುವಂತೆ ಮಾಡಿಕೊಳ್ಳಬಹುದು. ತಮಗೆ ಲಭಿಸಿರುವ ಅವಕಾಶವನ್ನು ಸದುಪಯೋಗಪಡಿಸಿಕೊಳ್ಳದೆ ಅಲಸರಾಗಿ

ಹೋದರೆ, ತಮ್ಮ ನಾಮಧೇಯವು ನೀರಿನಮೇಲೆ ಬರೆದ ಅಕ್ಷರಗಳಂತಾಗುವುದು; ತಮ್ಮ ನೆನಪು ಧೂಮದಂತೆ ಕ್ಷಣಭಂಗುರವಾಗಿದ್ದು ಜನರ ಮನಸ್ಸಿನಿಂದ ಮಾಯವಾಗುವುದು. ಆದಕಾರಣ, ತಮ್ಮ ಜೀವನದ ಈ ಸಂಧಿ ಸಮಯದಲ್ಲಿ ಈ ವಿಷಯಗಳನ್ನು ನೆನಪಿನಲ್ಲಿಟ್ಟುಕೊಳ್ಳಬೇಕೆಂದು ನಾನು ಬೇಡುವೆನು. ಮನಃಪೂರ್ವಕವಾಗಿ ಉತ್ಸಾಹದಿಂದ ಕೆಲಸ ಮಾಡಿ. ನ್ಯಾಯವಾಗಿ ವರ್ತಿಸಿ. ಧೈರ್ಯಶಾಲಿಗಳಾಗಿ ನಡೆಯಿರಿ. ದೀನರಲ್ಲಿ ದಯೆತೋರಿಸಿ. ಸಮಸ್ತರಲ್ಲಿಯೂ ದಾಕ್ಷಿಣ್ಯವಂತರಾಗಿ ವರ್ತಿಸಿ. ತಾವು ಕೆಲಸ ಮಾಡುವಾಗ ಐವತ್ತು ವರ್ಷಗಳೇನೂ ಬಾಳುವುದಿಲ್ಲವೆಂದೂ, ಕೇವಲ ಐದೇ ವರ್ಷಗಳೇ ತಮ್ಮ ಆಯುಸ್ಸೆಂದೂ ಭಾವಿಸಿ ಕೆಲಸಮಾಡಿ. ಏಕೆಂದರೆ, ಕರ್ತವ್ಯಸಾಧನೆಯಲ್ಲಿ ಆಲಸ್ಯಕ್ಕೆ ಅವಕಾಶವೇ ಇಲ್ಲ. ಪ್ರಭುಗಳಾದವರು ಒಂದು ಕ್ಷಣವನ್ನೂ ವ್ಯರ್ಥಗೊಳಿಸದೆ ಸಂತತವೂ ಉದ್ಯೋಗಶೀಲರಾಗಿರಬೇಕು........"

ವೈಸ್ರಾಯಿಯವರಾಗಿದ್ದ ಲಾರ್ಡ್ ಕರ್ಸನ್‌ರವರು ನಿರ್ದಾಕ್ಷಿಣ್ಯವಾಗಿ ನುಡಿಯುವವರಾಗಿದ್ದರು. ಅವರು ಎಂತಹವರ ಮುಖೋಲ್ಲಾಸಕ್ಕಾಗಿಯೂ ಔಪಚಾರಿಕವಾಗಿ ಅಸತ್ಯವನ್ನು ನುಡಿಯುತ್ತಿರಲಿಲ್ಲ. ಅತಿಶಯೋಕ್ತಿಯ ಮೆರುಗಿನ ಮಾತುಗಳಿಗಂತೂ ಅವರ ಹೃದಯದಲ್ಲಿ ಸ್ಥಾನವೇ ಇರಲಿಲ್ಲ. ಅವರ ಜೀವನ ಚರಿತ್ರೆಯನ್ನು ಬರೆದಿರುವ ಲಾರ್ಡ್ ರೋನಾಲ್ಡ್‌ಷೇ ಅವರು, "ಲಾರ್ಡ್ ಕರ್ಸನ್‌ರವರು ತಮ್ಮ ಹಿಂದಿನ ವೈಸ್ರಾಯಿಗಳವರಲ್ಲಾರೂ ಹೋಗದಿದ್ದ ಭಾರತೀಯ ಸಂಸ್ಥಾನಗಳಿಗೂ ದಯಮಾಡಿದರು. ಅವರು ಹೋದೆಡೆಗಳಲ್ಲೆಲ್ಲ ಅವರ ಭಾಷಣಗಳನ್ನು ಕೇಳುವುದರಲ್ಲಿ ಜನರಿಗೆ ಅಸಾಧಾರಣವಾದ ಕುತೂಹಲ. ಏಕೆಂದರೆ, ಸಂಪ್ರದಾಯಾನುಸಾರವಾದ ಉಪಚಾರವಚನಗಳನ್ನಾಡುವುದಕ್ಕೆ ಪ್ರತಿಯಾಗಿ ಅವರು ತಮ್ಮ ಮನಸ್ಸಿನಲ್ಲಿದ್ದುದನ್ನು ಯಾವ ರಹಸ್ಯವೂ ಇಲ್ಲದೆ ಸ್ಪಷ್ಟವಾಗಿ ಹೇಳಿಬಿಡುತ್ತಿದ್ದರು"* ಎಂದು ಹೇಳಿದ್ದಾರೆ. ಲಾರ್ಡ್ ಕರ್ಸನ್‌ರವರು ಇಂಡಿಯಾ ಸರ್ಕಾರವನ್ನು ಕುರಿತು ಮಾತನಾಡಿದಾಗ ಕೂಡ "ಇಂಡಿಯಾ ಸರ್ಕಾರವು ಅಟ್ಟಹಾಸದ ಗುರುತ್ವದಿಂದಲೂ ಭೀಮ ಬಲದಿಂದಲೂ ಮೇಲ್ತರದ ಬುದ್ಧಿ

**ಗಮನಾರ್ಹವಾದ ಮೂರು ಅಂಶಗಳು**

---

* "Lord Curzon visited Native States in which no Viceroy had ever set foot before. Wherever he went, his utterances were followed with unusual interest, for in place of conventional compliments he spoke frankly what was in his mind."—Pp. 144-45, Vol II, *The Life of Lord Curzon*, by Lord Ronaldshay.

ಶಕ್ತಿಯಿಂದಲೂ ಕೂಡಿದ್ದರೂ ಮಂದಗಮನದಿಂದ ನಿಧಾನದ ಪರಮಾವಧಿಯನ್ನು ಪ್ರದರ್ಶಿಸುವ ಆನೆಯಂತಿದೆ”† ಎಂದು ಹೇಳಿದರು. ಇಂಡಿಯಾ ಸರ್ಕಾರದ ವಿಷಯದಲ್ಲಿ ಕೂಡ ಹಾಗೆ ನುಡಿದವರು ಇತರ ಸರ್ಕಾರಗಳ ವಿಷಯದಲ್ಲಿ ದೋಷವನ್ನೆತ್ತಿ ನಿರ್ದಾಕ್ಷಿಣ್ಯವಾಗಿ ನುಡಿಯದೆ ಬಿಡುತ್ತಿರಲಿಲ್ಲವೆಂಬುದು ಸ್ವತಸ್ಸಿದ್ಧವಾದ ಅಂಶ. ಅಂತಹವರು ಶ್ರೀ ಚಾಮರಾಜೇಂದ್ರ ಒಡೆಯರವರ ಮತ್ತು ಶ್ರೀ ಮಹಾರಾಣಿ ರೀಜಂಟರವರ ರಾಜ್ಯಭಾರ ವಿಚಕ್ಷಣೆಯನ್ನೂ, ಆಳಿದ ಮಹಾಸ್ವಾಮಿಯವರಾದ ಶ್ರೀಮನ್ಮಹಾರಾಜ ಶ್ರೀ ಕೃಷ್ಣರಾಜೇಂದ್ರ ಒಡೆಯರವರ ಶಕ್ತಿ ಸಾಮರ್ಥ್ಯಗಳನ್ನೂ ಕುರಿತು ಹೇಳಿದ ಆ ರೀತಿಯ ಶ್ಲಾಘನೆಯ ಮಾತುಗಳು ಅಮೂಲ್ಯವಾದುವು. ಲಾರ್ಡ್ ಕರ್ಸನ್‌ರವರು ತಮ್ಮ ಹಿತೋಕ್ತಿಗಳಲ್ಲಿ ಸೂಚಿಸಿ ಉಪದೇಶಿಸಿದ ಸದ್ಗುಣಗಳೆಲ್ಲ ಶ್ರೀಮನ್ಮಹಾರಾಜರವರಲ್ಲಿ ಆಗಲೇ ಪರಿಸ್ಫುಟವಾಗಿದ್ದುವೆಂಬುದು ನಾವು ಗಮನಿಸಬೇಕಾದ ಎರಡನೆಯ ಅಂಶ. ಮಹಾಸ್ವಾಮಿಯವರ ರಾಜ್ಯಭಾರವು ಸಾತ್ವಿಕತೆಯಿಂದ ಕೂಡಿ ಪ್ರಭುಗಳವರ ಧವಳಕೀರ್ತಿಯು ಮುಂದೆ ಬೆಳಗುವುದರ ಸಂಕೇತವೋ — ಎಂದು ತೋರುತ್ತಿದ್ದ ಸನ್ನಿವೇಶವೂ ಇದ್ದುದೊಂದು ವಿಶೇಷ. ಮಹಾಸ್ವಾಮಿಯವರಿಗೆ ಖಿಲ್ಲತ್ತುಗಳಾಗಿ ಬಂದಿದ್ದ ದಿವ್ಯ ವಸ್ತ್ರಾದಿ ಸುವಸ್ತುಗಳ ಜೊತೆಗೆ, ಮೈಯೂ ಕೊಂಬುಗಳೂ ಸಹ ಶುಭ್ರ ಧವಳ ವರ್ಣದಿಂದ ಕೂಡಿ ಬಹು ಸುಂದರವಾಗಿದ್ದ ಜಿಂಕೆಗಳೂ ಸಹ ಬಂದಿದ್ದುವು. ತಮ್ಮಲ್ಲಿದ್ದ ಉತ್ತಮೋತ್ತಮವಾದ ಜಾತಿಯ ಆ ಜಿಂಕೆಗಳನ್ನು ಮತ್ತಾರಿಗೂ ಕೊಡಲು ಸಮ್ಮತಿಸದಿದ್ದ ಭಾವನಗರದ ಮಹಾರಾಜರವರು ಆದರ ವಿಶ್ವಾಸಗಳಿಂದ ಅವುಗಳನ್ನು ಕಳುಹಿಸಿದ್ದರು. ಅತಿ ವಿರಳವಾದ ಆ ಜಿಂಕೆಗಳಲ್ಲೊಂದನ್ನು ವಾರ್ವಿಕ್ಸ್ ರೆಜಿಮೆಂಟಿನ ಲಾಂಛನವಾಗಿಟ್ಟುಕೊಳ್ಳಲು ಕೊಡಬೇಕೆಂದು ಬೆಳಗಾಂವಿಯಲ್ಲಿದ್ದ ಇಂಗ್ಲಿಷ್ ಸೈನ್ಯಾಧಿಕಾರಿಯು ಬೇಡಿದರೂ ಭಾವನಗರ ಸಂಸ್ಥಾನದ ಮಹಾರಾಜರು ಅದಕ್ಕೆ ಸಮ್ಮತಿಸಿರಲಿಲ್ಲ. ಇತರ ಕೆಲವು ವಿಚಾರಗಳಲ್ಲಿ ಉದಾರಿಗಳಾಗಿದ್ದೂ ಆ ಜಿಂಕೆಗಳನ್ನು ಕೊಡುವ ವಿಷಯದಲ್ಲಿ ಮಾತ್ರ ಅವರು ಕೃಪಣರು. ಮಹಾಸ್ವಾಮಿಯವರಲ್ಲಿ ಅವರಿಗಿದ್ದ ಸೌಹಾರ್ದಕ್ಕೂ ಗೌರವಕ್ಕೂ ಅವರು ಅವುಗಳನ್ನು ಕಳುಹಿಸಿದುದಕ್ಕಿಂತ

---

†"The Indian Government is like an elephant, very stately, very powerful, with a high standard of intelligence, but with a regal slowness in its gait."— Lord Curzon. (*Vide* page 64, Vol II, *The Life of Lord Curzon*, by Lord Ronaldshay.)

ಅಧಿಕವಾದ ನಿದರ್ಶನವು ಮತ್ತಾವುದೂ ಅವಶ್ಯವಾಗಿರಲಿಲ್ಲವೆಂದು, ಶ್ರೀಮನ್ಮಹಾರಾಜ ಶ್ರೀ ಕೃಷ್ಣರಾಜೇಂದ್ರ ಒಡೆಯರವರ ಪ್ರೈವೇಟ್ ಸೆಕ್ರೆಟರಿಯವರಾಗಿ ಅದೇ ತಾನೆ ನೇಮಕವಾಗಿದ್ದ ಸರ್ ಇವ್ಯಾನ್ ಮೆಕಾನಕಿ, ಕೆ.ಸಿ.ಐ.ಇ., ಸಿ.ಎಸ್.ಐ. ಅವರು ತಮ್ಮ ಗ್ರಂಥದಲ್ಲಿ ಹೇಳಿದ್ದಾರೆ. ನಾವು ಗಮನಿಸಬೇಕಾದ ಮೂರನೆಯ ಅಂಶವು, ಕೇವಲ ಕರ್ತವ್ಯಬುದ್ಧಿಯಿಂದ ಮಾತ್ರವೇ— ಅದೂ ಶೋಕದಿಂದ ಬಸವಳಿಯುತ್ತಿದ್ದಾಗ— ರೀಜೆಂಟ್ ಪದವಿಯನ್ನಲಂಕರಿಸಿದಂತೆಯೇ ಕೇವಲ ಶುದ್ಧವಾದ ಅನಾಸಕ್ತಿಯಿಂದ ಆ ಪದವಿಯನ್ನು ಬಿಟ್ಟುಕೊಟ್ಟು ಮಹಾಮಾತೃಶ್ರೀಯವರು ವರ್ಧಿಷ್ಣುಗಳಾದ ತಮ್ಮ ಸತ್ಪುತ್ರರ ಶ್ರೇಯೋಭಿಲಾಷಿಗಳಾದುದು. ಇದೆಷ್ಟು ಕಷ್ಟವೆಂಬುದನ್ನು, ಅಧಿಕಾರ ಚಲಾಯಿಸುವುದರ ಸವಿಯನ್ನರಿತವರು ಮಾತ್ರವೇ ಗ್ರಹಿಸಬಲ್ಲರು. ಸರ್ ಇವ್ಯಾನ್ ಮೆಕಾನಕಿ ಅವರು ಹೇಳಿರುವ, "ಹಿಂದೆ ರೀಜೆಂಟರವರಾಗಿದ್ದ ಶ್ರೀ ಮಹಾರಾಣಿಯವರ ಗೌರವದ ಕಾಣಿಕೆಯಾಗಿ ಶ್ಲಾಘನೆಯ ಮಾತೊಂದು ಸಲ್ಲಬೇಕಾಗಿದೆ. ತಮ್ಮ ಪುತ್ರರು ಅಪ್ರಾಪ್ತವಯಸ್ಕರಾಗಿದ್ದಾಗ್ಗೆ ಸುಮಾರು ಎಂಟು ವರ್ಷಗಳ ಕಾಲ ಸಂಸ್ಥಾನವನ್ನಾಳಿದ್ದ ತೇಜಸ್ವಿನಿಯೂ ವಿದ್ಯಾವತಿಯೂ ಆದ ಮಹಿಳೆಯವರು ರಾಜ್ಯಭಾರ ಲಾಲಸೆಯನ್ನು ಅಲ್ಪಸ್ವಲ್ಪ ಹೊಂದಿದ್ದರೂ ಅದು ಸರ್ವಥಾ ಕ್ಷಮಾಯೋಗ್ಯವಾಗುತ್ತಿದ್ದಿತೇ ಹೊರತು ಅದರಲ್ಲಿ ಆಶ್ಚರ್ಯವೇನೂ ಇರುತ್ತಿರಲಿಲ್ಲ. ಆದರೆ ನಾನು ಮೈಸೂರು ಸಂಸ್ಥಾನದಲ್ಲಿದ್ದ ಏಳು ವರ್ಷಗಳ ಅವಧಿಯಲ್ಲಿ (ಎಂದರೆ, ೧೯೦೨ರಿಂದ ೧೯೦೯ರ ವರೆಗೆ) ಸಾಮಾನ್ಯವಾದ ವೈಯಕ್ತಿಕ ವಿಚಾರಗಳಲ್ಲಿ ಕೂಡ ಅವರು ತಮ್ಮ ಪುತ್ರರ ರಾಜ್ಯಭಾರ ನಿರ್ವಹಣ ಕ್ಷೇತ್ರಕ್ಕೆ ಪ್ರವೇಶಿಸಿ ತಮ್ಮ ಅಧಿಕಾರವನ್ನು ತೋರ್ಪಡಿಸಬೇಕೆಂಬ ಅಭಿಲಾಷೆಯ ಲವಲೇಶವನ್ನೂ ಸೂಚಿಸಿದ ಒಂದು ಸನ್ನಿವೇಶವನ್ನೂ ನಾನರಿಯೆ. ಘನತೆಗೂ ಸದ್ಭಾವಪೂರಿತವಾದ ವಿವೇಕಕ್ಕೂ ಇದಕ್ಕಿಂತ ಮಿಗಿಲಾದ ನಿದರ್ಶನವಾವುದೂ ಇಲ್ಲ"* ಎಂಬ ಶ್ಲಾಘನೆಯ ವಾಣಿಗಳು ಅಕ್ಷರಶಃ ನಿಜ.

---

* "A word of tribute is due to Her Highness the Maharani, late Regent. A certain clinging to power would have been more than excusable on the part of a lady of character and education who for the six (eight ?) years of minority had ruled the State. But I can say that never during the seven years I spent in Mysore was I aware of the faintest indication on her part of a desire to intrude, even in minor personal matters upon her son's domain. Dignity and good sense could no further go."—P. 140, *Life in the Indian Civil Service*, by Sir Evan Maconochie, K.C.I.E., C.S.I.

ವೈಸ್ರಾಯಿಯವರು ತಮ್ಮ ಭಾಷಣವನ್ನು ಮುಗಿಸಿದ ಬಳಿಕ ಶ್ರೀಮನ್ಮಹಾರಾಜ ಶ್ರೀ ಕೃಷ್ಣರಾಜೇಂದ್ರ ಒಡೆಯರವರಿಗೆ ಹಸ್ತಲಾಘವ

**ಶ್ರೀಮನ್ಮಹಾರಾಜರವರ ಪ್ರತ್ಯುತ್ತರ ಭಾಷಣದ ಸಾರಾಂಶ**

ವನ್ನು ಕೊಟ್ಟುವೇದಿಕೆಯ ಮೇಲಕ್ಕೆ ಕರೆದೊಯ್ದು ಅಲ್ಲಿ ಸಿದ್ಧವಾಗಿದ್ದ ಭದ್ರಾಸನದಲ್ಲಿ ಕುಳ್ಳಿರಿಸಿ ಅದರ ಪಕ್ಕದಲ್ಲಿದ್ದ ಮತ್ತೊಂದು ದಿವ್ಯಾಸನದಲ್ಲಿ ತಾವು ಮಂಡಿಸಿದರು. ಇಂಡಿಯಾ ಸರ್ಕಾರದ "ಫಾರಿನ್" ಇಲಾಖೆಯ ಅಂಡರ್ ಸೆಕ್ರೆಟರಿಯವರು ಅನಂತರ ಶ್ರೀಮನ್ಮಹಾರಾಜ ಶ್ರೀ ಕೃಷ್ಣರಾಜೇಂದ್ರ ಒಡೆಯರವರ ಬಿರುದಾವಳಿಗಳನ್ನು ಪಠಿಸಿ ಉದ್ಘೋಷಿಸಿದ ಬಳಿಕ ಅವರಿಗೆ ರಾಜ್ಯಾಡಳಿತದ ಪೂರ್ಣಾಧಿಕಾರಗಳೂ ವಹಿಸಲ್ಪಟ್ಟುದಾಗಿ ಹೇಳಿದರು. ಬ್ಯಾಂಡಿನವರು ಸಂಗಡಲೇ ರಾಷ್ಟ್ರ ಗೀತೆಯನ್ನು ನುಡಿಸಿದರು. ಕೋಟೆಯ ಬತೇರಿಯಿಂದ ಇಪ್ಪತ್ತೊಂದು ಕುಶಾಲು ತೋಪುಗಳು ಮೊಳಗಿದುವು. ವೈಸ್ರಾಯಿಯವರ ಖಿಲ್ಲತ್ತುಗಳು ಮಹಾಸ್ವಾಮಿಯವರಿಗೆ ಸಮರ್ಪಿತವಾದುವು. ಅನಂತರ ಅವರು ಎದ್ದುನಿಂತು ವೈಸ್ರಾಯಿಯವರ ಭಾಷಣಕ್ಕೆ ಪ್ರತ್ಯುತ್ತರವಾಗಿ ಇಂಗ್ಲಿಷ್ ಭಾಷೆಯಲ್ಲಿ ಒಂದು ಅಮೋಘವಾದ ಆಶುಭಾಷಣವನ್ನು ಅಪ್ಪಣೆ ಕೊಡಿಸಿದರು. ಆ ಭಾಷಣದ ಆರಂಭದಲ್ಲಿ, ಅವರು ಚಕ್ರವರ್ತಿ ಸಾರ್ವಭೌಮರಾಗಿದ್ದ ಏಳನೆಯ ಎಡ್ವರ್ಡ್ ಪ್ರಭುಗಳವರಲ್ಲಿ ತಮಗಿದ್ದ ಗೌರವ ವಿಶ್ವಾಸಗಳನ್ನೂ, ಅವರ ದೇಹಾಲಸ್ಯವು ಗುಣವಾದುದಕ್ಕಾಗಿ ತಮಗುಂಟಾಗಿದ್ದ ಅಮಿತವಾದ ಸಂತೋಷವನ್ನೂ, ವೈಸ್ರಾಯಿಯವರಲ್ಲಿ ತಮಗಿದ್ದ ಪ್ರೀತಿ ವಿಶ್ವಾಸಗಳನ್ನೂ ಸೂಚಿಸಿದರು. ಲಾರ್ಡ್ ಕರ್ಸನ್‌ರವರು ಎರಡನೆಯ ಸಾರಿ ಮೈಸೂರು ಸಂಸ್ಥಾನಕ್ಕೆ ದಯಮಾಡಿಸಿದ್ದುದಕ್ಕಾಗಿ ತಮ್ಮ ಸಂತೋಷ ಕೃತಜ್ಞತೆಗಳನ್ನು ತಿಳಿಸಿದರು. ಅನಂತರ ಮಹಾಸ್ವಾಮಿಯವರು ಅಪ್ಪಣೆ ಕೊಡಿಸಿದುದೇನೆಂದರೆ: "ಈಗ ನಮ್ಮ ಮೇಲೆ ಹೊತ್ತಿರುವ ಕರ್ತವ್ಯನಿರ್ವಹಣದ ಉತ್ತರವಾದಿತ್ವವೆಷ್ಟು ಗುರುತರವಾದುದೆಂಬುದನ್ನು ನಾವು ಸಂಪೂರ್ಣವಾಗಿ ಮನಗಂಡಿರುವೆವು. ಅದನ್ನು ಕಾರ್ಯರಂಗದಲ್ಲಿ ಪ್ರದರ್ಶಿಸಿ ತೋರಿಸಬೇಕೆಂಬುದು ನಮ್ಮ ಉದ್ದೇಶವೇ ಹೊರತು, ಕೇವಲ ಮಾತಿನ ವರ್ಣನೆಯಿಂದ ವಿವರಿಸುವ ಅಭಿಲಾಷೆಯು ನಮಗಿಲ್ಲ. ನಮಗೆ ಲಭಿಸಿರುವ ಪಿತ್ರಾರ್ಜಿತ ಭಾಗ್ಯವಾದ ಸಂಸ್ಥಾನದ ರಾಜ್ಯಭಾರಾಧಿಕಾರವು ಸಾಮಾನ್ಯವಾದುದಲ್ಲ. ವಿವೇಕಿಗಳಾದ ರಾಜನೀತಿ ಕೋವಿದರ ಆಡಳಿತ ನಿರ್ವಹಣದಿಂದಲೂ, ನಮ್ಮ ಪೂಜ್ಯ ಮಾತೆಯವರು ರೀಜೆಂಟ್ ಪದವಿಯನ್ನಲಂಕರಿಸಿದ್ದಾಗ ಬ್ರಿಟಿಷ್

ಸರ್ಕಾರದವರು ಸಂಸ್ಥಾನದ ಹಿತಚಿಂತನೆ ಮಾಡಿ ಜಾಗರೂಕತೆಯಿಂದ ನೋಡಿಕೊಂಡುದರಿಂದಲೂ ಸಂಸ್ಥಾನಕ್ಕೆಷ್ಟು ಉಪಕಾರವಾಗಿದೆಯೆಂಬುದನ್ನು ನಾವು ಹೃದಯಂಗಮವಾಗಿ ಮನದಟ್ಟುಮಾಡಿಕೊಂಡು ಮೆಚ್ಚಿಕೊಂಡಿರುವೆವು. ಆದಾಗ್ಗ್ಯೂ, ಇತರರು ಆರ್ಜಿಸಿದ ಯಶೋಮಾಲೆಯಿಂದಲೇ ನಾವು ತೃಪ್ತಿಪಟ್ಟುಕೊಂಡಿರುವುದು ಉಚಿತವಲ್ಲವೆಂಬುದನ್ನೂ ನಾವು ಸಂಪೂರ್ಣವಾಗಿ ಗಮನಕ್ಕೆ ತಂದುಕೊಂಡು ಮನಗಂಡಿದ್ದೇವೆ. ನಮ್ಮ ಪ್ರಜೆಗಳಿಗೆ ಈಗ ಲಭಿಸಿರುವ ಸೌಕರ್ಯಗಳಿಗೆ ಚ್ಯುತಿಬಾರದಂತೆ ನೋಡಿಕೊಳ್ಳುವುದರ ಜೊತೆಗೆ ಕಾರ್ಯದಕ್ಷತೆಯ ಉಚ್ಚಹಂತಕ್ಕೇರಿ ಇನ್ನೂ ಅಧಿಕತರವಾದ ಸೌಕರ್ಯಗಳನ್ನು ಕಲ್ಪಿಸುವುದಕ್ಕಾಗಿ ನಮ್ಮ ಸರ್ವಸಾಮರ್ಥ್ಯಗಳನ್ನೂ ಪ್ರಯೋಗಿಸಿ ಪ್ರಯತ್ನಗಳನ್ನು ನಡೆಯಿಸಬೇಕೆಂಬುದೂ ಸಂಪೂರ್ಣವಾಗಿ ನಮಗೆ ವಿದಿತವಾಗಿದೆ. ನಾವು ಇತ್ಯರ್ಥಪಡಿಸಿ ವ್ಯವಸ್ಥೆಗೊಳಿಸಬೇಕಾದ ಪ್ರಬಲ ವಿಚಾರಗಳನ್ನು ಬಗೆಹರಿಸಿ ಕಾರ್ಯಸಾಧನೆ ಮಾಡಲು ನಮಗೆ ಎಷ್ಟುಮಟ್ಟಿನ ಸಾಮರ್ಥ್ಯವನ್ನು ಜಗದೀಶ್ವರನು ದಯಪಾಲಿಸಿರುವನೆಂಬುದು ಮುಂದೆ ಮಾತ್ರವೇ ವ್ಯಕ್ತವಾಗಬೇಕಾಗಿರುವ ಅಂಶ. ಆದಾಗ್ಗ್ಯೂ, ನಮ್ಮ ಸನ್ಮಿತ್ರರೂ, ಮೈಸೂರು ಸಂಸ್ಥಾನದ ಬ್ರಿಟಿಷ್ ರೆಸಿಡೆಂಟರವರೂ ಆದ ಕರ್ನಲ್ ಡೋನಾಲ್ಡ್ ರಾಬರ್ಟ್ಸನ್‌ರವರ ಸಹಾಯವು ನಮಗೆ ಇನ್ನೂ ಸ್ವಲ್ಪಕಾಲದವರೆಗಾದರೂ ಲಭಿಸಿರುವುದೆಂಬ ಪ್ರತ್ಯಾಶೆಯಿಂದ ನಮ್ಮ ಮನಸ್ಸಿಗೊಂದು ಸಮಾಧಾನ. ಶ್ರೀಮಾನ್ ಫ್ರೇಸರವರು ನಮಗೆ ಕೊಟ್ಟಿರುವ ಶಿಕ್ಷಣದ ಪ್ರಭಾವದಿಂದ, ನಮ್ಮ ಗುರುತರವಾದ ಕರ್ತವ್ಯನಿರ್ವಹಣದ ಕಷ್ಟವೆಷ್ಟೆಂಬುದನ್ನು ನಾವು ಸ್ವಲ್ಪಮಟ್ಟಿಗೆ ಮನದಟ್ಟುಮಾಡಿಕೊಂಡೇ ಕಾರ್ಯಾರಂಭಮಾಡುವವರಾಗಿರುವೆವೆಂದು ವಿನಯಪೂರ್ವಕವಾಗಿ ತಿಳಿಸಲಿಚ್ಛಿಸುವೆವು. ಶ್ರೀಮಾನ್ ಫ್ರೇಸರವರು ಕಳೆದ ಆರು ವರ್ಷಗಳ ಕಾಲ ಶ್ರಮಿಸಿದುದು ನಿಷ್ಫಲವಾಗಲಿಲ್ಲವೆಂಬುದನ್ನು ಆಡಳಿತ ನಿರ್ವಹಣದಿಂದ ಪ್ರದರ್ಶಿಸಿ ಅವರ ಮನಸ್ಸಿಗೆ ಹರ್ಷವನ್ನುಂಟುಮಾಡಬೇಕೆಂದಿರುವೆವು. ಕಾರ್ಯಸಿದ್ಧಿಯನ್ನು ಪಡೆಯುವ ಅಭಿಲಾಷೆಯಿಲ್ಲದೆ ಹೋಗುವುದಾಗಲಿ, ಅಥವಾ ಕಾರ್ಯಸಿದ್ಧಿಗಾಗಿ ಪ್ರಯತ್ನ ನಡೆಯದೆ ಹೋಗುವುದಾಗಲಿ, ಎಂದೂ ಕಂಡು ಬರದಂತೆ ವರ್ತಿಸುವೆವೆಂಬಷ್ಟನ್ನು ಮಾತ್ರ ನಿರ್ಭರಚಿತ್ತದಿಂದ ನುಡಿಯಬಲ್ಲವರಾಗಿರುವೆವು. ರಮಣೀಯವಾದ ಪ್ರಕೃತಿ ಸೌಂದರ್ಯದಿಂದಲೂ, ರಾಜಭಕ್ತಿಯುತರಾದ ಪ್ರಜೆಗಳಿಂದಲೂ ನಿಬಿಡವಾಗಿರುವ ನಮ್ಮ ಸಂಸ್ಥಾನದ ನಾನಾ ಪ್ರದೇಶಗಳನ್ನೂ ನಾವು ಅವಲೋಕಿಸಿ

ಸಂತುಷ್ಟರಾಗಿದ್ದೇವೆ. ಇಂತಹ ಭಾಗ್ಯವನ್ನು ನೋಡಿ ಹೆಮ್ಮೆಯೂ ಪ್ರೀತಿಯೂ ಉಕ್ಕಿ ಹರಿಯದ ಹೃದಯವು ಹೃದಯವೇ ಅಲ್ಲ. ನಮ್ಮ ಪ್ರಭು ಪದವಿಯಿಂದ ಸತ್ಕಾರ್ಯಾಚರಣೆಗೆ ಲಭಿಸುವ ಮಹತ್ತರವಾದ ಅವಕಾಶಗಳನ್ನು ವಿವೇಕದಿಂದ ಸಂಪೂರ್ಣವಾಗಿ ಸದುಪಯೋಗಪಡಿಸಿ ಕೊಳ್ಳುವುದಕ್ಕೂ, ನಮ್ಮ ಪ್ರಜೆಗಳ ಶಾಶ್ವತ ಸುಖ ಸಂತೋಷಗಳಿಗೆ ಸಾಧಕವಾಗುವಂತೆ ನಿರ್ಭಯದಿಂದಲೂ, ನಿಷ್ಪಕ್ಷಪಾತವಾಗಿಯೂ ರಾಜ್ಯ ಭಾರಮಾಡುವುದಕ್ಕೂ, ನಮಗೆ ಶಕ್ತಿ ಸಾಮರ್ಥ್ಯಗಳನ್ನು ಭಗವಂತನು ದಯಪಾಲಿಸಲೆಂಬುದೇ ನಮ್ಮ ಪ್ರಾರ್ಥನೆ."

ಮಹಾಸ್ವಾಮಿಯವರ ಭಾಷಣವು ಮುಕ್ತಾಯವಾದನಂತರ ಬ್ರಿಟಿಷ್ ರೆಸಿಡೆಂಟರವರು ವೈಸ್ರಾಯಿಯವರಿಗೆ ನಾಮಧೇಯಗಳನ್ನೂ ಪರಿಚಯಗಳನ್ನೂ ಶ್ರುತಪಡಿಸುತ್ತಿರುವಲ್ಲಿ, ದಿವಾನ್‌ರವರಾಗಿದ್ದ ಶ್ರೀಮಾನ್ ಪಿ. ಎನ್. ಕೃಷ್ಣಮೂರ್ತಿಗಳು, ಸರ್ದಾರ್ ಶ್ರೀಮಾನ್ ಎಂ. ಕಾಂತರಾಜ ಅರಸಿನವರು, ಕರ್ನಲ್ ದೇಶರಾಜ ಅರಸಿನವರು, ಶ್ರೀಮಾನ್ ಸರ್ದಾರ್ ಲಕ್ಷ್ಮೀಕಾಂತರಾಜ ಅರಸಿನವರು, ಶ್ರೀಮಾನ್ ಟಿ. ಆರ್. ಎ. ತಂಬೂಚೆಟ್ಟಿಯವರು ಮುಂತಾದ ನಲವತ್ತಾರು ಮಂದಿಗಳು ನಜರನ್ನೊಪ್ಪಿಸಿದರು; ವೈಸ್ರಾಯಿಯವರು ನಜರುಗಳನ್ನು ಸ್ಪರ್ಶಿಸಿದರು. ಅನಂತರ ಅವರು ಮಹಾಸ್ವಾಮಿಯವರಿಗೆ ಅತ್ತರನ್ನೂ ತಾಂಬೂಲವನ್ನೂ ಸಮರ್ಪಿಸಿದರು. ಫಾರಿನ್ ಸೆಕ್ರೆಟರಿಯವರು ಬಂದಿರಲಿಲ್ಲವಾದ ಕಾರಣ ಅವರ ಪರವಾಗಿ ಇಂಡಿಯಾ ಸರ್ಕಾರದ "ಫಾರಿನ್" ಇಲಾಖೆಯ ಅಂಡರ್ ಸೆಕ್ರೆಟರಿಯವರು ದಿವಾನ್‌ರವರಿಗೆ ಅತ್ತರನ್ನೂ ತಾಂಬೂಲವನ್ನೂ ಒಪ್ಪಿಸಿದರು. ಅಂಡರ್ ಸೆಕ್ರೆಟರಿಯವರ ಪರವಾಗಿ ಅಸಿಸ್ಟೆಂಟ್ ರೆಸಿಡೆಂಟರವರು ಇತರರಿಗೆ ಅತ್ತರನ್ನೂ ತಾಂಬೂಲವನ್ನೂ ಒಪ್ಪಿಸಿದರು. ದರ್ಬಾರು ಮುಕ್ತಾಯವಾಯಿತೆಂದು ಇಂಡಿಯಾ ಸರ್ಕಾರದ "ಫಾರಿನ್" ಇಲಾಖೆಯ ಅಂಡರ್ ಸೆಕ್ರೆಟರಿಯವರು ತಿಳಿಸಿದರು. ವೈಸ್ರಾಯಿಯವರೂ ಮಹಾಸ್ವಾಮಿಯವರೂ ಒಟ್ಟಿಗೆ ತೆರಳಿದರು. ಕೋಟೆಯ ಬತೇರಿಯಿಂದ ಮೂವತ್ತೊಂದು ಕುಶಾಲು ತೋಪುಗಳು ಹಾರುತ್ತಿರುವಲ್ಲಿ ವೈಸ್ರಾಯಿಯವರು ಜಗನ್ಮೋಹನ ಪ್ರಾಸಾದದಿಂದ ತಮ್ಮ ಬಿಡಾರಕ್ಕೆ ದಯಮಾಡಿದರು.

ಮಹಾಸ್ವಾಮಿಯವರು ಅಪ್ಪಣೆಕೊಡಿಸಿದ ಭಾಷಣದ ವಾಗ್ವೈಖರಿಯನ್ನು ಕಂಡು ದರ್ಬಾರಿನಲ್ಲಿದ್ದ ಮೇಧಾವಿಗಳೂ ಸ್ವದೇಶೀಯ ವಿದೇಶೀಯ ಪತ್ರಿಕೆಗಳವರೂ ಅಸಾಧಾರಣ ರೀತಿಯಲ್ಲಿ ಪ್ರಶಂಸಿಸಿದರು.

೧೯೦೨ನೆಯ ಇಸವಿ ಆಗಸ್ಟ್ ತಿಂಗಳು ೧೨ನೆಯ ತಾರೀಖಿನ ಒಂದು ಇಂಗ್ಲಿಷ್ ಪತ್ರಿಕೆಯು, "ವೈಸ್ರಾಯಿಯವರ ಭಾಷಣವು ತರುಣ ಮಹಾರಾಜರವರನ್ನು ಕುರಿತ ಹಿತೋಕ್ತಿಗಳಿಂದ ತುಂಬಿದ್ದು, ಭಾವಕ್ಕೆ ತಕ್ಕ ಧ್ವನಿ ವ್ಯತ್ಯಾಸದಿಂದ ಕೂಡಿ, ಅಲ್ಲಿ ಕಿಕ್ಕಿರಿದಿದ್ದ ಶ್ರೋತೃವೃಂದದ ಮೇಲೆ ವಿಶೇಷ ಪರಿಣಾಮವನ್ನುಂಟುಮಾಡಿತು.

**ಶ್ರೀಮನ್ಮಹಾರಾಜರವರ ವಾಗ್ವೈಖರಿ**

ವೈಸ್ರಾಯಿಯವರು ತಾವು ವಿಷಯಗಳನ್ನು ಸೂಕ್ಷ್ಮವಾಗಿ ಗುರುತು ಹಾಕಿಕೊಂಡಿದ್ದ ಕೆಲವು ಕಾಗದದ ಹಾಳೆಗಳನ್ನು ಆಗಾಗ್ಗೆ ನೋಡಿಕೊಂಡು ಭಾಷಣ ಮಾಡಿದರು. ಮೈಸೂರು ಸಂಸ್ಥಾನದ ತರುಣ ಮಹಾರಾಜರವರು ವಿಷಯಗಳನ್ನು ಗುರುತು ಹಾಕಿದ್ದ ಒಂದು ಚೂರು ಕಾಗದವನ್ನೂ ಕೈಯಲ್ಲಿ ಹಿಡಿದುಕೊಳ್ಳದೆಯೇ ಭಾಷಣ ಮಾಡಿದರು. ಶ್ರೀಮನ್ಮಹಾರಾಜರವರ ಭಾಷಣ ವೈಖರಿಯು ಉಜ್ಜ್ವಲ ಶೋಭೆಯಿಂದ ಕೂಡಿದ್ದುದಲ್ಲದೆ, ಇಂಗ್ಲಿಷ್ ಪದಗಳ ಉಚ್ಚಾರಣೆಯು ಅಸಾಧಾರಣ ರೀತಿಯಲ್ಲಿ ಸರಿಯಾಗಿದ್ದಿತು"* ಎಂದು ಕೊಂಡಾಡಿತು. ಆ ಪತ್ರಿಕೆಯ ಸಂಪಾದಕರ ಮಾತೃಭಾಷೆಯೇ ಇಂಗ್ಲಿಷ್ ಭಾಷೆ. ಇಂಗ್ಲಿಷ್ ಜನಾಂಗಕ್ಕೆ ಸೇರಿದವರಾಗಿದ್ದ ಆ ಪ್ರೌಢ ವಿದ್ವಾಂಸರ ಈ ಬಗೆಯ ಶ್ಲಾಘನೆಯನ್ನು ಇಂದು ನೆನೆದರೂ ಹೆಮ್ಮೆ ಸಂತೋಷಗಳು ಹೃದಯವನ್ನು ತುಂಬುವುವು. ಲಾರ್ಡ್ ಕರ್ಜನ್‌ರವರಂತಹ ಮೇಧಾವಿಶ್ರೇಷ್ಠರೂ ವಾಗ್ಮಿಕಲಾವಿದರೂ ಭಾಷಣ ಮಾಡಿದಮೇಲೆ ಕಳೆಗಟ್ಟುವಂತೆ ಭಾಷಣಮಾಡುವುದೆಷ್ಟು ಕಷ್ಟವೆಂಬುದನ್ನೂ, ಮಹಾಸ್ವಾಮಿಯವರ ವಯಸ್ಸು ಆಗ ಹದಿನೆಂಟು ವರ್ಷಗಳು ಮಾತ್ರವೇ ಎಂಬುದನ್ನೂ ಗಮನಿಸಿದರೆ ನಮ್ಮ ಆಶ್ಚರ್ಯ ಸಂತೋಷಗಳು ಮತ್ತಷ್ಟು ಅಧಿಕವಾಗುವುವು. ಸುಪ್ರಸಿದ್ಧವಾದ ಮತ್ತೊಂದು ಇಂಗ್ಲಿಷ್ ಪತ್ರಿಕೆಯು ಮಹಾಪ್ರಭುಗಳ ಅಂದಿನ ಭಾಷಣ ವೈಭವವನ್ನು ಶ್ಲಾಘಿಸಿ (೧೯೦೨ನೆಯ ಇಸವಿ ಆಗಸ್ಟ್ ೧೩ನೆಯ ತಾರೀಖಿನ ದಿನ) ಬರೆದುದರ† ಸಾರಾಂಶವೇನೆಂದರೆ: "ನೂತನವಾಗಿ ರಾಜ್ಯಭಾರಸೂತ್ರ

---

* "The speech of the Viceroy was full of advice to the young Maharaja and was delivered in such measured tone as to make a deep impression upon all present. With just a few notes in his hand the Viceroy deliverd his speech while the youthful ruler of Mysore excelled His Excellency by not having even a scrap of paper in his hand to refer to. The delivery of the speech by His Highness was considered to be eminently good and his articulation exceptionally accurate."

† "Though His Highness Sri Krishnaraja Wadiyar Bahadur, the newly installed Maharaja of Mysore is only eighteen years of age, still he seems to possess some of the qualities of more mature years. His reply

ಸ್ವೀಕಾರಮಾಡಿದ ಮೈಸೂರು ಸಂಸ್ಥಾನದ ಶ್ರೀಮನ್ಮಹಾರಾಜರವರಾದ ಶ್ರೀ ಕೃಷ್ಣರಾಜೇಂದ್ರ ಒಡೆಯರ್ ಬಹದ್ದೂರರವರಿಗೆ ಕೇವಲ ಹದಿನೆಂಟು ವರ್ಷಗಳ ವಯಸ್ಸು ಮಾತ್ರವೇ ಆಗಿದ್ದರೂ ಸಹ ಇನ್ನೂ ಅಧಿಕತರವಾದ ವಯಸ್ಸಿಗೆ ಉಚಿತವೆನಿಸುವ ಕೆಲವು ಶಕ್ತಿ ಸಾಮರ್ಥ್ಯಗಳು ಅವರಿಗಿರುವಂತೆ ತೋರುತ್ತದೆ. ವೈಸ್ರಾಯಿಯವರ ಭಾಷಣಕ್ಕೆ ಪ್ರತ್ಯುತ್ತರವಾಗಿ ಶ್ರೀಮನ್ಮಹಾರಾಜರವರು ದಯಪಾಲಿಸಿದ ಭಾಷಣವು, ಭಾಷೆಯ ದೃಷ್ಟಿಯಿಂದಲೂ ಭಾವಗಳ ದೃಷ್ಟಿಯಿಂದಲೂ ಸಮಸ್ತರ ಶ್ಲಾಘನೆಗೂ ಪಾತ್ರವಾಯಿತು.... ಇನ್ನೂ ಬಾಲಕರಾಗಿರುವ ಶ್ರೀಮನ್ಮಹಾರಾಜರವರು ವೈಸ್ರಾಯಿಯವರ ಮತ್ತು ದರ್ಬಾರಿನಲ್ಲಿದ್ದ ಪ್ರಖ್ಯಾತರಾದ ಅಸಂಖ್ಯಾತ ಮಂದಿ ಯೂರೋಪಿಯನ್ ಮತ್ತು ಭಾರತೀಯ ಮಹಾಶಯರ ಮುಂದೆ ದಿಟ್ಟತನದಿಂದ ನೆಟ್ಟಗೆ ನಿಂತು ಭಾಷಣಮಾಡಲುಪಕ್ರಮಿಸಿದಾಗ ಅಂದಿನ ಸಮಯದ ಗಭೀರತೆಯ ವಿಚಾರವಾಗಿ ಅನಿರ್ದಿಷ್ಟವಾಗಿದ್ದ ಭಾವನೆಗಳಿಂದಲೂ, ಅಂದು ತಾವು ವಹಿಸಿದ ಗುರುತರ ಕರ್ತವ್ಯಭಾರದ ವಿಷಯವಾಗಿ ಮತ್ತೂ ಅಧಿಕವಾಗಿ ಅನಿರ್ದಿಷ್ಟವಾಗಿದ್ದ ಭಾವನೆಗಳಿಂದಲೂ ಕೂಡಿದ್ದೂ ಸಹ, ಅವರಿಗೆ ಲೇಶ ಮಾತ್ರವೂ ಸಭಾಕಂಪವಾಗಲಿಲ್ಲ. ಮುದ್ರಣವಾಗಿದ್ದ ಭಾಷಣದ ಪ್ರತಿಯೇನೂ ಅವರ ಕೈಯಲ್ಲಿರಲಿಲ್ಲ. ಅಥವಾ ಸಂಕ್ಷಿಪ್ತ ವಿವರಗಳನ್ನಾಗಲಿ ಅಥವಾ ಸೂಚನಾ ಪದಗಳನ್ನಾಗಲಿ ಬರೆದಿದ್ದ ಒಂದು ಚೂರು ಕಾಗದವೂ ಅವರ ಕೈಯಲ್ಲಿರಲಿಲ್ಲ. ಆದಾಗ್ಯೂ ವೇದಿಕೆಯಮೇಲೆ ನಿಂತು ವಾಗ್ವೈಖರಿಯಿಂದಲೂ ಶಿಸ್ತಿನಿಂದಲೂ ಭಾಷಣಮಾಡಬಲ್ಲ ಅನುಭವಶಾಲಿಗಳಾದ ವಾಗ್ಮಿಶ್ರೇಷ್ಠರಿಗುಚಿತವಾದ ಗಂಭೀರ ಘೋಷದ ಮಧುರ ಸ್ವನದಿಂದಲೂ ಸ್ಪಷ್ಟವಾದ ಮತ್ತು ಸ್ಫುಟವಾದ ಉಚ್ಚಾರಣೆಯ ಧೀರ ವಾಣಿಗಳಿಂದಲೂ ಅನುಮಾನದ ಲವಲೇಶವಾಗಲಿ ಪದಲೋಪವಾಗಲಿ ಇಲ್ಲದ ಅಸ್ಖಲಿತವಾದ ವಾಗ್ಝರಿಯ ಧೋರಣೆಯಿಂದಲೂ ಭಾಷಣಮಾಡಿದರು. ಅವರ ಭಾಷಣ ವೈಖರಿಯನ್ನು

---

to the address of the Viceroy was praised by everybody both in regard to diction and sentiment... the boy Maharaja standing in a perfectly straight posture before the Viceroy and in front of large and distinguished audience of Europeans and Indians burdened with vague notions of the gravity of the occasion and still with vaguer notions of the responsibilities that he was that day called upon to undertake, did not betray the least nervousness while delivering the speech. He had not the printed speech in his hand nor any notes of catch-words to help him. Like that of a practised platform speaker in a loud and distinct voice, with manly intonation and without hesitation or omission of a single word, his delivery came on his hearers as a surprise. Everybody received the impression that the young Maharaja had a good deal of pluck and confidence in him."

ನೋಡಿ ಶ್ರೋತೃಗಳೆಲ್ಲರೂ ಆಶ್ಚರ್ಯಚಕಿತರಾಗಿ ಬೆರಗಾದರು. ತರುಣ ಮಹಾರಾಜರವರಲ್ಲಿ ಅತ್ಯಧಿಕವಾದ ಉತ್ಸಾಹ ಸ್ಫೂರ್ತಿಯೂ ಆತ್ಮ ಪ್ರತ್ಯಯವೂ ನೆಲಸಿದ್ದುವೆಂದು ಅಲ್ಲಿದ್ದವರ ಮನಸ್ಸಿಗೆ ಖಚಿತ ವಾಯಿತು.'' ಮೈಸೂರು ಸಂಸ್ಥಾನದ ಅನೇಕ ಪತ್ರಿಕೆಗಳು ಸಹ ಮಹಾ ಸ್ವಾಮಿಯವರ ಭಾಷಣ ವೈಖರಿಯನ್ನು ಅದೇ ರೀತಿ ಕೊಂಡಾಡಿದುವು. ರಾಜ್ಯಭಾರಸೂತ್ರ ಸ್ವೀಕಾರ ಮಹೋತ್ಸವವು ನಡೆದ ದಿನ ಮಧ್ಯಾಹ್ನದ ಮೇಲೆ ಒಟ್ಟು ಇಪ್ಪತ್ತಾರು ವಿಜ್ಞಾಪನಾ ಪತ್ರಿಕೆಗಳು ಪ್ರಜೆಗಳ ಪ್ರತಿ ನಿಧಿಗಳಿಂದಲೂ ನಾನಾ ಸಂಸ್ಥೆಗಳ ಪ್ರತಿನಿಧಿಗಳಿಂದಲೂ ಸಮರ್ಪಿತ ವಾದುವು. ಶ್ರೀಮನ್ಮಹಾರಾಜ ಶ್ರೀ ಕೃಷ್ಣರಾಜೇಂದ್ರ ಒಡೆಯರವರು ಅವೆಲ್ಲಕ್ಕೂ ಸೂಕ್ತವಾಗಿ ಪ್ರತ್ಯುತ್ತರ ಹೇಳಿ ಭಾಷಣಗಳನ್ನು ಮಾಡಿದರು. ಇಂಗ್ಲಿಷಿನಲ್ಲಿದ್ದವುಗಳಿಗೆ ಇಂಗ್ಲಿಷಿನಲ್ಲಿಯೂ, ಕನ್ನಡದಲ್ಲಿದ್ದವುಗಳಿಗೆ ಕನ್ನಡದಲ್ಲಿಯೂ, ಉರ್ದುವಿನಲ್ಲಿದ್ದವುಗಳಿಗೆ ಉರ್ದುವಿನಲ್ಲಿಯೂ ಮಹಾಸ್ವಾಮಿಯವರು ಪ್ರತ್ಯುತ್ತರಗಳನ್ನು ಅಪ್ಪಣೆ ಕೊಡಿಸಿದರು. ಆಗ ಮಹಾಸ್ವಾಮಿಯವರು ಪ್ರದರ್ಶಿಸಿದ ವಾಗ್ಧೋರಣೆಯನ್ನೂ, ಭಾಷಾ ಪ್ರೌಢಿಮೆಯನ್ನೂ ನಾನಾ ಪತ್ರಿಕೆಗಳೂ ಪ್ರಶಂಸಿಸಿದುವು.

ಶ್ರೀಮನ್ಮಹಾರಾಜ ಶ್ರೀ ಕೃಷ್ಣರಾಜೇಂದ್ರ ಒಡೆಯರವರು ಪ್ರಜೆಗಳ ಅಭ್ಯುದಯ ಸಾಧನೆಗಾಗಿ ತಮ್ಮ ಸರ್ವ ಪ್ರಯತ್ನಗಳನ್ನೂ ನೆರವೇರಿಸು

**ರಾಜ್ಯಭಾರ ಸಂಬಂಧದ ಮನೋಧರ್ಮ**

ವುದಾಗಿ ಮಾಡಿದ್ದ ಸ್ಥಿರಸಂಕಲ್ಪವನ್ನು ಕಾರ್ಯ ರೂಪಕ್ಕೆ ತರಲು ಕೂಡಲೆ ರಾಜ್ಯಭಾರ ವಿಧಾನದಲ್ಲಿ ಕೆಲವು ಮಾರ್ಪಾಡುಗಳನ್ನು ಮಾಡಿದರು. ಅವು ಗಳ ಪರಿಣಾಮವಾಗಿ ಅವರು ಅತ್ಯಂತ ಶ್ರಮ ವಹಿಸಿ ಕೆಲಸ ಮಾಡಬೇಕಾಯಿತು.

ಲಂಡನ್ನಿನ ಒಂದು ಪತ್ರಿಕೆಯು ಪ್ರಕಟಿಸಿದ್ದ ಮಾತುಗಳು* ಈ ಸಂದರ್ಭದಲ್ಲಿ ಗಮನಾರ್ಹವಾಗಿವೆ. ಅವುಗಳಾವುವೆಂದರೆ: "ಶ್ರೀಮನ್ಮಹಾರಾಜರವರು ಇತರರ ತಾಳಕ್ಕೆ ತಲೆದೂಗುತ್ತ ಕೇವಲ ಅಲಂಕಾರಾರ್ಥವಾಗಿ ಮಹಾರಾಜ ಪದವಿಯಲ್ಲಿರುವವರಾಗಿಲ್ಲ. ಅವರ

---

*" The Maharaja is to be no figurehead. His training has been conducted with a view to his obtaining a complete knowledge and mastery of the details of the administration of his country. He has been instructed in finance and law and has sat for practice in the judicial capacity on the Bench with local magistrates. Added to these qualifications, he has had an education of the best kind from a civilized point of View."

—*Western Daily Mercury.*

ಸಂಸ್ಥಾನದಲ್ಲಿ ನಡೆಯುತ್ತಿರುವ ಆಡಳಿತದ ವಿಶದ ವಿವರಗಳ ಸಂಪೂರ್ಣ ಜ್ಞಾನವುಂಟಾಗಿ ಕೂಲಂಕಷ ಪರಿಜ್ಞಾನವುಂಟಾಗುವಂತೆ ಅವರಿಗೆ ಶಿಕ್ಷಣವು ಲಭಿಸಿದೆ. ಸಂಸ್ಥಾನದ ಕೋಶಾಡಳಿತ ನಿರ್ವಹಣವೂ ಅವರಿಗೆ ತಿಳಿದಿದೆ. ಕಾನೂನುಗಳ ವಿಚಾರವೂ ಅವರಿಗೆ ಬೋಧೆಯಾಗಿ ಅವುಗಳನ್ನು ಮೊಕದ್ದಮೆಗಳಿಗೆ ಅನ್ವಯಿಸುವುದನ್ನು ಕಲಿಯುವುದಕ್ಕಾಗಿ ಅವರು ಮ್ಯಾಜಿಸ್ಟ್ರೇಟರುಗಳೊಡನೆ ಕುಳಿತು ಕೆಲಸಮಾಡಿ ಕಾರ್ಯಾನುಭವ ಪಡೆದಿದ್ದಾರೆ. ಈ ಯೋಗ್ಯತೆಗಳ ಜೊತೆಗೆ ನಾಗರಿಕತೆಯ ದೃಷ್ಟಿಯಿಂದ ಅತ್ಯುತ್ತಮ ವಿಧದ ವಿದ್ಯಾಭ್ಯಾಸವೂ ಅವರಿಗೆ ಲಭಿಸಿದೆ.'' ಆ ರೀತಿ ಯೋಗ್ಯತಾ ಸಿದ್ಧಿಯನ್ನು ಪಡೆದಿದ್ದ ಮಹಾಸ್ವಾಮಿಯವರು, ಇಂಡಿಯನ್ ಸಿವಿಲ್ ಸರ್ವಿಸಿಗೆ ಸೇರಿ ಕಾರ್ಯದಕ್ಷರಾಗಿದ್ದ ಪ್ರೈವೇಟ್ ಸೆಕ್ರೆಟರಿ ಯವರ ಸಹಾಯದಿಂದ ತಮ್ಮ ಕೈಯಲ್ಲೇ ಆಡಳಿತ ಸೂತ್ರಗಳನ್ನಿಟ್ಟು ಕೊಂಡು ರಾಜ್ಯಭಾರ ಮಾಡಲಿಚ್ಛಿಸಿದುದು ಸಹಜವೇ ಸರಿ. ಅವರ ಆ ಬಗೆಯ ಅಭಿಲಾಷೆಯನ್ನು ಕಂಡು, ಲಾರ್ಡ್ ಕರ್ಸನ್‌ರವರಿಗೆ ಪರಮಾನಂದವಾಯಿತು. ಅವರು ಬಯಸಿದ್ದುದೂ ಮಹಾಸ್ವಾಮಿ ಯವರು ಆ ರೀತಿ ರಾಜ್ಯಭಾರ ಮಾಡಬೇಕೆಂಬುದನ್ನೇ. ಆಗ್ಗೆ ಕೆಲವು ವರ್ಷಗಳ ಹಿಂದಿನಿಂದ ಅನೇಕ ಅಧಿಕಾರ ಸೂತ್ರಗಳು ಅನವಶ್ಯವಾಗಿ ದಿವಾನ್‌ರವರ ಕೈಸೇರಿಹೋಗಿ ಕೆಲವು ವಿಚಾರಗಳಲ್ಲಿ ಅವರೇ ಸ್ವತಂತ್ರ ವಾಗಿ ವ್ಯವಹರಿಸುತ್ತಿದ್ದರೆಂಬ ಭಾವನೆಯುಂಟಾಗಿದ್ದುದೇ ಅದಕ್ಕೆ ಕಾರಣ.

**ಆಳಿದ ಮಹಾಸ್ವಾಮಿಯವರಿಂದ ನಡೆದ ಕೆಲವು ಮಾರ್ಪಾಡುಗಳು**

ರಾಜ್ಯಭಾರಸೂತ್ರ ಸ್ವೀಕಾರ ಮಹೋತ್ಸವವು ನಡೆದದಿನವೇ ಹೊರಟ ನಿರೂಪದಿಂದ ಆಳಿದ ಮಹಾಸ್ವಾಮಿಯವರಾದ ಶ್ರೀಮನ್ಮಹಾರಾಜ ರವರು ಮಾಡಿದ ಮಾರ್ಪಾಡುಗಳು ವಿಧಾಯಕ ವಾದುವು. ಅವುಗಳನ್ನು ಇಲ್ಲಿ ಸಂಕ್ಷೇಪವಾಗಿ ಸೂಚಿಸಬಹುದು: ಮಂತ್ರಾಲೋಚನಾ ಸಭೆಗೆ ದಿವಾನ್‌ರವರು ಅಧ್ಯಕ್ಷರಾಗಿದ್ದು ಅವರಿಗೆ ಸಹಾಯ ಮಾಡಲು ಇಬ್ಬರು ಸಚಿವರುಗಳು (ಕೌನ್ಸಿಲ್ ಮೆಂಬರುಗಳು) ಇರುವಂತೆ ವಿಧಾಯಕ ವಾಯಿತು. ಪ್ರಾಮುಖ್ಯವಾದ ಸಮಸ್ತ ವಿಚಾರಗಳಲ್ಲಿಯೂ ಮಹಾಸ್ವಾಮಿ ಯವರಿಗೆ ಸಲಹೆಗಳನ್ನೊಪ್ಪಿಸುವುದು ಮಂತ್ರಾಲೋಚನಾ ಸಭೆಯ ಕರ್ತವ್ಯವೆಂದು ಗೊತ್ತಾಯಿತು. ಅದಕ್ಕೆ ಹಿಂದೆ, ವಿಶ್ರಾಂತಿ ವೇತನಗಳನ್ನು (''ಪೆನ್ಷನು''ಗಳನ್ನು) ಪಡೆಯುತ್ತಿದ್ದ ಮೂವರು ಮಹಾಶಯರುಗಳು ಸ್ವಲ್ಪ ಸಂಬಳದಮೇಲೆ ಸಚಿವರಾಗಿರುತ್ತಿದ್ದುದು ವಾಡಿಕೆ. ಹಾಗೆ

ನೇಮಕವಾದವರ ಪೈಕಿ ಕೆಲವರ ಹೊರತು ಉಳಿದವರು ದಿವಾನ್‌ರವರ ಮಾತಿಗೆ ಪ್ರತಿಹೇಳದೆ, ತಮ್ಮ ವಿಶ್ರಾಂತಿ ವೇತನದ ಜೊತೆಗೆ ಬಂದಷ್ಟು ಸಂಬಳ ಬರುತ್ತಿರಲೆಂದು ಕಾಲವನ್ನು ನೂಕುವ ಪ್ರವೃತ್ತಿಯಿಂದ ಕೆಲಸ ಮಾಡುತ್ತಿದ್ದುದು ಸಹಜ. ಅಲ್ಲದೆ, ಅವರ ವೃದ್ಧಾಪ್ಯದ ದೆಸೆಯಿಂದ ತಕ್ಕಷ್ಟು ಕೆಲಸವೂ ಅವರಿಂದ ಸಾಗುತ್ತಿರಲಿಲ್ಲ. ಆದಕಾರಣ, ಹೆಚ್ಚು ಸಂಬಳದಮೇಲೆ (ಐವತ್ತೈದು ವರ್ಷ ವಯಸ್ಸಾಗದಿದ್ದ) ಇಬ್ಬರೇ ಮಹಾಶಯರುಗಳು ನೇಮಕವಾಗುವಂತೆ ಮಹಾಸ್ವಾಮಿಯವರು ಮಾಡಿದುದು ಉತ್ತಮವಾದ ಏರ್ಪಾಡು.

ಮಂತ್ರಾಲೋಚನಾ ಸಭೆಯ (ಎಂದರೆ, "ಎಗ್ಜಿಕ್ಯುಟಿವ್ ಕೌನ್ಸಿಲಿನ") ಕಾರ್ಯವಿಧಾನದಲ್ಲಿಯೂ ಮಹಾಸ್ವಾಮಿಯವರು ಮಾರ್ಪಾಡುಗಳನ್ನು ನಡೆಯಿಸಿದರು. ನಾನಾ ಇಲಾಖೆಗಳ ಆಡಳಿತಗಳೂ ದಿವಾನ್‌ರವರು ಮತ್ತು ಇಬ್ಬರು ಸಚಿವರುಗಳಲ್ಲಿ ಹಂಚಿಕೆಯಾಗಿ, ಅವರವರಿಗೆ ಸೇರಿದ ಇಲಾಖೆಗಳ ಆಡಳಿತವನ್ನು ಅವರವರು ಮೇಲ್ವಿಚಾರಣೆ ನೋಡಿಕೊಂಡು ನಿರ್ವಹಿಸಬೇಕೆಂದು ವಿಧಾಯಕವಾಯಿತು. ಪ್ರತಿಯೊಂದು ಇಲಾಖೆಯ ಕಾರ್ಯಕಲಾಪಗಳಲ್ಲಿ ಮುಖ್ಯವಾದವುಗಳನ್ನು ಮಂತ್ರಾಲೋಚನಾ ಸಭೆಯಲ್ಲಿ ಅವರು ಮೂವರೂ ಚರ್ಚಿಸಿ, ಮಹಾಸ್ವಾಮಿಯವರ ಆಜ್ಞೆಗಾಗಿ ತಮ್ಮ ಮೂವರ ಅಭಿಪ್ರಾಯಗಳೊಡನೆ ಸಲಹೆಗಳನ್ನು ಕಳುಹಿಸಬೇಕೆಂದೂ, ಉಳಿದವುಗಳ ವಿಚಾರದಲ್ಲಿ ಆ ಆ ಇಲಾಖೆಯ ಆಡಳಿತವು ಸೇರಿರತಕ್ಕವರೇ (ಎಂದರೆ, ದಿವಾನ್‌ರವರೇ ಅಥವಾ ಸಚಿವರುಗಳಲ್ಲೊಬ್ಬರೇ) ಆಜ್ಞಾಪಿಸುವಂತೆ ಆ ಆ ವಿಚಾರಕ್ಕೆ ಸಂಬಂಧಪಟ್ಟ ಸರ್ಕಾರದ ಸೆಕ್ರೆಟರಿಯವರು ನಿರೂಪಗಳನ್ನು ಹೊರಡಿಸಬೇಕೆಂದೂ ಗೊತ್ತಾಯಿತು. ಹೊಸ ತೆರಿಗೆಗಳನ್ನು ವಿಧಿಸುವುದೂ, ಇರುವ ತೆರಿಗೆಗಳನ್ನು ತೆಗೆದುಹಾಕುವುದೂ, ಕಾನೂನು ವಿಧಾಯಕ ಮಾಡುವುದು, ಕ್ಲುಪ್ತವಾದ ಅಂತಸ್ತಿನಲ್ಲಿಯೂ ಅದಕ್ಕೆ ಮೇಲ್ಪಟ್ಟೂ ಇರತಕ್ಕ ಅಧಿಕಾರಿಗಳನ್ನು ನೇಮಕಮಾಡುವುದೂ, ಅವರನ್ನು ಕೆಲಸದಿಂದ ತೆಗೆದುಹಾಕುವುದೂ, ಸೈನ್ಯಕ್ಕೆ ಸಂಬಂಧಪಟ್ಟ ಏರ್ಪಾಡುಗಳು ಮುಂತಾದುವುಗಳೂ ಸಮಸ್ತ ಇಲಾಖೆಗಳ ವಾರ್ಷಿಕ ಆಯ ವ್ಯಯಗಳ ಪಟ್ಟಿಯೂ ("ಬಡ್ಜೆಟ್"), ಮತ್ತು ಶ್ರೀಮನ್ಮಹಾರಾಜರವರೇ ಮಂತ್ರಾಲೋಚನಾ ಸಭೆಯ ಅಭಿಪ್ರಾಯವನ್ನು ಕೋರಿದ ವಿಚಾರಗಳೂ ಸಹ ಮಂತ್ರಾಲೋಚನಾ ಸಭೆಯಲ್ಲಿ ಪರ್ಯಾಲೋಚನೆಯಾದನಂತರ ಮೇಲೆ ಹೇಳಿದಂತೆ ಶ್ರೀಮನ್ಮಹಾರಾಜರವರ ಆಜ್ಞೆಗಾಗಿ ಸಮರ್ಪಿತವಾಗಬೇಕೆಂದು ವಿಧಾಯಕವಾಯಿತು.

ಹಾಗೆ ಮಂತ್ರಾಲೋಚನಾ ಸಭೆಗೆ ಹೋಗಬೇಕಾಗಿಲ್ಲದೆ ಸಚಿವರುಗಳಲ್ಲಿ ಯಾರೊಬ್ಬರೇ ಆಗಲಿ ತೀರ್ಮಾನಮಾಡಬಹುದಾಗಿದ್ದ ವಿಚಾರಗಳಲ್ಲಿ ಕೂಡ, ಯಾವುದಾದರೂ ಒಂದರಲ್ಲಿ ಅವರ ಅಭಿಪ್ರಾಯವು ದಿವಾನ್ ರವರಿಗೆ ಸಮ್ಮತವಾಗಿಲ್ಲದೆ ತೀರ ವಿರುದ್ಧವಾಗಿದ್ದಲ್ಲಿ ಆ ವಿಚಾರವನ್ನು ಶ್ರೀಮನ್ಮಹಾರಾಜರವರ ಆಜ್ಞೆಗೆ ಒಪ್ಪಿಸುವುದಕ್ಕಾಗಲಿ ಅಥವಾ ಅದನ್ನೂ ಸಹ ಮಂತ್ರಾಲೋಚನಾ ಸಭೆಯಲ್ಲಿ ಪರ್ಯಾಲೋಚಿಸಬೇಕಾದ ವಿಷಯ ವಂತೆ ಭಾವಿಸಿ ಆ ರೀತಿ ಮಂತ್ರಾಲೋಚನಾ ಸಭೆಯಲ್ಲಿ ಪರ್ಯಾ ಲೋಚಿಸಿದ ಬಳಿಕ ಅದನ್ನು ಅಭಿಪ್ರಾಯದೊಡನೆ ಶ್ರೀಮನ್ಮಹಾರಾಜ ರವರ ಆಜ್ಞೆಗಾಗಿ ಒಪ್ಪಿಸುವುದಕ್ಕಾಗಲಿ ದಿವಾನ್‌ರವರಿಗೆ ವಿವೇಚನಾಧಿ ಕಾರವಿರಬೇಕೆಂದೂ ಗೊತ್ತಾಯಿತು. ಇಬ್ಬರು ಸಚಿವರಲ್ಲಿ ಯಾರೊಬ್ಬರಿ ಗಾಗಲಿ ಸೇರಿರತಕ್ಕ ಮತ್ತು ಅವರೇ ವ್ಯವಸ್ಥೆಮಾಡಿ ನಿರೂಪವನ್ನು (ಹುಕುಮನ್ನು) ಹೊರಡಿಸಬಹುದಾಗಿರತಕ್ಕ ಯಾವುದಾದರೂ ಇಲಾಖಾ ವಿಚಾರದಲ್ಲಿ ಕೂಡಲೆ ನಿರೂಪವು (ಹುಕುಂ) ಹೊರಡಬೇಕಾದುದು ಅತ್ಯಾವಶ್ಯಕವೆಂದು ದಿವಾನ್‌ರವರಿಗೆ ತೋರಿದರೆ, ಅವರೇ ಆಜ್ಞೆಮಾಡಿ ನಿರೂಪವನ್ನು ಹೊರಡಿಸಬಹುದೆಂದೂ, ಹಾಗೆ ಮಾಡಿದ ಸಂದರ್ಭದಲ್ಲಿ ನಿರೂಪದ ಒಂದು ಪ್ರತಿಯನ್ನು ಸಚಿವರಿಗೆ ಕಳುಹಿಸಿ ತಾವೇ ಆ ರೀತಿ ಆಜ್ಞೆಮಾಡಿದುದಕ್ಕೆ ಕಾರಣವೇನೆಂಬುದನ್ನು ಶ್ರೀಮನ್ಮಹಾರಾಜರವರಿಗೆ ವರದಿ ಮಾಡಬೇಕೆಂದೂ ವಿಧಾಯಕವಾಯಿತು. ರೆವೆನ್ಯೂ ಕಮಿಷನ ರವರ ಹುದ್ದೆಯೊಂದನ್ನು ಪ್ರತ್ಯೇಕವಾಗಿ ಏರ್ಪಡಿಸಲಾಯಿತು. ಸಚಿವರ ಲ್ಲೊಬ್ಬರಾಗಿದ್ದ ಶ್ರೀಮಾನ್ ವಿ. ಪಿ. ಮಾಧವರಾಯರವರೇ ಆ ಹುದ್ದೆಯ ಕರ್ತವ್ಯಗಳನ್ನೂ ನೋಡಿಕೊಳ್ಳಬೇಕೆಂದು ನೇಮಕವಾದರು. ನೂತನ ಪರಿಸ್ಥಿತಿಗೆ ತಕ್ಕಂತೆ ವಿಚಕ್ಷಣೆಯಿಂದ ಕಾರ್ಯಕಲಾಪಗಳು ನಡೆಯಲನು ಕೂಲಿಸುವಹಾಗೆ ಬೆಂಗಳೂರಿನ ಸೆಕ್ರೆಟೇರಿಯಟ್ ಕಚೇರಿಯಲ್ಲಿ ಅನೇಕ ಸುಧಾರಣೆಗಳಾದುವು. ಆಳಿದ ಮಹಾಸ್ವಾಮಿಯವರು ಅರಮನೆಯ ಆಡಳಿತಕ್ರಮದಲ್ಲಿ ಕೂಡ ಅನೇಕ ಸುಧಾರಣೆಗಳನ್ನು ಆಚರಣೆಗೆ ತಂದರು.

ಆ ಮಾರ್ಪಾಡುಗಳು ಆಚರಣೆಗೆ ಬಂದು ಅವಕ್ಕನುಸಾರವಾಗಿ ವಿಚಕ್ಷಣೆಯಿಂದ ಕಾರ್ಯಕಲಾಪಗಳು ನಡೆಯಬೇಕಾದರೆ, ಶ್ರೀಮನ್ಮಹಾ ರಾಜ ಶ್ರೀ ಕೃಷ್ಣರಾಜೇಂದ್ರ ಒಡೆಯರವರೂ, ಅವರ ಪ್ರೈವೇಟ್ ಸೆಕ್ರೆಟರಿ ಯವರೂ ಗುಮಾಸ್ತರಿಗಿಂತಲೂ ಅಧಿಕವಾಗಿ ಶ್ರಮಿಸಿ ಕೆಲಸಮಾಡ ಬೇಕಾಗುವಂತಿದ್ದಿತೆಂದು ದೊಡ್ಡ ಮನುಷ್ಯರೊಬ್ಬರು ಅಭಿಪ್ರಾಯಪಟ್ಟ ರಂತೆ. ಅದನ್ನು ಕೇಳಿದ ಪತ್ರಿಕಾಕರ್ತರೊಬ್ಬರು ತಮ್ಮ ಪತ್ರಿಕೆಯ

(೧೯೦೨ನೆಯ ಇಸವಿ ಆಗಸ್ಟ್ ೧೮ನೆಯ ತಾರೀಖಿನ) ಸಂಚಿಕೆಯಲ್ಲಿ, "ಶ್ರೀಮನ್ಮಹಾರಾಜರವರೂ ಮತ್ತು ಪ್ರೈವೇಟ್ ಸೆಕ್ರೆಟರಿಯವರೂ ಆ ರೀತಿ ತಾವು ಕೆಲಸಮಾಡಲು ಸಿದ್ಧವಾಗಿರುವುದನ್ನು ಕಾರ್ಯತಃ ಪ್ರದರ್ಶಿಸಲೆಂದು ನಾವು ಹಾರೈಸುತ್ತೇವೆ"* ಎಂದು ಬರೆದಿದ್ದರು. ಆದರೆ ಅದಕ್ಕೆ ನಾಲ್ಕು ದಿನಗಳ ತತ್ಪೂರ್ವವೇ ಮಹಾಸ್ವಾಮಿಯವರು ಮಂತ್ರಾಲೋಚನಾ ಸಭೆಯ ವಿಶೇಷಾಧಿವೇಶನವೊಂದನ್ನು ಮೈಸೂರು ನಗರದಲ್ಲಿ ಏರ್ಪಡಿಸಿ, ಅಗ್ಗೆ ಅಪ್ಪಣೆ ಕೊಟ್ಟ ಭಾಷಣದಲ್ಲಿ ದಿವಾನ್‌ರವರನ್ನೂ ಸಚಿವರನ್ನೂ ಕುರಿತು ಆಡಿದ್ದ ಮಾತುಗಳನ್ನು ಆ ಪತ್ರಿಕಾಕರ್ತರು ಮಾತ್ರ ಅರಿತಿದ್ದರೆ, ಹಾಗೆ ಹಾರೈಸಬೇಕಾದ ಪ್ರಕೃತವೇ ಇದ್ದಂತೆ ಅವರಿಗೆ ತೋರುತ್ತಿರಲಿಲ್ಲ. ಮಹಾಸ್ವಾಮಿಯವರು ಆ ದಿನ ಆಡಿದ ಮಾತುಗಳಾವುವೆಂದರೆ: ". . . . ಮೈಸೂರು ಸಂಸ್ಥಾನದಲ್ಲಿ ಈಗ ಮತ್ತೊಂದು ಏರ್ಪಾಡನ್ನು ನಾವು ನೂತನವಾಗಿ ಆಚರಣೆಗೆ ತಂದು ಪರೀಕ್ಷಿಸಿ ನೋಡುವವರಾಗಿದ್ದೇವೆ. ಅದು ಸಫಲವಾಗಿ ನಡೆಯುವುದೂ ಅಥವಾ ಸಾರ್ಥಕವಾಗಿ ನಡೆಯದೆಹೋಗುವುದೂ ನಿಮ್ಮನ್ನೇ ಸೇರಿರುತ್ತದೆ. . . . . ನೀವುಗಳು ಸಮಸ್ತ ಸಂದರ್ಭಗಳಲ್ಲಿಯೂ ಪರಸ್ಪರವಾಗಿ ಏಕಾಭಿಪ್ರಾಯಪಡುವಿರೆಂದಾಗಲಿ ಅಥವಾ ನಾವು ಸಮಸ್ತ ಸಂದರ್ಭಗಳಲ್ಲಿಯೂ ನೀವುಗಳು ಸಲಹೆಮಾಡಿದುದಕ್ಕೇ ಸಮ್ಮತಿಸುವೆವೆಂದಾಗಲಿ ನಿರೀಕ್ಷಿಸುವಂತಿಲ್ಲ. . . . ಅಂತಹ ಸನ್ನಿವೇಶಗಳಲ್ಲಿ ನಿಮ್ಮೊಡನೆ ಭಿನ್ನಾಭಿಪ್ರಾಯವನ್ನು ಸೂಚಿಸಿದವರೂ ಸಹ, ನಿಮ್ಮಂತೆಯೇ ಸಾರ್ವಜನಿಕ ಹಿತಸಾಧನೆಯ ಸದುದ್ದೇಶದಿಂದಲೇ ಕೂಡಿದ್ದಾರೆಂದು ನೀವು ಭಾವಿಸಬೇಕೆಂದು ಕೋರುವೆವು." ಮಹಾಸ್ವಾಮಿಯವರು ಎಷ್ಟುಮಟ್ಟಿಗೆ ಕೂಲಂಕಷವಾಗಿ ವಿಷಯ ಪರಿಶೀಲನ ಮಾಡಿ ಶ್ರಮವಹಿಸಿ ಕೆಲಸ ಮಾಡಲು ಸಿದ್ಧವಾಗಿದ್ದರೆಂಬ ಅಂಶವು ಈ ಮಾತುಗಳಿಂದ ಬಹು ಚೆನ್ನಾಗಿ ವ್ಯಕ್ತವಾಗುತ್ತದೆ. ಆ ಬಳಿಕ ಅವರು ಪ್ರತಿ ದಿನವೂ ಸಂಸ್ಥಾನದ ಆಡಳಿತ ಸಂಬಂಧವಾದ ಮತ್ತು ಅರಮನೆಯ ಆಡಳಿತ ಸಂಬಂಧವಾದ ಕಾಗದ ಪತ್ರಗಳನ್ನು ಪರಾಂಬರಿಸಿ ತಮ್ಮ ಆಜ್ಞೆಗಳನ್ನು ಬರೆಯುವ ಕೆಲಸಕ್ಕೆ ಅನೇಕ ಘಂಟೆಗಳನ್ನು ವಿನಿಯೋಗಿಸಿ ಕೆಲಸಮಾಡಿ ಶ್ರಮಿಸಲಾರಂಭಿಸಿದ ಕಾರ್ಯತತ್ಪರತೆಯು ಸಮಸ್ತರನ್ನೂ ಬೆರಗುಮಾಡಿತು. ಅವರು ರಾಜ್ಯಾಡಳಿತ

**ಪ್ರಭುಗಳವರ ಕಾರ್ಯತತ್ಪರತೆ**

---

* "We wish that His Highness the Maharaja and the Private Secretary will practically show that they are prepared to work so."
—*The Mysore Herald*, dated 18th August 1902.

ನಿರ್ವಹಣದಲ್ಲಿ ಮಾರ್ಗದರ್ಶನದ ಭಾರವನ್ನು ತಾವೇ ವಹಿಸಿ, ವಿಚಕ್ಷಣೆಯಿಂದ ರಾಜ್ಯಭಾರಮಾಡಲು ಪ್ರಾರಂಭಿಸಿದರು.

ಮಹಾಸ್ವಾಮಿಯವರು ಪ್ರತಿ ದಿನವೂ ಪೂರ್ವಾಹ್ನ ಹನ್ನೊಂದು ಘಂಟೆಗೆ, ಕಾಲಕ್ಕೆ ಸರಿಯಾಗಿ, ಜಗನ್ಮೋಹನ ಪ್ರಾಸಾದದಲ್ಲಿ ಏರ್ಪಟ್ಟಿದ್ದ ಕಾರ್ಯಾಲಯಕ್ಕೆ ದಯಮಾಡಿಸುತ್ತಿದ್ದರು.

**ಕಾರ್ಯನಿರ್ವಹಣದ ನಿಕಷ ಪರೀಕ್ಷೆ**

ಪ್ರೈವೇಟ್ ಸೆಕ್ರೆಟರಿಯವರು ಅದಕ್ಕೆ ಮುಂಚಿತವಾಗಿಯೇ ಅಲ್ಲಿಗೆ ಬಂದು ಕಾಗದಪತ್ರಗಳನ್ನು ಸಿದ್ಧಪಡಿಸಿರುತ್ತಿದ್ದರು. ಮಹಾಸ್ವಾಮಿಯವರು ಅವುಗಳನ್ನು ಪರಾಂಬರಿಸಿ ಯಥೋಚಿತವಾದ ಆಜ್ಞೆಗಳನ್ನು ಬರೆಯುತ್ತಿದ್ದರು. ಅನೇಕ ಸಂದರ್ಭಗಳಲ್ಲಿ ಅವರು ಹಲವು ಪುಟಗಳಾಗುವಂತೆ ತಮ್ಮ ಇತ್ಯರ್ಥಗಳನ್ನು ಬರೆಯುತ್ತಿದ್ದುದೂ ಉಂಟು. ಶ್ರಮವನ್ನು ಲೇಶಮಾತ್ರವೂ ಗಮನಿಸದೆ ಆ ಆ ದಿನಗಳ ಕಾರ್ಯಗಳನ್ನು ಸಾಮಾನ್ಯವಾಗಿ ಆ ಆ ದಿನವೇ ಪೂರೈಸಿಬಿಡುತ್ತಿದ್ದರು. ಆದರೂ ಕ್ಲೇಶರಹಿತವಾಗಿ ಅವರ ಕಾರ್ಯಕಲಾಪಗಳೆಲ್ಲ ಸುಲಲಿತವಾಗಿ ನಡೆಯುತ್ತಿದ್ದುವೆಂದೇನೂ ಅರ್ಥವಲ್ಲ. ಏಕೆಂದರೆ, ಆಗಿನ ಪ್ರೈವೇಟ್ ಸೆಕ್ರೆಟರಿಯವರು ಹೇಳಿರುವಂತೆ* "ಪ್ರಾರಂಭದಲ್ಲಿ ಒಂದೆರಡು ವರ್ಷಗಳ ಕಾಲ ಮಂತ್ರಾಲೋಚನಾ ಸಭೆಯಲ್ಲಿ ದಿವಾನ್‌ರವರಿಗೂ ಸಚಿವರುಗಳೀರ್ವರಿಗೂ ಸರ್ವದಾ ಸೌಹಾರ್ದ ಸಾಮರಸ್ಯಗಳಿರಲಿಲ್ಲ. ಅದರ ಪರಿಣಾಮವಾಗಿ ದಿವಾನ್‌ರವರ ಅಭಿಪ್ರಾಯವನ್ನು ಅನುಮೋದಿಸಬೇಕೇ ಅಥವಾ ದಿವಾನ್‌ರವರ ಅಭಿಪ್ರಾಯಕ್ಕೆ ಪೂರ್ಣ ವಿರುದ್ಧವಾಗಿದ್ದ ಸಚಿವರ ಅಭಿಪ್ರಾಯವನ್ನು ಅನುಮೋದಿಸಬೇಕೇ — ಎಂಬ ಘಟ್ಟವೇ ಶ್ರೀಮನ್ಮಹಾರಾಜರವರಿಗೆ ಪದೇ ಪದೇ ಒದಗುತ್ತಿದ್ದಿತು; ಕೆಲವುವೇಳೆ ಸಚಿವರ ಅಭಿಪ್ರಾಯವೇ ಸರಿಯಾಗಿರುತ್ತಿದ್ದಿತು; ಕೆಲವುವೇಳೆ ಅದು ಸರಿಯಾಗಿರುತ್ತಿರಲಿಲ್ಲ. ವಸ್ತುತಃ ದಿವಾನ್‌ರವರ ಅಭಿಪ್ರಾಯಕ್ಕೇ ತೂಕ ಕೊಡಬೇಕಾದುದು ಸಮಸ್ತ ದೃಷ್ಟಿಗಳಿಂದಲೂ ಕಾರಣಗಳಿಂದಲೂ ತೀರ ಮುಖ್ಯವಾಗಿರುತ್ತಿದ್ದಿತು. ಆದರೆ ಕಾರ್ಯವಿಚಕ್ಷಣೆಯ ಮತ್ತು ಅಭ್ಯುದಯ ಸಾಧನೆಯ ದೃಷ್ಟಿಯಿಂದ ಆ ಬಗೆಯ ಕಾರ್ಯನೀತಿಯನ್ನವಲಂಬಿಸುವುದು ಸರ್ವದಾ

* "During the first year or two the internal relations of the Council were not always harmonious and the Maharaja was frequently placed in the position of having to decide between the view of the Dewan and of a dissentient Councillor who was as often as not in the right. It was essential for every reason, to support the Minister as far as practicable, and it was not always easy to reconcile that policy with the interests of efficiency and progress."—*Life in the Indian Civil Service.*

ಸುಲಭವಾಗಿರಲಿಲ್ಲ. ಆದುದರಿಂದ ಪರಸ್ಪರ ವಿರುದ್ಧಾಭಿಪ್ರಾಯಗಳಲ್ಲಾ ವುದು ಸರಿಯೆಂಬುದನ್ನು ತಾವೇ ನಿರ್ಧರಿಸಿ ತೂಗಿ ನೋಡಿ ಆಜ್ಞೆಮಾಡ ಬೇಕಾದ ಅತ್ಯಂತ ಕ್ಲೇಶದಾಯಕವಾದ ಸನ್ನಿವೇಶವು ಶ್ರೀಮನ್ಮಹಾರಾಜ ರವರಿಗೆ ಒದಗಿತು. ಇದರ ಜೊತೆಗೆ ಮತ್ತೊಂದು ಕಷ್ಟವೂ ಇದ್ದಿತು: ಮಹಾಸ್ವಾಮಿಯವರು ಉತ್ತಮವಾದ ಸುಧಾರಣೆಗಳನ್ನೇ ಸ್ವಬುದ್ಧಿ ಯಿಂದ ನೆರವೇರಿಸಿದರೂ ಕೂಡ, ಅದರ ದೆಸೆಯಿಂದ ತಮ್ಮ ಸ್ವಪ್ರಯೋಜ ನಕ್ಕೆ ಹಾನಿ ತಟ್ಟಿದ ಮೈಸೂರು ದೇಶೀಯರೇ, ಪ್ರಭುಗಳು ಬ್ರಿಟಿಷ್ ರೆಸಿಡೆಂಟರವರ ಮತ್ತು ಯೂರೋಪಿಯನ್ ಪ್ರೈವೇಟ್ ಸೆಕ್ರೆಟರಿಯವರ ಮಾತುಗಳಿಗೆ ಮನಸೋತ ದೌರ್ಬಲ್ಯದಿಂದ ಹಾಗಾಯಿತೆಂದು ಅಪಪ್ರಚಾರ ಮಾಡತೊಡಗುತ್ತಿದ್ದರು; ಮೈಸೂರು ಸಂಸ್ಥಾನದ ಪ್ರಜೆ ಗಳಲ್ಲಿ ಅರ್ಹರಾದವರನ್ನು ಯೂರೋಪಿಯನ್ ಅಧಿಕಾರಿಗಳಿಗೆ ಪ್ರತಿಯಾಗಿ ದೊಡ್ಡ ದೊಡ್ಡ ಹುದ್ದೆಗಳಿಗೆ ನೇಮಕಮಾಡಿದ ಸಂದರ್ಭಗಳಲ್ಲೆಲ್ಲ, ಹಿಂದಿನ ಬ್ರಿಟಿಷ್ ಕಮಿಷನ್ ಕಾಲದಲ್ಲಿ ಅಧಿಕಾರಗಳಲ್ಲಿದ್ದವರಲ್ಲಿ ಜೀವಂತರಾಗಿದ್ದವರೂ, ಅವರ ಮಿತ್ರರೂ, ಶ್ರೀ ಚಾಮರಾಜೇಂದ್ರ ಒಡೆಯರವರ ಕಾಲದಲ್ಲಿ ಭಾರಿ ಭಾರಿ ಉದ್ಯೋಗಗಳನ್ನು ಪಡೆದಿದ್ದ ಯೂರೋಪಿಯನ್ ದೊಡ್ಡಮನುಷ್ಯರೂ ಅಸಮಾಧಾನಪಡುತ್ತಿದ್ದರು. ಶ್ರೀಮನ್ಮಹಾರಾಜರವರು ಅಸಾಧಾರಣವಾದ ಪ್ರಜಾವಾತ್ಸಲ್ಯದಿಂದ ಕೂಡಿದ್ದುದರ ಜೊತೆಗೆ ತಾವು ಆರಿಸಿ ಅಭಿಮಾನವನ್ನು ತೋರಿದ ಸಮರ್ಥ ರಾದ ಯೂರೋಪಿಯನರಲ್ಲಿ ಅಮಿತವಾದ ಮಮತೆಯನ್ನು ಪ್ರದರ್ಶಿಸು ತ್ತಿದ್ದೂ ಕೂಡ, ಉಭಯತ್ರರಿಂದಲೂ ಆ ರೀತಿ ಅನ್ಯಾಯವಾದ ಆರೋಪಣೆ ಗಳು ಆಗಾಗ ಬರುತ್ತಿದ್ದುವು. ಆದರೆ ರಾಜ್ಯಭಾರಸೂತ್ರ ಸ್ವೀಕಾರ ಮಹೋತ್ಸವ ಭಾಷಣದಲ್ಲಿ ಮೊದಲೇ ಅಪ್ಪಣೆಕೊಡಿಸಿದ್ದಂತೆ ನಿರ್ಭಯ ದಿಂದಲೂ ನಿಷ್ಪಕ್ಷಪಾತದಿಂದಲೂ ವರ್ತಿಸಿ ಅವರು ಕಾರ್ಯಸಾಧನೆಮಾಡಿ ದರು. ಪ್ರತಿಯೊಬ್ಬರ ಯೋಗ್ಯತಾ ಸಾಮರ್ಥ್ಯಗಳೂ ಇಷ್ಟಿಷ್ಟೇ ಎಂಬು ದಾಗಿ ನಿಷ್ಕೃಷ್ಟರೀತಿಯಲ್ಲಿ ನಿರ್ಧರಿಸುವುದರಲ್ಲಿ ಅವರ ಅನನ್ಯಸುಲಭವಾದ ಅದ್ಭುತಕೌಶಲ್ಯವನ್ನು ಕಂಡವರೆಲ್ಲರೂ ವಿಸ್ಮಿತರಾಗಿ ಶ್ಲಾಘಿಸಿದರು. ಅನೇಕಾನೇಕ ಬಿಕ್ಕಟ್ಟಿನ ಪ್ರಸಂಗದಲ್ಲಿಯೂ ಅವರು ಪ್ರದರ್ಶಿಸಿದ ಅಪರಿಮಿತವಾದ ತಾಳ್ಮೆಯನ್ನೂ ಸಾಮರ್ಥ್ಯವನ್ನೂ ಶ್ರೀಮಾನ್ ಮೆಕಾನಕಿ ಯವರು ಮನವಾರೆ ಕೊಂಡಾಡಿ, ತರುಣ ವಯಸ್ಸಿಗನುಗುಣವಾದ ಆತುರವನ್ನಾಗಲಿ ಅಶಾಂತಿಯನ್ನಾಗಲಿ ಅವರು ಎಂದೂ ತೋರಿಸಲಿಲ್ಲ ವೆಂದು ಹೇಳಿದ್ದಾರೆ. ಪ್ರಾರಂಭದಲ್ಲಿ ಒದಗಿದ ಕಷ್ಟಗಳನ್ನೆಲ್ಲ ಎದುರಿಸಿ,

ಆಲೋಚನಾಪರರಲ್ಲದ ಅವಿವೇಕಿಗಳೂ, ವಾಸ್ತವಸ್ಥಿತಿಯನ್ನರಿಯದ ಅಜ್ಞರೂ, ಸ್ವಪ್ರಯೋಜನ ಸಾಧನೆಗೆ ಪ್ರತಿಬಂಧಕವುಂಟಾದ ಅತೃಪ್ತರೂ ಮಾಡಿದ ದುರಾಕ್ಷೇಪಗಳಿಗೆ ಲೇಶಮಾತ್ರವೂ ಗಮನಕೊಡದೆ— ದೀರ್ಘಾಲೋಚನೆಯಿಂದ ಒಂದುಸಲ ಸ್ಥಿರಸಂಕಲ್ಪಮಾಡಿದಮೇಲೆ ಮನಸ್ಸಾಕ್ಷಿಗೆ ವಿರುದ್ಧವಾಗಿ ಸ್ವಲ್ಪವೂ ಅದನ್ನು ಮಾರ್ಪಡಿಸದೆ— ಪ್ರಶಾಂತ ಮನೋಧರ್ಮದಿಂದಲೂ ಅಚಲಗಾಂಭೀರ್ಯದಿಂದಲೂ ಅವರು ಕರ್ತವ್ಯಪಾಲನ ಮಾಡಿದುದನ್ನೂ ಸರ್ ಇವ್ಯಾನ್ ಮೆಕಾನಕಿಯವರು ಕೊಂಡಾಡಿದ್ದಾರೆ. ಅವರು ಮೈಸೂರು ಸಂಸ್ಥಾನದಲ್ಲಿ ಕೆಲಸಮಾಡಿ ತಾವು ಹೊರಟುಹೋದ ಬಳಿಕ ಹದಿನಾರು ವರ್ಷಗಳು ಕಳೆದ ತರುವಾಯ ಬರೆದ ಗ್ರಂಥದಲ್ಲಿ ಮಹಾಸ್ವಾಮಿಯವರು ತಮಗಿಂತ ಕಿರಿಯರಾಗಿದ್ದೂ "ಕೆಲವು ವಿಚಾರಗಳಲ್ಲಿ ಅವರು ನನಗಿಂತ ಹಿರಿಯರಾಗಿದ್ದರು. ಎಂದೆಂದಿಗೂ ಹಾಗೆಯೇ ಇದ್ದೂ ಇರುತ್ತಾರೆ"* ಎಂದು ಬರೆದಿದ್ದಾರೆ. ಅವರು ತಮ್ಮ ಹೇಳಿಕೆಗೊಂದು ನಿದರ್ಶನವನ್ನೂ ಕೊಟ್ಟಿದ್ದಾರೆ. ಕಪಟನಾಟಕವನ್ನು ಹೂಡಿ ತನ್ನ ನಿಜಸ್ವಭಾವವನ್ನು ಮರೆಮಾಚಿದ್ದ ಆಷಾಢಭೂತಿಯೊಬ್ಬನ ದೀರ್ಘಕಾಲದ ನಟನೆಗೆ ಮನಸೋತು ಆತನಿಗೆ ಅನುಕೂಲಿಸುವಂತೆ ತಮ್ಮ ಸಲಹೆಗಳನ್ನು ಒಪ್ಪಿಸಿದಾಗ ಮಹಾಸ್ವಾಮಿಯವರು ಕಾಗದಪತ್ರಗಳನ್ನು ಹಿಂದಕ್ಕೆ ಕಳುಹಿಸಿ ಆತನ ನೀಚಸ್ವಭಾವವನ್ನು ತಮಗೆ ತಿಳಿಸಿದರೆಂದೂ ಅವರು ಒಪ್ಪಿಕೊಂಡಿದ್ದಾರೆ.

ದೇಶೋನ್ನತಿ ಸಾಧಕವಾದ ದೊಡ್ಡ ದೊಡ್ಡ ಏರ್ಪಾಡುಗಳನ್ನು ಒಂದರಮೇಲೊಂದರಂತೆ ಮಹಾಸ್ವಾಮಿಯವರೇ ಆಲೋಚಿಸಿ, ನಿರ್ಧರಿಸಿ, ಕಾರ್ಯರೂಪಕ್ಕೆ ತರುವುದಕ್ಕಾರಂಭಿಸಿದರು. ಆ ಬಗೆಯ ಮಹತ್ತರ ಪ್ರಯತ್ನಗಳಲ್ಲುದ್ಯುಕ್ತರಾಗಿದ್ದಾಗ ಕೂಡ, ಅವಾಂತರವಾಗಲಿ, ಆತುರವಾಗಲಿ ಸ್ವಲ್ಪವೂ ಇಲ್ಲದೆ ಮಹಾಸ್ವಾಮಿಯವರು ಅವ್ಯಗ್ರತೆಯಿಂದಲೂ ಶಾಂತತೆಯಿಂದಲೂ ದೇಶೋನ್ನತಿ ಸಾಧನೆ ಮಾಡಿದರು. ಆದುದರಿಂದಲೇ ಆಡಳಿತ ವಿಚಕ್ಷಣೆಯಲ್ಲಿ ಮೈಸೂರು ಸಂಸ್ಥಾನವು "ವಸ್ತುತಃ ಆಗ್ಗೆ ಇತರ ಭಾರತೀಯ ಸಂಸ್ಥಾನಗಳನ್ನೆಲ್ಲ ಮೀರಿಸಿ, ಅವೆಲ್ಲಕ್ಕಿಂತ ಅಧಿಕತರವಾಗಿ ಮುಂದುವರಿದಿದ್ದಿತು"† ಎಂಬ ಖ್ಯಾತಿಯನ್ನು ಬಹುಬೇಗ ಗಳಿಸಿತು.

---

* "In some respects he was and always will be an older man than myself"—Sir Evan Maconochie, K.C.I.E., C.S.I.

† "... it was in all essentials far ahead of any other Indian State of that day."

ಮಹಾಸ್ವಾಮಿಯವರು ಗುರುತರವಾದ ಮತ್ತು ಮನಸ್ಸಿಗೆ ಆಯಾಸಕೊಡುತ್ತಿದ್ದ ಆ ಬಗೆಯ ಕರ್ತವ್ಯಗಳ ಮಧ್ಯದಲ್ಲಿ ಕೂಡ,

**ಮನಸ್ಸಿನ ಮಾಧುರ್ಯ**

ಸ್ನಿಗ್ಧ ಮಧುರವಾದ ಚಿತ್ತವೃತ್ತಿಯಿಂದಲೂ ವಿನೋದ ಪ್ರಿಯತೆಯಿಂದಲೂ ಕೂಡಿದ್ದರು. ಅವರು ಪ್ರಭುತ್ವಸೂತ್ರಗಳನ್ನು ಸ್ವೀಕರಿಸಿದ ಕೆಲವು ದಿನಗಳ ತರುವಾಯ, ರಾಜಧಾನಿಯಲ್ಲಿ ಒಂದು ಪಾಠಶಾಲೆಗೆ ದಯಮಾಡಿದರು. ವಿದ್ಯಾರ್ಥಿಗಳು ಆಟಕ್ಕೆ ಉತ್ತಮ ವಿಧದ ಸಾಮಾನುಗಳನ್ನಿಟ್ಟುಕೊಂಡಿಲ್ಲದಿದ್ದುದನ್ನು ಕಂಡು, ಮುರುಕು ಸಾಮಾನುಗಳನ್ನಿಟ್ಟುಕೊಂಡಿದ್ದುದೇಕೆಂದು ವಿದ್ಯಾರ್ಥಿಗಳನ್ನು ಕೇಳಿದರು. ಒಬ್ಬ ವಿದ್ಯಾರ್ಥಿಯು "ಒಳಗೆ ಒಳ್ಳೇ ಸಾಮಾನುಗಳಿದ್ದರಲ್ಲವೇ ಹೊರಗೆ ತಂದು ಆಟವಾಡಿಯೇವು!" ಎಂದು ಉತ್ತರ ಹೇಳಿದುದಕ್ಕೆ ನಗುತ್ತ, "ಒಳ್ಳೆಯ ಸಾಮಾನುಗಳೇ ಬರುತ್ತವೆ" ಎಂದು ಹೇಳಿ "ರಾಯಲ್ ಸ್ಕೂಲ್" ಪಾಠಶಾಲೆಯಲ್ಲಿ ಅದುವರೆಗೆ ತಾವೂ ತಮ್ಮ ಸಹಪಾಠಿಗಳೂ ಆಟವಾಡುತ್ತಿದ್ದ ಅತ್ಯುತ್ತಮವಾದ ಸಾಮಾನುಗಳನ್ನೆಲ್ಲ ಅಲ್ಲಿಗೆ ಕಳುಹಿಸಿದರು.

ಶ್ರೀ ಚಾಮರಾಜೇಂದ್ರ ಒಡೆಯರವರ ಕಾಲದಿಂದ, ಅರಮನೆಗೆ ಸೇರಿದ ಗೋಶಾಲೆಯಲ್ಲಿ ("ಕರೋಹಟ್ಟಿ"ಯಲ್ಲಿ) ಶ್ರದ್ಧೆಯಿಂದ ಕೆಲಸ ಮಾಡಿದವರು ಶ್ರೀಮಾನ್ ದರೋಗ ಚಲುವಯ್ಯನವರು. ಶ್ರೀಮನ್ಮಹಾರಾಜ ಶ್ರೀ ಕೃಷ್ಣರಾಜೇಂದ್ರ ಒಡೆಯರವರು ಕಾರ್ಯಗೌರವದ ದೆಸೆಯಿಂದ ಗೋಶಾಲೆಗೆ ಹೋಗದೆ ಸ್ವಲ್ಪಕಾಲ ನಿಲ್ಲಿಸಿದ್ದು, ಆ ಬಳಿಕ ಒಂದು ದಿನ ಅಲ್ಲಿಗೆ ದಯಮಾಡಿದರು. ಆಗ ಶ್ರೀಮಾನ್ ದರೋಗ ಚಲುವಯ್ಯನವರು ಹಿಂದಿನ ಮಹಾರಾಜರವರ ಕಾಲದಿಂದಲೂ ಕೆಲಸಮಾಡಿ ಮೆಚ್ಚಿಕೆಯನ್ನು ಪಡೆದಿದ್ದ ಸಲಿಗೆಯಿಂದ, "ಮಹಾಸ್ವಾಮಿ! ಕರೋಹಟ್ಟಿಗೆ ದೊಡ್ಡ ಮಹಾಸ್ವಾಮಿಯವರು ಪ್ರತಿ ಶುಕ್ರವಾರವೂ ಬಂದು ಗೋದರ್ಶನ ಮಾಡಿಕೊಂಡು ದಯಮಾಡುತ್ತಿದ್ದರು. ನಾವಿಲ್ಲಿ ಪ್ರತಿ ಶುಕ್ರವಾರವೂ ಗೋವುಗಳಿಗೆಲ್ಲಾ ಮೈತೊಳೆದು ಕರೋಹಟ್ಟೀನೆಲ್ಲಾ ಗುಡಿಸಿ ಸಾರಿಸಿ ರಂಗೋಲಿಯಿಟ್ಟು ತೋರಣಾ ಕಟ್ಟಿ ಅಲಂಕಾರ ಮಾಡಿರ್ತೀವಿ. ನಮ್ಮ ಮಹಾಸ್ವಾಮಿಯವರು ಬಂದಾರೇ ಅಂತ ಕಾದಿದ್ರೆ, ಮಹಾಸ್ವಾಮಿ, ತಾವು ಬರ್ಲೇ ಇಲ್ಲ. ಅದ್ರಿಂದ ನಮಗೆ ಶುಕ್ರವಾರ ಬಂದ್ರೇ ಯೋಚನೆ. ಗೋವುಗಳ ದರ್ಶನಾಮಾಡಿದ ಪುಣ್ಯ ತಮಗೂ, ತಮ್ಮನ್ನೂ ಗೋವುಗಳನ್ನೂ ದರ್ಶನಾಮಾಡಿದ ಪುಣ್ಯ ನಮಗೂ ಬರುವಂತೆ ಮಾಡಬೇಕು, ಮಹಾಸ್ವಾಮಿ" ಎಂದು ಹೇಳಿ ಕೈಮುಗಿದರು. ಮಹಾಸ್ವಾಮಿಯವರು

ನಗುತ್ತ, "ಇನ್ನುಮೇಲೆ ಬರುತ್ತೇವೆ, ಚಲುವಯ್ಯನವರೆ. ಇನ್ನು ಮೇಲೆ ಬರುತ್ತೇವೆಂದು ಹೇಳಿಹೋಗುವುದಕ್ಕಾಗಿಯೇ ಈ ದಿನ ಇಲ್ಲಿಗೆ ಬಂದಿರುವುದು. ಆದರೆ ಇಲ್ಲಿರುವ ಒಂದು ಲೋಪ ಸರಿಹೋಗಬೇಕು. ಅದನ್ನು ಸರಿಪಡಿಸಿದರೆ ಸಂತೋಷದಿಂದ ಬರುತ್ತೇವೆ" ಎಂದು ಅಪ್ಪಣೆ ಕೊಡಿಸಿದರು. ಶ್ರೀಮಾನ್ ಚಲುವಯ್ಯನವರು, "ಏನಿದ್ದರೂ ತಿದ್ದಿಕೊಳ್ತೇವೆ, ಮಹಾಸ್ವಾಮಿ. ತಿಳಿಸಿ ಕಾಪಾಡಬೇಕು. ನಾವೆಲ್ಲಾ ಇದೇ ನಮ್ಮ ಭಾಗಕ್ಕೆ ಗೋಕುಲವೆಂತಾ ಭಾವಿಸಿ ಊಳಿಗಮಾಡ್ತಿದ್ದೇವೆ. ಎಲ್ಲಿಯೂ ಕೊಳೆ ಸೇರದಂತೆ ಚೊಕ್ಕಟವಾಗಿಟ್ಟಿದ್ದೇವೆ. ಶುಕ್ರವಾರ ಶುಕ್ರವಾರ ಭಕ್ತಿಯಿಂದ ಗೋವುಗಳಿಗೆಲ್ಲಾ ಮೈ ತೊಳೆದು ಅಲಂಕಾರ ಮಾಡಿಸಿ ಕೃಷ್ಣದೇವರಿಗೆ ಪೂಜೆ ಮಾಡಿಸ್ತಾ ಇದ್ದೇವೆ" ಎಂದರು. ಆಗ ಮಹಾಸ್ವಾಮಿಯವರು ಮತ್ತೆ ನಕ್ಕು, "ಅದೆಲ್ಲಾ ಸರಿ. ಆದರೆ ಇಲ್ಲಿರುವುದು ಒಂದೇ ಒಂದು ಲೋಪ. ಇಲ್ಲಿರುವ ಎಮ್ಮೆಗಳಿಗೂ ಪ್ರತಿ ಶುಕ್ರವಾರವೂ ಮೈ ತೊಳೆಯಿರಿ. ಅವೂ ನಿಮ್ಮನ್ನೇ ಆಶ್ರಯಿಸಿಕೊಂಡಿವೆ" ಎಂದರು. ಶ್ರೀಮಾನ್ ಚಲುವಯ್ಯನವರು ಕೈಮುಗಿದು, "ಬೇರೇ ದಿನ ಎಮ್ಮೆಗಳಿಗೆ ಈಗ ಮೈ ತೊಳೀತಾ ಇದ್ದೇವೆ. ಇನ್ನುಮೇಲೆ ಗೋವುಗಳಂತೆಯೇ ಶುಕ್ರವಾರ ಶುಕ್ರವಾರ ಎಮ್ಮೆಗಳಿಗೂ ಮೈ ತೊಳೀತೇವೆ. ನಾಡಿದ್ದೇ ಶುಕ್ರವಾರ. ಮಹಾಸ್ವಾಮಿಯವರು ದಯಮಾಡಬೇಕು. ನಾನು ಮುದುಕ. ಒರಟಾಗಿ ಹೀಗೆ ಅರಿಕೆ ಮಾಡಿದ್ದಕ್ಕೆ ಮನ್ನಿಸಬೇಕು. ದೊಡ್ಡ ಮಹಾಸ್ವಾಮಿಗಳ ಕಾಲದಿಂದ ಕೆಲಸಮಾಡಿದ ಸಲಿಗೆ" ಎಂದರು. ಮಹಾಸ್ವಾಮಿಯವರು ಮಂದಹಾಸದಿಂದ, "ಸಂತೋಷ, ಚಲುವಯ್ಯನವರೇ, ಇನ್ನುಮೇಲೆ ಸರಿಯಾಗಿ ಬರುತ್ತೇವೆ" ಎಂದು ಹೇಳಿ ಕುದುರೆಯನ್ನು ಬಿಟ್ಟುಕೊಂಡು ಅರಮನೆಗೆ ದಯಮಾಡಿದರು. ಆ ಬಳಿಕ ಪ್ರತಿ ಶುಕ್ರವಾರವೂ ಮಹಾಸ್ವಾಮಿಯವರು ಅಲ್ಲಿಗೆ ಹೋಗಿ ಬರಲಾರಂಭಿಸಿದರು. ಒಂದು ಗುರುವಾರದ ದಿನ ಬೆಳಗ್ಗೆ ಪೂರ್ವಭಾವಿಯಾಗಿ ತಿಳಿಸದೆಯೇ ಅಕಸ್ಮಾತ್ತಾಗಿ ಮಹಾಸ್ವಾಮಿಯವರು ಅಲ್ಲಿಗೆ ಚಿತ್ತೈಸಿದರು. ಆಗ ಶ್ರೀಮಾನ್ ಚಲುವಯ್ಯನವರೂ ಮತ್ತೆ ಕೆಲವರೂ ಕರುಗಳನ್ನು ಅಂಗಳದಲ್ಲಿ ಗುಂಪು ಸೇರಿಸಿ ಬಿಸಿಲು ಕಾಯಿಸಿಕೊಳ್ಳುತ್ತಿದ್ದರು. ಅವರೆಲ್ಲರೂ ಕರುಗಳನ್ನು ಆತಂಕದಿಂದ ಅತ್ತಿತ್ತ ಅಟ್ಟಿ, ವರಸೆಯಾಗಿ ನಿಲ್ಲಿಸಲಾರಂಭಿಸಿದರು. ಮಹಾಸ್ವಾಮಿಯವರು ಅದನ್ನು ಕಂಡೂ ಕಾಣದಂತೆ ಎತ್ತಲೋ ನೋಡುತ್ತ ನಿಂತಿದ್ದರು. ಒಂದೆರಡು ನಿಮಿಷಗಳಲ್ಲಿ ಶ್ರೀಮಾನ್ ದರೋಗ ಚಲುವಯ್ಯನವರು ದೂರದಲ್ಲಿ ನಿಂತಿದ್ದ

ಮಹಾಸ್ವಾಮಿಯವರ ಬಳಿಗೆ ಓಡಿಹೋದರು. ಪ್ರಭುಗಳು ನಗುತ್ತ, "ಎಲ್ಲರೂ ಏನು ಮಾಡುತ್ತಿದ್ದೀರಿ, ಚಲುವಯ್ಯನವರೇ? ನಾಳೆ ಶುಕ್ರವಾರ. ನಾಳೆ ಇಲ್ಲಿಗೆ ಬರುವುದನ್ನು ತಿಳಿಸಿಹೋಗೋಣವೆಂದು ಬಂದೆವು" ಎಂದರು. ಶ್ರೀಮಾನ್ ಚಲುವಯ್ಯನವರು, "ದಯಮಾಡಬೇಕು, ಮಹಾಸ್ವಾಮಿ. ಕರುಗಳೊಡನೆ ನಾವೆಲ್ಲರೂ ಬಿಸಿಲು ಕಾಯಿಸಿಕೊಳ್ಳುತ್ತಿದ್ದೆವು. ಹಸುವಿನ ಕರುಗಳು ಬಹಳ ಚೆನ್ನ, ಮಹಾಸ್ವಾಮಿ. ಹಸುಗಳ ಕರುಗಳನ್ನೆಲ್ಲಾ ಒಟ್ಟಿಗೆ ಸೇರಿಸಿ ಬಿಸಿಲು ಕಾಯಿಸಿಕೊಳ್ಳುತ್ತಿದ್ದೆವು" ಎಂದು ಅರಿಕೆ ಮಾಡಿದರು. ಸೂಕ್ಷ್ಮಮತಿಗಳಾದ ಮಹಾಸ್ವಾಮಿಯವರು ಕೊನೆಯ ಎರಡು ವಾಕ್ಯಗಳು ಅನವಶ್ಯವಾಗಿದ್ದುದನ್ನು ಗಮನಿಸಿ, ಅಂದು ಏನೋ ನಡೆದಿರಬೇಕೆಂದು ಭಾವಿಸಿದರು. ಒಡನೆಯೇ ಮುಂದೆ ಮುಂದೆ ಹೋಗಿ ವರಸೆವರಸೆಯಾಗಿ ನಿಲ್ಲಿಸಿದ್ದ ಕರುಗಳನ್ನು ಕೊಂಚ ಚದುರಿಸಿ ಅವುಗಳ ಹಿಂದೆ ಬಟ್ಟೆಯನ್ನು ಹೊದಿಸಿ ಮಲಗಿಸಿ ಮರೆಮಾಡಿದ್ದ ಕುರಿಯ ಮರಿಯನ್ನು ತೋರಿಸಿ, "ಇದು ಯಾವ ಹಸುವಿನ ಕರು? ಇದಕ್ಕೂ ಬಿಸಿಲು ಕಾಯಿಸಿಕೊಳ್ಳಲು ಆಶೆಯೆ?" ಎಂದು ಅಪ್ಪಣೆ ಕೊಡಿಸಿ ನಕ್ಕರು. ಶ್ರೀಮಾನ್ ಚಲುವಯ್ಯನವರು ವಿಷಾದಪೂರಿತವಾದ ಧ್ವನಿಯಿಂದ, "ತಪ್ಪಾಯ್ತು, ಮಹಾಸ್ವಾಮಿ, ಮನ್ನಿಸಬೇಕು. ಇಲ್ಲಿ ಚಾಕರಿ ಮಾಡ್ತಿರುವವನು ಕುರೀಮರಿ ತಂದಿದ್ದ. ಅದು ಮಹಾಸ್ವಾಮಿಯವರ ಕಣ್ಣಿಗೆ ಬಿದ್ದು ಲೋಪವೆಂತ ತೋರಿದರೆ ಗತಿಯೇನೆಂತ ಭಯಪಟ್ಟು ಹೀಗೆ ಮಾಡಿಸಿದೆ. ಇನ್ನುಮೇಲೆ ಹೀಗೆ ಮಾಡದೆ, ಬುದ್ಧಿಯಾಗಿರ್ತೇನೆ" ಎಂದು ಅರಿಕೆ ಮಾಡಿದುದನ್ನು ಕೇಳಿ ನಗುತ್ತ, "ನಾವು ಆ ದಿನ ಲೋಪವೆಂದು ಸುಮ್ಮನೆ ಹೇಳಿದೆವು. ಅದಕ್ಕೆ ಇಷ್ಟು ಭಯಪಟ್ಟುಕೊಳ್ಳಬೇಕೆ? ಕರುಗಳ ಜೊತೆಗೆ ಕುರಿಯ ಮರಿ ಬಂದರೇನು? ಅದೇನೂ ಲೋಪವಲ್ಲ. ಭಯಪಡಬೇಡಿ. ಬಹಳ ಚೆನ್ನಾಗಿ ಕೆಲಸ ಮಾಡುತ್ತಿದ್ದೀರಿ. ಸಂತೋಷ" ಎಂದು ಅಪ್ಪಣೆ ಕೊಡಿಸಿ, ಮಹಾಸ್ವಾಮಿಯವರು ಅರಮನೆಗೆ ತೆರಳಿದರು. ಮಹಾಸ್ವಾಮಿಯವರು ಅನಂತರ ಶ್ರೀಮಾನ್ ಚಲುವಯ್ಯನವರಿಗೆ ಪಾರಿತೋಷಿಕಗಳನ್ನು ಕಳುಹಿಸಿದುದಲ್ಲದೆ, ಸ್ವಲ್ಪಕಾಲದಲ್ಲೇ ಅವರ ಚಿತ್ರಪಟವೊಂದನ್ನು ಬರೆಯಿಸಿ ಗೋಶಾಲೆಯಲ್ಲಿ ಕಟ್ಟಿಸಿದರು. ಶ್ರೀಮಾನ್ ಚಲುವಯ್ಯನವರ ಸಂತೋಷಕ್ಕೆ ಪಾರವೇ ಇರಲಿಲ್ಲ. ಪ್ರಸಿದ್ಧ ಚಿತ್ರಲೇಖಕರಾಗಿದ್ದ ರಾಜಾ ರವಿವರ್ಮರವರು ಒಂದು ದಿನ ಶ್ರೀಮನ್ಮಹಾರಾಜ ಶ್ರೀ ಕೃಷ್ಣರಾಜೇಂದ್ರ ಒಡೆಯರವರೊಡನೆ ಗೋಶಾಲೆಗೆ ("ಕರೋಹಟ್ಟಿ"ಗೆ) ದಯಮಾಡಿದರು. ಅವರು ಅದನ್ನು

ಪರಿಶೀಲಿಸಿದಮೇಲೆ, "ಭರತಖಂಡದಲ್ಲಿ ಅನೇಕ ರಾಜಾಸ್ಥಾನಗಳನ್ನು ನೋಡಿ ಬಂದಿದ್ದೇನೆ. ಇಲ್ಲಿಯ ಗೋಶಾಲೆಯಲ್ಲಿರುವಂತೆ ಗೋಸೇವೆಯ ಏರ್ಪಾಡು ಮತ್ತೆಲ್ಲಿಯೂ ಇಲ್ಲ. ಇಲ್ಲಿ ನಂದಗೋಕುಲದಂತಿದೆ. ಮೈಸೂರು ಸಂಸ್ಥಾನದ ಕೀರ್ತಿಯು ಬೆಳಗಲು ಅರಮನೆಯ ಗೋಸೇವೆ ಯೊಂದೇ ಸಾಕು" ಎಂದು ಹೇಳಿ ಅಲ್ಲಿಯ ಅಚ್ಚುಕಟ್ಟನ್ನೂ ನೈರ್ಮಲ್ಯ ವನ್ನೂ ಪೋಷಣೆಯ ಬಗೆಯನ್ನೂ ಶ್ಲಾಘಿಸಿದರು. ಮಹಾಸ್ವಾಮಿ ಯವರು ಅವರೊಡನೆ, "ಇದೆಲ್ಲಾ ನಮ್ಮ ಚಲುವಯ್ಯನವರ ಏರ್ಪಾಡು. ಇದೆಲ್ಲಾ ಇಷ್ಟು ಅಚ್ಚುಕಟ್ಟಾಗಿರುವುದಕ್ಕೆ ಅವರೇ ಕಾರಣ" ಎಂದು ಅಪ್ಪಣೆ ಕೊಡಿಸಿದರು. ಆಗ ಶ್ರೀಮಾನ್ ಚಲುವಯ್ಯನವರಿಗೆ ಸಂತೋಷಾಧಿಕ್ಯದಿಂದ ಮಾತುಗಳೇ ಹೊರಡದೆಹೋಗಿ, ಅವರು ಸುಮ್ಮನೆ "ಮಹಾಸ್ವಾಮಿ, ಮಹಾಸ್ವಾಮಿ" ಎಂದು ಹೇಳಿ ಆನಂದ ಬಾಷ್ಪವನ್ನು ಸುರಿಸಿದರು.

ಮಹಾಸ್ವಾಮಿಯವರು ತೀರ ಮೃದುಸ್ವಭಾವದಿಂದ ಕೂಡಿದ್ದವ ರಾಗಿದ್ದರೂ ದಯಾ ದಾಕ್ಷಿಣ್ಯಗಳಿಗೆ ತೀರ ಅನರ್ಹವಾದ ಸಂದರ್ಭಗಳಲ್ಲಿ ಖಂಡಿತವಾದ ಉತ್ತರಗಳನ್ನೇ ಹೇಳುತ್ತಿದ್ದರು. ನಿರ್ದಾಕ್ಷಿಣ್ಯವಾಗಿ ನುಡಿಯಬೇಕಾದ ಸಂದರ್ಭಗಳಲ್ಲಿ "ಇಲ್ಲವೆಂದು ಹೇಳುವ ಸಾಮರ್ಥ್ಯವು ಮಹಾಸ್ವಾಮಿಯವರಿಗಿದೆ" ಎಂದು ಶ್ರೀಮಾನ್ ಫ್ರೇಸರವರೂ ಮಹಾ ಸ್ವಾಮಿಯವರ ಸುಗುಣಗಳನ್ನು ವರ್ಣಿಸುವಲ್ಲಿ ತಮ್ಮ ವರದಿಯಲ್ಲಿ ಹೇಳಿದ್ದಾರೆ. ಕೊಲೆಮಾಡಿದ ಅಪರಾಧಕ್ಕಾಗಿ ಒಬ್ಬನಿಗೆ ಕೋರ್ಟಿನವರು ಮರಣದಂಡನೆಯನ್ನು ವಿಧಿಸಿದ್ದರು. ಆ ಅಪರಾಧಿಯ ಪತ್ನಿಯು ಚಾಮುಂಡೀ ಬೆಟ್ಟದ ಮಾರ್ಗದಲ್ಲಿ ಮಹಾಸ್ವಾಮಿಯವರನ್ನು ಸಂದರ್ಶಿಸಿ ಓಲೆಯ ಭಾಗ್ಯವನ್ನುಳಿಸಬೇಕೆಂದು ಬೇಡಿದಾಗ ಅವರು ಅವಳ ಕಥೆಯನ್ನು ಕೇಳಿ, "ನಿನ್ನ ಓಲೆಯ ಭಾಗ್ಯ ನಿನಗೆ ಬೇಕು, ನಿಜ, ತಾಯಿ. ಆದರೆ ನಿನ್ನ ಗಂಡ ಮತ್ತೊಬ್ಬನನ್ನು ಕೊಂದಿದ್ದಾನಲ್ಲಮ್ಮ. ಅವನ ಹೆಂಡತಿಯ ಓಲೆಯ ಭಾಗ್ಯ ಹೋಗಿದೆಯಲ್ಲಮ್ಮ" ಎಂದು ಮುಂತಾಗಿ ಅಪ್ಪಣೆ ಕೊಡಿಸಿದರು. ಕಾನೂನಿಗೆ ವಿರುದ್ಧವಾಗಿ ವರ್ತಿಸಿದುದಕ್ಕಾಗಿ ಶಿಕ್ಷೆ ಯಾದವರಲ್ಲಿ ಕರುಣೆತೋರುವುದು ಅನುಚಿತವೆಂದು ಮಹಾಸ್ವಾಮಿ ಯವರ ಅಭಿಪ್ರಾಯ. ಆದರೆ, ಉಚಿತ ಸಂದರ್ಭಗಳಲ್ಲಿ, ತಪ್ಪುಮಾಡಿ ದವರಲ್ಲಿ ಮಹಾಸ್ವಾಮಿಯವರು ಕ್ಷಮೆ ತೋರುತ್ತಿದ್ದುದೂ ಉಂಟು. ಒಂದು ಸಲ, ಸಮ್ಮುಖದ ಊಳಿಗದವನೊಬ್ಬನು ಮಹಾಸ್ವಾಮಿಯವರಿಗೆ ಗೋಚರವಾಗದಂತೆ ೩,೦೦೦ ರೂಪಾಯಿಗಳನ್ನು ಕದ್ದುಕೊಂಡು

ಹೋದುದು ಗೊತ್ತಾಯಿತು. ಗುಣವಂತನಾಗಿದ್ದ ಆತನು ಸಾಲದ ಬಾಧೆಯ ಅಪಮಾನವನ್ನು ತಾಳಲಾರದೆ ಆ ರೀತಿ ಮಾಡಿದ್ದನೆಂಬುದನ್ನು ಮಹಾಸ್ವಾಮಿಯವರು ವಿಚಾರಿಸಿ ತಿಳಿದುಕೊಂಡರು. ಮಹಾಸ್ವಾಮಿಯವರು ತಮ್ಮೆದುರಿಗೆ ಅಡ್ಡಬಿದ್ದು ಕೃಪಾಭಿಕ್ಷವನ್ನು ಬೇಡಿದ ಆತನನ್ನು ಕ್ಷಮಿಸಿ ಮತ್ತೆ ಊಳಿಗದಲ್ಲಿರಬಹುದೆಂದು ಅಪ್ಪಣೆಮಾಡಿ ಅನುಗ್ರಹಿಸಿದರು. ದುರಹಂಕಾರಿಗಳಿಗೆ ಅಪಹಾಸ್ಯದ ಚಿಕಿತ್ಸೆಮಾಡಿ ಅವರ ವಿಲಕ್ಷಣ ರೋಗವನ್ನು ಪರಿಹರಿಸಿ ಬುದ್ಧಿಕಲಿಸುವ ಸಾಮರ್ಥ್ಯವೂ ಮಹಾಸ್ವಾಮಿಯವರಿಗಿದ್ದಿತು. ಮಹಾಸ್ವಾಮಿಯವರು ರಾಜ್ಯಭಾರ ಸೂತ್ರವನ್ನು ಸ್ವೀಕರಿಸಿದ ಸ್ವಲ್ಪ ಕಾಲದಮೇಲೆ ಸಾಮಾನ್ಯರಂತೆ ಉಡುಪನ್ನು ಧರಿಸಿ ಒಬ್ಬರೇ ಒಂದು ಗ್ರಾಮದ ಪಾಠಶಾಲೆಗೆ ದಯಮಾಡಿದರು. ಅವರ ಉಡುಪಿನಿಂದಲೂ, ಅವರು ಆಡಿದ ಮಾತುಗಳಿಂದಲೂ ಅವರ ಚಿಕ್ಕವಯಸ್ಸಿನಿಂದಲೂ ಉಪಾಧ್ಯಾಯರು ಮೋಸಹೋಗಿ, ವಿದ್ಯಾಭ್ಯಾಸದ ಇಲಾಖೆಯವರಲ್ಲದ ಇತರ ಸಣ್ಣ ಅಧಿಕಾರಿಗಳಾರೋ ಬಂದಿದ್ದುದಾಗಿ ಭಾವಿಸಿ, ವಿಧವಿಧವಾಗಿ ಆತ್ಮಶ್ಲಾಘನೆಯ ಮತ್ತು ಸ್ವಪ್ರತಿಷ್ಠೆಯ ಮಾತುಗಳನ್ನಾಡಿ, ಅನಂತರ, "ವಿದ್ಯಾರ್ಥಿಗಳು ಗಡಗಡನೆ ನಡುಗುವಂತೆ ಭಯದಲ್ಲಿಟ್ಟೇ ಇದ್ದೇನೆ. ನನ್ನ ಶಿಷ್ಯರಿಗೆಲ್ಲಾ ನನ್ನ ಆಜ್ಞೆಯೆಂದರೆ ಸುಗ್ರೀವಾಜ್ಞೆ" ಎಂದು ಜಂಭ ಹೇಳಿಕೊಂಡರು. ಮಹಾಸ್ವಾಮಿಯವರು, "ನೀವು ಇಷ್ಟು ದರ್ಪವನ್ನು ತೋರಿಸುತ್ತಿದ್ದೂ ಸಹ ಅವಿಧೇಯರಾದ ಶಿಷ್ಯರಿಬ್ಬರು ಪಾಠಶಾಲೆಯ ಕಾಂಪೌಂಡಿನಲ್ಲಿ ಕಟ್ಟಡದ ಹಿಂದೆ ನಿಂತಿದ್ದಾರೆ. ಒಳಕ್ಕೆ ಬಂದು ಪಾಠ ಹೇಳಿಸಿಕೊಳ್ಳುವಂತೆ ಅವರಿಗೂ ಸುಗ್ರೀವಾಜ್ಞೆ ಮಾಡಿದರೆ ಮೇಲು" ಎಂದು ಹೇಳಿ ಹೊರಟುಹೋದರು. ಅಂದು ಮೂವರು ನಾಲ್ವರು ವಿದ್ಯಾರ್ಥಿಗಳು ಬಂದಿರಲಿಲ್ಲ. ಅಂಗೈಯಲ್ಲಿ ನಸ್ಯವನ್ನು ತೀಡುತ್ತಿದ್ದ ಉಪಾಧ್ಯಾಯರು ಆದಷ್ಟುಬೇಗ ಆ ಕೆಲಸವನ್ನು ಮುಗಿಸಿ ನಸ್ಯ ಹಾಕಿಕೊಂಡು, ಬೆತ್ತವನ್ನು ಹಿಡಿದು ಕಟ್ಟಡದ ಹಿಂದಕ್ಕೆ ಹೋಗಿ ನೋಡಿದರು. ಅಲ್ಲಿ ಎರಡು ಕತ್ತೆಗಳು ಮೇಯುತ್ತಿದ್ದುವು. ಮತ್ತೊಂದು ನಿದರ್ಶನವನ್ನೂ ಇದೇ ಸಂದರ್ಭದಲ್ಲಿ ಸೂಚಿಸಬಹುದಾಗಿದೆ. ಪಟ್ಟದ ಕುದುರೆಗೆ ವಯಸ್ಸಾಗುತ್ತಿರುವಾಗಲೇ ಮುಂದೆ ಪಟ್ಟದ ಕುದುರೆಯಾಗಲು ಕುದುರೆಯನ್ನು ಸಿದ್ಧವಾಗಿಟ್ಟಿರುವುದು ವಾಡಿಕೆ. ಆದಕಾರಣ ಪಟ್ಟದ ಕುದುರೆಗಾಗಿ ಆರಿಸಲು ಲಕ್ಷಣಯುತವಾದ ಕೆಲವು ಕುದುರೆಗಳನ್ನು ಹುಡುಕಿ ತರುವಂತೆ ಶ್ರೀಮಾನ್........ರಾಯರವರನ್ನು ಮಹಾಸ್ವಾಮಿಯವರು ಕಳುಹಿಸಿದ್ದರು. ರಾಯರು ಗುಜರಾತು,

ಕಾಥ್ಯವಾಡ, ಮುಂತಾದ ಪ್ರಾಂತಗಳಿಗೆ ಹೋಗಿ ಐದಾರು ತಿಂಗಳುಗಳ
ಸಂಚಾರಮಾಡಿ ಕೆಲವು ಕುದುರೆಗಳನ್ನು ತಂದರು. ಆದರೆ ಮಹಾಸ್ವಾಮಿ
ಯವರ ಸನ್ನಿಧಿಯಲ್ಲಿ ಸುಮಾರು ಒಂದು ಘಂಟೆಯ ಕಾಲ ಮಾತ
ನಾಡಿಯೂ ಕುದುರೆಗಳ ವಿಷಯವನ್ನೇ ಪ್ರಸ್ತಾಪಿಸದೆ, ತಾವು ಪ್ರವಾಸ
ಹೋಗಿ ಶ್ರಮಪಟ್ಟು, "ಲಕ್ಷಣವಾದ ಕುದುರೆಗಳನ್ನು" ಹುಡುಕಿ
ದಣಿದುಹೋದುದು, ತಮಗೆ ಅನೇಕ ಕಷ್ಟಗಳು ಸಂಭವಿಸಿದುದು
ತಮಗಿದ್ದ ಅಶ್ವಲಕ್ಷಣಪರಿಜ್ಞಾನ, ಮುಂತಾದ ಅಂಶಗಳನ್ನೇ ಅರಿಕೆ
ಮಾಡಿದರು. ಆಗ ಮಹಾಸ್ವಾಮಿಯವರು, " ......ರಾಯರೇ!
ನೀವು ಹೋಗಿದ್ದ ಕೆಲಸವೇನಾಯಿತೆಂಬ ವಿಚಾರವನ್ನೂ ಈ ದಿನವೇ
ತಿಳಿಸೀರೆಂದು ನಂಬಿ, ಕಾದಿದ್ದೇವೆ" ಎಂದು ನಗುತ್ತ ನಗುತ್ತ ಅಪ್ಪಣೆ
ಕೊಡಿಸಿದರು.

**ಪ್ರಭುಗಳ ದಿನಚರಿ**

ಪ್ರಭುಗಳವರ ಆಗಿನ ದಿನಚರಿಯನ್ನು ನೋಡಿದರೆ, ಕೇವಲ ಸುಖದ
ಕಡೆಗೇ ಒಲಿಯುವ ಮನೋಧರ್ಮವಿರಬೇಕಾಗಿದ್ದ ಬಾಲ್ಯವಯಸ್ಸಿ
ನಿಂದಲೂ ಕೂಡ ಮಹಾಸ್ವಾಮಿಯವರು ಪ್ರಜೆಗಳ
ಹಿತಸಾಧನೆಗಾಗಿ ಶ್ರಮಸಹಿಷ್ಣುಗಳಾಗಿ ಉದ್ಯೋಗ
ಶೀಲತೆಯಿಂದ ಕೆಲಸಮಾಡುತ್ತಿದ್ದ ಅಂಶವು
ಗೋಚರವಾಗುತ್ತದೆ. ಶ್ರಮಸಹಿಷ್ಣುತೆಯ ಮಾತು ಹಾಗಿರಲಿ;
ದೇಹದಲ್ಲಿ ದುಸ್ಸಹಯಾತನೆಯಾದಾಗ ಕೂಡ ಇತರರ ಊಹೆಗೂ ಸಾಧ್ಯ
ವಲ್ಲದಮಟ್ಟಿನ ತಾಳ್ಮೆಯಿಂದ ನೋವನ್ನು ಸಹಿಸುವ ಅಸಾಧಾರಣ
ಸಾಮರ್ಥ್ಯವನ್ನು ಪಡೆದಿದ್ದವರು, ಆಳಿದ ಮಹಾಸ್ವಾಮಿಯವರು
೧೮೯೮ನೆಯ ಇಸವಿಯಲ್ಲಿ "ಕ್ವಿನ್ಸಿ ಟಾನ್ಸಿಲ್ಸ್" ಎಂಬ ಕಿರುನಾಲಗೆಯ
ಮತ್ತು ಕಂಠನಾಳದ ಉಪದ್ರವವಾಗಿ ಬಹಳ ಬಾಧೆಯಾಗಿದ್ದಾಗ
ಮಹಾಸ್ವಾಮಿಯವರು ತಮಗೆ ನೋವೆಂದು ಕೂಡ ಇತರರೊಡನೆ
ಹೇಳಿಕೊಳ್ಳದೆ ತಾಳ್ಮೆಯಿಂದ ಸಹಿಸಿದುದು ಹದಿನಾಲ್ಕು ವರ್ಷ ವಯಸ್ಸಿನ
ಬಾಲಕರಲ್ಲಿ ಅಸಾಧಾರಣವಾದ ವರ್ತನೆಯೆಂದು* ಮಹಾಸ್ವಾಮಿಯವರ
ವಿದ್ಯಾ ಗುರುಗಳು ವಿಸ್ಮಯವನ್ನು ಸೂಚಿಸಿರುತ್ತಾರೆ. ಬಾಲ್ಯದಿಂದಲೂ
ಆ ರೀತಿ ವರ್ತಿಸುತ್ತಿದ್ದ ಮಹಾಪ್ರಭುಗಳವರು ಮನಃಪೂರ್ವಕವಾಗಿ
ಸಂತೋಷದಿಂದ ಕೈಕೊಂಡ ಪ್ರಜಾಹಿತಸಾಧನೆಯ ಪರಮ ಪವಿತ್ರವಾದ

* "In 1898, His Highness the Maharaja was down with quinsy tonsils and suffered very badly. But it was most extraordinary that he never complained of pain and stoically bore it. It was remarkable for a boy of fourteen years."



ಆಳಿದ ಮಹಾಸ್ವಾಮಿಯವರು



ಆಳಿದ ಮಹಾಸ್ವಾಮಿಯವರು

ಕಾರ್ಯದಲ್ಲಿ ಶ್ರದ್ಧಾನ್ವಿತರಾಗಿ ಶ್ರಮಸಹಿಷ್ಣುತೆಯಿಂದ ವರ್ತಿಸಿದುದರಲ್ಲಿ ಆಶ್ಚರ್ಯವೇನೂ ಇಲ್ಲ.

ವಿದ್ಯಾರ್ಥಿದಶೆಯಲ್ಲಿ ಆಚರಿಸುತ್ತಿದಂತೆಯೇ ಪ್ರಭುತ್ವವನ್ನುವಹಿಸಿದ ತರುವಾಯವೂ ಮಹಾಸ್ವಾಮಿಯವರು ಪ್ರಾತಃಕಾಲ ಐದು ಘಂಟೆಗೇ ನಿದ್ರೆಯಿಂದೆಚ್ಚೆತ್ತು ಸ್ನಾನ ಸಂಧ್ಯಾವಂದನೆಗಳನ್ನೂ ಪೂಜೆಯನ್ನೂ ಪೂರೈಸಿ ಕಾಫಿಯನ್ನೊಪ್ಪಿಸಿಕೊಂಡು ಅನಂತರ ಸುಮಾರು ಎಂಟೂವರೆ ಘಂಟೆಯ ತನಕ ಕುದುರೆ ಸವಾರಿ ಮಾಡುತ್ತಿದ್ದರು. ಆಗ್ಗೆ ಅಶ್ವಾರೋಹಿಗಳಾಗಿ ತಮ್ಮೊಡನೆ ಬರಬೇಕೆಂದು ಹಿಂದಿನ ದಿನವೇ ಅಪ್ಪಣೆಮಾಡಿದ್ದಂತೆ ಸಂಗಡ ಬಂದ ಪ್ರೈವೇಟ್ ಸೆಕ್ರೆಟರಿಯವರೇ ಮುಂತಾದವರೊಡನೆ ರಾಜ್ಯಾಡಳಿತ ಸಂಬಂಧವಾದ ಕ್ಲಿಷ್ಟ ವಿಚಾರಗಳನ್ನೆಲ್ಲ ಕೂಲಂಕಷವಾಗಿ ಚರ್ಚಿಸುತ್ತಿದ್ದರು. ಎಂಟೂವರೆ ಘಂಟೆಯ ತರುವಾಯ ಮಹಾಸ್ವಾಮಿಯವರು ಅಶ್ವಶಾಲೆಗೆ ದಯಮಾಡಿ ಸ್ವಹಸ್ತದಿಂದಲೇ ಕುದುರೆಗಳಿಗೆ ಮಸಾಲೆಸೊಪ್ಪು, ಕೆಂಪು ಮೂಲಂಗಿ ಮುಂತಾದುವುಗಳನ್ನು ತಿನ್ನಿಸಿ, ತಾವು ಪೋಷಣೆಮಾಡುತ್ತಿದ್ದ ಉತ್ತಮಜಾತಿಯ ಬೇಟೆಯ ನಾಯಿಗಳೇ ಮುಂತಾದ ಬಗೆಬಗೆಯ ನಾಯಿಗಳಿಗೆ ಬಿಸ್ಕತ್ತುಗಳನ್ನು ತಿನ್ನಿಸಿ ಅವುಗಳನ್ನು ಮೈದಡವಿ, ಅನಂತರ ಆಪ್ತರಾದ ಮಿತ್ರರುಗಳಿಗೂ ಸಮ್ಮುಖದ ಅಧಿಕಾರಿಗಳಿಗೂ ಸಂದರ್ಶನಕೊಟ್ಟು ಆಡಳಿತ ಸಂಬಂಧವಾದ ನಾನಾ ಸಂಗತಿಗಳನ್ನೂ ಚರ್ಚಿಸಿ ಸುಮಾರು ಒಂಬತ್ತೂವರೆ ಘಂಟೆಯ ವೇಳೆಗೆ ಅರಮನೆಗೆ ಚಿತ್ತೈಸುತ್ತಿದ್ದರು. ಅನಂತರ ಅವರು ಮತ್ತೆ ಸ್ನಾನಮಾಡಿ ಮಾಧ್ಯಾಹ್ನಿಕಾದಿಗಳನ್ನು ನೆರವೇರಿಸಿ, ಮಹಾಮಾತೃಶ್ರೀಯವರೊಡನೆಯೂ ಸೋದರ ಸೋದರಿಯರೇ ಮುಂತಾದವರೊಡನೆಯೂ ಸೇರಿ ಆರೋಗಣೆಯನ್ನೊಪ್ಪಿಸಿಕೊಂಡು ಅವರುಗಳೊಡನೆ ಸ್ವಲ್ಪಕಾಲ ಸಂಭಾಷಿಸುತ್ತಿದ್ದು, ಹನ್ನೊಂದು ಘಂಟೆಗೆ ರಾಜ್ಯಾಡಳಿತದ ಕಾಗದಪತ್ರಗಳನ್ನು ಪರಿಶೀಲಿಸಿ, ಆ ಆ ಸಂದರ್ಭಾನುಸಾರವಾಗಿ ದೀರ್ಘವಾಗಿ ಅಥವಾ ಸಂಕ್ಷೇಪವಾಗಿ ತಮ್ಮ ಆಜ್ಞೆಗಳನ್ನು ಬರೆದು, ಇಂಡಿಯನ್ ಸಿವಿಲ್ ಸರ್ವಿಸ್ ಹುದ್ದೇದಾರರಾಗಿದ್ದು ಕಾರ್ಯದಕ್ಷರೆಂದು ಪ್ರಸಿದ್ಧರಾಗಿದ್ದ ತಮ್ಮ ಪ್ರೈವೇಟ್ ಸೆಕ್ರೆಟರಿಯವರನ್ನು ಕೂಡ ವಿಸ್ಮಯಗೊಳಿಸುತ್ತಿದ್ದರು. ಅನಂತರ ಸಂದರ್ಶನಾರ್ಥಿಗಳಾರಾದರೂ ಇದ್ದರೆ ಅವರಿಗೆ ದರ್ಶನವನ್ನೀಯುತ್ತಿದ್ದರು. ಆ ವೇಳೆಗೆ ಅಪರಾಹ್ನ ನಾಲ್ಕು ಘಂಟೆಯಾಗುತ್ತಿದ್ದಿತು. ಅನಂತರ ಮಹಾಸ್ವಾಮಿಯವರು ಸಂಗೀತ ಸಾಹಿತ್ಯಾದಿಗಳಿಗೂ ವರ್ತಮಾನ ಪತ್ರಿಕೆಗಳನ್ನು ಪರಾಂಬರಿಸುವುದಕ್ಕೂ ಸಾಧ್ಯವಾದಷ್ಟು

ಕಾಲವನ್ನು ವಿನಿಯೋಗಿಸಿ, ಬಂಡಿಯಲ್ಲಿ ಕುಳಿತು ಸಂಚಾರಾರ್ಥವಾಗಿ ದಯಮಾಡಿಸುತ್ತಿದ್ದರು ; ಅಥವಾ "ಪೋಲೋ" ಚೆಂಡಾಟವನ್ನಾಗಲಿ, ಅಥವಾ "ರಾಕೆಟ್ಸ್" ಚೆಂಡಾಟವನ್ನಾಗಲಿ ಆಡುತ್ತಿದ್ದರು. ಅದು ಮುಗಿದು ಅರಮನೆಗೆ ಹಿಂತಿರುಗಿದಮೇಲೆ ಮತ್ತೆ ಸ್ನಾನಮಾಡಿ ಸಾಯಂ ಸಂಧ್ಯಾವಂದನೆ ಶಿವಪೂಜೆಗಳನ್ನು ಪೂರೈಸಿ, ಭೋಜನಾನಂತರ ಮಹಾಮಾತೃಶ್ರೀಯವರೇ ಮುಂತಾದವರೊಡನೆ ಸಂಭಾಷಣ ಮಾಡುತ್ತಿದ್ದು, ಸ್ವಲ್ಪಕಾಲ ಸಂಗೀತಾಭ್ಯಾಸಮಾಡಿ, ರಾತ್ರಿ ಒಂಬತ್ತೂವರೆ ಅಥವಾ ಹತ್ತು ಘಂಟೆಯವೇಳೆಗೆ ನಿದ್ರಿಸುತ್ತಿದ್ದರು.

# ಎಂಟನೆಯ ಅಧ್ಯಾಯ

## ರಜತೋತ್ಸವದ ವರೆಗೆ

**ಸಂ ಗಚ್ಛಧ್ವಂ ಸಂ ವದಧ್ವಂ**
**ಸಂ ವೋ ಮನಾಂಸಿ ಜಾನತಾವ್ ।**
**ದೇವಾ ಭಾಗಂ ಯಥಾ ಪೂರ್ವೇ**
**ಸಂಜಾನಾನಾ ಉಪಾಸತೇ ॥**

**ರಾಜ್ಯಭಾರ ವಿಚಕ್ಷಣೆ**

ಆಳಿದ ಮಹಾಸ್ವಾಮಿಯವರಾದ ಶ್ರೀಮನ್ಮಹಾರಾಜರವರು ರಾಜ್ಯ ಭಾರವನ್ನಾರಂಭಿಸಿದಾಗ ವಯಸ್ಸಿನಲ್ಲಿ ಕಿರಿಯರಾಗಿದ್ದರೂ ಜ್ಞಾನಾನುಭವಗಳ ದೃಷ್ಟಿಯಿಂದ ಹಿರಿಯರಾದ ಕರ್ಮಯೋಗಿಗಳಂತೆ ದೇಶೋನ್ನತಿ ಸಾಧನೆಗಾಗಿ ಶ್ರಮಿಸುತ್ತ, ಒಂದರಮೇಲೆ ಮತ್ತೊಂದರಂತೆ ಅಭ್ಯುದಯ ಕಾರ್ಯಗಳನ್ನು ನೆರವೇರಿಸುತ್ತ ಬಂದರು. ಮಹಾಸ್ವಾಮಿಯವರು ವಿದ್ಯಾರ್ಥಿದಶೆಯಲ್ಲಿದ್ದಾಗಲೇ ರಾಜ್ಯಾಡಳಿತ ನಿರ್ವಹಣ ವಿಚಾರಗಳಲ್ಲಿ ಶ್ರೀಮಾನ್ ಫ್ರೇಸರ್‌ಸಾಹೇಬರಿಂದ ಶಿಕ್ಷಣ ಪಡೆದಿದ್ದರು. ಅದರ ಜೊತೆಗೆ ಬ್ರಿಟಿಷ್ ರೆಸಿಡೆಂಟರಾಗಿದ್ದ ಕರ್ನಲ್ ಡೋನಾಲ್ಡ್ ರಾಬರ್ಟ್‌ಸನ್ ರವರಿಂದಲೂ ಬೆಂಗಳೂರು ಮತ್ತು ಉದಕಮಂಡಲದಲ್ಲಿದ್ದಾಗ ಅನೇಕ ಮಂದಿ ಸಮರ್ಥರಿಂದಲೂ ಬ್ರಿಟಿಷ್ ಇಂಡಿಯಾದ ಭಾರಿ ಭಾರಿ ಅಧಿಕಾರಿಗಳಿಂದಲೂ ಮಹಾಸ್ವಾಮಿಯವರು ಅನೇಕ ರಾಜಕೀಯ ವಿಚಾರಗಳನ್ನು ತಿಳಿದುಕೊಂಡಿದ್ದರು. ಇದರಿಂದ ಅವರಿಗೆ ಆ ಮಹತ್ತರ ಕಾರ್ಯದಲ್ಲಿ ಬಹಳ ಸಹಾಯವಾಯಿತು. ೧೯೦೩ನೆಯ ಇಸವಿಯಲ್ಲಿ ಬ್ರಿಟಿಷ್ ರೆಸಿಡೆಂಟರವರಿಗೆ ತಾವು ಒಪ್ಪಿಸಿದ ವರದಿಯಲ್ಲಿ ಶ್ರೀಮಾನ್ ಫ್ರೇಸರ್ ಸಾಹೇಬರು, ರಾಜ್ಯಾಡಳಿತ ಸಂಬಂಧವಾದ ಸಮಸ್ತ ವಿಚಾರಗಳಲ್ಲಿಯೂ ಮಹಾಸ್ವಾಮಿಯವರಿಗೆ ವಿಪುಲವಾದ ಜ್ಞಾನವಿದ್ದುದಾಗಿಯೂ, ಆದರೆ ಮಹಾಸ್ವಾಮಿಯವರು ಅಷ್ಟರಿಂದಲೇ ತೃಪ್ತರಾಗದೆ ನಿರಂತರವೂ ಜ್ಞಾನಾರ್ಜನೆ ಮಾಡುತ್ತ ಬರುವುದು ಖಂಡಿತವೆನ್ನುವಷ್ಟು ಮಟ್ಟಿನ ಉತ್ಸಾಹಶಾಲಿಗಳಾಗಿದ್ದುದಾಗಿಯೂ, ಉದ್ಯೋಗಶೀಲತೆಯು ಮಹಾಸ್ವಾಮಿಯವರಲ್ಲಿ ಪ್ರಕೃತಿಸಿದ್ಧವಾಗಿದ್ದಂತೆ ತೋರುವ ಮಟ್ಟಿಗೆ ವೃದ್ಧಿಯಾಗಿದ್ದುದಾಗಿಯೂ ಕಂಠೋಕ್ತವಾಗಿ ಹೇಳಿದ್ದರು. ಅಲ್ಲದೆ ಆ ವರದಿಯಲ್ಲಿ ಅವರು,

"ಪ್ರಭುತ್ವ ಮಾಡತಕ್ಕವರಿಗೆ ಅತ್ಯಂತ ಮುಖ್ಯವಾಗಿರಬೇಕಾದ ಗುಣಗಳಾದ ಲೋಕಸ್ವಭಾವ ಪರಿಜ್ಞಾನ ಸಂಪತ್ತು, ಸ್ವಕೀಯ ವಿಮರ್ಶೆಯಿಂದ ಒಂದು ನಿರ್ಧಾರಕ್ಕೆ ಬರುವ ಸಿದ್ಧತಾ ಸಾಮರ್ಥ್ಯಗಳು, ಸ್ವಾವಲಂಬನ, ಮಿತ ಭಾಷಣದಿಂದ ಕೂಡಿದ ಆತ್ಮಸಂಯಮ, ಮತ್ತು ನಿರ್ದಾಕ್ಷಿಣ್ಯದಿಂದ ನುಡಿಯಬೇಕಾದಾಗ್ಗೆ 'ಇಲ್ಲ'ವೆಂದು ಹೇಳುವ ಶಕ್ತಿ— ಈ ಧೀರ ಗುಣಗಳೂ ಶ್ರೀಮನ್ಮಹಾರಾಜರವರಲ್ಲಿ ಗಣನೀಯವಾದಷ್ಟು ಮಟ್ಟಿಗೆ ನೆಲಸಿವೆ"* ಎಂದೂ ಸಹ ಸೂಚಿಸಿದ್ದರು. ಆ ಬಗೆಯ ಸದ್ಗುಣಗಳ ನೆಲೆಯಾಗಿದ್ದವರು ಮನಃಪೂರ್ವಕವಾದ ಉತ್ಸಾಹದಿಂದ ರಾಜ್ಯಭಾರ ಮಾಡಲುಪಕ್ರಮಿಸಿದರು. ಮೈಸೂರು ಸಂಸ್ಥಾನದ ಖ್ಯಾತಿಯು ದಿನದಿನವೂ ಹೆಚ್ಚಿತು.

**ದೆಹಲಿಯ ಪ್ರವಾಸ**

ಏಳನೆಯ ಎಡ್ವರ್ಡರವರು ಭರತಖಂಡದ ಸಾರ್ವಭೌಮರಾದುದರ ಗೌರವಾರ್ಥವಾಗಿ ದೆಹಲಿ ನಗರದಲ್ಲಿ ೧೯೦೩ನೆಯ ಇಸವಿ ಜನವರಿ ೧ನೆಯ ತಾರೀಖಿನ ದಿನ ನಡೆದ ದರ್ಬಾರಿಗೆ ಶ್ರೀಮನ್ಮಹಾರಾಜರವರೂ ದಯಮಾಡಬೇಕೆಂದು ಬಿನ್ನವಿಸಿ, ವೈಸ್ರಾಯಿಯವರು ಆಹ್ವಾನವನ್ನು ಕಳುಹಿಸಿದರು. ಮಹಾಸ್ವಾಮಿಯವರು ಆ ಆಹ್ವಾನಕ್ಕೆ ಸದುತ್ತರವನ್ನು ಕಳುಹಿಸಿ ಮಹಾಮಾತೃಶ್ರೀ ವಾಣೀವಿಲಾಸ ಸನ್ನಿಧಾನದವರು, ಶ್ರೀಮದ್ಯುವರಾಜ ಶ್ರೀ ಕಂಠೀರವ ನರಸಿಂಹರಾಜ ಒಡೆಯರವರು, ಶ್ರೀ ಮಹಾರಾಣಿ ಲಕ್ಷ್ಮೀವಿಲಾಸ ಸನ್ನಿಧಾನದವರು, ಮುಂತಾದವರೊಡನೆಯೂ ಬ್ರಿಟಿಷ್ ರೆಸಿಡೆಂಟರವರು ದಿವಾನ್‌ರವರು ಮುಂತಾದವರೊಡನೆಯೂ ಪುಣೆ ಮತ್ತು ಮುಂಬಯಿ ನಗರಗಳ ಮಾರ್ಗವಾಗಿ ಪ್ರಯಾಣಮಾಡಿ ದೆಹಲಿಗೆ ಸೇರಿದರು. ಮಹಾಸ್ವಾಮಿಯವರು ಮೈಸೂರು ಸಂಸ್ಥಾನಕ್ಕೆ ಮೊಟ್ಟಮೊದಲು ಮೋಟಾರು ಕಾರುಗಳನ್ನು ತರಿಸಿದುದು ಆಗಲೇ. ಮಹಾಸ್ವಾಮಿಯವರ ಮತ್ತು ಇತರ ಸಂಸ್ಥಾನಾಧೀಶರುಗಳ ಬಿಡಾರಗಳು ದೆಹಲಿ ನಗರದಿಂದ ಏಳು ಮೈಲಿಗಳ ದೂರದಲ್ಲಿದ್ದುವು. ಆಗ ದೆಹಲಿ ನಗರದಲ್ಲೊಂದು ಕುಶಲ ವಸ್ತುಪ್ರದರ್ಶನವು ನಡೆಯಿತು. ವೈಸ್ರಾಯಿಯವರಾಗಿದ್ದ ಲಾರ್ಡ್ ಕರ್ಜನ್‌ರವರು ಮೈಸೂರು ಸಂಸ್ಥಾನದಿಂದ ಬಂದಿದ್ದ ಬೀಟೆಯ ಮರದ ಮತ್ತು ಶ್ರೀಗಂಧದ ಸಾಮಾನುಗಳಷ್ಟು ಸುಂದರವಾದ ಮರದ

---

* "Most important for a Ruler, the Maharaja is gifted in a marked degree with common sense and the strong qualities of readiness to form his own judgment, self-reliance, a reticent self-control, and the power to say No."

ಸಾಮಾನುಗಳು ಮತ್ತೆಲ್ಲಿಂದಲೂ ಬಂದಿರಲಿಲ್ಲವೆಂದು(೧೯೦೨ನೆಯ ಇಸವಿ ಡಿಸೆಂಬರು ೩೦ನೆಯ ತಾರೀಖಿನ ದಿನ ಪ್ರದರ್ಶನ ಸಮಾರಂಭಣ ಭಾಷಣ ದಲ್ಲಿ) ಹೇಳಿದರು.

ದೆಹಲಿ ನಗರದಲ್ಲಿ ನಡೆದ ದರ್ಬಾರಿಗಾಗಿ ಏರ್ಪಡಿಸಿದ್ದ ಸಭಾ ಮಂಟಪದಲ್ಲಿ ೧೨,೦೦೦ ಮಂದಿ ಸಭೆ ಸೇರಲನುಕೂಲಿಸುವಷ್ಟು ಸ್ಥಳ ಸೌಕರ್ಯವು ಕಲ್ಪಿತವಾಗಿದ್ದಿತು. ಅಲ್ಲಿಯ ಅಲಂಕಾರಗಳೂ ಸಂಸ್ಥಾನಾಧೀಶರುಗಳ ಮತ್ತು ವೈಸ್ರಾಯಿಯವರೇ ಮುಂತಾದವರ ಉಡುಪುಗಳ ವೈಖರಿಯೂ ಅಷ್ಟಿಷ್ಟಲ್ಲ. ಅದನ್ನು ನೋಡಿದ ಮಹಾಶಯರೊಬ್ಬರು, "ಭರತಖಂಡದಲ್ಲಿಯ ಅತ್ಯಧಿಕ ವೈಭವವೂ ಅಟ್ಟಹಾಸವೂ ಅಲ್ಲಿ ನೆಲಸಿದಂತೆ ತೋರುತ್ತಿದ್ದುವು. ಒಂದುಸಲ ಆ ದೃಶ್ಯವನ್ನು ನೋಡಿದ ಮೇಲೆ ಜನ್ಮಾವಧಿ ಅದನ್ನು ಮರೆಯುವಂತೆಯೇ ಇರಲಿಲ್ಲ" ಎಂದು ಹೇಳಿದರು.

ದೆಹಲಿಗೆ ದಯಮಾಡಿದ್ದ ಇತರ ಸಂಸ್ಥಾನಾಧೀಶರುಗಳೆಲ್ಲ— ಸಣ್ಣಪುಟ್ಟ ಸಂಸ್ಥಾನಗಳವರು ಕೂಡ— ತಮ್ಮ ಬಿಡಾರಗಳ ಅಲಂಕಾರಕ್ಕೂ ಅಟ್ಟಹಾಸಕ್ಕೂ ಪರಸ್ಪರ ಸ್ಪರ್ಧೆಯಿಂದ ಧನವ್ಯಯ ಮಾಡಿದ್ದರು. ಆದರೆ ಆಳಿದ ಮಹಾಸ್ವಾಮಿಯವರಾದ ನಮ್ಮ ಪ್ರಭುಗಳವರು ಮಾತ್ರ-ಅವರಂತೆ ನಿರರ್ಥಕವಾಗಿ ಧನವ್ಯಯ ಮಾಡದೆ ತಮ್ಮ ಬಿಡಾರವು ಮಹಾರಾಜ ಪದವಿಗೆ ತಕ್ಕಂತಿದ್ದರೂ ಅನವಶ್ಯವಾದ ಡೌಲಿಗೂ ಆಡಂಬರಕ್ಕೂ ಲೇಶಮಾತ್ರವೂ ಅವಕಾಶವಿಲ್ಲದೆ ಕೇವಲ ಸರಳ ಮನೋಹರವಾಗಿರುವಂತೆ ಶೃಂಗಾರ ಮಾಡಿಸಿದ್ದರು. ಮುಂದೆ ೧೯೧೧ನೆಯ ಇಸವಿಯಲ್ಲಿ ದೆಹಲಿಗೆ ದಯ ಮಾಡಿದ್ದಾಗ ಮಹಾಸ್ವಾಮಿಯವರಲ್ಲಿ ಸಲಿಗೆಯುಳ್ಳವರೊಬ್ಬರು ಇತರ ಸಂಸ್ಥಾನಾಧೀಶರುಗಳಂತೆ ಆಗಲೂ ಬಿಡಾರ ಶೃಂಗಾರ ಮಾಡಿಸದಿದ್ದು ದೇಕೆಂದು ಕೇಳಿದಾಗ, ಅವರು ಸಂಸ್ಥಾನದ ಹಣವನ್ನು ಪ್ರಜೆಗಳ ಪ್ರಯೋಜನಕ್ಕಾಗಿ ವ್ಯಯಮಾಡುವುದನ್ನು ಬಿಟ್ಟು ಅನವಶ್ಯವಾದ ವೆಚ್ಚಗಳಿಗಾಗಿ ವಿನಿಯೋಗಿಸುವುದು ತಮಗಿಷ್ಟವಿಲ್ಲವೆಂದರು.

ಮಹಾಸ್ವಾಮಿಯವರು ದೆಹಲಿಯಿಂದ ಹರಿದ್ವಾರಕ್ಕೆ ಸಪರಿವಾರರಾಗಿ ಚಿತ್ತೈಸಿ ಗಂಗಾ ನದಿಯಲ್ಲಿ ಮಿಂದು, ಅಲ್ಲಿಂದ ಆಗ್ರಾ ನಗರಕ್ಕೆ ದಯಮಾಡಿದರು. ಮಹಾಮಾತೃಶ್ರೀಯವರೇ ಮುಂತಾದವರನೇಕರು ತಾಜ ಮಹಲನ್ನು ನೋಡಿ ಅತಿಶಯವಾಗಿ ಆನಂದಿಸಿದರು. ಆಗ್ರಾ ನಗರದಿಂದ ಭೂಪಾಲ್ ಮತ್ತು ಝಾನ್ಸಿಯ ಮಾರ್ಗವಾಗಿ ಮುಂಬಯಿ ನಗರಕ್ಕೂ ಅಲ್ಲಿಂದ ಬೆಂಗಳೂರು ನಗರಕ್ಕೂ ಪ್ರಯಾಣವು ಬೆಳೆಯಿತು.

೧೯೦೩ನೆಯ ಇಸವಿಯ ಕೊನೆಗೆ ಮಹಾಸ್ವಾಮಿಯವರು ತಮ್ಮ ಸಹೋದರರಾದ ಶ್ರೀಮದ್ಯುವರಾಜ ಶ್ರೀ ಕಂಠೀರವ ನರಸಿಂಹರಾಜ ಒಡೆಯರವರನ್ನು ರಾಜಕುಮಾರರಿಗಾಗಿ ಏರ್ಪಟ್ಟಿದ್ದ "ಮೇಯೋ ಕಾಲೇಜ್" ಎಂಬ ವಿದ್ಯಾಸಂಸ್ಥೆಯಲ್ಲಿ ವ್ಯಾಸಂಗಮಾಡಲು ಅಜ್ಮೀರಕ್ಕೆ ಕಳುಹಿಸಿದರು. ಅವರ ವಿದ್ಯಾಭ್ಯಾಸವು ಅಲ್ಲಿ ಕೆಲವು ತಿಂಗಳುಗಳ ಕಾಲ ಸಾಗಿತು. ಅನಂತರ ಅವರು ವಿಷಮಶೀತಜ್ವರಪೀಡಿತರಾದರು. ೧೯೦೪ನೆಯ ಇಸವಿ ಚಾಂದ್ರಮಾನ ಯುಗಾದಿ ಹಬ್ಬದ ದಿನ ಆ ದಾರುಣ ವಾರ್ತೆಯ ತಂತಿ ವರ್ತಮಾನವು ಬಂದು ಸೇರಲು, ಮಹಾಸ್ವಾಮಿಯವರು ಮಹಾ ಮಾತೃಶ್ರೀಯವರೇ ಮುಂತಾದವರೊಡನೆ ಅದೇ ದಿನ ಭೋಜನಾ ನಂತರ ("ಸ್ಪೆಷಲ್" ರೈಲಿನಲ್ಲಿ) ಅಜ್ಮೀರವನ್ನು ಕುರಿತು ಪ್ರಯಾಣ ಮಾಡಿದರು. ಆಗ ರೈಲು ಪ್ರಯಾಣವು ಈಗಿನದರಷ್ಟು ವೇಗವಾಗಿ ಸಾಗುತ್ತಿರಲಿಲ್ಲ. ಆದರೂ ೧,೪೦೦ ಮೈಲಿಗಳ ಪ್ರಯಾಣವನ್ನು ಪೂರೈಸಿ ನಾಲ್ಕನೆಯ ದಿನ ಬೆಳಗ್ಗೆ ಅಜ್ಮೀರಕ್ಕೆ ಸೇರಿ, ಶ್ರೀಮದ್ಯುವರಾಜರವರ ದೇಹಸ್ಥಿತಿಯು ಗುಣಮುಖವಾದ ನಂತರ ಬಿಕನೀರ್ ಸಂಸ್ಥಾನದ ಮಹಾರಾಜರವರ ಆಹ್ವಾನವನ್ನಂಗೀಕರಿಸಿ, ಬಿಕನೀರಿನಲ್ಲಿ ಮೂರು ದಿನಗಳಿದ್ದು, ಅಲ್ಲಿ ಕಾಡುಹಂದಿಗಳ ಬೇಟೆಗೆ ಕಾನನಕ್ಕೆ ದಯಮಾಡಿ ತಮ್ಮ ಸಾಹಸದಿಂದ ಮಹಾಸ್ವಾಮಿಯವರು ಅಲ್ಲಿಯವರನ್ನು ವಿಸ್ಮಯ ಗೊಳಿಸಿದರು.

**ಶ್ರೀಮದ್ಯುವರಾಜ ಶ್ರೀ ಕಂಠೀರವ ನರಸಿಂಹರಾಜ ಒಡೆಯರವರ ವಿದ್ಯಾಭ್ಯಾಸ. ದೇಹಾಲಸ್ಯ ನಿಮಿತ್ತವಾಗಿ ಆಗಮನ**

ಶ್ರೀಮದ್ಯುವರಾಜ ಶ್ರೀ ಕಂಠೀರವ ನರಸಿಂಹರಾಜ ಒಡೆಯರವರಿಗೆ ಪ್ರಯಾಣ ಶ್ರಮವನ್ನು ವಹಿಸುವ ಮಟ್ಟಿಗೆ ಶಕ್ತಿ ಬಂದಮೇಲೆ ಅವರು ಮೈಸೂರು ನಗರಕ್ಕೆ ಹಿಂತಿರುಗಿದರು. ಅನಂತರ ಅವರು ಅಜ್ಮೀರಕ್ಕೆ ತೆರಳಲಿಲ್ಲ. ಅವರ ವಿದ್ಯಾಭ್ಯಾಸವು ಮೈಸೂರು ನಗರದಲ್ಲೇ ಮುಂದು ವರಿಯುವ ವ್ಯವಸ್ಥೆಯು ನಡೆದು, ಕ್ಯಾಪ್ಟನ್ ಆರ್. ಜೆ. ಡಬ್ಲ್ಯು. ಹೀಲ್ ಎಂಬವರು ಅವರ ಶಿಕ್ಷಕರಾಗಿ ನೇಮಕವಾಗಿ ಮೂರು ವರ್ಷಗಳ ಕಾಲ ಕೆಲಸ ಮಾಡಿದರು. ಅವರ ಸಹಾಯಕ್ಕೆ ಶ್ರೀಮಾನ್ ಎಂ. ಎ. ನಾರಾಯಣ ಐಯಂಗಾರ್ಯರವರೂ (ಎಂದರೆ, ಈಗಿನ ಶ್ರೀ ಶ್ರೀವಾಸಾನಂದ ಸ್ವಾಮಿ ಯವರೂ) ಮತ್ತು ಶ್ರೀಮಾನ್ ಎಂ. ಎ. ಸಿಂಗರಾಚಾರ್ಯರವರೂ ನೇಮಕವಾಗಿದ್ದರು.

೧೯೦೪ನೆಯ ಇಸವಿ ನವೆಂಬರು ತಿಂಗಳು, ಆಳಿದ ಮಹಾಸ್ವಾಮಿಯವರಾದ ಶ್ರೀಮನ್ಮಹಾರಾಜರವರಿಗೆ ಸೋದರೀ ವಿಯೋಗ ದುಃಖವು ಪ್ರಾಪ್ತವಾಯಿತು. ಅವರ ದ್ವಿತೀಯ ಸಹೋದರಿಯವರಾದ ಶ್ರೀ ಕೃಷ್ಣಾಜಮ್ಮಣ್ಣಿಯವರು ಕ್ಷಯರೋಗದಿಂದ ಕಾಲವಶರಾದರು. ಅವರು ಮೂರು ವರ್ಷಗಳಿಂದ ಆ ರೋಗದಲ್ಲಿ ನರಳಿ, ಸಮಸ್ತ ಚಿಕಿತ್ಸೆಗಳೂ ವಿಫಲವಾಗಿ, ದಿವಂಗತರಾದರು. ಕ್ಷಯರೋಗದಿಂದ ಪ್ರಜೆಗಳ ಮರಣ ಸಂಖ್ಯೆಯು ಕಡಮೆಯಾಗಲೆಂಬ ಉದಾತ್ತಭಾವನೆಯಿಂದ ಕೂಡಿ, ಮಹಾಸ್ವಾಮಿಯವರು ಅರಮನೆಯಿಂದ ಭಾರಿ ವೊಬಲಗನ್ನು ದಯಪಾಲಿಸಿ, ತಮ್ಮ ಪ್ರಿಯ ಸಹೋದರಿಯವರ ನಾಮಾಂಕಿತದಲ್ಲಿ ಆಧುನಿಕ ರೀತಿಯ ಚಿಕಿತ್ಸಾಸಾಧನಗಳಿಂದ ಸುಸಜ್ಜಿತವಾದ ಕ್ಷಯರೋಗ ಚಿಕಿತ್ಸಾಲಯವನ್ನು ಮೈಸೂರು ನಗರದಲ್ಲಿ ಏರ್ಪಡಿಸಿದರು. ಆ ಚಿಕಿತ್ಸಾಲಯವು ನಿರ್ಮಿತವಾದಾಗ ಅದರ ಪ್ರವೇಶ ಮಹೋತ್ಸವವನ್ನು ಮಹಾಸ್ವಾಮಿಯವರೇ ನೆರವೇರಿಸಿ ಅನುಗ್ರಹಿಸಿದರು. ಆ ಸಮಯದಲ್ಲಿ ಭಾಷಣವನ್ನು ಅಪ್ಪಣೆ ಕೊಡಿಸಿದಾಗ್ಗೆ ದುಃಖಾವೇಗದಿಂದ ಮಹಾಸ್ವಾಮಿಯವರು ಕಂಬನಿದುಂಬಿದರು. ತಮ್ಮ ಸೋದರ ಸೋದರಿಯರಲ್ಲಾರಿಗೆ ದೇಹಾಲಸ್ಯವುಂಟಾದರೂ ಮಹಾಪ್ರಭುಗಳವರು ಆತಂಕದಿಂದಲೂ ವ್ಯಾಕುಲದಿಂದಲೂ ತಲ್ಲಣಿಸುತ್ತಿದ್ದರು. ಶ್ರೀಮದ್ಯುವರಾಜ ಶ್ರೀ ಕಂಠೀರವ ನರಸಿಂಹರಾಜ ಒಡೆಯರವರು ಕುದುರೆಯಿಂದ ಬಿದ್ದು ಕೊರಳಿನ ಕೆಳಗಿನ ಮೂಳೆಯು ಮುರಿದುಹೋದ ಕಾಲದಲ್ಲಿ ಮಹಾಸ್ವಾಮಿಯವರೇ ಸ್ವಹಸ್ತದಿಂದ ಪಟ್ಟಿಗಳನ್ನು ಕಟ್ಟಿ ಪ್ರಥಮ ಚಿಕಿತ್ಸೆ ಮಾಡಿದರು. ಅನಂತರ ಕೆಲವು ವರ್ಷಗಳ ತರುವಾಯ ಅವರಿಗೆ ದೇಹಾಲಸ್ಯವಾಗಿದ್ದಾಗ ಮಹಾಸ್ವಾಮಿಯವರು ರಾತ್ರಿಗಳಲ್ಲೆಲ್ಲ ನಿದ್ರೆಗೆಟ್ಟು ರುಗ್ಣಶಯ್ಯೆಯ ಬಳಿಯಲ್ಲಿ ಕುಳಿತಿರುತ್ತಿದ್ದುದಲ್ಲದೆ ಅಪರಾಹ್ನ ಮೂರು ಘಂಟೆ ನಾಲ್ಕು ಘಂಟೆಯ ವೇಳೆಯಾದರೂ ಆರೋಗಣೆಯನ್ನೂ ಒಪ್ಪಿಸಿಕೊಳ್ಳದೆ ಚಿಂತಿಸುತ್ತಿದ್ದರು. ಆರೋಗಣೆಗೆ ಚಿತ್ತೈಸಬೇಕೆಂದು ಅರಿಕೆ ಮಾಡಿದ ಅನುಬಂಧಿಗಳೊಡನೆ, "ನಮ್ಮ ಅನ್ನಪಾನಗಳಿರಲಿ. ಅವರಿಗೆ ಶ್ರೀ ಚಾಮುಂಡೇಶ್ವರೀ ದೇವಿಯ ಅನುಗ್ರಹದಿಂದ ಬೇಗ ಗುಣವಾದರೆ ಸಾಕು" ಎನ್ನುತ್ತಿದ್ದರು. ಇಷ್ಟು ಮೃದು ಮನಸ್ಕರಾದ ಮಹಾಸ್ವಾಮಿಯವರಿಗೂ, ಅವರಂತೆಯೇ ಮೃದು ಮನಸ್ಕರಾಗಿದ್ದ ಮಹಾಮಾತೃಶ್ರೀಯವರೇ ಮುಂತಾದ ರಾಜಕುಟುಂಬದವರಿಗೂ

**ಸಹೋದರೀ ವಿಯೋಗ**

ಶ್ರೀ ಕೃಷ್ಣಾಜಮ್ಮಣ್ಣಿಯವರ ವಿಯೋಗದಿಂದ ದುಸ್ಸಹವಾದ ದುಃಖ ವೊದಗಿತು.

**ಮದರಾಸಿನ ಪ್ರಯಾಣ**

೧೯೦೫ನೆಯ ಇಸವಿಯಲ್ಲಿ ಮಹಾಸ್ವಾಮಿಯವರು ಮದರಾಸು ಮುಂತಾದ ಸ್ಥಳಗಳಿಗೆ ಪ್ರಯಾಣಮಾಡಿದರು. ಮದರಾಸು ನಗರದಲ್ಲಿ ಆ ವೊದಲೇ ೧೯೦೩ನೆಯ ಇಸವಿಯಲ್ಲಿ ವಸ್ತು ಪ್ರದರ್ಶನದ ಸಮಾರಂಭಣ ಮಹೋತ್ಸವವನ್ನು ನೆರವೇರಿಸಿದಾಗಲೇ ಪ್ರಭುಗಳವರ ಸೌಜನ್ಯವನ್ನರಿತಿದ್ದ ಮದರಾಸಿನ ನಿವಾಸಿಗಳಿಗೆ ಅವರ ಘನತೆ ಗಾಂಭೀರ್ಯಗಳಿಂದಲೂ ಔದಾರ್ಯಾದಿ ಸದ್ಗುಣಗಳಿಂದಲೂ ಗೌರವ ವಿಶ್ವಾಸಗಳುಂಟಾದುವು. ಅಷ್ಟು ಚಿಕ್ಕವಯಸ್ಸಿನಲ್ಲಿ ತಮ್ಮ ಸಂಸ್ಥಾನದ ಹೊರಗಿನ ಪ್ರಾಂತಗಳ ಜನರಿಗೆ ಆ ರೀತಿ ಸದಭಿಪ್ರಾಯವನ್ನುಂಟುಮಾಡಿ ಅವರ ಆದರಾಭಿಮಾನಗಳಿಗೆ ಪಾತ್ರರಾದ ಭಾರತೀಯ ಸಂಸ್ಥಾನಾಧೀಶ್ವರರು ಮತ್ತಾರೂ ಇರಲಿಲ್ಲವೆಂದು ಅನೇಕ ಮಹನೀಯರು ಆಗ ಅಭಿಪ್ರಾಯಪಟ್ಟರು. ಆ ಸಲ ಮಹಾಸ್ವಾಮಿಯವರು ಮದರಾಸಿನಲ್ಲಿದ್ದುದು ಕೇವಲ ಹತ್ತು ದಿನಗಳ ಕಾಲ ಮಾತ್ರವೇ. ಗವರ್ನರುಗಳನ್ನು ಕಾಣುತ್ತಿದ್ದುದಕ್ಕಿಂತಲೂ ಹೆಚ್ಚಿನ ಆದರ ಸಡಗರಗಳಿಂದ ಜನಗಳು ತಂಡೋಪತಂಡವಾಗಿ ಮಾರ್ಗಗಳ ಬಳಿ ಗುಂಪುಸೇರಿ, ಶ್ರೀಮನ್ಮಹಾರಾಜರವರ ಸಂದರ್ಶನ ಭಾಗ್ಯವನ್ನು ಪಡೆಯುತ್ತಿದ್ದರೆಂದು ಸರ್ ಇವ್ಯಾನ್ ಮೆಕಾನಕಿಯವರು ಬರೆದಿದ್ದಾರೆ. ಮಹಾಸ್ವಾಮಿಯವರು ಯಾವ ಅಟ್ಟಹಾಸಕ್ಕೂ ಮನಗೊಡದೆ ಕೇವಲ ಸಾಮಾನ್ಯರಂತೆ ಓಡಾಡುತ್ತಿದ್ದುದನ್ನೂ, ಸಮುದ್ರತೀರದಲ್ಲಿ ಸಂಜೆಯವೇಳೆ ಗಾಳಿಸವಾರಿ ದಯಮಾಡಿದಾಗ ಅವರು ಅಲ್ಲಲ್ಲಿ ಕಂಡ ಪೂರ್ವಪರಿಚಿತರಾದ ಮೈಸೂರು ದೇಶೀಯರೊಡನೆ ಆದರದಿಂದ ಸಂಭಾಷಿಸುತ್ತಿದ್ದುದನ್ನೂ ಕಂಡು ಮದರಾಸು ನಿವಾಸಿಗಳು ವಿಸ್ಮಿತರಾಗುತ್ತಿದ್ದರು.

**ಕೆಲವು ನೂತನ ವ್ಯವಸ್ಥೆಗಳು**

೧೯೦೫ನೆಯ ಇಸವಿ ಆಗಸ್ಟ್ ತಿಂಗಳು ೩ನೆಯ ತಾರೀಖಿನಿಂದ ಮಹಾಸ್ವಾಮಿಯವರ ಕೀರ್ತಿತಾರೆಗಳೋ ಎಂಬಂತೆ ಬೆಂಗಳೂರಿನಲ್ಲಿ ವಿದ್ಯುಚ್ಛಕ್ತಿಯ ದೀಪಗಳು ಬೆಳಗಲಾರಂಭಿಸಿದುವು. ಆಗ ಭರತಖಂಡದ ಮತ್ತಾವ ನಗರದಲ್ಲಿಯೂ ವಿದ್ಯುದ್ದೀಪಗಳಿರಲಿಲ್ಲ. ೧೯೦೮ನೆಯ ಇಸವಿಯಲ್ಲಿ ಮೈಸೂರು ನಗರಕ್ಕೆ ವಿದ್ಯುಚ್ಛಕ್ತಿಯ ದೀಪಗಳನ್ನು ಹಾಕಿಸುವ ಏರ್ಪಾಡು ನಡೆಯಿತು. ೧೯೦೫ನೆಯ ಇಸವಿಯಲ್ಲಿ ಸಹಕಾರ

ಸಂಘಗಳ ರೆಗ್ಯುಲೇಷನು ವಿಧಾಯಕವಾಯಿತು. ಏಳು ಸಹಕಾರ ಸಂಘಗಳ ಸ್ಥಾಪನೆಯಿಂದ ಪ್ರಾರಂಭವಾದ ಸಹಕಾರದ ಏರ್ಪಾಡು, ಮಹಾಪ್ರಭುಗಳ, ಅವರ ಸಹೋದರರ, ಸರ್ಕಾರದವರ ಮತ್ತು ಮಹಾಜನರಲ್ಲಿ ಮುಂದಾಳುಗಳ ಅಧ್ಯವಸಾಯದಿಂದ ದಿನ ದಿನವೂ ವೃದ್ಧಿಹೊಂದಿತು. ೧೯೦೬–೭ನೆಯ ಸಾಲಿನಲ್ಲಿ ಜನಾರೋಗ್ಯ ರಕ್ಷಣೆ ("ಪಬ್ಲಿಕ್ ಹೆಲ್ತ್") ಇಲಾಖೆಯೂ, ಆ ಬಳಿಕ ಪಶುವೈದ್ಯದ ಇಲಾಖೆಯೂ ಏರ್ಪಟ್ಟುವು. ೧೯೦೮ನೆಯ ಇಸವಿಯಲ್ಲಿ ಟಾಟಾ ವೈಜ್ಞಾನಿಕ ಸಂಶೋಧನ ಶಾಲೆಯ ಕಟ್ಟಡವನ್ನು ಬೆಂಗಳೂರು ನಗರದಲ್ಲಿ ಕಟ್ಟುವುದಕ್ಕಾಗಿ ಐದು ಲಕ್ಷ ರೂಪಾಯಿಗಳನ್ನು ಶ್ರೀಮನ್ಮಹಾರಾಜರವರ ಸರ್ಕಾರದವರು ಕೊಟ್ಟರು.

**ಪ್ರಿನ್ಸ್ ಆಫ್ ವೇಲ್ಸ್ ಮತ್ತು ಪ್ರಿನ್ಸೆಸ್ ಆಫ್ ವೇಲ್ಸ್‌ರವರ ಆಗಮನ**

೧೯೦೬ನೆಯ ಇಸವಿಯಲ್ಲಿ (ಈಚೆಗೆ ದಿವಂಗತರಾದ) ಐದನೆ ಜಾರ್ಜ್ ಪ್ರಭುಗಳವರು ಪ್ರಿನ್ಸ್ ಆಫ್ ವೇಲ್ಸ್‌ರವರಾಗಿದ್ದರು. ಆಗ ಅವರೂ ಅವರ ಪತ್ನಿಯವರೂ ಮೈಸೂರು ಸಂಸ್ಥಾನಕ್ಕೆ ದಯಮಾಡಿಸಿದ್ದರು. ಮೈಸೂರು ನಗರದಲ್ಲಿ ಅವರಿಬ್ಬರಿಗೂ ಮಹಾಸ್ವಾಮಿಯವರು ಅತ್ಯಾದರದ ಸ್ವಾಗತವನ್ನಿತ್ತು ೧೯೦೬ನೆಯ ಇಸವಿ ಜನವರಿ ೩೦ನೆಯ ತಾರೀಖಿನ ದಿನ ಔತಣ ಸಮಾರಂಭವನ್ನೇರ್ಪಡಿಸಿದ್ದರು. ಪ್ರಿನ್ಸ್ ಆಫ್ ವೇಲ್ಸ್‌ರವರು ಆಗ್ಗೆ ಮಾಡಿದ ಭಾಷಣದಲ್ಲಿ ಇತರ ಅತಿಥಿಗಳನ್ನುದ್ದೇಶಿಸಿ, "....ನಮ್ಮಲ್ಲಿ ಆದರ ತೋರಿರುವ ಆತಿಥೇಯರವರಂತಹ ಸಾಮರ್ಥ್ಯವಂತರೂ ಸುಸಂಸ್ಕೃತರೂ ಆದ ಶ್ರೀಮನ್ಮಹಾರಾಜರವರಿಂದ ನಾವು ನಿರೀಕ್ಷಿಸಬಹುದಾದ ರೀತಿಯ ನೇತೃತ್ವದಲ್ಲಿಯೂ, ದಿವಂಗತರಾದ ಸರ್ ಕೆ. ಶೇಷಾದ್ರಿ ಐಯರವರಂತಹ ರಾಜನೀತಿಕೋವಿದರ ಸಹಾಯದಿಂದಲೂ ನಿಮ್ಮ ಸಂಸ್ಥಾನದಲ್ಲಿ ಇನ್ನೂ ಅಧಿಕತರವಾದ ಅಭ್ಯುದಯ ಸಾಧನೆಯು ನಡೆಯುವುದನ್ನು ಪೂರ್ಣಭರವಸೆಯಿಂದ ಎದುರುನೋಡಬಹುದು"* ಎಂದು ಹೇಳಿದರು. ಆಗ, ಮಹಾಸ್ವಾಮಿಯವರು ರಾಜ್ಯಭಾರಸೂತ್ರವನ್ನು ಸ್ವೀಕರಿಸಿ ಇನ್ನೂ ನಾಲ್ಕು ವರ್ಷಗಳು ಕೂಡ ಪೂರೈಸಿರಲಿಲ್ಲ. "ಗ್ರ್ಯಾಫಿಕ್" ಎಂಬ ಇಂಗ್ಲೆಂಡಿನ ಪತ್ರಿಕೆಯು ೧೯೦೬ನೆಯ ಇಸವಿ ಮಾರ್ಚಿ ೧೦ನೆಯ ತಾರೀಖಿನ ಸಂಚಿಕೆಯಲ್ಲಿ, "ಪ್ರಿನ್ಸ್ ಆಫ್ ವೇಲ್ಸ್‌ರವರು ಮತ್ತು ಪ್ರಿನ್ಸೆಸ್ ಆಫ್ ವೇಲ್ಸ್‌ರವರು ಮೈಸೂರು

---

* "....Under the lead which we may expect from such a capable and enlightened Ruler as our kind host, with the assistance of statesmen of the type of the late Sir K. Seshadri Iyer, your province may look forward with confidence to making still greater strides."

ಸಂಸ್ಥಾನಕ್ಕೆ ದಯಮಾಡಿಸಿದ್ದುದರಲ್ಲೊಂದು ಅಸಾಧಾರಣ ವಿಶೇಷ ವುಂಟು. ಈ ಭಾರತೀಯ ಸಂಸ್ಥಾನವು 'ಮಾದರಿ ಸಂಸ್ಥಾನ' ಎಂಬ ಹೆಮ್ಮೆಯ ಹೆಸರನ್ನು ಪಡೆಯುವ ಮಟ್ಟಿಗೆ ಪ್ರಭುತ್ವವು ನಡೆಯುತ್ತಿದೆ— ಈ ದೊಡ್ಡ ಹೆಸರಿಗೆ ಮತ್ತಾವ ಭಾರತೀಯ ಸಂಸ್ಥಾನಕ್ಕೂ ಅರ್ಹತೆಯಿಲ್ಲ. ಮೈಸೂರು ಸಂಸ್ಥಾನವು ಮಾದರಿ ಸಂಸ್ಥಾನವೆಂಬ ಹೆಸರನ್ನು ಪಡೆಯಲು ಎಷ್ಟು ಮಟ್ಟಿಗೆ ಅರ್ಹತೆಯನ್ನು ಪಡೆದಿದೆಯೆಂದರೆ: ರಾಜ್ಯಾಡಳಿತ ಮತ್ತು ನ್ಯಾಯಶಾಸನದ ಕರ್ತವ್ಯಗಳನ್ನು ನೆರವೇರಿಸುವುದರಲ್ಲಿ ಮೈಸೂರು ಸಂಸ್ಥಾನವು ಬ್ರಿಟಿಷ್ ಇಂಡಿಯಾಕ್ಕಿಂತ ಅತಿಶಯವಾಗಿರುವಂತೆ ತೋರು ತ್ತದೆ. . . . . ಈಗಿನ ಶ್ರೀಮನ್ಮಹಾರಾಜರವರಾದ ಶ್ರೀ ಕೃಷ್ಣರಾಜೇಂದ್ರ ಒಡೆಯರ್ ಬಹದ್ದೂರರವರ ವಿವೇಕಮಯವಾದ ರಾಜ್ಯಭಾರದಲ್ಲಿ ಆಳ್ವಿಕೆ ಯಲ್ಲಿ ಮೈಸೂರು ಸಂಸ್ಥಾನವು ಅತ್ಯಧಿಕವಾಗಿ ಅಭ್ಯುದಯ ಹೊಂದಿದೆ. ನಿಷ್ಪಕ್ಷಪಾತದಿಂದ ನ್ಯಾಯಶಾಸನವು ನಡೆಯುತ್ತಿದೆ. ಧರ್ಮಸಮ್ಮತ ವೆನಿಸಿ ಪ್ರಜೆಗಳಮೇಲೆ ಯುಕ್ತರೀತಿಯಲ್ಲಿ ಬೀಳುವಂತೆ ತೆರಿಗೆಯು ಹಂಚಿಕೆಯಾಗಿದೆ. ಸ್ತ್ರೀಯರ ಮತ್ತು ಪುರುಷರ ವಿದ್ಯಾಭ್ಯಾಸಕ್ಕೆ ಉತ್ತೇ ಜನವು ದೊರೆಯುತ್ತಿದೆ; ಮತ್ತು ಕೈಗಾರಿಕೆಯು ಅಭಿವೃದ್ಧಿಹೊಂದು ತ್ತಿದೆ''* ಎಂದು ಪ್ರಕಟಿಸಿತು.

ಆಳಿದ ಮಹಾಸ್ವಾಮಿಯವರೂ, ದಿವಂಗತರಾದ ಕರ್ನಲ್ ದೇಶ ರಾಜ ಅರಸಿನವರೂ ಸೇರಿ ಕುದುರೆಗಳಿಗೆ ಶಿಕ್ಷಣವನ್ನು ಕೊಟ್ಟಿದ್ದ ಸೊಗಸನ್ನು ಪ್ರಿನ್ಸ್ ಆಫ್ ವೇಲ್ಸ್‌ರವರು ಶ್ಲಾಘಿಸಿದರು. ವಿದೇಶೀಯ ಪತ್ರಿಕೆಯಲ್ಲಿ ಆ ಸಂಬಂಧವಾಗಿ ಪ್ರಕಟವಾಗಿದ್ದುದೇನೆಂದರೆ: "ಪ್ರಿನ್ಸ್ ಆಫ್ ವೇಲ್ಸ್‌ರವರ ಉಲ್ಲಾಸಾರ್ಥವಾಗಿ ಏರ್ಪಡಿಸಿದ್ದ ವಿನೋದ ಗಳಲ್ಲಿ ಮೈಸೂರು ಸಂಸ್ಥಾನದ ಅಶ್ವದಳದವರ ಸಾಹಸ ಚಮತ್ಕಾರಗಳ ಪ್ರದರ್ಶನವೂ ಒಂದು. ಅವರು ಕುದುರೆ ಸವಾರಿಯಲ್ಲಿಯೂ ಮತ್ತು ಕುದುರೆಗಳನ್ನು ಸಂಪೂರ್ಣವಾಗಿ ವಶಪಡಿಸಿಕೊಂಡು ಸಾಹಸ ಚಮತ್ಕಾರ ಗಳನ್ನು ಪ್ರದರ್ಶಿಸುವುದರಲ್ಲಿಯೂ ತಾವು ಮತ್ತಾರಿಗೂ ಕಡಮೆಯಿಲ್ಲ

* "There is a peculiar interest attached to the visit of the Prince and Princess of Wales to Mysore, for this is a Native State which is governed so wisley that it has earned the proud name of the Model State — a title which could hardly be claimed by any other Native State; indeed so truly is the title deserved that in the discharge of the administrative and judicial duties, the Government of Mysore compares very favourably with that of British India. under the wise rule of the present Maharaja, H.H. Krishnarajendra Wadiyar Bahadur, Mysore has flourished exceedingly, justice is administered with impartiality, taxation distributed with equity, education, for women as well as men, is encouraged and industry fostered."

— *Graphic*, 10th March, 1906.

ವೆಂಬುದನ್ನು ತೋರ್ಪಡಿಸಿ ಸ್ಥಾಪಿಸಿದರು. ಅವರು ಕುದುರೆಗಳ ಬೆನ್ನುಗಳ ಮೇಲೆ ಜೀನುಗಳೇ ಇಲ್ಲದೆ ಸವಾರಿ ಮಾಡಿದರು. ಕುದುರೆಗಳು ಅತ್ಯಂತ ವೇಗವಾಗಿ ನಾಗಾಲೋಟದಲ್ಲಿ ಓಡುತ್ತಿದ್ದಾಗ ಅವುಗಳ ಬೆನ್ನುಗಳಮೇಲೆ ನಿಂತುಕೊಂಡು ಸವಾರಿ ಮಾಡಿದರು. ಕುದುರೆಗಳನ್ನು ನಾಗಾಲೋಟದಲ್ಲಿ ಓಡಿಸುತ್ತ ವೇಗವನ್ನು ಕಡಮೆ ಮಾಡದೆಯೇ ಪಾರ್ಶ್ವಕ್ಕೆ ಬಾಗಿ ನೆಲದಮೇಲೆ ಬಿದ್ದಿದ್ದ ನಾನಾ ವಸ್ತುಗಳನ್ನು ತೆಗೆದುಕೊಂಡು ಮುಂದೆ ಸಾಗಿದರು. ಅತ್ಯಂತ ಸಾಹಸದಿಂದ ಕುದುರೆಗಳನ್ನು ಚಿತ್ರವಿಚಿತ್ರವಾಗಿ ಹಾರಿಸಿದರು. ಸುಂದರವಾಗಿದ್ದ ತಮ್ಮ ಕುದುರೆಗಳ ಸಹಾಯದಿಂದ ಅವರು ಮಾಡಲಾರದೆಹೋದ ಸಾಹಸಕೃತ್ಯವೇ ಒಂದೂ ಇರಲಿಲ್ಲವೆಂದು ತೋರಿತು. ಆದಕಾರಣ, ಈ ಅಶ್ವದಳದ ಸೈನಿಕರನ್ನು ಪ್ರಿನ್ಸ್ ಆಫ್ ವೇಲ್ಸ್‌ರವರು ವಿಶೇಷವಾಗಿ ಶ್ಲಾಘಿಸಿ ಕೊಂಡಾಡಿದುದರಲ್ಲಿ ಆಶ್ಚರ್ಯವೇನೂ ಇಲ್ಲ."* ಅಶ್ವದಳದವರಿಗೆ ಅಷ್ಟು ಉತ್ತಮ ರೀತಿಯ ಶಿಕ್ಷಣವು ಲಭಿಸಿದ್ದುದಕ್ಕಾಗಿ ಪ್ರಿನ್ಸ್ ಆಫ್ ವೇಲ್ಸ್‌ರವರು ಮಹಾಸ್ವಾಮಿಯವರನ್ನೂ ಕರ್ನಲ್ ದೇಶರಾಜ ಅರಸಿನವರನ್ನೂ ಅಭಿನಂದಿಸಿದರು. ಮಹಾಸ್ವಾಮಿಯವರ ಆಜ್ಞೆಯಂತೆ ಏರ್ಪಟ್ಟಿದ್ದ ವಸ್ತುಪ್ರದರ್ಶನವನ್ನು ನೋಡಿ ಅವರು ಸಂತೋಷಿಸಿದರು. ೧೯೦೬ನೆಯ ಇಸವಿ ಜನವರಿ ೩೦ನೆಯ ತಾರೀಖಿನ ದಿನ ಬೆಳಗ್ಗೆ ಮೈಸೂರು ನಗರದಿಂದ ಶ್ರೀರಂಗಪಟ್ಟಣಕ್ಕೆ ಹೋಗುತ್ತಿದ್ದ ಒಬ್ಬ ಪೋಲೀಸಿನವನು ಬೈಸಿಕಲಿನಿಂದ ಬಿದ್ದುದರಿಂದ ಅವನ ಕಾಲಿನ ಮೂಳೆಯು ಮುರಿದುಹೋಯಿತು. ಅವನು ಮೇಲಕ್ಕೇಳಲಾರದೆ ಬಿದ್ದಿದ್ದುದನ್ನು ಅದೇ ಮಾರ್ಗವಾಗಿ ಬಂದ ಪ್ರಿನ್ಸ್ ಆಫ್ ವೇಲ್ಸ್‌ರವರು ಕಂಡರು. ಅವರು ತಮ್ಮ ಮೋಟಾರು ಬಂಡಿಯಿಂದ ಇಳಿದು ಅವನು ನರಳುತ್ತ ಬಿದ್ದಿದ್ದ ಬಳಿಗೆ ಹೋಗಿ ಅವನಿಗೆ ಪ್ರಥಮ ಚಿಕಿತ್ಸೆಗೆ ಏರ್ಪಾಡು ಮಾಡಿಸಿ, ಅವನನ್ನು ಆಸ್ಪತ್ರೆಗೆ ಕರೆದೊಯ್ಯುವ ವರೆಗೂ ಅಲ್ಲಿದ್ದು ಅನಂತರ ಮುಂದಕ್ಕೆ ತೆರಳಿದರು.

ಮಾರನೆಯ ದಿನ — ಎಂದರೆ ೧೯೦೬ನೆಯ ಇಸವಿ ಜನವರಿ ೩೧ನೆಯ ತಾರೀಖು — ಮಧ್ಯಾಹ್ನದಮೇಲೆ ಕಾರಾಪುರದ ಬಳಿ ಖೆಡ್ಡಾಕ್ಕೆ ಆನೆಗಳನ್ನಟ್ಟುವ ದೃಶ್ಯವನ್ನು ನೋಡಲು ಪ್ರಿನ್ಸ್ ಆಫ್ ವೇಲ್ಸ್‌ರವರು ಪತ್ನೀ

* "Among the entertainments offered to the Prince during his visit was an equestrian display by the Lancers of the Imperial Service corps. These men showed that in horsemanship they were second to none. They rode bearback, stood up on their horses when going at full gallop, and picked things up from the ground without slackening speed. There seemed to be nothing which they could not do with their handsome chargers. It is no wonder that the Prince was loud in his praise of these fine troops."

ಸಮೇತರಾಗಿ ತೆರಳಿದರು. ಮೈಸೂರು ಸಂಸ್ಥಾನದಲ್ಲಿ ಮಾತ್ರವೇ ಕಾಣಬಹುದಾದ ಆ ಸುಂದರ ದೃಶ್ಯದಿಂದ ಅತಿಥಿಗಳೆಲ್ಲರೂ ಸುಪ್ರೀತರಾಗಿ ಸಂತಸಗೊಂಡರು. ಫೆಬ್ರವರಿ ೨ನೆಯ ತಾರೀಖಿನ ದಿನ ಕುಂಕಿ ಆನೆಗಳ ಸಹಾಯದಿಂದ ಕಾಡಾನೆಗಳನ್ನು ಬಂಧಿಸುವ ಸಾಹಸದ ದೃಶ್ಯವನ್ನು ಕಂಡು ಅವರು ಹರ್ಷಿಸಿ, ಮಹಾಸ್ವಾಮಿಯವರು ಮಾಡಿಸಿದ್ದ ಏರ್ಪಾಡುಗಳ ವಿತರಣೆ ವಿಚಕ್ಷಣೆಗಳನ್ನು ಕೊಂಡಾಡಿದರು. ಪ್ರಿನ್ಸ್ ಆಫ್ ವೇಲ್ಸ್‌ರವರು ಮೈಸೂರು ಸಂಸ್ಥಾನದಲ್ಲಿದ್ದಷ್ಟು ದಿನಗಳನ್ನೂ ಉಲ್ಲಾಸದಿಂದ ಕಳೆದು ಸುಪ್ರೀತರಾಗಿ ತಮ್ಮ ಪತ್ನಿಯವರೊಡನೆ ತೆರಳಿದರು.

ಆಳಿದ ಮಹಾಸ್ವಾಮಿಯವರಾದ ಶ್ರೀಮನ್ಮಹಾರಾಜರವರೂ, ಮಹಾಮಾತೃಶ್ರೀಯವರೂ ಸ್ತ್ರೀ ವಿದ್ಯಾಭ್ಯಾಸಕ್ಕೆ ವಿಶೇಷವಾಗಿ ಪ್ರೋತ್ಸಾಹವನ್ನು ಕೊಟ್ಟು ವೃದ್ಧಿಗೊಳಿಸಿದರು.

**ಸ್ತ್ರೀ ವಿದ್ಯಾಭ್ಯಾಸಕ್ಕೆ ಪ್ರೋತ್ಸಾಹ**

ಮಹಾಮಾತೃಶ್ರೀಯವರ ನಾಮಾಂಕಿತದ ಮೇಲೆ ೧೮೮೧ನೆಯ ಇಸವಿಯಲ್ಲಿ ಸ್ಥಾಪಿತವಾಗಿದ್ದ ಬಾಲಿಕಾ ಪಾಠಶಾಲೆಯು ಅವರ ಪ್ರೋತ್ಸಾಹ ಸಹಾಯಗಳಿಂದ ವೃದ್ಧಿಹೊಂದಿ ಹೈಸ್ಕೂಲಾಗಿ ಪರಿಣಮಿಸಿತು. ೧೮೮೯ನೆಯ ಇಸವಿ ನವೆಂಬರು ತಿಂಗಳಿನಲ್ಲಿ ಮೈಸೂರು ಸಂಸ್ಥಾನಕ್ಕೆ ದಯಮಾಡಿದ್ದ ಪ್ರಿನ್ಸ್ ಆಫ್ ವೇಲ್ಸ್‌ರವರು (ಆಲ್ಬರ್ಟ್ ವಿಕ್ಟರ್ ಅವರು) ಆ ಸಂಸ್ಥೆಯನ್ನು ಪರಿಶೀಲಿಸಿ, ಹರ್ಷಿಸಿ, ಮಾದರಿಯ ಪಾಠಶಾಲೆಯೆಂದು ಕರೆದರು. ೧೮೯೧ನೆಯ ಇಸವಿಯಲ್ಲಿ ಸರ್ಕಾರದ ಆಡಳಿತಕ್ಕೆ ಬಂದ ಆ ಸಂಸ್ಥೆಯು ಶ್ರೀ ಮಹಾರಾಣಿ ರೀಜೆಂಟರವರ ಅಪರಿಮಿತವಾದ ಪ್ರೋತ್ಸಾಹದಿಂದ ೧೯೦೦ನೆಯ ಇಸವಿಯಲ್ಲಿ ಎರಡನೆಯ ದರ್ಜೆಯ ("ಸೆಕೆಂಡ್ ಗ್ರೇಡ್") ಕಾಲೇಜಾಗಿ ಮಾರ್ಪಟ್ಟು, ೧೯೦೧ನೆಯ ಇಸವಿಯಲ್ಲಿ ಮಹಾರಾಣಿಯವರ ಕಾಲೇಜೆಂಬ ಹೆಸರನ್ನು ಪಡೆಯಿತು. ಮುಂದೆ ಅದು ಮೊದಲನೆಯ ದರ್ಜೆಯ ಕಾಲೇಜಾಗಿ ಪರಿಣಮಿಸಿತು. ಆ ಸಂಸ್ಥೆಯನ್ನು ನೋಡಿ ಹರ್ಷಿಸಿ, ಸರ್ ರೋಪರ್ ಲೆತ್‌ಬ್ರಿಡ್ಜ್ ಅವರು ಪರಿಶೀಲಕರ ಪುಸ್ತಕದಲ್ಲಿ "ಈ ಸಂಸ್ಥೆಯು ಸ್ತ್ರೀ ವಿದ್ಯಾಭ್ಯಾಸ ವಿಚಾರದಲ್ಲಿ ಭರತಖಂಡದಲ್ಲೇ ಮುಖ್ಯ ಸಂಸ್ಥೆಯಾಗಿದೆ. ಇದನ್ನು ಶ್ರೀಮನ್ಮಹಾರಾಜರವರ ಉಷ್ಣೀಷದಲ್ಲಿಯ ಅತ್ಯಂತ ದೇದೀಪ್ಯಮಾನವಾದ ರತ್ನಗಳಲ್ಲೊಂದೆಂದು ಭಾವಿಸಬಹುದಾಗಿದೆ"* ಎಂದು ಬರೆದರು.

* "It stands absolutely in the van of female education in India and may be regarded as one of the brightest jewels in the crown of H. H. the Maharaja of Mysore."

೧೯೦೨ನೆಯ ಇಸವಿಯಲ್ಲಿ ಮುಸಲ್ಮಾನರು, ಕ್ರೈಸ್ತರು, ಯೆಹೂದಿಯರು ಮುಂತಾದ ಪಂಗಡಗಳ ಮಹಿಳೆಯರೂ ಸಹ ಹಿಂದುಗಳೊಡನೆ ಮಹಾರಾಣಿಯವರ ಕಾಲೇಜಿನಲ್ಲಿ ವ್ಯಾಸಂಗ ಮಾಡಬಹುದೆಂದು ಗೊತ್ತಾಯಿತು. ಅಲ್ಲದೆ, ಆಳಿದ ಮಹಾಸ್ವಾಮಿಯವರಾದ ಶ್ರೀಮನ್ಮಹಾರಾಜರವರ ಕೃಪಾವಲಂಬನದಿಂದ ವಿದ್ಯಾರ್ಥಿನಿಯರಿಗೆ ತಿಂಗಳಿಗೆ ಮೂವತ್ತು ರೂಪಾಯಿಗಳವರೆಗೂ ವಿದ್ಯಾರ್ಥಿನೀ ವೇತನಗಳು ಸಲ್ಲುವ ವ್ಯವಸ್ಥೆಯು ನಡೆದು ಉಪಕಾರವಾಯಿತು. ೧೯೦೫ನೆಯ ಇಸವಿಯಲ್ಲಿ ಮಹಾರಾಣಿಯವರ ಕಾಲೇಜಿನಲ್ಲಿ ವ್ಯಾಸಂಗಮಾಡಿದ ಆಂಗ್ಲೋ ಇಂಡಿಯನ್ ಮಹಿಳೆಯರಿಬ್ಬರೂ ಸಹ ಮೆಟ್ರಿಕ್ಯುಲೇಷನ್ ಪರೀಕ್ಷೆಯಲ್ಲಿ ತೇರ್ಗಡೆಯಾದರು; ಅಲ್ಲದೆ ಲೋವರ್ ಸೆಕೆಂಡರಿ ಪರೀಕ್ಷೆಯಲ್ಲಿ ೫೦ ಮಂದಿ ಬಾಲಕಿಯರು ತೇರ್ಗಡೆಯಾದುದಲ್ಲದೆ, ಬಾಲಕಿಯೊಬ್ಬಳು ಪ್ರಥಮ ತರಗತಿಯಲ್ಲಿ ತೇರ್ಗಡೆಹೊಂದಿದ ಬಾಲಕರೆಲ್ಲರನ್ನೂ ಮೀರಿಸಿ ಪ್ರಥಮ ಸ್ಥಾನವನ್ನಲಂಕರಿಸಿದಳು. ೧೯೦೬ನೆಯ ಇಸವಿಯಲ್ಲಿ ಮೈಸೂರು ಸಂಸ್ಥಾನಕ್ಕೆ ದಯಮಾಡಿದ್ದ ಪ್ರಿನ್ಸ್ ಆಫ್ ವೇಲ್ಸ್‌ರವರೂ ಅವರ ಧರ್ಮಪತ್ನಿಯವರೂ ಸ್ತ್ರೀ ವಿದ್ಯಾಭ್ಯಾಸದ ಸಾಹಸೋದ್ಯಮವು ಅಷ್ಟು ಶ್ಲಾಘ್ಯ ರೀತಿಯಲ್ಲಿ ಸಫಲವಾಗಿದ್ದುದನ್ನು ಕಂಡು, ಆ ವಿಚಾರದಲ್ಲಿ ಕೂಡ ಮೈಸೂರು ಸಂಸ್ಥಾನವು ಇತರ ನಾನಾ ವಿಚಾರಗಳಲ್ಲಿಯೂ ಇದ್ದಂತೆ ಮಾದರಿ ಸಂಸ್ಥಾನವಾಗಿದ್ದುದಕ್ಕಾಗಿ ಹರ್ಷಿಸಿದರು. ಮದರಾಸಿನ ಮತ್ತು ಮೈಸೂರು ಸಂಸ್ಥಾನದ ಹಲವು ಪತ್ರಿಕೆಗಳು, ಆಳಿದ ಮಹಾಸ್ವಾಮಿಯವರಾದ ಶ್ರೀಮನ್ಮಹಾರಾಜರವರ ರಾಜ್ಯಭಾರ ವಿಚಕ್ಷಣೆಯಿಂದ ಹೆಮ್ಮೆಯೂ ಸಂತೋಷವೂ ಉಂಟಾಗಿದ್ದುದಾಗಿ ಸೂಚಿಸಿ ಶ್ಲಾಘಿಸಿದುವು. ಮಹಾಪ್ರಭುಗಳವರ ಪ್ರೋತ್ಸಾಹದಿಂದ ಸ್ತ್ರೀ ವಿದ್ಯಾಭ್ಯಾಸವು ಸಂತತವಾಗಿ ವೃದ್ಧಿಹೊಂದಿತು.

**ದಿವಾನ್ ಹುದ್ದೆಗೆ ಹೊಸಬರ ನೇಮಕ**

ದಿವಾನ್‌ರವರಾಗಿದ್ದ ಸರ್ ಪಿ. ಎನ್. ಕೃಷ್ಣಮೂರ್ತಿಯವರು ೧೯೦೬ನೆಯ ಇಸವಿ ಮಾರ್ಚಿ ತಿಂಗಳು ೩೦ನೆಯ ತಾರೀಖಿನ ದಿನ ತಮ್ಮ ಹುದ್ದೆಯಿಂದ ವಿಶ್ರಾಂತರಾದರು. ಅವರು ನ್ಯಾಯಾಧೀಶರಾಗಿದ್ದ ಕಾಲದಲ್ಲಿ ಮಾಡಿದ್ದ ಕೆಲವು ತೀರ್ಮಾನಗಳು ಸುಪ್ರಸಿದ್ಧವಾಗಿ ಶ್ಲಾಘನೆಗೆ ಪಾತ್ರವಾಗಿದ್ದುವು. ಅವರು ಡೆಪ್ಯುಟಿ ಕಮೀಷನರವರಾಗಿ ತುಮಕೂರು ಡಿಸ್ಟ್ರಿಕ್ಟಿನಲ್ಲಿ ಕೆಲಸಮಾಡುತ್ತಿದ್ದಾಗ ದಸರಾ ಉತ್ಸವಕ್ಕಾಗಿ ಒಂದು ಸಲ ಮೈಸೂರಿಗೆ ಹೋಗಿದ್ದರು. ಆ ಸಲ ಮೊಹರಂ ಹಬ್ಬವು

ಕೂಡ ದಸರಾ ಕಾಲದಲ್ಲಿ ಬಂದು, ತುಮಕೂರಿನಲ್ಲಿ ಶಾಂತಿಗೆ ಭಂಗ ವುಂಟಾಗುವಂತಿದ್ದುದನ್ನು ಕೇಳಿ, ರಾತ್ರಿಯೇ ಪ್ರಯಾಣ ಮಾಡಿ, ಬೆಳಗಾಗುವ ವೇಳೆಗೆ ಅನಿರೀಕ್ಷಿತವಾಗಿ ತುಮಕೂರಿಗೆ ಸೇರಿ, ಹಿಂದೂ ಮುಸಲ್ಮಾನ ಪಂಗಡಗಳ ಮುಖಂಡರನ್ನು ಕರೆಯಿಸಿ, ತಮ್ಮ ಅನುನಯ ದಿಂದ ಶಾಂತಿಯನ್ನುಳಿಸಿ, ತುಮಕೂರಿನವರನ್ನೆಲ್ಲ ಬೆರಗುಮಾಡಿದರು. ಅವರು ದಿವಾನ್ ಹುದ್ದೆಗೆ ನೇಮಕವಾದುದು ಮೈಸೂರು ಸಂಸ್ಥಾನದವ ರೆಲ್ಲರನ್ನೂ ಸಂತೋಷಗೊಳಿಸಿತು. ಅವರ ಕಾಲದಲ್ಲಿ ಪರಸ್ಪರ ಸಹಾಯ ಸಂಘಗಳ ಏರ್ಪಾಡು ನಡೆದು ವೃದ್ಧಿಯಾಯಿತು. ಶ್ರೀಮಾನ್ ಇವ್ಯಾನ್ ಮೆಕಾನಿಕಿಯವರು ಬರೆದಿರುವ ಕೆಲವು ಸಂಗತಿಗಳನ್ನು ಪರಿಶೀಲಿಸಿದರೆ, ಅವರು ಉದ್ಯೋಗಶೀಲರಾಗಿ ಶಿಸ್ತಿನಿಂದ ಕೆಲಸ ಮಾಡುತ್ತಿದ್ದುದು ಸ್ವಲ್ಪ ಕಡಮೆಯಾಗಿದ್ದಿತೆಂದು ತೋರುತ್ತದೆ. ಅವರು ಸಮರ್ಥರೂ ದೇಶಾಭಿಮಾನಿಗಳೂ ಆಗಿದ್ದುದು ನಿಜವಾದರೂ, ಅವರು ಆಪ್ತರೆಂದು ಭಾವಿಸಿದ್ದ ಕೆಲವರು ಅವರಿಗೆ ಸರಿಯಾಗಿ ಸಲಹೆ ಹೇಳದಿದ್ದ ಕಾರಣ, ಅವರಿಗೆ ಅದರ ಪರಿಣಾಮವಾಗಿ ಜನಾನುರಾಗವು ಸ್ವಲ್ಪ ಮಟ್ಟಿಗೆ ತಪ್ಪಿಹೋಯಿತೆಂದು ಹೇಳುವವರೂ ಉಂಟು.

ಸರ್ ಪಿ. ಎನ್. ಕೃಷ್ಣಮೂರ್ತಿಗಳವರ ತರುವಾಯ ಶ್ರೀಮಾನ್ ವಿ. ಪಿ. ಮಾಧವರಾಯರವರು ದಿವಾನ್ ಹುದ್ದೆಗೆ ನೇಮಕವಾಗಿ ಮೂರು ವರ್ಷಗಳ ಕಾಲ ಕೆಲಸ ಮಾಡಿದರು. ಅವರು ಅದಕ್ಕೆ ಮುಂಚೆ ಮಂತ್ರಾಲೋಚನಾ ಸಭೆಯ ಸದಸ್ಯರಾಗಿ (ಕೌನ್ಸಿಲ್ ಮೆಂಬರವರಾಗಿ) ಮೈಸೂರು ಸಂಸ್ಥಾನದಲ್ಲಿ ಕೆಲಸಮಾಡಿ ಅನಂತರ ತಿರುವಾಂಕೂರು ಸಂಸ್ಥಾನದ ದಿವಾನ್ ಹುದ್ದೆಯನ್ನು ವಹಿಸಿದ್ದರು.

**ಜಿ.ಸಿ.ಎಸ್.ಐ. ಬಿರುದಿನ ಸನ್ಮಾನ**

೧೯೦೭ನೆಯ ಇಸವಿಯ ಆದಿಭಾಗದಲ್ಲಿ ಭರತಖಂಡದ ಚಕ್ರವರ್ತಿ ಸಾರ್ವಭೌಮರವರು ಆಳಿದ ಮಹಾಸ್ವಾಮಿಯವರ ರಾಜ್ಯಭಾರ ವಿಚಕ್ಷಣೆಗೆ ಮೆಚ್ಚಿ "ಜಿ.ಸಿ.ಎಸ್.ಐ." ಎಂಬ ಬಿರುದನ್ನೂ ಖಿಲ್ಲತ್ತುಗಳನ್ನೂ ಕೊಟ್ಟು ಸನ್ಮಾನಿಸಿದರು. ನಾಲ್ಕು ವರ್ಷಗಳ ಅವಧಿಯಲ್ಲೇ ಮಹಾಸ್ವಾಮಿಯವರು ರಾಜ್ಯಾಡಳಿತ ನಿರ್ವಹಣದಲ್ಲಿ ಅಸಾಧಾರಣ ಸಾಮರ್ಥ್ಯವನ್ನು ವ್ಯಕ್ತಗೊಳಿಸಿದ್ದರೆಂಬುದಕ್ಕೆ ಅದೊಂದು ಶ್ರೇಷ್ಠ ನಿದರ್ಶನ. ಬೆಂಗಳೂರಿನ ಮಹಾಜನರು ಸರ್ ಪಿ. ಎನ್. ಕೃಷ್ಣಮೂರ್ತಿಗಳವರ ಅಧ್ಯಕ್ಷತೆಯಲ್ಲಿ ಒಂದು ಸ್ವಾಗತ ಸಮಿತಿಯನ್ನೇರ್ಪಡಿಸಿ, ಲಾಲ್‌ಬಾಗಿನಲ್ಲಿ ಮಹಾಸ್ವಾಮಿಯವರ

ಗೌರವಾರ್ಥವಾಗಿ ಸತ್ಕಾರ ಕೂಟವನ್ನೇರ್ಪಡಿಸಿ, ರಾಜಭಕ್ತಿಪೂರ್ವಕ ವಾದ ವಿಜ್ಞಾಪನಾ ಪತ್ರಿಕೆಯನ್ನು ಸಮರ್ಪಿಸಿದರು. ಮೈಸೂರು ನಗರ ದಲ್ಲಿ "ಅರಸು ಜಂಖಾನ ಕ್ಲಬ್" ಸಂಸ್ಥೆಯವರು ಸರ್ದಾರ್ ಎಂ. ಕಾಂತರಾಜ ಅರಸಿನವರ ನೇತೃತ್ವದಲ್ಲಿ ೧೯೦೭ನೆಯ ಇಸವಿ ಮಾರ್ಚಿ ೧೧ನೆಯ ತಾರೀಖಿನ ದಿನ ಒಂದು ಸತ್ಕಾರ ಕೂಟವನ್ನೇರ್ಪಡಿಸಿ ವಿಜ್ಞಾಪನಾ ಪತ್ರಿಕೆಯನ್ನು ಸಮರ್ಪಿಸಿದರು. ೧೯೦೭ನೆಯ ಇಸವಿ ಮಾರ್ಚಿ ೧೬ನೆಯ ತಾರೀಖಿನ ದಿನ ಮೈಸೂರು ನಗರ ನಿವಾಸಿಗಳಲ್ಲಿ ಸಮಸ್ತ ಪಂಗಡಗಳವರೂ ಸೇರಿ ರಂಗಾಚಾರ್ಯರ ಸ್ಮಾರಕ ಭವನದಲ್ಲಿ ಮಹಾಸ್ವಾಮಿಯವರಿಗೆ ವಿಜ್ಞಾಪನಾ ಪತ್ರಿಕೆಯನ್ನು ರಾಜಭಕ್ತಿಪೂರ್ವಕ ವಾಗಿ ಸಮರ್ಪಿಸಿದರು. ಮಹಾಸ್ವಾಮಿಯವರು ಪ್ರಜೆಗಳ ಅಭ್ಯುದಯ ಸಾಧನೆಗಾಗಿ ಶ್ರಮಿಸುತ್ತ ಕೃಪೆತೋರುತ್ತಿದ್ದುದಕ್ಕಾಗಿ ಕೃತಜ್ಞತಾ ಪೂರ್ವಕವಾದ ವಂದನೆಗಳು ವಿಜ್ಞಾಪನಾ ಪತ್ರಿಕೆಯಲ್ಲಿ ಸೂಚಿತ ವಾಗಿದ್ದುವು. ಅದಕ್ಕೆ ಪ್ರತ್ಯುತ್ತರವಾಗಿ ಮಹಾಸ್ವಾಮಿಯವರು ಅಪ್ಪಣೆ ಕೊಡಿಸಿದ ಭಾಷಣದಲ್ಲಿ, "ನಾವು ನಮ್ಮ ರಾಜ್ಯಾಡಳಿತ ನಿರ್ವಹಣವನ್ನು ಇದೇ ತಾನೆ ಪ್ರಾರಂಭಿಸಿರುವೆವೆಂದೂ, ನಾವು ಸಾಧಿಸಬೇಕಾದ ಕಾರ್ಯಗಳು ಅಪರಿಮಿತವಾಗಿವೆಯೆಂದೂ, ಈಗ ನೆರವೇರಿರತಕ್ಕವುಗಳು ತೀರ ಅಲ್ಪವಾಗಿವೆಯೆಂದೂ ನಮ್ಮ ಮನಸ್ಸಿಗೆ ಭಾಸವಾಗುತ್ತಲಿದೆ. ನಮ್ಮ ಮೇಲಿನ ಕರ್ತವ್ಯಭಾರವು ಮಹತ್ತರವಾಗಿದೆಯೆಂಬುದನ್ನು ನಾವು ಸಂಪೂರ್ಣವಾಗಿ ಗ್ರಹಿಸಿರುವೆವು. ಅದನ್ನು ನಿಯೋಜಿಸಿರುವ ಭಗವಂತನ ಚಿತ್ತದಲ್ಲಿದ್ದಂತಾಗಲೆಂದು ಪ್ರಾರ್ಥಿಸಿ ಕರ್ತವ್ಯವನ್ನು ಪರಿಪಾಲಿಸುವೆವು. ಸುಂದರವಾದ ನಮ್ಮ ಸಂಸ್ಥಾನದ ಪುರೋಭಿವೃದ್ಧಿಯನ್ನೂ ಅಭ್ಯುದಯ ವನ್ನೂ ಸಾಧಿಸಿ, ನಮ್ಮ ಪ್ರೀತಿಪಾತ್ರರಾದ ಪ್ರಜೆಗಳು ಸುಖವಾಗಿರುವಂತೆ ಮಾಡುವುದಕ್ಕಾಗಿ ಭಗವಂತನ ಕೃಪಾಶೀರ್ವಾದ ಪ್ರಭಾವದಿಂದ ನಮ್ಮ ಸರ್ವಸಾಮರ್ಥ್ಯವನ್ನೂ ವಿನಿಯೋಗಿಸಿ ಯಾವಜ್ಜೀವವೂ ಕೆಲಸಮಾಡು ವುದೇ ನಮ್ಮ ಧ್ಯೇಯವಾಗಿದೆ; ಮತ್ತು ಮುಂದೆ ಸಹ ನಿರಂತರವೂ ನಮ್ಮ ಧ್ಯೇಯವಾಗಿರುತ್ತದೆ. ಈ ಧ್ಯೇಯ ಸಾಧನೆಯಲ್ಲಿ ಲೇಶಮಾತ್ರವೂ ಆಲಸ್ಯಮಾಡದೆ ಸಂತತವಾಗಿ ನಾವು ಶ್ರಮಿಸುತ್ತ ಬರುವೆವೆಂದು ನಿಮ್ಮೆಲ್ಲ ರಿಗೂ ಭರವಸೆ ಕೊಡುವೆವು. ಸುನಿಶ್ಚಿತವಾಗಿರುವ ನಮ್ಮಾ ಸಂಕಲ್ಪ ಸಾಧನೆಯಲ್ಲಿ ಉದ್ಯಮಶೀಲತೆಗೂ ಸ್ಥಿರಪ್ರಯತ್ನಕ್ಕೂ ಎಂದೆಂದಿಗೂ ಲೇಶಮಾತ್ರ ಲೋಪವೂ ನಮ್ಮ ದೆಸೆಯಿಂದ ಸಂಭವಿಸದೆಂದು ನಾವು ದೃಢವಾಗಿ ನಂಬಿರುವೆವು" ಎಂದು ನುಡಿದರು. ಮಹಾಸ್ವಾಮಿಯವರ

ರಾಜ್ಯಭಾರವು ಉದಾತ್ತವಾದ ಆ ಧ್ಯೇಯಕ್ಕನುಸಾರವಾಗಿ ಅಂದಿನಿಂದಲೂ ನಡೆದುಬಂದುದು, ಮೈಸೂರು ಸಂಸ್ಥಾನದ ಪ್ರಜೆಗಳ ಭಾಗ್ಯ.

೧೮೯೭ನೆಯ ಇಸವಿಯಲ್ಲಿ ಅರಮನೆಯ ಕಟ್ಟಡವು ಸುಟ್ಟುಹೋಗಿ ಅದೇ ಸ್ಥಳದಲ್ಲಿ ಈಗಿನ ನೂತನ ಪ್ರಾಸಾದವು ನಿರ್ಮಿತವಾಗಲು ಪ್ರಾರಂಭವಾಯಿತು. ಅದರ ನಿರ್ಮಾಣಕಾರ್ಯವು ಪೂರೈಸಲು ಹನ್ನೆರಡು ವರ್ಷಗಳಿಗಿಂತಲೂ ಅಧಿಕವಾದ ಅವಧಿಯು ಹಿಡಿಯಿತಾದರೂ ಗೃಹಪ್ರವೇಶ ಮಹೋತ್ಸವವೇನೊ ಈ ಮಧ್ಯೆ ೧೯೦೭ನೆಯ ಇಸವಿ ಜೂನ್ ತಿಂಗಳು ೫ನೆಯ ತಾರೀಖು (ಪ್ಲವಂಗನಾಮ ಸಂವತ್ಸರದ ವೈಶಾಖ ಬಹಳ ದಶಮಿ) ಬುಧವಾರದ ದಿನ ಅತ್ಯಂತ ವಿಜೃಂಭಣೆಯಿಂದ ಶಾಸ್ತ್ರೋಕ್ತವಾಗಿ ನೆರವೇರಿತು.

**ನೂತನ ಪ್ರಾಸಾದದ ಪ್ರವೇಶ ಮಹೋತ್ಸವ**

೧೯೦೭ನೆಯ ಇಸವಿ ಜೂನ್ ತಿಂಗಳು ೨೫ನೆಯ ತಾರೀಖಿನ ದಿನ ಮೈಸೂರು ನ್ಯಾಯವಿಧಾಯಕ ಸಭೆಯು ಸ್ಥಾಪಿತವಾಯಿತು. ಹೊಸ ಹೊಸ ಕಾನೂನುಗಳನ್ನು ಅದುವರೆಗೂ ಮಂತ್ರಾಲೋಚನಾ ಸಭೆಯವರೇ ರಚಿಸಿ ಪರ್ಯಾಲೋಚಿಸಿ ಮಹಾಸ್ವಾಮಿಯವರ ಅನುಮತಿಯನ್ನು ಪಡೆದು ಅವುಗಳನ್ನು ಆಚರಣೆಗೆ ತರುತ್ತಿದ್ದರು. ಪೂಜ್ಯಪಾದರಾದ ತಮ್ಮ ತೀರ್ಥರೂಪರವರು ಯಾವ ಘನವಾದ ಉದ್ದೇಶದಿಂದ ಪ್ರಜಾಪ್ರತಿನಿಧಿ ಸಭೆಯನ್ನು ಸ್ಥಾಪಿಸಿದರೋ ಅದೇ ಬಗೆಯ ಘನವಾದ ಉದ್ದೇಶದಿಂದಲೇ ಮಹಾಸ್ವಾಮಿಯವರು ನ್ಯಾಯವಿಧಾಯಕ ಸಭೆಯನ್ನು ಸ್ಥಾಪಿಸಿ ಅದರಲ್ಲಿ ಕ್ಲುಪ್ತ ಸಂಖ್ಯೆಯ ಸರ್ಕಾರಿ ಉದ್ಯೋಗಸ್ಥರೂ ಸದಸ್ಯರಾಗಿರುವಂತೆ ಆಜ್ಞಾಪಿಸಿದರು. ಆ ಸಭೆಗೆ ದಿವಾನ್‌ರವರು ಅಧ್ಯಕ್ಷರಾಗಿಯೂ, ಮಂತ್ರಾಲೋಚನಾ ಸಭೆಯ ಸದಸ್ಯರಾದ ಸಚಿವರೀರ್ವರೂ ಉಪಾಧ್ಯಕ್ಷರಾಗಿರುವಂತೆಯೂ ಗೊತ್ತಾಯಿತು. ಹತ್ತಕ್ಕೆ ಕಡಮೆಯಿಲ್ಲದ ಮತ್ತು ಹದಿನೈದಕ್ಕೆ ಮೀರದಷ್ಟು ಸಂಖ್ಯೆಯ ಇತರ ಸದಸ್ಯರಿರಬೇಕೆಂದೂ, ಅವರಲ್ಲಿ ಐದರಲ್ಲೆರಡು ಭಾಗಕ್ಕೆ ಕಡಮೆಯಿಲ್ಲದಷ್ಟು ಮಂದಿ ಸರ್ಕಾರಿ ಉದ್ಯೋಗಸ್ಥರಲ್ಲದ ಸದಸ್ಯರಿರಬೇಕೆಂದೂ, ಪ್ರಜಾಪ್ರತಿನಿಧಿ ಸಭೆಯವರು ಇಬ್ಬರು ಸದಸ್ಯರನ್ನು ನೇಮಕಮಾಡಿ ಕಳುಹಿಸಿಕೊಡಬೇಕೆಂದೂ ವಿಧಾಯಕವಾಯಿತು. ಪ್ರಜೆಗಳಿಗೆ ಸರ್ಕಾರಿ ಆಡಳಿತದಲ್ಲಿ ಸಂಬಂಧವಿರುವಂತೆ ಮಾಡಿದ ಏರ್ಪಾಡುಗಳಲ್ಲಿ ನ್ಯಾಯವಿಧಾಯಕ ಸಭೆಯ ಏರ್ಪಾಡಿಗೂ ಬಹಳ ಮಹತ್ವವುಂಟು.

**ನ್ಯಾಯವಿಧಾಯಕ ಸಭೆಯ ಸ್ಥಾಪನೆ**

೧೯೦೮ನೆಯ ಇಸವಿಯಲ್ಲಿ ಮಹಾಸ್ವಾಮಿಯವರು ಜಪಾನ್ ದೇಶದ ಪುರೋಭಿವೃದ್ಧಿ ಸಾಧನೆಯ ವಿವರಗಳನ್ನೆಲ್ಲ ಪ್ರತ್ಯಕ್ಷವಾಗಿ ಪರಿಶೀಲಿಸಿ, ಸಾಧ್ಯ ಕಂಡಮಟ್ಟಿಗೂ ಅಲ್ಲಿಯ ವ್ಯವಸ್ಥೆಗಳನ್ನು ಮೈಸೂರು ಸಂಸ್ಥಾನದಲ್ಲಿ ಆಚರಣೆಗೆ ತಂದು ಸಂಸ್ಥಾನದ ಆಡಳಿತವು ಮತ್ತಷ್ಟು ಮುಂದು ವರಿಯುವಂತೆ ಮಾಡಬೇಕೆಂದು ಅಲ್ಲಿಗೆ ಪ್ರಯಾಣ ಮಾಡಲುದ್ದೇಶಿಸಿದ್ದರು. ಅನೇಕ ದೇಶಗಳು ಹತ್ತಾರು ಶತಮಾನಗಳಲ್ಲಿ ಸಾಧಿಸುವುದಕ್ಕಾಗ ದಷ್ಟು ಅಭ್ಯುದಯವನ್ನು ಕೇವಲ ಅರ್ಧ ಶತಮಾನದಷ್ಟು ಅಲ್ಪಕಾಲದಲ್ಲಿ ಸಾಧಿಸಿ ಆಗ ಜಪಾನ್ ದೇಶವು ಅತ್ಯಧಿಕ ಖ್ಯಾತಿಯನ್ನು ಗಳಿಸಿದ್ದಿತು. ಅಲ್ಲಿ ೧೮೯೬ನೆಯ ಇಸವಿಯಲ್ಲಿ ಬರುತ್ತಿದ್ದ ಹುಟ್ಟುವಳಿಯ ಆರರಷ್ಟು ಹೆಚ್ಚಿನ ಹುಟ್ಟುವಳಿಯು ೧೯೦೮ನೆಯ ಇಸವಿಯ ಹೊತ್ತಿಗೆ ಬರುತ್ತಿದ್ದಿತು. ಮಹಾಸ್ವಾಮಿಯವರ ಪ್ರಯಾಣಕ್ಕೆ ಬೇಕಾದ ಸನ್ನಾಹಗಳೆಲ್ಲ ಪೂರೈಸಿ ದುವು. ಆದರೆ, ಆ ವರ್ಷ ಸಂಸ್ಥಾನದಲ್ಲಿ ಅನಾವೃಷ್ಟಿಯ ಪರಿಣಾಮ ವಾಗಿ ದುರ್ಭಿಕ್ಷವು ಸಂಭವಿಸುವಂತಿದ್ದುದು ಖಂಡಿತವೆಂದೂ, ಕ್ಷಾಮವೇ ಸಂಭವಿಸಿದರೂ ಸಂಭವಿಸಬಹುದಾಗಿದ್ದಿತೆಂದೂ ಶಂಕೆಯುಂಟಾಯಿತು. ಆ ಸನ್ನಿವೇಶದಲ್ಲಿ ಸಂಸ್ಥಾನವನ್ನು ಬಿಟ್ಟು ಜಪಾನಿಗೆ ತೆರಳುವುದು ಉಚಿತ ವಲ್ಲವೆಂದು ನಿರ್ಧರಿಸಿ, ಸ್ವಾರ್ಥತ್ಯಾಗದಿಂದಲೂ ಪ್ರಜಾವಾತ್ಸಲ್ಯದಿಂದಲೂ ಮಹಾಸ್ವಾಮಿಯವರು ಜಪಾನ್ ಪ್ರಯಾಣವನ್ನು ನಿಲ್ಲಿಸಿ, ತಮ್ಮ ಸಹೋದರರನ್ನು ಜಪಾನ್ ದೇಶಕ್ಕೆ ಕಳುಹಿಸಿದರು.

**ಪ್ರಜಾವಾತ್ಸಲ್ಯದ ದೆಸೆಯಿಂದ ಜಪಾನ್ ಪ್ರಯಾಣವನ್ನು ನಿಲ್ಲಿಸಿದುದು**

ಆಗ್ಗೆ ಹುಟ್ಟಿದ ಅಮಂಗಳದ ಶಂಕೆಗನುಸಾರವಾಗಿ ಮೈಸೂರು ಸಂಸ್ಥಾನದ ಕೆಲವು ಡಿಸ್ಟ್ರಿಕ್ಟುಗಳಲ್ಲಿ ಕ್ಷಾಮವು ಸಂಭವಿಸಿತು. ಮಹಾ ಸ್ವಾಮಿಯವರು ದಿವಾನ್‌ರವರಿಗೆ ನಿರೂಪಗಳಮೇಲೆ ನಿರೂಪಗಳನ್ನು ಕಳುಹಿಸುತ್ತ ಕ್ಷಾಮನಿವಾರಣೆಯ ಏರ್ಪಾಡುಗಳನ್ನು ಮಾಡಿಸಿದರು. ಭಂಡಾರವು ಬರಿದಾದರೂ ಚಿಂತೆಯಿಲ್ಲವೆಂದೂ, ಪ್ರಜೆಗಳ ಮರಣವು ಸಂಭವಿಸದಿದ್ದರೆ ಸಾಕೆಂದೂ, ಮಹಾಪ್ರಭುಗಳವರು ದಿವಾನ್‌ರವರಿಗೆ ಆಜ್ಞೆಮಾಡಿದರು. ಅಷ್ಟೇ ಅಲ್ಲ. ಕ್ಷಾಮಪೀಡಿತವಾದ ಪ್ರದೇಶಗಳಿಗೆ ತಾವು ಚಿತ್ತೈಸಿದರೆ ಒಂದಲ್ಲದಿದ್ದರೆ ಮತ್ತೊಂದು ರೀತಿಯಲ್ಲಿ ಪ್ರಜೆಗಳು ಧನವ್ಯಯಮಾಡಿ ಕಷ್ಟವನ್ನೆಣಿಸದೆ ಸ್ವಾಗತ ಸಭೆಗಳೇ ಮುಂತಾದುವು ಗಳನ್ನೇರ್ಪಡಿಸುವುದು ಖಂಡಿತವೆಂದು ಭಾವಿಸಿ, ಮೊದಲೇ ಕಷ್ಟಕ್ಕೊಳ ಗಾಗಿದ್ದ ಪ್ರಜೆಗಳಿಗೆ ಮತ್ತಷ್ಟು ಕಷ್ಟವನ್ನುಂಟುಮಾಡಕೂಡದೆಂಬ

ಉದಾತ್ತ ಮನೋಧರ್ಮದಿಂದ ಕೂಡಿ, ಅಲ್ಲಿಗೆ ಹೋಗಿಬರಬೇಕೆಂದಿದ್ದ ತಮ್ಮ ಅಭಿಲಾಷೆಯನ್ನು ದಮನಮಾಡಿದರು. ಕ್ಷಾಮಪೀಡಿತ ಪ್ರದೇಶಗಳ ಸ್ಥಿತಿಯು ಉತ್ತಮಗೊಳ್ಳದೆಹೋದ ಪಕ್ಷದಲ್ಲಿ ತಾವು ಆ ವರ್ಷ ಬೇಸಗೆಯಲ್ಲಿ ನೀಲಗಿರಿಗೆ ಕೂಡ ಚಿತ್ತೈಸುವುದಿಲ್ಲವೆಂದು ಆಪ್ತರೊಬ್ಬರೊಡನೆ ತಿಳಿಸಿದರು.

ಮಹಾಸ್ವಾಮಿಯವರ ಪ್ರೇರಣೆ ಪ್ರೋತ್ಸಾಹಗಳ ದೆಸೆಯಿಂದ ಸಂತತ ಪ್ರಯತ್ನಗಳು ನಡೆದು, ದುರ್ಭಿಕ್ಷಪೀಡಿತವಾದ ಪ್ರದೇಶಗಳಲ್ಲಿ ಪ್ರಜೆಗಳ ಕಷ್ಟಗಳು ನಿವಾರಣೆಯಾದುವು. ಮನುಷ್ಯ ಪ್ರಯತ್ನಕ್ಕೆ ದೈವಾನುಗ್ರಹವೂ ಲಭಿಸಿ ಸಕಾಲಗಳಲ್ಲಿ ಸುವೃಷ್ಟಿಯಾಯಿತು. ಆಗ್ಗೆ ಬ್ರಿಟಿಷ್ ರೆಸಿಡೆಂಟರಾಗಿದ್ದ ಸರ್ ಎಸ್. ಎಂ. ಫ್ರೇಸರ್ ಸಾಹೇಬರವರಿಗಂತೂ, ತಮ್ಮ ಪ್ರಿಯಶಿಷ್ಯರ ಕರ್ತವ್ಯನಿಷ್ಠೆಯನ್ನು ಕಂಡು ಅತ್ಯಾನಂದ. ಅವರು ೧೯೦೮ನೆಯ ಇಸವಿ ಅಕ್ಟೋಬರ್ ೨೮ನೆಯ ತಾರೀಖಿನ ದಿನ ನಡೆದ ಔತಣ ಕೂಟದಲ್ಲಿ "....  ...ದುರ್ಭಿಕ್ಷ ನಿವಾರಣೆಗಾಗಿ ನಿಯೋಜಿತರಾಗಿದ್ದ ಅಧಿಕಾರಿಗಳು ಎಷ್ಟುಮಟ್ಟಿಗೆ ಕೆಲಸಮಾಡಿದ್ದಾರೆಂಬುದನ್ನು ಸೂಚಿಸುವುದು ನನ್ನ ಕಾರ್ಯವಲ್ಲ. ಆದರೆ, ಘೋರಕ್ಷಾಮ ಸಂಭವಿಸುವ ಶಂಕೆಯುಂಟಾಗಿದ್ದ ಕಷ್ಟದಾಯಕವಾಗಿದ್ದ ಈಚಿನ ಅವಧಿಯಲ್ಲಿ, ಒಬ್ಬರು ಮಹಾಸೀಯರ ಶೀಲ ಸಂಪತ್ತಿಯೆಂತಹದೆಂಬುದು, ಸುಭಿಕ್ಷ ಕಾಲದಲ್ಲಿ ವ್ಯಕ್ತವಾಗುವುದು ಸಾಧ್ಯವಿದ್ದುದಕ್ಕಿಂತ ಹೆಚ್ಚಾಗಿ ವ್ಯಕ್ತವಾಯಿತು. ನಾನು ಸೂಚಿಸುತ್ತಿರುವುದು ಶ್ರೀಮನ್ಮಹಾರಾಜರವರ ವಿಷಯ. ಮಹಾಶಯರೇ! ತಮ್ಮೆಲ್ಲರಿಗೂ ನೆನಪಿರುವಂತೆ, ಕಳೆದ ಡಿಸೆಂಬರು ತಿಂಗಳಿನಲ್ಲಿ ಶ್ರೀಮನ್ಮಹಾರಾಜರವರು ದೀರ್ಘಾವಧಿಯ ಜಪಾನ್ ಪ್ರವಾಸಕ್ಕಾಗಿ ದಯಮಾಡುವುದರಲ್ಲಿದ್ದರು. ಪ್ರಯಾಣದ ಜಹಜು ಕೂಡ ಗೊತ್ತಾಗಿದ್ದಿತು. ಅಂತಹ ಸಮಯದಲ್ಲಿ ಸಂಸ್ಥಾನದ ಪ್ರಜೆಗಳ ಯೋಗಕ್ಷೇಮದ ದೃಷ್ಟಿಯಿಂದ ತಾವು ಸಂಸ್ಥಾನದಲ್ಲಿರಬೇಕಾದುದೇ ಯುಕ್ತವೆಂದು ಭಾವಿಸಿ ಅವರು ಪ್ರಯಾಣವನ್ನು ನಿಲ್ಲಿಸಿಬಿಟ್ಟರು. ಈ ಬಗೆಯ ವರ್ತನೆಯ ಉದಾಹರಣೆಯಿಂದ ಅಧಿಕಾರಿಗಳಲ್ಲಿ ಯಾವ ರೀತಿ ಪರಿಣಾಮವುಂಟಾಗುವುದೆಂಬುದನ್ನು ನಾನು ಸೂಚಿಸಬೇಕಾದ ಆವಶ್ಯಕತೆಯೇ ಇಲ್ಲ. ಶ್ರೀಮನ್ಮಹಾರಾಜರವರು ತಮ್ಮ ಸ್ವಾರ್ಥತ್ಯಾಗದ ಫಲವಾಗಿ ತಮ್ಮ ಪ್ರಜೆಗಳ ಹೃತ್ಪೂರ್ವಕವಾದ ಭಕ್ತಿ ಕೃತಜ್ಞತೆಗಳ ಕಾಣಿಕೆಯು ತಮಗೆ ಲಭಿಸಿದೆಯೆಂಬ ಸಂಗತಿಯನ್ನು ತಮ್ಮ ಚಿತ್ತಕ್ಕೆ ತಂದುಕೊಂಡು ಹರ್ಷಿಸಬಹುದಾಗಿದೆಯೆಂದು ನನ್ನ

ಮನಸ್ಸಿಗೆ ತೋರುತ್ತದೆ. ಸುದೈವವಶದಿಂದ ಅಭೂತಪೂರ್ವವಾದ ಸುವೃಷ್ಟಿಯಾಗಿ ಆತಂಕಗಳೆಲ್ಲ ಪರಿಹಾರವಾಗಿರುವ ಸುಖಕರವಾದ ಸನ್ನಿವೇಶವು ಭಗವಂತನ ಕೃಪೆಯಿಂದ ಈಗ ಒದಗಿದೆ'' ಎಂದು ಅಪ್ಪಣೆ ಕೊಡಿಸಿದರು. ಮಹಾಸ್ವಾಮಿಯವರು ಅದಕ್ಕೆ ಪ್ರತ್ಯುತ್ತರವಾಗಿ ಅಪ್ಪಣೆ ಕೊಡಿಸಿದ ಭಾಷಣದಲ್ಲಿ, ''......ನಾವು ಅನ್ಯಥಾ ವರ್ತಿಸಿ ಜಪಾನಿಗೆ ಪ್ರಯಾಣಮಾಡಿದ್ದ ಪಕ್ಷಕ್ಕೆ ನಮ್ಮ ಪ್ರಜೆಗಳ ವಿಷಯದಲ್ಲಿ ನಮ್ಮ ಕರ್ತವ್ಯವನ್ನು ನೆರವೇರಿಸದೆ ತಪ್ಪಿದಂತೆಯೇ ಆಗುತ್ತಿದ್ದಿತೆಂದು ತೋರಿತು. ಭಗವಂತನ ಅನುಗ್ರಹದಿಂದ ಸುವೃಷ್ಟಿಯಾಗಿ, ಕ್ಷಾಮವು ಸಂಭವಿಸಬಹುದೆಂಬ ಶಂಕಾತಂಕಗಳೆಲ್ಲ ಪ್ರಜೆಗಳ ಮನಸ್ಸಿನಿಂದ ಮರೆಯಾದ ಸನ್ನಿವೇಶವುಂಟಾಗಿರುವುದಕ್ಕಾಗಿ ನಾವು ಹರ್ಷಿಸುತ್ತಿರುವುದು ಸಹಜವಾಗಿಯೇ ಇದೆ'' ಎಂದು ಹೇಳಿದರು.

ಈ ಮಧ್ಯದಲ್ಲಿ, ಪರಿಜನರೊಡನೆ ೧೯೦೮ನೆಯ ಇಸವಿ ಡಿಸೆಂಬರು ೨೬ನೆಯ ತಾರೀಖಿನ ದಿನ ಜಪಾನ್ ದೇಶಕ್ಕೆ ದಯಮಾಡಿದ್ದ ಶ್ರೀಮದ್ಯುವ ರಾಜರವರು ೧೯೦೯ನೆಯ ಇಸವಿ ಮಾರ್ಚಿ ೨೧ನೆಯ ತಾರೀಖಿನ ದಿನ ರಾಜಧಾನಿಗೆ ಹಿಂತಿರುಗಿದರು. ನಗರ ನಿವಾಸಿಗಳು ಸಂತೋಷಭರಿತರಾಗಿ ಉತ್ಸಾಹದಿಂದ ಸ್ವಾಗತವನ್ನಿತ್ತರು. ರೈಲ್ವೇ ಸ್ಟೇಷನಿನಲ್ಲಿ ದಿವಾನ್‌ರವರೂ ಸರ್ದಾರರುಗಳೂ, ಅರಸು ಪಂಗಡದ ಮಹಾಶಯರುಗಳೂ, ಅಧಿಕಾರಿಗಳೂ, ವೈದಿಕರೂ, ನಾನಾ ಪಂಗಡಗಳ ಪ್ರತಿನಿಧಿಗಳೂ ಕಿಕ್ಕಿರಿದು ತುಂಬಿದ್ದು ಶ್ರೀಮದ್ಯುವರಾಜ ಶ್ರೀ ಕಂಠೀರವ ನರಸಿಂಹರಾಜ ಒಡೆಯರವರು ರೈಲು ಬಂಡಿಯಿಂದ ಕೆಳಕ್ಕಿಳಿದೊಡನೆಯೇ ಪುಷ್ಪಗಳನ್ನೆರಚಿ ಭಕ್ತಿ ಪ್ರದರ್ಶನಮಾಡಿದರು. ಸೈನಿಕರ ಮುಜರೆಯೂ ಅರಮನೆಯ ಬ್ಯಾಂಡಿನವರ ವಾದ್ಯಘೋಷವೂ ಆಗುತ್ತಿರುವಲ್ಲಿ, ಮೈಸೂರು ನಗರದ ಪೌರಸಭೆಯವರಿಂದ ಪುಷ್ಪಮಾಲಿಕೆಯನ್ನೂ ತುರಾಯಿಯನ್ನೂ ಸ್ವೀಕರಿಸಿ, ಶ್ರೀಮದ್ಯುವರಾಜರವರು ಅರಮನೆಗೆ ದಯಮಾಡಿದರು. ಮಾರ್ಗದುದ್ದಕ್ಕೂ ಉಭಯ ಪಾರ್ಶ್ವಗಳಲ್ಲಿಯೂ ಪ್ರಜೆಗಳು ಕಿಕ್ಕಿರಿದು ತುಂಬಿ ಹರ್ಷ ಧ್ವನಿ ಮಾಡಿದರು. ಆಳಿದ ಮಹಾಸ್ವಾಮಿಯವರಾದ ಶ್ರೀಮನ್ಮಹಾರಾಜರವರು ತಾವೇ ಜಪಾನ್ ದೇಶಕ್ಕೆ ದಯಮಾಡಿ ಹಿಂತಿರುಗಿದಂತೆ ಭಾವಿಸಿ ಹರ್ಷಿಸಿ, ತಮ್ಮ ಅನುಜರ ಪುನರಾಗಮನಕ್ಕಾಗಿ ಆನಂದಿಸಿ, ಜಪಾನ್ ದೇಶದ ಅಭ್ಯುದಯಾತಿಶಯಗಳನ್ನೆಲ್ಲ ವಿಶದವಾಗಿ ಲಾಲಿಸಿದರು.

೧೯೧೯ನೆಯ ಇಸವಿ ಏಪ್ರಿಲ್ ೧ನೆಯ ತಾರೀಖಿನಿಂದ ಶ್ರೀಮಾನ್ ವಿ. ಪಿ. ಮಾಧವರಾಯರವರು ದಿವಾನ್‌ಹುದ್ದೆಯಿಂದ ವಿಶ್ರಾಂತರಾಗಿ, ಆಗ ಮಂತ್ರಾಲೋಚನಾ ಸಭೆಯ ಸದಸ್ಯರಾಗಿದ್ದ ಶ್ರೀಮಾನ್ ಟಿ. ಆನಂದರಾಯರವರು ಅವರ ಸ್ಥಾನದಲ್ಲಿ ಕೆಲಸಮಾಡಬೇಕೆಂದು ಮಹಾಸ್ವಾಮಿಯವರು ಅಪ್ಪಣೆ ಮಾಡಿದರು. ಶ್ರೀಮಾನ್ ಮಾಧವರಾಯರವರು ಹಿಂದೆ ಪೋಲೀಸು ಇಲಾಖೆಯ ಮುಖ್ಯಾಧಿಕಾರಿಗಳಾಗಿದ್ದ ಕಾಲದಲ್ಲಿ ಆ ಇಲಾಖೆಯನ್ನು ಅತ್ಯುತ್ತಮ ರೀತಿಯಲ್ಲಿ ಪುನರ್ವ್ಯವಸ್ಥೆಗೊಳಿಸಿ ದಕ್ಷತೆಯನ್ನು ಹೆಚ್ಚಿಸಿದರು. ಮಂತ್ರಾಲೋಚನಾ ಸಭೆಯ ಸದಸ್ಯರಾಗಿ ಸಚಿವರ ಮತ್ತು ರೆವೆನ್ಯೂ ಕಮಿಷನರವರ ಕರ್ತವ್ಯಗಳನ್ನು ನೆರವೇರಿಸುತ್ತಿದ್ದ ಕಾಲದಲ್ಲಿ ಅವರು ರೆವೆನ್ಯೂ ಇಲಾಖೆಯಲ್ಲಿ ಅನೇಕ ಸುಧಾರಣೆಗಳನ್ನು ಆಚರಣೆಗೆ ತಂದರು. ಅವರಿಗೆ ಕಾರ್ಯನಿರ್ವಹಣ ಸಾಮರ್ಥ್ಯವೂ ತೀರ ಸಣ್ಣ ವಿಷಯಗಳಲ್ಲಿ ಕೂಡ ಕೂಲಂಕಷವಾದ ಜ್ಞಾನವೂ, ವಿಶೇಷ ಕಾರ್ಯಾನುಭವವೂ ಇದ್ದುವು. ಒಂದು ಸಲ, ಅವರು (ಡೆಪ್ಯುಟಿ ಕಮಿಷನರವರ ಹುದ್ದೆಯಲ್ಲಿದ್ದಾಗ) ಕೆಲವು ಬಾವಿಗಳನ್ನು ತೋಡಿಸಿಕೊಟ್ಟರು ಬಹು ಕಾಲದ ಮೇಲೆ ಅಲ್ಲಿಯ ಅಮಲ್ದಾರರವರು, "ನಮ್ಮಲ್ಲಿ ಬೇಸಗೆಯಲ್ಲಿ ಕೂಡ ಧ್ರುವಜಲವಿರುವ ಬಾವಿಗಳು ಮಾಧವರಾಯರು ತೋಡಿಸಿಕೊಟ್ಟಿರುವ ಬಾವಿಗಳೇ" ಎಂದರು.

**ಶ್ರೀಮಾನ್ ವಿ. ಪಿ. ಮಾಧವ ರಾಯರ ದಿವಾನ್ ಗಿರಿಯ ಮುಕ್ತಾಯ**

ದೇವಸ್ಥಾನಗಳಲ್ಲಿ ದೇವದಾಸಿಯರು ನೇಮಕವಾಗಿದ್ದು ಸನಾತನ ಧರ್ಮದ ಉಚ್ಚಧ್ಯೇಯಗಳಿಗೆ ವಿರುದ್ಧವಾಗಿ ವಿಷಯಲಂಪಟ ವೃತ್ತಿ ನಡೆಯುತ್ತಿದ್ದುದನ್ನು ತಪ್ಪಿಸುವ ನಿರೂಪವನ್ನು ಮಹಾಸ್ವಾಮಿಯವರು ೧೯೦೯ನೆಯ ಇಸವಿ ಮೇ ತಿಂಗಳಿನಲ್ಲಿ ಹೊರಡಿಸಿದರು. ಬ್ರಿಟಿಷ್ ಇಂಡಿಯಾ ಪ್ರಾಂತಗಳ ಸರ್ಕಾರಗಳವರು ಕೂಡ ನೆರವೇರಿಸಲು ಸ್ಥೈರ್ಯಮಾಡದೆ ಹೋಗಿದ್ದ ವಿಚಾರದಲ್ಲಿ ಮಹಾಸ್ವಾಮಿಯವರು ನಿರ್ಭೀತರಾಗಿ ಪ್ರವರ್ತಿಸಿ ಮಾರ್ಗದರ್ಶನ ಮಾಡಿದರೆಂದು ಮುಂತಾಗಿ ಮದರಾಸು ಮೊದಲಾದ ಪ್ರಾಂತಗಳ ಪತ್ರಿಕೆಗಳು ಕೊಂಡಾಡಿದುವು. ಅವರು ದಯಪಾಲಿಸಿದ ಆ ನಿರೂಪದಿಂದ ಮುಜರಾಯಿ ದೇವಸ್ಥಾನಗಳಲ್ಲಿ ದೇವದಾಸಿಯರನ್ನು ನೇಮಕಮಾಡಿಕೊಳ್ಳುವುದಕ್ಕೆ ಅವಕಾಶ ತಪ್ಪಿತು. ಭಾರತೀಯರನ್ನು

**"ಶ್ರೀಮನ್ಮಹಾರಾಜರವರು ಅತ್ಯಂತ ಧೈರ್ಯಶಾಲಿಗಳು"**

ಸುಲಭವಾಗಿ ಶ್ಲಾಘಿಸದ ಆಂಗ್ಲೇಯ ಮಹಾಶಯರೊಬ್ಬರು, "ಇದು ಧೈರ್ಯದ ಕೆಲಸ. ಶ್ರೀಮನ್ಮಹಾರಾಜರವರು ಅತ್ಯಂತ ಧೈರ್ಯಶಾಲಿಗಳು. ಪ್ರಬಲವಾದ ಅವರ ಸ್ಥಿರಸಂಕಲ್ಪವು ಅವರ ಈ ಕಾರ್ಯದಿಂದ ಗೋಚರವಾಗುತ್ತದೆ" ಎಂದು ಶ್ಲಾಘಿಸಿದರು.

**ವೀರಶೈವರ ವಿಜ್ಞಾಪನಾ ಪತ್ರಿಕೆ**

೧೯೦೯ನೆಯ ಇಸವಿ ಜೂನ್ ತಿಂಗಳು ೮ನೆಯ ತಾರೀಖು ವೀರಶೈವ ಪಂಗಡದ ಕೆಲವು ಮುಂದಿ ಮಹಾಶಯರುಗಳು, ತಮ್ಮ ಪಂಗಡದವರಾದ ಶ್ರೀಮಾನ್ ಕೆ. ಪಿ ಪುಟ್ಟಣ್ಣ ಶೆಟ್ಟಿಯವರನ್ನು ಮಂತ್ರಾಲೋಚನಾ ಸಭೆಯ ಸದಸ್ಯರಾಗಿ (ಕೌನ್ಸಿಲ್ ಮೆಂಬರವರಾಗಿ) ನೇಮಕಮಾಡಿದ ಮಹೋಪಕಾರಕ್ಕಾಗಿ ಮಹಾಸ್ವಾಮಿಯವರಲ್ಲಿ ತಮ್ಮ ಭಕ್ತಿವಿಶ್ವಾಸಗಳನ್ನು ವ್ಯಕ್ತಪಡಿಸಿ ಅವರಿಗೆ ವಿಜ್ಞಾಪನಾ ಪತ್ರಿಕೆಯನ್ನೊಪ್ಪಿಸಿದರು. ಅದಕ್ಕೆ ಪ್ರತ್ಯುತ್ತರವಾಗಿ ಮಹಾಸ್ವಾಮಿಯವರು ಅಪ್ಪಣೆಕೊಡಿಸಿದ ಭಾಷಣದಲ್ಲಿ "ವಿದ್ಯಾಭ್ಯಾಸ ಸೌಕರ್ಯಗಳ ಮತ್ತು ಸರ್ಕಾರಿ ಹುದ್ದೆಗಳ ರೂಪದ ಮಹಾದ್ವಾರಗಳು ಸಮಸ್ತರಿಗೂ ಏಕಪ್ರಕಾರವಾಗಿ ತೆರೆದಿವೆ. ಯಾವ ಉದ್ಯೋಗವು ಲಭಿಸಿದುದಕ್ಕಾಗಿ ನೀವುಗಳು ಸಂತೋಷಾತಿಶಯವನ್ನು ಸೂಚಿಸಿರುವಿರೋ ಆ ಉದ್ಯೋಗವೇ, ಅರ್ಹತೆ ತೋರಿಸಿಕೊಂಡವರಿಗೆ ನಮ್ಮಿಂದಲೂ ಮತ್ತು ನಮ್ಮ ಸರ್ಕಾರದವರಿಂದಲೂ ಪ್ರೋತ್ಸಾಹ ಪುರಸ್ಕಾರಗಳು ಲಭಿಸದೆಹೋಗುವುದಿಲ್ಲವೆಂಬುದಕ್ಕೆ ನಿಮ್ಮೆಲ್ಲರಿಗೂ ಅತುಳವಾಗಿ ಭರವಸೆಯನ್ನು ನೀಡುವ ನಿದರ್ಶನವಾಗಿದೆ" ಎಂದು ನುಡಿದರು.

**ಪ್ರಾಣಿಗಳ ಪ್ರದರ್ಶನ**

ಮಹಾಸ್ವಾಮಿಯವರ ಆಜ್ಞೆಯ ಮೇರೆಗೆ ಮತ್ತು ಅವರ ಕೃಪಾಶ್ರಯದಲ್ಲಿ, ೧೯೦೯ನೆಯ ಇಸವಿ ಅಕ್ಟೋಬರು ತಿಂಗಳು ೨೬ನೆಯ ಮತ್ತು ೨೭ನೆಯ ತಾರೀಖುಗಳಲ್ಲಿ ಮೈಸೂರು ನಗರದಲ್ಲಿ ಪ್ರಾಣಿಗಳ ಪ್ರದರ್ಶನವೊಂದು ನಡೆಯಿತು. ಮೈಸೂರು ನಗರದ ಬಂಡಿಯ ಕುದುರೆಗಳು, "ಪೋಲೋ" ಚೆಂಡಾಟದ ಕುದುರೆಗಳು, ನಾಯಿಗಳು, ಬಂಡಿಯ ಎತ್ತುಗಳು, ಉತ್ತಮ ರೀತಿಯಲ್ಲಿ ಪೋಷಿತವಾಗಿದ್ದ ಗಿಳಿಗಳೇ ಮುಂತಾದ ಪಕ್ಷಿಗಳ ಪಂಜರಗಳು, ಗೌಳಿಗರು ಪುಷ್ಟಿಯಾಗಿ ಪೋಷಿಸಿದ್ದ ಹಸುಗಳು, ಉತ್ತಮ ರೀತಿಯಲ್ಲಿ ಸಾಕಿದ್ದ ಕರುಗಳು, ಎಮ್ಮೆಗಳು, ಎತ್ತುಗಳು ಮೊದಲಾದುವುಗಳೆಲ್ಲ ಪ್ರದರ್ಶನಕ್ಕೆ ಬಂದಿದ್ದುವು. ಅವುಗಳಲ್ಲಿ ಅತ್ಯುತ್ತಮವಾದವು

ಗಳಿಗೆ ಬಹುಮಾನಗಳು ದೊರೆತುವು. ಗೌಳಿಗರಿಂದ ಬಂದಿದ್ದ ಹಸು ಗಳನ್ನೂ ಕರುಗಳನ್ನೂ ಪರಿಶೀಲಿಸಿ, ಬಹುಮಾನಗಳಿಗೆ ಅರ್ಹವಾದವು ಗಳನ್ನು ಗೊತ್ತುಮಾಡುವ ಪರಿಶೀಲಕರ ಮಂಡಲಿಗೆ ಆಳಿದ ಮಹಾಸ್ವಾಮಿ ಯವರಾದ ಶ್ರೀಮನ್ಮಹಾರಾಜರವರೇ ಅಧ್ಯಕ್ಷರಾಗಿದ್ದರು. ಗೌಳಿಗರು ಹಸುಗಳನ್ನೂ ಕರುಗಳನ್ನೂ ಸರಿಯಾಗಿ ನೋಡಿಕೊಳ್ಳುವುದಿಲ್ಲವೆಂಬ ಭಾವನೆಯು ಹಿಂದೆಯೇ ಸೂಚಿಸಿರುವಂತೆ ಬಾಲ್ಯದಲ್ಲಿ ಮಹಾಸ್ವಾಮಿ ಯವರ ಮನಸ್ಸಿನಲ್ಲಿ ನೆಲಸಿದ್ದುದೂ, ಅವರು ಅವುಗಳನ್ನು ಸರಿಯಾಗಿ ನೋಡಿಕೊಳ್ಳಲು, ಪ್ರದರ್ಶನ ರೂಪದಲ್ಲಿ ಪ್ರೋತ್ಸಾಹ ಕೊಡಬೇಕೆಂದು ತೋರಿದುದೂ ಮಹಾಸ್ವಾಮಿಯವರು ಆ ರೀತಿ ಕೃಪೆತೋರಿದುದಕ್ಕೆ ಕಾರಣಗಳಾಗಿರಬಹುದು. ಮಹಾಸ್ವಾಮಿಯವರ ಪರಮದಯಾಳು ಸ್ವಭಾವಕ್ಕೆ ಮತ್ತೊಂದು ನಿದರ್ಶನವನ್ನೂ ಇಲ್ಲಿ ಸೂಚಿಸಬಹುದಾಗಿದೆ. ಒಂದುಸಲ ಮಹಾಸ್ವಾಮಿಯವರು ದೊಡ್ಡದೊಂದು ನಗರದ ಪ್ರಯಾಣ ವನ್ನು ನಿಲ್ಲಿಸಿದ ಸಂದರ್ಭದಲ್ಲಿ ಅವರೊಡನೆ ಅಲ್ಲಿಗೆ ಪ್ರಯಾಣಮಾಡ ಬೇಕಾಗಿದ್ದವರೊಬ್ಬರು ಅದಕ್ಕೆ ಕಾರಣವೇನೆಂದು ಕೇಳಿದರಂತೆ. ಅದಕ್ಕೆ ಪ್ರತ್ಯುತ್ತರವಾಗಿ ಮಹಾಸ್ವಾಮಿಯವರು, "ಶಾಸ್ತ್ರಿಗಳೇ! ಅಲ್ಲಿ ಹಾಲು ಸಿಕ್ಕುವುದಿಲ್ಲ. ಅದಕ್ಕಾಗಿ ಪ್ರಯಾಣವನ್ನು ನಿಲ್ಲಿಸಿಬಿಟ್ಟೆವು" ಎಂದು ಅಪ್ಪಣೆಕೊಡಿಸಿದುದನ್ನು ಕೇಳಿ ಅವರು, "ವಿನೋದಕ್ಕಾಗಿ ಹೀಗೆ ಅಪ್ಪಣೆಯಾಗಿರಬೇಕು. ಅಂಥಾ ಮಹಾನಗರದಲ್ಲಿ ಹಾಲು ಸಿಕ್ಕುವುದಿಲ್ಲ ವೆಂದರೇನು, ಮಹಾಸ್ವಾಮಿ?" ಎಂದರು. ಆಗ ಮಹಾಪ್ರಭುಗಳು, "ವಿನೋದಕ್ಕಾಗಿ ಹೇಳಲಿಲ್ಲ, ಶಾಸ್ತ್ರಿಗಳೇ. ಅಲ್ಲಿ ಯಥೇಷ್ಟವಾಗಿ ಹಾಲೇನೋ ದೊರೆಯುತ್ತದೆ. ಆದರೆ ಅದು ದ್ರವ್ಯಾಶೆಯ ದೆಸೆಯಿಂದ ಕರುಗಳಿಗೆ ಪೂರ್ತಿಯಾಗಿ ವಂಚನೆಮಾಡಿ ಮನುಷ್ಯರಿಗೆ ಮಾರುವ ಹಾಲು. ಆದಕಾರಣ, ಅದು ನಮ್ಮ ಭಾಗಕ್ಕೆ ಹಾಲೇ ಅಲ್ಲ. ನಮ್ಮೆಲ್ಲರ ಸ್ವೀಕಾರಕ್ಕೆ ಯೋಗ್ಯವಾದ ಹಾಲು ದೊರೆಯುವಂತೆ ಏರ್ಪಾಡು ಮಾಡಿಸುವವರೆಗೆ ಸದ್ಯಕ್ಕೆ ಪ್ರಯಾಣವನ್ನು ನಿಲ್ಲಿಸಿದ್ದೇವೆ" ಎಂದು ಅಪ್ಪಣೆ ಕೊಡಿಸಿದರು. ಮಹಾಪ್ರಭುಗಳ ಹೃದಯವು ಪ್ರಾಣಿದಯಾ ಭಂಡಾರವಾಗಿದ್ದಿತು.

ಮೈಸೂರು ನಗರದಲ್ಲಿ ೧೯೩೦ನೆಯ ಇಸವಿ ನವೆಂಬರು ತಿಂಗಳಿನ ಆರಂಭದಲ್ಲಿ ಆರೋಗ್ಯಸಾಧಕ ವಸ್ತುಪ್ರದರ್ಶನವೊಂದು ನಡೆದು, ಅದೇ ತಿಂಗಳು ೫ನೆಯ ತಾರೀಖಿನ ದಿನ ಮಹಾಮಾತೃಶ್ರೀಯವರೂ, ಶ್ರೀ ಮಹಾರಾಣಿ ಶ್ರೀ ಲಕ್ಷ್ಮೀವಿಲಾಸ ಸನ್ನಿಧಾನದವರೂ, ಪ್ರಥಮ



**ಸೋದರರು**

(ದಿವಂಗತರಾದ ಮಹಾಸ್ವಾಮಿಯವರಿಬ್ಬರೂ ತಮ್ಮ ಜೊತೆಯ ಪೋಲೋ ಆಟಗಾರರೊಡನೆ)

**ದಿವಂಗತರಾದ ಶ್ರೀಮದ್ಯುವರಾಜರವರು**

(ಮಹಾಸ್ವಾಮಿಯವರು ೧೯೧೩ನೆಯ ಇಸವಿಯಲ್ಲಿ ಇಂಗ್ಲೆಂಡಿಗೆ ದಯಮಾಡಿದ್ದಾಗ್ಗೆ ತೆಗೆದ ಛಾಯಾ ಚಿತ್ರ. ಮಹಾಸ್ವಾಮಿಯವರ ಎಡಕ್ಕೆ ಕುಳಿತಿರುವವರು ರಾಜಮಂತ್ರ ಪ್ರವೀಣ ದಿವಾನ್ ಬಹದ್ದೂರ್ ಪೂರ್ಣ ರಾಘವೇಂದ್ರರಾಯರವರು)

ರಾಜಕುಮಾರಿ ಶ್ರೀಜಯಲಕ್ಷ್ಮಮ್ಮಣ್ಣಿಯವರೂ ಪ್ರದರ್ಶನಾವಲೋಕನಕ್ಕಾಗಿ ದಯಮಾಡಿದ್ದರು. ಶ್ರೀಮಾನ್ ಸರ್ದಾರ್ ಕಾಂತರಾಜ ಅರಸಿನವರು ಅವರುಗಳನ್ನು ನಾನಾ ಭಾಗಗಳಿಗೂ ಕರೆದೊಯ್ದು ಪ್ರದರ್ಶನದ ವಸ್ತುಗಳನ್ನು ತೋರಿಸಿ ವಿವರಿಸಿದರು. ಮಾರನೆಯ ದಿನ (೬-೧೧-೧೯೦೯) ಶ್ರೀ ಮದ್ಯುವರಾಜ ಶ್ರೀ ಕಂಠೀರವ ನರಸಿಂಹರಾಜ ಒಡೆಯರವರಿಂದ ಪ್ರದರ್ಶನ ಸಂಬಂಧವಾದ ಪಾರಿತೋಷಿಕ ಪ್ರದಾನ ಮಹೋತ್ಸವವು ನಡೆಯಿತು.

**ಆರೋಗ್ಯಸಾಧಕ ವಸ್ತುಪ್ರದರ್ಶನ**

ಆಳಿದ ಮಹಾಸ್ವಾಮಿಯವರೂ ಮತ್ತು ಅವರ ಸೋದರರೂ ಕುದುರೆ ಸವಾರಿಯಲ್ಲಿಯೂ, "ಪೋಲೋ", "ರಾಕೆಟ್ಸ್", "ಟೆನ್ನಿಸ್" ಮುಂತಾದ ಚೆಂಡಾಟಗಳಲ್ಲಿಯೂ ಅದ್ಭುತ ಸಾಮರ್ಥ್ಯವನ್ನೂ ವಿಸ್ಮಯಕರವಾದ ಕೌಶಲ್ಯವನ್ನೂ ಪ್ರದರ್ಶಿಸಿದವರು. "ಪೋಲೋ" ಚೆಂಡಾಟದಲ್ಲಂತೂ ಭರತಖಂಡದಲ್ಲಿ ಸುಪ್ರಸಿದ್ಧರಾಗಿದ್ದ ಆಟಗಾರರನ್ನೆಲ್ಲ ಅವರುಗಳೂ ಮತ್ತು ಅವರುಗಳ ಜೊತೆಯ ಆಟಗಾರರಿಬ್ಬರೂ ಸೇರಿ ಸೋಲಿಸುತ್ತಿದ್ದರು. ಅವರುಗಳು ಬೆಂಗಳೂರಿನಲ್ಲಿದ್ದಾಗ ನಡೆಯುತ್ತಿದ್ದ "ಪೋಲೋ" ಸ್ಪರ್ಧೆಗಳನ್ನು ನೋಡಲು ಅನೇಕ ಸಹಸ್ರ ಮಂದಿ ಪ್ರೇಕ್ಷಕರು ಕಿಕ್ಕಿರಿದು ತುಂಬುತ್ತಿದ್ದರು. ಸಿಕಂದರಾಬಾದಿನಿಂದ ಬಂದಿದ್ದ—ಭರತಖಂಡದಲ್ಲಿ ಪ್ರಖ್ಯಾತರಾಗಿ ಅದುವರೆಗೆ ಸೋಲನ್ನರಿಯದಿದ್ದ—ಆಟಗಾರರು ಕೂಡ ಅವರೊಡನೆ ಆಡಿ ಜಯಶಾಲಿಗಳಾಗಲಿಲ್ಲ. ಸಿಕಂದರಾಬಾದಿನ "ಪೋಲೋ" ಆಟಗಾರರು ಸೋತುದನ್ನು ಅಂದಿನವರು ನಂಬುವುದೇ ಕಷ್ಟವಾಯಿತು. ಮೈಸೂರು ನಗರದಲ್ಲಿದ್ದ "ಪೋಲೋ" ಚೆಂಡಾಟದ ಮೈದಾನವು ಭರತಖಂಡದಲ್ಲಿದ್ದವುಗಳಲ್ಲೆಲ್ಲ ಅತ್ಯುತ್ತಮವಾಗಿದ್ದುದಲ್ಲದೆ, ಮಹಾಸ್ವಾಮಿಯವರು "ಪೋಲೋ" ಆಟದಲ್ಲಿ ತೋರಿಸುತ್ತಿದ್ದ ಸಾಮರ್ಥ್ಯವೂ ಕೌಶಲ್ಯವೂ ಪ್ರಪಂಚದ ನಾನಾ ದೇಶಗಳವರಿಗೆ ವಿಸ್ಮಯವನ್ನುಂಟುಮಾಡಿತು. ಮಹಾಸ್ವಾಮಿಯವರು ೧೯೦೨ನೆಯ ಇಸವಿಯಲ್ಲಿ "ಪೋಲೋ" ಚೆಂಡಾಟವಾಡುತ್ತಿದ್ದಾಗ ಕುದುರೆಯಿಂದ ಕೆಳಕ್ಕೆ ಬಿದ್ದು ಪ್ರಜ್ಞೆ ತಪ್ಪಿದುದೂ, ಎಷ್ಟೋ ಘಂಟೆಗಳ ಕಾಲ ಪ್ರಜ್ಞಾಲಾಭವಾಗದೆ ಅನೇಕ ದಿನಗಳ ಕಾಲ ರುಗ್ಣಶಯ್ಯೆಯಲ್ಲಿ ಮಲಗಿದ್ದುದೂ ನಿಜ. ಆದರೆ ಆ ಬಗೆಯ ಅನಾಹುತವು ಸಂಭವಿಸಿದುದಕ್ಕೆ ಅವರು ರಭಸದಿಂದ

**ಆಟಗಳಲ್ಲಿ ಸಾಮರ್ಥ್ಯ**

ಚೆಂಡನ್ನು ಹೊಡೆಯ ಹೊರಟಾಗ ಕುದುರೆಯು ಅತ್ಯಂತ ವೇಗವಾಗಿ ಓಡುತ್ತಿರುವಲ್ಲಿ, ಕುದುರೆಯ ಜೀನಿನ ಪಟ್ಟಿಯು ಸಡಿಲವಾಗಿ ಆಯ ತಪ್ಪಿದುದೇ ಕಾರಣ. ೧೯೦೮ನೆಯ ಇಸವಿಯಲ್ಲಿ ಮಹಾಸ್ವಾಮಿಯವರು ತಮ್ಮ ಜೊತೆಯ ಆಟಗಾರರೊಡನೆ ಭರತಖಂಡದಲ್ಲಿ ಪ್ರಸಿದ್ಧರಾಗಿದ್ದ "ಪೋಲೋ" ಆಟಗಾರರನ್ನೆಲ್ಲ ಸೋಲಿಸಿ, "ಕಪ್ಪು"ಗಳೆಂಬ ರಜತಾಲುಕ ಗಳನ್ನು ಗೆದ್ದು ಪ್ರಖ್ಯಾತಿಹೊಂದಿದರು. ೧೯೧೨ನೆಯ ಇಸವಿಯಲ್ಲಿ, "ಷಾರ್ಟ್ ಹಿಟ್", "ಲಾಂಗ್ ಹಿಟ್", "ಡ್ರಿಬ್ಲ್" ಮುಂತಾದ ಆಟದ ವಿಧಾನಗಳಲ್ಲಿ ಪ್ರಸಿದ್ಧರಾಗಿ ಪ್ರಚಂಡರಾದ "ಪೋಲೋ" ಆಟಗಾರ ರಾಗಿದ್ದ "ಗೋಲ್ಕೊಂಡ ಟೀಮ್" ಎಂಬ ಹೆಸರಿನ ಆಟಗಾರರ ಗುಂಪನ್ನು ಮಹಾಸ್ವಾಮಿಯವರೂ, ಅವರ ಸೋದರರೂ, ಅವರ ಜೊತೆಯ ಆಟ ಗಾರರಾಗಿದ್ದ ಶ್ರೀಮಾನ್ ಸರ್ದಾರ್ ಗೋಪಾಲರಾಜ ಅರಸಿನವರೂ ಮತ್ತು ಶ್ರೀಮಾನ್ ಬನ್ನಿಸಿಂಗರವರೂ ಸೇರಿ ಸೋಲಿಸಿದರು. "ಡ್ರಿಬ್ಲ್" ಎಂಬ ಆಟದ ವಿಧಾನದಲ್ಲಿ ಆಳಿದ ಮಹಾಸ್ವಾಮಿಯವರದು ಅತ್ಯಂತ ಶ್ರೇಷ್ಠ ತರಗತಿಯ ಕೌಶಲ್ಯ. ಶ್ರೀ ಚಾಮರಾಜೇಂದ್ರ ಒಡೆಯರವರು ಅನೇಕ ಜೂಜಿನ ಕುದುರೆಗಳನ್ನು ಸಾಕಿಸಿ, "ಚಾಮುಂಡಿ" ಎಂಬ ಸಂಕೇತನಾಮದಿಂದ ಜೂಜಿಗೆ ಕಳುಹಿಸುತ್ತಿದ್ದರು. ಆಳಿದ ಮಹಾಸ್ವಾಮಿ ಯವರಾದ ಶ್ರೀಮನ್ಮಹಾರಾಜರವರೂ ಸಹ, ತಮ್ಮ ಪೂಜ್ಯಪಾದರಂತೆಯೇ ಪ್ರೀತಿಯಿಂದ ಅನೇಕ ಕುದುರೆಗಳನ್ನು ಸಾಕಿಸಿದುದಲ್ಲದೆ, ೧೯೦೩ನೆಯ ಇಸವಿಯ ಸುಮಾರಿನಲ್ಲಿ ಜಂಖಾನ ಕುದುರೆ ಜೂಜುಗಳಲ್ಲಿ ತಮ್ಮ ಕುದುರೆ ಗಳಮೇಲೆ ಸವಾರಿಮಾಡುತ್ತಿದ್ದರೆಂದೂ, ಅನೇಕವೇಳೆ ಜಯಶೀಲರಾಗಿ "ಕಪ್ಪು" ಗಳೆಂಬ ರಜತಾಲುಕಗಳನ್ನು ಗೆದ್ದಿರುವರೆಂದೂ, ಆಂಗ್ಲೇಯ ದೊಡ್ಡಮನುಷ್ಯರೊಬ್ಬರು ಹೆಮ್ಮೆಯಿಂದ ತಿಳಿಸಿದ್ದಾರೆ. ಮಹಾಸ್ವಾಮಿ ಯವರು ಕುದುರೆ ಜೂಜಿನಲ್ಲಿ ತೀವ್ರಾಸಕ್ತಿಯನ್ನು ವಹಿಸಿ, ಪಣವಾಗಿ ತಮ್ಮ ನಾಮಾಂಕಿತದ ರಜತಾಲುಕವನ್ನಿಟ್ಟು ಪ್ರೋತ್ಸಾಹಿಸುತ್ತಿದ್ದರು. ಹಿಂದೆ "ಪೋಲೋ" ಚೆಂಡಾಟದಲ್ಲಿಯೂ ಕುದುರೆ ಜೂಜಿನಲ್ಲಿಯೂ ಗೆದ್ದ ಅನೇಕಾನೇಕ ರಜತ ಪಾತ್ರೆಗಳನ್ನೆಲ್ಲ ಕರಗಿಸಿ, ಮನೋಹರವಾದ ಮಾದರಿಯ ಸ್ಮಾರಕವಾಗಿ ರೂಪಾಂತರಗೊಳಿಸಿ ಅರಮನೆಯಲ್ಲಿಡಿಸಿದ್ದಾರೆ. "ರಾಕೆಟ್ಸ್" ಚೆಂಡಾಟದಲ್ಲಂತೂ ಮಹಾಸ್ವಾಮಿಯವರನ್ನು ಜಯಿಸಿ ದವರೇ ಇರಲಿಲ್ಲ. ಒಂದೊಂದು ಸಲಕ್ಕೆ ಅವರು ಮೂರು ನಾಲ್ಕು "ರಬ್ಬರ್ಸ್" ಪ್ರಮಾಣದಲ್ಲಿ ಆ ಆಟವನ್ನಾಡತಕ್ಕ ಸಾಮರ್ಥ್ಯ ವಂತರಾಗಿದ್ದರು. ಹಿಂದೆ ಆ ಆಟದಲ್ಲಿ ಪ್ರಸಿದ್ಧರಾಗಿದ್ದ ಕರ್ನಲ್

ಜೋನ್ಸ್‌ರವರಂತಹವರು ಕೂಡ ಅವರೊಡನೆ ಆಟವಾಡಬೇಕಾದರೆ ತಲ್ಲಣಗೊಳ್ಳುತ್ತಿದ್ದರು. "ರಾಕೆಟ್ಸ್" ಚೆಂಡಾಟದಲ್ಲಿ ಪ್ರಖ್ಯಾತರಾಗಿದ್ದ ಕರ್ನಲ್ ಸಿ. ಎಚ್. ಬೆನ್ನೆನ್‌ರವರು (ಅವರು ಮದರಾಸು ಸರ್ಕಾರದ ಸರ್ಜನ್ ಜನರಲ್ ಅಧಿಕಾರದಲ್ಲಿದ್ದವರು), ಪುದುಕೋಟೆಯ ಹಿಂದಿನ ಮಹಾರಾಜರು, ಎಲಿಯರಾಜರು, ಇವರಾರಿಗೂ ಅವರನ್ನು ಸೋಲಿಸುವುದು ಸಾಧ್ಯವಾಗಲಿಲ್ಲ. ಈ "ರಾಕೆಟ್ಸ್" ಚೆಂಡಾಟದಲ್ಲಿ (ಹಿಂದೆ ಬ್ರಿಟಿಷ್ ಸಮ್ರಾಟರಾಗಿದ್ದ ಎಂಟನೆಯ ಎಡ್ವರ್ಡ್ ಪ್ರಭುಗಳಾದ) ವಿಂಡ್ಸರ್ ಡ್ಯೂಕರವರು ಪ್ರಪಂಚದಲ್ಲೇ ಪ್ರಖ್ಯಾತರು. ೧೯೨೨ನೆಯ ಇಸವಿಯಲ್ಲಿ ಅವರು ಪ್ರಿನ್ಸ್ ಆಫ್ ವೇಲ್ಸರವರಾಗಿ ಮೈಸೂರು ಸಂಸ್ಥಾನಕ್ಕೆ ದಯಮಾಡಿದ್ದಾಗ್ಗೆ ಅವರೂ ಸಹ ಮಹಾಸ್ವಾಮಿಯವರೊಡನೆ "ರಾಕೆಟ್ಸ್" ಆಟ ಆಡಿ ಸೋತರು. ಆದರೂ ಅವರು ಸಂತೋಷದಿಂದ ಕೂಡಿ, ಆಟದಲ್ಲಿ ಗೆಲ್ಲುವುದಕ್ಕಾಗಿಯೇ ಮತ್ತೊಮ್ಮೆ ಮೈಸೂರಿಗೆ ಬರುವುದಾಗಿ ಹೇಳಿ ನಕ್ಕರಂತೆ.

**ಲಾರ್ಡ್ ಮಿಂಟೋ ರವರ ಆಗಮನ**

ಲಾರ್ಡ್ ಕರ್ಜನ್‌ರವರ ತರುವಾಯ ವೈಸ್ರಾಯಿಯವರಾದ ಲಾರ್ಡ್ ಮಿಂಟೋರವರು ೧೯೦೯ನೆಯ ಇಸವಿ ನವೆಂಬರು ತಿಂಗಳಿನಲ್ಲಿ ಮೈಸೂರು ಸಂಸ್ಥಾನಕ್ಕೆ ತಮ್ಮ ಪತ್ನೀ ಸಮೇತರಾಗಿ ದಯಮಾಡಿದರು. ಬೆಂಗಳೂರಿನಲ್ಲಿರುವ ಕಣ್ಣಾಸ್ಪತ್ರೆಯು ಅವರ ನಾಮಾಂಕಿತದಲ್ಲಿ ನಿರ್ಮಿತವಾಗಿದೆ.

ಶ್ರೀಮದ್ಯುವರಾಜ ಶ್ರೀ ಕಂಠೀರವ ನರಸಿಂಹರಾಜ ಒಡೆಯರ್ ಬಹದ್ದೂರರವರಿಗೆ ಶ್ರೀಮಾನ್ ದಳವಾಯಿ ದೇವರಾಜ ಅರಸಿನವರ

**ಶ್ರೀ ಕಂಠೀರವ ನರಸಿಂಹರಾಜ ಒಡೆಯರವರ ಉಪನಯನ ಮತ್ತು ವಿವಾಹ ಮಹೋತ್ಸವಗಳು**

ಪುತ್ರಿಯವರಾದ ಶ್ರೀ ಕೆಂಪುಚಲುವಾಜಮ್ಮಣ್ಣಿಯವರೊಡನೆ ೧೯೧೦ನೆಯ ಇಸವಿ ಜೂನ್ ೧೬ನೆಯ ತಾರೀಖಿನ ದಿನ ಅತ್ಯಂತ ವಿಜೃಂಭಣೆಯಿಂದ ವಿವಾಹ ಮಹೋತ್ಸವವು ನಡೆಯಿತು. ಅದರ ಅಂಗವಾಗಿ ಅದರ ಹಿಂದಿನ ದಿನವೇ ಉಪನಯನ ಮಹೋತ್ಸವವೂ ನೆರವೇರಿತು. ೧೯೧೦ನೆಯ ಇಸವಿ ಜೂನ್ ೧೪ನೆಯ ತಾರೀಖಿನ ದಿನ ರಾತ್ರಿ ಸುಮಾರು ೧೦ ಘಂಟೆಯ ವೇಳೆಗೆ ದೊಡ್ಡ ಕೆರೆಯಿಂದ ಕನ್ನಡಿ ಕಲಶವನ್ನು ತಂದರು. ಮೂರನೆಯ ದಿನ (೧೯೧೦ನೆಯ ಇಸವಿ ಜೂನ್ ೧೬ನೆಯ ತಾರೀಖು ಗುರುವಾರ) ಬೆಳಗ್ಗೆ

ಹೊಸ ಅರಮನೆಯ ಕಲ್ಯಾಣ ಮಂಟಪದಲ್ಲಿ ಶ್ರೀ ಮದ್ಯುವರಾಜ ಶ್ರೀ ಕಂಠೀರವ ನರಸಿಂಹರಾಜ ಒಡೆಯರವರ ಉಪನಯನ ಮಹೋತ್ಸವವು ನಡೆಯಿತು. ಆಳಿದ ಮಹಾಸ್ವಾಮಿಯವರಾದ ಶ್ರೀಮನ್ಮಹಾರಾಜರವರೂ, ಶ್ರೀ ಮಹಾರಾಣಿಯವರಾದ ಶ್ರೀ ಲಕ್ಷ್ಮೀವಿಲಾಸ ಸನ್ನಿಧಾನದವರೂ ಹಸೆಯ ಮೇಲೆ ಮಂಡಿಸಿ ಅವರ ಉಪನಯನ ಮಹೋತ್ಸವವನ್ನು ನೆರವೇರಿಸಿದರು. ಉಪನಯನವು ನಡೆಯುತ್ತಿದ್ದ ರಜತಮಂಟಪದ ಬಲಭಾಗದಲ್ಲಿ ಅರಸು ಸಂಗಡದ ಮಹಾಶಯರುಗಳೂ, ಮುಂಬಯಿ, ಮದರಾಸು ಮುಂತಾದ ಪ್ರಾಂತಗಳಿಂದ ಆಹ್ವಾನಿತರಾಗಿದ್ದ ಅತಿಥಿಗಳೂ ಮಂಡಿಸಿದ್ದರು. ಎಡಭಾಗದಲ್ಲಿ ಅತಿಥಿಗಳಾಗಿದ್ದ ಇಬ್ಬರು ಮಹಾರಾಜರುಗಳೂ, ಬರೋಡೆ, ಕಾಶ್ಮೀರ ಮತ್ತು ಪುದುಕೋಟೆ ಸಂಸ್ಥಾನಗಳ ಪ್ರತಿನಿಧಿಗಳೂ, ದಿವಾನ್‌ರವರೇ ಮುಂತಾದ ಅಧಿಕಾರಿಗಳೂ ಮಂಡಿಸಿದ್ದರು. ಮಂಟಪದೆದುರಿಗೆ ಅಗ್ನಿಕುಂಡವಿದ್ದಿತು. ಪುರೋಹಿತರುಗಳು ಮಂತ್ರಗಳನ್ನು ಹೇಳುತ್ತಿದ್ದರು. ಉಪನಯನ ಮಹೋತ್ಸವವು ಪೂರೈಸುವವರೆಗೂ ಅರಮನೆಯ ಬ್ಯಾಂಡಿನವರೂ ನಾದಸ್ವರದವರೂ ವಾದ್ಯಗಳನ್ನು ನುಡಿಸುತ್ತಿದ್ದರು. ಶ್ರೀಮದ್ಯುವರಾಜ ಶ್ರೀ ಕಂಠೀರವ ನರಸಿಂಹರಾಜ ಒಡೆಯರವರಿಗೆ ಮಠಗಳಿಂದಲೂ ಸಂಸ್ಥಾನಾಧೀಶ್ವರರುಗಳಿಂದಲೂ ಬಂದಿದ್ದ ಖಿಲ್ಲತ್ತುಗಳು ಸಮರ್ಪಿತವಾದನಂತರ ಸಭಿಕರಿಗೆ ಪುಷ್ಪಹಾರ ತಾಂಬೂಲಾದಿಗಳು ವಿನಿಯೋಗವಾಗಿ ಸಭೆಯು ಮುಕ್ತಾಯವಾಯಿತು.

ಆ ದಿನ ಸಾಯಂಕಾಲ ಶ್ರೀಮದ್ಯುವರಾಜ ಶ್ರೀ ಕಂಠೀರವ ನರಸಿಂಹರಾಜ ಒಡೆಯರವರ ಕಾಶೀಯಾತ್ರೆಯ ಉತ್ಸವವನ್ನು ನೋಡಲು ಐವತ್ತು ಸಾವಿರ ಮಂದಿಗಳಿಗಿಂತಲೂ ಅಧಿಕ ಸಂಖ್ಯೆಯ ಪ್ರಜೆಗಳು ಅರಮನೆಯ ಬಳಿಯಲ್ಲಿಯೂ ಮಾರ್ಗಗಳ ಉಭಯ ಪಾರ್ಶ್ವಗಳಲ್ಲಿಯೂ ಕಿಕ್ಕಿರಿದು ತುಂಬಿದ್ದರು. ಮೆರೆವಣಿಗೆಯ ಮುಂಭಾಗದಲ್ಲಿ ಚಿನ್ನದ ಅಂಬಾರಿಗಳಿಂದ ಕಂಗೊಳಿಸುತ್ತಿದ್ದ ಆರು ಆನೆಗಳೂ, ಅರಮನೆಯ ಬಾರುಸಿಪಾಯಿಗಳೂ, ರಾಜ ಚಿಹ್ನೆಗಳನ್ನೂ ಬಿರುದು ಬಾವಲಿಗಳನ್ನೂ ಧರಿಸಿದ್ದವರೂ, ವಾದ್ಯಗಳನ್ನು ನುಡಿಸುತ್ತಿದ್ದವರೂ, ಅತಿಥಿಗಳೂ, ಅಧಿಕಾರಿಗಳೂ ಮುಂದುವರಿದ ಬಳಿಕ, ಕೆಂಪುಬನಾತಿನ ನಡೆಮುಡಿಯ ಮೇಲೆ ಆಳಿದ ಮಹಾಸ್ವಾಮಿಯವರಾದ ಶ್ರೀಮನ್ಮಹಾರಾಜರವರೂ, ಶ್ರೀಮದ್ಯುವರಾಜ ಶ್ರೀ ಕಂಠೀರವ ನರಸಿಂಹರಾಜ ಒಡೆಯರವರೂ ಪಾದಚಾರಿಗಳಾಗಿ ದಯಮಾಡಿದರು. ಮಳೆಯು ಬರುವಂತಿದ್ದುದರಿಂದ ಮೆರೆವಣಿಗೆಯು ಬಹು ಬೇಗ ಬೇಗ ಮುಂದುವರಿಯುತ್ತಿದ್ದುದನ್ನು ಕಂಡು

ಮಹಾಸ್ವಾಮಿಯವರು ಅದು ನಿಧಾನವಾಗಿ ಮುಂದುವರಿಯಬೇಕೆಂದು ಆಜ್ಞಾಪಿಸಿದರು; ಅದರಿಂದ ಅಲ್ಲಿ ನೆರೆದಿದ್ದ ಪ್ರಜೆಗಳಿಗೆಲ್ಲ ಬಹಳ ಸಂತೋಷವುಂಟಾಯಿತು. ಮೆರೆವಣಿಗೆಯು ಅರಮನೆಗೆ ಹಿಂತಿರುಗುವ ವೇಳೆಗೆ ಮಳೆಯು ಪ್ರಾರಂಭವಾಯಿತು. ಅರಮನೆಯ ಬಾಗಿಲಿನ ಬಳಿ ಶ್ರೀಮದ್ಯುವರಾಜ ಶ್ರೀ ಕಂಠೀರವ ನರಸಿಂಹರಾಜ ಒಡೆಯರವರಿಗೆ ಆರತಿಯಾಯಿತು.

ಮಾರನೆಯ ದಿನ ಮಧ್ಯಾಹ್ನದಮೇಲೆ (೧೭-೬-೧೯೧೦) ಜಗನ್ಮೋಹನ ಪ್ರಾಸಾದದಲ್ಲಿ ಶ್ರೀಮದ್ಯುವರಾಜ ಶ್ರೀ ಕಂಠೀರವ ನರಸಿಂಹರಾಜ ಒಡೆಯರವರಿಗೂ ಶ್ರೀ ಕೆಂಪುಚಲುವಾಜಮ್ಮಣ್ಣಿಯವರಿಗೂ ವೈಭವ ವಿಜೃಂಭಣೆಗಳಿಂದ ವಿವಾಹವು ನಡೆಯಿತು. ಆ ದಿನ ಅಂದವಾದ ರಜತಕರಂಡಗಳಲ್ಲಿ ಅನೇಕ ವಿಜ್ಞಾಪನಾ ಪತ್ರಿಕೆಗಳು ಶ್ರೀಮದ್ಯುವರಾಜ ಶ್ರೀ ಕಂಠೀರವ ನರಸಿಂಹರಾಜ ಒಡೆಯರವರಿಗೆ ಸಮರ್ಪಿತವಾದುವು. ಶಿವಮೊಗ್ಗ ಡಿಸ್ಟ್ರಿಕ್ಟಿನವರು ತಮ್ಮ ವಿಜ್ಞಾಪನಾ ಪತ್ರಿಕೆಯನ್ನು ಮನೋಹರವಾದ ಶ್ರೀಗಂಧದ ಕರಂಡದಲ್ಲಿ ಸಮರ್ಪಿಸಿದರು. ಆ ಕರಂಡದ ಒಂದು ಭಾಗದಲ್ಲಿ ಗಿರಿಜಾಕಲ್ಯಾಣದ ದೃಶ್ಯವೂ, ಮತ್ತೊಂದು ಕಡೆ ಗೇರುಸೊಪ್ಪ ಜಲಪಾತದ ದೃಶ್ಯವೂ ಚಿತ್ತಾಕರ್ಷಕವಾಗಿ ಕೆತ್ತಲ್ಪಟ್ಟಿದ್ದುವು. ವಿಜ್ಞಾಪನಾ ಪತ್ರಿಕೆಗಳಿಗೆಲ್ಲ ಸಮಷ್ಟಿಯಾಗಿ ಅಪ್ಪಣೆಕೊಡಿಸಿದ ಪ್ರತ್ಯುತ್ತರದಲ್ಲಿ ಶ್ರೀಮದ್ಯುವರಾಜ ಶ್ರೀಕಂಠೀರವ ನರಸಿಂಹರಾಜ ಒಡೆಯರವರು, "ನಮ್ಮ ಅಗ್ರಜರಿಗೂ ನಮಗೂ ಇರುವ ಪ್ರೀತಿಯು ಸಾಮಾನ್ಯವಾದುದಲ್ಲವೆಂದು ನಿಸ್ಸಂದೇಹವಾಗಿ ಸೂಚಿಸಲಿಚ್ಛಿಸುವೆವು. ಮುಂದೆ ಶ್ರೀಮನ್ಮಹಾರಾಜರವರಿಗೂ ನಮ್ಮ ಜನ್ಮಭೂಮಿಯಾದ ಮೈಸೂರು ಸಂಸ್ಥಾನಕ್ಕೂ ಸೇವೆಯನ್ನು ಸಮರ್ಪಿಸುವುದೇ ಆಂತರಿಕವಾದ ನಮ್ಮ ಅಭಿಲಾಷೆಯಾಗಿರುತ್ತದೆ. ಪೂಜ್ಯಪಾದರಾದ ನಮ್ಮ ತೀರ್ಥರೂಪರವರ ಮೇಲ್ಪಂಕ್ತಿಯನ್ನೂ, ನಮ್ಮ ಸಂಸ್ಥಾನದ ಈಗಿನ ಶ್ರೀಮನ್ಮಹಾರಾಜರವರಾದ ನಮ್ಮ ಪ್ರಿಯ ಸಹೋದರರ ಮೇಲ್ಪಂಕ್ತಿಯನ್ನೂ ಗಮನದಲ್ಲಿಟ್ಟುಕೊಂಡು ಅವಕ್ಕನುಸಾರವಾಗಿ ನಮ್ಮ ನಡೆನುಡಿಗಳನ್ನು ರೂಪಿಸಿಕೊಳ್ಳುವಂತಾಗಲೆಂದು ಹಾರೈಸುವೆವು" ಎಂದು ಅಪ್ಪಣೆ ಕೊಟ್ಟರು.

೧೯೧೦ನೆಯ ಇಸವಿ ಜೂನ್ ತಿಂಗಳು ೨೫ನೆಯ ತಾರೀಖಿನ ರಾತ್ರಿ ನೂತನ ವಧೂವರರ ಮೆರೆವಣಿಗೆಯು ನಡೆಯಿತು. ಅಂದು ಸಾಯಂಕಾಲ ಆರು ಘಂಟೆಗೆ ಮೆರೆವಣಿಗೆಯ ಜೊತೆಯಲ್ಲಿ ತೆರಳಲು ದಿವಾನ್‌ರವರೇ ಮುಂತಾದ ಅನೇಕ ಅಧಿಕಾರಿಗಳು ಜಗನ್ಮೋಹನ ಪ್ರಾಸಾದದ ಬಳಿಯಲ್ಲಿ

ಸೇರಿದರು. ಮೆರವಣಿಗೆಯಲ್ಲಿ ಮೊದಲು ವಿವಿಧ ವರ್ಣಗಳ ವಸ್ತ್ರಗಳಿಂದ ಅಲಂಕೃತವಾದ ಒಂಟೆಗಳೂ, ಅವುಗಳ ಹಿಂದೆ ಕಿಂಕಾಪಿನ ವಸ್ತ್ರಗಳಿಂದ ಅಲಂಕೃತವಾಗಿ ಸೊಂಡಿಲುಗಳಲ್ಲಿ ಪುಷ್ಪಮಾಲಿಕೆಗಳನ್ನು ಹಿಡಿದು ಕೊರಳಿನ ಘಂಟಾಮಾಲಿಕೆಗಳ ಧ್ವನಿಯಿಂದ ಮಂದಗಮನದಲ್ಲಿ ಮುಂದೆ ಸಾಗುತ್ತಿದ್ದ ಆನೆಗಳೂ, ಅವುಗಳ ಹಿಂದೆ ವಸ್ತ್ರಾಭರಣಗಳಿಂದಲಂಕೃತವಾಗಿದ್ದ ಕುದುರೆಗಳೂ, ನಡೆದುವು. ಅವುಗಳ ಹಿಂದೆ ಅಶ್ವಾರೋಹಿ ಸೈನಿಕರೂ, ಇತರ ಸೈನಿಕರೂ, ಬ್ಯಾಂಡ್ ಮುಂತಾದ ವಾದ್ಯಗಳನ್ನು ನುಡಿಸುತ್ತಿದ್ದವರೂ, ನಾದಸ್ವರದವರೂ, ದರ್ಬಾರು ಉಡುಪನ್ನು ಧರಿಸಿದ್ದ ಅಧಿಕಾರಿಗಳೇ ಮುಂತಾದವರೂ ಸಾಲಿಟ್ಟು ಮುಂದುವರಿಯುತ್ತಿದ್ದರು. ಕಿಂಕಾಪಿನಿಂದಲೂ, ಆಭರಣಗಳಿಂದಲೂ ಮನೋಹರವಾಗಿ ಅಲಂಕೃತವಾಗಿದ್ದ ಉತ್ತಮ ಗಜದಮೇಲೆ ಚಿನ್ನದ ಅಂಬಾರಿಯಲ್ಲಿ ನೂತನ ವಧೂವರರೂ, ಇನ್ನೊಂದರಮೇಲೆ ಚಿನ್ನದ ಅಂಬಾರಿಯಲ್ಲಿ ಆಳಿದ ಮಹಾಸ್ವಾಮಿಯವರಾದ ಶ್ರೀಮನ್ಮಹಾರಾಜರವರೂ ಚಿತ್ತೈಸುತ್ತಿದ್ದರು. ನೂತನ ದಂಪತಿಗಳೂ, ಮಹಾಸ್ವಾಮಿಯವರೂ ಧರಿಸಿದ್ದ ಅಮೂಲ್ಯ ವಸ್ತ್ರಾಭರಣಗಳು ವಿವಿಧ ವರ್ಣರಂಜಿತಗಳಾದ ಹಗಲುಬತ್ತಿಗಳ ಮತ್ತು ಬೆಳು ದೀವಿಗೆಗಳ ಬೆಳಕಿನಲ್ಲಿ ಥಳಥಳಿಸುತ್ತಿದ್ದುವು. ಆ ಎರಡು ಆನೆಗಳ ದಂತಗಳಿಂದಲೂ ಪುಷ್ಪಮಾಲಿಕೆಗಳು ತೂಗಾಡುತ್ತಿದ್ದುವು. ಅವುಗಳ ಹಿಂದೆ ಚಿನ್ನದ ಅಂಬಾರಿಗಳನ್ನು ಬಿಗಿದಿದ್ದ ಎರಡು ಆನೆಗಳು ಸಾಗುತ್ತಿದ್ದುವು. ಅವುಗಳ ಹಿಂದೆ ಸೈನಿಕರೂ, ಅವರ ಹಿಂದೆ ಮಂಗಳ ದ್ರವ್ಯಗಳನ್ನು ಧರಿಸಿದ್ದ ಸುಮಂಗಲಿಯರೂ, ಅವರ ಹಿಂದೆ ಅಂಗರಕ್ಷಕ ಸೈನಿಕರೂ ನಡೆಯುತ್ತಿದ್ದರು. ಮಾರ್ಗಗಳ ಉಭಯ ಪಾರ್ಶ್ವಗಳಲ್ಲಿಯೂ ಕಿಕ್ಕಿರಿದು ತುಂಬಿದ್ದ ಪ್ರಜೆಗಳು ಆನಂದಭರಿತರಾಗಿ ಕೋಲಾಹಲ ಮಾಡುತ್ತಿದ್ದರು. ಮೆರವಣಿಗೆಯು ಅರಮನೆಯ ಬಳಿಗೆ ಬಂದು ನಿಂತಾಗ ಪ್ರೇಕ್ಷಕರು ಮಾಡಿದ ಕೋಲಾಹಲದ ಧ್ವನಿಯು ಗಗನವನ್ನೇ ತುಂಬಿತು. ಅರಮನೆಯ ಬಳಿಯಲ್ಲಿ ಸುಮಂಗಲಿಯರು ಆರತಿಮಾಡಿದ ಬಳಿಕ ನೂತನ ದಂಪತಿಗಳೂ ಆಳಿದ ಮಹಾಸ್ವಾಮಿಯವರೂ ಅರಮನೆಯೊಳಕ್ಕೆ ಚಿತ್ತೈಸಿದರು.

**"ಕರ್ನಲ್" ಪ್ರಶಸ್ತಿ**

ಏಳನೆಯ ಎಡ್ವರ್ಡ್ ಪ್ರಭುಗಳಾದ ಮೇಲೆ ಐದನೆ ಜಾರ್ಜ್ ಪ್ರಭುಗಳವರು ೧೯೧೦ನೆಯ ಇಸವಿ ಮೇ ತಿಂಗಳು ೭ನೆಯ ತಾರೀಖಿನ ದಿನ ಪಟ್ಟಕ್ಕೆ ಬಂದರು. ಆಳಿದ ಮಹಾಸ್ವಾಮಿಯವರನ್ನು ಅವರು ಜೂನ್ ತಿಂಗಳಿನಲ್ಲಿ ಬ್ರಿಟಿಷ್ ಸೈನ್ಯದಲ್ಲಿ "ಕರ್ನಲ್" ಎಂಬ ಗೌರವ ಪದವಿಗೆ ನೇಮಕಮಾಡಿ ಸನ್ಮಾನಿಸಿದರು.

ಶ್ರೀಮದ್ಯುವರಾಜ ಶ್ರೀ ಕಂಠೀರವ ನರಸಿಂಹರಾಜ ಒಡೆಯರವರ ವಿವಾಹ ಪ್ರಯುಕ್ತವಾದ ಸಂತೋಷ ಸೂಚನಾರ್ಥವಾಗಿಯೂ ಆಳಿದ ಮಹಾಸ್ವಾಮಿಯವರಾದ ಶ್ರೀಮನ್ಮಹಾರಾಜ

**ಅಭಿನಂದನ ಸೂಚನೆ**

ರವರ ವರ್ಧಂತ್ಯುತ್ಸವ ಪ್ರಯುಕ್ತವಾದ ಸಂತೋಷಾರ್ಥವಾಗಿಯೂ ನಡೆದ ಔತಣ ಕೂಟದಲ್ಲಿ (೧೯೧೦ನೆಯ ಇಸವಿ ಜೂನ್ ೨೭ನೆಯ ತಾರೀಖಿನ ದಿನ) ಬ್ರಿಟಿಷ್ ರೆಸಿಡೆಂಟರವರಾಗಿದ್ದ ಶ್ರೀಮಾನ್ ಎಸ್. ಎಂ. ಫ್ರೇಸರವರು ಮಾಡಿದ ಭಾಷಣದಲ್ಲಿಯ ಕೆಲವು ಮಾತುಗಳನ್ನು ನೋಡಿದರೆ, ಅವರ ಹೃದಯವನ್ನೇ ನಮ್ಮೆದುರಿಗೆ ಎತ್ತಿಹಿಡಿದಂತೆ ತೋರುತ್ತದೆ. ಅವರು ಹೇಳಿದುದೇನೆಂದರೆ: ''........ಶ್ರೀಮದ್ಯುವರಾಜರವರು ತಮ್ಮ ಸದ್ಗುಣಗಳ ಪ್ರಭಾವದಿಂದಲೂ ಮತ್ತು ಪ್ರಜೆಗಳ ಭಕ್ತಿವಿಶ್ವಾಸಗಳಿಗೆ ಪಾತ್ರರಾಗಿ ಅವರ ಹೆಮ್ಮೆಗೆ ಆಕರರಾಗಿರುವ ಶ್ರೀಮನ್ಮಹಾರಾಜರವರ ಸಹೋದರರೆಂಬ ಕಾರಣದಿಂದಲೂ ಸಮಸ್ತರಿಗೂ ಪ್ರಿಯರಾಗಿ ಅಚ್ಚುಮೆಚ್ಚಾಗಿದ್ದಾರೆ....ಅವರೀರ್ವರ ಶಿಕ್ಷಣವೂ ಫಲಪ್ರದವಾಗುವಂತೆ ನಡೆದುದಕ್ಕೆ ಅವರ ಮಾತೃಶ್ರೀಯವರೇ ಮುಖ್ಯ ಕಾರಣರು. ಅವರು ಸಂಸ್ಥಾನದಲ್ಲಿ ರೀಜೆಂಟ್ ಪದವಿಯನ್ನಲಂಕರಿಸಿದ್ದಾಗ ಅವರೊಡನೆ ಸಹಕರಿಸಿ ಅವರ ಸುಪುತ್ರರೀರ್ವರಿಗೂ ಶಿಕ್ಷಣ ಕೊಡುವ ಮಹತ್ತರ ಗೌರವವು ನನಗೆ ಲಭಿಸಿದ್ದುದರಿಂದ ನಾನು ಅದನ್ನು ಚೆನ್ನಾಗಿ ಬಲ್ಲೆ. ಆದಕಾರಣ, ಅವರಿಗೆ ನಮ್ಮ ಅಭಿನಂದನವು ವಿಶೇಷವಾಗಿ ಸಲ್ಲಬೇಕಾಗಿದೆ...... ಶ್ರೀಮದ್ಯುವರಾಜರವರಿಗಿರುವಷ್ಟು ಸ್ನೇಹಿತರು ಮತ್ತಾರಿಗಿದ್ದಾರೆ? ಅಥವಾ ಅಷ್ಟು ಮಂದಿ ಸ್ನೇಹಿತರನ್ನು ಪಡೆಯುವ ಯೋಗ್ಯತೆಯಾದರೂ ಮತ್ತಾರಿಗಿದೆ? ಅವರು ಎಂಟು ವರ್ಷ ವಯಸ್ಸಿನ ಬಾಲಕರಾಗಿದ್ದಾಗಿನಿಂದಲೂ ಅವರನ್ನು ನಾನು ಬಲ್ಲೆ. ಮುಖಸ್ತುತಿ ಮಾಡುವ ಹವ್ಯಾಸವೇ ನನ್ನಿಂದ ದೂರವಾಗಿರಬೇಕೆಂಬುದು ನನ್ನ ಇಚ್ಛೆ. ಅವರ ವಿಷಯವಾಗಿ ಹೇಳಬೇಕಾದುದು ನ್ಯಾಯವೇ ಆಗಿರುವ ಶ್ಲಾಘನೆಯ ಮಾತುಗಳನ್ನು ಅವರ ಸಮಕ್ಷಮದಲ್ಲಿ ಈಗ ಬಿನ್ನವಿಸುವುದಕ್ಕೆ ಕೂಡ ನನಗೆ ಸಾಧ್ಯವಿಲ್ಲದಷ್ಟು ಸಂಕೋಚವಾಗುತ್ತಿದೆ. ನೈಸರ್ಗಿಕವಾಗಿರುವ ಸುಸಭ್ಯವರ್ತನೆಯಿಂದಲೂ, ಸುಸ್ವಭಾವದಿಂದಲೂ, ಸರಳ ಮನೋಹರವಾದ ನಡೆನುಡಿಗಳಿಂದಲೂ, ಆಟಪಾಟಗಳ ಸಾಮರ್ಥ್ಯದಿಂದಲೂ ಕೂಡಿರುವ ಶ್ರೀಮದ್ಯುವರಾಜರವರು ಹೋದೆಡೆಗಳಲ್ಲೆಲ್ಲ ಜನರನ್ನು ಆಕರ್ಷಿಸಿ ಮಿತ್ರಮಂಡಲಿಯನ್ನು ಸಂಪಾದಿಸುತ್ತಿರುವುದರಲ್ಲಿ ಆಶ್ಚರ್ಯವೇನು?

ರಾಜಮನೆತನದಲ್ಲಲ್ಲದೆ ಮತ್ತಾವ ಕುಟುಂಬದಲ್ಲೇ ಅವರು ಜನಿಸಿದ್ದರೂ ಸಹ ಅವರ ಈ ಸದ್ಗುಣಗಳ ಪ್ರಭಾವದಿಂದ ಇದೇ ರೀತಿ ಮಿತ್ರಸಂಪತ್ತಿಯನ್ನು ಗಳಿಸುತ್ತಲೇ ಇದ್ದರು. ರಾಜಕುಟುಂಬದಲ್ಲಿ ಜನಿಸಿದ್ದೂ ತಮ್ಮ ಸರಳತೆಯನ್ನು ಕಾಪಾಡಿಕೊಂಡು ಅನುನಯದಿಂದ ವರ್ತಿಸುತ್ತಿರುವ ಶ್ರೀಮದ್ಯುವರಾಜರವರು, ಭಾರತೀಯರಲ್ಲಾಗಲಿ ಅಥವಾ ಯೂರೋಪಿಯನರಲ್ಲಾಗಲಿ ಅವರು ಮೈತ್ರಿಯನ್ನು ಬಳೆಯಿಸಿರುವ ಸಮಸ್ತ ವರ್ಗಗಳವರ ಪ್ರೀತಿ ವಿಶ್ವಾಸಗಳಿಗೂ ಅವರು ಪಾತ್ರರಾಗಿದ್ದೇ ಇರುವರೆಂಬುದನ್ನು ನಾವೆಲ್ಲರೂ ಬಲ್ಲೆವು. ಸದ್ಗುಣಗಳ ಜೊತೆಗೆ ವಿದ್ಯಾಭ್ಯಾಸದಿಂದಲೂ ದೇಶಸಂಚಾರದ ಅನುಭವದಿಂದಲೂ ಸುಸಜ್ಜಿತವಾಗಿರುವ ಮೇಧಾಶಕ್ತಿಯೂ ಅವರಿಗಿದೆ. ಆದಕಾರಣ, ಈ ದೊಡ್ಡ ಸಂಸ್ಥಾನದ ಪ್ರಭುಗಳಾದ ಶ್ರೀಮನ್ಮಹಾರಾಜರವರಿಗೆ ಅವರು ಬಲಭುಜದಂತಿದ್ದು, ಎಂದೆಂದಿಗೂ ವಿಶ್ವಾಸಪರರಾಗಿರುವರೆಂಬುದರಲ್ಲಿ ನನಗೆ ಪೂರ್ಣಭರವಸೆಯುಂಟು. ಪ್ರಿಯ ಸಹೋದರರಾದ ಶ್ರೀಮನ್ಮಹಾರಾಜರವರ ಮತ್ತು ಶ್ರೀಮದ್ಯುವರಾಜರವರ ಪ್ರೀತಿವಿಶ್ವಾಸಗಳು ಶ್ರೀರಾಮ ಲಕ್ಷ್ಮಣರ ಪ್ರೀತಿವಿಶ್ವಾಸಗಳಂತಿವೆ. ಇಂತಹ ಸೊಗಸಾದ ಎರಡು ಆಧಾರಸ್ತಂಭಗಳ ಅವಲಂಬನವನ್ನು ಪಡೆದಿರುವ ರಾಜ್ಯದ ಸುಯೋಗವೇ ಸುಯೋಗ ....ಸಾಮಾನ್ಯವಾಗಿ ಒಬ್ಬನು ಸಸಿಯನ್ನು ನಟ್ಟು ಬೆಳೆಯಿಸಿದರೆ, ಅದು ಮುಂದೆ ಮರವಾಗಿ ಹಣ್ಣು ಬಿಟ್ಟುದನ್ನು ನೋಡುವ ಭಾಗ್ಯವು ಮತ್ತೊಬ್ಬನದಾಗುತ್ತದೆ. ಆದರೆ ನನಗೆ ಮಾತ್ರ ಅವೆರಡು ಭಾಗ್ಯಗಳನ್ನೂ ಪಡೆದಿರುವ ಅಪೂರ್ವ ಸುಯೋಗವು ಲಭಿಸಿದೆ. ಶ್ರೀಮನ್ಮಹಾರಾಜರವರಿಂದ ಯಾವ ಯಾವ ಕಾರ್ಯಸಾಧನೆಗಳಾಗುವುವೆಂದು ಹಿಂದೆ ಬೇರೆ ಹುದ್ದೆಯಲ್ಲಿದ್ದಾಗ ನಾನು ಹಾರೈಸಿ ಆಶೆಪಟ್ಟಿದ್ದೆನೋ ಅವುಗಳೆಲ್ಲ ಮತ್ತಷ್ಟು ಅಧಿಕವಾಗಿ ನೆರವೇರಿರುವುದನ್ನು ಈಗ ಬ್ರಿಟಿಷ್ ರೆಸಿಡೆಂಟ್ ಪದವಿಯಲ್ಲಿದ್ದು ನೋಡಿ ನೋಡಿ ಹರ್ಷಿಸಿದ್ದೇನೆ. ಶ್ರೀಮನ್ಮಹಾರಾಜರವರ ಬಾಲ್ಯದಲ್ಲಿಯೇ ಸೌಶೀಲ್ಯವೂ, ಪ್ರಜಾವಾತ್ಸಲ್ಯದಿಂದೊಡಗೂಡಿದ ಕರ್ತವ್ಯ ನಿಷ್ಠೆಯೂ, ಮಹಾರಾಜ ಪದವಿಯ ಗುರುತರವಾದ ಉತ್ತರವಾದಿತ್ವದ ಪರಿಜ್ಞಾನವೂ ಇತರ ನಾನಾ ಸದ್ಗುಣಗಳೂ ಅವರಲ್ಲಿ ನೆಲಸಿದ್ದು, ಮುಂದೆ ಪ್ರಖ್ಯಾತರಾದ ಪ್ರಭುವರ್ಯರುಗಳ ಗುಂಪಿನ ಶ್ರೇಷ್ಠ ವ್ಯಕ್ತಿಗಳಾಗಿ ಅವರು ರಾರಾಜಿಸುವರೆಂಬ ನಂಬಿಕೆಯನ್ನುಂಟುಮಾಡಿದ್ದುವು. ಆ ಸಮಸ್ತ ಸದ್ಗುಣಗಳೂ ಈಗ ಪೂರ್ಣವಾಗಿ ಪರಿಸ್ಫುಟವಾಗಿ ಅವರು ಖ್ಯಾತಿವೆತ್ತು ಶೋಭಿಸುತ್ತಿರುವುದನ್ನು ನಾನು ಕಣ್ಣಾರೆ ನೋಡಿ ಹರ್ಷಿಸುತ್ತಿದ್ದೇನೆ......"

ಶ್ರೀಮನ್ಮಹಾರಾಜರವರು ತಮ್ಮ ಪ್ರತ್ಯುತ್ತರ ಭಾಷಣದಲ್ಲಿ "........ನಮಗೂ ನಮ್ಮ ಅನುಜರಿಗೂ ಇರುವ ಗಾಢವಾದ ಪ್ರೀತಿ ವಿಶ್ವಾಸಗಳನ್ನು ಕುರಿತು ಶ್ರೀಮಾನ್ ಫ್ರೇಸರವರು ಉತ್ಸುಕತೆಯಿಂದಲೂ ಅಂತಃಕರಣಪೂರ್ವಕವಾಗಿಯೂ ಪ್ರಸ್ತಾವಿಸಿದ್ದಾರೆ. ನಿಮ್ಮೆಲ್ಲರ ಪ್ರೀತಿ ಗೌರವಗಳಿಗೂ ಪಾತ್ರರಾಗಿ ನಮ್ಮ ಅನುಜರು ಎಷ್ಟು ಶ್ರೇಷ್ಠ ಸ್ಥಾನವನ್ನು ಗಳಿಸಿರುವರೆಂಬುದನ್ನು ಕಂಡು ನಮಗೆ ಹೆಮ್ಮೆಯೂ ಹರ್ಷವೂ ಉಂಟಾಗಿವೆ" ಎಂದು ಅಪ್ಪಣೆ ಕೊಡಿಸಿದರು.

**ತಜ್ಞರ ನಿಷ್ಪಕ್ಷಪಾತ ವಾಣಿಗಳ ಶ್ಲಾಘನೆ**

ಆಡಳಿತ ನಡೆಯಿಸುವುದರಲ್ಲಿ ವಿಶೇಷ ಸಮರ್ಥರೆನಿಸಿದ್ದ ಅನೇಕ ಮಹಾಶಯರುಗಳು ಸಹ ಆಳಿದ ಮಹಾಸ್ವಾಮಿಯವರಾದ ಶ್ರೀಮನ್ಮಹಾರಾಜರವರ ವಿವೇಕ ವಿಚಕ್ಷಣೆಗಳಿಂದ ಕೂಡಿದ ಆಡಳಿತವನ್ನು ಶ್ಲಾಘಿಸತೊಡಗಿದರು. ಮದರಾಸಿನ ಗವರ್ನರವರಾಗಿದ್ದ ಸರ್ ಆರ್ಥರ್ ಲಾಲಿಯವರು ಬಳ್ಳಾರಿಯಲ್ಲಿ ತಮಗೆ ಸಮರ್ಪಿತವಾದ ವಿಜ್ಞಾಪನಾ ಪತ್ರಿಕೆಗೆ ಪ್ರತ್ಯುತ್ತರವಾಗಿ ಮಾಡಿದ ಭಾಷಣದಲ್ಲಿ ಆಳಿದ ಮಹಾಸ್ವಾಮಿಯವರ ವಿಚಾರವನ್ನು ಪ್ರಸ್ತಾವಿಸಿ ಶ್ಲಾಘಿಸಿದರು. ಅವರು ಹೇಳಿದುದೇನೆಂದರೆ: "......ನಾನು ನೆರೆಯ ಸಂಸ್ಥಾನದಿಂದ ಹಿಂತಿರುಗಿ ಬಂದಿದ್ದೇನೆ. ಅಲ್ಲಿಯ ಮಹಾರಾಜರವರು ದಿವಂಗತರುಗಳಾದ ವಿಕ್ಟೋರಿಯಾ ಚಕ್ರವರ್ತಿನಿ ಮತ್ತು ಎಡ್ವರ್ಡ್ ಚಕ್ರವರ್ತಿಗಳವರ ಮೇಲ್ಪಂಕ್ತಿಯನ್ನೇ ಅನುಸರಿಸಿ ತಮ್ಮ ಪ್ರಜೆಗಳ ಸುಖ ಸಂತೋಷಗಳೇ ತಮ್ಮ ಸುಖ ಸಂತೋಷಗಳೆಂದು ಭಾವಿಸಿ ರಾಜ್ಯಭಾರ ಮಾಡುತ್ತಿದ್ದಾರೆ. ಅವರ ವಯಸ್ಸಿಗೆ ಮೀರಿರುವ ವಿವೇಕವು ಅವರಲ್ಲಿ ನೆಲಸಿರುವುದನ್ನು ನಾನು ಪ್ರತ್ಯಕ್ಷವಾಗಿ ನೋಡಿ ಬಂದಿದ್ದೇನೆ. ಪಾಶ್ಚಾತ್ಯ ನಾಗರಿಕತೆಯಲ್ಲಿರುವ ಪ್ರಗತಿ ಸಾಧಕವಾದ ಸಲ್ಲಕ್ಷಣಗಳನ್ನೆಲ್ಲ ಆರಿಸಿ ಅವುಗಳನ್ನು ಮೈಸೂರು ಸಂಸ್ಥಾನದ ಪ್ರಜೆಗಳ ಜನಪದ ಜೀವನಕ್ಕೆ ಅಳವಡಿಸಿ ಭಾರತೀಯ ನಾಗರಿಕತೆ ಮತ್ತು ಪಾಶ್ಚಾತ್ಯ ನಾಗರಿಕತೆಗಳಿಗೆ ಅವರು ಸಾಮರಸ್ಯವನ್ನು ಕಲ್ಪಿಸುತ್ತಿದ್ದಾರೆ. ಶ್ರೀಮನ್ಮಹಾರಾಜರವರು ತಮ್ಮ ಪ್ರಜೆಗಳಾದ ಬಾಲಕ ಬಾಲಕಿಯರ ಮನಸ್ಸಿನಲ್ಲಿ ಅವರವರ ತಾಯಿ ತಂದೆಗಳು ಯಾವ ಮತಾವಲಂಬಿಗಳೋ ಆ ಮತಧರ್ಮಗಳೂ ಸತ್ಸಂಪ್ರದಾಯಗಳೂ ಖಚಿತವಾಗುವಂತೆ ಯಥೇಷ್ಟವಾಗಿ ಅವಕಾಶವನ್ನು ಕಲ್ಪಿಸಿ, ಅದರ ಜೊತೆಗೆ ಪಾಶ್ಚಾತ್ಯ ಕ್ರಮದ ವಿದ್ಯಾಭ್ಯಾಸವು ದೊರೆಯುವಂತೆ ಏರ್ಪಾಡುಮಾಡಿದ್ದಾರೆ. ಶ್ರೀಮನ್ಮಹಾರಾಜರವರಿಗೆ ತಮ್ಮ ಪ್ರಜೆಗಳ

ಅಭ್ಯುದಯಕ್ಕೆ ಸಾಧಕವಾದ ಸಮಸ್ತ ವಿಚಾರಗಳಲ್ಲಿಯೂ ಪರಮಾದರ. ಪ್ರಜೆಗಳ ಸೌಶೀಲ್ಯವನ್ನು ವೃದ್ಧಿಗೊಳಿಸುವ ನೀತಿ ಧರ್ಮಗಳ ವಿಚಾರದಲ್ಲಾಗಲಿ, ಪ್ರಜೆಗಳ ಬುದ್ಧಿಬಲವನ್ನು ಹೆಚ್ಚಿಸುವ ವಿದ್ಯಾಭ್ಯಾಸ ಮುಂತಾದುವುಗಳ ವಿಚಾರದಲ್ಲಾಗಲಿ, ಪ್ರಜೆಗಳ ಆರ್ಥಿಕಸ್ಥಿತಿಯನ್ನು ಉತ್ತಮಗೊಳಿಸುವ ಏರ್ಪಾಡುಗಳ ವಿಚಾರದಲ್ಲಾಗಲಿ, ಎಲ್ಲಿ ಯಾವುದರಿಂದ ಪ್ರಜೆಗಳ ಸೌಖ್ಯಕ್ಕೆ ಸಾಧಕವಾಗುವುದೆಂದು ತೋರಿದರೂ ಸಾಕು; ಒಡನೆಯೇ ಶ್ರೀಮನ್ಮಹಾರಾಜರವರು ತಮ್ಮ ಕೃಪಾವಲಂಬನದಿಂದ ಅದರ ಪ್ರಯೋಜನವು ಪ್ರಜೆಗಳಿಗೆ ಲಭಿಸಿ ಅನುಕೂಲವಾಗುವಂತೆ ಕಾರ್ಯಕ್ಷೇತ್ರದಲ್ಲಿ ಯೋಜನಗೊಳಿಸಿ ಅಳವಡಿಸಿಬಿಡುತ್ತಾರೆ. ಅವರು ಉದಾತ್ತಭಾವನೆಗಳಿಂದ ಕೂಡಿರುವ ಸುಸಂಸ್ಕೃತರಾದ ಪ್ರಭುಶ್ರೇಷ್ಠರೆಂದು ನನಗೆ ಅಚಲವಾದ ನಂಬಿಕೆಯುಂಟು. ಅವರು ಶುದ್ಧವಾದ ಅಂತಃಕರಣದಿಂದ ಕೂಡಿ ಪ್ರೀತಿ ತೋರುವ ಉದಾರಿಗಳಾದ ಸನ್ಮಿತ್ರರೆಂದು ನಂಬಿ ವಿಶ್ವಾಸದಿಂದಿದ್ದೇನೆ...... ಈ ದಿನದ ಸನ್ನಿವೇಶಕ್ಕೆ ಅಪ್ರಕೃತವಾಗಿರುವ ವ್ಯಕ್ತಿಸಂಬಂಧ ವಿಚಾರಗಳನ್ನು ಈ ರೀತಿ ಪ್ರಸ್ತಾವಿಸಿರುವುದಕ್ಕಾಗಿ ತಾವುಗಳು ಕ್ಷಮೆ ತೋರುವಿರೆಂದು ನಾನು ನಂಬಿದ್ದೇನೆ. ಭಾವಪಾರವಶ್ಯದಿಂದ ಹೃದಯವು ತುಂಬಿರುವಾಗ ಬಾಯಿ ಸುಮ್ಮನಿರುವುದು ಸಾಧ್ಯವೇ ಇಲ್ಲ........"

**ದರ್ಬಾರಿನಲ್ಲೊಂದು ದೊಡ್ಡ ಮಾರ್ಪಾಡು**

ಆಳಿದ ಮಹಾಸ್ವಾಮಿಯವರು ೧೯೧೦ನೆಯ ಇಸವಿಯ ನವರಾತ್ರಿಯ ಉತ್ಸವ ಕಾಲದಲ್ಲಿ ದೊಡ್ಡದೊಂದು ಮಾರ್ಪಾಡನ್ನುಮಾಡಿ ಭಾರತೀಯರಾದ ಅತಿಥಿಗಳ ಮತ್ತು ಅಧಿಕಾರಿಗಳ ಚಿರಕೃತಜ್ಞತೆಗೆ ಪಾತ್ರರಾದರು. ಮಹಾನವಮಿಯ ದಿನ ಸಾಯಂಕಾಲ ಯೂರೋಪಿಯನ್ ಅತಿಥಿಗಳಿಗಾಗಿ ನಡೆಯುವ ದರ್ಬಾರಿನಲ್ಲಿ ಅವರುಗಳಿಗೆ ಮಾತ್ರವೇ ಕುರ್ಚಿಗಳನ್ನು ಹಾಕಿ, ಉಳಿದವರೆಲ್ಲರೂ ಇತರ ದಿನಗಳಲ್ಲಿದ್ದಂತೆಯೇ ರತ್ನಗಂಬಳಿಗಳಮೇಲೆ ಕುಳಿತುಕೊಳ್ಳುತ್ತಿದ್ದುದು ಹಿಂದಿನಿಂದಲೂ ಆಚರಣೆಯಲ್ಲಿದ್ದ ಏರ್ಪಾಡು. ಅದರ ದೆಸೆಯಿಂದ ಭಾರತೀಯ ಅತಿಥಿಗಳಿಗೂ ಮತ್ತು ಅಧಿಕಾರಿಗಳಿಗೂ ಬಹಳ ಹೀನಾಯವೆಂಬುದನ್ನು ಮಹಾಸ್ವಾಮಿಯವರು ಮನಗಂಡರು. ದಿವಾನ್‌ರವರು, ಮಂತ್ರಾಲೋಚನಾ ಸಭೆಯ ಸದಸ್ಯರಾದ ಸಚಿವರು ಮುಂತಾದವರಿಗೆ ಕೂಡ ಕುರ್ಚಿಗಳಿಲ್ಲದೆ ಅವರುಗಳು ಕೆಳಗೆ ಕುಳಿತಿರುವಲ್ಲಿ ಅವರ ಕೈಕೆಳಗಿನ ಯೂರೋಪಿಯನ್ ಅಧಿಕಾರಿಗಳು ಮಾತ್ರ ಕುರ್ಚಿಗಳಮೇಲೆ ಕುಳಿತಿರಲು

ಅವಕಾಶವಿದ್ದ ಸನ್ನಿವೇಶವನ್ನು ಮಹಾಸ್ವಾಮಿಯವರು ಕೃಪೆಯಿಂದ ತಪ್ಪಿಸಿ, ಯೂರೋಪಿಯನ್ ಅತಿಥಿಗಳಿಗಾಗಿ ದರ್ಬಾರು ನಡೆಯುವ ಮಹಾನವಮಿಯ ದಿನ ಸಮಸ್ತರೂ ಕುರ್ಚಿಗಳಮೇಲೆ ಕುಳಿತುಕೊಳ್ಳು ವಂತೆ ಅವಕಾಶವನ್ನುಂಟುಮಾಡಿದರು. ಹಾಗೆ ಮಾಡಿದ ಆ ವೊಟ್ಟ ಮೊದಲನೆಯ ದಿನ, ಮಹಾಸ್ವಾಮಿಯವರು ಆ ರೀತಿ ಏರ್ಪಾಡು ಮಾಡಿಸಿದ್ದುದು ಅರಮನೆಯಲ್ಲಿ ಕೆಲಸಮಾಡುತ್ತಿದ್ದ ಆಪ್ತರಾದ ಇಬ್ಬರು ದೊಡ್ಡ ಅಧಿಕಾರಿಗಳಿಗೆ ಹೊರತು ಉಳಿದವರಾರಿಗೂ ದರ್ಬಾರಿಗೆ ಹೋಗುವವರೆಗೂ ತಿಳಿದಿರಲಿಲ್ಲ. ಆದಕಾರಣ, ದರ್ಬಾರಿಗೆ ಹೋಗಿ ಅದನ್ನು ತಿಳಿದುಕೊಂಡಾಗ ಅವರಿಗುಂಟಾದ ಆಶ್ಚರ್ಯ ಸಂತೋಷ ಗಳು ಅತ್ಯಧಿಕವಾಗಿದ್ದುವು. ಅದೇ ಏರ್ಪಾಡೇ ಈಗಲೂ ನಡೆದು ಬರುತ್ತಿದೆ.

೧೯೧೧ನೆಯ ಇಸವಿಯಲ್ಲಿ, ಮಹಾಸ್ವಾಮಿಯವರು ಎರಡು ಸಲ ಉತ್ತರ ಭಾರತ ಸಂಚಾರಾರ್ಥವಾಗಿ ಚಿತ್ತೈಸಿದ್ದರು. ಭರತಖಂಡದಲ್ಲಿ

**೧೯೧೧ನೆಯ ಇಸವಿಯ ಉತ್ತರ ಭಾರತ ಸಂಚಾರ**

ಮತ್ತಾವಾಗಲೂ ನಡೆಯದಿದ್ದಷ್ಟು ಭಾರಿ ವಸ್ತು ಪ್ರದರ್ಶನವು ಆ ವರ್ಷದ ಜನವರಿ ತಿಂಗಳಿನಲ್ಲಿ ಪ್ರಯಾಗ ನಗರದಲ್ಲಿ ನಡೆಯಿತು. ಅದನ್ನು ಪರಿಶೀಲಿಸಿಕೊಂಡು ಬಂದು ೧೯೦೭ನೆಯ ಇಸವಿ ಯಲ್ಲಿ ಮೈಸೂರು ನಗರದಲ್ಲಿ ನಡೆದಿದ್ದುದಕ್ಕಿಂತ ಭಾರಿಯಾದ ವಸ್ತು ಪ್ರದರ್ಶನವನ್ನೇರ್ಪಡಿಸಬೇಕೆಂಬ ಉದ್ದೇಶದಿಂದ ಮಹಾಸ್ವಾಮಿಯವರು ಮುಂಬಯಿ ನಗರದ ಮಾರ್ಗವಾಗಿ ಪ್ರಯಾಗಕ್ಕೆ ದಯಮಾಡಿ ಮೈಸೂರು ನಗರಕ್ಕೆ ಹಿಂತಿರುಗಿದರು. ಮೈಸೂರು ನಗರದಲ್ಲಿ ವಿಶೇಷ ಭಾರಿ ಪ್ರಮಾಣದಲ್ಲಿ ವ್ಯವಸಾಯ ಮತ್ತು ಕೈಗಾರಿಕೆ ಗಳ ವಸ್ತು ಪ್ರದರ್ಶನವು ನಡೆಯಲಾರಂಭವಾದುದು ಆ ಬಳಿಕಲೇ. ಈಚೆಗಂತೂ ಪ್ರತಿ ವರ್ಷವೂ ದಸರಾ ಕಾಲದಲ್ಲಿ ವಸ್ತು ಪ್ರದರ್ಶನವು ಅತ್ಯಂತ ವಿಜೃಂಭಣೆಯಿಂದ ನಡೆದು ಸರ್ಕಾರಕ್ಕೆ ವರಮಾನ ಬರುವ ಮಟ್ಟಿಗೆ ವೃದ್ಧಿಹೊಂದಿದೆ.

೧೯೧೧ನೆಯ ಇಸವಿ ಡಿಸೆಂಬರು ತಿಂಗಳಿನಲ್ಲಿ ಮಹಾಸ್ವಾಮಿಯವರು ಆ ತಿಂಗಳು ೧೧ನೆಯ ತಾರೀಖಿನ ದಿನ ನಡೆದ ಐದನೆ ಜಾರ್ಜ್ ಚಕ್ರವರ್ತಿ ಯವರ ಮತ್ತು ಮೇರಿ ಚಕ್ರವರ್ತಿನಿಯವರ ಕಿರೀಟಧಾರಣಾ ಮಹೋತ್ಸವ ಪ್ರಯುಕ್ತವಾದ ದರ್ಬಾರಿಗಾಗಿ ದೆಹಲಿ ನಗರಕ್ಕೆ ದಯಮಾಡಿದರು. ಚಕ್ರವರ್ತಿ ಸಾರ್ವಭೌಮರವರು ಶ್ರೀಮದ್ಯುವರಾಜ ಶ್ರೀ ಕಂಠೀರವ

ನರಸಿಂಹರಾಜ ಒಡೆಯರವರಿಗೆ "ಕೆ. ಸಿ. ಐ. ಇ." ಎಂಬ ಬಿರುದನ್ನಿತ್ತು ಸನ್ಮಾನಿಸಿದರು.

ಪುಷ್ಯ ಶುದ್ಧ ಪಾಡ್ಯಮಿಯಲ್ಲಿ ಶ್ರೀ ಚಾಮರಾಜೇಂದ್ರ ಒಡೆಯರವರ ಪುಣ್ಯತಿಥಿಯೊದಗಿತು. ಆಳಿದ ಮಹಾಸ್ವಾಮಿಯವರಾದ ಶ್ರೀಮನ್ಮಹಾರಾಜರವರು ಅದರ ನಿಮಿತ್ತವಾಗಿ ಧರ್ಮಾಧಿಕಾರಿಗಳನ್ನೂ, ಋತ್ವಿಕ್ಕುಗಳನ್ನೂ, ಪುರೋಹಿತರನ್ನೂ ಮೈಸೂರು ನಗರದಿಂದ ದೆಹಲಿ ನಗರಕ್ಕೆ ಬರಮಾಡಿಕೊಂಡು ಅವರಿಗೆ ತೀರ್ಥಯಾತ್ರೆಯಾಗಲೆಂದು ಪ್ರಯಾಗ, ಕಾಶೀ ನಗರ, ಗಯಾಕ್ಷೇತ್ರ ಮುಂತಾದುವುಗಳಿಗೆ ಕಳುಹಿಸಿ ಕೃಪೆ ತೋರಿದರು. ತಮ್ಮ ಪರಿವಾರದ ಹದಿನೇಳು ಮಂದಿಗಳನ್ನು ಕುರುಕ್ಷೇತ್ರ ಮುಂತಾದ ಸ್ಥಳಗಳಿಗೆ ಹೋಗಿ ಬರಲು ವಿಶೇಷ ರೀತಿಯಲ್ಲಿ ಏರ್ಪಾಡು ಮಾಡಿಸಿ ಅವರೆಲ್ಲರೂ ನೋಟಗಳನ್ನು ನೋಡಿ ಹರ್ಷಿಸುವಂತೆ ಅನುಕೂಲವನ್ನು ಕಲ್ಪಿಸಿದರು.

ಮಹಾಸ್ವಾಮಿಯವರ ಕೃಪಾಳುತನವನ್ನು ತೋರಿಸುವ ಮತ್ತೊಂದು ಸಂಗತಿಯೂ ಆಗ ನಡೆಯಿತು. ಮೈಸೂರು ಸಂಸ್ಥಾನದ ಕೆಲವರು ಉತ್ಸಾಹಿಗಳು ಉತ್ಸವವನ್ನು ನೋಡುವುದಕ್ಕಾಗಿ ದೆಹಲಿಗೆ ಹೋಗಿದ್ದರು. ಅವರು ಆ ಮೊದಲೇ ತಮ್ಮ ವಾಸಕ್ಕೆ ಏರ್ಪಾಡುಮಾಡಿಕೊಂಡಿರಲಿಲ್ಲವಾಗಿ, ದೇಶ ವಿದೇಶಗಳಿಂದ ದೆಹಲಿಗೆ ಬಂದು ಕಿಕ್ಕಿರಿದು ತುಂಬಿದ್ದ ಜನಗಳ ಸಂದಣಿಯು ಬಹಳವಾಗಿದ್ದ ಕಾರಣ, ಅವರು ಹಣ ಕೊಡಲು ಸಿದ್ಧವಾಗಿದ್ದೂ ಸ್ಥಳವಸತಿಯೇ ದೊರೆಯಲಿಲ್ಲ. ಕೊನೆಗೆ ಯತ್ನವಿಲ್ಲದೆ ಅವರುಗಳು ಮಹಾಸ್ವಾಮಿಯವರ ಬಿಡಾರಕ್ಕೆ ಹೋಗಿ ಅಲ್ಲಿದ್ದ ಅಧಿಕಾರಿಯವರೊಬ್ಬರನ್ನು ಕುರಿತು, "ಎಲ್ಲಿ ಹುಡುಕಿ ಯಾರನ್ನು ಬೇಡಿಕೊಂಡರೂ ಸ್ಥಳವೇ ಸಿಕ್ಕಲಿಲ್ಲ. ಈ ಊರಿಗೆ ಬಂದದ್ದೇ ತಪ್ಪಾಯಿತು. ಯಾವ ಮೂಲೆಯಲ್ಲಾದರೂ ಮುದುರಿಕೊಳ್ಳುತ್ತೇವೆ. ಮಲಗಲು ಎರಡು ಮೂರು ದಿನ ಸ್ಥಳ ಕೊಡಿ. ಎಲ್ಲಿಯಾದರೂ ಹೋಟಲಿಗೆ ಹೋಗಿ ಊಟಕ್ಕೇನೊ ಕಾಲ ಹಾಕುತ್ತೇವೆ" ಎಂದು ಕೇಳಿಕೊಂಡರು. ಆ ಅಧಿಕಾರಿಯವರಿಗೆ ಬಹಳ ಪೇಚಾಟಕ್ಕಿಟ್ಟಿತು. ಸ್ಥಳವಿಲ್ಲವೆನ್ನಲು ಮನಸ್ಸುಬಾರದು. ಸ್ಥಳ ಕೊಟ್ಟರೆ ಹೇಗೋ ಎಂಬ ಭಯ. ಮಹಾಪ್ರಭುಗಳಿಗೆ ಆ ವಿಷಯವನ್ನು ಅರಿಕೆಮಾಡುವ ಬಗೆ ಹೇಗೆಂಬ ಆತಂಕ. ಆಗಿನ ಆ ಸ್ಥಿತಿಯಲ್ಲಿ ಅವರು ಅನಿರ್ದಿಷ್ಟವಾದ ಮತ್ತು ಅನಿಶ್ಚಿತವಾದ ಉತ್ತರಗಳನ್ನು ಹೇಳಲುಪಕ್ರಮಿಸಿದರು. ನಿರ್ದಿಷ್ಟವಾದ ಉತ್ತರವನ್ನು ಪಡೆದಲ್ಲದೆ ಆಗಂತುಕರು ಸುಮ್ಮನಾಗುವಂತಿರಲಿಲ್ಲ. ಅವರವರಿಗೆ

ಸಂಭಾಷಣ ನಡೆಯುತ್ತಿದ್ದುದನ್ನು ದೂರದಿಂದ ಕಂಡು ಮಹಾಸ್ವಾಮಿಯವರು ಅಲ್ಲಿ ಏನೋ ವಿಶೇಷವಿರಬೇಕೆಂದು ಭಾವಿಸಿ ಸಮ್ಮುಖದ ಅಧಿಕಾರಿಗಳನ್ನು ಕಳುಹಿಸಿ ವಿಷಯವನ್ನು ವಿಚಾರಿಸಿ ತಿಳಿದುಕೊಂಡರು. ಬಳಿಕ, ಆಗಂತುಕರಾದ ತಮ್ಮ ಪ್ರಜೆಗಳಿಗೆ ಅವರುಗಳು ಅಲ್ಲಿದ್ದಷ್ಟು ಕಾಲವೂ ಸುಖವಸತಿಯೂ ಪುಷ್ಕಳ ಭೋಜನವೂ ದೊರೆಯುವಂತೆ ಅಪ್ಪಣೆ ಮಾಡಿದರು.

ದೆಹಲಿಯಿಂದ ಮಹಾಸ್ವಾಮಿಯವರು ಲಾಹೋರು, ಅಮೃತಸರ, ಹರಿದ್ವಾರ ಮುಂತಾದ ಕ್ಷೇತ್ರಗಳಿಗೆ ಪ್ರಯಾಣಮಾಡಿದರು. ಗಯಾಕ್ಷೇತ್ರದಲ್ಲಿ ಶ್ರಾದ್ಧಮಾಡಿದರು. ಆ ಬಳಿಕ ಕಲ್ಕತ್ತಾ ನಗರಕ್ಕೆ ಪ್ರಯಾಣವು ಬೆಳೆಯಿತು. ಪದ್ಧತಿಗನುಸಾರವಾಗಿ ಕಾಳೀಘಟ್ಟದಲ್ಲಿರುವ ಶ್ರೀ ಚಾಮರಾಜೇಂದ್ರ ಒಡೆಯರವರ ಶಿಲಾಬೃಂದಾವನದ ಬಳಿಯಲ್ಲಿ ಸೇವೆಯೂ ಸಂತರ್ಪಣೆಯೂ ನಡೆದುವು. ಆ ಬೃಂದಾವನದ ಬಳಿಯಲ್ಲಿ ಏಜೆಂಟರು, ಮಾಲಿ, ಪೂಜಾರಿ ಮುಂತಾದವರಿಂದ ಕೂಡಿದ ಸಿಬ್ಬಂದಿಯಿದೆ; ಸೊಗಸಾದ ಪುಷ್ಪೋದ್ಯಾನವೊಂದಿದೆ. ಪ್ರತಿದಿನವೂ ಬೃಂದಾವನದ ಬಳಿಯಲ್ಲಿ ಶ್ರೀ ಚಾಮರಾಜೇಂದ್ರ ಒಡೆಯರವರ ಭಾವಚಿತ್ರಕ್ಕೆ ಪೂಜೆ ನಡೆದು, ಕ್ಲುಪ್ತ ಸಂಖ್ಯೆಯ ಬಡಜನರಿಗೆ "ಸದಾವರ್ತ" ಲವಾಜಮೆಯೂ ದಕ್ಷಿಣೆಯೂ ದೊರೆಯುತ್ತವೆ. ಪರ್ವಕಾಲ, ಅಮಾವಾಸ್ಯೆ, ನವರಾತ್ರಿ ಮುಂತಾದ ವಿಶೇಷ ದಿನಗಳಲ್ಲಿ ಇನ್ನೂ ಹೆಚ್ಚಿನ ಸೇವೆಗಳು ನಡೆಯುತ್ತವೆ.

**ಸಂಪದಭಿವೃದ್ಧಿಗಾಗಿ ಕೆಲವು ಏರ್ಪಾಡುಗಳು**

ಈ ಮಧ್ಯದಲ್ಲಿ, ಮೈಸೂರಿನಿಂದ ಅರಸೀಕೆರೆಯವರೆಗೆ ರೈಲು ಹಾಕಿಸುವ ಏರ್ಪಾಡೂ, ಕಾವೇರೀ ನದಿಗೆ ಕನ್ನಂಬಾಡಿಯ ಬಳಿಯಲ್ಲಿ ಅಣೆಯನ್ನು ಕಟ್ಟಿಸಿ ಕೃಷ್ಣರಾಜಸಾಗರ ಜಲಾಶಯವನ್ನು ನಿರ್ಮಿಸುವ ಏರ್ಪಾಡೂ ನಡೆದುವು. ಸಂಪದಭಿವೃದ್ಧಿಕಾರ್ಯಗಳಲ್ಲಿ ಸರ್ಕಾರಿ ಉದ್ಯೋಗಸ್ಥರೂ ಸರ್ಕಾರಿ ಉದ್ಯೋಗಸ್ಥರಲ್ಲದವರೂ ಏಕೀಭವಿಸಿ ಕೆಲಸ ಮಾಡಲನುಕೂಲಿಸುವಂತೆ ೧೯೧೧ನೆಯ ಇಸವಿ ಜೂನ್ ೧೦ನೆಯ ತಾರೀಖಿನದಿನ ಮಹಾಸ್ವಾಮಿಯವರು "ಸಂಪದಭಿವೃದ್ಧಿ ಸಮಾಜ" ("ಎಕನಾಮಿಕ್ ಕಾನ್ಫರೆನ್ಸ್") ಎಂಬ ಸಂಸ್ಥೆಯನ್ನು ಸ್ಥಾಪಿಸಿ ಅದರ ಸಮಾರಂಭಣ ಮಹೋತ್ಸವವನ್ನು ನೆರವೇರಿಸಿದರು.

**ಶ್ರೀ ಕಂಠೀರವ ನರಸಿಂಹರಾಜ ಒಡೆಯರವರು ನೂತನವಾದ ಮುಖ್ಯೋದ್ಯೋಗದಲ್ಲಿ**

ಶ್ರೀಮದ್ಯುವರಾಜ ಶ್ರೀ ಕಂಠೀರವ ನರಸಿಂಹರಾಜ ಒಡೆಯರ್ ಬಹದ್ದೂರರವರು ಸಂಸ್ಥಾನದ ಆಡಳಿತದಲ್ಲಿ ಭಾಗವಹಿಸುವಂತೆ ಮಾಡುವ ಉದ್ದೇಶದಿಂದ, ಮಹಾಪ್ರಭುಗಳವರು ಅವರನ್ನು, ೧೯೧೧ನೆಯ ಇಸವಿ ಆಗಸ್ಟ್ ತಿಂಗಳಿನಲ್ಲಿ ಕೆಲಸದಿಂದ ವಿಶ್ರಾಂತರಾದ ಕರ್ನಲ್ ಜೋನ್ಸ್ ಅವರ ಸ್ಥಾನದಲ್ಲಿ, ಸೈನ್ಯದ ಇಲಾಖೆಗೆ ಅಧಿಪತಿಗಳನ್ನಾಗಿಯೂ, ತಮ್ಮ "ಮಿಲಿಟರಿ ಸೆಕ್ರೆಟರಿ"ಯವರನ್ನಾಗಿಯೂ ನೇಮಕಮಾಡಿದರು. ಅಮೃತ ಬಜಾರ್ ಪತ್ರಿಕೆ, ಹಿಂದು ಪತ್ರಿಕೆ ಮುಂತಾದುವುಗಳೆಲ್ಲ ಮಹಾಸ್ವಾಮಿಯವರ ವಿವೇಕವನ್ನು ಕೊಂಡಾಡಿ ಅದು ಅತ್ಯುತ್ತಮ ಕಾರ್ಯವೆಂದು ಶ್ಲಾಘಿಸಿದುವು.

**ಗಮನಾರ್ಹವಾದೆರಡು ಸಂಗತಿಗಳ ವಿಚಾರ**

೧೯೧೧ನೆಯ ಮತ್ತು ೧೯೧೨ನೆಯ ಇಸವಿಗಳಲ್ಲಿಯ ಬೆಂಗಳೂರು ದಂಡಿನ ಪ್ರದೇಶದ ಹುಟ್ಟುವಳಿಯಲ್ಲಿ ವೆಚ್ಚವು ಕಳೆದು ಉಳಿತಾಯವಾದ ಹಣವು ಮೈಸೂರು ಸರ್ಕಾರಕ್ಕೆ ಸಲ್ಲುವಂತೆ ಇಂಡಿಯಾ ಸರ್ಕಾರದವರು ತೀರ್ಮಾನಿಸಿದರು. ಮೈಸೂರು ಸರ್ಕಾರದವರು ೧೯೧೧ನೆಯ ಇಸವಿಯಲ್ಲಿ ಕೃಷ್ಣರಾಜಸಾಗರ ನಿರ್ಮಾಣಕಾರ್ಯವನ್ನಾರಂಭಿಸಿದರು. ಅವೆರಡರಲ್ಲಿ ಮೊದಲನೆಯದು, ಆಳಿದ ಮಹಾಸ್ವಾಮಿಯವರ ಅಧ್ಯವಸಾಯದ ಫಲ. ಎರಡನೆಯದು, ಮಹಾಸ್ವಾಮಿಯವರ ಸಾಹಸ ಪ್ರೇಮ ಪ್ರಜಾವಾತ್ಸಲ್ಯಗಳ ಪರಿಣಾಮ.

**ಶ್ರೀಮಾನ್ ಟಿ. ಆನಂದರಾಯರು ದಿವಾನ್ ಪದವಿಯಿಂದ ವಿಶ್ರಾಂತರಾದುದು**

೧೯೧೨ನೆಯ ಇಸವಿ ನವೆಂಬರು ತಿಂಗಳು ೧೦ನೆಯ ತಾರೀಖಿನ ದಿನ ಶ್ರೀಮಾನ್ ಟಿ. ಆನಂದರಾಯರು ದಿವಾನ್ ಪದವಿಯಿಂದ ವಿಶ್ರಾಂತರಾದರು. ಅವರಿಗೆ ಚಕ್ರವರ್ತಿ ಸಾರ್ವಭೌಮರು "ಸಿ.ಐ.ಇ." ಎಂಬ ಬಿರುದನ್ನೂ ಮಹಾಪ್ರಭುಗಳು "ಪ್ರಧಾನ ಶಿರೋಮಣಿ" ಎಂಬ ಬಿರುದನ್ನೂ ದಯಪಾಲಿಸಿದ್ದರು. ಅವರ ತಂದೆಯವರಾದ ರಾಜಾ ಸರ್ ಟಿ. ಮಾಧವರಾಯರವರು ಬರೋಡ ಸಂಸ್ಥಾನದಲ್ಲಿಯೂ, ಅವರ ಮಾವಂದಿರಾದ ಶ್ರೀಮಾನ್ ರಾಮರಾಯರವರು ತಿರುವಾಂಕೂರು ಸಂಸ್ಥಾನದಲ್ಲಿಯೂ ದಿವಾನ್ ಪದವಿಯಲ್ಲಿದ್ದು ಆಡಳಿತವನ್ನು ನಿರ್ವಹಿಸಿದ್ದರು. ಶ್ರೀಮಾನ್ ಆನಂದರಾಯರು ರಾಜಭಕ್ತಿಯಿಂದಲೂ, ಉತ್ಸಾಹದಿಂದಲೂ,

ಶಿಸ್ತುಗಾರಿಕೆಯಿಂದಲೂ ಕೂಡಿ ಒಟ್ಟಿನಮೇಲೆ ಚೆನ್ನಾಗಿಯೇ ಆಡಳಿತ ನಿರ್ವಹಿಸಿದರು. ಅವರು ಉದಾರಿಗಳಾಗಿ ಕೈಕೆಳಗಿನವರಲ್ಲಿ ಕರುಣ ತೋರುತ್ತಿದ್ದರು. ಆದರೂ ಅವರ ಶಿಸ್ತುಗಾರಿಕೆಯು ಕೆಲವುವೇಳೆಗಳಲ್ಲಿ ಮಿತಿಮಿರಿ, ವಿಚಿತ್ರರೂಪಗಳನ್ನು ತಾಳುತ್ತಿದ್ದುದೂ ಉಂಟು. ಒಂದು ಭಾನುವಾರದ ದಿನ ಅವರ ಕೈಕೆಳಗಿನ ಅಧಿಕಾರಿಯವರೊಬ್ಬರು ಖೆಡ್ಡಾ ಏರ್ಪಾಡನ್ನು ನೋಡುವುದಕ್ಕಾಗಿ ಕಾರಾಪುರಕ್ಕೆ ಹೋಗಲು ಅನುಮತಿಯನ್ನು ಕೇಳಿದಾಗ ಅವರು ಸುಮ್ಮನಿದ್ದರು. ಅಧಿಕಾರಿಯವರು ತಮಗೆ ಅನುಮತಿಯು ದೊರೆಯಿತೆಂದು ಭಾವಿಸಿ ಮಾರನೆಯ ದಿನ ಪ್ರಯಾಣದ ಸಡಗರದಲ್ಲಿದ್ದಾಗ ಅವರು "ಎಲ್ಲಿಗೆ ಹೊರಟಿದ್ದೀರಿ?" ಎಂದು ಕೇಳಿದರು. ಆಗ ಆ ಅಧಿಕಾರಿಯವರಿಂದ, "ನಿನ್ನೆ ಅರಿಕೆ ಮಾಡಿದಂತೆ ಕಾರಾಪುರಕ್ಕೆ" ಎಂದು ಉತ್ತರ ಬಂದುದನ್ನು ಕೇಳಿ, "ನಿನ್ನೆ ಭಾನುವಾರ. ರಜದ ದಿನ. ರಜದ ದಿನಗಳಲ್ಲಿ ನಾನು ಕಚೇರಿಯ ವಿಚಾರಗಳಲ್ಲಿ ಅತಿ ಜರೂರಾದವುಗಳು ಹೊರತು ಉಳಿದವುಗಳಲ್ಲಿ ಕೈಹಾಕುವುದಿಲ್ಲವೆಂಬುದು ನಿಮಗೆ ತಿಳಿದೇ ಇದೆ. ಆದ್ದರಿಂದ ನಿನ್ನೆ ಅಪ್ಪಣೆ ಮಾಡಲಿಲ್ಲ. ಇವೊತ್ತು ಅಪ್ಪಣೆ ಮಾಡುತ್ತೇನೆ. ನೀವು ಹೊರಡಕೂಡದು" ಎಂದರು.

**ಶ್ರೀಮಾನ್ ಮೋಕ್ಷಗುಂಡಂ ವಿಶ್ವೇಶ್ವರಯ್ಯನವರು**

ಶ್ರೀಮಾನ್ ಮೋಕ್ಷಗುಂಡಂ ವಿಶ್ವೇಶ್ವರಯ್ಯನವರು ೧೯೧೨ನೆಯ ಇಸವಿ ನವೆಂಬರು ತಿಂಗಳು ೧೦ನೆಯ ತಾರೀಖಿನಿಂದ ದಿವಾನ್ ಪದವಿಗೆ ಬಂದರು. ಅವರು ೧೯೦೯ನೆಯ ಇಸವಿಯಲ್ಲಿ ಮೈಸೂರು ಸಂಸ್ಥಾನದ ಚೀಫ್ ಇಂಜನಿಯರಾಗಿ ನೇಮಕವಾಗಿದ್ದರು. ಅವರು ಅದಕ್ಕೆ ಮುಂಚಿತವಾಗಿ ಬ್ರಿಟಿಷ್ ಇಂಡಿಯಾದಲ್ಲಿ ಕೆಲಸಮಾಡುತ್ತಿದ್ದು ಶಿಲ್ಪಕಲಾ ನಿಪುಣರೆಂದು ಪ್ರಖ್ಯಾತರಾಗಿದ್ದರು. ಸುಕ್ಕೂರ್, ಏಡನ್, ಮುಂತಾದ ಸ್ಥಳಗಳಲ್ಲೆಲ್ಲ ಅವರು ನೆರವೇರಿಸಿದ್ದ ಶಿಲ್ಪಕಲಾ ಸಂಬಂಧವಾದ ಏರ್ಪಾಡುಗಳು ಸುಪ್ರಸಿದ್ಧವಾಗಿದ್ದುವು. ಜಪಾನ್, ಈಜಿಪ್ಟ್, ಕೆನಡ, ಅಮೇರಿಕಾ ಖಂಡದ ಸಂಯುಕ್ತ ಸಂಸ್ಥಾನಗಳು — ಮುಂತಾದವುಗಳಿಗೆಲ್ಲ ಪ್ರವಾಸ ಹೋಗಿ ಬಂದು ಅವರು ವಿಶೇಷ ರೀತಿಯಲ್ಲಿ ಅನುಭವ ಪಡೆದಿದ್ದರು. ಮಂತ್ರಾಲೋಚನಾ ಸಭೆಯ ಸದಸ್ಯರಾದ ಸಚಿವರಾಗಿ ಅವರಿಗಿಂತ ಮೇಲಿನ ಅಧಿಕಾರಿಗಳಾಗಿದ್ದವರೀರ್ವರನ್ನೂ ಬಿಟ್ಟು, ಅವರನ್ನೇ ಮಹಾಪ್ರಭುಗಳು ದಿವಾನ್ ಪದವಿಗೆ ನೇಮಕಮಾಡಿದರು. ಶ್ರೀಮಾನ್ ವಿಶ್ವೇಶ್ವರಯ್ಯನವರು ಪ್ರಭುಭಕ್ತಿಯಿಂದಲೂ ದೇಶಾಭಿಮಾನದಿಂದಲೂ ಪೂರಿತರಾಗಿ ಮೈಸೂರು

ಸಂಸ್ಥಾನವು ಜಪಾನ್, ಆಸ್ಟ್ರೇಲಿಯ, ಅಥವಾ ಕೆನಡದಂತೆ ಸರ್ವತೋ ಮುಖವಾಗಿ ಅಭಿವೃದ್ಧಿಹೊಂದುವಂತೆ ಮಾಡಬೇಕೆಂಬ ಉತ್ಸುಕತೆ ಯಿಂದ ಕಾರ್ಯಾರಂಭಮಾಡಿದರು. ವ್ಯವಸಾಯಾಭಿವೃದ್ಧಿ, ಗ್ರಾಮಾಭಿವೃದ್ಧಿ, ವಿದ್ಯಾಭಿವೃದ್ಧಿ, ವಾಣಿಜ್ಯಾಭಿವೃದ್ಧಿ, ಮಲೆನಾಡಿನ ಅಭಿವೃದ್ಧಿ ಮುಂತಾದುವುಗಳಿಂದಲೂ, ಭಾರಿ ಭಾರಿ ಜಲಾಶಯಗಳ ನಿರ್ಮಾಣದಿಂದಲೂ, ದೊಡ್ಡ ದೊಡ್ಡ ಕೈಗಾರಿಕೆಗಳ ಏರ್ಪಾಡಿನಿಂದಲೂ, ದೇಶೋನ್ನತಿ ಸಾಧನೆ ಮಾಡಬೇಕೆಂಬುದು ಅವರಿಗಿದ್ದ ತೀವ್ರಾಭಿಲಾಷೆ. ಮೈಸೂರು ವಿಶ್ವವಿದ್ಯಾನಿಲಯ, ಕೃಷ್ಣರಾಜಸಾಗರ, ಗಂಧದೆಣ್ಣೆ ಕಾರ್ಖಾನೆ, ಭದ್ರಾವತಿ ಕಬ್ಬಿಣದ ಕಾರ್ಖಾನೆ, ಸಂಪದಭಿವೃದ್ಧಿ ಸಮಾಜ ಮುಂತಾದುವುಗಳೆಲ್ಲ ಅವರು ದಿವಾನ್ ಹುದ್ದೆಯಲ್ಲಿದ್ದ ಅವಧಿ ಯಲ್ಲಿ ಏರ್ಪಟ್ಟುವು. ಸರ್ಕಾರಿ ಉದ್ಯೋಗಸ್ಥರಲ್ಲದವರು ಸರ್ಕಾರಿ ಕಾರ್ಯಕಲಾಪಗಳಲ್ಲಿ ಹೆಚ್ಚು ಹೆಚ್ಚಾಗಿ ಭಾಗಿಗಳಾಗಲು ಅವರು ವಿಶೇಷ ವಾಗಿ ಪ್ರೋತ್ಸಾಹವನ್ನಿತ್ತರು. ಅವರು ಆರು ವರ್ಷಗಳಿಗಿಂತಲೂ ಅಧಿಕಕಾಲ ದಿವಾನ್ ಪದವಿಯಲ್ಲಿದ್ದರು. ಅವರ ಶಕ್ತಿ ಸಾಮರ್ಥ್ಯಗಳಿಗೆ ಮೆಚ್ಚಿ ಚಕ್ರವರ್ತಿ ಸಾರ್ವಭೌಮರವರು ಅವರಿಗೆ "ಸರ್" ಮುಂತಾದ ಬಿರುದುಗಳನ್ನು ದಯಪಾಲಿಸಿದರು. ಮಹಾಸ್ವಾಮಿಯವರು ಅವರಲ್ಲಿ ವಿಶೇಷ ವಾತ್ಸಲ್ಯವುಳ್ಳವರಾಗಿದ್ದು ೧೯೧೩ನೆಯ ಇಸವಿ ಜನವರಿ ೨೮ನೆಯ ತಾರೀಖಿನ ದಿನ "ಬಾಲಬ್ರೂಯಿ" ಬಂಗಲೆಯಲ್ಲಿ ಶ್ರೀಮಾನ್ ವಿಶ್ವೇಶ್ವ ರಯ್ಯನವರು ಏರ್ಪಡಿಸಿದ್ದ ಸಂತೋಷಕೂಟಕ್ಕೆ ತಮ್ಮ ಸೋದರರೊಡನೆ ದಯಮಾಡಿದ್ದರು.

೧೯೧೪ನೆಯ ಇಸವಿ ಫೆಬ್ರವರಿ ತಿಂಗಳು ೩ನೆಯ ತಾರೀಖಿನ ದಿನ ಮಹಾಸ್ವಾಮಿಯವರು ಬೆಂಗಳೂರು ನಗರದಲ್ಲಿ ಲಾರ್ಡ್ ಮಿಂಟೋರವರ ನಾಮಾಂಕಿತದ ಕಣ್ಣಾಸ್ಪತ್ರೆಯ ಕಟ್ಟಡದ ಪ್ರವೇಶ ಮಹೋತ್ಸವವನ್ನು ನೆರವೇರಿಸಿದರು. ಅಲ್ಲದೆ ಆ ಸುಂದರವಾದ ಕಟ್ಟಡವು ೧೯೦೯ನೆಯ ಇಸವಿಯಲ್ಲಿ ಲಾರ್ಡ್ ಮಿಂಟೋರವರು ಮೈಸೂರು ಸಂಸ್ಥಾನಕ್ಕೆ ದಯಮಾಡಿದ್ದ ಸವಿನೆನಪಿನ ಸ್ಮಾರಕವಾಗಿದ್ದುದಾಗಿ ವಿಲಾಯತಿಯಲ್ಲಿದ್ದ ಲಾರ್ಡ್ ಮಿಂಟೋರವರಿಗೆ ತಂತಿ ವರ್ತಮಾನವನ್ನು ಕಳುಹಿಸಿದರು.

**ಎರಡು ಉತ್ಸವಗಳು**

ಅದೇ ಫೆಬ್ರವರಿ ತಿಂಗಳು ೭ನೆಯ ತಾರೀಖಿನ ದಿನ ಮಹಾಪ್ರಭು ಗಳವರು ಚಿಕ್ಕಮಗಳೂರಿಗೆ ದಯಮಾಡಿ ಅಲ್ಲಿಯ ವೀರಶೈವ ವಿದ್ಯಾರ್ಥಿ ನಿಲಯದ ಅಸ್ತಿಭಾರಶಿಲೆಯನ್ನು ಪ್ರತಿಷ್ಠಿಸಿದರು. ಮಹಾಸ್ವಾಮಿಯವರು

ಆಗ್ಗೆ ಸ್ವಲ್ಪಕಾಲಕ್ಕೆ ಹಿಂದೆ, ಆ ಬಗೆಯ ವಿದ್ಯಾರ್ಥಿನಿಲಯಗಳು ಸ್ಥಾಪಿತವಾಗುವುದೆಷ್ಟು ಆವಶ್ಯಕವೆಂದು ಒಂದು ಭಾಷಣದಲ್ಲಿ ಅಪ್ಪಣೆ ಕೊಡಿಸಿದ್ದರು. ಅಮೋಘವಾದ ಆ ಸಲಹೆಯನ್ನೇ ಮನನಮಾಡಿ ಚಿಕ್ಕಮಗಳೂರಿನ ಕಾಫೀಪ್ಲಾಂಟರವರೂ ಸಂಪದಭಿವೃದ್ಧಿ ಸಮಾಜದ ಸದಸ್ಯರೂ ಆಗಿದ್ದ ಶ್ರೀಮಾನ್ ಸಿ. ಶ್ರೀನಿವಾಸರಾಯರವರು ತೀವ್ರಾಸಕ್ತಿಯಿಂದ ಪ್ರಯತ್ನಮಾಡಿದ ಫಲವಾಗಿಯೂ, ಬೇಲೂರಿನ ಬಳಿಯ ಎಲಹಂಕ ಮಠದ ಶ್ರೀ ಶಿವನಂಜುಂಡೇಂದ್ರದೇಶಿಕ ಸ್ವಾಮಿಗಳವರು ದ್ರವ್ಯಸಹಾಯ ಮಾಡಿದುದರ ಫಲವಾಗಿಯೂ ಆ ವಿದ್ಯಾರ್ಥಿನಿಲಯವು ಸ್ಥಾಪಿತವಾಗಲನುಕೂಲಿಸಿತೆಂದು ಅನೇಕರು ಕೊಂಡಾಡಿದರು.

**ಮೈಸೂರು ಬ್ಯಾಂಕಿನ ಏರ್ಪಾಡು**

ಮಹಾಸ್ವಾಮಿಯವರ ದೂರಾಲೋಚನೆಯಿಂದ ೧೯೧೩ನೆಯ ಇಸವಿ ಮಾರ್ಚಿ ತಿಂಗಳಿನಲ್ಲಿ "ಮೈಸೂರ್ ಬ್ಯಾಂಕ್" ಎಂಬ ಕುಸೀದಾಲಯವು ಏರ್ಪಟ್ಟು ಲೇವಾದೇವಿಯ ಸೌಕರ್ಯಗಳು ಕಲ್ಪಿತವಾದುವು. ವಾಣಿಜ್ಯಾಭಿವೃದ್ಧಿಗೂ ಸಂಪದಭಿವೃದ್ಧಿಕಾರ್ಯಗಳಿಗೂ ಅದರಿಂದ ವಿಶೇಷ ಸಹಾಯವಾಯಿತು.

**ಶ್ರೀಮದ್ಯುವರಾಜ ಶ್ರೀ ಕಂಠೀರವ ನರಸಿಂಹರಾಜ ಒಡೆಯರವರ ಯೂರೋಪು ಖಂಡದ ಪ್ರವಾಸ**

ಶ್ರೀಮದ್ಯುವರಾಜ ಶ್ರೀ ಕಂಠೀರವ ನರಸಿಂಹರಾಜ ಒಡೆಯರವರು ೧೯೧೩ನೆಯ ಇಸವಿ ಮಾರ್ಚಿ ತಿಂಗಳಿನಲ್ಲಿ ಯೂರೋಪು ಖಂಡಕ್ಕೆ ದಯಮಾಡಿದರು. ಪಾಶ್ಚಾತ್ಯ ದೇಶಗಳಲ್ಲಿ ಕಲ್ಪಿತವಾಗಿದ್ದ ಪ್ರಜಾ ಸೌಕರ್ಯಗಳನ್ನೆಲ್ಲ ಪ್ರತ್ಯಕ್ಷವಾಗಿ ಕಂಡು ಬಂದು, ಪ್ರಜಾವತ್ಸಲರಾದ ತಮ್ಮ ಅಗ್ರಜರವರಿಗೆ ಬಲಭುಜವಾಗಿ ನಿಂತು ಸಹಾಯ ಮಾಡಬೇಕೆಂಬುದೇ ಆ ಪ್ರವಾಸದ ಸದುದ್ದೇಶ. ಶ್ರೀಮದ್ಯುವರಾಜರವರ ವಿನಯಶೀಲತೆ, ಸ್ನೇಹಪರತೆ, ಮುಂತಾದ ಸದ್ಗುಣಗಳ ಪ್ರಭಾವದಿಂದ ಅವರಿಗೆ ಎಲ್ಲೆಲ್ಲಿಯೂ ಪ್ರೀತಿಗೌರವಗಳ ಸತ್ಕಾರಗಳು ನಡೆದುವು. ಗ್ಲಾಸ್ಗೋ ನಗರದಲ್ಲಿ ಪುರಪ್ರಮುಖರೂ ಅಧಿಕಾರವರ್ಗದವರೂ ಅವರ ಗೌರವಾರ್ಥವಾಗಿ ಏರ್ಪಡಿಸಿದ್ದ ಗೌರವ ಕೂಟದಲ್ಲಿ ಅಧ್ಯಕ್ಷತೆ ವಹಿಸಿದ್ದ ಶ್ರೀಮಾನ್ ಬೇಯ್ಲಿ ಪ್ಯಾಕ್ಸ್ಟನ್ ಎಂಬ ಮಹಾಶಯರು ಮಾಡಿದ ಭಾಷಣವನ್ನು ಸ್ಮರಿಸಿದರೆ ಹೆಮ್ಮೆ ಸಂತೋಷಗಳುಂಟಾಗುತ್ತವೆ. ಆ ಭಾಷಣದ ಕೆಲವು ವಾಕ್ಯಗಳನ್ನು ಇಲ್ಲಿ ಉದಾಹರಿಸಬಹುದಾಗಿದೆ: "......ಬ್ರಿಟಿಷ್ ಸಾಮ್ರಾಜ್ಯಕ್ಕೆ ಸೇರಿ

ಸಮುದ್ರಗಳಿಂದಾಚೆಗಿರುವ ನಾಡುಗಳಿಂದ ಪ್ರಖ್ಯಾತ ಪುರುಷರಾದ ಮಹಾಶಯರುಗಳು ಬಂದಾಗ ಅವರಿಗೆ ಸ್ವಾಗತವನ್ನು ಬಯಸಿ ಸತ್ಕರಿಸುವುದೇ ನಮಗೊಂದು ಸಂತೋಷ. . . ನಮ್ಮ ಗ್ಲಾಸ್ಗೋ ನಗರಕ್ಕೆ ಭರತಖಂಡದ ಸಂಸ್ಥಾನಗಳ ಅಧಿಪತಿಗಳೂ ಅವರ ಬಂಧುಗಳೂ ಹಲವರು ಬಂದಿದ್ದಾರೆ. ಅವರುಗಳ ಪ್ರಗತಿಪರವಾದ ಆಡಳಿತಗಳ ವಿಧಾನವನ್ನೂ ಮೇಧಾಶಕ್ತಿಯನ್ನೂ ಮೆಚ್ಚಿ ತಲೆದೂಗಲು ನಮಗೆ ಅವಕಾಶ ದೊರೆತಿದೆ. ಆದರೆ ಮೈಸೂರು ಸಂಸ್ಥಾನದ ಶ್ರೀಮದ್ಯುವರಾಜರಿಗಿಂತಲೂ ಹೆಚ್ಚಾಗಿ ನಮ್ಮ ಗೌರವಕ್ಕೆ ಅರ್ಹರಾದವರು ಮತ್ತಾರೂ ಇಲ್ಲ. ಅವರು ಟಾಲಮಿಯೆಂಬ ಗ್ರೀಕನ ಕಾಲದಷ್ಟು ಪ್ರಾಚೀನವಾದ ಶ್ರೇಷ್ಠವಾದ ರಾಜವಂಶವನ್ನಲಂಕರಿಸಿರತಕ್ಕವರು. ದಕ್ಷಿಣ ಭಾರತದಲ್ಲೆಲ್ಲ ಅತ್ಯಂತ ಪ್ರಾಮುಖ್ಯವಾದ ಸಂಸ್ಥಾನಗಳಲ್ಲೊಂದಾದ ಮೈಸೂರು ಸಂಸ್ಥಾನದ ಶ್ರೀಮನ್ಮಹಾರಾಜರವರ ಅನುಜರಾಗಿರುವ ಶ್ರೀಮದ್ಯುವರಾಜರವರು ಸಂಸ್ಥಾನದ ರಾಜ್ಯಭಾರದಲ್ಲಿ ತಮ್ಮ ಅಗ್ರಜರಿಗೆ ಸಹಾಯಕರಾಗಿದ್ದಾರೆ. . . . ಸಾಮಾನ್ಯವಾಗಿ ಪೂರ್ವ ದೇಶಗಳ ರಾಜ್ಯಭಾರಗಳಲ್ಲಿ ಸರ್ವಥಾ ಕಂಡುಬಾರದಿರುವಷ್ಟು ಮಟ್ಟಿನ ಸುಧಾರಣೆಗಳಿಂದಲೂ ಧ್ಯೇಯಗಳಿಂದಲೂ ಕೂಡಿದ ಪರಿಷ್ಕಾರವಾದ ರಾಜ್ಯಭಾರಕ್ರಮಕ್ಕೆ ಮಾದರಿಯಾಗಿ ಮೈಸೂರು ಸಂಸ್ಥಾನವು ಶೋಭಿಸುತ್ತಿದೆ. ಈ ದಿನ ಬೆಳಗ್ಗೆ ಶ್ರೀಮದ್ಯುವರಾಜರವರು ಇಲ್ಲಿಯ ಆಡಳಿತ ನಿರ್ವಹಣಕ್ಕೆ ಸಂಬಂಧಪಟ್ಟ ಅತ್ಯಂತ ಗಹನ ವಿಚಾರಗಳನ್ನು ಕೂಡ ತೀವ್ರಾಸಕ್ತಿಯಿಂದ ಕೂಲಂಕಷವಾಗಿ ಪರಿಶೀಲಿಸಿದರು; ವಿದ್ಯುಚ್ಛಕ್ತಿಯನ್ನೊದಗಿಸುವ ಏರ್ಪಾಡು, ಊರಿನ ಕಶ್ಮಲ ಜಲವನ್ನು ದೂರವಾಗಿ ಸಾಗಿಸಿ ಅನಾರೋಗ್ಯಕ್ಕೆ ಕಾರಣವಾಗದಂತೆ ವ್ಯವಸ್ಥೆಮಾಡುವ ಏರ್ಪಾಡು; ಮುಂತಾದುವುಗಳಿಗೆ ಸಂಬಂಧಪಟ್ಟ ಕ್ಲಿಷ್ಟ ವಿಚಾರಗಳೆಲ್ಲ ತಮಗೆ ಲೀಲಾಜಾಲವಾಗಿರುವುದನ್ನೂ, ಯಾವ ಏರ್ಪಾಡು ಹೇಗೆ ನಡೆಯಬೇಕೆಂಬ ವಿಚಾರದಲ್ಲಿ ತಮಗಿರುವ ನಿಷ್ಕೃಷ್ಟಜ್ಞಾನವನ್ನೂ ಅಧಿಕ ಅಪಾರವಾದ ಅನುಭವವನ್ನೂ ಶ್ರೀಮದ್ಯುವರಾಜರವರು ಆಗ ಬಹು ಚೆನ್ನಾಗಿ ವ್ಯಕ್ತಗೊಳಿಸಿದರು. ಈ ಏರ್ಪಾಡುಗಳ ಮತ್ತು ಇದೇ ಬಗೆಯ ಇತರ ಅನೇಕ ಏರ್ಪಾಡುಗಳ ವಿಚಾರದಲ್ಲಿ ಮೈಸೂರು ಸಂಸ್ಥಾನದ ರಾಜ್ಯಭಾರವೆಷ್ಟು ಮುಂದುವರಿದಿದೆಯೆಂಬುದನ್ನು ಗಮನಿಸಿದರೆ, ಶ್ರೀಮದ್ಯುವರಾಜರವರು ಇಷ್ಟು ಮಟ್ಟಿನ ಪರಿಶ್ರಮವನ್ನು ವ್ಯಕ್ತಗೊಳಿಸಿದುದು ಸಹಜವಾಗಿದ್ದಿತೇ ಹೊರತು ಅದರಲ್ಲಿ ಆಶ್ಚರ್ಯವೇನೂ ಇಲ್ಲ. ಮೈಸೂರು ಸಂಸ್ಥಾನದ ಸಂಪತ್ತಿಗೂ ಅಭ್ಯುದಯಕ್ಕೂ ಮತ್ತು

ಆರೋಗ್ಯಕರವಾದ ಸನ್ನಿವೇಶಗಳಿಗೂ ಅಲ್ಲಿಯ ಶ್ರೇಷ್ಠ ರೀತಿಯ ಜಲ ನಿರ್ಗಮನದ ಏರ್ಪಾಡು, ಸೊಗಸಾದ ನೀರಾವರಿ ಜಲಾಶಯಗಳ ಏರ್ಪಾಡು ಮತ್ತು ಕಾವೇರಿಯ ಜಲದಿಂದ ಉತ್ಪತ್ತಿಯಾದ ವಿದ್ಯುಚ್ಛಕ್ತಿಯಿಂದ ಕೆಲಸ ನಡೆಯುತ್ತಿರುವ ಸುಪ್ರಸಿದ್ಧವಾದ ಚಿನ್ನದ ಗಣಿಗಳ ಏರ್ಪಾಡು— ಮುಂತಾದುವು ಕಾರಣವಾಗಿವೆ. ಮೈಸೂರು ಸಂಸ್ಥಾನದ ಶ್ರೇಷ್ಠ ರೀತಿಯ ರಾಜ್ಯಾಡಳಿತಕ್ಕೆ ಶ್ರೀಮನ್ಮಹಾರಾಜರವರ ಮತ್ತು ಶ್ರೀಮದ್ಯುವರಾಜರವರ ವಿವೇಕ ವಿಚಕ್ಷಣೆಗಳೂ ದೂರದೃಷ್ಟಿಯೂ ಮೇಧಾವಿಗಳಾದ ಭಾರತೀಯ ರನೇಕರು ದಿವಾನ್ ಪದವಿಯನ್ನಲಂಕರಿಸಿ ಪ್ರದರ್ಶಿಸಿದ ಸಾಮರ್ಥ್ಯವೂ ಮೂಲಕಾರಣಗಳಾಗಿವೆ. ಶ್ರೀಮನ್ಮಹಾರಾಜರವರ, ಶ್ರೀಮದ್ಯುವರಾಜ ರವರ ಮತ್ತು ಸಚಿವರುಗಳ ಅಧ್ಯವಸಾಯದ ಫಲವಾಗಿ ಕಾರ್ಯವಿಚಕ್ಷಣೆ ಯಲ್ಲಿಯೂ ಸಾಧನ ಸಲಕರಣೆಗಳಲ್ಲಿಯೂ ಸಮಗ್ರ ಭರತಖಂಡದಲ್ಲಿಯೇ ಮತ್ತೆಲ್ಲಿಯುವುಗಳೂ ಮೀರಿಸಿಲ್ಲದಷ್ಟು ಶ್ರೇಷ್ಠವಾದ ಸಂಶೋಧನ ಪ್ರಯೋಗ ಪರೀಕ್ಷಾಶಾಲೆಗಳೂ (ಎಂದರೆ, 'ರಿಸರ್ಚ್ ಲೆಬಾರಟರಿ' ಗಳೂ), ಆಸ್ಪತ್ರೆಗಳೂ, ನೀರಾವರಿ ಜಲಾಶಯಗಳೇ ಮುಂತಾದ ಸಂಪದಭಿವೃದ್ಧಿ ಸಾಧನಗಳೂ ಮೈಸೂರು ಸಂಸ್ಥಾನಕ್ಕೆ ಲಭಿಸಿವೆ. ಒಟ್ಟು ಇಪ್ಪತ್ತೊಂಬತ್ತು ಸಾವಿರ ಚದರ ಮೈಲಿಗಳಿಗೆ ಮೀರಿದ ವಿಸ್ತೀರ್ಣವುಳ್ಳದೂ ಒಟ್ಟು ಐವತ್ತು ಲಕ್ಷಗಳಿಗಿಂತ ಹೆಚ್ಚಿನ ಜನಸಂಖ್ಯೆಯುಳ್ಳದೂ ಮತ್ತು ಸುಮಾರು ಮೂರು ಕೋಟಿ ರೂಪಾಯಿಗಳ ವಾರ್ಷಿಕ ವರಮಾನವುಳ್ಳದೂ ಆಗಿರುವ ದೊಡ್ಡ ಸಂಸ್ಥಾನವಾದ ಮೈಸೂರು ಸಂಸ್ಥಾನದ ಪ್ರತಿನಿಧಿಗಳಾಗಿ ದಯಮಾಡಿರುವ ಸುಸಂಸ್ಕೃತರಾದ ಶ್ರೀಮದ್ಯುವರಾಜರವರಿಗೆ ಈ ಗ್ಲಾಸ್ಗೋ ನಗರದಲ್ಲಿ ಆದರದ ಸ್ವಾಗತವು ಲಭಿಸಬೇಕಾದುದು ಯುಕ್ತ ವಾಗಿಯೇ ಇದೆ. ಶ್ರೀಮದ್ಯುವರಾಜರವರಿಗೆ ಆದರಪೂರ್ವಕವಾಗಿ ಸ್ವಾಗತ ವನ್ನು ಬಯಸುವ ಮಹತ್ತರವಾದ ಗೌರವವು ನನಗೆ ಲಭಿಸಿದೆ.''

ಶ್ರೀಮದ್ಯುವರಾಜ ಶ್ರೀ ಕಂಠೀರವ ನರಸಿಂಹರಾಜ ಒಡೆಯರವರು ಯೂರೋಪು ಖಂಡದ ಪ್ರವಾಸದಿಂದ ೧೯೧೩ನೆಯ ಇಸವಿ ಅಕ್ಟೋಬರು ತಿಂಗಳಿನಲ್ಲಿ ಮೈಸೂರು ಸಂಸ್ಥಾನಕ್ಕೆ ಹಿಂತಿರುಗಿದರು. ಅಕ್ಟೋಬರು ೪ನೆಯ ತಾರೀಖಿನ ದಿನ ಬೆಂಗಳೂರು ನಗರದಲ್ಲಿಯೂ, ೫ನೆಯ ತಾರೀಖಿನ ದಿನ ಮೈಸೂರು ನಗರದಲ್ಲಿಯೂ ಸಾರ್ವಜನಿಕ ಸಭೆಗಳು ನಡೆದು ರಜತ ಕರಂಡಗಳಲ್ಲಿ ವಿಜ್ಞಾಪನಾ ಪತ್ರಿಕೆಗಳು ಸಮರ್ಪಿತವಾದುವು.

ಮಹಾಸ್ವಾಮಿಯವರ ರಾಜ್ಯಭಾರ ವಿಚಕ್ಷಣೆಯ ಕೀರ್ತಿ ದುಂದುಭಿಯು ಸ್ವದೇಶ ವಿದೇಶಗಳಲ್ಲೆಲ್ಲ ಮೊಳಗಿತು. ಬ್ರಿಟಿಷ್

ಸಮ್ರಾಟರೂ, ಬ್ರಿಟಿಷ್ ಸರ್ಕಾರದವರೂ ಮತ್ತು ವೈಸ್ರಾಯಿಯವರೂ ಮೆಚ್ಚಿಕೆಯಿಂದ ಶ್ಲಾಘಿಸಿದರು. ೧೯೧೩ನೆಯ ಇಸವಿ ನವೆಂಬರು ತಿಂಗಳಿನಲ್ಲಿ—ಆಗ ವೈಸ್ರಾಯಿಯವರಾಗಿದ್ದ—ಲಾರ್ಡ್ ಹಾರ್ಡಿಂಜ್‌ರವರು ಮೈಸೂರು ಸಂಸ್ಥಾನಕ್ಕೆ ದಯಮಾಡಿದ್ದಾಗ ಅದಕ್ಕೆ ಪುರಸ್ಕಾರ ರೂಪದ ಪ್ರತಿಫಲವು ಲಭಿಸಿತು. ೧೮೮೧ನೆಯ ಇಸವಿಯಲ್ಲಿ

**ಲಾರ್ಡ್ ಹಾರ್ಡಿಂಜ್ ರವರ ಆಗಮನ**

ಇಂಗ್ಲಿಷರು ಶ್ರೀ ಚಾಮರಾಜೇಂದ್ರ ಒಡೆಯರವರಿಗೆ ರಾಜ್ಯಭಾರವನ್ನು ವಹಿಸಿದಾಗ, ರಾಜ್ಯಭಾರಾಧಿಕಾರ ಪ್ರದಾನ ಪತ್ರಿಕೆಯಾದ "ಇನ್‌ಸ್ಟ್ರುಮೆಂಟ್ ಆಫ್ ಟ್ರ್ಯಾನ್ಸ್‌ಫರ್" ಎಂಬ ಪತ್ರವು ಹುಟ್ಟಿದ್ದಿತು. ಅದರ ಹೆಸರೂ ಅದರಲ್ಲಿ ಬರೆದಿದ್ದ ವಿಷಯವೂ ಮಾರ್ಪಟ್ಟು ಮೈಸೂರು ಸಂಸ್ಥಾನದ ಸ್ಥಾನಮಾನಗಳನ್ನು ಹೆಚ್ಚಿಸುವ ಏರ್ಪಾಡು ೧೯೧೩ನೆಯ ಇಸವಿಯಲ್ಲಿ ನಡೆಯಿತು. ಒಪ್ಪಂದವೊಂದು ಹುಟ್ಟಿ ಅದಕ್ಕನುಸಾರವಾಗಿ ಮೈಸೂರು ಸಂಸ್ಥಾನಕ್ಕೂ ಬ್ರಿಟಿಷ್ ಸರ್ಕಾರಕ್ಕೂ ಇರತಕ್ಕ ಪರಸ್ಪರ ಸಂಬಂಧವು ನಿಗದಿಯಾಗಿ ನಿರ್ಧರವಾಯಿತು. ವೈಸ್ರಾಯಿಯವರು, ಆ ವಿಷಯವನ್ನು ೧೯೧೩ನೆಯ ಇಸವಿ ನವೆಂಬರು ೬ನೆಯ ತಾರೀಖಿನ ದಿನ, ಮಹಾಸ್ವಾಮಿಯವರು ತಮಗಾಗಿ ಏರ್ಪಡಿಸಿದ್ದ ಔತಣ ಕಾಲದಲ್ಲಿ ಶ್ರುತಪಡಿಸಿದರು. ಆ ಮಾರ್ಪಾಡಿನಿಂದ ಭಾರತೀಯ ಸಂಸ್ಥಾನಾಧೀಶರುಗಳ ಮಂಡಲದಲ್ಲಿ ಅವರಿಗೆ ಯುಕ್ತವಾಗಿ ಲಭಿಸಬೇಕಾಗಿದ್ದ ಅಧಿಕತರವಾದ ಸ್ಥಾನಮಾನಗಳು ದೊರೆತುವು. ಮೈಸೂರು ಸಂಸ್ಥಾನದ ವಿಸ್ತೀರ್ಣ, ಜನಸಂಖ್ಯೆ ಮತ್ತು ಪ್ರಾಮುಖ್ಯತೆಗಳಿಗನುಗುಣವಾದ ತೂಕವು ಲಭಿಸಿತು. ವೈಸ್ರಾಯಿಯವರು ಆ ಮಾರ್ಪಾಡನ್ನು ತಿಳಿಸುವ ಕಾಲದಲ್ಲಿ, ಸಾರ್ವಭೌಮ ಸರ್ಕಾರದವರು ನನ್ನ ಸಲಹೆಯನ್ನು ಅಂಗೀಕರಿಸುವಾಗ ಶ್ರೀಮನ್ಮಹಾರಾಜರವರು ಈ ಸಂಬಂಧವಾಗಿ ಪ್ರಬಲತರವಾಗಿಯೂ ಆದರೆ ಮಿತವಚನಗಳಿಂದಲೂ ತಮ್ಮ ವಾದವನ್ನು ನಿರೂಪಿಸಿದ್ದುದಾಗಿಯೂ, ಶ್ರೀಮನ್ಮಹಾರಾಜರವರ ಸಚ್ಛೀಲದ ಮತ್ತು ಖ್ಯಾತಿಯ ದೆಸೆಯಿಂದ ಅದಕ್ಕೆ ಮತ್ತಷ್ಟು ತೂಕವೇರಿದುದಾಗಿಯೂ ತಿಳಿಸಿದ್ದಾರೆ. ಈ ಅಭಿಪ್ರಾಯದಲ್ಲಿ ನನಗೂ ಸಹ ಸಂಪೂರ್ಣ ಸಮ್ಮತಿಯುಂಟು. ದೊಡ್ಡದಾದ ಈ ಬ್ರಿಟಿಷ್ ಆಡಳಿತಕ್ಕೆ ಹೊಣೆಗಾರರಾಗಿರುವವರು ಶ್ರೀಮನ್ಮಹಾರಾಜರವರಲ್ಲಿ ಅತ್ಯಧಿಕವಾದ ಆದರ ಗೌರವಗಳನ್ನಿಟ್ಟುಕೊಂಡಿರುವರೆಂಬುದಕ್ಕೆ ಈ ರೀತಿ ಕಾರ್ಯರೂಪದ ಕುರುಹಿನಂತಿರುವ ಈ ಪ್ರಯಾಣವನ್ನೊದಗಿಸುವ ಸುಯೋಗವು ನನಗೆ ದೊರೆತಿದೆ" ಎಂದು ಶ್ಲಾಘಿಸಿದರು.

ಸಂಸ್ಥಾನಕ್ಕೆ ಈ ಬಗೆಯ ನೂತನಗೌರವವು ಲಭಿಸಿದುದಕ್ಕೆ ಮಹಾಸ್ವಾಮಿಯವರ ಸಂತತವಾದ ಅಧ್ಯವಸಾಯವೇ ಮುಖ್ಯಕಾರಣ. ಮಹಾಪ್ರಭುಗಳವರು ಎಷ್ಟು ಶ್ರದ್ಧೆಯಿಂದಲೂ ಎಷ್ಟುಮಟ್ಟಿನ ವಿಮರ್ಶೆ ವಿವೇಚನೆಗಳಿಂದಲೂ ಪತ್ರವ್ಯವಹಾರ ನಡೆಯಿಸಿದ್ದರೆಂಬುದಕ್ಕೆ ವೈಸ್ರಾಯಿಯವರು ತಮ್ಮ ಭಾಷಣದಲ್ಲಿ, "ಈಗ್ಗೆ ಸುಮಾರು ನಾಲ್ಕು ತಿಂಗಳುಗಳ ಹಿಂದೆ ಶ್ರೀಮನ್ಮಹಾರಾಜರವರು ಬರೆದಿದ್ದ ಪತ್ರದಲ್ಲಿ ಇದುವರೆಗೂ ಆಚರಣೆಯಲ್ಲಿದ್ದ ರಾಜ್ಯಭಾರಾಧಿಕಾರ ಪ್ರದಾನ ಪತ್ರಿಕೆಯಲ್ಲಿದ್ದ ಹಲವು ನ್ಯೂನಾತಿರೇಕಗಳನ್ನು ಉದ್ಘಾಟಿಸಿದ್ದರು" ಎಂದು ಹೇಳಿದ ಮಾತುಗಳೇ ಪ್ರಮಾಣ.

ಮಹಾಸ್ವಾಮಿಯವರು ವೈಸ್ರಾಯಿಯವರಾದ ಲಾರ್ಡ್ ಹಾರ್ಡಿಂಜ್‌ರವರನ್ನು ಪ್ರೀತ್ಯಾದರಗಳಿಂದ ಸತ್ಕರಿಸಿದರೆಂಬುದನ್ನು ಸೂಚಿಸಬೇಕಾದುದೇ ಇಲ್ಲ. ಅತಿಥಿಸತ್ಕಾರದಲ್ಲಿ ಅವರು ಪ್ರದರ್ಶಿಸುತ್ತಿದ್ದ ಆದರವೂ, ಔದಾರ್ಯವೂ, ವಿತರಣೆಯೂ ಜಗತ್ಪ್ರಸಿದ್ಧವಾಗಿದ್ದುವು.

ಕಾರಾಪುರದಲ್ಲಿ ಕಾಡಾನೆಗಳನ್ನು ಹಿಡಿಯುವ ಖೆಡ್ಡದ ಏರ್ಪಾಡೂ ಸಾಂಗವಾಗಿ ನಡೆಯಿತು; ಒಂಬತ್ತು ಅಡಿ ನಾಲ್ಕು ಅಂಗುಲಗಳ ಉದ್ದವಿದ್ದ ಭಾರಿ ಹುಲಿಯನ್ನೂ ವೈಸ್ರಾಯಿಯವರು ಬಂದೂಕ ಹೊಡೆದು ಬೇಟೆಯಾಡಿದರು. ವೈಸ್ರಾಯಿಯವರು ಬೆಂಗಳೂರು ನಗರದಲ್ಲಿ ಸರ್ ಕೆ. ಶೇಷಾದ್ರಿ ಐಯರವರ ಲೋಹಪ್ರತಿಮೆಯ ಅನಾವರಣ ಮಹೋತ್ಸವವನ್ನು ನೆರವೇರಿಸಿ ಅವರ ಶಕ್ತಿಸಾಮರ್ಥ್ಯಗಳನ್ನು ಶ್ಲಾಘಿಸಿದುದನ್ನು ಹಿಂದೆಯೇ ಶ್ರುತಪಡಿಸಲಾಗಿದೆ.

**ಶ್ರೀಮದ್ಯುವರಾಜ ಶ್ರೀ ಕಂಠೀರವ ನರಸಿಂಹರಾಜ ಒಡೆಯರವರು ಅಸಾಧಾರಣ ಸಚಿವರಾಗಿ ನೇಮಕವಾದುದು**

ಮಹಾಸ್ವಾಮಿಯವರು ೧೯೧೪ನೆಯ ಇಸವಿಯಲ್ಲಿ ಶ್ರೀಮದ್ಯುವರಾಜ ಶ್ರೀ ಕಂಠೀರವ ನರಸಿಂಹರಾಜ ಒಡೆಯರವರನ್ನು ಮಂತ್ರಾಲೋಚನಾ ಸಭೆಯ ಸದಸ್ಯರಾದ ಅಸಾಧಾರಣ ಸಚಿವರನ್ನಾಗಿ ನೇಮಿಸಿ ಆಜ್ಞೆಯನ್ನು ದಯಪಾಲಿಸಿದರು. ಅವರು ಆ ಪದವಿಯನ್ನಲಂಕರಿಸಿ ಕೆಲಸ ಮಾಡಿದ ಅವಧಿಯಲ್ಲಿ, ತಮ್ಮ ಶಕ್ತಿ ಸಾಮರ್ಥ್ಯಗಳನ್ನೂ, ಜ್ಞಾನಸಂಪತ್ತನ್ನೂ, ವಿದೇಶ ಸಂಚಾರಕಾಲದಲ್ಲಿ ಪಡೆದ ಕಾರ್ಯಾನುಭವವನ್ನೂ ವಿನಿಯೋಗಿಸಿ ದೇಶವಾತ್ಸಲ್ಯದಿಂದ ಶ್ರಮಿಸಿ ಕೃಪೆ ಮಾಡಿದರು. ಅವರು ಸರ್ಕಾರಿ ಕಾರ್ಯಕಲಾಪಗಳನ್ನು ನೆರವೇರಿಸುವಲ್ಲಿ ಅನುಸರಿಸುತ್ತಿದ್ದ ವಿಧಾನವು ಸಮಸ್ತರಿಗೂ ಉಪಾದೇಯವಾದುದು. ಅದರ ವಿಚಾರದಲ್ಲಿ

ಒಂದೆರಡು ಸಂಗತಿಗಳನ್ನು ಈ ಸಂದರ್ಭದಲ್ಲಿ ಶ್ರುತಪಡಿಸಿದರೆ ಬಹುಶಃ ಅಪ್ರಕೃತವಾಗಲಾರದು. ಮಹಾಸ್ವಾಮಿಯವರು ಕ್ಲುಪ್ತಕಾಲಕ್ಕೆ ಸರಿಯಾಗಿ ಅರೆನಿಮಿಷವೂ ವ್ಯತ್ಯಾಸವಿಲ್ಲದಂತೆ ಕಾರ್ಯಕ್ರಮವನ್ನನುಸರಿಸಿ ಕೆಲಸ ಮಾಡುತ್ತಿದ್ದರು. ಕೈಕೆಳಗಿನ ಅಧಿಕಾರಿ ವರ್ಗದವರಲ್ಲಿ ಅವರು ತೋರಿಸುತ್ತಿದ್ದ ಕ್ಷಮೆಯು ಅವರ ಮತ್ತೊಂದು ಅಮೋಘ ಗುಣ. ಕೈಕೆಳಗಿನ ಅಧಿಕಾರಿಗಳು ತಪ್ಪು ಮಾಡಿದಾಗ ಅವರು ಸ್ವಲ್ಪಮಟ್ಟಿಗೆ ತಮ್ಮ ಅಸಮಾಧಾನವನ್ನು ವ್ಯಕ್ತಗೊಳಿಸುತ್ತಿದ್ದರಾದರೂ ಅಪಾರವಾದ ಕ್ಷಮೆಯಿಂದ ಉತ್ತರ ಕ್ಷಣದಲ್ಲೇ ಪ್ರೀತಿ ವಿಶ್ವಾಸಗಳನ್ನು ತೋರಿಸಿ, ಅವರು ತಪ್ಪುಗಳನ್ನೇ ಮಾಡಿಲ್ಲದಿದ್ದರೆ ಹೇಗೋ ಹಾಗೆ ವರ್ತಿಸುತ್ತಿದ್ದರು. ಮಹಾಸ್ವಾಮಿಯವರು ಪ್ರದರ್ಶಿಸುತ್ತಿದ್ದ ಮತ್ತೊಂದು ಅಮೋಘ ಗುಣವೆಂದರೆ, ತಮ್ಮ ಕೈಕೆಳಗಿನ ಅಧಿಕಾರಿ ವರ್ಗದವರೊಡನೆ ಮಾಡುತ್ತಿದ್ದ ವಿಚಾರ ವಿನಿಮಯ. ಕೈಕೆಳಗಿನ ಅಧಿಕಾರಿಗಳು ತಮ್ಮೊಡನೆ ನಾನಾ ವಿಚಾರಗಳನ್ನೂ ಚರ್ಚಿಸಿ ಭಿನ್ನಾಭಿಪ್ರಾಯವನ್ನು ಸೂಚಿಸುವುದಕ್ಕೆ ಕೂಡ ಮಹಾಸ್ವಾಮಿಯವರು ಪೂರ್ಣಾವಕಾಶ ಕೊಡುತ್ತಿದ್ದರು. ನೂರಕ್ಕೆ ತೊಂಬತ್ತೊಂಬತ್ತು ಸಂದರ್ಭಗಳಲ್ಲಿ ಅವರು ತಮ್ಮ ಅಭಿಪ್ರಾಯವೇ ಸರಿಯೆಂಬುದನ್ನು ತಮ್ಮ ಕೈಕೆಳಗಿನ ಅಧಿಕಾರಿಗಳು ಹೃತ್ಪೂರ್ವಕವಾಗಿ ಒಪ್ಪಿಕೊಳ್ಳುವಂತೆ ಮಾಡುತ್ತಿದ್ದರಾದರೂ ಒಂದೊಂದು ಸಂದರ್ಭದಲ್ಲಿ ತಮ್ಮೊಡನೆ ಚರ್ಚೆ ನಡೆಯಿಸಿದ ಅಧಿಕಾರಿಗಳ ಅಭಿಪ್ರಾಯವೇ ಸರಿಯೆಂದು ತೋರಿದಾಗ, "ನಿಜ; ನೀವು ಹೇಳುವುದೇ ಸರಿ" ಎಂದು ಹೇಳಿ ಅದನ್ನು ಅಂಗೀಕರಿಸಲು ಲೇಶಮಾತ್ರವೂ ಹಿಂತೆಗೆಯುತ್ತಿರಲಿಲ್ಲ. ಒಂದು ಸಂದರ್ಭದಲ್ಲಿ ಅವರ ಕೈಕೆಳಗಿನ ಅಧಿಕಾರಿಯವರೊಬ್ಬರು ಸೈನ್ಯದ ಇಲಾಖೆಯಲ್ಲಿ ವ್ಯವಸ್ಥೆಯಾಗಬೇಕಾಗಿದ್ದ ಕ್ಲಿಷ್ಟ ವಿಚಾರಗಳಲ್ಲಿ ಕೆಲವನ್ನು ಕುರಿತು ಬಹಳ ಹೊತ್ತು ಚರ್ಚೆಮಾಡಿದ ನಂತರ, "ಹಾಗಾದರೆ, ಮಹಾಸ್ವಾಮಿಯವರು ಅಪ್ಪಣೆ ಮಾಡಿದುದನ್ನು ನೆರವೇರಿಸುತ್ತೇನೆ" ಎಂದರಂತೆ. ಆಗ ಅವರು ನಕ್ಕು, "ಸರಿ. ನೀವು ಈಗಿನ ಅಧಿಕಾರದಲ್ಲಿ ನೇಮಕವಾಗಿರುವುದು ನಮ್ಮ ಅಪ್ಪಣೆಯನ್ನು ನೆರವೇರಿಸುವುದಕ್ಕಾಗಿಯೇ. ಅಷ್ಟು ಮಾತ್ರವೇ ನಮ್ಮ ಉದ್ದೇಶವಾಗಿದ್ದರೆ ನಾವು ಇಷ್ಟು ಹೊತ್ತು ನಿಮ್ಮೊಡನೆ ಚರ್ಚೆಮಾಡಿರುವುದಾದರೂ ಏತಕ್ಕೆ? ನಾವಿಬ್ಬರೂ ವಿಚಾರ ವಿನಿಮಯ ಮಾಡಿಕೊಂಡು ಒಂದು ನಿರ್ಧಾರಕ್ಕೆ ಬರಬೇಕೆಂದಲ್ಲವೆ?" ಎಂದು ಅಪ್ಪಣೆ ಕೊಡಿಸಿ ಮತ್ತೆ ಚರ್ಚೆಗೆ ಪ್ರಾರಂಭಿಸಿದರು. ಕೊನೆಗೆ, "ನಿಜ. ಈ ಸಂದರ್ಭದಲ್ಲಿ ನೀವು ಸಲಹೆ ಮಾಡಿರುವುದೇ ಸೂಕ್ತ

ವಾಗಿದೆ. ಅದರಂತೆಯೇ ನಿರೂಪವು ಹೊರಡಬೇಕು" ಎಂದು ಅಪ್ಪಣೆ ಕೊಡಿಸಿದರು.

ಶ್ರೀಮದ್ಯುವರಾಜ ಶ್ರೀ ಕಂಠೀರವ ನರಸಿಂಹರಾಜ ಒಡೆಯರವರು ಪ್ರದರ್ಶಿಸಿದ ರಾಜನೀತಿ ನೈಪುಣ್ಯವನ್ನೂ ಕಾರ್ಯನಿರ್ವಹಣ ಸಾಮರ್ಥ್ಯವನ್ನೂ ಅಭಿನಂದಿಸಿ ಚಕ್ರವರ್ತಿ ಸಾರ್ವಭೌಮರವರು ೧೯೧೫ನೆಯ ಇಸವಿಯಲ್ಲಿ "ಜಿ.ಸಿ.ಐ.ಇ." ಎಂಬ ಬಿರುದನ್ನಿತ್ತು ಸನ್ಮಾನಿಸಿದರು. ೧೯೧೯ನೆಯ ಇಸವಿಯಲ್ಲಿ ಬಾಲಚಮೂ ಏರ್ಪಾಡು (ಎಂದರೆ "ಸ್ಕೌಟ್" ಏರ್ಪಾಡು) ನಡೆಯಿತು. ಶ್ರೀಮದ್ಯುವರಾಜ ಶ್ರೀ ಕಂಠೀರವ ನರಸಿಂಹರಾಜ ಒಡೆಯರವರು "ಚೀಫ್ ಸ್ಕೌಟ್" ಪದವಿಯನ್ನಲಂಕರಿಸಿ ಅದಕ್ಕೆ ಅಧಿಷ್ಠಾತೃಗಳಾಗಿ ನಿಂತು, ಆ ಏರ್ಪಾಡಿನಿಂದ ಪ್ರಯೋಜನವುಂಟಾಗುವಂತೆ ಸ್ಫೂರ್ತಿ ಸಹಾಯಗಳನ್ನು ದಯಪಾಲಿಸಲಾರಂಭಿಸಿದರು.

ಆಳಿದ ಮಹಾಸ್ವಾಮಿಯವರು ನ್ಯಾಯವಿಧಾಯಕ ಸಭೆಯು ಮತ್ತಷ್ಟು ಪ್ರಾಮುಖ್ಯವಾಗಿ ಪರಿಣಮಿಸುವಂತೆ ಮಾಡುವ ಉದ್ದೇಶದಿಂದ

**ನ್ಯಾಯವಿಧಾಯಕ ಸಭೆಗೂ ಪ್ರಜಾಪ್ರತಿನಿಧಿ ಸಭೆಗೂ ಹೆಚ್ಚಿನ ಅಧಿಕಾರಗಳು**

೧೯೧೩ನೆಯ ಇಸವಿಯಲ್ಲಿ ಅದರ ಸದಸ್ಯರ ಸಂಖ್ಯೆಯನ್ನು ೧೮ರಿಂದ ೨೫ಕ್ಕೆ ಹೆಚ್ಚಿಸಿದರು. ಅಲ್ಲದೆ, ರಾಜ್ಯಾಡಳಿತ ಸಂಬಂಧದಲ್ಲಿ ಪ್ರಶ್ನೆಗಳನ್ನು ಕೇಳಿ ಉತ್ತರಗಳನ್ನು ಪಡೆಯುವ ಅಧಿಕಾರವನ್ನೂ ಮತ್ತು ಸರ್ಕಾರದ ಆಯವ್ಯಯಗಳನ್ನು ಕುರಿತು ಚರ್ಚಿಸುವ ಅಧಿಕಾರವನ್ನೂ ದಯಪಾಲಿಸಿದರು. ಸದಸ್ಯರಲ್ಲಿ ೧೨ ಮಂದಿಗಳು ಸರ್ಕಾರಿ ಉದ್ಯೋಗಸ್ಥರೂ, ೧೩ ಮಂದಿಗಳು ಸರ್ಕಾರಿ ಉದ್ಯೋಗಸ್ಥರಲ್ಲದವರೂ ಆಗಿರುವಂತೆ ಅಪ್ಪಣೆಯಾಯಿತು. ಆ ೧೩ ಮಂದಿಗಳಲ್ಲಿ, ನಾಲ್ವರು ಪ್ರಜಾಪ್ರತಿನಿಧಿ ಸಭೆಯಿಂದಲೂ, ಎರಡೆರಡು ಡಿಸ್ಟ್ರಿಕ್ಟುಗಳಿಗೆ ಒಬ್ಬೊಬ್ಬರು ಸದಸ್ಯರಂತೆ ಒಟ್ಟು ನಾಲ್ವರು (ಆಗಿನ) ಎಂಟು ಡಿಸ್ಟ್ರಿಕ್ಟುಗಳಿಂದಲೂ ಚುನಾವಣೆಯಾಗಿ ಉಳಿದ ಐದು ಮಂದಿಗಳು ಸರ್ಕಾರದವರಿಂದ ("ನಾಮಿನೇಷನ್" ಮೂಲಕ) ನೇಮಕವಾದವರಾಗಿರುವಂತೆಯೂ ವಿಧಾಯಕವಾಯಿತು. ೧೯೧೭ನೆಯ ಇಸವಿಯಲ್ಲಿ ನ್ಯಾಯವಿಧಾಯಕ ಸಭೆಗೆ ಮತ್ತೊಂದು ಹೊಸ ಅಧಿಕಾರವು ಲಭಿಸಿತು; ಅದಕ್ಕನುಸಾರವಾಗಿ ನ್ಯಾಯವಿಧಾಯಕ ಸಭೆಯ ಸದಸ್ಯರು ತಮ್ಮ ಪ್ರಶ್ನೆಗಳಿಗೆ ಸರ್ಕಾರದವರು ಮುದ್ರಣ ಮಾಡಿಸಿಕೊಟ್ಟ ಉತ್ತರಗಳ ಸಂಬಂಧವಾಗಿ ಉಪಪ್ರಶ್ನೆಗಳನ್ನು ಕೇಳಿ ಅವಕ್ಕೆ ಸಹ ಉತ್ತರಗಳನ್ನು ಪಡೆದು (ಸಭೆಯ ಅಧಿವೇಶನ ಕಾಲದಲ್ಲಿ ಹಾಗೆ ಉಪಪ್ರಶ್ನೆಗಳನ್ನು

ಕೇಳುವ ಮೂಲಕ) ಮತ್ತಷ್ಟು ಅಂಶಗಳನ್ನು ಸರ್ಕಾರದವರಿಂದ ತಿಳಿದು ಕೊಳ್ಳುವುದಕ್ಕೆ ಅವಕಾಶವಾಯಿತು.

೧೯೧೫ನೆಯ ಇಸವಿಯಲ್ಲಿ ಮಹಾಪ್ರಭುಗಳವರು ಪ್ರಜಾಪ್ರತಿನಿಧಿ ಸಭೆಗೂ ಹೆಚ್ಚಿನ ಅಧಿಕಾರವನ್ನು ದಯಪಾಲಿಸಿದರು. ಅದರ ಮೇರೆಗೆ ಪ್ರಜಾಪ್ರತಿನಿಧಿ ಸಭೆಯ ದಸರಾ ಅಧಿವೇಶನ ಕಾಲದಲ್ಲಿ ಸದಸ್ಯರು ಸಂಸ್ಥಾನದ ಆಯ ವ್ಯಯಗಳ ಅಂದಾಜಿನ (''ಬಡ್ಜೆಟ್'') ವಿಷಯವಾಗಿ ಚರ್ಚೆಮಾಡಿ ತಮ್ಮ ಸಲಹೆಗಳನ್ನು ಕೊಡಬಹುದೆಂದು ಗೊತ್ತಾಯಿತು. ಆದರೆ, ಆ ವೇಳೆಗೆ (ಎಂದರೆ, ಆಗ್ಗೆ ದಸರಾ ಅಧಿವೇಶನವೊಂದೇ ನಡೆಯುತ್ತಿದ್ದ ಕಾರಣ ಆ ಅಧಿವೇಶನದ ವೇಳೆಗೆ) ಆಯ ವ್ಯಯಗಳ ವಿಚಾರವು ನಿಷ್ಕರ್ಷೆಯಾಗಿರುತ್ತಿದ್ದಿತು. ಆದುದರಿಂದ ಸದಸ್ಯರ ಸಲಹೆಗಳಿಗನು ಸಾರವಾಗಿ ಆಯ ವ್ಯಯಗಳನ್ನು ಅಲ್ಪ ಸ್ವಲ್ಪ ಮಾರ್ಪಡಿಸುವುದಕ್ಕೂ ಅವಕಾಶವಿರುತ್ತಿರಲಿಲ್ಲ. ಮಹಾಸ್ವಾಮಿಯವರು ಅದನ್ನು ಗಮನಿಸಿ, ಸಂಸ್ಥಾನದ ಆಯ ವ್ಯಯಗಳ ಸಂಬಂಧದಲ್ಲಿ ಪ್ರಜಾಪ್ರತಿನಿಧಿ ಸಭೆಯ ಸದಸ್ಯರು ಸಲಹೆಗಳನ್ನು ಹೇಳಿದುದನ್ನು ಗಮನಿಸಿ ಸಾಧ್ಯಕಂಡ ಮಾರ್ಪಾಡುಗಳನ್ನು ಮಾಡಲವಕಾಶವಿರುವಂತೆ ದಸರಾ ಅಧಿವೇಶನದ ಜೊತೆಗೆ, ಶ್ರೀಮನ್ಮಹಾರಾಜ ಶ್ರೀ ಕೃಷ್ಣರಾಜೇಂದ್ರ ಒಡೆಯರವರ ವರ್ಧಂತ್ಯುತ್ಸವ ಕಾಲದ ಸರಿಸುಮಾರಿನಲ್ಲಿ (''ಬಡ್ಜೆಟ್ ಅಧಿವೇಶನ'' ವೆಂಬ) ಮತ್ತೊಂದು ಅಧಿವೇಶನವೇ ಪ್ರತ್ಯೇಕವಾಗಿ ನಡೆಯುವಂತೆ ಆಜ್ಞಾಪಿಸಿದರು. ಅದರ ಮೇರೆಗೆ ಮೊಟ್ಟಮೊದಲನೆಯ ಅಧಿವೇಶನವು ಮಾತ್ರ ೧೯೧೭ನೆಯ ಇಸವಿ ಏಪ್ರಿಲ್ ೨೨ನೆಯ ತಾರೀಖಿನ ದಿನದಿಂದ ನಡೆದು, ಅಲ್ಲಿಂದೀಚೆಗೆ ''ಬಡ್ಜೆಟ್'' ಅಧಿವೇಶನವು ಆಳಿದ ಮಹಾಸ್ವಾಮಿಯವರ ವರ್ಧಂತ್ಯುತ್ಸವದ ಸುಮಾರಿನಲ್ಲೇ ಮೈಸೂರು ನಗರದಲ್ಲಿ ನಡೆಯಲು ಪ್ರಾರಂಭವಾಯಿತು. ಅವರು ಅಪ್ರಾರ್ಥಿತವಾಗಿಯೇ ರಾಜಕೀಯ ವಿಚಾರಗಳಲ್ಲಿ ಪ್ರಜಾವರ್ಗದವರಿಗೆ ಸಕಾಲದಲ್ಲಿ ಹೆಚ್ಚಿನ ಹಕ್ಕುಬಾಧ್ಯತೆಗಳನ್ನು ದಯಪಾಲಿಸುತ್ತಿದ್ದರು.

ಹಿಂದೆ ಯೂರೋಪು ಖಂಡದಲ್ಲಿ ನಡೆದ ಘೋರ ಯುದ್ಧವು ೧೯೧೪ನೆಯ ಇಸವಿ ಜೂಲೈ ತಿಂಗಳು ೨೮ನೆಯ ತಾರೀಖಿನ ದಿನ ಪ್ರಾರಂಭವಾಗಿ ಆಗಸ್ಟ್ ತಿಂಗಳು ೪ನೆಯ ತಾರೀಖಿನ ದಿನ ಬ್ರಿಟಿಷರು ಜರ್ಮನಿ ದೇಶದ ವಿರೋಧಪಕ್ಷವನ್ನು ಸೇರಿ ಯುದ್ಧಮಾಡಲುಪಕ್ರಮಿಸಿದರು. ಆಗ ಚಕ್ರವರ್ತಿ ಸಾರ್ವಭೌಮರಾಗಿದ್ದ ಐದನೆ ಜಾರ್ಜ್ ಪ್ರಭುಗಳವರು, ಬ್ರಿಟಿಷ್ ಚಕ್ರಾಧಿಪತ್ಯಕ್ಕೆ ಸೇರಿದ ಸಮಸ್ತ

ಜನಾಂಗಗಳಿಂದಲೂ ಸಹಾಯವನ್ನು ಕೋರಿದರು. ಮೈಸೂರು ಸಂಸ್ಥಾನ ದಿಂದ ದೊರೆತ ಸಹಾಯದ ಸಂಬಂಧದಲ್ಲಿ, ಆಳಿದ ಮಹಾಸ್ವಾಮಿ

**ಯೂರೋಪಿನ ಘೋರ ಯುದ್ಧವೂ ಮತ್ತು ಮೈಸೂರು ಸಂಸ್ಥಾನವೂ**

ಯವರಾದ ಶ್ರೀಮನ್ಮಹಾರಾಜರವರ ಸ್ನೇಹಮಯ ವಾದ ಔದಾರ್ಯವೂ, ದೇಶಾಭಿಮಾನಪೂರಿತ ವಾದ ಪ್ರಜಾವಾತ್ಸಲ್ಯವೂ, ಮೈಸೂರು ಸಂಸ್ಥಾನ ದಿಂದ ಯುದ್ಧರಂಗಕ್ಕೆ ಹೋಗಿದ್ದವರ ಸಾಹಸ ಪರಾಕ್ರಮಗಳೂ ಗಮನಾರ್ಹವಾಗಿವೆ. ಯುದ್ಧದ ವಾರ್ತೆಯನ್ನು ಕೇಳಿದೊಡನೆಯೇ ಮಹಾ ಸ್ವಾಮಿಯವರು ಬ್ರಿಟಿಷರಲ್ಲಿ ಕೃತಜ್ಞತಾ ಭಾವದಿಂದಲೂ ಪ್ರಕೃತಿ ಸಿದ್ಧವಾದ ಔದಾರ್ಯದಿಂದಲೂ ವೈಸ್ರಾಯಿಯವರಿಗೆ ಬರೆದ ಪತ್ರದಲ್ಲಿ, "...... ಈಗ ಒದಗಿರುವಂತಹ ಸಂಧಿಕಟ್ಟಿನ ಸ್ಥಿತಿಯಲ್ಲಿ ನಾವೂ ಮತ್ತು ನಮ್ಮ ಪ್ರಜೆಗಳೂ ಸಹ ಪ್ರದರ್ಶಿಸಬೇಕಾದ ಯಾವ ಬಗೆಯ ತ್ಯಾಗಗಳನ್ನಾದರೂ ಸಂತೋಷದಿಂದ ಪ್ರದರ್ಶಿಸಿ ಸಹಾಯ ಮಾಡುವೆವು. ಯುದ್ಧದ ವೆಚ್ಚದಲ್ಲಿ ನಮ್ಮ ಭಾಗವನ್ನು ವಹಿಸಲು ಸಿದ್ಧವಾಗಿರುವೆವು. ನಮ್ಮ ಸೈನ್ಯವು ಸುಸಜ್ಜಿತವಾಗಿ ಸಿದ್ಧವಾಗಿದೆ....ಭಾರತೀಯ ಸಮರ ನಿಧಿಗಾಗಿ ೫೦ ಲಕ್ಷ ರೂಪಾಯಿಗಳನ್ನು ನಮ್ಮ ಸಹಾಯ ದ್ರವ್ಯವಾಗಿ ಒಪ್ಪಿಸಿರುವೆವು" ಎಂದು ಮುಂತಾಗಿ ತಿಳಿಸಿದರು. ವೈಸ್ರಾಯಿಯವರು ಅದಕ್ಕಾಗಿ ತಮ್ಮ ಹರ್ಷವನ್ನೂ, ಅಭಿನಂದನವನ್ನೂ ವಂದನೆಗಳನ್ನೂ ಮಹಾಸ್ವಾಮಿಯವರಿಗೆ ಶ್ರುತಪಡಿಸಿ ತಂತಿಯ ವರ್ತಮಾನವನ್ನು ಕಳುಹಿಸಿದರು. ಶ್ರೀಮನ್ಮಹಾರಾಜರವರ ಸರ್ಕಾರದವರು ಸುಮಾರು ೮೮½ ಲಕ್ಷ ರೂಪಾಯಿಗಳನ್ನೂ ಸಂಸ್ಥಾನದ ಪ್ರಜೆಗಳು ಸುಮಾರು ೨¼ ಲಕ್ಷ ರೂಪಾಯಿಗಳನ್ನೂ ಯುದ್ಧಕ್ಕಾಗಿ ಒಪ್ಪಿಸಿದರು. ಅಲ್ಲದೆ, ಯುದ್ಧದ ಸಾಲಪತ್ರಗಳನ್ನು ಕೊಳ್ಳುವುದಕ್ಕಾಗಿ ಶ್ರೀಮನ್ಮಹಾರಾಜರವರ ಸರ್ಕಾರ ದವರೂ ಸಂಸ್ಥಾನದ ಪ್ರಜೆಗಳೂ ಒಟ್ಟು ೧ ಕೋಟಿ ೨೭ ಲಕ್ಷ ರೂಪಾಯಿ ಗಳಿಗಿಂತ ಹೆಚ್ಚು ಮೊಬಲಗನ್ನು ಕೊಟ್ಟು ಸಹಾಯ ಮಾಡಿದರು. ಮೇಲೆ ಸೂಚಿಸಿದಂತೆ ನಿಧಿಗೆ ೫೦ ಲಕ್ಷ ರೂಪಾಯಿಗಳನ್ನು ಕೊಟ್ಟು ಸಹಾಯ ಮಾಡಿದನಂತರ, ಮಹಾಪ್ರಭುಗಳವರು ಮತ್ತೆ ೨೩ ಲಕ್ಷ ರೂಪಾಯಿಗಳನ್ನು ಕೊಟ್ಟು ಕೃಪೆಮಾಡಿದರು. ಇಷ್ಟು ಮಾತ್ರವೇ ಅಲ್ಲದೆ ಕಂಬಳಿಗಳು, ಹುಲ್ಲು, ಹೊನ್ನೆಮರ, ತೇಗದ ಮರದ ದಿಮ್ಮಿಗಳು, ಮುಂತಾದ ಸಾಮಾನುಗಳನ್ನೂ ಯಥೇಷ್ಟವಾಗಿ ಮೈಸೂರು ಸರ್ಕಾರ ದವರು ಕಳುಹಿಸಿಬಿಟ್ಟರು.

ಮಹಾಸ್ವಾಮಿಯವರ ಭಾವಂದಿರಾಗಿದ್ದ ಶ್ರೀಮಾನ್ ಕರ್ನಲ್ ದೇಶರಾಜ ಅರಸಿನವರೇ ಮುಂತಾದ ಅನೇಕ ಸೈನ್ಯಾಧಿಕಾರಿಗಳೂ ಅಸಂಖ್ಯಾತ ಸೈನಿಕರೂ ರಣಭೂಮಿಗೆ ತೆರಳಿ ಈಜಿಪ್ಟ್, ಮೆಸೊಪೊಟೇಮಿಯ, ಪ್ಯಾಲೆಸ್ಟೈನ್— ಇವುಗಳ ರಣರಂಗಗಳಲ್ಲಿ ಶತ್ರುಗಳೊಡನೆ ಹೋರಾಡಿ ತಮ್ಮ ಶೌರ್ಯ ಪ್ರದರ್ಶನದಿಂದ ಬ್ರಿಟಿಷ್ ಸೈನಾಧಿಕಾರಿಗಳನ್ನು ಕೂಡ ಮುಗ್ಧಗೊಳಿಸಿದರು. ಮೈಸೂರು ಸಂಸ್ಥಾನದ ಮುಖ್ಯ ಸೈನ್ಯಾಧಿಕಾರಿಗಳಾಗಿದ್ದ ಕರ್ನಲ್ ದೇಶರಾಜ ಅರಸಿನವರೇ ಮುಂತಾದವರು ಮೈಸೂರು ಸಂಸ್ಥಾನದಿಂದ ಯುದ್ಧಭೂಮಿಗೆ ತೆರಳಿದಾಗ್ಗ್ಗ, ಮಹಾಸ್ವಾಮಿಯವರು, "ತಮ್ಮೆಲ್ಲರ ಕ್ಷೇಮ ವಿಜಯಗಳಿಗಾಗಿ ಶ್ರೀ ಚಾಮುಂಡೇಶ್ವರೀ ದೇವಿಯವರಲ್ಲಿ ಪ್ರಾರ್ಥಿಸುತ್ತ, ಸರ್ವದಾ ತಮ್ಮೆಲ್ಲರ ಚಿಂತೆಯಲ್ಲೇ ಇದ್ದು, ತಮ್ಮೆಲ್ಲರ ಆಗಮನವನ್ನೇ ನಿರೀಕ್ಷಿಸುತ್ತಿರುವೆವು" ಎಂಬ ಅಂತಃಕರಣವಾಣಿಗಳನ್ನಾಡಿ ಅವರನ್ನು ಬೀಳ್ಕೊಂಡರು. ಮಹಾಸ್ವಾಮಿಯವರು ತಮ್ಮ ಪರವಾಗಿಯೂ, ರಾಜಕುಟುಂಬದವರೆಲ್ಲರ ಪರವಾಗಿಯೂ ಮತ್ತು ಸಂಸ್ಥಾನದ ಅಶೇಷ ಪ್ರಜೆಗಳ ಪರವಾಗಿಯೂ ಮೈಸೂರು ಸಂಸ್ಥಾನದ ಸೈನಿಕರಿಗೂ ಸೈನ್ಯಾಧಿಕಾರಿಗಳಿಗೂ ಸಹ ಕೃಪಾಪೂರ್ವಕವಾದ ಸಂದೇಶವನ್ನು ಕಳುಹಿಸಿ ಅದರ ಮುದ್ರಿತ ಪ್ರತಿಗಳನ್ನು ಹಂಚಿಸಿದರು. ಸ್ಫೂರ್ತಿದಾಯಕವಾದ ಮತ್ತು ಸರಳ ಸುಂದರವಾದ ಆ ಸಂದೇಶದ ವಾಣಿಗಳಿವು: "ಮೈಸೂರು ಸಂಸ್ಥಾನದ ಮಹಾರಾಜರವರಾದ ನಾವೂ ನಮ್ಮ ಕುಟುಂಬದವರೂ ಮತ್ತು ಪ್ರಜೆಗಳೂ ಸಹ ಯುದ್ಧಭೂಮಿಯಲ್ಲಿರುವ ಮೈಸೂರು ಸಂಸ್ಥಾನದ 'ಇಂಪೀರಿಯಲ್ ಸರ್ವಿಸ್ ಲ್ಯಾನ್ಸರ್ಸ್' ಸೈನ್ಯದ ಅಧಿಕಾರಿಗಳಲ್ಲಿ ಮತ್ತು ಸೈನಿಕರಲ್ಲಿ ಪ್ರೀತ್ಯಾದರಗಳನ್ನೂ ಮೆಚ್ಚಿಕೆಯನ್ನೂ ಸೂಚಿಸಿ ಕಳುಹಿಸಿರುವ ಸಂದೇಶವೇನೆಂದರೆ: ಬ್ರಿಟಿಷ್ ಚಕ್ರಾಧಿಪತ್ಯಕ್ಕೂ ಅದರ ಮಿತ್ರವರ್ಗದವರಿಗೂ ಈಗ ಒದಗಿರುವ ಅತ್ಯಂತ ಬಿಕ್ಕಟ್ಟಾದ ಹೋರಾಟದ ಈ ಸಂಧಿಕಟ್ಟಿನ ಸಮಯದಲ್ಲಿ ಸ್ವಾತಂತ್ರ್ಯ ಧರ್ಮಗಳ ರಕ್ಷಣಾರ್ಥವಾಗಿ ಯುದ್ಧ ಮಾಡುತ್ತಿರುವ ಶೌರ್ಯಯುತವಾದ ಅಪಾರ ಸೈನ್ಯದ ಅಲ್ಪ ಭಾಗವಾಗಿಯಾದರೂ ಅದರೊಡನೆ ಸೇರಿರುವ ಮಹತ್ತರ ಗೌರವವು ನಿಮಗೆ ಲಭಿಸಿದೆ. ರಣರಂಗದಲ್ಲಿ ನೀವುಗಳು ಪ್ರದರ್ಶಿಸಿದ ಶೌರ್ಯ ಪರಾಕ್ರಮಗಳ ಮತ್ತು ನೀವುಗಳು ಸಾಧಿಸಿದ ವಿಜಯಗಳ ವಾರ್ತೆಯನ್ನು ನಾವುಗಳು ಅತ್ಯಂತ ಹೆಮ್ಮೆಯಿಂದ ಕೇಳಿ ಹರ್ಷಿಸಿದ್ದೇವೆ. ನಿಮಗೆ ವಹಿಸಲ್ಪಡುವ ಕರ್ತವ್ಯಗಳು ಎಂತಹವೇ ಆಗಲಿ, ಶೌರ್ಯ ಪರಾಕ್ರಮಗಳ

ತೇಜಸ್ಸಿನಿಂದ ತುಂಬಿರುವ ನಮ್ಮ ದೇಶದ ಇತಿಹಾಸದ ಉಜ್ಜ್ವಲತೆಯು ಮತ್ತಷ್ಟು ಬೆಳಗಿ, ಬ್ರಿಟಿಷ್ ಸಮ್ರಾಟರಲ್ಲಿ ಇಟ್ಟಿರುವ ಭಕ್ತಿವಿಶ್ವಾಸಗಳ ವಿಷಯವಾಗಿ ಮೈಸೂರು ಸಂಸ್ಥಾನಕ್ಕೆ ಬಂದಿರುವ ಕೀರ್ತಿಯನ್ನು ಎತ್ತಿ ಹಿಡಿದು ಆ ಕರ್ತವ್ಯಗಳನ್ನು ನಿರ್ವಹಿಸುವಿರೆಂಬ ಭರವಸೆಯು ನಮಗುಂಟು. ದಿನದಿನವೂ, ಕ್ಷಣ ಕ್ಷಣವೂ, ಸರ್ವದಾ ನಾವುಗಳು ನಿಮ್ಮ ಚಿಂತೆಯಲ್ಲಿದ್ದು ನಿಮ್ಮ ಶ್ರೇಯಸ್ಸನ್ನು ಕೋರಿ ಭಗವಂತನಿಗೆ ಪ್ರಾರ್ಥನೆ ಮಾಡುತ್ತಿದ್ದೇವೆ. ನೀವುಗಳು ಜಯಶಾಲಿಗಳಾಗಿ ಹಿಂದಕ್ಕೆ ಬರುವ ವರೆಗೂ, ನೀವು ಇಲ್ಲಿ ಬಿಟ್ಟುಹೋಗಿರುವ ನಿಮ್ಮ ಪ್ರಿಯಬಂಧುಗಳ ಪೋಷಣೆಯು ನಮ್ಮ ಮೇಲಿರುವ ಪವಿತ್ರಕರ್ತವ್ಯ. ನೀವುಗಳು ಉದ್ಯುಕ್ತ ರಾಗುವ ಪ್ರತಿಯೊಂದು ಕಾರ್ಯವನ್ನಾಚರಿಸುವಾಗಲೂ ಮೈಸೂರು ಸಂಸ್ಥಾನದ ನಿಷ್ಕಳಂಕವಾದ ಶುಭ್ರಕೀರ್ತಿಯನ್ನೂ ಮಹತ್ತರ ಗೌರವ ವನ್ನೂ ಸುರಕ್ಷಿತವಾಗಿಟ್ಟು ನೋಡಿಕೊಳ್ಳುವುದು ನಿಮ್ಮ ಕೈಯಲ್ಲಿದೆ ಯೆಂಬುದನ್ನು ಸಂತತವೂ ನೆನಪಿನಲ್ಲಿಡಿ. ಭಾರತೀಯರಿಗೆ, ಗೌರವವು ಪ್ರಾಣಕ್ಕಿಂತಲೂ ವಿಶೇಷ ಪ್ರಿಯವಾಗಿ ಪ್ರಾಣಕ್ಕಿಂತಲೂ ಅನರ್ಘ್ಯ ವಾದುದೆಂಬುದನ್ನು ನಿರಂತವೂ ನೆನಪಿನಲ್ಲಿಡಿ. ಭಗವಂತನಲ್ಲಿ ಅಚಲ ವಾದ ಭಕ್ತಿಶ್ರದ್ಧೆಗಳಿರಲಿ. ನಮ್ಮ ಪಕ್ಷವು ನ್ಯಾಯಪಕ್ಷವೆಂಬ ಭರವಸೆ ಯಿರಲಿ. ಭಗವಂತನ ಕೃಪೆಯಿಂದ ನೀವುಗಳೆಲ್ಲರೂ ಸುರಕ್ಷಿತರಾಗಿದ್ದು ವಿಜಯಮಾಲಿಕೆಯನ್ನಾರ್ಜಿಸುವಿರಿ.''

ಮೊದಲೇ ಪರಾಕ್ರಮಶಾಲಿಗಳಾಗಿದ್ದ ಮೈಸೂರು ಸಂಸ್ಥಾನದ ಯೋಧರ ಶೌರ್ಯೋತ್ಸಾಹಗಳು ಮಹಾಪ್ರಭುಗಳವರ ಸಂದೇಶದಿಂದ ದ್ವಿಗುಣವಾಯಿತು. ಮೈಸೂರು ಸಂಸ್ಥಾನದ ಖ್ಯಾತಿಯನ್ನು ಹೆಚ್ಚಿಸಿ, ಮಹಾಸ್ವಾಮಿಯವರ ಪ್ರಜೆಗಳಾದುದು ಸಾರ್ಥಕವೆನಿಸುವಂತೆ ಯುದ್ಧ ಮಾಡಬೇಕೆಂದು ಅವರೆಲ್ಲರೂ ಸ್ಥಿರನಿಶ್ಚಯಮಾಡಿದರು. ಮೈಸೂರು ಸಂಸ್ಥಾನದ ಸೈನ್ಯಕ್ಕೆ ವಿಜಯಗಳಮೇಲೆ ವಿಜಯಗಳಾದುದನ್ನೂ, ಬಾಂಬು ಗಳಿಂದ ಇತರ ಸಂಸ್ಥಾನಗಳ ಸೈನಿಕರು ಅಸಂಖ್ಯಾತ ಮಂದಿ ಮೃತಪಟ್ಟ ಸನ್ನಿವೇಶದಲ್ಲಿ ಕೂಡ ಮೈಸೂರು ಸಂಸ್ಥಾನದ ಒಬ್ಬನೇ ಒಬ್ಬ ಸೈನಿಕನಿಗೆ ಮಾತ್ರ ಅಲ್ಪಸ್ವಲ್ಪ ಗಾಯವಾದುದನ್ನೂ ಕಂಡು ಬ್ರಿಟಿಷ್ ಸೈನ್ಯಾಧಿ ಕಾರಿಗಳು ಕೂಡ ಅಚ್ಚರಿಗೊಂಡರು. ಅದು ಮಹಾಸ್ವಾಮಿಯವರ ಶುದ್ಧ ಮನಸ್ಸಿನ ಭಗವತ್ಪ್ರಾರ್ಥನೆಯ ಫಲವೆಂದು ಅವರುಗಳು ಕೊಂಡಾಡಿ ದುದಲ್ಲದೆ, ಮೈಸೂರು ಸಂಸ್ಥಾನದ ಸೈನ್ಯದ ''ರೆಜಿಮೆಂಟು''ಗಳನ್ನು ''ಇಂದ್ರಜಾಲದ ರೆಜಿಮೆಂಟುಗಳು'' ಎಂದು (''*Jadu* Regiments''

ಎಂದು) ಕರೆಯಲು ಪ್ರಾರಂಭಿಸಿ ವಿಶೇಷವಾಗಿ ಹರ್ಷಿಸಿದರು. ಸಮರ ಕೌಶಲ್ಯದಲ್ಲಿ ಪ್ರಖ್ಯಾತರಾದಂತೆಯೇ ಮೈಸೂರು ಸೈನ್ಯದವರು ಅಕ್ಷರಜ್ಞತೆಯಲ್ಲಿ ಮತ್ತು ಶೀಲಶುದ್ಧಿಯಲ್ಲಿ ಸಹ ಮೇಲುಗೈಯೆನಿಸಿ ಬ್ರಿಟಿಷ್ ಅಧಿಕಾರಿಗಳೆಲ್ಲರಿಗೂ ಅಚ್ಚುಮೆಚ್ಚಾದರು. ಸಿರಿಯಾ ದೇಶದ ಉತ್ತರಪ್ರಾಂತಕ್ಕೆ ಸೇರಿದ ಅಲೆಪ್ಪೋ ಬಳಿಯಲ್ಲಿ ಸೈನ್ಯಗಳಿದ್ದಾಗ ಸೈನಿಕರಲ್ಲಿ ಅಕ್ಷರಜ್ಞಾನವೆಷ್ಟುಮಟ್ಟಿಗಿದ್ದಿತೆಂಬ ಗಣತಿಯು ನಡೆದಾಗ್ಗೆ ಮೈಸೂರು ಸಂಸ್ಥಾನದ ಸೈನ್ಯಕ್ಕೇ ಅಗ್ರಸ್ಥಾನವು ಲಭಿಸಿತು. ಸೇಕಡ ೭೫ರಷ್ಟು ಮಂದಿ ಮೈಸೂರು ಸೈನಿಕರು ಚೆನ್ನಾಗಿ ಓದು ಬರೆಹಗಳನ್ನು ಬಲ್ಲವರಾಗಿದ್ದುದನ್ನೂ, ಉಳಿದವರು ತಕ್ಕಮಟ್ಟಿಗೆ ಅಕ್ಷರಜ್ಞಾನ ಪಡೆದಿದ್ದುದನ್ನೂ ಕಂಡು ಬ್ರಿಟಿಷ್ ಸೈನ್ಯಾಧಿಕಾರಿಗಳೆಲ್ಲರೂ ವಿಸ್ಮಿತರಾಗಿ ಆಳಿದ ಮಹಾಸ್ವಾಮಿಯವರಾದ ಶ್ರೀಮನ್ಮಹಾರಾಜರವರನ್ನು ಕೊಂಡಾಡಿದರು. ಸೈನ್ಯದ ಅಧಿಕಾರಿಗಳಲ್ಲಿ ಇಂಗ್ಲಿಷ್ ಭಾಷೆಯ ಪರಿಶ್ರಮವು ಹೆಚ್ಚಾಗಿದ್ದವರ ಸೇಕಡಾವಾರು ಅತ್ಯಧಿಕವಾಗಿದ್ದ ಗೌರವವು ಕೂಡ ಮೈಸೂರು ಸಂಸ್ಥಾನಕ್ಕೇ ಲಭಿಸಿತು. ಹೆಚ್ಚೇಕೆ? ಯುದ್ಧವು ಪೂರೈಸಿದಮೇಲೆ ಭಾರತೀಯ ಸೈನಿಕರಲ್ಲಿ ಹೆಚ್ಚಾಗಿ ಅಕ್ಷರ ಪ್ರಚಾರ ಮಾಡಬೇಕೆಂಬ ಸ್ಫೂರ್ತಿಯು ಅಧಿಕಾರಿ ವರ್ಗದಲ್ಲುಂಟಾಗಿ ಆ ವಿಚಾರದಲ್ಲಿ ಅವರಿಗೆ ತೀವ್ರಾಸಕ್ತಿ ಹುಟ್ಟಿದುದಕ್ಕೆ ಮೈಸೂರು ಸಂಸ್ಥಾನದ ಸೈನಿಕರಲ್ಲಿ ವಿದ್ಯಾವಂತರ ಸಂಖ್ಯೆಯು ಹೆಚ್ಚಾಗಿದ್ದುದನ್ನು ಕಂಡು ಅವರಿಗೆ ಸ್ಪರ್ಧೆ ಹುಟ್ಟಿದುದೂ ಒಂದು ದೊಡ್ಡ ಕಾರಣ. ಮೈಸೂರು ಸಂಸ್ಥಾನದ ಪ್ರಜೆಗಳ ಹೆಮ್ಮೆಗೆ ವಿಷಯವಾದ ಮತ್ತೊಂದು ಅಂಶವು ಸೈನಿಕರ ಶೀಲಶುದ್ಧಿಯ ವಿಚಾರ. ಶೀಲಶುದ್ಧಿಗೆ ಲೋಪವನ್ನು ತಂದುಕೊಂಡವರ ಪಟ್ಟಿಗಳು ಪ್ರತಿವಾರವೂ ಮೇಲಿನ ಅಧಿಕಾರಿಗಳಿಗೆ ಹೋಗಬೇಕಾಗಿದ್ದುದು ಕಟ್ಟಪ್ಪಣೆ. ಇತರ ಪ್ರಾಂತಗಳ ಸೈನಿಕರಲ್ಲಿ ಅಂತಹವರ ಹೆಸರುಗಳ ಪಟ್ಟಿಗಳು ಬೆಳೆಯುತ್ತಬಂದು, ಮೈಸೂರು ಸಂಸ್ಥಾನದ ಸೈನಿಕರಲ್ಲಿ ಆ ಪಟ್ಟಿಗೆ ಹೆಸರನ್ನು ಸೇರಿಸಬೇಕಾದವರೇ ತಮಗೆ ಒಬ್ಬರೂ ದೊರೆಯದೆ ಹೋದುದನ್ನು ಕಂಡು ಬ್ರಿಟಿಷ್ ಸೈನ್ಯಾಧಿಕಾರಿಗಳೆಲ್ಲರಿಗೂ ಪರಮಾಶ್ಚರ್ಯವುಂಟಾದುದಲ್ಲದೆ, ಮೈಸೂರು ಸಂಸ್ಥಾನದ "ರೆಜಿಮೆಂಟು"ಗಳ ವಿಷಯವಾಗಿ ಗೌರವ ವಿಶ್ವಾಸಗಳು ಶತಗುಣವಾಗಿ ಹೆಚ್ಚಿದುವು. ಸಾತ್ವಿಕ ಶ್ರೇಷ್ಠರಾದ ಆಳಿದ ಮಹಾಸ್ವಾಮಿಯವರ ಪ್ರಜೆಗಳಾದ ಪುಣ್ಯಕ್ಕೆ ತಕ್ಕ ಘನತೆಯಿಂದ ವರ್ತಿಸಬೇಕೆಂಬ ಮನೋಧರ್ಮವು ಅವರಿಗಿದ್ದುದೇ ಆ ಬಗೆಯ ಸೌಶೀಲ್ಯ ರಕ್ಷಣೆಗೆ ಕಾರಣ. ಮೈಸೂರು ಸಂಸ್ಥಾನದ

ಸೈನ್ಯಾಧಿಕಾರಿಗಳು ಸುಸಭ್ಯವರ್ತನೆಗೂ, ಕಾರ್ಯದಕ್ಷತೆಗೂ, ಅನುನಯ ಪರತೆಗೂ ಆದರ್ಶಪ್ರಾಯರಾಗಿದ್ದುದರಿಂದ ಅವರಲ್ಲಿ ಹಲವರಿಗೆ "ಬ್ರಿಗೇಡಿಯರ್" ಅಧಿಕಾರದ ಅಸಾಧಾರಣ ಗೌರವವು ಲಭಿಸಿತು.

ಪ್ಯಾಲಸ್ಟೈನಿನಲ್ಲಿಯು ಆಫ್ಲೂಲಿ ಏರೋಡ್ರೋಮಿನಲ್ಲಿ ಮೈಸೂರು ಸೈನ್ಯದವರು (ಹದಿನೈದನೆಯ ಬ್ರಿಗೇಡಿನವರು) ಅತುಳ ಪರಾಕ್ರಮದಿಂದ ಜರ್ಮನಿಯ ಸೈನ್ಯವನ್ನು ಮುತ್ತಿ ಕಾಳೆಗದಲ್ಲಿ ಸೋಲಿಸಿ ಓಡಿಸಿದಾಗ ಚಿತ್ರಗಾರನಾದ ಜರ್ಮನ್ ಸೈನಿಕನೊಬ್ಬನು ಕೆಡವಿಕೊಂಡು ಓಡಿಹೋಗಿದ್ದ ಚಿತ್ರಗಳು ಲೆಫ್ಟಿನೆಂಟ್ ಕರ್ನಲ್ ಬಿ. ಪಿ. ಕೃಷ್ಣೇ ಅರಸಿನವರಿಗೆ ಸಿಕ್ಕಿದುವು. ಅವರು ಅವುಗಳನ್ನು ಮೈಸೂರು ಸಂಸ್ಥಾನಕ್ಕೆ ತಂದು, ಮಹಾಸ್ವಾಮಿಯವರ ಸನ್ನಿಧಿಯಲ್ಲಿ ಸಮರ್ಪಿಸಿದರು. ಆ ಚಿತ್ರಗಳ ಸಂಬಂಧದಲ್ಲಿ ಆಳಿದ ಮಹಾಸ್ವಾಮಿಯವರಾದ ಶ್ರೀಮನ್ಮಹಾರಾಜರವರು ಕೃಪಾಳುತನವನ್ನು ಪ್ರದರ್ಶಿಸಿದ ವಿಚಾರವನ್ನು ಮುಂದೆ ಮಹಾಸ್ವಾಮಿಯವರ ಯೂರೋಪು ಖಂಡದ ಪ್ರವಾಸವನ್ನು ವರ್ಣಿಸುವ ಅಧ್ಯಾಯದಲ್ಲಿ ಶ್ರುತಪಡಿಸಲಾಗುವುದು.

ಮೈಸೂರು ಸೈನ್ಯಾಧಿಕಾರಿಗಳಲ್ಲಿ ಅನೇಕರ ಸಾಮರ್ಥ್ಯ ಪರಾಕ್ರಮಗಳನ್ನು ಮೆಚ್ಚಿ ಚಕ್ರವರ್ತಿ ಸಾರ್ವಭೌಮರವರು ಬಿರುದುಗಳನ್ನೂ ಪದಕಗಳನ್ನೂ ದಯಪಾಲಿಸಿ ಗೌರವಿಸಿದರು. ಅದಕ್ಕೆ ಹಿಂದೆ ಬರ್ಮಾ ಯುದ್ಧದಲ್ಲಿ ಕೂಡ ಭಾಗವಹಿಸಿ ಪ್ರಸಿದ್ಧರಾಗಿದ್ದು, ಯೂರೋಪಿನ ಯುದ್ಧಕಾಲದಲ್ಲಿ ಈಜಿಪ್ಟಿಗೆ ತೆರಳಿ ಸಮರ ಕೌಶಲ್ಯವನ್ನು ಪ್ರದರ್ಶಿಸಿ ಯಶಸ್ವಿಗಳಾಗಿ ಹಿಂತಿರುಗಿದ ಶ್ರೀಮಾನ್ ಕರ್ನಲ್ ಜೆ. ದೇಶರಾಜ ಅರಸಿನವರಿಗೆ ಚಕ್ರವರ್ತಿ ಸಾರ್ವಭೌಮರವರು ಬ್ರಿಟಿಷ್ ಸೈನ್ಯದ ಗೌರವಾರ್ಥವಾದ ಲೆಫ್ಟಿನೆಂಟ್ ಕರ್ನಲ್ ಪದವಿಯನ್ನನುಗ್ರಹಿಸಿದರು; ಆಳಿದ ಮಹಾಸ್ವಾಮಿಯವರಾದ ಶ್ರೀಮನ್ಮಹಾರಾಜರವರು ಪ್ರಥಮ ತರಗತಿಯ ಗಂಡಭೇರುಂಡ ಪದಕವನ್ನನುಗ್ರಹಿಸಿದರು. ಸರ್ದಾರ್ ಬಹದ್ದೂರ್ ಶ್ರೀಮಾನ್ ಬಿ. ಚಾಮರಾಜ ಅರಸಿನವರು, ಆಗ್ಗೆ ರಿಸಾಲ್ದಾರರಾಗಿದ್ದ ಶ್ರೀಮಾನ್ ಲೆಫ್ಟಿನೆಂಟ್ ಕರ್ನಲ್ ಬಿ. ಪಿ. ಕೃಷ್ಣೇ ಅರಸಿನವರು, ರಿಸಾಲ್ದಾರರಾಗಿದ್ದ ಶ್ರೀಮಾನ್ ಸುಬ್ಬರಾಜ ಅರಸಿನವರು, ಶ್ರೀಮಾನ್ ಮೀರ್ ತುರಾಬ್ ಆಲಿಯವರು, ಮುಂತಾದವರೆಲ್ಲರೂ ತಮ್ಮ ಸಮರ ಸಾಮರ್ಥ್ಯಕ್ಕಾಗಿ ಶ್ಲಾಘನೆಗೆ ಪಾತ್ರರಾಗಿ ಪುರಸ್ಕಾರಹೊಂದಿದರು.

೧೯೨೦ನೆಯ ಇಸವಿಯಲ್ಲಿ ಸಮರಭೂಮಿಯಿಂದ ಹಿಂತಿರುಗಿದ ಸೈನಿಕರಿಗೂ, ಯುದ್ಧದಲ್ಲಿ ಮಡಿದವರ ಕುಟುಂಬದವರಿಗೂ ಬಗೆ ಬಗೆಯ

ಸೌಕರ್ಯಗಳನ್ನು ಕಲ್ಪಿಸಿಕೊಡುವುದರಲ್ಲಿ ಮಹಾಸ್ವಾಮಿಯವರೂ ಅವರ ಸರ್ಕಾರದವರೂ ಅಪರಿಮಿತವಾದ ಔದಾರ್ಯವನ್ನು ತೋರಿಸಿದರು.

**ಅಸ್ಪೃಶ್ಯರಲ್ಲಿ ಅಭಿಮಾನ**

ಮಹಾಸ್ವಾಮಿಯವರು ಅಸ್ಪೃಶ್ಯರ ವಿಚಾರದಲ್ಲಿ ಆದರ ತೋರಿಸಿ (ತಿರುವಾಂಕೂರು ಮಹಾರಾಜರವರು ದೇವಾಲಯ ಪ್ರವೇಶಕ್ಕೆ ಅವರಿಗೆ ಅನುಮತಿಯನ್ನು ಕೊಟ್ಟುದಕ್ಕೆ ಮುಂಚಿನಿಂದಲೂ ಆದರ ತೋರಿಸಿ) ಅವರು ಅರಮನೆಯಲ್ಲಿ ನಡೆಯುವ ದರ್ಬಾರುಗಳಿಗೆ ಪ್ರವೇಶಮಾಡಲು ಅನುಮತಿಕೊಟ್ಟುದೇ ಮುಂತಾದ ವಿಚಾರಗಳನ್ನು ಹಿಂದೆಯೇ ವಿಜ್ಞಾಪಿಸಲಾಗಿದೆ. ೧೯೧೬ನೆಯ ಇಸವಿ ಜನವರಿ ತಿಂಗಳು ೩೧ನೆಯ ತಾರೀಖಿನ ದಿನ ಮುಂಬಯಿ ನಗರದ ಪರೇಲಿನಲ್ಲಿ ಅಸ್ಪೃಶ್ಯರ ಪಾಠಶಾಲೆಗೆ ಮಹಾಸ್ವಾಮಿಯವರು ದಯಮಾಡಿಸಿ ಪ್ರೋತ್ಸಾಹಿಸಿದರು. ಆ ಪಾಠಶಾಲೆಯ ಆಡಳಿತ ನಿರ್ವಾಹಕ ಮಂಡಲಿಯ ಅಧ್ಯಕ್ಷರಾಗಿದ್ದ ಸರ್ ನಾರಾಯಣ ಜಿ. ಚಂದಾವಾರ್ಕಾರರವರೂ, ಸರ್ ಬಾಲಚಂದ್ರ ಕೃಷ್ಣರವರೇ ಮುಂತಾದವರೂ ಮಹಾಸ್ವಾಮಿಯವರಿಗೆ ಭಕ್ತಿ ವಿಶ್ವಾಸ ಗಳಿಂದ ಸ್ವಾಗತವನ್ನಿತ್ತು, ಆ ಪಾಠಶಾಲೆಯಲ್ಲಿದ್ದ ಮರಗೆಲಸದ ತರಗತಿಯೇ ಮುಂತಾದ ವೃತ್ತಿಶಿಕ್ಷಣ ತರಗತಿಗಳನ್ನೂ, ಇತರ ನಾನಾ ತರಗತಿಗಳನ್ನೂ, ಭೋಜನ ಶಾಲೆಯನ್ನೂ ಮಹಾಸ್ವಾಮಿಯವರಿಗೆ ತೋರಿಸಿದರು. ಮಹಾಸ್ವಾಮಿಯವರು ತೀವ್ರಾಸಕ್ತಿಯಿಂದ ಅವುಗಳನ್ನೆಲ್ಲ ಪರಿಶೀಲಿಸಿ, ಅಸ್ಪೃಶ್ಯ ಬಾಲಕರೊಡನೆ ಕುಳಿತು ವ್ಯಾಸಂಗ ಮಾಡುವ ವಿಷಯದಲ್ಲಿ ಮತ್ತು ಅವರೊಡನೆ ಧಾರಾಳವಾಗಿ ಬೆರೆತು ಸಲಿಗೆ ತೋರುವ ವಿಷಯದಲ್ಲಿ ಇತರ ಪಂಗಡಗಳ ಬಾಲಕರಾಗಲಿ ಅವರ ತಾಯಿ ತಂದೆ ಗಳಾಗಲಿ ಆಕ್ಷೇಪವನ್ನು ಸೂಚಿಸುತ್ತಿದ್ದರೇ ಅಥವಾ ಇಲ್ಲವೇ ಎಂದು ಕೇಳಿ, ಅಂತಹದೇನೂ ಇರಲಿಲ್ಲವೆಂದು ಕೇಳಿ ಹರ್ಷಿಸಿದರು. ಅನಂತರ ಸರ್ ನಾರಾಯಣ ಜಿ. ಚಂದಾವಾರ್ಕಾರರವರು ಮಹಾಸ್ವಾಮಿಯವರಿಗೆ ಪುಷ್ಪಮಾಲಿಕೆಯನ್ನು ಸಮರ್ಪಿಸಿ, "ಮಹಾಸ್ವಾಮಿ, ಅಸ್ಪೃಶ್ಯರ ಹಿತಸಾಧನೆಯ ವಿಚಾರವು ಈಗ ಭರತಖಂಡದಲ್ಲೆಲ್ಲ ಅತ್ಯಂತ ಪ್ರಾಮುಖ್ಯ ವಾದ ಮತ್ತು ಅತ್ಯಂತ ಗಮನಾರ್ಹವಾದ ವಿಚಾರವಾಗಿದೆ. ಅಸ್ಪೃಶ್ಯರ ಯೋಗಕ್ಷೇಮಸಾಧನೆಗಾಗಿ ಮಹಾಸ್ವಾಮಿಯವರು ಮೈಸೂರು ಸಂಸ್ಥಾನ ದೊಳಗೂ ಮೈಸೂರು ಸಂಸ್ಥಾನದ ಹೊರಗೂ ದಯಪಾಲಿಸುತ್ತಿರುವ ಅವಲಂಬನವು ಅಸ್ಪೃಶ್ಯರ ಹಿತಸಾಧನೆಯ ಒಟ್ಟು ಏರ್ಪಾಡಿಗೇ ಅತ್ಯಂತ ಪ್ರೋತ್ಸಾಹವನ್ನುಂಟುಮಾಡಿದೆ" ಎಂದು ಅರಿಕೆಮಾಡಿದರು. ಅಸ್ಪೃಶ್ಯರ

ವಿಚಾರದಲ್ಲಿ ಈಚೆಗೆ ಎಲ್ಲಿ ನೋಡಿದರೂ ತೀವ್ರಾಸಕ್ತಿಯೂ ಅಭಿಮಾನವೂ ಹುಟ್ಟಿ, ಮಹಾತ್ಮಾ ಗಾಂಧಿಯವರಿಂದ ಅವರಿಗೆ ಹರಿಜನರೆಂಬ ಹೆಸರು ದೊರೆತು, ಬಗೆಬಗೆಯ ಪ್ರೋತ್ಸಾಹಗಳು ಲಭಿಸುತ್ತಿರುವುದೇನೋ ನಿಜ. ಆದರೆ, ಈಗ್ಗೆ ಕಾಲುಶತಮಾನದ ಹಿಂದಿನ ಪರಿಸ್ಥಿತಿಯು ಯಾವ ರೀತಿ ಯಲ್ಲಿದ್ದಿತೆಂಬುದನ್ನು ಗಮನಿಸಿದರೆ, ಆಳಿದ ಮಹಾಸ್ವಾಮಿಯವರಾದ ಶ್ರೀಮನ್ಮಹಾರಾಜರವರು ದೂರದೃಷ್ಟಿಯಿಂದಲೂ ದೀರ್ಘಾಲೋಚನೆ ಯಿಂದಲೂ ಕೂಡಿ ಸಮಸ್ತರಿಗೂ ಆದರ್ಶಪ್ರಾಯವಾಗಿರುವಂತೆ ಹರಿಜನರ ವಿಚಾರದಲ್ಲಿ ಕೃಪಾವಲಂಬನವನ್ನಿತ್ತುದು ಎಷ್ಟು ಮಹತ್ತರವಾದ ಅಂಶ ವೆಂಬುದು ವ್ಯಕ್ತವಾಗದಿರದು. ಮಹಾಸ್ವಾಮಿಯವರ ಕೃಪೆಯಿಂದ ಹರಿಜನರ ವಿದ್ಯಾಭ್ಯಾಸಕ್ಕೂ, ಅವರ ಆರ್ಥಿಕ ಸಾಮಾಜಿಕ ರಾಜಕೀಯ ಸ್ಥಿತಿಗಳನ್ನು ಉತ್ತಮಪಡಿಸುವುದಕ್ಕೂ ಮೈಸೂರು ಸಂಸ್ಥಾನದಲ್ಲಿ ಸರ್ಕಾರದವರಿಂದ ದೊರೆತಿರುವುದಕ್ಕಿಂತ ಹೆಚ್ಚಿನ ಪ್ರೋತ್ಸಾಹವೂ ಸಹಾಯವೂ ಪ್ರಾಯಶಃ ಮತ್ತೆಲ್ಲಿಯೂ ದೊರೆತಿಲ್ಲ. ಹರಿಜನರ ಬಾಲಕ ಬಾಲಕಿಯರಿಗೆ ವಿದ್ಯಾರ್ಥಿ ವಿದ್ಯಾರ್ಥಿನೀ ವೇತನಗಳು, ಭೋಜನ ವಸತಿಗಳಿಗೆ ಉಚಿತವಾಗಿ ಸೌಕರ್ಯಗಳು, ಅವರನ್ನು ವಿದ್ಯಾಭ್ಯಾಸಕ್ಕೆ ಕಳುಹಿಸಿದುದಕ್ಕಾಗಿ ಅವರ ತಾಯಿ ತಂದೆಗಳಿಗೆ ದ್ರವ್ಯಸಹಾಯ, ವಿದ್ಯಾರ್ಥಿ ವಿದ್ಯಾರ್ಥಿನಿಯರಿಗೆ ಉಚಿತವಾಗಿ ಪುಸ್ತಕಗಳನ್ನೂ ಉಡುಪುಗಳನ್ನೂ ಒದಗಿಸುವ ಆನುಕೂಲ್ಯ— ಮುಂತಾದುವು ಮೈಸೂರು ಸಂಸ್ಥಾನದಲ್ಲಿ ಆದಿಕರ್ಣಾಟಕರಿಗೆ ದೊರೆತೂ ದೊರೆಯುತ್ತಲೂ ಇರುವ ವಿದ್ಯಾಭ್ಯಾಸದ ಸೌಕರ್ಯಗಳು. ವ್ಯವಸಾಯದ ಭೂಮಿಗಳ ರಿಯಾಯಿತಿಗಳು, ಪ್ರತ್ಯೇಕವಾದ ವಸಾಹತಗಳ ಏರ್ಪಾಡು, ಆದಿಕರ್ಣಾಟಕರಿಗಾಗಿಯೇ ಪ್ರತ್ಯೇಕವಾಗಿ ಸಹಕಾರ ಸಂಘಗಳ ಏರ್ಪಾಡು, ಸರ್ಕಾರಿ ಉದ್ಯೋಗಗಳಿಗೆ ಸೇರಿಸಿಕೊಳ್ಳಲು ಆದಿಕರ್ಣಾಟಕ ಪಂಗಡದ ವಿದ್ಯಾವಂತರಾದ ಯುವಕರಿಗೆ ಪ್ರಾಶಸ್ತ್ಯ—ಮುಂತಾದುವು ಅವರ ಆರ್ಥಿಕಸ್ಥಿತಿಯು ಉತ್ತಮಪಡುವಂತೆ ಮಾಡಲು ಅವರಿಗೆ ಲಭಿಸಿಯೂ ಲಭಿಸುತ್ತಲೂ ಇರುವ ಸೌಕರ್ಯಗಳು. ಪೌರಸಭೆಗಳು, ಡಿಸ್ಟ್ರಿಕ್ಟು ಬೋರ್ಡುಗಳು, ಪ್ರಜಾಪ್ರತಿನಿಧಿಸಭೆ ಮುಂತಾ ದುವುಗಳಲ್ಲಿ ಆದಿಕರ್ಣಾಟಕ ಪಂಗಡದವರು ಸದಸ್ಯರಾಗಲು ವಿಶೇಷ ವಿಧದ ಅನುಕೂಲಗಳು ಕಲ್ಪಿತವಾಗಿರುವುದು ಅವರಿಗೆ ರಾಜಕೀಯ ಕ್ಷೇತ್ರದಲ್ಲಿ ಲಭಿಸಿರುವ ಸೌಕರ್ಯಗಳು. ಸಾರ್ವಜನಿಕ ಜಲಾಶಯಗಳಲ್ಲಿ ನೀರನ್ನು ತೆಗೆದುಕೊಳ್ಳಬಹುದೆಂಬುದೇ ಮುಂತಾದ ಹಕ್ಕು ಬಾಧ್ಯತೆಗಳು, ಅರಮನೆ ಯಲ್ಲಿ ನಡೆಯುವ ದರ್ಬಾರುಗಳಿಗೆ ಪ್ರವೇಶ ಮುಂತಾದುವು ಆದಿ

ಕರ್ಣಾಟಕರ ಸಾಮಾಜಿಕಸ್ಥಿತಿಯು ಉತ್ತಮಪಡುವುದಕ್ಕೆ ಸಾಧಕವಾಗಿ ಅವರಿಗೆ ಲಭಿಸಿರುವ ಸೌಕರ್ಯಗಳು. ಇವುಗಳೆಲ್ಲ ಅವರಿಗೆ ಲಭಿಸಲು ಆಳಿದ ಮಹಾಸ್ವಾಮಿಯವರಾದ ಶ್ರೀಮನ್ಮಹಾರಾಜರ ಕೃಪಾವಲಂಬನದ ಅನುಗ್ರಹವೇ ಮುಖ್ಯ ಕಾರಣ. ಪೀಠಿಕಾಧ್ಯಾಯದಲ್ಲಿ ಸೂಚಿತವಾಗಿರುವಂತೆ ಮಹಾಸ್ವಾಮಿಯವರಿಗೆ ವಿಶ್ವಕೋಶದ ಶ್ಲಾಘನೆಯ ಕಾಣಿಕೆಯು ಸಮರ್ಪಿತವಾಗಿರುವುದಕ್ಕೆ, ಮಹಾಸ್ವಾಮಿಯವರು ಆದಿಕರ್ಣಾಟಕ ಪಂಗಡದವರಲ್ಲಿ ಹೀಗೆ ಸಹಾನುಭೂತಿ ತೋರಿ ಅನುಗ್ರಹಿಸುತ್ತ ಬಂದಿದ್ದುದೇ ಕಾರಣ.

**೧೯೧೬ನೆಯ ಇಸವಿಯಲ್ಲಿ ನಡೆದ ಎರಡು ಮಹತ್ತರ ಕಾರ್ಯಗಳು**

ಶಿವನಸಮುದ್ರದಲ್ಲಿ ನಡೆದ ವಿದ್ಯುಚ್ಛಕ್ತಿಯ ಉತ್ಪತ್ತಿಯ ಏರ್ಪಾಡು ವಿಶೇಷ ಜನರಂಜಕವಾಗಿ ಪರಿಣಮಿಸಿ, ಚಿನ್ನದ ಗಣಿಯಲ್ಲಿ ವಿದ್ಯುಚ್ಛಕ್ತಿಯ ಬಳಕೆಯು ಹೆಚ್ಚಿತು. ಅಲ್ಲದೆ, ಸಂಸ್ಥಾನದ ನಾನಾ ಪ್ರದೇಶಗಳಿಗೂ ವಿದ್ಯುದ್ದೀಪಗಳನ್ನು ಹಾಕತಕ್ಕ ಕಾರ್ಯಕಲಾಪಗಳ ದೆಸೆಯಿಂದಲೂ ಸಹ, ವಿದ್ಯುಚ್ಛಕ್ತಿಯ ಉತ್ಪತ್ತಿಯನ್ನು ಹೆಚ್ಚಿಸಬೇಕಾದುದು ಅಗತ್ಯವಾಯಿತು. ೧೯೧೬ನೆಯ ಇಸವಿಯಲ್ಲಿ ಅದುವರೆಗೆ ಸ್ಥಾಪಿತವಾಗಿ ಕೆಲಸ ಮಾಡುತ್ತಿದ್ದ ನಾಲ್ಕು ತಂಡಗಳ ಯಂತ್ರಸ್ಥಾಪನೆಗಳ ಜೊತೆಗೆ ಐದನೆಯದನ್ನು ಸ್ಥಾಪಿಸಿ ಒಟ್ಟು ೨೨,೬೫೦ ಅಶ್ವಸಾಮರ್ಥ್ಯಗಳ ಪ್ರಮಾಣದ ವಿದ್ಯುಚ್ಛಕ್ತಿಯನ್ನು ಉತ್ಪತ್ತಿಮಾಡಬೇಕೆಂದು ತೀರ್ಮಾನವಾಯಿತು.

೧೯೧೬ನೆಯ ಇಸವಿಯಲ್ಲಿ ನಡೆದ ಮತ್ತೊಂದು ಮಹತ್ತರ ಕಾರ್ಯವು, ರೈಲ್ವೇ ಮಾರ್ಗಗಳನ್ನು ಹೆಚ್ಚಿಸಿದುದು. ಮೈಸೂರು ನಗರದಿಂದ ಅರಸೀಕೆರೆಗೆ ರೈಲು ಹಾಕಿಸುವ ಕೆಲಸವು ಮುಂದುವರಿಯಿತು. ತರೀಕೆರೆಯಿಂದ ನರಸಿಂಹರಾಜಪುರದವರೆಗೆ ಟ್ರಾಂವೇ ಏರ್ಪಾಡು ನೆರವೇರಿ ಪ್ರಯಾಣ ಸೌಕರ್ಯವುಂಟಾಯಿತು. ಕೋಲಾರ ಡಿಸ್ಟ್ರಿಕ್ಟ ಬೋರ್ಡು ರೈಲ್ವೆಗಳಲ್ಲಿ ಕೋಲಾರದಿಂದ ಚಿಂತಾಮಣಿಯವರೆಗೂ, ಚಿಕ್ಕಬಳ್ಳಾಪುರದವರೆಗೂ ರೈಲುಗಳ ಸಂಚಾರವು ಪ್ರಾರಂಭವಾಯಿತು.

೧೯೧೮ನೆಯ ಇಸವಿಯಲ್ಲಿ, ಮಹಾಸ್ವಾಮಿಯವರ ಸಮ್ಮತಿಯನ್ನು ಪಡೆದು ಆಚರಣೆಗೆ ಬಂದ ಮುನಿಸಿಪಲ್ ರೆಗ್ಯುಲೇಷನಿನ ತಿದ್ದುಪಡಿ ರೆಗ್ಯುಲೇಷನಿನ ಮೇರೆಗೆ ಪೌರ ಸಭೆಗಳು (ಸಿಟಿ ಮುನಿಸಿಪಾಲಿಟಿಗಳು, ಟೌನ್ ಮುನಿಸಿಪಾಲಿಟಿಗಳು ಮತ್ತು ಮೈನರ್ ಮುನಿಸಿಪಾಲಿಟಿಗಳು — ಎಂದು) ಮೂರು ಪಂಗಡಗಳಾಗಿ ವಿಂಗಡವಾದವು. ಅಲ್ಲದೆ,

ಪೌರ ಸಭೆಗಳಲ್ಲಿ ಚುನಾಯಿತ ಸದಸ್ಯರ ಸಂಖ್ಯೆಯು ಹೆಚ್ಚಲವಕಾಶ ನಾದುದು, ಯುಕ್ತ ತೋರಿದ ಸಂದರ್ಭಗಳಲ್ಲಿ ಚುನಾಯಿತರಾದವರು ಪೌರ ಸಭೆಗಳ ಅಧ್ಯಕ್ಷರುಗಳಾಗಿರುವಂತೆ ಅಧಿಕಾರ ಕೊಡಲು ಅವಕಾಶವಾದುದು — ಮುಂತಾದುವೂ ಅದರ ಕೆಲವು ಪರಿಣಾಮಗಳು. ಬೆಂಗಳೂರಿನ ನಗರ ಸಭೆಗೂ (ಸಿಟಿ ಮುನಿಸಿಪಾಲಿಟಿಗೂ) ಮತ್ತು ಅನೇಕ ಪೌರ ಸಭೆಗಳಿಗೂ ಅಧ್ಯಕ್ಷರನ್ನು ಚುನಾಯಿಸಿಕೊಳ್ಳುವ ಅಧಿಕಾರವು ಲಭಿಸಿದೆ. ಉಳಿದ ಪೌರ ಸಭೆಗಳಿಗೂ, ಮೈಸೂರಿನ ನಗರ ಸಭೆಗೂ ಸರ್ಕಾರದವರಿಂದ ನೇಮಕವಾದ ಸರ್ಕಾರಿ ಅಧಿಕಾರಿಗಳೇ ಅಧ್ಯಕ್ಷರುಗಳಾಗಿದ್ದಾರೆ. ಬೆಂಗಳೂರು ಮೈಸೂರು ನಗರ ಸಭೆಗಳ ಉಪಾಧ್ಯಕ್ಷರುಗಳೂ, ನಾನಾ ಪೌರ ಸಭೆಗಳ ಉಪಾಧ್ಯಕ್ಷರುಗಳೂ ಚುನಾಯಿತರಾದ ಖಾಸಗಿ ದೊಡ್ಡಮನುಷ್ಯರುಗಳೇ ಆಗಿದ್ದಾರೆ.

**ಪೌರ ಸಭೆಗಳ ಪರಿಷ್ಕರಣ**

೧೯೧೬ನೆಯ ಇಸವಿಯಲ್ಲಿ ಮೈಸೂರು ವಿಶ್ವವಿದ್ಯಾನಿಲಯದ ಕಾನೂನು ರಚಿತವಾಗಿ ಮೈಸೂರು ವಿಶ್ವವಿದ್ಯಾನಿಲಯವು ಏರ್ಪಟ್ಟಿತು. ಅದರ ಛಾನ್ಸೆಲರ್ ಪದವಿಯನ್ನು, ಆಳಿದ ಮಹಾಸ್ವಾಮಿಯವರಾದ ಶ್ರೀಮನ್ಮಹಾರಾಜರವರೂ, ಪ್ರೋ-ಛಾನ್ಸೆಲರ್ ಪದವಿಯನ್ನು ಶ್ರೀಮದ್ಯುವರಾಜ ಶ್ರೀ ಕಂಠೀರವ ನರಸಿಂಹರಾಜ ಒಡೆಯರವರೂ ಅಲಂಕರಿಸಿದರು. ಮೈಸೂರು ವಿಶ್ವವಿದ್ಯಾನಿಲಯದ ಮೊಟ್ಟಮೊದಲನೆಯ ಘಟಿಕೋತ್ಸವವು (Convocation) ೧೯೧೮ನೆಯ ಇಸವಿ ಅಕ್ಟೋಬರು ೨೨ನೆಯ ತಾರೀಖಿನ ದಿನ ಮಧ್ಯಾಹ್ನದ ಮೇಲೆ ನಡೆಯಿತು. ಛಾನ್ಸೆಲರವರಾಗಿದ್ದ ಶ್ರೀಮನ್ಮಹಾರಾಜ ಶ್ರೀ ಕೃಷ್ಣರಾಜೇಂದ್ರ ಒಡೆಯರವರು, ಪರೀಕ್ಷೆಗಳಲ್ಲಿ ತೇರ್ಗಡೆ ಹೊಂದಿದ್ದವರಿಗೆ "ಡಿಗ್ರಿ" ಪ್ರಶಸ್ತಿ ಪತ್ರಿಕೆಗಳನ್ನು ದಯಪಾಲಿಸಿ ಘಟಿಕೋತ್ಸವವನ್ನು ನೆರವೇರಿಸಿದರು. ಆಗ್ಗೆ, ಸುಮಾರು ೨,೦೦೦ ಮಂದಿಗಳು ಸಭೆಯನ್ನಲಂಕರಿಸಿದ್ದರು.

**ವಿಶ್ವವಿದ್ಯಾನಿಲಯದ ಪ್ರಥಮ ಘಟಿಕೋತ್ಸವ**

ಮಹಾಪ್ರಭುಗಳವರು ಕಾಶೀ ನಗರದ ಹಿಂದೂ ವಿಶ್ವವಿದ್ಯಾನಿಲಯದ ಛಾನ್ಸೆಲರ್ ಪದವಿಯನ್ನಲಂಕರಿಸಿ, ೧೯೧೯ನೆಯ ಇಸವಿಯಲ್ಲಿ ಮತ್ತು ೧೯೨೨ನೆಯ ಇಸವಿಯಲ್ಲಿ ಘಟಿಕೋತ್ಸವಗಳನ್ನು ನೆರವೇರಿಸಿದರು.

ದಿವಾನ್ ಹುದ್ದೆಯಲ್ಲಿದ್ದ ಸರ್ ಎಂ. ವಿಶ್ವೇಶ್ವರಯ್ಯನವರು ೧೯೧೮ನೆಯ ಇಸವಿ ಡಿಸೆಂಬರು ೧೦ನೆಯ ತಾರೀಖಿನಿಂದ ಆರು ತಿಂಗಳುಗ

ಕಾಲ ರಜವನ್ನು ತೆಗೆದುಕೊಂಡು ಅನಂತರ ಅಧಿಕಾರದಿಂದ ವಿಶ್ರಾಂತ ರಾದರು. ಸರ್ದಾರ್ ಶ್ರೀಮಾನ್ ಎಂ. ಕಾಂತರಾಜ ಅರಸಿನವರು ೧೯೧೯ನೆಯ ಇಸವಿ ಜೂನ್ ತಿಂಗಳು ೧೪ನೆಯ ತಾರೀಖಿನಿಂದ, ಮಹಾಪ್ರಭುಗಳ ಅಪ್ಪಣೆಯ ಮೇರೆಗೆ ದಿವಾನ್ ಪದವಿಯ ಕರ್ತವ್ಯಗಳನ್ನು ವಹಿಸಿ ೧೯೨೨ನೆಯ ಇಸವಿ ಏಪ್ರಿಲ್ ೩೦ನೆಯ ತಾರೀಖಿನವರೆಗೂ ಅವುಗಳನ್ನು ನಿರ್ವಹಿಸಿದರು. ಅವರ ಆಡಳಿತ ನಿರ್ವಹಣ ಸಾಮರ್ಥ್ಯವನ್ನು ಮೆಚ್ಚಿ ಚಕ್ರವರ್ತಿ ಸಾರ್ವಭೌಮರವರು "ಸರ್" ಪ್ರಶಸ್ತಿಯನ್ನೂ, ಆಳಿದ ಮಹಾಸ್ವಾಮಿಯವರು "ರಾಜಸೇವಾಧುರೀಣ" ಎಂಬ ಬಿರುದನ್ನೂ ಅವರಿಗೆ ಅನುಗ್ರಹಿಸಿದರು.

**ಸರ್ದಾರ್ ಶ್ರೀಮಾನ್ ಎಂ. ಕಾಂತರಾಜ ಅರಸಿನವರ ದಿವಾನ್‌ಗಿರಿ**

ರಾಜಸೇವಾಧುರೀಣ ಸರ್ ಎಂ. ಕಾಂತರಾಜ ಅರಸಿನವರೇ ಅರಸು ಜನಾಂಗದವರಲ್ಲಿ ಮೊಟ್ಟಮೊದಲು ಬಿ.ಎ. ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದವರು. ಅವರು ಪ್ರೊಬೇಷನರಿ ಅಸಿಸ್ಟೆಂಟ್ ಕಮಿಷನರಾಗಿ ನೇಮಕವಾಗಿ ಮೇಲಿನ ಹುದ್ದೆಗಳಿಗೇರಿ ರಾಜಭಕ್ತಿಯಿಂದಲೂ ದೇಶಾಭಿಮಾನದಿಂದಲೂ ಸೇವೆಯನ್ನು ಸಲ್ಲಿಸಿದವರು. ಅವರು ೧೯೧೭ನೆಯ ಇಸವಿಯಲ್ಲಿ ಜಪಾನಿಗೆ ಹೋಗಿ ಅಲ್ಲಿಯ ಆಡಳಿತ ವಿಚಕ್ಷಣೆ, ಕೈಗಾರಿಕೆಗಳ ವ್ಯವಸ್ಥೆ, ಸಂಸ್ಕೃತಿಯ ಸಲ್ಲಕ್ಷಣಗಳು, ಮುಂತಾದುವುಗಳನ್ನೆಲ್ಲ ಪರಿಶೀಲಿಸಿಕೊಂಡು ಬಂದಿದ್ದವರು. ಅವರ ದೇಶಾಭಿಮಾನವೂ, ರಾಜಭಕ್ತಿಯೂ, ಅತಿಶಯವಾಗಿದ್ದುವು. ಧನಿಕರು ದರಿದ್ರರೆಂಬ ಭೇದವಿಲ್ಲದೆ ಅವರು ಸಮಸ್ತರಲ್ಲಿಯೂ ತೋರಿಸುತ್ತಿದ್ದ ಸೌಜನ್ಯವು ಅವರ ವಿದ್ಯೆಗೂ ಹುದ್ದೆಗೂ ಭೂಷಣಪ್ರಾಯವಾಗಿದ್ದಿತು: ಬಾಲ್ಯಮಿತ್ರರಾದ ಸಣ್ಣ ಹುದ್ದೇದಾರರೊಬ್ಬರು ಮೈಸೂರಿನ "ಲೇಕ್‌ವ್ಯೂ" ಭವನಕ್ಕೆ ಅವರ ಸಂದರ್ಶನಕ್ಕಾಗಿ ಹೋದರು. ಸರ್ ಎಂ. ಕಾಂತರಾಜ ಅರಸಿನವರು ಅವರನ್ನು ಬಹಳ ಪ್ರೀತಿಯಿಂದ ತಮ್ಮೊಡನೆ ಕುಳ್ಳಿರಿಸಿಕೊಂಡು ಒಂದು ಘಂಟೆಯ ಕಾಲ ಮಾತನಾಡಿ, ಆಗಾಗ ಬರುತ್ತಿರಬೇಕೆಂದು ತಿಳಿಸಿ, ಅವರೊಡನೆ ಮಹಡಿಯಿಂದಿಳಿದು ಬಂದು ಕೈಸಾಲೆಯಲ್ಲಿ ಬೀಳ್ಕೊಂಡರು. ಅವರ ಸೌಜನ್ಯಕ್ಕೆ ಈ ಬಗೆಯ ಅನೇಕ ನಿದರ್ಶನಗಳಿವೆ.

ಅವರ ದಿವಾನ್‌ಗಿರಿಯ ಅವಧಿಯಲ್ಲಿ ಅನೇಕ ದೇಶೋನ್ನತಿ ಸಾಧಕ ಕಾರ್ಯಗಳು ನೆರವೇರಿದುವು. ಭದ್ರಾವತಿ ಕಬ್ಬಿಣದ ಕಾರ್ಖಾನೆಯನ್ನು ಏರ್ಪಡಿಸಬೇಕೆಂದು ಗೊತ್ತಾಯಿತು. ಮಿಡ್ಲ್ ಸ್ಕೂಲುಗಳಲ್ಲಿ

ಬಾಲಕಬಾಲಕಿಯರು ಉಚಿತವಾಗಿ ವಿದ್ಯಾಭ್ಯಾಸ ಮಾಡುವ ವ್ಯವಸ್ಥೆಯು ನಡೆಯಿತು. ಹಿಂದುಳಿದ ಪಂಗಡಗಳವರ ವಿದ್ಯಾಭ್ಯಾಸಕ್ಕಾಗಿ ವಿದ್ಯಾರ್ಥಿ ವೇತನಗಳೇ ಮುಂತಾದ ಸೌಕರ್ಯಗಳು ಕಲ್ಪಿತವಾದುವು. ಹಿಂದುಳಿದ ಪಂಗಡಗಳವರಿಗೆ (" ಮಿಲ್ಲರ್ ಕಮಿಟಿ " ಎಂಬ ಸಮಿತಿಯವರ ವರದಿಯ ಮೇಲೆ ಸರ್ಕಾರದವರ ಹುಕುಮಿಗನುಸಾರವಾಗಿ) ಯುಕ್ತ ಪ್ರಮಾಣದಲ್ಲಿ ಸರ್ಕಾರಿ ಉದ್ಯೋಗಗಳು ದೊರೆಯುವ ವ್ಯವಸ್ಥೆಯು ನಡೆಯಿತು. ಸರ್ಕಾರಿ ಉದ್ಯೋಗಗಳಿಗಾಗಿ ಬರತಕ್ಕ ಪ್ರಾರ್ಥನಾ ಪತ್ರಗಳನ್ನು ಸ್ವೀಕರಿಸಿ, (ಉಮೇದುವಾರರನ್ನು ಆರಿಸಿ ಸರಿಯಾದವರನ್ನು ಕೆಲಸಗಳಿಗೆ ನೇಮಕ ಮಾಡಿಕೊಳ್ಳಲು) ಸಂಬಂಧಪಟ್ಟ ಕಚೇರಿಗಳಿಗೆ ಕಳುಹಿಸುವುದೇ ಮುಂತಾದ ಕೆಲಸಗಳನ್ನು ನೆರವೇರಿಸುವುದಕ್ಕಾಗಿ " ಸೆಂಟ್ರಲ್ ರಿಕ್ರೂಟ್ಮೆಂಟ್ ಬೋರ್ಡು " ಸ್ಥಾಪಿತವಾಯಿತು. ೧೯೧೯ನೆಯ ಇಸವಿಯಲ್ಲಿ ಸಂಪದಭಿವೃದ್ಧಿ ಸಮಾಜದ (" ಎಕನಾಮಿಕ್ ಕಾನ್ಫರೆನ್ಸ್ ") ಪುನರ್ವ್ಯವಸ್ಥೆಯು ನಡೆಯಿತು. ನ್ಯಾಯವಿಧಾಯಕ ಸಭೆಗೆ ಎರಡೆರಡು ಡಿಸ್ಟ್ರಿಕ್ಟುಗಳಿಗೊಬ್ಬರಂತೆ ಸದಸ್ಯರು ಚುನಾವಣೆಯಾಗಿ ಬರುತ್ತಿದ್ದುದಕ್ಕೆ ಪ್ರತಿಯಾಗಿ ಪ್ರತಿಯೊಂದು ಡಿಸ್ಟ್ರಿಕ್ಟಿನಿಂದಲೂ ಒಬ್ಬೊಬ್ಬರು ಸದಸ್ಯರೂ, ವಿಶ್ವವಿದ್ಯಾನಿಲಯದ ಪರವಾಗಿ ಒಬ್ಬರು ಸದಸ್ಯರೂ ಚುನಾವಣೆಹೊಂದಿ ಬರತಕ್ಕುದೆಂದು ಗೊತ್ತಾಯಿತು. ಅಲ್ಲದೆ, " ನಾಮಿನೇಷನ್ " ಮೂಲಕ ಸರ್ಕಾರದವರು ನೇಮಕಮಾಡಿದ ನಾಲ್ವರು ಸದಸ್ಯರು ಇರತಕ್ಕುದೆಂದೂ ಗೊತ್ತಾಯಿತು. ಆದಕಾರಣ, ನ್ಯಾಯವಿಧಾಯಕ ಸಭೆಯ ಸದಸ್ಯರ ಒಟ್ಟು ಸಂಖ್ಯೆಯು ೨೧ರಿಂದ ೩೦ಕ್ಕೆ ಏರಿತು.

ಯುದ್ಧದ ಫಲಿತಾಂಶವಾಗಿ ಧಾನ್ಯಗಳೇ ಮುಂತಾದುವುಗಳ ಧಾರಣೆಗಳು ಏರಿದ ಕಾರಣದಿಂದ, ಸರ್ಕಾರಿ ಉದ್ಯೋಗಸ್ಥರ ಸಂಬಳಗಳು ಅವರ ಕುಟುಂಬಗಳ ಜೀವನಕ್ಕೆ ಸಾಲದೆಹೋಗಿ, ಅವರಿಗೆ ಬಹಳ ಕಷ್ಟವಾಯಿತು. ಅವರುಗಳ ಸಂಬಳಗಳನ್ನು ಹೆಚ್ಚಿಸಿ, ಧಾನ್ಯಗಳ ಆಮದು ರಫ್ತುಗಳನ್ನು ಹತೋಟಿಯಲ್ಲಿಟ್ಟಕಾರಣ, ವೆಚ್ಚವು ಹೆಚ್ಚಿತು. ಅಲ್ಲದೆ, ಪೌಂಡುಗಳ ರೂಪಕ್ಕೆ ರೂಪಾಯಿಗಳ ವಿನಿಮಯದ (" ಎಕ್ಸ್‌ಚೇಂಜ್ ") ದರವು ಹೆಚ್ಚಿದುದರ ಪರಿಣಾಮವಾಗಿ, ಪೌಂಡುಗಳ ರೂಪದಲ್ಲಿ ಪಾವತಿಗಳು ನಡೆಯಬೇಕಾಗಿದ್ದ ಮೊಬಲಗುಗಳ ಸಂಬಂಧದಲ್ಲಿ ಸರ್ಕಾರದವರು ಕೊಡಬೇಕಾಗಿದ್ದ ಹಣವು ಅಧಿಕವಾದುದರಿಂದಲೂ ವೆಚ್ಚವು ಹೆಚ್ಚಿತು. ೧೯೨೦ನೆಯ ಇಸವಿಯಲ್ಲಿ ಸರ್ಕಾರದವರು ವರಮಾನದ ತೆರಿಗೆಯನ್ನು ವಿಧಿಸಿ ಹುಟ್ಟುವಳಿಯನ್ನು ಹೆಚ್ಚಿಸಿಕೊಂಡರು.

ಹಾಗೆ ಮಾಡಿಯೂ ಸಹ, ಆಯವ್ಯಯಗಳು ಸಮತೂಕಕ್ಕೆ ಬಾರದೆ ಹೋದುವು. ಆದಕಾರಣ, ಮೂಲಧನವನ್ನು ವ್ಯಯಮಾಡಬೇಕಾಗಿದ್ದ ಉದ್ಯಮಗಳಿಗೆ ವಾರ್ಷಿಕ ಹುಟ್ಟುವಳಿಗಳಿಂದ ಹಣವನ್ನೊದಗಿಸುವುದು ಅಸಾಧ್ಯವೂ ಅಯುಕ್ತವೂ ಆಗಿದ್ದುದನ್ನು ಮನಗಂಡು, ಸರ್ಕಾರದವರು ಆಯ ವ್ಯಯಗಳ ಆಡಳಿತದಲ್ಲಿ ನಿಪುಣರೆನಿಸಿ ಪ್ರಖ್ಯಾತರಾಗಿದ್ದ ಶ್ರೀಮಾನ್ ದತ್ತ ಅವರ ಸಲಹೆಗಳಂತೆ ೧೯೨೦ನೆಯ ಇಸವಿ ಜುಲೈ ೧ನೆಯ ತಾರೀಖಿನ ದಿನ (೧೯೨೦–೪೦ರ) ಸರ್ಕಾರಿ ಸಾಲವನ್ನೇರ್ಪಡಿಸಿದರು.

೧೯೧೯ನೆಯ ಇಸವಿ ಡಿಸೆಂಬರು ತಿಂಗಳಿನಲ್ಲಿ ವೈಸ್ರಾಯಿಯವರಾಗಿದ್ದ ಲಾರ್ಡ್ ಚೆಲ್ಮ್ಸ್‌ಫರ್ಡ್ ಅವರೂ, ೧೯೨೨ನೆಯ ಇಸವಿ ಜನವರಿ ತಿಂಗಳಿನಲ್ಲಿ ಪ್ರಿನ್ಸ್ ಆಫ್ ವೇಲ್ಸ್‌ರವರೂ ಮೈಸೂರು ಸಂಸ್ಥಾನಕ್ಕೆ ದಯಮಾಡಿ, ಮಹಾಸ್ವಾಮಿಯವರ ಮತ್ತು ಸರ್ಕಾರದವರ ಆದರಾತಿಥ್ಯಗಳನ್ನು ಸ್ವೀಕರಿಸಿ ತೆರಳಿದರು.

ತಾವೇ ದುಃಖಾನುಭವಮಾಡುತ್ತಿದ್ದೂ ಸಹ, ತಮಗೆ ಪ್ರಾಪ್ತವಾದ ಬಗೆಯ ದುಃಖವು ಮತ್ತಾರಿಗೂ ಪ್ರಾಪ್ತವಾಗದಂತೆ ನಿವಾರಿಸುವ ಪ್ರಯತ್ನ ಮಾಡುವುದೇ ಮಹಾತ್ಮರ ಲಕ್ಷಣ.

**ದುಃಖಾನುಭವದಿಂದ ಸಹ ಪ್ರಜೋಪಕಾರದ ಪ್ರವೃತ್ತಿ**

ಕ್ಷಯರೋಗ ಚಿಕಿತ್ಸೆಗಾಗಿ, ಮೈಸೂರು ನಗರದಲ್ಲಿ ರಾಜಕುಮಾರಿ ಶ್ರೀ ಕೃಷ್ಣಾಜಮ್ಮಣ್ಣಿಯವರ ನಾಮಾಂಕಿತದಲ್ಲಿ ಸ್ಥಾಪಿತವಾಗಿರುವ ಚಿಕಿತ್ಸಾಲಯವೇ ಇದಕ್ಕೊಂದು ದೊಡ್ಡ ನಿದರ್ಶನ. ಆಳಿದ ಮಹಾಸ್ವಾಮಿಯವರ ಸಹೋದರಿಯವರಾದ ಶ್ರೀ ಕೃಷ್ಣಾಜಮ್ಮಣ್ಣಿಯವರೂ, ಅವರ ಮೂವರು ಪುತ್ರಿಯರೂ ಕ್ಷಯರೋಗದಿಂದ ಮೃತಪಟ್ಟಕಾರಣ, ರಾಜಕುಟುಂಬದವರಿಗೂ ಮತ್ತು ಮಹಾಸ್ವಾಮಿಯವರಿಗೂ ದುಸ್ಸಹವಾದ ವಿಯೋಗ ದುಃಖವು ಪ್ರಾಪ್ತವಾಯಿತು. ಆದಾಗ್ಗೂ, ಪ್ರಜೆಗಳಿಗೆ ಆ ವಿಧವಾದ ಬಂಧು ವಿಯೋಗದುಃಖವು ಸಂಭವಿಸುವುದನ್ನು ಕಡಮೆ ಮಾಡಬೇಕೆಂಬ ಮಹತ್ತರವಾದ ಧ್ಯೇಯದಿಂದ ಕೂಡಿ, ಮಹಾಸ್ವಾಮಿಯವರೂ, ಮಹಾಮಾತೃಶ್ರೀವಾಣೀವಿಲಾಸ ಸನ್ನಿಧಾನದವರೂ, ಕರ್ನಲ್ ದೇಶರಾಜ ಅರಸಿನವರೂ ಕ್ಷಯರೋಗ ಚಿಕಿತ್ಸಾಲಯವನ್ನು ಕಟ್ಟಿಸುವ ಯೋಚನೆ ಮಾಡಿದರು; ಅದುವರೆಗೂ ಕ್ಷಯರೋಗ ಚಿಕಿತ್ಸಾಲಯ ವಾವುದೂ ಸಂಸ್ಥಾನದಲ್ಲಿ ನಿರ್ಮಿತವಾಗಿರಲಿಲ್ಲ. ೧೯೧೮ನೆಯ ಇಸವಿ ಏಪ್ರಿಲ್ ತಿಂಗಳು ೬ನೆಯ ತಾರೀಖಿನ ದಿನ ಮಹಾಮಾತೃಶ್ರೀಯವರು ಆ ಕಟ್ಟಡದ ಅಸ್ತಿಭಾರ ಶಿಲೆಯನ್ನು ಪ್ರತಿಷ್ಠಿಸಿದರು. ಕಟ್ಟಡಕ್ಕೆ

೧,೦೩,೯೫೯ ರೂಪಾಯಿಗಳು ವೆಚ್ಚವಾದುವು. ಆ ಮೊತ್ತದಲ್ಲಿ ೭೫,೦೦೦ ರೂಪಾಯಿಗಳು ಅರಮನೆಯಿಂದ ಒದಗಿ, ಉಳಿದ ಮೊಬಲಗು ಸರ್ಕಾರದಿಂದ ವೆಚ್ಚವಾಯಿತು. ಮಹಾಸ್ವಾಮಿಯವರು ೧೯೨೧ನೆಯ ಇಸವಿ ನವೆಂಬರು ತಿಂಗಳು ೧೮ನೆಯ ತಾರೀಖಿನ ದಿನ ಆ ಕಟ್ಟಡದ ಪ್ರವೇಶ ಮಹೋತ್ಸವವನ್ನು ನೆರವೇರಿಸಿದಾಗ್ಗೆ ದಯಪಾಲಿಸಿದ ಭಾಷಣದಲ್ಲಿ, "ಮಾನಿನಿಯರೇ ಮತ್ತು ಮಹನೀಯರೇ, ಈ ರೋಗದ ದೆಸೆಯಿಂದ ನಾವು ಎಷ್ಟು ನೊಂದಿರುವೆವೆಂಬುದು, ಇಲ್ಲಿ ಸೇರಿರುವವರಲ್ಲಿ ಅನೇಕರಿಗೆ ವಿದಿತವಾಗಿಯೇ ಇದೆ. ಯಾರ ಜ್ಞಾಪಕಾರ್ಥವಾಗಿ ಈ ಸಂಸ್ಥೆಯು ಸ್ಥಾಪಿತವಾಗಿರುವುದೋ ಆ ನಮ್ಮ ಪ್ರಿಯ ಸಹೋದರಿಯವರೂ ಅವರ ಮೂವರು ಪುತ್ರಿಯರೂ ಸಹ, ಕ್ರೂರವಾದ ಈ ರೋಗಕ್ಕೆ ತುತ್ತಾಗಿ ಪರಲೋಕವನ್ನು ಸೇರಿದರು. ಆದಕಾರಣ, ಕ್ಷಯರೋಗ ಪೀಡಿತರಿಗೆ ಸ್ವಾಸ್ಥ್ಯದಾಯಕವಾದ ಈ ನಿಲಯದಿಂದ ದೀನರಿಗೂ ದುಃಖಿತರಿಗೂ ಕಷ್ಟನಿವಾರಣೆಯಾಗಲೆಂದೂ, ಯಾವ ಮಹದಾಶಯಗಳಿಂದ ಕೂಡಿ ನಾವು ಈ ಸಂಸ್ಥೆಯನ್ನು ಇಂದು ಉಪಕ್ರಮಮಾಡುವೆವೋ ಅವುಗಳೆಲ್ಲವೂ ಕಾರ್ಯಕಾರಿಯಾಗಿ ನೆರವೇರುವಂತೆ ಜಗದ್ರಕ್ಷಕನಾದ ಭಗವಂತನು ಅನುಗ್ರಹಿಸಲೆಂದೂ ನಮ್ಮ ಮಾತೃಶ್ರೀಯವರೂ ನಾವೂ ಅಂತಃಕರಣ ಪೂರ್ವಕವಾಗಿ ಎಷ್ಟುಮಟ್ಟಿಗೆ ಹಾರೈಸುತ್ತಿದ್ದೇವೆಂಬುದು ತಮ್ಮೆಲ್ಲರಿಗೂ ವೇದ್ಯವಾಗಬಹುದು" ಎಂದು ನುಡಿದರು.

**ಶ್ರೀ ಜಯಚಾಮರಾಜ ಒಡೆಯರವರ ಜನನ**

ಈ ಮಧ್ಯದಲ್ಲಿ ೧೯೧೯ನೆಯ ಇಸವಿ ಜೂಲೈ ೧೮ನೆಯ ತಾರೀಖು (ಸಿದ್ಧಾರ್ಥಿ ಸಂವತ್ಸರದ ಆಷಾಢ ಬಹುಳ ಪಂಚಮಿ) ಶುಕ್ರವಾರದ ದಿನ ಸಾಯಂಕಾಲ ೬ ಘಂಟೆ ೧೩ ನಿಮಿಷಗಳಿಗೆ ಉತ್ತರಾಭಾದ್ರ ನಕ್ಷತ್ರ ಧನುರ್ಲಗ್ನದಲ್ಲಿ ಈಗಿನ ಶ್ರೀಮನ್ಮಹಾರಾಜರವರಾದ ಶ್ರೀ ಜಯಚಾಮರಾಜ ಒಡೆಯರ್ ಬಹದ್ದೂರರವರು ಜನಿಸಿದರು. ಆ ದಿನ ಪುಷ್ಪವೃಷ್ಟಿಯಂತೆ ಹಿತಕರವಾಗಿ ತುಂತುರು ಮಳೆಯಾಯಿತು. ಅರಮನೆಯೊಳಗೂ ಅರಮನೆಯ ಹೊರಗೂ ದೀಪೋತ್ಸವವು ಬೆಳೆದು, ಬಂಡಿ ಬಂಡಿಗಳಲ್ಲಿ ನಗರ ನಿವಾಸಿಗಳಿಗೆ ಸಕ್ಕರೆಯನ್ನು ಹಂಚಲಾಯಿತು. ಅರಮನೆಯ ಮುಂಭಾಗದಲ್ಲಿ ಪ್ರಜೆಗಳು ಕಿಕ್ಕಿರಿದು ತುಂಬಿ ಜಯಘೋಷ ಮಾಡಿದರು. ಮಾರನೆಯದಿನ ಬೆಳಗ್ಗೆ ಅರಮನೆಯ ಬತೇರಿಯಿಂದ ೨೧ ಕುಶಾಲು ತೋಫುಗಳು ಮೊಳಗಿದುವು.

ಜನನಾತ್ಪರ ೧೨ನೆಯ ಶುಭದಿನ (ಜೂಲೈ ೨೯ನೆಯ ತಾರೀಖು

ಮಂಗಳವಾರ) ಬೆಳಗ್ಗೆ ಹತ್ತೂವರೆ ಘಂಟೆಗೆ ಅಂಬಾವಿಲಾಸದಲ್ಲಿ ದರ್ಬಾರು ಬಳೆದು ನಾಮಕರಣ ಮಹೋತ್ಸವವು ವೈಭವದಿಂದ ನಡೆಯಿತು. ರಾಜ ಗುರುಗಳಾದ ಶ್ರೀ ಬ್ರಹ್ಮತಂತ್ರ ಪರಕಾಲಸ್ವಾಮಿಗಳವರು ಸಮಸ್ತ ಮರ್ಯಾದೆಗಳೊಡನೆ ಅರಮನೆಗೆ ದಯಮಾಡಿ ಪಾದ ಪೂಜೆಯನ್ನೂ ಖಿಲ್ಲತ್ತುಗಳನ್ನೂ ಸ್ವೀಕರಿಸಿ, ಆಳಿದ ಮಹಾಸ್ವಾಮಿಯವರಾದ ಶ್ರೀಮನ್ಮಹಾರಾಜರವರಿಗೂ, ಅವರ ಸಹೋದರರಿಗೂ ತೀರ್ಥವನ್ನೂ, ಪುಷ್ಪಮಾಲಿಕೆಗಳನ್ನೂ, ಖಿಲ್ಲತ್ತುಗಳನ್ನೂ, ಫಲ ಮಂತ್ರಾಕ್ಷತೆಗಳನ್ನೂ ಕರುಣಿಸಿ ಆಶೀರ್ವದಿಸಿದರು. ಅರಮನೆಯ ಬತೇರಿಯಿಂದ ೨೧ ಕುಶಾಲು ತೋಪುಗಳು ಮೊಳಗಿದುವು. ಶಾಸ್ತ್ರೋಕ್ತವಿಧಿಗಳೊಡನೆ ಶಿಶುವಿಗೆ ಶ್ರೀ ಜಯ ಚಾಮರಾಜ ಒಡೆಯರವರೆಂದು ನಾಮಕರಣವು ನಡೆಯಿತು. ದಿವಾನ್ ಪದವಿಯನ್ನಲಂಕರಿಸಿದ್ದ ರಾಜಸೇವಾಧುರೀಣ ಸರ್ದಾರ್ ಸರ್ ಎಂ. ಕಾಂತರಾಜ ಅರಸಿನವರು ಶಿಶುವಿಗೆ ವಜ್ರಖಚಿತವಾದ ಕಂಠಾಭರಣ ವನ್ನೂ ಜರತಾರಿಯ ಶಾಲು ಜೋಡಿಯನ್ನೂ ಸಮರ್ಪಿಸಿದರು. ಇತರ ರಾಜಬಂಧುಗಳೂ ಬಗೆಬಗೆಯ ಆಭರಣಗಳನ್ನೂ ಶಾಲುಜೋಡಿ ಗಳನ್ನೂ ಸಮರ್ಪಿಸಿದರು. ಆ ಶುಭದಿನ ರಾಜಧಾನಿಯ ಛತ್ರಗಳಲ್ಲಿ ಸಮಸ್ತ ಜಾತಿ ಪಂಗಡಗಳವರಿಗೂ ಸಂತರ್ಪಣೆ ನಡೆದು ಮಿಷ್ಟಾನ್ನ ಭೋಜನವಾಯಿತು. ಒಟ್ಟು ಮೈಸೂರು ಸಂಸ್ಥಾನವೇ ಶ್ರೀಮದ್ಯುವರಾಜ ಕುಮಾರರ ಶ್ರೇಯಃಪ್ರಾರ್ಥನೆ ಮಾಡಿ ಹರ್ಷಿಸಿತು.

**ಶ್ರೀಮಾನ್ ಎ. ಆರ್. ಬ್ಯಾನರ್ಜಿ ಅವರ ದಿವಾನ್‌ಗಿರಿ**

ರಾಜಸೇವಾಧುರೀಣ ಸರ್ ಎಂ. ಕಾಂತರಾಜ ಅರಸಿನವರು ಅಕಸ್ಮಾ ತ್ತಾಗಿ ಅಸ್ವಸ್ಥರಾದಕಾರಣ, ೧೯೨೨ನೆಯ ಇಸವಿ ಮೇ ತಿಂಗಳು ೧ನೆಯ ತಾರೀಖಿನಿಂದ ಅವರು ದಿವಾನ್ ಹುದ್ದೆಯಿಂದ ವಿಶ್ರಾಂತರಾದರು. ಅವರ ಸ್ಥಾನದಲ್ಲಿ ಶ್ರೀಮಾನ್ ಎ. ಆರ್. ಬ್ಯಾನರ್ಜಿ, ಐ.ಸಿ.ಎಸ್. ಅವರು ದಿವಾನ್ ಪದವಿಗೆ ನೇಮಕವಾದರು. ಅವರು ಆ ಬಳಿಕ ನಾಲ್ಕು ವರ್ಷಗಳ ಕಾಲ ಆ ಹುದ್ದೆ ಯಲ್ಲಿದ್ದರು. ಚಕ್ರವರ್ತಿ ಸಾರ್ವಭೌಮರವರು ಅವರಿಗೆ ನೈಟ್‌ಹುಡ್ ("ಸರ್") ಪ್ರಶಸ್ತಿಯನ್ನು ದಯಪಾಲಿಸಿದರು.

ಅವರು ದಿವಾನ್ ಪದವಿಗೆ ಬಂದ ತರುವಾಯ ಎಂಟೂವರೆ ತಿಂಗಳಿನ ವೇಳೆಗೆ ಭದ್ರಾವತಿ ಕಬ್ಬಿಣದ ಕಾರ್ಖಾನೆಯಲ್ಲಿ ಯಂತ್ರಗಳ ಜೋಡಣೆಯು ಪೂರೈಸಿತು. ೧೯೨೩ನೆಯ ಇಸವಿ ಜನವರಿ ೧೮ನೆಯ ತಾರೀಖಿನಿಂದ ಅಲ್ಲಿ ಕಬ್ಬಣವನ್ನು ಭಟ್ಟಿ ಇಳಿಸುವ ಕೆಲಸವು ಪ್ರಾರಂಭವಾಯಿತು.

ಕೃಷ್ಣರಾಜಸಾಗರ ಜಲಾಶಯ ನಿರ್ಮಾಣದ ಸಂಬಂಧದಲ್ಲಿ ಮೈಸೂರು ಸಂಸ್ಥಾನದವರು ಕಾವೇರೀ ನದಿಯ ನೀರನ್ನು ಉಪಯೋಗಿಸಿಕೊಳ್ಳುವ ವಿಷಯದ ಸಂಬಂಧವಾಗಿ ಮದರಾಸು ಸರ್ಕಾರದವರಿಗೂ ಮೈಸೂರು ಸರ್ಕಾರದವರಿಗೂ ಉಂಟಾಗಿದ್ದ ವಿವಾದವು ೧೯೨೪ನೆಯ ಇಸವಿ ಫೆಬ್ರವರಿ ತಿಂಗಳು ೧೮ನೆಯ ತಾರೀಖಿನಲ್ಲಿ ಪರಿಹಾರವಾಗಿ ಆ ದಿನ ಒಪ್ಪಂದವು ನಡೆಯಿತು; ಮೈಸೂರು ಸಂಸ್ಥಾನದಲ್ಲಿ ಪರಮಾವಧಿ ಎಷ್ಟು ನೀರನ್ನು ಉಪಯೋಗಿಸಬಹುದು, ಕೃಷ್ಣರಾಜಸಾಗರ ಜಲಾಶಯದಿಂದ ಕಾವೇರೀ ನದಿಯಲ್ಲಿ ಕನಿಷ್ಠಪಕ್ಷ ಎಷ್ಟು ಪ್ರಮಾಣದ ನೀರು ಹರಿದುಹೋಗಲು ಅವಕಾಶವಿರಬೇಕು — ಎಂಬಿವೇ ಮುಂತಾದ ವಿಚಾರಗಳೆಲ್ಲ ವ್ಯವಸ್ಥೆಯಾದುವು. ರೆವೆನ್ಯೂ ಅಧಿಕಾರಿಗಳೇ ಕ್ರಿಮಿನಲ್ ಮೊಕದ್ದಮೆಗಳನ್ನೂ ವಿಚಾರಣೆಮಾಡುವ ಅಧಿಕಾರವನ್ನು ಅವರಿಂದ ತಪ್ಪಿಸಿ ಅವುಗಳ ವಿಚಾರಣೆಗಾಗಿಯೇ ಪ್ರತ್ಯೇಕವಾಗಿ ಮ್ಯಾಜಿಸ್ಟ್ರೇಟ್ ಕೋರ್ಟುಗಳನ್ನು ಸ್ಥಾಪಿಸುವ ಏರ್ಪಾಡು — ಆ ಮೊದಲೇ ಆಚರಣೆಯಲ್ಲಿದ್ದ ಡಿಸ್ಟ್ರಿಕ್ಟುಗಳ ಜೊತೆಗೆ — ಇತರ ಡಿಸ್ಟ್ರಿಕ್ಟುಗಳಲ್ಲಿಯೂ ಆಚರಣೆಗೆ ಬಂದಿತು. ಆಡಳಿತ ಸಂಬಂಧವಾಗಿ ಇತರ ಅನೇಕ ಸಂಸ್ಕರಣಗಳೂ ಸುಧಾರಣೆಗಳೂ ನಡೆದುವು. ವೆಚ್ಚವನ್ನು ತಗ್ಗಿಸುವುದಕ್ಕಾಗಿ ಸಲಹೆ ಹೇಳಲು ೧೯೨೨ನೆಯ ಇಸವಿಯಲ್ಲಿ ನೇಮಕವಾಗಿದ್ದ ಸಮಿತಿಯವರ ("ರಿಟ್ರೆಂಚ್ಮೆಂಟ್ ಕಮಿಟಿ"ಯವರ) ವರದಿಯ ಮೇಲೆ ಸರ್ಕಾರದವರು ಕ್ರಮ ಜರುಗಿಸಿ ಸಮಿತಿಯವರ ಸಲಹೆಗಳಲ್ಲಿ ಅನೇಕ ಸಲಹೆಗಳನ್ನು ಆಚರಣೆಗೆ ತಂದು, ಆಯವ್ಯಯಗಳನ್ನು ಸಮತೂಕಕ್ಕೆ ತರಲು ಬಹಳವಾಗಿ ಶ್ರಮಿಸಿದರು.

**ರಾಜಕಾರ್ಯಕ್ಕಾಗಿ ಸಿಮ್ಲಾ ನಗರ ಪ್ರಯಾಣ**

೧೯೨೨ನೆಯ ಇಸವಿ ಮೇ ತಿಂಗಳಿನಲ್ಲಿ, ಮಹಾಸ್ವಾಮಿಯವರು ಮೈಸೂರು ಸಂಸ್ಥಾನದ ಪೊಗದಿಯ ಹಣವನ್ನು ತೆಗೆದುಹಾಕಬೇಕಾದುದು ಯುಕ್ತವೆಂಬುದೇ ಮುಂತಾದ ವಿಚಾರಗಳನ್ನು ವೈಸ್ರಾಯಿಯವರ ಗಮನಕ್ಕೆತಂದು ಸಂಸ್ಥಾನಕ್ಕೆ ಪ್ರಯೋಜನಗಳನ್ನು ಪಡೆಯುವುದಕ್ಕಾಗಿ ಸಿಮ್ಲಾ ನಗರಕ್ಕೆ ಚಿತ್ತೈಸಿದ್ದರು. ೧೯೨೩ನೆಯ ಇಸವಿ ಡಿಸೆಂಬರು ತಿಂಗಳಿನಲ್ಲಿ ವೈಸ್ರಾಯಿಯವರಾದ ಲಾರ್ಡ್ ರೀಡಿಂಗ್‌ರವರು ಮೈಸೂರು ಸಂಸ್ಥಾನಕ್ಕೆ ದಯಮಾಡಿದ್ದರು.

೧೯೨೨ನೆಯ ಇಸವಿ ಆಗಸ್ಟ್ ತಿಂಗಳು ೨೮ನೆಯ ತಾರೀಖು (ದುಂದುಭಿನಾಮ ಸಂವತ್ಸರದ ಭಾದ್ರಪದ ಶುದ್ಧ ಷಷ್ಠೀ) ಸೋಮವಾರದ ದಿನ ಶ್ರೀಮದ್ಯುವರಾಜ ಶ್ರೀ ಕಂಠೀರವ ನರಸಿಂಹರಾಜ ಒಡೆಯರವರ

ಜ್ಯೇಷ್ಠ ಪುತ್ರಿಯವರಾದ ಶ್ರೀ ವಿಜಯಲಕ್ಷ್ಮಮ್ಮಣ್ಣಿಯವರು ಜನಿಸಿದರು. ದ್ವಿತೀಯ ಪುತ್ರಿಯವರಾದ ಶ್ರೀ ಸುಜಯಕಾಂತಮ್ಮಣ್ಣಿಯವರು ೧೯೨೪ನೆಯ ಇಸವಿ ಫೆಬ್ರವರಿ ೬ನೆಯ ತಾರೀಖು (ರುಧಿರೋದ್ಗಾರಿ ಸಂವತ್ಸರದ ಮಾಘ ಶುದ್ಧ ಬಿದಿಗೆ) ಬುಧವಾರದ ದಿನ ಜನಿಸಿದರು. ತೃತೀಯ ಪುತ್ರಿಯವರಾದ ಶ್ರೀ ಜಯಚಾಮುಂಡಮ್ಮಣ್ಣಿಯವರು ೧೯೨೭ನೆಯ ಇಸವಿ ಅಕ್ಟೋಬರು ತಿಂಗಳು ೩೦ನೆಯ ತಾರೀಖು (ಪ್ರಭವ ಸಂವತ್ಸರದ ಕಾರ್ತೀಕ ಶುದ್ಧ ಪಂಚಮಿ) ಭಾನುವಾರದ ದಿನ ಜನಿಸಿದರು.

**ಶ್ರೀಮದ್ಯುವರಾಜರಿಗೆ ಪುತ್ರಿಕೋತ್ಸವಗಳು**

ಆಳಿದ ಮಹಾಸ್ವಾಮಿಯವರ ಭಾವಂದಿರಾದ ಕರ್ನಲ್ ಜೆ. ದೇಶರಾಜ ಅರಸಿನವರು ೧೯೨೨ನೆಯ ಇಸವಿ ಅಕ್ಟೋಬರು ತಿಂಗಳು ೮ನೆಯ ತಾರೀಖಿನ ದಿನ ದಿವಂಗತರಾದರು. ಮಹಾಪ್ರಭುಗಳವರ ಮತ್ತೊಬ್ಬರು ಭಾವಂದಿರಾದ ರಾಜಸೇವಾಧುರೀಣ ಸರ್ ಎಂ. ಕಾಂತರಾಜ ಅರಸಿನವರು ೧೯೨೩ನೆಯ ಇಸವಿ ಅಕ್ಟೋಬರು ತಿಂಗಳು ೨ನೆಯ ತಾರೀಖಿನ ದಿನವೂ, ಅವರ ಧರ್ಮಪತ್ನಿಯವರೂ ಮಹಾಪ್ರಭುಗಳವರ ಜ್ಯೇಷ್ಠ ಸಹೋದರಿಯವರೂ ಆದ ಶ್ರೀ ಜಯಲಕ್ಷ್ಮಮ್ಮಣ್ಣಿಯವರು ೧೯೨೪ನೆಯ ಇಸವಿ ಡಿಸೆಂಬರು ತಿಂಗಳು ೮ನೆಯ ತಾರೀಖಿನ ದಿನವೂ ದಿವಂಗತರಾದರು. ಆ ಮೂವರ ವಿಯೋಗ ದುಃಖಗಳು ಮಹಾಪ್ರಭುಗಳವರಿಗೂ ರಾಜಕುಟುಂಬದವರಿಗೂ ದುಸ್ಸಹವಾದುವು.

**ವಿಯೋಗ ದುಃಖ**

ಪ್ರಜಾವರ್ಗದವರು ಸರ್ಕಾರಿ ಆಡಳಿತದಲ್ಲಿ ಹೆಚ್ಚು ಹೆಚ್ಚಾಗಿ ಭಾಗವಹಿಸುವ ಹಾಗೆ ಅವಕಾಶವನ್ನು ಕಲ್ಪಿಸಲು ಮಹಾಪ್ರಭುಗಳವರು ನ್ಯಾಯವಿಧಾಯಕ ಸಭೆಗೂ ಪ್ರಜಾಪ್ರತಿನಿಧಿ ಸಭೆಗೂ ಹೆಚ್ಚಿನ ಅಧಿಕಾರಗಳನ್ನು ಅನುಗ್ರಹಿಸಿದಂತೆಯೇ ಸ್ಥಳೀಯ ಪ್ರಜಾಧಿಕಾರದ ಏರ್ಪಾಡನ್ನೂ ಪರಿಷ್ಕರಿಸಿ ವ್ಯವಸ್ಥೆಗೊಳಿಸಿದರು. ೧೯೧೮ನೆಯ ಇಸವಿಯಲ್ಲಿ ಲೋಕಲ್ ಬೋರ್ಡುಗಳ ಮತ್ತು ಗ್ರಾಮ ಪಂಚಾಯಿತಿಗಳ ರೆಗ್ಯುಲೇಷನೂ ಮತ್ತು ತಿದ್ದುಪಡಿಯಾದ "ಮುನಿಸಿಪಲ್ ಆಕ್ಟೂ" ವಿಧಾಯಕವಾದುವು. ಅವುಗಳ ಮೇರೆಗೆ, ಮುನಿಸಿಪಾಲಿಟಿಗಳಿಗೆ ಮೊದಲಿದ್ದುದಕ್ಕಿಂತಲೂ ಹೆಚ್ಚಿನ ಅಧಿಕಾರಗಳನ್ನು ಕೊಟ್ಟು, "ಮುನಿಸಿಪಾಲಿಟಿ"ಗಳನ್ನು "ಮೈನರ್ ಮುನಿಸಿಪಾಲಿಟಿ"ಗಳು,

**ರಾಜಕೀಯ ಸುಧಾರಣೆಗಳು**

"ಟೌನ್ ಮುನಿಸಿಪಾಲಿಟಿ"ಗಳು, ಮತ್ತು "ಸಿಟಿ ಮುನಿಸಿಪಾಲಿಟಿ" ಗಳೆಂದು ಮೂರು ವಿಧಗಳಾಗಿ ವಿಂಗಡಿಸಿ, "ಸಿಟಿ ಮುನಿಸಿಪಾಲಿಟಿ"ಗಳಲ್ಲಿ (ಎಂದರೆ ನಗರಸಭೆಗಳಲ್ಲಿ) ಸರ್ಕಾರಿ ಉದ್ಯೋಗಸ್ಥರಲ್ಲದ ಸದಸ್ಯರೇ ಬಹು ಸಂಖ್ಯಾತರಾಗಿರುವಂತೆ ಏರ್ಪಾಡಾಯಿತು. ಇತರ "ಮುನಿಸಿಪಾಲಿಟಿ"ಗಳಲ್ಲಿಯೂ ಸರ್ಕಾರಿ ಉದ್ಯೋಗಸ್ಥರಲ್ಲದ ಸದಸ್ಯರ ಸಂಖ್ಯೆಯನ್ನು ಹೆಚ್ಚಿಸುವ ಏರ್ಪಾಡಾಯಿತು. ಡಿಸ್ಟ್ರಿಕ್ಟು ಬೋರ್ಡುಗಳ ಜೊತೆಗೆ ತಾಲ್ಲೂಕು ಬೋರ್ಡುಗಳೂ ಗ್ರಾಮಪಂಚಾಯಿತಿಗಳೂ ಏರ್ಪಟ್ಟು ಆ ಸಂಸ್ಥೆಗಳವರು ತಮ್ಮ ತಮ್ಮ ಆಯ ವ್ಯಯಗಳ ಆಡಳಿತವನ್ನು ತಾವೇ ನೆರವೇರಿಸುತ್ತ ಸ್ಥಳದ ಆಡಳಿತವನ್ನು ತಾವೇ ನಿರ್ವಹಿಸುವಂತೆಯೂ ಡಿಸ್ಟ್ರಿಕ್ಟು ಬೋರ್ಡುಗಳವರು ಒಟ್ಟು ಡಿಸ್ಟ್ರಿಕ್ಟಿಗೆ ಸಂಬಂಧಪಟ್ಟ ಸಂಚಾರ ಮಾರ್ಗಗಳ ಏರ್ಪಾಡು ಮುಂತಾದ ಭಾರಿ ಭಾರಿ ಕಾರ್ಯಕಲಾಪಗಳನ್ನು ನೋಡಿಕೊಳ್ಳುವಂತೆಯೂ ವ್ಯವಸ್ಥೆಯಾಯಿತು.

ಮೇಲೆ ಹೇಳಿದ ಸಂಸ್ಥೆಗಳಿಗೂ ಮತ್ತು ಸಂಪದಭಿವೃದ್ಧಿ ಸಮಾಜಕ್ಕೂ ("ಎಕನಾಮಿಕ್ ಕಾನ್ಫರೆನ್ಸ್") ಇನ್ನೂ ಅಧಿಕವಾಗಿ ಅಧಿಕಾರಗಳನ್ನು ಕೊಡಲು ಮಹಾಸ್ವಾಮಿಯವರು ಇಚ್ಛೈಸಿದರು. ಪ್ರಭುಗಳವರ ಆಜ್ಞೆ ಯಂತೆ ಆ ವಿಚಾರವನ್ನು ೧೯೨೨ನೆಯ ಇಸವಿಯ ಅಕ್ಟೋಬರು ತಿಂಗಳಿನಲ್ಲಿ ನಡೆದ ದಸರಾ ಅಧಿವೇಶನದಲ್ಲಿ ದಿವಾನ್‌ರವರು ಪ್ರಜಾಪ್ರತಿನಿಧಿ ಸಭೆಯ ಸದಸ್ಯರಿಗೆ ತಿಳಿಸಿದರು. ಮೈಸೂರು ವಿಶ್ವವಿದ್ಯಾನಿಲಯದ ವೈಸ್‌ಛಾನ್ಸೆಲರವ ರಾಗಿದ್ದ ಡಾಕ್ಟರ್ ಬ್ರಜೇಂದ್ರನಾಥ ಸೀಲರವರ ಅಧ್ಯಕ್ಷತೆಯಲ್ಲಿ ನೇಮಕ ವಾದ ಒಂದು ಸಮಿತಿಯವರು ಸಲಹೆಗಳನ್ನು ಕೊಟ್ಟಮೇಲೆ ೧೯೨೩ನೆಯ ಇಸವಿಯಲ್ಲಿ ಒಂದು ರಾಜಶಾಸನ ಪತ್ರಿಕೆಯು ಹೊರಟು, ನ್ಯಾಯ ವಿಧಾಯಕ ಸಭೆಯ ರೆಗ್ಯುಲೇಷನೂ ಪ್ರಜಾಪ್ರತಿನಿಧಿ ಸಭೆಯ ರೆಗ್ಯು ಲೇಷನೂ ವಿಧಾಯಕವಾದುವು.

ರಾಜಕೀಯ ಸುಧಾರಣೆಗಳ ಮೇರೆಗೆ ಪುನರ್ವ್ಯವಸ್ಥಿತವಾದ ನ್ಯಾಯ ವಿಧಾಯಕ ಸಭೆಯಲ್ಲಿ ಸದಸ್ಯರ ಸಂಖ್ಯೆಯು ೩೦ ರಿಂದ ೫೦ ಕ್ಕೆ ಏರಿತು. ಆ ಐವತ್ತು ಮಂದಿ ಸದಸ್ಯರಲ್ಲಿ ಸರ್ಕಾರಿ ಉದ್ಯೋಗಸ್ಥರು ಇಪ್ಪತ್ತು ಮಂದಿಗಳೂ ಸರ್ಕಾರಿ ಉದ್ಯೋಗಸ್ಥರಲ್ಲದವರು ಮೂವತ್ತು ಮಂದಿಗಳೂ ಆಗಿರಬೇಕೆಂದು ಗೊತ್ತಾಯಿತು. ಸರ್ಕಾರಿ ಉದ್ಯೋಗಸ್ಥರಲ್ಲದ ಮೂವತ್ತು ಮಂದಿಗಳಲ್ಲಿ ಇಪ್ಪತ್ತೆರಡು ಮಂದಿಗಳು ಚುನಾಯಿತರಾದ ಸದಸ್ಯರು. ಎಂಟು ಮಂದಿಗಳು ಸರ್ಕಾರದವರಿಂದ ನೇಮಕವಾದ ಸದಸ್ಯರು. ರಾಜ್ಯಾಡಳಿತ ಸಂಬಂಧವಾಗಿ ಪ್ರಶ್ನೆಗಳನ್ನು ಕೇಳುವ ಮತ್ತು ಪ್ರಜೆಗಳ

ಹಿತಸಾಧನೆಗೆ ಸಹಾಯಕವಾದ ವಿಚಾರಗಳಲ್ಲಿ ನಿರ್ಣಯಗಳನ್ನು ಮಾಡುವ ಅಧಿಕಾರಗಳು ಆ ಮೊದಲೇ ನ್ಯಾಯವಿಧಾಯಕ ಸಭೆಗಿದ್ದುವು. ರಾಜಕೀಯ ಸುಧಾರಣೆಗಳ ಮೇರೆಗೆ ಸಂಸ್ಥಾನದ ಆಯ ವ್ಯಯಗಳ ಪಟ್ಟಿಯನ್ನು ಕುರಿತು ಚರ್ಚಿಸಿ ಅದನ್ನು ಮಂಜೂರು ಮಾಡುವ ಅಧಿಕಾರವು ನ್ಯಾಯವಿಧಾಯಕ ಸಭೆಗೆ ಲಭಿಸಿತು ; ಆದರೆ, ಅರಮನೆಯ ವೆಚ್ಚ, ಸೈನ್ಯದ ವೆಚ್ಚ ಮುಂತಾದ ಕೆಲವನ್ನು ಚರ್ಚಿಸುವುದಕ್ಕೆ ಮಾತ್ರ ನ್ಯಾಯವಿಧಾಯಕ ಸಭೆಗೆ ಅಧಿಕಾರ ವಿರತಕ್ಕುದಲ್ಲವೆಂದು ವಿಧಾಯಕವಾಯಿತು.

ಪುನರ್ವ್ಯವಸ್ಥಿತವಾದ ಪ್ರಜಾಪ್ರತಿನಿಧಿ ಸಭೆಗೂ ಹೆಚ್ಚಿನ ಅಧಿಕಾರ ಗಳು ಲಭಿಸಿದುವು. ಅದರ ಸದಸ್ಯರ ಸಂಖ್ಯೆಯು ಸಾಮಾನ್ಯವಾಗಿ ಇನ್ನೂರೈವತ್ತಾಗಿರಬೇಕೆಂದು ಗೊತ್ತಾಯಿತು. ಆದರೆ, ಚುನಾವಣೆಗಳಲ್ಲಿ ನಾನಾ ಪಂಗಡಗಳವರೂ ಸರಿಯಾದ ಪ್ರಮಾಣಗಳಲ್ಲಿ ಜಯಶೀಲರಾಗಿ ಬಾರದೆ ಹೋಗುವುದೇ ಮುಂತಾದ ಸಂದರ್ಭಗಳಲ್ಲಿ ನ್ಯೂನತೆಗಳನ್ನು ಸರಿಪಡಿಸುವುದಕ್ಕಾಗಿ ಸದಸ್ಯರ ಸಂಖ್ಯೆಯನ್ನು ಪರಮಾವಧಿ ಇನ್ನೂರ ಎಪ್ಪತ್ತೈದರ ವರೆಗೂ ಹೆಚ್ಚಿಸಲು ಅವಕಾಶವಿರಬೇಕೆಂದೂ ಗೊತ್ತಾಯಿತು. ಸಂಸ್ಥಾನದ ಆಯ ವ್ಯಯಗಳ ಪಟ್ಟಿಯ ("ಬಡ್ಜೆಟ್") ವಿಚಾರವಾಗಿ ಚರ್ಚೆ ನಡೆಯಿಸಬಹುದಾಗಿದ್ದ ಅಧಿಕಾರದ ಜೊತೆಗೆ, ಅದರಮೇಲೂ ಮತ್ತು ರಾಜ್ಯಾಡಳಿತ ಸಂಬಂಧವಾಗಿಯೂ ನಿರ್ಣಯಗಳನ್ನು ಸೂಚಿಸುವ ಅಧಿಕಾರವೂ, ನ್ಯಾಯವಿಧಾಯಕಸಭೆಗೆ ಎಂಟು ಮಂದಿ ಸದಸ್ಯರನ್ನೂ ಮತ್ತು "ಸ್ಟ್ಯಾಂಡಿಂಗ್ ಕಮಿಟಿ"ಗಳೆಂಬ ಸಮಿತಿಗಳೇ ಮುಂತಾದುವು ಗಳ ಸದಸ್ಯರನ್ನೂ ಚುನಾಯಿಸುವ ಅಧಿಕಾರವೂ ಪ್ರಜಾಪ್ರತಿನಿಧಿ ಸಭೆಗೆ ದೊರೆತುವು. ನೂತನವಾಗಿ ರಚಿತವಾಗಬೇಕಾದ ಕಾನೂನುಗಳ ಮತ್ತು ನೂತನವಾಗಿ ವಿಧಾಯಕವಾಗಬೇಕಾಗಿದ್ದ ತೆರಿಗೆಗಳ ವಿಚಾರದಲ್ಲಿ ಪ್ರಜಾಪ್ರತಿನಿಧಿ ಸಭೆಯವರ ಅಭಿಪ್ರಾಯವನ್ನು ಕೇಳದೆ ಪ್ರವರ್ತಿಸಕೂಡ ದೆಂದು ವಿಧಾಯಕವಾಯಿತು.

ನ್ಯಾಯವಿಧಾಯಕ ಸಭೆಗೂ ಪ್ರಜಾಪ್ರತಿನಿಧಿ ಸಭೆಗೂ ಸದಸ್ಯರನ್ನು ಚುನಾಯಿಸಲು ಅಭಿಮತಗಳನ್ನು ಕೊಡತಕ್ಕವರಲ್ಲಿ ಎಷ್ಟು ಮಟ್ಟಿಗೆ ಭೂಸ್ಥಿತಿಯುಳ್ಳವರೂ ಸೇರಿರಬಹುದೆಂಬ ಕನಿಷ್ಠ ಪರಿಮಿತಿಯು ಮತ್ತಷ್ಟು ತಗ್ಗಿತು. ಸ್ತ್ರೀಯರು ಅಭಿಮತಗಳನ್ನು ("ವೋಟು"ಗಳನ್ನು) ಕೊಡ ಕೂಡದೆಂದಿದ್ದ ನಿರ್ಬಂಧವು ಪರಿಹಾರವಾಗಿ ಅವರೂ ಚುನಾವಣೆಗಳಲ್ಲಿ ಭಾಗವಹಿಸಲು ಅನುಕೂಲವಾಯಿತು. ಇವೆರಡು ಕಾರಣಗಳ ದೆಸೆಯಿಂದ, ಚುನಾವಣೆಗಳಲ್ಲಿ ಅಭಿಮತ ಕೊಡಬಹುದಾದವರ ಸಂಖ್ಯೆಯು

ಮೊದಲಿದ್ದುದರ ನಾಲ್ಕರಷ್ಟು ಅಧಿಕವಾಯಿತು. ಮುಸಲ್ಮಾನರು, ಕ್ರೈಸ್ತರು, ಮುಂತಾದ ನಾನಾ ಪಂಗಡಗಳವರು ಸಾಮಾನ್ಯ ಚುನಾವಣೆಗಳಲ್ಲಿ ಜಯಶೀಲರಾಗಿ ಬಾರದೆಹೋಗುವ ಸಂಭವವಿದ್ದ ಕಾರಣ, ನ್ಯಾಯವಿಧಾಯಕ ಸಭೆಯಲ್ಲಿಯೂ ಮತ್ತು ಪ್ರಜಾಪ್ರತಿನಿಧಿ ಸಭೆಯಲ್ಲಿಯೂ ಆ ಪಂಗಡಗಳವರು ವಿಧಾಯಕವಾದಷ್ಟು ಮಟ್ಟಿನ ಕನಿಷ್ಠ ಪರಿಮಿತಿಯಷ್ಟು ಮಂದಿಗಳಿದ್ದೇತೀರಬೇಕೆಂದು ಗೊತ್ತಾಯಿತು. ಅಲ್ಪಸಂಖ್ಯಾತ ಪಂಗಡಗಳ ಪ್ರತಿನಿಧಿಗಳೂ ಮತ್ತು ವಿಶ್ವವಿದ್ಯಾನಿಲಯ, ವಾಣಿಜ್ಯ, ಚಿನ್ನದ ಗಣಿಗಳ ಕೆಲಸ ಮುಂತಾದ ವಿಶೇಷೋದ್ದೇಶ ಪಂಗಡಗಳ ಪ್ರತಿನಿಧಿಗಳೂ ಆ ಆ ಪಂಗಡಗಳ ಸಂಘ ಮುಂತಾದುವುಗಳಿಂದ ಚುನಾವಣೆ ಹೊಂದಿ ಸದಸ್ಯರಾಗಿ ಬರುವುದಕ್ಕೂ ಅವಕಾಶವು ಕಲ್ಪಿತವಾಯಿತು. ಸಾಮಾನ್ಯವಾಗಿ, ಪ್ರಜಾಪ್ರತಿನಿಧಿ ಸಭೆಯಲ್ಲಿ ಕನ್ನಡ ಭಾಷೆಯಲ್ಲಿಯೂ, ನ್ಯಾಯವಿಧಾಯಕ ಸಭೆಯಲ್ಲಿ ಇಂಗ್ಲಿಷ್ ಭಾಷೆಯಲ್ಲಿಯೂ ವ್ಯವಹರಣೆಯು ನಡೆಯಬೇಕೆಂಬ ಹಿಂದಿನ ಕ್ರಮವೇ ಅಂಗೀಕೃತವಾಯಿತು.

**ಪುನರ್ವ್ಯವಸ್ಥಿತವಾದ ಸಭೆಗಳ ಸಮಾರಂಭಣ**

ರಾಜಕೀಯ ಸುಧಾರಣೆಗಳ ಮೇರೆಗೆ ಪುನರ್ವ್ಯವಸ್ಥಿತವಾಗಿದ್ದ ನ್ಯಾಯವಿಧಾಯಕ ಸಭೆಯನ್ನೂ ಪ್ರಜಾಪ್ರತಿನಿಧಿ ಸಭೆಯನ್ನೂ ಮಹಾಪ್ರಭುಗಳವರು ೧೯೪೨ನೆಯ ಇಸವಿ ಮಾರ್ಚಿ ತಿಂಗಳು ೧೭ನೆಯ ತಾರೀಖಿನ ದಿನ ಸಮಾರಂಭಣಗೊಳಿಸಿ ಅಮೋಘವಾದ ಭಾಷಣವನ್ನು ದಯಪಾಲಿಸಿದರು. ಮಹಾಸ್ವಾಮಿಯವರು ಎಷ್ಟು ಉದಾತ್ತವಾದ ಆಶಯಗಳಿಂದ ಕೂಡಿದ ಪ್ರಜಾವತ್ಸಲಶ್ರೇಷ್ಠರೆಂಬುದು ಆ ಭಾಷಣದ "....ನಮ್ಮ ರಾಜ್ಯದ ಪ್ರಜೆಗಳು ತಮ್ಮ ಸಮಸ್ತ ಆಡಳಿತಗಳನ್ನೂ ಆತ್ಮಾವಲಂಬನದಿಂದ ತಾವೇ ನೆರವೇರಿಸಿಕೊಳ್ಳತಕ್ಕ ಶಕ್ತಿ ಸಾಮರ್ಥ್ಯಗಳನ್ನೂ ಅಭಿವೃದ್ಧಿಪಡಿಸಿಕೊಂಡು, ಮಹತ್ಕಾರ್ಯಗಳನ್ನು ಧೈರ್ಯದಿಂದ ಪ್ರಾರಂಭಿಸತಕ್ಕವರೂ ಉತ್ಸಾಹಶಾಲಿಗಳೂ ಅಧ್ಯವಸಾಯ ಪಟುಗಳೂ ಆಗಿ, ದೇಶದಲ್ಲಿ ಸಮಸ್ತ ಪುರೋಭಿವೃದ್ಧಿ ಕಾರ್ಯಕಲಾಪಗಳಲ್ಲಿಯೂ ಮುಂದಾಳುಗಳಾಗಿ ನಿಂತು ಕೃತಕೃತ್ಯರಾಗುವುದನ್ನು ನೋಡಿ ಆನಂದಪಡಬೇಕೆಂಬುದೇ ಚಿರಾಭಿಲಷಿತವಾದ ನಮ್ಮ ಮನೋರಥವಾಗಿದೆ.....ರಾಜಕೀಯ ಸುಧಾರಣೆಗಳನ್ನು ಆಚರಣೆಗೆ ತಂದು ಅಭ್ಯುದಯಸಾಧನೆ ಮಾಡಬೇಕೆಂಬುದರ ಆಶಯವಾದರೂ ಏನು? ಪ್ರಜಾವರ್ಗದವರನ್ನು ಪ್ರಬುದ್ಧರನ್ನಾಗಿ ಮಾಡಿ ಅವರ

ಶಕ್ತಿಸಾಮರ್ಥ್ಯಗಳನ್ನು ವೃದ್ಧಿಗೊಳಿಸಿ ರಾಜ್ಯಾಡಳಿತದ ಸಂಬಂಧದಲ್ಲಿ ಅವುಗಳನ್ನು ಉಪಯೋಗಿಸಿಕೊಳ್ಳುವುದೇ ಅಲ್ಲವೆ? ಈ ವಿಧದ ಅಭ್ಯುದಯ ಸಾಧನೆಯೇ ಸಂತತವೂ ಮೈಸೂರು ಸರ್ಕಾರದವರ ಮುಖ್ಯ ಧ್ಯೇಯವಾಗಿರುತ್ತದೆ. . . . . ನಮ್ಮ ಸಂಸ್ಥಾನದ ಪುರೋಭಿವೃದ್ಧಿಯನ್ನು ಸಾಧಿಸಿ ಸತ್ಕೀರ್ತಿಯನ್ನಾರ್ಜಿಸುವ ವಿಚಾರದಲ್ಲಿ ನೀವೆಲ್ಲರೂ ಸಹಾಯಕರಾಗಬೇಕೆಂಬುದೇ ನಮ್ಮ ಕೋರಿಕೆ. ನಮ್ಮೊಡನೆ ನೀವೆಲ್ಲರೂ ಈ ಸಂಸ್ಥಾನದ ಶಾಶ್ವತವಾದ ಶ್ರೇಯೋಭಂಡಾರದ ರಕ್ಷಕರಾಗಿ ನಿಲ್ಲುವಂತಾಗುವುದೆಂಬುದೇ ನಮಗಿರುವ ನಂಬಿಕೆ'' ಎಂಬ ವಾಣಿಗಳಿಂದ ಬಹು ಚೆನ್ನಾಗಿ ವ್ಯಕ್ತವಾಗುವುದು. ಆಳಿದ ಮಹಾಸ್ವಾಮಿಯವರು ಅಪ್ಪಣೆ ಕೊಡಿಸಿದಂತೆ ಮೈಸೂರು ಸಂಸ್ಥಾನದ ಚರಿತ್ರೆಯಲ್ಲಿ ಆ ಸುದಿನವು ನೂತನ ಶಕೆಯೊಂದನ್ನು ಆರಂಭಗೊಳಿಸುವುದಾಯಿತು.

**ಎರಡು ವಿವಾಹ ಮಹೋತ್ಸವಗಳು**

ಮಹಾಪ್ರಭುಗಳವರು ತಮ್ಮ ಸೋದರಸೊಸೆಯರಿಬ್ಬರ ವಿವಾಹಗಳನ್ನೂ ಅತ್ಯಂತ ವೈಭವ ವಿಜೃಂಭಣೆಗಳಿಂದ ಅರಮನೆಯ ಕಲ್ಯಾಣ ಮಂಟಪದಲ್ಲಿ ನೆರವೇರಿಸಿದರು. ಅವುಗಳಲ್ಲೊಂದು, ಮಹಾಸ್ವಾಮಿಯವರ ತೃತೀಯ ಸಹೋದರಿಯವರಾದ ಶ್ರೀ ಚಲುವಾಜಮ್ಮಣ್ಣಿಯವರ ಪುತ್ರಿಯವರಾದ ಶ್ರೀ ಚೆನ್ನಾಜಮ್ಮಣ್ಣಿಯವರಿಗೂ ಮತ್ತು ಶ್ರೀಮಾನ್ ದಳವಾಯಿ ಮದನಗೋಪಾಲರಾಜ ಅರಸಿನವರಿಗೂ ೧೯೨೪ನೆಯ ಇಸವಿ ಜೂನ್ ೨೧ನೆಯ ತಾರೀಖಿನ ದಿನ ನಡೆಯಿತು. ಎರಡನೆಯದು, ಮಹಾಸ್ವಾಮಿಯವರ ಜ್ಯೇಷ್ಠ ಸಹೋದರಿಯವರಾದ ಶ್ರೀ ಜಯಲಕ್ಷ್ಮಮ್ಮಣ್ಣಿಯವರ ಪುತ್ರಿಯವರಾದ ಶ್ರೀ ಲೀಲಾವತಿ ಕುಮಾರಿಯವರಿಗೂ ಮತ್ತು ಶ್ರೀಮಾನ್ ಕೆ. ಬಸವರಾಜ ಅರಸಿನವರಿಗೂ ೧೯೨೬ನೆಯ ಇಸವಿ ಜೂನ್ ೧೩ನೆಯ ತಾರೀಖಿನ ದಿನ ನಡೆಯಿತು.

**ಅತಿವೃಷ್ಟಿಯ ಅನಾಹುತ**

೧೯೨೪ನೆಯ ಇಸವಿ ಜೂಲೈ ಆಗಸ್ಟು ತಿಂಗಳುಗಳಲ್ಲಿ ಅತಿವೃಷ್ಟಿಯ ದೆಸೆಯಿಂದ ಕಾವೇರಿ, ಕಪಿನಿ, ಹೇಮಾವತಿ ಮತ್ತು ತುಂಗಭದ್ರಾ ನದಿಗಳಲ್ಲಿ ಅಭೂತಪೂರ್ವವಾದ ಪ್ರವಾಹಗಳು ಬಂದು, ಅನೇಕ ಗ್ರಾಮಗಳೇ ಕೊಚ್ಚಿಹೋಗಿ, ಭೂಸ್ಥಿತಿಗಳಿಗೆ ಮರಳು ತುಂಬಿ, ಬಹಳ ನಷ್ಟವು ಸಂಭವಿಸಿ ಬಹು ಮಂದಿಗಳು ನಿರ್ಗತಿಕರಾದರು. ಅನೇಕ ಕೆರೆಗಳು ಒಡೆದು ಹೋದುವು. ಸಕಲೇಶಪುರದಲ್ಲಿ (ಎಂದರೆ, ಮಂಜರಾಬಾದಿನಲ್ಲಿ) ಒಂದು ಮನೆಯೂ ಬಿದ್ದುಹೋದ ಸಂದರ್ಭದಲ್ಲಿ

ಬಾಲಕನೊಬ್ಬನು ಮೃತಪಟ್ಟುದು ಹೊರತು, ಮತ್ತಾವ ಪ್ರಾಣ ಹಾನಿಯೂ ಆಗಲಿಲ್ಲ. ಅತಿವೃಷ್ಟಿಯು ದೆಸೆಯಿಂದ ನಷ್ಟಪಟ್ಟವರಿಗೆ ಮಹಾಪ್ರಭುಗಳವರೂ, ಅವರ ಸರ್ಕಾರದವರೂ ಮತ್ತು ಮಹಾಜನರಲ್ಲಿ ಧನಿಕರಾದವರೂ ಬಹಳವಾಗಿ ಸಹಾಯ ಮಾಡಿದರು.

**ಶ್ರೀಮಾನ್ ಲಾಲಾ ಲಜಪತ್ ರಾಯ್ ಅವರ ಶ್ಲಾಘನೆ**

ದಿವಂಗತರಾದ ಶ್ರೀಮಾನ್ ಲಾಲಾ ಲಜಪತ್‌ರಾಯ್ ಅವರು ಭರತಖಂಡದ ದೇಶಾಭಿಮಾನಿಗಳಲ್ಲಿ ಅಗ್ರಗಣ್ಯರಾದವರಲ್ಲೊಬ್ಬರೆನಿಸಿ ಪ್ರಖ್ಯಾತರಾಗಿದ್ದರು. ಎಂತಹ ಸಂದರ್ಭದಲ್ಲಾಗಲಿ ದಾಕ್ಷಿಣ್ಯಬದ್ಧರಾಗಿ ಆತ್ಮಸಾಕ್ಷಿಗೆ ವಿರುದ್ಧವಾದುದನ್ನು ನುಡಿಯದ ಅಥವಾ ಅತಿಶಯೋಕ್ತಿಯಲ್ಲಿ ಆದರ ತೋರದ ಆ ಉಜ್ಜ್ವಲ ದೇಶಾಭಿಮಾನಿಗಳು ೧೯೨೫ನೆಯ ಇಸವಿಯಲ್ಲಿ ಮದರಾಸಿನ "ಸ್ವರಾಜ್ಯ" ಪತ್ರಿಕೆಗೆ ಒಂದು ಲೇಖನವನ್ನು ಬರೆದು ಅದರಲ್ಲಿ, ಮಹಾಪ್ರಭುಗಳವರನ್ನು ಶ್ಲಾಘಿಸಿದ್ದರು. ಅವರು ಆ ಲೇಖನದಲ್ಲಿ ಬರೆದಿದ್ದ ನುಡಿಗಳಿವು: "ವಂಶಾನುಗತವಾಗಿ ಪ್ರಾಚೀನ ಕಾಲದಿಂದಲೂ ಅನುಸರಿಸಿ ಬಂದ ಆಭಿಜಾತ್ಯವೂ, ಮಹಾಪುರುಷ ಲಕ್ಷಣಗಳೂ, ಸತ್ಪುರುಷ ಲಕ್ಷಣಗಳೂ ಸಮ್ಮಿಳಿತವಾಗಿ ಸೇರಿರುವ ಪ್ರಭುಪುಂಗವರನ್ನು ಕಂಡಾಗ್ಗೆ ಸಂತೋಷವೂ ಹೆಮ್ಮೆಯೂ ಉಕ್ಕುತ್ತವೆ. ಮೈಸೂರು ಸಂಸ್ಥಾನದ ಶ್ರೀಮನ್ಮಹಾರಾಜರವರು ಅಂತಹ ಪ್ರಭುಶ್ರೇಷ್ಠರು. ಸ್ಫುರದ್ರೂಪಿಗಳೂ ಧಾರ್ಮಿಕ ಸ್ವಭಾವವುಳ್ಳವರೂ ನಡೆನುಡಿಗಳಲ್ಲಿ ಸರಳ ವರ್ತನೆಯುಳ್ಳವರೂ ಆಗಿರುವ ಅವರಲ್ಲಿ ಈಗಿನ ಸಂಸ್ಥಾನಾಧೀಶರುಗಳು ಕೆಲವರಲ್ಲಿ ಕಂಡುಬರುವ ಅಸಹ್ಯವಾದ ಕಳಂಕಗಳಾವುವೂ ಇಲ್ಲ. ಅವರ ಜೀವನದ ಪರಿಶುದ್ಧತೆ, ಅವರ ಸ್ವಧರ್ಮಶ್ರದ್ಧೆ ಮತ್ತು ಅನ್ಯಮತ ಸಹಿಷ್ಣುತಾ ಗೌರವಗಳು, ಅವರಲ್ಲಿ ವೈಯಕ್ತಿಕವಾಗಿ ನೆಲಸಿರುವ ಚಿತ್ತಾಕರ್ಷಕ ಸಾಮರ್ಥ್ಯ, ಅವರಿಗಿರುವ ವಿದ್ಯಾಭಿಮಾನ ಮತ್ತು ಉತ್ತಮ ಸರ್ಕಾರದ ಆಡಳಿತದ ವಿಧಾನಗಳನ್ನೆಲ್ಲ ತಮ್ಮ ಸಂಸ್ಥಾನದಲ್ಲಿ ನೆಲೆಗೊಳಿಸಬೇಕೆಂದು ಅವರಿಗಿರುವ ತೀವ್ರಾಭಿಲಾಷೆ— ಈ ಸದ್ಗುಣಗಳ ದೆಸೆಯಿಂದ ಮಹಾಸ್ವಾಮಿಯವರು ತಮ್ಮ ಪ್ರಜೆಗಳಿಗೆಲ್ಲ ಪ್ರಿಯರಾಗಿ ಭರತಖಂಡದ ಸಂಸ್ಥಾನಾಧೀಶರುಗಳ ಅಗ್ರಪಜ್ತ್ತಿಯಲ್ಲಿ ಶೋಭಿಸುವಂತಾಗಿದೆ. ಭರತಖಂಡದಲ್ಲಿ ಕೋಮುವಾರು ದ್ವೇಷವು ಉತ್ಕಟವಾಗಿರುವ ಈಗಿನ ದಿನಗಳಲ್ಲಿ ಮೈಸೂರು ಸಂಸ್ಥಾನಕ್ಕೆ ಹೋದವರಿಗೆ ಗಮನಾರ್ಹವಾಗಿ ತೋರುವುದೆಂದರೆ ಹಿಂದೂ ಪಂಗಡಕ್ಕೆ ಸೇರಿದ ಸಂಸ್ಥಾನಾಧೀಶರುಗಳಲ್ಲಿ ಅತ್ಯಧಿಕವಾಗಿ ಸ್ವಧರ್ಮನಿರತರಾಗಿರುವ

ಶ್ರೀಮನ್ಮಹಾರಾಜರವರಿಗೆ ಮುಸಲ್ಮಾನ ಪಂಗಡದವರು ಪ್ರೈವೇಟ್ ಸೆಕ್ರೆಟರಿಯವರಾಗಿ ಪ್ರಭುಗಳ ಪೂರ್ಣವಿಶ್ವಾಸಕ್ಕೆ ಪಾತ್ರರಾಗಿರುವ ಅಂಶ......ಮೈಸೂರು ಸಂಸ್ಥಾನದ ಆಡಳಿತ ನಿರ್ವಹಣಕ್ರಮದಲ್ಲಿ ನನಗೆ ಅತ್ಯಂತ ಹೆಮ್ಮೆಯನ್ನೂ ಸಂತೋಷವನ್ನೂ ಉಂಟುಮಾಡಿದುದು ಅದರ ವೈಶಿಷ್ಟ್ಯ. ಆ ವೈಶಿಷ್ಟ್ಯವು, ಇತರ ಸಂಸ್ಥಾನಗಳೆಲ್ಲಕ್ಕಿಂತಲೂ ಮತ್ತು ಬ್ರಿಟಿಷ್ ಇಂಡಿಯಾ ಪ್ರಾಂತಗಳಿಗಿಂತಲೂ ಅದನ್ನು ಪ್ರತ್ಯೇಕಗೊಳಿಸಿ ಶ್ರೇಷ್ಠವೆಂದು ತೋರ್ಪಡಿಸುವುದಕ್ಕೆ ಸಾಧಕವಾಗಿದೆ.....''*

ಮೈಸೂರು ಸಂಸ್ಥಾನದ ಗ್ರಾಮ ಪಂಚಾಯಿತಿಗಳ ರೆಗ್ಯುಲೇಷನೂ ಡಿಸ್ಟ್ರಿಕ್ಟ್ ಬೋರ್ಡುಗಳ ರೆಗ್ಯುಲೇಷನೂ ೧೯೨೬ನೆಯ ಇಸವಿಯಲ್ಲಿ ಆಚರಣೆಗೆ ಬಂದುವು. ಅದರ ಪರಿಣಾಮವಾಗಿ ಗ್ರಾಮ ಪಂಚಾಯಿತಿಗಳು ಡಿಸ್ಟ್ರಿಕ್ಟ್ ಬೋರ್ಡುಗಳ ಹತೋಟಿಯಲ್ಲಿದ್ದುದು ತಪ್ಪಿ ತಾಲ್ಲೂಕುಗಳ ರೆವೆನ್ಯೂ ಅಧಿಕಾರಿಗಳ ಹತೋಟಿಗೊಳಪಟ್ಟುದು, ತಾಲ್ಲೂಕು ಬೋರ್ಡುಗಳನ್ನು ತೆಗೆದುಹಾಕಿದುದು, ಮುಂತಾದ ಮಾರ್ಪಾಡುಗಳು ನಡೆದುವು.

**ಆಡಳಿತದಲ್ಲಿ ಮಾರ್ಪಾಡುಗಳು**

ರಾಜಮಂತ್ರಧುರೀಣ ಸರ್ ಎ. ಆರ್. ಬ್ಯಾನರ್ಜಿ, ಎಂ.ಎ., ಸಿ.ಎಸ್.ಐ., ಸಿ.ಐ.ಇ., ಐ.ಸಿ.ಎಸ್. ಅವರು ಆ ಮೊದಲೇ ೧೯೨೬ನೆಯ ಇಸವಿ ಮೇ ತಿಂಗಳು ೧ನೆಯ ತಾರೀಖಿನ ದಿನ ದಿವಾನ್ ಹುದ್ದೆಯಿಂದ ವಿಶ್ರಾಂತರಾಗಿದ್ದರು. ಮಹಾಪ್ರಭುಗಳವರು ಅಮೀನ್-ಉಲ್-ಮುಲ್ಕ್ ಮಿರ್ಜಾ ಎಂ. ಇಸ್ಮಾಯಿಲ್, ಸಿ.ಐ.ಇ., ಓ.ಬಿ.ಇ. ಅವರನ್ನು ಅಂದಿನಿಂದ ದಿವಾನ್ ಹುದ್ದೆಗೆ ನೇಮಕ ಮಾಡಿದ್ದರು.

* "It adds considerably to one's feeling of pleasure and pride when one comes across a prince who combines in his person the ancient nobility of his family with the characteristics of a great and good personality. Such is the present Maharaja of Mysore. Handsome in appearance, highly religious in character and simple in habits he has none of the vices which disgfiure some of the Royal houses to-day. His purity of life, his devotion to his own faith accompanied by his high regard and tolerance for other faiths, his great personal charm, his regard for learning and his desire to introduce all the methods of good government in his State endear him to his people and place him high among the present ruling princes of India. In these days of bitter communalism in India the first thing that attracts the notice of a visitor is the fact that the most religious of Hindu Princes has a Mahomedan as his Private Secretary who enjoys the implicit confidence of his master.. ....what however pleased me most and made me proud of the administration of Mysore is its individuality It distinguishes Mysore from all other Indian States and even from British India...."

—Late Mr. Lala Lajpath Rai,

ಆಳಿದ ಮಹಾಸ್ವಾಮಿಯವರು ಅನನ್ಯ ಸಾಧಾರಣವಾದ ಪ್ರಜಾ ವಾತ್ಸಲ್ಯದಿಂದ ಕೂಡಿ ೧೯೨೬ನೆಯ ಇಸವಿ ನವೆಂಬರು ತಿಂಗಳಿನಲ್ಲಿ ಲಲಿತಾದ್ರಿಪುರವೆಂಬ ಮಾದರಿ ಗ್ರಾಮವನ್ನು ಕಟ್ಟಿಸಿಕೊಟ್ಟ ಮಹತ್ತರ ಕಾರ್ಯವನ್ನು ಶ್ಲಾಘಿಸದವರೇ ಇಲ್ಲ. ಮದರಾಸಿನ "ಹಿಂದು" ಪತ್ರಿಕೆಯಲ್ಲಿ, "ಮೈಸೂರು ಸಂಸ್ಥಾನದಲ್ಲಿಯೂ, ಭರತ ಖಂಡದ ಇತರ ಭಾಗಗಳಲ್ಲಿಯೂ ಗ್ರಾಮ ಪುನರುಜ್ಜೀವನವಾಗಬೇಕೆಂಬುದೇ ಇಂದು ಎಲ್ಲೆಲ್ಲಿಯೂ ತೀವ್ರಾಭಿಲಾಷೆ. ಮಾದರಿ ಗ್ರಾಮವಾದ ಲಲಿತಾದ್ರಿಪುರವನ್ನು ಕಟ್ಟಿಸಿ ಗ್ರಾಮಾಭಿವೃದ್ಧಿ ವ್ಯವಸ್ಥೆ ಮಾಡಿರುವ ವಿಧಾನಗಳಿಂದ ಸಮಸ್ತ ಪ್ರಾಂತಗಳೂ ಪ್ರಯೋಜನ ಪಡೆಯಬಹುದಾಗಿದೆ......ಈ ಮಹತ್ತರ ಕಾರ್ಯವು ಇತಿಹಾಸ ಪ್ರಸಿದ್ಧವಾಗಿ ಶೋಭಿಸುವುದಾಗಿದೆ. ಏಕೆಂದರೆ, ಸರಿಯಾದ ರೀತಿಯಲ್ಲಿ ಗ್ರಾಮಾಭಿವೃದ್ಧಿ ಪ್ರಯತ್ನ ಮಾಡಿದರೆ ಎಷ್ಟು ಪ್ರಯೋಜನಕರವಾದ ಕಾರ್ಯ ಸಿದ್ಧಿಯನ್ನು ಕಾಣಬಹುದಾಗಿದೆಯೆಂಬುದಕ್ಕೆ ಇದೊಂದು ದೊಡ್ಡ ನಿದರ್ಶನ" ಎಂದು ತಾತ್ಪರ್ಯವಾಗುವ ಶ್ಲಾಘನೆಯ ವಾಕ್ಯಗಳು ಪ್ರಕಟವಾದುವು.

**ಸಮಸ್ತ ಪ್ರಾಂತಗಳಿಗೂ ಆದರ್ಶಪ್ರಾಯವಾದ ಮಹತ್ತರವಾದ ಕಾರ್ಯ**

ಆಳಿದ ಮಹಾಸ್ವಾಮಿಯವರು ಒಂದು ಮಾದರಿ ಗ್ರಾಮವನ್ನು ಏರ್ಪಾಡು ಮಾಡಬೇಕೆಂದು ಯೋಚಿಸಿ, ಮೈಸೂರು ನಗರದಲ್ಲಿ ಅಡ್ವೋಕೇಟರಾಗಿದ್ದ ಶ್ರೀಮಾನ್ ಎಚ್. ನರಸಿಂಗರಾಯರನ್ನೂ ಮತ್ತು ರಾಜಸೇನಾತಿಲಕ ಶ್ರೀಮಾನ್ ಮೇಜರ್ ಗೋಪಾಲರಾಯರನ್ನೂ ಆ ಕೆಲಸವನ್ನು ನಿರ್ವಹಿಸುವುದಕ್ಕಾಗಿ ನೇಮಿಸಿದರು. ಲಲಿತಾದ್ರಿಗೆ ಸಮೀಪದಲ್ಲಿದ್ದ ಸಕ್ಕಹಳ್ಳಿ ಗ್ರಾಮವನ್ನು ಲಲಿತಾದ್ರಿಪುರವೆಂಬ ಹೆಸರಿನಿಂದ ಮತ್ತಷ್ಟು ಆರೋಗ್ಯಕರವಾದ ಬೇರೆ ಸ್ಥಳದಲ್ಲಿ ಕಟ್ಟಿಸುವುದಕ್ಕಾಗಿ ಮಹಾಪ್ರಭುಗಳವರು ಅರಮನೆಗೆ ಸೇರಿದ ಇಪ್ಪತ್ತು ಎಕರೆಗಳ ವಿಸ್ತೀರ್ಣದ ಉತ್ತಮವಾದ ಕಾವಲುಭೂಮಿಯನ್ನು ಉಚಿತವಾಗಿ ದಯಪಾಲಿಸಿದರು. ಅದರ ಜೊತೆಗೆ ಸೇರಿಸಿಕೊಂಡ ರೈತರ ಭೂಮಿಗಳಿಗೆ ಪ್ರತಿಯಾಗಿ ಫಲವತ್ತಾದ ಅರಮನೆಯ ಭೂಮಿಗಳನ್ನು ಅವರಿಗೆ ಕೊಡಿಸಿದರು. ಉತ್ತಮ ವಿಧದ ಮಾದರಿ ಮನೆಗಳನ್ನು ಕಟ್ಟಿಕೊಳ್ಳುವುದಕ್ಕಾಗಿ ನಿವೇಶನಗಳನ್ನು ಉಚಿತವಾಗಿ ಕೊಟ್ಟು, ಕೇವಲ ನೆಪಮಾತ್ರದ ಬಡ್ಡಿಯ ಮೇಲೆ ರೈತರಿಗೆ ಸಾಲಗಳನ್ನು ಕೊಡಲು ಮಹಾಸ್ವಾಮಿಯವರು ಖಾಸಾ

ಭಂಡಾರದಿಂದ ಅರವತ್ತು ಸಾವಿರ ರೂಪಾಯಿಗಳಿಗಿಂತಲೂ ಅಧಿಕವಾದ ಮೊತ್ತವನ್ನು ದಯಪಾಲಿಸಿದುದಲ್ಲದೆ, ಸಾಲಗಳನ್ನು ತೀರಿಸುವುದಕ್ಕಾಗಿ ರೈತರು ಹಿಂದಕ್ಕೆ ಸಲ್ಲಿಸಿದ ಮೊತ್ತಗಳು ಆ ಮಾದರಿ ಗ್ರಾಮದ ಮೇಲ್ಪಾಟು ಗಳಿಗಾಗಿ ವಿನಿಯೋಗವಾಗಬೇಕೇ ಹೊರತು, ಅರಮನೆಗೆ ಹಿಂದಕ್ಕೆ ಸಂದಾಯವಾಗಬೇಕಾದುದಿಲ್ಲವೆಂದು ಆಜ್ಞಾಪಿಸಿದರು. ಗ್ರಾಮಸ್ಥರು ಸಾಲಗಳನ್ನು ತೀರಿಸಲು ಹದಿನೈದು ವರ್ಷಗಳ ದೀರ್ಘಾವಧಿಯನ್ನು ಗೊತ್ತುಮಾಡಿದುದಲ್ಲದೆ, ಮನೆಗಳನ್ನು ಕಟ್ಟಿಸಲು ಅವಶ್ಯವಾದ ಚೌಬೀನೆ ಮುಂತಾದ ಸಾಮಗ್ರಿಗಳನ್ನು ಉಚಿತವಾಗಿ ಸರ್ಕಾರದ ಕಾಡುಗಳಿಂದ ರೈತರು ಸಾಗಿಸಿಕೊಳ್ಳಬಹುದೆಂದೂ ಗೊತ್ತಾಯಿತು. ಸರ್ಕಾರದವರು ಮೂರು ಸಾವಿರ ರೂಪಾಯಿಗಳನ್ನು ವೆಚ್ಚಮಾಡಿ ಕೆರೆಯನ್ನು ಜೀರ್ಣೋದ್ಧಾರ ಮಾಡಿಸಿಕೊಟ್ಟರು. ಗ್ರಾಮಸ್ಥರ ಮಕ್ಕಳ ವಿದ್ಯಾ ಭ್ಯಾಸಕ್ಕಾಗಿ ಮಹಾಸ್ವಾಮಿಯವರು ಪಾಠಶಾಲೆಯನ್ನು ಕಟ್ಟಿಸಿಕೊಟ್ಟರು. ಬಾಲಕ ಬಾಲಕಿಯರ ನಡೆ ನುಡಿಗಳನ್ನು ತಿದ್ದಿ, ವಿದ್ಯೆಯನ್ನು ಕಲಿಸಿ, ವ್ಯವ ಸಾಯದಲ್ಲಿಯೂ ಚರಕದಲ್ಲಿ ನೂಲುವುದರಲ್ಲಿಯೂ ಶಿಕ್ಷಣ ಕೊಡುವಂತೆ ಆಜ್ಞಾಪಿಸಿದರು. ವಿದ್ಯಾರ್ಥಿಗಳ ಕೈಯಿಂದ ಶಾಸ್ತ್ರೀಯವಾಗಿ ವ್ಯವಸಾಯ ಮಾಡಿಸಿ ಶಿಕ್ಷಣ ಕೊಡಬೇಕೆಂದು ವಿಧಾಯಕವಾಯಿತು. ಪಾಠಶಾಲೆಯಲ್ಲಿ ಬಾಲಕ ಬಾಲಕಿಯರಿಗೆ ಧರ್ಮಬೋಧೆಯು ನಡೆಯಬೇಕೆಂದು ಗೊತ್ತಾಯಿತು. ಮಹಾಸ್ವಾಮಿಯವರು ಭಜನೆ ಮನೆಯನ್ನೂ ಪರಸ್ಪರ ಸಹಾಯ ಸಂಘದ ಕಟ್ಟಡವನ್ನೂ ಮತ್ತು ಗ್ರಾಮ ಪಂಚಾಯಿತಿಯ ಚಾವಡಿಯ ಕಟ್ಟಡವನ್ನೂ ಕಟ್ಟಿಸಿಕೊಟ್ಟರು. ಬಾಲಕ ಬಾಲಕಿಯರು ಮೊದಲಾಗಿ ದೊಡ್ಡವರವರೆಗೂ ಗ್ರಾಮಸ್ಥರು ಸಮಸ್ತರೂ ಪರಸ್ಪರ ಸಹಾಯ ಸಂಘದ ಸದಸ್ಯರಾಗಬೇಕೆಂದೂ, ಗ್ರಾಮಸ್ಥರು ಸಣ್ಣಪುಟ್ಟ ವಿವಾದಗಳಿಗೆಲ್ಲ ನ್ಯಾಯಸ್ಥಾನದ ಬಾಗಿಲಿಗೆ ಹೋಗಿ ಹಣವನ್ನು ಪೋಲು ಮಾಡಿಕೊಳ್ಳದೆ ಗ್ರಾಮ ಪಂಚಾಯಿತಿಯವರಿಂದಲೇ ಅವುಗಳನ್ನು ವ್ಯವಸ್ಥೆ ಪಡಿಸಿಕೊಳ್ಳಬೇಕೆಂದೂ ಅಪ್ಪಣೆಯಾಯಿತು.

ಗ್ರಾಮವು ಬಾಹ್ಯ ಸೌಂದರ್ಯ ವಿಚಾರದಲ್ಲಿ ಮಾತ್ರವೇ ಅಲ್ಲದೆ, ಗ್ರಾಮಸ್ಥರ ಸಭ್ಯವರ್ತನೆಯ ಪರಿಶುದ್ಧ ಜೀವನದ ಆಂತರಿಕ ಸೌಂದರ್ಯ ವಿಚಾರದಲ್ಲಿ ಸಹ ಮಾದರಿ ಗ್ರಾಮವಾಗಿರಬೇಕೆಂಬ ಘನತರವಾದ ಆದರ್ಶ ದಿಂದ ಕೂಡಿ ಮಹಾಸ್ವಾಮಿಯವರು ಲಲಿತಾದ್ರಿಪುರವನ್ನು ನಿರ್ಮಿಸಿ ಕೊಟ್ಟುದನ್ನು ಕಂಡು ಒಟ್ಟು ಭರತಖಂಡವೇ ಹರ್ಷಿಸಿತೆನ್ನಬಹುದು. ಅನೇಕ ಪತ್ರಿಕೆಗಳು ಅದನ್ನು ಶ್ಲಾಘಿಸಿ, ಅಖಿಲ ಭರತಖಂಡಕ್ಕೇ

ಆದರ್ಶಪ್ರಾಯವೆಂದು ಕೊಂಡಾಡಿದುವು. ಮಹಾಪ್ರಭುಗಳವರು ಮುಕ್ತ ಹಸ್ತದಿಂದ ಧನವ್ಯಯ ಮಾಡಿದುದಲ್ಲದೆ, ಲಲಿತಾದ್ರಿಪುರದಲ್ಲಿ ನಿರ್ಮಿತವಾದ ಗೃಹಗಳನ್ನೆಲ್ಲ ಪರಿಶೀಲಿಸಿ ಅಲ್ಲಿ ನಡೆದ ಸಮಸ್ತ ಏರ್ಪಾಡುಗಳನ್ನೂ ಪರಾಂಬರಿಸಿ ಕೃಪೆಮಾಡಿದರು. ಗ್ರಾಮದ ನಾಮಧೇಯವನ್ನು ಕೆತ್ತಿದ್ದ ಶಿಲಾಪಟ್ಟಿಕೆಯ ಅನಾವರಣ ಮಹೋತ್ಸವವನ್ನು ಮಹಾಸ್ವಾಮಿಯವರೇ ನೆರವೇರಿಸಿ ಕೃಪೆಮಾಡಿದರು. ಗ್ರಾಮಸ್ಥರೆಲ್ಲರೂ ತಮ್ಮ ಮಾದರಿ ಗ್ರಾಮಕ್ಕೆ ನೀರಿನ ಕೊಳಾಯಿಗಳೂ ವಿದ್ಯುಚ್ಛಕ್ತಿಯ ದೀಪಗಳೂ ಆವಶ್ಯಕವೆಂದು ಅಂದು ಅರಿಕೆ ಮಾಡಿ ಪ್ರಾರ್ಥಿಸಲು, ಮಹಾಸ್ವಾಮಿಯವರು ಅವುಗಳನ್ನೂ ಸಹ ಖಾಸಾ ಭಂಡಾರದ ವೆಚ್ಚದಿಂದ ಕರುಣಿಸಿದರು.

**ಚಾಮುಂಡೀ ಬೆಟ್ಟಕ್ಕೆ ಜಲವಸತಿ ಸೌಕರ್ಯ**

ಮಹಾಸ್ವಾಮಿಯವರ ಕುಲದೇವತೆಯಾದ ಶ್ರೀ ಚಾಮುಂಡೇಶ್ವರೀ ದೇವಿಯವರ ದೇವಸ್ಥಾನವಿರುವ ಚಾಮುಂಡೀ ಬೆಟ್ಟದಮೇಲೆ ದೇವೀಕೊಳದ ನೀರನ್ನು ಬಿಟ್ಟರೆ ಬೇರೆ ಜಲವಸತಿಯಿಲ್ಲದಿದ್ದುದನ್ನೂ, ಕೆಲವುವೇಳೆ ದೇವೀಕೊಳದ ನೀರು ಅಶುದ್ಧವಾಗಿ ಮಾರಿಕಾ ವ್ಯಾಧಿಯು ಕೂಡ ಸಂಭವಿಸಲು ಕಾರಣವಾಗುತ್ತಿದ್ದುದನ್ನೂ, ಜಾತ್ರೆಯ ಕಾಲಗಳಲ್ಲಿ ಭಕ್ತಾದಿಗಳಿಗೆ ನೀರಿಗೆ ಕಷ್ಟವಾಗುತ್ತಿದ್ದುದನ್ನೂ ಮಹಾಸ್ವಾಮಿಯವರು ಗ್ರಹಿಸಿದರು; ಬಹಳ ಧನವ್ಯಯದಿಂದ ಯಂತ್ರಸಾಧನಗಳನ್ನೊದಗಿಸಿ ೧೯೨೭ನೆಯ ಇಸವಿ ಜುಲೈ ತಿಂಗಳಿನಿಂದ ಬೆಟ್ಟದ ಮೇಲಕ್ಕೆ ನೀರನ್ನೆತ್ತಿಸಿ ಜಲವಸತಿಯನ್ನು ಕಲ್ಪಿಸುವ ವ್ಯವಸ್ಥೆಮಾಡಿಸಿ, ಬೆಟ್ಟದಮೇಲೆ ವಾಸಮಾಡುವ ಜನರೆಲ್ಲರಿಗೂ ಮಹತ್ತರವಾದ ಉಪಕಾರಮಾಡಿದರು.

# ಒಂಬತ್ತನೆಯ ಅಧ್ಯಾಯ

## ರಜತೋತ್ಸವದಿಂದೀಚಿನ ರಾಜ್ಯಭಾರ

**ಸಮಾನೋ ಮನ್ತ್ರಸ್ಸಮಿತಿಸ್ಸಮಾನೀ**
**ಸಮಾನಂ ಮನಸ್ಸಹ ಚಿತ್ತಮೇಷಾಮ್ ।**
**ಸಮಾನಂ ಮನ್ತ್ರಮಭಿಮನ್ತ್ರಯೇ ವಃ**
**ಸಮಾನೇನ ವೋ ಹವಿಷಾ ಜುಹೋಮಿ ॥**
**ಸಮಾನೀ ವ ಆಕೂತಿಃ ಸಮಾನಾ ಹೃದಯಾನಿ ವಃ ।**
**ಸಮಾನಮಸ್ತು ವೋ ಮನೋ ಯಥಾ ವಸ್ಸುಸಹಾಸತಿ ॥**

ಆಳಿದ ಮಹಾಸ್ವಾಮಿಯವರ ರಾಜ್ಯಭಾರವು ಪ್ರಾರಂಭವಾದ ಬಳಿಕ ಇಪ್ಪತ್ತೈದು ವರ್ಷಗಳು ಪೂರೈಸಿದ ಸಂತೋಷಕ್ಕಾಗಿ ೧೯೨೭ನೆಯ ಇಸವಿ ಆಗಸ್ಟು ತಿಂಗಳು ೮ನೆಯ ತಾರೀಖಿನ ದಿನ ರಜತ ಮಹೋತ್ಸವವು ("ಸಿಲ್ವರ್ ಜ್ಯೂಬಿಲಿ") ನಡೆಯಬೇಕೆಂದು ಗೊತ್ತಾಯಿತು. ಅದಕ್ಕೆ ಪೂರ್ವಭಾವಿಯಾಗಿ, ವೈಸ್ರಾಯಿಯವರಾಗಿದ್ದ ಲಾರ್ಡ್ ಅರ್ವಿನ್‌ರವರು ತಮ್ಮ ಸಹಧರ್ಮಿಣಿಯವರಿಂದೊಡಗೂಡಿ ಮೈಸೂರು ಸಂಸ್ಥಾನಕ್ಕೆ ದಯಮಾಡಿಸಿ ೧೯೨೭ನೆಯ ಇಸವಿ ಜೂಲೈ ತಿಂಗಳು ೨೫ನೆಯ ತಾರೀಖಿನಿಂದ ಒಂದು ವಾರ, ಆಳಿದ ಮಹಾಸ್ವಾಮಿಯವರ ಅತಿಥಿಗಳಾಗಿದ್ದರು. ಮೈಸೂರು ಸಂಸ್ಥಾನದಿಂದ ಪ್ರತಿವರ್ಷವೂ ಸಲ್ಲಬೇಕಾಗಿದ್ದ ೩೫ ಲಕ್ಷ ರೂಪಾಯಿಗಳ ಪೊಗದಿಯಲ್ಲಿ ೧೯೨೮ನೆಯ ಇಸವಿಯಿಂದ ಹತ್ತೂವರೆ ಲಕ್ಷ ರೂಪಾಯಿಗಳನ್ನು ಕಡಮೆಮಾಡಿದ್ದ ಶುಭವಾರ್ತೆಯನ್ನು ವೈಸ್ರಾಯಿಯವರು ತಮಗಾಗಿ, ಮಹಾಪ್ರಭುಗಳವರು ಏರ್ಪಡಿಸಿದ್ದ ಔತಣಕಾಲದಲ್ಲಿ ಶ್ರುತಪಡಿಸಿದರು; "ಉತ್ತಮ ವಿಧದ ರಾಜ್ಯಭಾರವೆಂದು ಪ್ರಖ್ಯಾತವಾಗಿದ್ದ ಮೈಸೂರು ಸಂಸ್ಥಾನದ ರಾಜ್ಯಭಾರದಲ್ಲಿ ಶ್ರೀಮನ್ಮಹಾರಾಜರವರು ಹಿಂದಿನಿಂದಲೂ ನಡೆದುಬಂದಿದ್ದ ಸತ್ಸಂಪ್ರದಾಯಗಳನ್ನೆಲ್ಲ ಸುರಕ್ಷಿತವಾಗಿ ಕಾಪಾಡಿ ದೇಶೋನ್ನತಿ ಸಾಧನೆ ಮಾಡಿದ್ದುದರ ಗೌರವಾರ್ಥವಾಗಿ" ಆ ರೀತಿ ಶಾಶ್ವತವಾಗಿ ಪೊಗದಿಯನ್ನು ಕಡಮೆಮಾಡಲಾಯಿತೆಂದೂ ಅವರು ತಿಳಿಸಿದರು. ಅಷ್ಟೇ ಅಲ್ಲ. ವೈಸ್ರಾಯಿಯವರಾದ ಲಾರ್ಡ್ ಅರ್ವಿನ್‌ರವರು, "ಅತ್ಯಂತ ಸಮೀಚೀನವಾದ ಮಾರ್ಗಗಳಲ್ಲಿ ರಾಜ್ಯಾಡಳಿತವನ್ನು ನಿರ್ವಹಿಸಿ ಅಭ್ಯುದಯಸಾಧನೆ

**ರಜತೋತ್ಸವಕ್ಕೆ ಹಿಂದಿನ ಶುಭವಾರ್ತೆ**

ಮಾಡುತ್ತ, ಆ ಮಾರ್ಗಗಳನ್ನು ಮತ್ತೆ ಮತ್ತೆ ಪರಿಷ್ಕರಿಸಿ ಉತ್ತಮ ಗೊಳಿಸುತ್ತಿರುವುದನ್ನು ಅನೇಕ ವರ್ಷಗಳಿಂದ ನಾವುಗಳು ಪರಿಶೀಲಿಸಿ ಮೆಚ್ಚಿಕೊಂಡಿದ್ದೇವೆ. ಬ್ರಿಟಿಷ್ ಸರ್ಕಾರದವರಿಗೆ ಸಹಾಯವು ಅತ್ಯವಶ್ಯ ವಾಗಿ ಬೇಕಾದಾಗ ಶ್ರೀಮನ್ಮಹಾರಾಜರವರು ಘನವಾದ ರೀತಿಯಲ್ಲಿ ವಿಪುಲ ಸಹಾಯ ಮಾಡಿರುವುದನ್ನೂ ನಾವುಗಳು ಮರೆತಿಲ್ಲ. ದೊಡ್ಡ ಸಂಸ್ಥಾನದ ಸರ್ಕಾರವು ಯಾವ ರೀತಿ ನಡೆಯಬೇಕೆಂಬ ವಿಷಯದಲ್ಲಿ ಮಾದರಿಯ ಮೇಲ್ಪಂಕ್ತಿಯನ್ನು ಕಲ್ಪಿಸಿಕೊಡುವುದಕ್ಕಾಗಿ ಶ್ರೀಮನ್ಮಹಾ ರಾಜರವರು ಎಷ್ಟುಮಟ್ಟಿನ ಕೆಲಸವನ್ನು ಸ್ವತಃ ನೆರವೇರಿಸಿದ್ದಾರೆಂಬು ದನ್ನೂ ನಾವುಗಳು ಗಮನಿಸದೆಹೋಗಿಲ್ಲ'' ಎಂದು ಮುಕ್ತಕಂಠದಿಂದ ಶ್ಲಾಘಿಸಿದರು. ಪೊಗದಿಯ ಭಾರವು ಕಡಮೆಯಾದುದಕ್ಕಾಗಿಯೂ ಮಹಾಸ್ವಾಮಿಯವರಿಗೆ ಆ ಬಗೆಯ ಶ್ಲಾಘನೆಯು ಲಭಿಸಿದುದಕ್ಕಾಗಿಯೂ ಮೈಸೂರು ಸಂಸ್ಥಾನದ ಪ್ರಜೆಗಳೆಲ್ಲರೂ ಸಂತೋಷಪಟ್ಟರು.

**ರಜತ ಮಹೋತ್ಸವ**

೧೯೨೭ನೆಯ ಇಸವಿ ಆಗಸ್ಟು ತಿಂಗಳು ೮ನೆಯ ತಾರೀಖಿನ ದಿನ ಮೈಸೂರು ಬೆಂಗಳೂರು ನಗರಗಳಿಂದ ಹಿಡಿದು ಸಣ್ಣ ಪುಟ್ಟ ಗ್ರಾಮ ಗಳವರೆಗೆ ಸಮಗ್ರ ಸಂಸ್ಥಾನದಲ್ಲಿ ರಜತ ಮಹೋತ್ಸವವು ನಡೆಯಿತು. ಆಳಿದ ಮಹಾ ಸ್ವಾಮಿಯವರಾದ ಶ್ರೀಮನ್ಮಹಾರಾಜರವರ ಪ್ರಭುತ್ವವು ಇಪ್ಪತ್ತೈದು ವರ್ಷಗಳ ಕಾಲ ಬಳೆದುದಕ್ಕಾಗಿ ಪ್ರಜೆಗಳು ಆನಂದ ಕೋಲಾಹಲಗಳನ್ನು ಸೂಚಿಸಿ ಶ್ರೇಯಃಪ್ರಾರ್ಥನೆ ಮಾಡಿದರು. ವಿದ್ಯಾಸಂಸ್ಥೆಗಳಲ್ಲಿ ವಿದ್ಯಾರ್ಥಿ ವಿದ್ಯಾರ್ಥಿನಿಯರೂ, ಉಪಾಧ್ಯಾಯರು ಗಳೂ, ಉಪಾಧ್ಯಾಯಿನಿಯರುಗಳೂ ಸಭೆ ಸೇರಿ ಮಹಾಪ್ರಭುಗಳವರ ಭಾವಚಿತ್ರಕ್ಕೂ ಸಂಸ್ಥಾನದ ಧ್ವಜವಾದ ಗಂಡಭೇರುಂಡ ಧ್ವಜಕ್ಕೂ ವಂದನೆಮಾಡಿದರು. ಮಹಾಸ್ವಾಮಿಯವರ ಗುಣಗಾನಾದಿಗಳಿಂದ ರಜತ ಮಹೋತ್ಸವವನ್ನು ನೆರವೇರಿಸಿದರು. ಮಹಾಸ್ವಾಮಿಯವರು ಕಳುಹಿಸಿದ್ದ ಸಂದೇಶವನ್ನು ಕೇಳಿ ಪ್ರಜೆಗಳೆಲ್ಲರಿಗೂ ಆನಂದವುಂಟಾಯಿತು. ಆ ಸಂದೇಶವಾವುದೆಂದರೆ:—

> ''ನಮ್ಮ ರಾಜ್ಯಭಾರವು ಪ್ರಾರಂಭವಾಗಿ ಇಪ್ಪತ್ತೈದು ವರ್ಷ ಗಳು ಪೂರ್ಣವಾದ ಈ ದಿವಸ ನಾವು ನಮ್ಮ ಪ್ರೀತಿಗೆ ಪಾತ್ರರಾದ ಪ್ರಜೆಗಳಲ್ಲಿ ಪ್ರತಿಯೊಬ್ಬರೂ ಸುಖವಾಗಿರಲೆಂದು ಹೃದಯದಲ್ಲಿ ಹಾರೈಸುತ್ತ ಈ ಶುಭಾಭಿಕಾಂಕ್ಷೆಯನ್ನು ಪ್ರೇಮ ಪುರಸ್ಸರವಾಗಿ ಪ್ರಕಾಶಗೊಳಿಸುವೆವು. ನಮ್ಮ ಪ್ರಜೆಗಳ ಸುಖ ಸಂಪತ್ತುಗಳನ್ನು

ಅಭಿವೃದ್ಧಿಗೊಳಿಸಲು ಯಾವಜ್ಜೀವವೂ ಸಂತತವಾದ ಪ್ರಯತ್ನ ವನ್ನು ಮಾಡುವೆವು. ನಮ್ಮ ಜೀವಿತ ಕಾಲದಲ್ಲಿಯೂ ರಾಜ್ಯಭಾರ ದಲ್ಲಿಯೂ ಪರಮಧ್ಯೇಯವಾದ ಈ ಪ್ರಯತ್ನವನ್ನು ಈಡೇರಿಸಲು ತಕ್ಕ ಬುದ್ಧಿ ಶಕ್ತಿಯನ್ನೂ ಕಾಯ ಶಕ್ತಿಯನ್ನೂ ನಮಗೆ ದಯ ಪಾಲಿಸಲೆಂದು ಸರ್ವಶಕ್ತನಾದ ಭಗವಂತನನ್ನು ಪ್ರಾರ್ಥಿಸುವೆವು.

—ಶ್ರೀ ಕೃಷ್ಣ"

ರಜತ ಮಹೋತ್ಸವದ ದಿನ ಬೆಳಗ್ಗೆ ಮಹಾಸ್ವಾಮಿಯವರು ಮಂಗಳಸ್ನಾನ ಮಾಡಿ, ಪ್ರಾತರಾಹ್ನಿಕ ವಿಧಿಗಳನ್ನೆಲ್ಲ ಪೂರೈಸಿ, ಕುಲ ದೇವತೆಯಾದ ಶ್ರೀ ಚಾಮುಂಡೇಶ್ವರೀ ದೇವಿಯವರಿಗೂ, ಮಹಾಮಾತೃ ಶ್ರೀಯವರಾದ ಶ್ರೀ ವಾಣೀವಿಲಾಸ ಸನ್ನಿಧಾನದವರಿಗೂ ನಮಸ್ಕಾರ ಮಾಡಿ, ಕಲ್ಯಾಣಮಂಟಪದಲ್ಲಿ ವೈದಿಕಶ್ರೇಷ್ಠರೆದುರಿಗೆ ಸಂಸ್ಕೃತ ಭಾಷೆ ಯಲ್ಲಿ ಭಾಷಣಮಾಡಿ*, ಆಸ್ಥಾನ ಮಂಟಪದಲ್ಲಿ ಭದ್ರಾಸನವನ್ನೇರಲು ಅವರ ಅನುಜ್ಞೆಯನ್ನು ಪ್ರಾರ್ಥಿಸಿ ಅವರಿಂದ ವೇದೋಕ್ತವಾದ ಆಶೀರ್ವಾದವನ್ನು ಪಡೆದು, ಅನಂತರ ೧೦ ಘಂಟೆಗೆ ದರ್ಬಾರಿಗೆ ಚಿತ್ತೈಸಿ ದರು. ಮಹಾಸ್ವಾಮಿಯವರು ತಮ್ಮ ಸೋದರರಾದ ಶ್ರೀಮದ್ಯುವರಾಜ ಶ್ರೀ ಕಂಠೀರವ ನರಸಿಂಹರಾಜ ಒಡೆಯರವರೊಡನೆ ದರ್ಬಾರಿನಲ್ಲಿ ಮಂಡಿಸಿದ ಬಳಿಕ ಸಂಸ್ಕೃತ ವಿದ್ವಾಂಸರೊಬ್ಬರು ಮಹಾಪ್ರಭುಗಳ ರಾಜ್ಯಭಾರದಲ್ಲಿ ಪ್ರಜೆಗಳಿಗೆ ಲಭಿಸಿದ್ದ ಸೌಕರ್ಯಗಳನ್ನೂ ಮಹಾ ಪ್ರಭುಗಳ ಸದ್ಗುಣಗಳನ್ನೂ ವರ್ಣಿಸಿ ಶ್ರೇಯಃಪ್ರಾರ್ಥನೆಯ ಶ್ಲೋಕ ಗಳನ್ನು ವಠಿಸಿದರು. ಅನಂತರ, ಮೈಸೂರು ಸಂಸ್ಥಾನದ ಪ್ರಜೆಗಳ ಪರವಾಗಿ ರಾಜಸಭಾಭೂಷಣ ದಿವಾನ್ ಬಹದ್ದೂರ್ ಸರ್ ಕೆ. ಪಿ. ಪುಟ್ಟಣ್ಣ ಶೆಟ್ಟಿಯವರು ಮಹಾಸ್ವಾಮಿಯವರಿಗೆ ರಜತ ಕರಂಡದಲ್ಲಿ ಅಭಿನಂದನ ಪತ್ರಿಕೆಯನ್ನೊಪ್ಪಿಸಿದರು. ಆ ಅಭಿನಂದನ ಪತ್ರಿಕೆಯ ವಿವರವೇನೆಂದರೆ:—

---

* "ಭೋ ಭೋಃ ನಿಗಮಾಗಮ ಪಾರದೃಶ್ವಾನಃ, ಶಿಷ್ಯಪ್ರಶಿಷ್ಯ ನಿವಹೈಃ ಪ್ರಖ್ಯಾಪಿತ ದಿಗನ್ತ ವಿಶ್ರಾನ್ತ ಕೀರ್ತಯಃ, ಯಾದವ ಭೂಮಿಪಾಲಾನಾಂ ಶ್ರೇಯಸೇ ನಿರಂತರ ನಿಧ್ಯಾತ ದೇವತಾ ಪರಮ್ಪರಾಃ, ಮಹಾಶಯಾಃ, ಪಣ್ಡಿತವರ್ಯಾಃ, ಯತಃ ತತ್ರಭವತಾಂ ಭವತಾಂ ಅನೋಘಾಶೀರ್ವಾದಸ್ಯ ಅಸ್ಮಿನ್ ಸ್ಮರಣೀಯೇ ಸುದಿವಸೇ ಪಾತ್ರತಾಂ ನೀತೋಽಸ್ಮಿ, ಅತೋಽಹ ಮಾತ್ಮಾನಂ ಧನ್ಯಂ ಮನ್ಯೇ। ಶುಭಸಮಯೇಽಸ್ಮಿನ್ನಿದಾನೀಂ ಆಸ್ಥಾನ ಮಣ್ಡಪೇ ಭದ್ರಪೀಠ ಮಾರೋಢುಂ ಅನುಜ್ಞಾಂ ಪ್ರಾರ್ಥಯೇ।"

ಶ್ರೀರಸ್ತು

ಸ್ವಸ್ತಿ॥ ಶ್ರೀಮನ್ಮಹೀಮಂಡಲ ಮಂಡನಾಯಮಾನವೆನಿಸಿರುವ ಭರತಖಂಡದಲ್ಲಿ ಅತಿ ಪ್ರಖ್ಯಾತಿಪಡೆದ ಕರ್ಣಾಟಕ ಜನಪದಕ್ಕೆ ಆಶ್ರಯಸ್ಥಾನವಾಗಿರುವ ಶ್ರೀಮನ್ಮಹೀಶೂರ ಸಂಸ್ಥಾನದ ಮಹಾ ಪ್ರಭುಗಳವರಾದ ರಾಜಾಧಿರಾಜ ರಾಜಪರಮೇಶ್ವರ ಪ್ರೌಢ ಪ್ರತಾಪಾಪ್ರತಿಮ ವೀರಾದ್ಯನೇಕ ಬಿರುದಾಲಂಕೃತರಾದ ಮಹಾರಾಜ ಶ್ರೀಮಚ್ಚಾಮರಾಜೇಂದ್ರ ತನುಸಂಜಾತರಾದ **ಶ್ರೀಮನ್ನಾಲ್ವಡಿ ಕೃಷ್ಣರಾಜೇಂದ್ರ ಒಡೆಯರ್ ಬಹದ್ದೂರ್,** ಜಿ.ಸಿ.ಎಸ್.ಐ., ಜಿ.ಬಿ.ಇ. ಮಹಾಸ್ವಾಮಿಯವರ ದಿವ್ಯ ಸನ್ನಿಧಾನದಲ್ಲಿ,

ಶ್ರೀ ಶಾಲಿವಾಹನ ಶಕ ೧೮೪೯ನೆಯ ಪ್ರಭವ ಸಂವತ್ಸರದ ಶ್ರಾವಣ ಶುದ್ಧ ೧೦ ಸೋಮವಾರದಂದು, ಮಹಾಸ್ವಾಮಿಯವರ ಧರ್ಮಪ್ರಭುತ್ವದ **ರಜತ ಮಹೋತ್ಸವ** ಶುಭ ಸಮಯದಲ್ಲಿ, ಮಹಾಸ್ವಾಮಿಯವರ ಕೃಪಾಪೋಷಣೆಯಿಂದ ಆನಂದಿಸುತ್ತಿರುವ ನಾನಾ ಜಾತಿ ಮತಗಳ ಪ್ರಜಾಮಂಡಲಿಯೆಲ್ಲವೂ ಸೇರಿ ನೈಜವಾದ ರಾಜಭಕ್ತಿ ವಿನಯ ವಿಶ್ವಾಸ ಕೃತಜ್ಞತೆಗಳಿಂದ ಸಮರ್ಪಿಸುವ ಅಭಿನಂದನ ಪತ್ರಿಕೆಯ ವಿವರವೆಂತೆಂದರೆ:—

ಮಹಾಸ್ವಾಮಿಯವರು ಕುಲಪರಂಪರಾಗತವಾದ ದಿವ್ಯ ಸಿಂಹಾಸನವನ್ನಾರೋಹಿಸಿ ಗುರುತರವಾದ ರಾಜ್ಯಭಾರವನ್ನು ಕೈಕೊಂಡು ಇಂದಿಗೆ ಇಪ್ಪತ್ತೈದು ಸಂವತ್ಸರಗಳಾದುವು. ಈ ಕಾಲ ವಿಸ್ತರದಲ್ಲಿ ಪ್ರಭುಗಳವರ ಆಳಿಕೆಯು ಸುಸೂತ್ರವಾಗಿಯೂ ಶುಭ ಪರಿಪೂರ್ಣವಾಗಿಯೂ ಲೋಕರಂಜಕವಾಗಿಯೂ ನಡೆದುಕೊಂಡು ಬಂದಿರುವುದೆಂಬ ಮಹಾಸಂತೋಷವನ್ನು ಪ್ರಜೆಗಳಾದ ನಾವು ಈ ಸಂದರ್ಭದಲ್ಲಿ ಬಿನ್ನೈಸಲು ಉತ್ಸಾಹವುಳ್ಳವರಾಗಿದ್ದೇವೆ.

ಮಹಾಸ್ವಾಮಿಯವರು ಪ್ರಜಾಭ್ಯುದಯಕ್ಕಾಗಿ ಮಾಡಿಸಿರುವ ವಿವಿಧ ಕಾರ್ಯಕಲಾಪಗಳು ದೇಶಚರಿತ್ರೆಯಲ್ಲಿ ಸುವರ್ಣಾಕ್ಷರ ಗಳಿಂದ ಉಲ್ಲೇಖಿಸಿಕೊಳ್ಳತಕ್ಕವುಗಳಾಗಿವೆ. ಮಹಾಪ್ರಭುಗಳವರ ಚಾರಿತ್ರವು ಭೂಪಾಲಕ ಕುಲಕ್ಕೆ ಆದರ್ಶಪ್ರಾಯವಾಗಿರುವುದೆಂದು ದೇಶವಿದೇಶಗಳಲ್ಲಿ ಸುಪ್ರಸಿದ್ಧವಾಗಿದೆ. ಇಂತಹ ಪ್ರಭುಗಳನ್ನು ಪಡೆದಿರುವುದು ಪ್ರಜೆಗಳ ಭಾಗ್ಯವಿಶೇಷವೆಂಬುದು ಸರ್ವಜನ ಸಮಾದೃತವಾಗಿದೆ.

ಮಹಾಸ್ವಾಮಿಯವರ ಆಳಿಕೆಯ ವಿಚಕ್ಷಣೆಯನ್ನು ರಾಜ ನೀತಿಜ್ಞರು ಕೊಂಡಾಡುತ್ತಿರುವರು. ಮಹಾಸ್ವಾಮಿಯವರ ರಾಜ್ಯಯಂತ್ರದ ಅಂಗಾಂಗಗಳು ಪ್ರಕೃತಕಾಲಕ್ಕೆ ತಕ್ಕಂತೆ ವಿಸ್ತಾರ ಗೊಂಡು ಪರಿಷ್ಕಾರ ಹೊಂದುತ್ತ, ಶಾಸನ ವಿಧಾನ ಭಾಗದಲ್ಲಿಯೂ ಕಾರ್ಯಸಾಧನ ಭಾಗದಲ್ಲಿಯೂ ನ್ಯಾಯ ನಿರ್ಣಯ ಭಾಗದಲ್ಲಿಯೂ ಲೋಕಸಮ್ಮತವಾಗುತ್ತ ಬಂದಿವೆ. ಈ ರಾಜ್ಯಪರಿಪಾಲನ ಕೌಶಲ ದಿಂದ ರಾಷ್ಟ್ರದ ಆದಾಯವು ಮುಮ್ಮಡಿಯಾಗಿ ಬೆಳೆದು ಹೆಚ್ಚು ತ್ತಲೂ, ಪ್ರಜಾಸೌಕರ್ಯಗಳು ಅದನ್ನನುಸರಿಸಿ ಬಹು ಮುಖವಾಗಿ ಪ್ರವರ್ಧಿಸುತ್ತಲೂ ಇವೆ.

ಮಹಾಸ್ವಾಮಿಯವರ ಪ್ರಜಾವಾತ್ಸಲ್ಯ ಪ್ರಭಾವದಿಂದ ನಾನಾ ವರ್ಗಗಳ ಜನರಲ್ಲಿಯೂ ವಿದ್ಯಾಭ್ಯಾಸವು ಪ್ರಚಾರವಾಗುತ್ತ ಜ್ಞಾನಾಭಿಲಾಷೆಯು ಬೆಳೆಯುತ್ತಿದೆ. ಗೀರ್ವಾಣ ಕರ್ಣಾಟಕ ಭಾಷೆಗಳು ಪುನರುಜ್ಜೀವನವನ್ನು ಪಡೆಯುತ್ತಿವೆ. ಪಾಶ್ಚಾತ್ಯ ವಿಜ್ಞಾನವು ಪ್ರಸರಿಸುತ್ತಿದೆ. ಶಿಲ್ಪ ಸಂಗೀತಾದಿ ಲಲಿತ ಕಲೆಗಳು ಅಭಿವರ್ಧಿಸುತ್ತಿವೆ. ಸಾವಿರಾರು ಪಾಠಶಾಲೆಗಳೂ ಪ್ರೌಢಕಲಾ ನಿಲಯಗಳೂ ವಿಶ್ವವಿದ್ಯಾಪೀಠವೂ ಮಹಾಸ್ವಾಮಿಯವರ ವಿದ್ಯಾ ಭಿಮಾನಕ್ಕೆ ಶಾಶ್ವತ ನಿದರ್ಶನಗಳಾಗಿ ರಾಜ್ಯದ ಪುರೋಭಿವೃದ್ಧಿಗೆ ಪರಮಸಾಧಕಗಳಾಗಿ ಶೋಭಿಸುತ್ತಿವೆ.

ಮಹಾಸ್ವಾಮಿಯವರು ನಿರ್ಮಾಣಮಾಡಿಸಿರುವ ಕೃಷ್ಣರಾಜ ಸಾಗರ ಮುಂತಾದ ವಿಶಾಲ ಸರೋವರಗಳೂ ಬಾವಿ ಕೆರೆ ಕಾಲುವೆ ಗಳೂ ಸುಗಮಗಳಾದ ಮಾರ್ಗಗಳೂ ಧೂಮ ಶಕಟ ಸರಣಿಗಳೂ ವಿದ್ಯುಚ್ಛಕ್ತಿ ಸಂಧಾನಗಳೂ ಖನಿಜ ಶೋಧನೋದ್ಯಮಗಳೂ ರಾಸಾಯನಿಕ ರಚನೆಗಳೂ ಇತರ ವೈಜ್ಞಾನಿಕ ಕೃತಿಗಳೂ ಭೂವ್ಯವಸಾಯ ವಿಸ್ತರಣ ಯಂತ್ರಕರ್ಮ ಪ್ರಸರಣ ವಾಣಿಜ್ಯೋ ತ್ತೇಜನಗಳಿಗೆ ಅನುಕೂಲಗಳಾಗಿ ಜನರಲ್ಲಿ ಕಾರ್ಯೋತ್ಸಾಹವನ್ನು ತುಂಬಿ, ಬುದ್ಧಿ ಕುಶಲತೆಯನ್ನು ಉತ್ತಮಗೊಳಿಸಿ, ಅವರ ಜೀವನ ಯೋಗ್ಯತೆಯನ್ನು ಉನ್ನತಿಗೆ ತರುತ್ತಿವೆ.

ಮಹಾಸ್ವಾಮಿಯವರು ಸ್ಥಾಪನೆಮಾಡಿಸಿಕೊಟ್ಟಿರುವ ನೂತನ ಯಂತ್ರೋಪಕರಣ ಸಜ್ಜಿತಗಳಾದ ವೈದ್ಯ ಶಾಲೆಗಳು, ಪಶು ಚಿಕಿತ್ಸಾಲಯಗಳು, ಪುರಾಲಂಕಾರಗಳಾದ ಸೌಧ ಮಂಟಪೋ ದ್ಯಾನಗಳು, ಪುಸ್ತಕ ಭಾಂಡಾಗಾರ ವಾಚನ ಮಂದಿರಗಳು,

ದ್ರವ್ಯಾಗಾರ ಸಹಕಾರ ಸಂಘಗಳು— ಇವೇ ಮೊದಲಾದ ಸಂಸ್ಥೆಗಳು ವರ್ಷೇ ವರ್ಷೇ ಅಭಿವೃದ್ಧಿ ಪಡೆದು ಜನಜೀವನೋತ್ಕರ್ಷವನ್ನು ಸೂಚಿಸುತ್ತ ಮಹಾಪ್ರಭುಗಳವರ ಪ್ರಜೋತ್ತೇಜಕ ಶಕ್ತಿಯನ್ನು ಪ್ರಕಟಿಸುತ್ತಿರುವುವು.

ಮಹಾಸ್ವಾಮಿಯವರು ಬೆಳೆಯಿಸಿ ಬಲಪಡಿಸಿರುವ ಪ್ರಜಾಪ್ರತಿನಿಧಿ ಸಭೆ ಶಾಸನ ಸಭೆಗಳೂ ಸಂಪದಭಿವರ್ಧಕ ಸಮಿತಿ ಮಂಡಲ ಸಮಿತಿಗಳೂ ನಗರ ಸಭೆ ಗ್ರಾಮ ಪಂಚಾಯಿತಿಗಳೂ ರಾಷ್ಟ್ರದಲ್ಲಿ ಪ್ರಜಾಧರ್ಮ ಪ್ರಕಾಶಕ್ಕೆ ಸಾಧನಗಳಾಗಿವೆ. ಈ ಸಂಸ್ಥೆಗಳ ಮೂಲಕ ಜನರು ರಾಜ್ಯ ವಿಚಾರಗಳಲ್ಲಿ ಆಸಕ್ತರಾಗಿ, ಜನಪದ ನಿಷ್ಠೆಯನ್ನಭ್ಯಸಿಸಿ, ದೇಶಕಾರ್ಯ ನಿರ್ವಾಹದಲ್ಲಿ ಭಾಗಿಗಳಾಗಲು ಅವಕಾಶವುಂಟಾಗಿರುವುದು. ಅವುಗಳ ಮಹಿಮೆಯಿಂದ ಪ್ರಜೆಗಳಲ್ಲಿ ರಾಜಕೀಯನ್ಯಾಯ ಪರಿಜ್ಞಾನವೂ ಸ್ವಕರ್ತವ್ಯ ವಿವೇಕವೂ ಸ್ವಪ್ರಯತ್ನ ಬುದ್ಧಿಯೂ ಜನೈಕ್ಯ ಭಾವವೂ ದೇಶಹಿತೈಕ ದೃಷ್ಟಿಯೂ ಪ್ರಬಲಿಸುವುವಲ್ಲದೆ, ರಾಜ್ಯಯಂತ್ರವು ನಿರಾತಂಕವಾಗಿಯೂ ಪ್ರಜಾನುರಂಜಕವಾಗಿಯೂ ನಡೆಯುವಂತಾಗಿ, ಆ ಮೂಲಕ ಮಹಾಪ್ರಭುಗಳ ಯಶಸ್ಸೂ, ರಾಜ್ಯದ ಶ್ರೇಯಸ್ಸೂ, ಮತ್ತಷ್ಟು ಅಭಿವರ್ಧಿಸುವುವೆಂದು ನಾವು ದೃಢವಾಗಿ ನಂಬಿಕೊಂಡಿರುವೆವು.

ಮೇಲಾಗಿ, ಮಹಾಸ್ವಾಮಿಯವರ ದೈವಭಕ್ತಿ, ಭೂತದಯೆ, ಗಾಂಭೀರ್ಯ, ಸದಾಚಾರವರ್ತನೆ, ಪೂರ್ವಸಂಪ್ರದಾಯ ವಿಶ್ವಾಸ, ಆತ್ಮ ಪರಿಶುದ್ಧತೆ, ಗುರುಜನ ನಮ್ರತೆ, ವಿದ್ವಜ್ಜನ ಮಮತೆ, ಸರ್ವಜನ ಸುಲಭತೆ, ರಾಜಧರ್ಮಪರಾಯಣತೆ, ಮಂತ್ರಾಲೋಚನ ಚತುರತೆ, ಲೋಕಾರಾಧನ ತತ್ಪರತೆ—ಈ ಸದ್ಗುಣಗಳು ಸಕಲ ದೇಶ ಸಂಸ್ತುತಗಳಾಗಿ ಮಹಾಸ್ವಾಮಿಯವರನ್ನು ಜನಕ ಯುಧಿಷ್ಠಿರಾದಿ ರಾಜರ್ಷಿಗಳ ಪಜ್ಞ್ತಿಗೆ ಸೇರಿಸತಕ್ಕುವಾಗಿವೆ. ಮಹಾಸ್ವಾಮಿಯವರ ಈ ಗುಣರತ್ನರಾಶಿಯ ನಿರ್ಮಲ ಕಾಂತಿಯು ಪ್ರಜೆಗಳಾದ ನಮಗೆ ಅತ್ಯಂತ ಗೌರವಾಸ್ಪದವಾಗಿ ಚಿತ್ತ ಸಮುನ್ನತಿಕಾರಕವಾಗಿರುವುದು, ಮಹಾಸ್ವಾಮಿ.

ಈಚೆಗೆ ಬ್ರಿಟಿಷ್ ಸಾರ್ವಭೌಮ ಸರ್ಕಾರದವರು ಸಹ ಮಹಾಸ್ವಾಮಿಯವರ ರಾಜ್ಯಭಾರದ ಉತ್ಕೃಷ್ಟತೆಯನ್ನೂ, ಪ್ರಜಾನುರಾಗವನ್ನೂ, ಉದಾತ್ತಸಂಕಲ್ಪಗಳನ್ನೂ, ಸದ್ಗುಣ ಸಂಪತ್ತನ್ನೂ

ಮೆಚ್ಚಿ ಮಹಾಸ್ವಾಮಿಯವರ ಘನತೆಯನ್ನು ಲೋಕಕ್ಕೆ ಪ್ರಕಾಶ ಪಡಿಸಿರುತ್ತಾರೆ. ಆ ಮೆಚ್ಚಿಕೆಯನ್ನು ತೋರಿಸುವುದಕ್ಕೋಸ್ಕರ ಸಾರ್ವಭೌಮ ಪ್ರತಿನಿಧಿಗಳಾದ ಲಾರ್ಡ್ ಅರ್ವಿನ್ ಶ್ರೀಮಂತ ರವರು ನಮ್ಮ ಸಂಸ್ಥಾನದಿಂದ ಸಲ್ಲಬೇಕಾದ ಪೊಗದಿಯಲ್ಲಿ ೧೦½ ಲಕ್ಷ ರೂಪಾಯಿಗಳಷ್ಟರ ಭಾಗವನ್ನು ಬಿಟ್ಟುಕೊಟ್ಟು, ಪರಸ್ಪರ ಮೈತ್ರಿಯನ್ನು ಮತ್ತಷ್ಟು ಅಭಿವೃದ್ಧಿಗೊಳಿಸಿರುವುದು ನಮಗೆಲ್ಲ ಅತ್ಯಂತ ಸಂತೋಷವನ್ನೂ ಹೆಮ್ಮೆಯನ್ನೂ ಉಂಟುಮಾಡಿರುತ್ತದೆ, ಮಹಾಸ್ವಾಮಿ.

ಶ್ರೀ ಮಹಾಸ್ವಾಮಿಯವರಿಗೂ, ಶ್ರೀಮದ್ಯುವರಾಜರವರಿಗೂ, ಶ್ರೀಮಹಾಮಾತೃಶ್ರೀಯರಿಗೂ, ರಾಜಕುಟುಂಬದವರಿಗೂ ಜಗದೀಶ್ವರನು ಆಯುರಾರೋಗ್ಯ ಸೌಭಾಗ್ಯ ಸೌಖ್ಯಗಳನ್ನು ಅಮಿತವಾಗಿ ಕರುಣಿಸಲಿ! ಮಹಾಸ್ವಾಮಿಯವರು ಸರ್ವದಾ ಸರ್ವತ್ರ ಜಯಶಾಲಿಗಳಾಗಲಿ! ಮಹಾಸ್ವಾಮಿಯವರ ಕೀರ್ತಿ ದಶದಿಕ್ಕುಗಳಲ್ಲಿಯೂ ಹರಡಿ ಆಚಂದ್ರತಾರಕವಾಗಿ ಬೆಳಗಲಿ! ಮಹಾಸ್ವಾಮಿಯವರ ಧರ್ಮಪ್ರಭುತ್ವದ ಸುವರ್ಣೋತ್ಸವ ಸಮಯದಲ್ಲಿ ಈ ತೆರದ ಸಂಭ್ರಮದಿಂದ ಮತ್ತೆ ಮತ್ತೆ ಮಹಾಸ್ವಾಮಿಯವರನ್ನಭಿನಂದಿಸುವ ಸುಯೋಗವು ಪ್ರಜೆಗಳಾದ ನಮ್ಮದಾಗಿರಲಿ! ಸಮಸ್ತ ಸನ್ಮಂಗಳಗಳೂ ನಮ್ಮ ಮಹಾರಾಜ ರವರಿಗೆ ಲಭಿಸಲಿ— ಇಂತೆಂಬುದೇ ಮಹಾಸ್ವಾಮಿಯವರ ಪ್ರಜಾ ಕೋಟಿಯ ಮನಃಪೂರ್ವಕವಾದ ಸಂತತ ಪ್ರಾರ್ಥನೆ.

ಮೈಸೂರು ಪಟ್ಟಣ,<br>ಕ್ರಿಸ್ತಶಕ ೧೯೩೭ನೆಯ<br>ಆಗಸ್ಟು ೮ನೆಯ ದಿವಸ.

ಇಂತು ಮಹೀಶೂರ ರಾಜ್ಯದ<br>**ಪ್ರಜಾಮಂಡಲದ ವಿಜ್ಞಾಪನೆಗಳು**

ಪ್ರಜೆಗಳ ಪರವಾಗಿ ಆ ರೀತಿ ಸಮರ್ಪಿತವಾದ ಅಭಿನಂದನ ಪತ್ರಿಕೆಗೆ ಮಹಾಸ್ವಾಮಿಯವರು ಸ್ಫೂರ್ತಿದಾಯಕವಾದ ಅಮೋಘ ಪ್ರತ್ಯುತ್ತರವನ್ನು ದಯಪಾಲಿಸಿದರು. ರಜತ ಮಹೋತ್ಸವದ ಸಂತೋಷಾರ್ಥವಾಗಿ ಅರಮನೆಯ ಬತೇರಿಯಿಂದ ಇಪ್ಪತ್ತೊಂದು ಕುಶಾಲು ತೋಪುಗಳು ಮೊಳಗಿದುವು. ಮಹಾಸ್ವಾಮಿಯವರು ದಯಪಾಲಿಸಿದ ಪ್ರತ್ಯುತ್ತರದ ವಿವರವನ್ನು ಕೆಳಗೆ ಕೊಟ್ಟಿದೆ:—

"ಪ್ರಿಯತಮರಾದ ಪ್ರಜಾ ಮಹಾಶಯರೇ,

ನಿಮ್ಮಗಳಿಗೆ ನಮ್ಮ ವಿಷಯದಲ್ಲಿರುವ ಪ್ರೀತಿ ವಿಶ್ವಾಸಗಳನ್ನು ಪ್ರದರ್ಶಿಸತಕ್ಕ ಈ ಅಭಿನಂದನ ಪತ್ರಿಕೆಯನ್ನು ಬಹು ಆದರ ದಿಂದ ಸ್ವೀಕರಿಸುತ್ತೇವೆ. ಇದರಲ್ಲಿ ನೀವುಗಳು ತೋರ್ಪಡಿಸಿರುವ ಭಕ್ತಿ ಶ್ರದ್ಧೆಗಳು ನಮಗೆ ವಿಶೇಷವಾದ ಸಂತೋಷವನ್ನುಂಟು ಮಾಡಿವೆ.

ಭಗವಂತನು ಮೈಸೂರು ಸಂಸ್ಥಾನಕ್ಕೆ ನಾನಾ ವಿಧವಾದ ಸಂಪತ್ತುಗಳನ್ನು ಅನುಗ್ರಹಿಸಿರುವುದಲ್ಲದೆ, ವಿನಯಸಂಪನ್ನರೂ ಉದಾರಚಿತ್ತರೂ ಕಾರ್ಯಾಸಕ್ತರೂ ಆದ ಪ್ರಜೆಗಳನ್ನು ದಯ ಪಾಲಿಸಿರುವನು. ಮೈಸೂರು ಸಂಸ್ಥಾನಕ್ಕೆ ಮಾದರಿ ಸಂಸ್ಥಾನ ವೆಂದು ಬಂದಿರುವ ಖ್ಯಾತಿಗೂ, ಸಾರ್ವಭೌಮ ಸರ್ಕಾರದವರು ಈಗತಾನೇ ತೋರಿಸಿರುವ ಘನವಾದ ಪುರಸ್ಕಾರಕ್ಕೂ ನಿಮ್ಮಗಳ ಪ್ರೀತಿಪೂರ್ವಕವಾದ ಸಹಕಾರವೇ ಮುಖ್ಯ ಕಾರಣವಾಗಿರುವುದು.

ಇದೇ ರೀತಿಯಲ್ಲಿ ಮುಂದೆಯೂ ನಾವೆಲ್ಲರೂ ಕಲೆತು, ಸಹೋದರ ಭಾವದಿಂದ ಕಾರ್ಯಗಳನ್ನು ನಡೆಸಿ, ಕೃಷಿ ಕೈಗಾರಿಕೆ ವಾಣಿಜ್ಯಗಳಿಗೆ ಹೆಚ್ಚು ಸೌಕರ್ಯವನ್ನು ಒದಗಿಸಿ, ಎಲ್ಲರ ಅಭಿವೃದ್ಧಿಗೂ ಸಮವಾಗಿ ಅವಕಾಶವನ್ನು ಕೊಡುತ್ತ, ನವೀನ ಕಾಲದಲ್ಲಿ ಉತ್ತಮಸ್ಥಿತಿಗೆ ಬಂದಿರುವ ದೇಶಗಳ ಸಮಕ್ಕೆ ಮೈಸೂರು ದೇಶವನ್ನು ತರಲು, ನಮ್ಮ ಶಕ್ತಿ ಸಾಹಸಗಳನ್ನೆಲ್ಲಾ ಉಪಯೋಗಿಸಬೇಕಾಗಿರುವುದು.

ಈ ಮಹತ್ತಾದ ಕಾರ್ಯದಲ್ಲಿ, ಎಲ್ಲಾ ಪಂಗಡಗಳವರೂ ನಮ್ಮ ಪ್ರಜಗಳೇ, ಒಂದು ದೇಶದಲ್ಲಿ ಜನಿಸಿದವರೇ, ಎಂಬುದನ್ನು ನೆನಪಿನಲ್ಲಿಟ್ಟು, ಮುಂದಾದವರು ತಮ್ಮಷ್ಟು ಅಭಿವೃದ್ಧಿ ಸ್ಥಿತಿಗೆ ಇನ್ನೂ ಬಾರದಿರುವವರಿಗೆ ಸಹಾಯಕರಾಗಬೇಕೆಂಬುದು ನಮ ಅಭಿಲಾಷೆಯಾಗಿರುತ್ತದೆ.

ಮುಂದೆ ವೃದ್ಧಿಗೆ ಬರುವವರಾಗಿರುವ ಯುವಕಸಮುದಾಯ ದವರೂ ಸಹೋದರ ಭಾವವನ್ನೂ ಪ್ರಜಾ ಧರ್ಮವನ್ನೂ ತಮ್ಮ ದೃಷ್ಟಿಯಲ್ಲಿಟ್ಟುಕೊಂಡು, ನಮ್ಮ ಪ್ರೀತಿಗೆ ವಿಷಯವಾದ ಮಾತೃಭೂಮಿಯ ಶ್ರೇಯಸ್ಸಾಧನೆಗಾಗಿ ಯತ್ನಿಸಬೇಕೆಂದು ಬಯಸುತ್ತೇವೆ.

ತಮ್ಮ ಸಂಕಟಗಳನ್ನು ಕಂಠೋಕ್ತವಾಗಿ ಹೇಳಿಕೊಳ್ಳಲಾರದ



ರಜತ ಮಹೋತ್ಸವದ ಜ್ಞಾಪಕಾರ್ಥವಾದ ಗಡಿಯಾರ ಗೋಪುರ

ಪ್ರಾಣಿಗಳ ವಿಷಯದಲ್ಲಿ ಕನಿಕರವನ್ನು ತೋರಿಸಬೇಕೆಂದು ಈ ಸಂದರ್ಭದಲ್ಲಿ ಸೂಚಿಸಲಿಚ್ಛೈಸುತ್ತೇವೆ.

ಪ್ರಜೆಗಳ ಸೌಖ್ಯವೇ ನಮ್ಮ ಸೌಖ್ಯವೆಂದು ನಾವು ಸದಾ ಭಾವಿಸಿಕೊಂಡಿರುತ್ತೇವೆ. ಅಂತಹ ಸೌಖ್ಯ ಸಾಧನೆಗೆ ಆವಶ್ಯಕವಾದ ವಿವೇಕ, ಸ್ಥಿರ ಸಂಕಲ್ಪ, ಸಹಾಯ ಸಂಪತ್ತು, ಇವುಗಳನ್ನು ನಮಗೆ ಅನುಗ್ರಹಿಸಲೆಂದು ಕರುಣಾಮಯನಾದ ಭಗವಂತನನ್ನು ನಿರಂತರವೂ ಪ್ರಾರ್ಥಿಸುತ್ತಿರುವೆವು.''

ಅರಮನೆಯ ಅಧಿಕಾರಿ ವರ್ಗದವರೆಲ್ಲರೂ ಸೇರಿ ರಜತ ಮಹೋತ್ಸವದ ಕಾಣಿಕೆಯಾಗಿ ಕರ್ಸನ್ ಪಾರ್ಕ್ ಬಳಿಯಲ್ಲಿ ಕಟ್ಟಿಸಿದ್ದ ರಜತ ಮಹೋತ್ಸವದ ಸವಿನೆನಪಿನ ಗಡಿಯಾರ ಗೋಪುರದ ಬಳಿಗೆ ಆ ದಿನ ಸಾಯಂಕಾಲ ಐದೂವರೆ ಘಂಟೆಗೆ ಮಹಾಸ್ವಾಮಿಯವರು ದಯಮಾಡಿ, ವಿದ್ಯುಚ್ಛಕ್ತಿಯ ಯಂತ್ರಸಾಧನವನ್ನು ಒತ್ತಿ ಗಡಿಯಾರದ ಕೆಲಸವನ್ನು ಸಮಾರಂಭಣಗೊಳಿಸಿದರು. ನಾಲ್ಕು ಉತ್ತಮಾಶ್ವಗಳನ್ನು ಕಟ್ಟಿದ ರಥದಲ್ಲಿ ಮಹಾಸ್ವಾಮಿಯವರು ಅಲ್ಲಿಂದ ''ಗೌರ್ನ್ಮೆಂಟ್ ಹೌಸ್'' ಭವನದ ಕಡೆಗೆ ದಯಮಾಡಿದರು. ಆ ಭವನದ ಬಳಿಯ ಮೈದಾನದಲ್ಲಿ ಸೈನಿಕರಿಂದಲೂ ಬಾಲಚಮೂಗಳಿಂದಲೂ ಸಾಹಸಪ್ರದರ್ಶನಗಳು ನಡೆದುವು. ದೊಂಬರಾಟ, ಅಂಧಬಾಲಕರಿಂದ ಹರಿಕಥೆ, ಸಂಗೀತ ಮುಂತಾದುವು ನಡೆದುವು. ಅನಂತರ ಬಾಣಬಿರುಸುಗಳಾದುವು. ಅವುಗಳನ್ನೆಲ್ಲ ಪರಾಂಬರಿಸಿದ ನಂತರ ಮಹಾಸ್ವಾಮಿಯವರು ವೈಭವದ ಮೆರೆವಣಿಗೆಯಲ್ಲಿ ಅರಮನೆಗೆ ಚಿತ್ತೈಸಿದರು. ಮೆರೆವಣಿಗೆಯುದ್ದಕ್ಕೂ ಮಾರ್ಗಗಳ ಉಭಯ ಪಾರ್ಶ್ವಗಳಲ್ಲಿಯೂ ಪ್ರಜೆಗಳು ಕಿಕ್ಕಿರಿದು ತುಂಬಿ ಪ್ರಭುಗಳ ಸಂದರ್ಶನದಿಂದ ಆನಂದಘೋಷ ಮಾಡುತ್ತಿದ್ದರು. ಮಹಾಸ್ವಾಮಿಯವರ ಸವಾರಿಯು ಅರಮನೆಗೆ ಹಿಂತಿರುಗಿದ ಬಳಿಕ, ಅರಸು ಪಂಗಡದ ಮಹಾಶಯರುಗಳೆಲ್ಲರ ಪರವಾಗಿ ಶ್ರೀಮಾನ್ ರಾಜಕುಮಾರ ದೇಶರಾಜ ಅರಸಿನವರು ಮಹಾಪ್ರಭುಗಳಿಗೆ ಭಕ್ತಿ ವಿಶ್ವಾಸಗಳಿಂದ ಪಾದಪೂಜೆ ಮಾಡಿ ಪುಷ್ಪಮಾಲಿಕೆಯನ್ನೂ ಅಮೂಲ್ಯವಾದ ಖಿಲ್ಲತ್ತುಗಳನ್ನೂ ಸಮರ್ಪಿಸಿದರು. ಮಾರನೆಯ ದಿನ ಮೈಸೂರು ಸಂಸ್ಥಾನದ ವಿದ್ಯಾರ್ಥಿ ವಿದ್ಯಾರ್ಥಿನಿಯರೂ, ಬಾಲಚಮೂ (''ಸ್ಕೌಟ್'') ಬಾಲಕರು ಮುಂತಾದವರೂ ಜಗನ್ಮೋಹನ ಪ್ರಾಸಾದದ ಸಭಾಂಗಣದಲ್ಲಿ ಶ್ರೀಮದ್ಯುವರಾಜ ಶ್ರೀಕಂಠೀರವ ನರಸಿಂಹರಾಜ ಒಡೆಯರವರ ಅಧ್ಯಕ್ಷತೆಯಲ್ಲಿ ಸಭೆಸೇರಿ, ಆಳಿದ ಮಹಾಸ್ವಾಮಿಯವರಿಗೆ ತಮ್ಮ ಭಕ್ತಿವಿಶ್ವಾಸ

ಪೂರಿತವಾದ ವಿಜ್ಞಾಪನಾ ವಾಣಿಗಳನ್ನು ಶ್ರುತಪಡಿಸಿದರು. ಮಹಾಸ್ವಾಮಿಯವರು ಪ್ರಸನ್ನರಾಗಿ, ಬಾಲಕಬಾಲಕಿಯರಿಗೆ ಅವರೆಲ್ಲರೂ ಸದಾಶಯಗಳುಳ್ಳ ಸತ್ಪ್ರಜೆಗಳಾಗಿ ಬಾಳಬೇಕೆಂದು ಹರಸಿ ಪ್ರೀತಿಯಿಂದ ಸಂದೇಶವನ್ನು ಕಳುಹಿಸಿದರು. ಆ ಸಂದೇಶದಿಂದಲೂ, ಶ್ರೀಮದ್ಯುವರಾಜ ಶ್ರೀ ಕಂಠೀರವ ನರಸಿಂಹರಾಜ ಒಡೆಯರವರ ಸ್ಫೂರ್ತಿದಾಯಕವಾದ ಅಧ್ಯಕ್ಷ ಭಾಷಣದಿಂದಲೂ, ಆಳುವ ಮಹಾಸ್ವಾಮಿಯವರಾದ ಶ್ರೀ ಜಯಚಾಮರಾಜೇಂದ್ರ ಒಡೆಯರವರು ಅಂದಿನ ಸಭೆಯನ್ನಲಂಕರಿಸಿದ್ದುದರಿಂದಲೂ ಬಾಲಕಬಾಲಕಿಯರಿಗುಂಟಾದ ಆನಂದವು ಅಪರಿಮಿತವಾದುದು.

ರಜತ ಮಹೋತ್ಸವದ ಆನಂದ ಸಮಯದಲ್ಲಿ, ಆಳಿದ ಮಹಾಸ್ವಾಮಿಯವರಾದ ಶ್ರೀಮನ್ಮಹಾರಾಜರವರು ತಮ್ಮ ನಗರಕ್ಕೂ ಚಿತ್ತೈಸಬೇಕೆಂದು ಬೆಂಗಳೂರು ನಿವಾಸಿಗಳು ಪ್ರಾರ್ಥಿಸಿಕೊಂಡರು. ಮಹಾಸ್ವಾಮಿಯವರು ಅವರ ಪ್ರಾರ್ಥನೆಯನ್ನು ಲಾಲಿಸಿ ೧೯೩೭ನೆಯ ಇಸವಿ ಸೆಪ್ಟೆಂಬರು ತಿಂಗಳಿನಲ್ಲಿ ಬೆಂಗಳೂರು ನಗರಕ್ಕೆ ದಯಮಾಡಿ, "ಕಬ್ಬನ್ ಪಾರ್ಕ್" ಉದ್ಯಾನದಲ್ಲಿ ನಗರ ಸಭೆಯವರ ವಿಜ್ಞಾಪನಾ ಪತ್ರಿಕೆಯನ್ನು ಸ್ವೀಕರಿಸಿ, ಅದಕ್ಕೆ ಪ್ರತ್ಯುತ್ತರವನ್ನು ದಯಪಾಲಿಸಿದರು. ಅನಂತರ ಅವರು ತಮ್ಮ ಅನುಜರೊಡನೆಯೂ ದಿವಾನ್‌ರವರೊಡನೆಯೂ ಆನೆಯ ಮೇಲೆ ಚಿನ್ನದ ಅಂಬಾರಿಯಲ್ಲಿ ಮಂಡಿಸಿ ನಗರದ ನಾನಾ ಭಾಗಗಳಿಗೂ ಮೆರೆವಣಿಗೆ ಚಿತ್ತೈಸಿದರು.

ರಜತ ಮಹೋತ್ಸವ ಕಾಲದ ಕಾಣಿಕೆಯಾಗಿ ಸಂಸ್ಥಾನದ ನಾನಾ ಭಾಗಗಳ ಪ್ರಜೆಗಳಿಂದಲೂ ಬಹಳ ಧನವು ರಜತೋತ್ಸವದ ನಿಧಿಗೆ ಸಮರ್ಪಿತವಾಯಿತು. ಸಂಸ್ಥಾನದ ಆ ಆ ಭಾಗಗಳಲ್ಲಿ ವಾಚನಾಲಯಗಳು, ಪುಸ್ತಕ ಭಂಡಾರಗಳು, ಧರ್ಮಶಾಲೆಗಳು, ಅನಾಥಾಲಯಗಳು, ಹೆರಿಗೆ ವಾರ್ಡುಗಳು, ಮುಂತಾದುವುಗಳನ್ನು ರಜತ ಮಹೋತ್ಸವದ ಸವಿನೆನಪಿನ ಸ್ಮಾರಕಗಳಾಗಿ ಏರ್ಪಡಿಸುವುದಕ್ಕಾಗಿ ಆ ಹಣದಲ್ಲಿ ಮೂರರಲ್ಲೊಂದು ಭಾಗವು ವೆಚ್ಚವಾಗಿ, ಉಳಿದ ಮೊತ್ತವು ಅಖಿಲ ಸಂಸ್ಥಾನಕ್ಕೇ ಪ್ರಯೋಜನಕರವಾದ ವೃತ್ತಿ ಶಿಕ್ಷಣಶಾಲೆಯೊಂದು ನಿರ್ಮಿತವಾಗಲು ವೆಚ್ಚವಾಗಬೇಕೆಂದು ಗೊತ್ತಾಯಿತು. ರಜತ ಮಹೋತ್ಸವದ ಸ್ಮಾರಕವಾಗಿ ನಿರ್ಮಿತವಾಗಿರುವ ವೃತ್ತಿ ಶಿಕ್ಷಣಶಾಲೆಯು ("ಶ್ರೀ ಕೃಷ್ಣರಾಜೇಂದ್ರ ಸಿಲ್ವರ್ ಜ್ಯೂಬಿಲಿ ಟೆಕ್ನಲಾಜಿಕಲ್ ಇನ್‌ಸ್ಟಿಟ್ಯೂಟ್") ಬೆಂಗಳೂರು ನಗರದಲ್ಲಿ ಶೋಭಿಸುತ್ತಿದೆ; ಅಲ್ಲಿ ಅನೇಕ ವೃತ್ತಿಗಳಲ್ಲಿ ಶಿಕ್ಷಣ ದೊರೆಯುವಂತೆ ಏರ್ಪಾಡಾಗಿದೆ.

ಮೈಸೂರು ಸಂಸ್ಥಾನವನ್ನು ಮಹಾತ್ಮಾ ಗಾಂಧಿಯವರು ರಾಮರಾಜ್ಯವೆಂದು ಕರೆದರು. ಮೈಸೂರು ಸಂಸ್ಥಾನದ ಪ್ರಜೆಗಳ

**ಶ್ಲಾಘನೆಗಳು**

ವಿಚಾರವನ್ನು ಪ್ರಸ್ತಾವಿಸಿ, "ಮೈಸೂರು ಸಂಸ್ಥಾನದವರು ಎರಡು ರೀತಿಗಳಲ್ಲಿ ಸುಕೃತಶಾಲಿಗಳಾಗಿದ್ದಾರೆ. ಮೊದಲನೆಯದಾಗಿ, ಪ್ರಕೃತಿದೇವಿಯು ಅವರಲ್ಲಿ ಕರುಣೆತೋರಿ ಸೌಂದರ್ಯಮಯಿಯಾಗಿ ಅವರ ನಾಡಿನಲ್ಲಿ ನೆಲಸಿದ್ದಾಳೆ; ಅವರ ನಾಡಿನ ವಾಯುಗುಣವು ಸೊಗಸಾಗಿಯೂ ಹಿತಕರವಾಗಿಯೂ ಇದೆ. ಎರಡನೆಯದಾಗಿ, ಮೈಸೂರು ಸಂಸ್ಥಾನದ ಶ್ರೀಮನ್ಮಹಾರಾಜರವರು ಸಚ್ಚಾರಿತ್ರಶೀಲರಾಗಿ ಮಹನೀಯರಾಗಿರುವ ಪ್ರಭುಗಳಾಗಿದ್ದಾರೆ. ಶ್ರೀಮನ್ಮಹಾರಾಜರವರು ಧರ್ಮಾತ್ಮರು. ನಾನು ಪ್ರತಿಯೊಬ್ಬರಿಂದಲೂ ಶ್ರೀಮನ್ಮಹಾರಾಜರವರ ಗುಣಕಥನವನ್ನೇ ಕೇಳಿದ್ದೇನೆ. ಶ್ರೀಮನ್ಮಹಾರಾಜರವರು ದಯಾಶೀಲರೂ, ಸಂತತವೂ ತಮ್ಮ ಪ್ರಜೆಗಳ ಶ್ರೇಯಸ್ಸಾಧನೆಯನ್ನೇ ಕುರಿತು ಚಿಂತಿಸುತ್ತಿರುವವರೂ ಆಗಿದ್ದಾರೆ"* ಎಂದು ಮುಕ್ತಕಂಠದಿಂದ ಶ್ಲಾಘಿಸಿದರು. ಸರ್ ಪ್ರಫುಲ್ಲ ಚಂದ್ರ ರಾಯ್ ಅವರು, ಸರ್ ಪಿ. ಎಸ್. ಶಿವಸ್ವಾಮಿ ಐಯರವರು, ರೈಟ್ ಆನರಬಲ್ ವಿ. ಎಸ್. ಶ್ರೀನಿವಾಸ ಶಾಸ್ತ್ರಿಗಳವರು ಮುಂತಾದವರೆಲ್ಲರೂ ಮಹಾಸ್ವಾಮಿಯವರ ಗುಣಕಥನ ಮಾಡಿದರು.

ರಜತಮಹೋತ್ಸವ ಕಾಲದಲ್ಲಿ ಮೈಸೂರು ಸಂಸ್ಥಾನದಲ್ಲಿದ್ದ ಶ್ರೀಮಾನ್ ಪಂಡಿತ ಮದನಮೋಹನ ಮಾಳವೀಯರವರು, "ಮೈಸೂರು ಸಂಸ್ಥಾನದ ಪ್ರಜೆಗಳಾದ ನೀವು ಸುಖಿಗಳು. ಸಮುದ್ರದ ಮಟ್ಟಕ್ಕಿಂತ ಎರಡು ಸಾವಿರ ಅಡಿಗಳಿಂದ ಮೂರು ಸಾವಿರ ಅಡಿಗಳಷ್ಟು ಎತ್ತರವಾಗಿದ್ದು, ಬಹಳ ಸೆಕೆಯೂ ಇಲ್ಲದೆ ಬಹಳ ಚಳಿಯೂ ಇಲ್ಲದೆ ಹಿತಕರವಾಗಿರುವ ವಾಯುಗುಣದಿಂದಲೂ ವಿಪುಲವಾದ ಪ್ರಾಕೃತಿಕ ಸಾಧನ ಸಂಪತ್ತುಗಳಿಂದಲೂ ಕೂಡಿರುವ ಇಷ್ಟು ಸೊಗಸಾದ ಸಂಸ್ಥಾನವನ್ನು ಪಡೆದಿರುವ ನೀವು ಸುಖಿಗಳು. ಈಗಿನ ಶ್ರೀಮನ್ಮಹಾರಾಜರವರನ್ನು ಪ್ರಭುಗಳಾಗಿ ಪಡೆದಿರುವುದರಿಂದಲೂ ನೀವು ಸುಕೃತಿಗಳಾದ ಸುಖಿಗಳು. ಶ್ರೀಮನ್ಮಹಾರಾಜರವರಲ್ಲಿ ಸಚ್ಚಾರಿತ್ರದ ಪರಿಶುದ್ಧ ಜೀವನದೊಡನೆ ಪ್ರಜೆಗಳ ಹಿತಸಾಧನೆಯ ತೀವ್ರಾಸಕ್ತಿಯೂ, ಶುದ್ಧವಾದ ಪೂರ್ವ

---

* "Mysoreans are doubly fortunate, firstly, Nature is kind and beautiful to them and their climate is fine and salubrious, Secondly, their Maharaja is a Ruler of great nobility of character. He is *Dharma*. I have heard from every one good accounts of the Maharaja. He is kind and always thinking of the good of his people."—Mahatma Gandhi.

ಸಂಪ್ರದಾಯ ಪ್ರೇಮ ಮತ್ತು ಅಚಲವಾದ ಸ್ವಧರ್ಮಾಭಿಮಾನಗಳೊಡನೆ ಆಧುನಿಕ ಪ್ರಗತಿ ಸಾಧನೆಯ ಆವಶ್ಯಕತೆಗಳೇನೆಂಬ ಪರಿಜ್ಞಾನವೂ ಅನ್ಯಮತ ಸಹಿಷ್ಣುತೆಯೂ ಸೇರಿರುವುದರಿಂದ ಅವರು ನರಪತಿಗಳಲ್ಲಿ ಗೌರವಾನ್ವಿತರೆನಿಸಿ ಶ್ರೇಷ್ಠರಾಗಿದ್ದಾರೆ. ಸಾಮರ್ಥ್ಯವಂತರನ್ನೇ ಆರಿಸಿ ಆರಿಸಿ ದಿವಾನ್ ಹುದ್ದೆಗೆ ನೇಮಕಮಾಡುತ್ತ ಬಂದಿರುವುದು, ಸಂಸ್ಥಾನದ ಆಡಳಿತವು ಅತ್ಯುತ್ತಮವಾಗಿ ನಡೆದು ಪ್ರಜೆಗಳ ಅಭ್ಯುದಯಕ್ಕೆ ಸಾಧಕವಾದ ಅನೇಕ ಏರ್ಪಾಡುಗಳಿಗೆ ಪ್ರೋತ್ಸಾಹವನ್ನಿತ್ತಿರುವುದು ಮತ್ತು ತಮ್ಮ ಪ್ರಜೆಗಳಲ್ಲಿ ಸಮಸ್ತ ವರ್ಗಗಳವರನ್ನೂ ನಿಷ್ಪಕ್ಷಪಾತ ದೃಷ್ಟಿಯಿಂದ ಪರಿಪಾಲಿಸುತ್ತಿರುವುದು — ಇವುಗಳ ದೆಸೆಯಿಂದ ಶ್ರೀಮನ್ಮಹಾರಾಜರವರು ಪ್ರಜೆಗಳ ಪ್ರೀತಿ ಕೃತಜ್ಞತೆಗಳಿಗೆ ಪಾತ್ರರಾಗಿರುವುದು ಯುಕ್ತವಾಗಿಯೇ ಇದೆ.... ಶ್ರೀಮನ್ಮಹಾರಾಜರವರು ಸಮರ್ಥರಾದವರನ್ನೇ ದಿವಾನ್ ಪದವಿಗೆ ನೇಮಕಮಾಡುತ್ತ ಬಂದಿರುವುದಕ್ಕೆ ವಿಪುಲವಾದ ಸತ್ಫಲವುಂಟಾಗಿ ಅವರ ಪ್ರಯತ್ನವು ಯಶಸ್ವಿಯಾಗಿದೆ. ಆದಕಾರಣ, ರಾಜ್ಯಾಡಳಿತವು ಈಗಿರುವಷ್ಟು ಮಟ್ಟಿಗೆ ಅತ್ಯುತ್ತಮ ಸ್ಥಿತಿಗೆ ಬಂದಿರುವುದರಲ್ಲಿ ಆಶ್ಚರ್ಯವೇನೂ ಇಲ್ಲ"* ಎಂದು ಮುಂತಾಗಿ ಹೇಳಿದರು.

೧೯೨೬ನೆಯ ಇಸವಿ ಮೇ ತಿಂಗಳು ೧ನೆಯ ತಾರೀಖಿನಿಂದಲೂ ಅಮಿನ್-ಉಲ್-ಮುಲ್ಕ್ ಸರ್ ಮಿರ್ಜಾ ಎಂ. ಇಸ್ಮಾಯಿಲ್, ಕೆ.ಸಿ.ಐ.ಇ., ಓ.ಬಿ.ಇ. ಅವರು ದಿವಾನ್ ಪದವಿಯನ್ನಲಂಕರಿಸಿ, ಸಂಸ್ಥಾನವನ್ನು ಸರ್ವತೋಮುಖವಾಗಿ ಅಭಿವೃದ್ಧಿಗೆ ತರುತ್ತಿದ್ದಾರೆ. ಉಜ್ವಲ ದೇಶಾಭಿಮಾನಿಗಳೂ, ಪ್ರಭುಭಕ್ತರೂ, ಜಗತ್ಪ್ರಸಿದ್ಧರಾದ ರಾಜನೀತಿ ಕೋವಿದರೂ, ವಿನಯಶೀಲರೂ ಆದ ಸರ್ ಮಿರ್ಜಾ ಎಂ. ಇಸ್ಮಾಯಿಲ್

---

* "You Mysoreans are a happy people. You are happy in having such a beautiful province, situated between two to three thousand feet above the sea level, neither very warm nor very cold, with a salubrious climate and great natural resources. You are also happy in having the present Maharaja as your King. His Highness' purity of private life combined with his deep solicitude for the welfare of his people, his genuine conservatism and firmness in his own faith combined with a full appreciation of the requirements of modern progress and unaffected religious toleration have marked him out for honour among the Rulers of Men. His wise choice in his selection of successive Dewans and his encouragement of numerous schemes for the best administration of the State and for the advancement of his people and His Highness' impartiality towards all sections of his subjects have rightly won for him the gratitude and affection of his people.... His Highness the Maharaja has been really happy in the choice of his successive Dewans and it is, therefore, not surprising that the administration of the State has attained its present excellence."—Pandit Madan Mohan Malaviya.

ರವರು ದಿವಾನ್ ಪದವಿಯನ್ನಲಂಕರಿಸಿರುವುದು ಸಂಸ್ಥಾನದ ಸುಯೋಗಗಳಲ್ಲೊಂದೆನ್ನಲು ಸಂದೇಹವೇ ಇಲ್ಲ. ಆಳಿದ ಮಹಾಸ್ವಾಮಿಯವರು

**ಅಮಿನ್-ಉಲ್-ಮುಲ್ಕ್ ಸರ್ ಮಿರ್ಜಾ ಎಂ. ಇಸ್ಮಾಯಿಲ್, ಕೆ.ಸಿ.ಐ.ಇ., ಓ.ಬಿ.ಇ. ಅವರು**

ಅವರಿಗೆ ೧೯೨೦ನೆಯ ಇಸವಿಯ ನವರಾತ್ರಿ ದರ್ಬಾರಿನಲ್ಲಿ (ಆಶ್ವಯುಜ ಶುದ್ಧ ಏಕಾದಶೀ ದಿನ) "ಅಮಿನ್-ಉಲ್-ಮುಲ್ಕ್" ಎಂಬ ಬಿರುದನ್ನು ದಯಪಾಲಿಸಿದರು. ಅವರಿಗೆ ೧೯೨೩ನೆಯ ಇಸವಿಯಲ್ಲಿ "ಓ.ಬಿ.ಇ." ಎಂಬ ಬಿರುದೂ, ೧೯೨೮ನೆಯ ಇಸವಿಯಲ್ಲಿ "ಸಿ.ಐ.ಇ" ಎಂಬ ಬಿರುದೂ, ೧೯೩೦ನೆಯ ಇಸವಿಯಲ್ಲಿ "ನೈಟ್ ಹುಡ್" ("ಸರ್") ಪ್ರಶಸ್ತಿಯೂ, ೧೯೩೬ನೆಯ ಇಸವಿಯಲ್ಲಿ "ಕೆ. ಸಿ. ಐ. ಇ." ಪ್ರಶಸ್ತಿಯೂ ಚಕ್ರವರ್ತಿ ಸಾರ್ವಭೌಮರಿಂದ ದೊರೆತುವು.

ಹಿಂದೆಯೇ ಸೂಚಿತವಾಗಿರುವಂತೆ ಅವರ ಪಿತಾಮಹರಾದ ಶ್ರೀಮಾನ್ ಆಲಿ ಆಸ್ಕರ್ ಅವರು ಶ್ರೀ ಮುಮ್ಮಡಿ ಕೃಷ್ಣರಾಜ ಒಡೆಯರವರ ಆಪ್ತವರ್ಗಕ್ಕೆ ಸೇರಿದವರಾಗಿದ್ದು ಕಮಿಷನ್ ಆಡಳಿತದಿಂದ ಸಂಸ್ಥಾನವು ಹಿಂದಕ್ಕೆ ಬರುವಂತೆ ಮಾಡುವ ಪ್ರಯತ್ನದಲ್ಲಿ ತ್ರಿಕರಣ ಶುದ್ಧವಾದ ಪ್ರಭುನಿಷ್ಠೆಯಿಂದ ಭಾಗವಹಿಸಿ ಸೇವೆಯನ್ನು ಸಲ್ಲಿಸಿದರು. ಸರ್ ಮಿರ್ಜಾ ಎಂ. ಇಸ್ಮಾಯಿಲ್‌ರವರ ತಂದೆಯವರು ಶ್ರೀ ಚಾಮರಾಜೇಂದ್ರ ಒಡೆಯರವರ ಮತ್ತು ಆಳಿದ ಮಹಾಸ್ವಾಮಿಯವರ ಅಂಗರಕ್ಷಕರಾಗಿದ್ದು ಪ್ರಭುಸೇವೆ ಮಾಡಿದರು. ಸರ್ ಮಿರ್ಜಾ ಎಂ. ಇಸ್ಮಾಯಿಲ್‌ರವರು, ಆಳಿದ ಮಹಾಸ್ವಾಮಿಯರಾದ ಶ್ರೀಮನ್ಮಹಾರಾಜರವರ ಸಹಪಾಠಿಗಳೂ ಸನ್ಮಿತ್ರರೂ ಆಗಿದ್ದು, ತಮ್ಮ ಯೋಗ್ಯತೆಯಿಂದ ಮಹಾಸ್ವಾಮಿಯವರ ಪೂರ್ಣಕೃಪೆಯನ್ನು ಗಳಿಸಿ, ಅನೇಕ ಹುದ್ದೆಗಳಲ್ಲಿದ್ದು ರಾಜಭಕ್ತಿಯಿಂದ ಸೇವೆಯನ್ನು ಸಮರ್ಪಿಸಿ, ಕೊನೆಗೆ ದಿವಾನ್ ಪದವಿಯನ್ನಲಂಕರಿಸಿದರು. ಅವರು ದಿವಾನ್ ಪದವಿಯನ್ನಲಂಕರಿಸಿದ ಸ್ವಲ್ಪ ಕಾಲದಲ್ಲಿಯೇ ೩೫ ಲಕ್ಷ ರೂಪಾಯಿಗಳ ಪೊಗದಿಯಲ್ಲಿ ಹತ್ತೂವರೆ ಲಕ್ಷ ರೂಪಾಯಿಗಳ ಭಾರಿ ಮೊತ್ತವು ಕಡಮೆಯಾಗಿ ಸಂಸ್ಥಾನಕ್ಕೆ ಶಾಶ್ವತ ಪ್ರಯೋಜನವುಂಟಾಯಿತು. ಈಚೆಗೆ ಆ ಪೊಗದಿಯ ಮೊಬಲಗಿನಲ್ಲಿ ೫ ಲಕ್ಷ ೩೯ ಸಾವಿರ ರೂಪಾಯಿಗಳು ಕಡಮೆಯಾಗಿವೆ. ಈ ಮೊಬಲಗು ಕಡಮೆಯಾಗುವಂತೆ ಮಾಡಿಕೊಳ್ಳುವುದಕ್ಕಾಗಿ ಪ್ರಯತ್ನಿಸಿದುದಕ್ಕಿಂತ ದ್ವಿಗುಣಿತವಾದ ಉತ್ಸಾಹಶ್ರದ್ಧೆಗಳಿಂದ, ಉಳಿದ

ಪೊಗದಿಯ ಭಾರವೂ ಹೋಗುವಂತೆ ಮಾಡುವುದಕ್ಕಾಗಿ ಅವರು ಈಗ ಪ್ರಯತ್ನಿಸುತ್ತಿದ್ದಾರೆ.

ಸರ್ ಮಿರ್ಜಾ ಎಂ. ಇಸ್ಮಾಯಿಲ್‌ರವರು ಬಹಳ ಧೈರ್ಯದಿಂದ ದೇಶಾಭ್ಯುದಯ ಸಾಧನೆಮಾಡುತ್ತ ಬಂದಿದ್ದಾರೆಂದು ಹೇಳಬಹುದು. ಹಿಂದೆ ಭದ್ರಾವತಿ ಕಬ್ಬಿಣದ ಕಾರ್ಖಾನೆಯಿಂದ ಪ್ರತಿ ವರ್ಷವೂ ನಷ್ಟವೇ ಸಂಘಟಿಸುತ್ತ ಬಂದುದನ್ನು ಕಂಡು ನಿರುತ್ಸಾಹಹೊಂದಿ ಕಾರ್ಖಾನೆಯನ್ನು ಮುಚ್ಚಿಯೇಬಿಡಬೇಕೆಂದು ಪ್ರಜೆಗಳ ಪ್ರತಿನಿಧಿಗಳು ಕೂಡ ಪ್ರಜಾಪ್ರತಿ ನಿಧಿ ಸಭೆಯೇ ಮುಂತಾದುವುಗಳ ಅಧಿವೇಶನಗಳಲ್ಲಿ ಒತ್ತಾಯವಾಗಿ ಅರಿಕೆಮಾಡುತ್ತ ಬಂದರು. ಆದರೂ ಸರ್ ಮಿರ್ಜಾ ಎಂ. ಇಸ್ಮಾಯಿಲ್ ರವರು ಎದೆಗುಂದಲಿಲ್ಲ. ಆಗಿನ ಸನ್ನಿವೇಶದಲ್ಲೇನೊ ನ್ಯಾಯವಾಗಿಯೇ ತೋರುತ್ತಿದ್ದ ಆ ಸಲಹೆಯಿಂದಲೂ ಮನಸೋಲದೆ ವಿಶೇಷ ಧೈರ್ಯದಿಂದ ವರ್ತಿಸಿ, ದೀರ್ಘಾಲೋಚನೆಯಿಂದಲೂ ದೂರದೃಷ್ಟಿಯಿಂದಲೂ ಕಾರ್ಖಾನೆಯನ್ನುಳಿಸಿ, ಅನೇಕ ಸಹಸ್ರಮಂದಿಗಳ ಜೀವನೋಪಾಯಕ್ಕೆ ಭಂಗ ಬಂದು ಹಾಹಾಕಾರವುಂಟಾಗುತ್ತಿದ್ದುದನ್ನು ಆ ಮೂಲಕ ತಪ್ಪಿಸಿದರು. ಭದ್ರಾವತಿ ಕಬ್ಬಿಣದ ಕಾರ್ಖಾನೆಗೆ ಸೇರಿದಂತೆ ಉಕ್ಕಿನ ಕಾರ್ಖಾನೆ, ಸಿಮೆಂಟ್‌ಕಾರ್ಖಾನೆ, ಕಾಗದದ ಕಾರ್ಖಾನೆ ಮುಂತಾದುವು ಗಳನ್ನು ಏರ್ಪಡಿಸಿ, ಮೈಸೂರು ಸಂಸ್ಥಾನದವರ ಕ್ರಿಯಾಶಕ್ತಿಯ ಕೀರ್ತಿ ಧ್ವಜವೋ ಎಂಬಂತಿರುವ ಆ ದೊಡ್ಡ ಕೈಗಾರಿಕೆಯು ಲಾಭದಾಯಕ ವಾಗುವಂತೆ ಕಾರ್ಯಕಲಾಪಗಳನ್ನನುಗೊಳಿಸಿದ ಖ್ಯಾತಿಯು ಅವರದು. ಕಳೆದ ಹದಿನಾಲ್ಕು ವರ್ಷಗಳಿಂದಲೂ ಮೈಸೂರು ಸಂಸ್ಥಾನದಲ್ಲಿ ನಡೆದಿರುವ ರಾಜ್ಯಾಡಳಿತ ವಿಚಕ್ಷಣೆಯನ್ನು ಸಮಾಲೋಚಿಸಿ ನೋಡಿದರೆ ಇಂತಹ ಅನೇಕ ನಿದರ್ಶನಗಳು ವ್ಯಕ್ತವಾಗುವುವು. ಈಗ್ಗೆ ಸ್ವಲ್ಪ ಕಾಲಕ್ಕೆ ಹಿಂದೆ ಲಾರ್ಡ್ ಸ್ಯಾಮ್ಯುಯಲ್‌ರವರು ಲಂಡನ್ ನಗರದಲ್ಲಿ ಮಾಡಿದ ಭಾಷಣದಲ್ಲಿ ಹೇಳಿದಂತೆ, "ಭರತಖಂಡದಲ್ಲಿ ಮಾತ್ರವಲ್ಲದೆ ಒಟ್ಟು ಬ್ರಿಟಿಷ್ ಚಕ್ರಾಧಿಪತ್ಯದಲ್ಲಿ ಕಂಡುಬರತಕ್ಕ ಅತ್ಯಂತ ಸಮರ್ಥ ರಾದ ಆಡಳಿತಗಾರರಲ್ಲೊಬ್ಬರಾದ ಸರ್ ಮಿರ್ಜಾ ಎಂ. ಇಸ್ಮಾಯಿಲ್‌ರನ್ನು ದಿವಾನ್ ಪದವಿಗೆ ನೇಮಕ ಮಾಡಿದುದೇ ಶ್ರೀಮನ್ಮಹಾರಾಜರವರ ವಿವೇಕಕ್ಕೂ ದೂರಾಲೋಚನೆಗೂ ಇರತಕ್ಕ ನಿದರ್ಶನಗಳಲ್ಲೊಂದು"* ಎಂಬ ಮಾತುಗಳು ಅಕ್ಷರಶಃ ನಿಜ. ಮುಂಬಯಿ ಪ್ರಾಂತದ ಕಾಂಗ್ರೆಸ್

* "... Incidentally, one example of his wisdom and his foresight has been the appointment as Dewan Saheb of Sir Mirza Ismail, undoubtedly one of the ablest adminstrators to be found, not only in India but anywhere within the bounds of the British Commonwealth." —Lord Samuel.

ಸಂಗಡದ ಸಚಿವರಾಗಿದ್ದ ಶ್ರೀಮಾನ್ ಬಿ. ಜಿ. ಖೇರರವರು, ಸರ್. ಮಿರ್ಜಾ ಎಂ. ಇಸ್ಮಾಯಿಲ್‌ರವರ ವ್ಯಕ್ತಿವೈಶಿಷ್ಟ್ಯವನ್ನೂ, ಉದಾರ ಭಾವನೆಯನ್ನೂ, ರಾಜಭಕ್ತಿಯನ್ನೂ ಮತ್ತು ಪ್ರಜಾಸೇವಾ ಬುದ್ಧಿಯನ್ನೂ ಕಂಡು ತಾವು ಮುಗ್ಧರಾದುದಾಗಿ ಹೇಳಿದರು.

ವಿದ್ಯೆಗೂ ಮೇಧಾಶಕ್ತಿಗೂ ಒಪ್ಪವಿಡುವ ಅಮೋಘಗುಣಗಳಾದ ದಯಾವಿನಯಗಳು ಸರ್ ಮಿರ್ಜಾ ಎಂ. ಇಸ್ಮಾಯಿಲ್‌ರವರ ವೈಶಿಷ್ಟ್ಯದಂತಿವೆ; ಇತರ ಹಲವು ಸದ್ಗುಣಗಳ ವಿಷಯದಲ್ಲಿರುವಂತೆಯೇ ಅವೆರಡರಲ್ಲಿ ಕೂಡ ಅವರು ಇತರರಿಗೆ ಆದರ್ಶಪ್ರಾಯರಾಗಿದ್ದಾರೆ. ತಮ್ಮ ದುರ್ದಶೆಗೊಳಗಾದ ದೀನಾನಾಥರ ವಿಚಾರದಲ್ಲಂತೂ ಅವರಿಗೆ ಬಹಳ ಅನುತಾಪ. ಚಿಕಿತ್ಸಾಲಯದ ಕಟ್ಟಡದ ಪ್ರವೇಶ ಮಹೋತ್ಸವವನ್ನು ನೆಥವೇರಿಸುವುದಕ್ಕಾಗಿ ಒಮ್ಮೆ ಅವರು ದೊಡ್ಡಬಳ್ಳಾಪುರಕ್ಕೆ ದಯಮಾಡಿಸುತ್ತಿದ್ದಾಗ ನೆಲಮಂಗಲದ ಬಳಿಯಲ್ಲಿ ಕೆಲವರು ಆದಿಕರ್ಣಾಟಕರು ಮೋಟಾರು ಬಂಡಿಯ ಬಳಿಗೆ ಬಂದು, ತಮ್ಮ ಗುಡಿಸಿಲುಗಳಿಗೆಲ್ಲ ಬೆಂಕಿ ಬಿದ್ದು ತಮ್ಮ ಬಟ್ಟೆಗಳೂ ಇತರ ಸಾಮಾನುಗಳೂ ಸುಟ್ಟುಹೋದುವೆಂದು ಅರಿಕೆಮಾಡಿದಾಗ ಅವರು ಪ್ರದರ್ಶಿಸಿದ ಸಹಾನುಭೂತಿಯನ್ನು ಕಂಡು ಅವರ ಕೋಮಲ ಹೃದಯವನ್ನು ಕೊಂಡಾಡದವರಿಲ್ಲ. ನಷ್ಟಕ್ಕೊಳಗಾಗಿದ್ದ ಆ ಬಡಪಾಯಿಗಳಿಗೆ ಆಗಬೇಕಾದ ಸಹಾಯಗಳನ್ನೆಲ್ಲ ತಾವೇ ಸೂಚಿಸಿ ಒಂದು ಕ್ಷಣವೂ ಆಲಸ್ಯವಿಲ್ಲದೆ ಅವು ನಡೆದುಹೋಗಬೇಕೆಂದು ಅವರು ಅಮಲ್ದಾರರಿಗೆ ಅಪ್ಪಣೆಮಾಡಿದುದನ್ನು ಕಂಡು, ಆ ಆದಿಕರ್ಣಾಟಕರಲ್ಲಿ ವೃದ್ಧನೊಬ್ಬನು ಅವರ ಕರುಣಾಪೂರಿತವಾದ ಮಾತುಗಳನ್ನು ಕೇಳಿ ಕಂಬನಿದುಂಬಿದನು. ಮೋಟಾರು ಬಂಡಿಯು ಮುಂದೆ ಹೊರಟ ಒಂದು ನಿಮಿಷಕಾಲ ಅವರು ಮೌನವಾಗಿ ಸುಮ್ಮನೆ ಕುಳಿತಿದ್ದು, "ಸರ್ಕಾರವೂ ಸರ್ಕಾರಿ ಅಧಿಕಾರಿಗಳೂ ಇರುವುದೇ ನಮ್ಮ ದೇಶಬಾಂಧವರಿಗೆ ಸಹಾಯ ಮಾಡುವುದಕ್ಕಲ್ಲವೆ? ಈ ದುಃಖಾರ್ತರಾದ ಬಡಪಾಯಿಗಳ ಸ್ಥಿತಿಯಲ್ಲಿ ನಾವೇ ಇದ್ದಂತೆ ಭಾವಿಸಿ ಸಾಧ್ಯವಿರುವಷ್ಟು ಮಟ್ಟಿನ ಸಹಾಯಗಳನ್ನೂ ಮಾಡಬೇಕಲ್ಲವೆ?" ಎಂದು ಕೇಳಿದರು. ಅದೇ ದಿನ ನಡೆದ ಮತ್ತೊಂದು ಘಟನೆಯಂತೂ, ಹೃದಯ ವೇಧಕವಾದುದೇ ಸರಿ: ಮಾರ್ಗದಲ್ಲೊಂದು ಕಡೆ ಅವರು ದೃಷ್ಟಿಸಿ ನೋಡಿ, "ಇಲ್ಲೊಬ್ಬ ಕುರುಡನು ಕುಳಿತು ದೇವರ ನಾಮಗಳನ್ನು ಹಾಡುತ್ತ ಹಣವನ್ನು ಕೇಳುತ್ತಿದ್ದನಲ್ಲವೆ? ಅವನೆಲ್ಲಿ?" ಎಂದು ಕೇಳಿದರು. ಅಧಿಕಾರಿಯವರೊಬ್ಬರು, ಅಲ್ಲಿಗೆ ಸ್ವಲ್ಪ ದೂರದಲ್ಲಿದ್ದ ಮತ್ತೊಂದು ರಸ್ತೆಯ ಬಳಿಯಲ್ಲಿರಬಹುದೆಂದು

ಉತ್ತರ ಹೇಳಿದರು. ಸರ್ ಮಿರ್ಜಾ ಎಂ. ಇಸ್ಮಾಯಿಲ್‌ರವರು ದೊಡ್ಡಬಳ್ಳಾಪುರದಿಂದ ಹಿಂತಿರುಗಿದಾಗ್ಗೆ ಆ ಕುರುಡನಿದ್ದ ಬಳಿಗೆ ಬೇರೆ ಮಾರ್ಗವಾಗಿ ಮೋಟಾರು ಬಂಡಿಯನ್ನು ಬಿಡಿಸಿ ಅವನಿಗೆ ಹಣ್ಣು ಗಳನ್ನೂ, ಹಣವನ್ನೂ, ಹೂವಿನ ಹಾರವನ್ನೂ ಕೊಟ್ಟು ಬೆಂಗಳೂರಿನ ಕಡೆಗೆ ಹೊರಟರು. ಅವುಗಳನ್ನು ತೆಗೆದುಕೊಂಡು ಅವನು ಹಿಗ್ಗಿದು ದನ್ನು ಕಂಡು ಅವರು ಮನನೊಂದು, ಮೋಟಾರು ಬಂಡಿಯು ಸ್ವಲ್ಪ ದೂರ ಹೋದಮೇಲೆ "ಪಾಪ! ಈ ಬಡಪಾಯಿ ಇವುಗಳನ್ನು ನೋಡುವ ಸ್ಥಿತಿಯಲ್ಲಿದ್ದರೆ ಇವನು ಇನ್ನೆಷ್ಟು ಹರ್ಷಿಸುತ್ತಿದ್ದನೋ!" ಎಂದು ನುಡಿದು ಮರುಕಪಟ್ಟರು. ಮಕ್ಕಳನ್ನು ಕಂಡರೆ ಅವರಿಗೆ ಪರಮಾದರ. ನಾನಾ ಸಭೆಗಳಲ್ಲಿ ಅವರಿಗೆ ಲಭಿಸುವ ಹಾರಗಳೂ, ತುರಾಯಿಗಳೂ, ಹಣ್ಣುಗಳೂ, ಬಾಲಕ ಬಾಲಕಿಯರಿಗೆ ಸೂರೆ. ಅವರು ಬೆಂಗಳೂರಿ ನಿಂದ ಇತರ ಸ್ಥಳಗಳಿಗೆ ಹೊರಡುವಾಗಲೆಲ್ಲ ಪೆಪ್ಪರ್ಮೆಂಟುಗಳು, ಚಾಕೊಲೆಟ್ಟುಗಳು ಮುಂತಾದ ಸಕ್ಕರೆ ಸಾಮಾನುಗಳನ್ನು ಯಥೇಷ್ಟ ವಾಗಿ ತೆಗೆಸಿಕೊಂಡುಹೋಗಿದ್ದು ಬಾಲಕ ಬಾಲಕಿಯರಿಗೆ ಪ್ರೀತ್ಯಾದರ ಗಳಿಂದ ಹಂಚುತ್ತಾರೆ.

ಸರ್ ಮಿರ್ಜಾ ಎಂ. ಇಸ್ಮಾಯಿಲ್‌ರವರ ದೇಶಾಭಿಮಾನವು ಉಜ್ಜ್ವಲ ವಾದುದೆಂಬುದು ಅವರ ಪ್ರತಿಯೊಂದು ಮಾತಿನಿಂದಲೂ, ಅವರ ಪ್ರತಿ ಯೊಂದು ಕಾರ್ಯದಿಂದಲೂ ವ್ಯಕ್ತವಾಗುತ್ತದೆ. ಮೈಸೂರು ಸಂಸ್ಥಾನದ ಪ್ರಜೆಗಳ ದೇಶಾಭಿಮಾನವು ಕಾರ್ಯರೂಪದಲ್ಲಿ ತೋರಿ ಬಂದು ಅವರೆಲ್ಲರೂ ಸಾಧ್ಯಕಂಡ ಮಟ್ಟಿಗೂ ಮೈಸೂರು ಸಂಸ್ಥಾನದಲ್ಲಿ ಒದಗುವ ವಸ್ತು ಗಳನ್ನೇ ಉಪಯೋಗಿಸಬೇಕೆಂಬುದು ಅವರ ಉದಾತ್ತವಾದ ಆಶಯ. ಮೈಸೂರು ಸಂಸ್ಥಾನವು ಭರತಖಂಡದಲ್ಲಿ ಮಾತ್ರವೇ ಅಲ್ಲದೆ, ಒಟ್ಟು ಪ್ರಪಂಚದಲ್ಲೇ ಮತ್ತಷ್ಟು ಹೆಚ್ಚು ಹೆಚ್ಚಿನ ಗಣ್ಯಸ್ಥಾನವನ್ನು ಪಡೆದು ಇನ್ನೂ ಸುಪ್ರಸಿದ್ಧವಾಗುವಂತೆ ಮಾಡಬೇಕೆಂಬುದು, ಸರ್ ಮಿರ್ಜಾ ಎಂ. ಇಸ್ಮಾಯಿಲ್‌ರವರ ತೀವ್ರಾಭಿಲಾಷೆ.

ಆಳಿದ ಮಹಾಸ್ವಾಮಿಯವರಾದ ಶ್ರೀಮನ್ಮಹಾರಾಜರವರ ಅನುಪಮವಾದ ಮೇಲ್ಪಂಕ್ತಿಯನ್ನೇ ಅನುಸರಿಸಿ, ಸ್ವಧರ್ಮಾಭಿಮಾನಿ ಗಳಾಗಿದ್ದೂ ಅನ್ಯಮತ ಸಹಿಷ್ಣುತೆಯನ್ನು ಪ್ರದರ್ಶಿಸುವುದು ಸರ್ ಮಿರ್ಜಾ ಎಂ. ಇಸ್ಮಾಯಿಲ್‌ರವರ ದೊಡ್ಡಗುಣಗಳಲ್ಲೊಂದು. ಅವರು, "ತನ್ನ ಮತಬಾಂಧವರಿಗಿಂತ ಅನ್ಯಮತ ಬಾಂಧವರ ಸೇವೆಯನ್ನಾವನು ಅಧಿಕವಾಗಿ ಸಲ್ಲಿಸುವನೋ ಅವನೇ ಭಗವಂತನನ್ನು ಹೆಚ್ಚಾಗಿ ಮೆಚ್ಚಿಸ

ತಕ್ಕವನೆಂಬುದು, ನನಗಿರುವ ಅಚಲವಾದ ನಂಬಿಕೆಯೆಂದು ವಿನೀತ ಭಾವದಿಂದ ಹೃತ್ಪೂರ್ವಕವಾಗಿ ನಾನು ಸೂಚಿಸಲಿಚ್ಛಿಸುವೆನು" ಎಂದು ಹೇಳಿರುವುದನ್ನು ಕೊಂಡಾಡದವರಾರು? ಒಂದು ಸಂದರ್ಭದಲ್ಲಿ ಅವರು ಒಂದು ಹಿಂದೂ ದೇವಾಲಯದಲ್ಲಿ ತಾವು ಮಂಗಳಾರತಿಯನ್ನು ಭಕ್ತಿಯಿಂದ ತೆಗೆದುಕೊಂಡುದಾಗಿ ಹೇಳಿದರು. ಅವರು ಮುಸಲ್ಮಾನರಾಗಿದ್ದೂ ಆ ರೀತಿ ಮಾಡಿದುದು ಆಶ್ಚರ್ಯಕರವೆಂದು ಸೂಚಿತವಾದುದಕ್ಕೆ ಪ್ರತ್ಯುತ್ತರವಾಗಿ ಅವರು, "ಹಾಗೆನ್ನಬೇಡಿ. ಅಷ್ಟು ಮಂದಿ ಹಿಂದುಗಳು ಅನೇಕ ತಲೆಮಾರುಗಳಿಂದ ಭಕ್ತಿಯಿಂದ ಆರಾಧಿಸುತ್ತ ಬಂದಿರುವ ಪ್ರಾಚೀನಕಾಲದ ಆ ದೇವಾಲಯದಲ್ಲಿ ಭಗವಂತನಿಲ್ಲವೆ? ಅಷ್ಟು ಜನರ ಪ್ರಾರ್ಥನೆಯೂ ವ್ಯರ್ಥವಾದೀತೆ?" ಎಂದರು.

ರಾಜನೀತಿ ನೈಪುಣ್ಯದಲ್ಲಿಯೂ, ಆಲೋಚನಾ ಸಾಮರ್ಥ್ಯದಲ್ಲಿಯೂ, ಆಡಳಿತ ನಿರ್ವಹಣದಲ್ಲಿಯೂ, ಸರ್ ಮಿರ್ಜಾ ಎಂ. ಇಸ್ಮಾಯಿಲ್‌ರವರು ಭರತಖಂಡದಲ್ಲಿ ಮಾತ್ರವೇ ಅಲ್ಲದೆ, ವಿದೇಶಗಳಲ್ಲಿ ಕೂಡ ಸುಪ್ರಸಿದ್ಧರಾಗಿದ್ದಾರೆ. ಪ್ರಖ್ಯಾತ ರಾಜನೀತಿಕೋವಿದರಾಗಿದ್ದ ಮಾರ್ಕ್ವಿಸ್ ಲೋಥಿಯನ್‌ರವರು, "ಸರ್ ಮಿರ್ಜಾ ಎಂ. ಇಸ್ಮಾಯಿಲ್‌ರವರು ನನಗೆ ಮೈಸೂರು ಸಂಸ್ಥಾನದಲ್ಲಿ ನೋಡತಕ್ಕ ಅನೇಕ ಸ್ಥಳಗಳನ್ನು ತೋರಿಸಿದರು. ಅವರು ನನಗೆ ಬಹುಕಾಲದ ಸ್ನೇಹಿತರು. ಲಂಡನ್ ನಗರದಲ್ಲಿ ನಡೆದ 'ರೌಂಡ್ ಟೇಬಲ್' ಸಮ್ಮೇಳನಗಳಲ್ಲಿ ಮೂರು ನಾಲ್ಕು ವರ್ಷಗಳೂ ನಾನಾ ಅಧಿವೇಶನಗಳಲ್ಲಿಯೂ ನಾನು ಅವರ ಪಾರ್ಶ್ವದಲ್ಲಿ ಅಥವಾ ಅವರಿಗೆ ಬಹಳ ಸಮೀಪದಲ್ಲಿ ಕುಳಿತಿರುತ್ತಿದ್ದೆ. ಚರ್ಚೆಯಲ್ಲಿ ಅವರಿಗಿರುವ ಸಾಮರ್ಥ್ಯವನ್ನು ಬಲ್ಲವನಾಗಿದ್ದೆ. ಆಲೋಚನೆ ಹೇಳುವುದರಲ್ಲಿ ಅವರಿಗಿರುವ ವಿವೇಕವನ್ನೂ ಬಲ್ಲವನಾಗಿದ್ದೆ. ಭರತಖಂಡಕ್ಕೆ ಸಂಬಂಧಪಟ್ಟ ವಿಚಾರಗಳಲ್ಲಿಯೂ, ರಾಜಕೀಯ ಸಂಬಂಧವಾದ ವಿಷಯಗಳಲ್ಲಿ ನಡೆಯಬೇಕಾದ ಕ್ರಮಗಳ ವಿಚಾರಗಳಲ್ಲಿಯೂ, ಅವರಿಗಿರುವ ತಿಳಿವಳಿಕೆಯನ್ನೂ ಸಹ ನಾನು ಬಲ್ಲವನಾಗಿದ್ದೆ. ಆದರೆ ಆಡಳಿತವನ್ನು ನಿರ್ವಹಿಸುವುದರಲ್ಲಿ ಸರ್ ಮಿರ್ಜಾ ಎಂ. ಇಸ್ಮಾಯಿಲ್‌ರವರ ಶಕ್ತಿಸಾಮರ್ಥ್ಯಗಳು ವಿಸ್ಮಯಕರವಾಗಿವೆಯೆಂಬುದು ಮಾತ್ರ ಮೈಸೂರು ಸಂಸ್ಥಾನಕ್ಕೆ ಹೋಗಿ ಪ್ರತ್ಯಕ್ಷವಾಗಿ ನೋಡುವವರೆಗೂ ನನಗೆ ತಿಳಿದಿರಲಿಲ್ಲ" ಎಂದು ಗ್ರಂಥವೊಂದರ ಇಸವಿಯಲ್ಲಿ ಹೇಳಿದ್ದಾರೆ. ಅಮೆರಿಕಾ ಖಂಡದವರೂ ಸುಪ್ರಸಿದ್ಧರಾದ ವಿದ್ವಾಂಸರೂ ಆದ ಡಾಕ್ಟರ್ ಎಸ್. ರಾಲ್ಫ್ ಹಾರ್ಲೊ ಅವರು ತಮ್ಮ ಧರ್ಮಪತ್ನಿಯವರೊಡನೆ ಮೈಸೂರು ಸಂಸ್ಥಾನಕ್ಕೆ ಬಂದು ಇಲ್ಲಿಯ

ವಿದ್ಯಮಾನಗಳನ್ನು ಪರಿಶೀಲಿಸಿ ಹೊರಟುಹೋದ ಮೇಲೆ ತಮ್ಮ ಮಿತ್ರ ರೊಬ್ಬರಿಗೆ ಬರೆದ ಪತ್ರದಲ್ಲಿ, "ಮೈಸೂರು ಸಂಸ್ಥಾನದಲ್ಲಿ ಕೈಗಾರಿಕೆ, ಸಮಾಜ ಸಂಸ್ಕರಣ ಮತ್ತು ವಿದ್ಯಾಭ್ಯಾಸ—ಇವುಗಳ ಸಂಬಂಧವಾಗಿ ಸಾಧಿಸಿರುವ ಮಹತ್ತರವಾದ ಕಾರ್ಯಸಿದ್ಧಿಗಳ ಜೊತೆಗೆ ಕಲಾ ಮತ್ತು ಸೌಂದರ್ಯ ವಿಭವ ಸಾಧನೆಯೂ ಅದ್ಭುತ ರೀತಿಯಲ್ಲಿ ನಡೆದಿರುವ ವಿಷಯವನ್ನು ಅಮೆರಿಕಾ ಖಂಡದಲ್ಲಿ ಪ್ರಚುರಗೊಳಿಸುವುದು ನಮ್ಮ ಅತ್ಯವಶ್ಯ ಕರ್ತವ್ಯವೆಂಬ ಭಾವನೆಯೊಡನೆ ನಾವು ತೆರಳುತ್ತಿದ್ದೇವೆ. ಕೃಷ್ಣರಾಜಸಾಗರದ ಬಳಿಯ ಬೃಂದಾವನವೆಂಬ ಉದ್ಯಾನದೊಡನೆಯೂ ಮತ್ತು ಜಲಧಾರಾ ಯಂತ್ರಗಳೊಡನೆಯೂ ವರ್ಸೇಲ್ಸ್ ನಗರದ ವುಗಳನ್ನುಕೂಡ ಹೋಲಿಸುವುದು ಸಾಧ್ಯವಿಲ್ಲ" ಎಂದು ಹೇಳಿದ್ದಾರೆ.

ಮೈಸೂರು ಸಂಸ್ಥಾನದ ಮುಖ್ಯ ಭಾಷೆಯೂ, ಮಹಾರಾಜ ಮನೆತನದ ಮಾತೃಭಾಷೆಯೂ ಆದ ಕನ್ನಡ ಭಾಷೆಯಲ್ಲಿ ಸರ್ ಮಿರ್ಜಾ ಎಂ. ಇಸ್ಮಾಯಿಲ್‌ರವರಿಗಿರುವ ಅಭಿಮಾನವು ಸ್ತೋತ್ರಾರ್ಹವಾದುದು. ಚನ್ನರಾಯಪಟ್ಟಣದ ಕರ್ಣಾಟಕ ಸಂಘದವರು ಒಪ್ಪಿಸಿದ ಬಿನ್ನವತ್ತಳೆಗೆ ಪ್ರತ್ಯುತ್ತರವಾಗಿ ಅವರು ಅಪ್ಪಣೆ ಕೊಡಿಸಿದ ಭಾಷಣದಲ್ಲಿಯೂ, ಇತರ ಕೆಲವು ಭಾಷಣಗಳಲ್ಲಿಯೂ ಅಭಿನಂದನ ಯೋಗ್ಯವಾಗಿರುವ ರೀತಿಯಲ್ಲಿ ಕನ್ನಡ ಭಾಷೆಯ ಮೇಲಿನ ಮತ್ತು ಕನ್ನಡ ಪತ್ರಿಕೆಗಳ ಮೇಲಿನ ಪ್ರೀತಿ ಮಮತೆಗಳನ್ನು ವ್ಯಕ್ತಗೊಳಿಸಿದ್ದಾರೆ. ಕನ್ನಡ ಸಾಹಿತ್ಯ ಪರಿಷತ್ತಿಗೂ ಅವರಿಂದ ಹೆಚ್ಚು ಪ್ರೋತ್ಸಾಹವು ದೊರೆತಿದೆ. ಪರಿಷತ್ತಿನ ಕಟ್ಟಡಕ್ಕಾಗಿ ಮೊದಲು ಕೊಟ್ಟಿದ್ದ ನಿವೇಶನವು ಪ್ರಶಸ್ತವಾಗಿಲ್ಲದೆ ಪ್ರಾಮುಖ್ಯವಲ್ಲದ ಸ್ಥಾನದಲ್ಲಿದ್ದುದನ್ನು ಕಂಡು ಅವರು, "ನಮ್ಮ ಶ್ರೀಮನ್ಮಹಾರಾಜರವರ ಮಾತೃಭಾಷೆಯಾಗಿರುವ ಕನ್ನಡ ಭಾಷೆಯ ದೇವತಾಮಂದಿರಕ್ಕೆ ಈ ಸ್ಥಳದಲ್ಲಿ ಇಷ್ಟು ಚಿಕ್ಕ ನಿವೇಶನವೆ?" ಎಂದರು. ಪರಿಷತ್ತಿನ ಕಟ್ಟಡವಿರುವ ಈಗಿನ ಸೊಗಸಾದ ನಿವೇಶನವು ಲಭಿಸಿದುದು ಅವರ ಕೃಪೆಯ ಪರಿಣಾಮವಾಗಿಯೇ.

ಸರ್ ಮಿರ್ಜಾರವರ ಸೌಂದರ್ಯ ಪ್ರೇಮವು ಅಗಾಧವಾದುದು. ಅವರು ೧೯೧೪ನೆಯ ಇಸವಿಯಲ್ಲಿ ಅಸಿಸ್ಟೆಂಟ್ ಸೆಕ್ರೆಟರಿಯವರಾಗಿ ಅರಮನೆಯಲ್ಲಿ ಕೆಲಸ ಮಾಡಲುಪಕ್ರಮಿಸಿದ ಕಾಲದಿಂದಲೂ ಮೈಸೂರು ನಗರವನ್ನು ಅಭಿವೃದ್ಧಿಗೊಳಿಸಿ ಅದರ ಸೌಂದರ್ಯವನ್ನು ಹೆಚ್ಚಿಸುವ ಕಾರ್ಯದಲ್ಲಿ ಆಳಿದ ಮಹಾಸ್ವಾಮಿಯವರು ಅವರನ್ನು ನಿಯೋಜಿಸಿ ಕಾಲಕಾಲಕ್ಕೆ ತಕ್ಕ ಸಲಹೆಗಳನ್ನು ದಯಪಾಲಿಸುತ್ತ ಬಂದರು. ಆಳಿದ

ಮಹಾಸ್ವಾಮಿಯವರು ೧೯೦೨ನೆಯ ಇಸವಿಯಲ್ಲಿ ರಾಜ್ಯಭಾರ ಸೂತ್ರ ಗಳನ್ನು ಸ್ವೀಕರಿಸಿದೊಡನೆಯೇ ಆಗ್ಗೆ ಪ್ರೈವೇಟ್ ಸೆಕ್ರೆಟರಿಯವರಾಗಿದ್ದ ಶ್ರೀಮಾನ್ ಇವ್ಯಾನ್ ಮೆಕಾನಿಕಿಯವರ ಸಲಹೆಯಂತೆ ಮೈಸೂರು ನಗರವನ್ನು ಉತ್ತಮಗೊಳಿಸುವುದಕ್ಕಾಗಿ ಒಂದು ಸಮಿತಿಯನ್ನು ನೇಮಕ ಮಾಡಿದರು. ಆ ಸಮಿತಿಯವರ ವರದಿಯು ಸಮರ್ಪಿತವಾದನಂತರ ನಗರಾಭಿವೃದ್ಧಿ ಕಾರ್ಯಗಳಿಗಾಗಿ ಕಾರ್ಯನಿರ್ವಾಹಕ ಮಂಡಲಿ ಯೊಂದನ್ನು ("ಇಂಪ್ರುವ್ಮೆಂಟ್ ಟ್ರಸ್ಟ್") ನೇಮಕ ಮಾಡಿ ನಾನಾ ಅಭಿವೃದ್ಧಿಕಾರ್ಯಗಳೂ ನೆರವೇರಲು ಮಹಾಪ್ರಭುಗಳವರು ಅವಕಾಶ ವನ್ನು ಕಲ್ಪಿಸಿದರು. ಆಗಿನಿಂದಲೂ ನಡೆಯುತ್ತಿದ್ದ ನಗರಾಭಿವೃದ್ಧಿ ಕಾರ್ಯಗಳು, ಆ ಕಾರ್ಯನಿರ್ವಾಹಕ ಮಂಡಲಿಗೆ ಸರ್ ಮಿರ್ಜಾ ಎಂ. ಇಸ್ಮಾಯಿಲ್‌ರವರು ಅಧ್ಯಕ್ಷರಾದಮೇಲೆ ವಿಶೇಷವಾಗಿ ಹೆಚ್ಚಿದುವು. ಆಳಿದ ಮಹಾಸ್ವಾಮಿಯವರ ಆಜ್ಞೆಗಳಿಗನುಸಾರವಾಗಿ ವಿಶಾಲತರವಾದ ನೇರವಾದ ಮತ್ತು ಸುಗಮವಾದ ಸಂಚಾರ ಮಾರ್ಗಗಳು ಏರ್ಪಟ್ಟುವು; ಸುಂದರವಾದ ಉದ್ಯಾನಗಳು ನಿರ್ಮಿತವಾದುವು; ಜನಸಾಂದ್ರತೆಯು ತಪ್ಪಿ ಆರೋಗ್ಯಕರವಾದ ಸನ್ನಿವೇಶವು ಕಲ್ಪಿತವಾಗಲನುಕೂಲಿಸುವಂತೆ ಲಕ್ಷ್ಮೀಪುರ ಮುಂತಾದ ಉಪನಗರಗಳ ವ್ಯವಸ್ಥೆಯು ನಡೆಯಿತು; ರಮ್ಯವಾಗಿರುವ ಕಟ್ಟಡಗಳು ನಿರ್ಮಿತವಾದುವು; ಮನೋಹರವಾದ ದೀಪಮಾಲೆಗಳು ಏರ್ಪಟ್ಟುವು; ಮೈಸೂರು ನಗರವು "ಉದ್ಯಾನ ನಗರಿ" ಎಂಬ ಶ್ಲಾಘನೆಗೆ ಪಾತ್ರವಾಯಿತು. ಸರ್ ಮಿರ್ಜಾ ಎಂ. ಇಸ್ಮಾಯಿಲ್ ರವರು ದಿವಾನ್ ಪದವಿಯನ್ನಲಂಕರಿಸಿದ ಮೇಲೆ ಬಹು ಮುಖ್ಯವಾದ ನಗಾರಾಭಿವೃದ್ಧಿ ಕಾರ್ಯಗಳು ನೆರವೇರಿ ಬೆಂಗಳೂರು ಮೈಸೂರು ನಗರ ಗಳೆರಡೂ ಶೃಂಗಾರದ ಆಗರಗಳಾಗಿ ಶೋಭಿಸುತ್ತಿವೆ. ಮದರಾಸು ಮುಂತಾದ ನಗರಗಳವರು ಕೂಡ ಬೆಂಗಳೂರು ಮೈಸೂರು ನಗರಗಳಲ್ಲಿ ನಡೆದಿರುವ ಅಭಿವೃದ್ಧಿ ಕಾರ್ಯಗಳನ್ನು ತಮ್ಮಿಂದ ಸಾಧ್ಯವಿರುವ ಮಟ್ಟಿಗೆ ಅನುಕರಿಸಲು ತೀವ್ರಾಭಿಲಾಷೆಪಡುತ್ತಿದ್ದಾರೆ. ಆಳಿದ ಮಹಾಸ್ವಾಮಿ ಯವರ ಮತ್ತು ಸರ್ ಮಿರ್ಜಾ ಎಂ. ಇಸ್ಮಾಯಿಲ್‌ರವರ ಸೌಂದರ್ಯ ಪ್ರೇಮದ ಉತ್ತಮ ನಿದರ್ಶನಗಳಲ್ಲೊಂದು, ಕೃಷ್ಣರಾಜಸಾಗರದ ಹಿಂದೆ ಪರಿಶೋಭಿಸುತ್ತಿರುವ "**ಬೃಂದಾವನ**". ಅದರ ಸೌಂದರ್ಯವನ್ನು ನೋಡಿ ಹೋಗಲು ಪ್ರತಿ ವರ್ಷವೂ ಸ್ವದೇಶೀಯರೂ ವಿದೇಶೀಯರೂ ಒಟ್ಟು ಎರಡು ಲಕ್ಷ ಮಂದಿಗಳು ಅಲ್ಲಿಗೆ ಬರುತ್ತಾರೆ. ಸೌಂದರ್ಯಪ್ರೇಮ ದಿಂದ ನಿರ್ಮಿತವಾಗಿರುವ "ಬೃಂದಾವನ"ದಿಂದ ಸರ್ಕಾರಕ್ಕೆ ಹೇರಳವಾಗಿ

ಹುಟ್ಟುವಳಿಯೂ ಬರುತ್ತಿದೆ. **ಮಾರ್ಕ್ವಿಸ್ ಲೋಥಿಯನ್**‌ರವರು ಸಂಸ್ಥಾನದ ಕೈಗಾರಿಕೆಗಳೇ ಮುಂತಾದುವುಗಳನ್ನೂ "ಬೃಂದಾವನ"ದ ಸೊಬಗನ್ನೂ ಪ್ರಸ್ತಾವಿಸಿ, "ಸರ್ ಮಿರ್ಜಾ ಎಂ. ಇಸ್ಮಾಯಿಲ್‌ರವರೂ ಅವರ ಸಹೋದ್ಯೋಗಿಗಳೂ ಮೈಸೂರು ಸಂಸ್ಥಾನದಲ್ಲಿ ಕೈಗಾರಿಕೆಗಳ ಮೇಲೆ ಕೈಗಾರಿಕೆಗಳಿಗೆ ಒತ್ತಾಸೆ ಕೊಟ್ಟು ನಡೆಯಿಸಿಕೊಂಡುಬಂದಿದ್ದಾರೆ. ವಿದ್ಯುಚ್ಛಕ್ತಿಯನ್ನು ಉತ್ಪತ್ತಿಮಾಡುವ ಯಂತ್ರಗಳಲ್ಲಿ ನಾನು ನೋಡಿರ ತಕ್ಕ ಅದ್ಭುತವಾದ ಯಂತ್ರಗಳ ಗುಂಪಿಗೆ ಶಿವನ ಸಮುದ್ರದಲ್ಲಿರುವ ಯಂತ್ರಗಳೂ ಸೇರಿವೆ. ರೇಷ್ಮೆ ಕಾರ್ಖಾನೆಗಳಿವೆ; ಮತ್ತು ಇತರ ಕೈಗಾರಿಕೆಗಳು ಏರ್ಪಟ್ಟಿವೆ. ನಗರಾಭಿವೃದ್ಧಿಯ ರೀತಿ ರಚನೆಗಳೂ ಶೃಂಗಾರವೂ ಭರತಖಂಡದಲ್ಲಾಗಲಿ ಅಥವಾ ಇಂಗ್ಲೆಂಡಿನಲ್ಲಾಗಲಿ ನಾನು ಇತರ ಸ್ಥಳಗಳಲ್ಲಿ ಕಂಡಿರುವಷ್ಟೇ ಉತ್ತಮವಾಗಿವೆ; ಅವು ಇನ್ನೂ ಉತ್ತಮವಾಗಿವೆಯೆಂದು ಹೇಳಿದರೂ ಹೇಳಬಹುದು. ಪ್ರಾಚೀನ ದೇವಾಲಯಗಳ ಶಿಲೆಗಳು ಕೆಡದಂತೆ ರಕ್ಷಿಸುವ ಭಾಗದಲ್ಲಿ ಶಾಸನದ ಇಲಾಖೆಯವರು ನಡೆಯಿಸಿರುವ ಕೆಲಸವು ಶ್ಲಾಘ್ಯವಾಗಿ ಅಸಾಧಾರಣವಾಗಿದೆ. ಜನರು ಉಲ್ಲಾಸಕ್ಕಾಗಿ ಒಟ್ಟಿಗೆ ಸೇರುವ ನಮ್ಮ ದೇಶಗಳ 'ಲೀಡೋ' ಎಂಬ ವಿಹಾರ ಸ್ಥಾನಗಳು ಹಲವು ಸಂದರ್ಭಗಳಲ್ಲಿ ಕೀಳು ವ್ಯಾಪಾರಗಳಿಗೆ ಅವಕಾಶ ಕೊಡುವುದುಂಟು. ಅಂತಹದೊಂದಕ್ಕೂ ಅವಕಾಶವಿಲ್ಲದಂತೆ ಈ ಬಗೆಯ ವಿಹಾರ ಸ್ಥಾನವನ್ನು ಹೇಗೆ ಏರ್ಪಡಿಸಿ ಹೇಗೆ ನಡೆಯಿಸಿಕೊಂಡುಬರಬೇಕೆಂಬ ವಿಚಾರದಲ್ಲಿ ಮೈಸೂರು ಸಂಸ್ಥಾನದವರು 'ಬೃಂದಾವನ' ಮುಂತಾದವುಗಳ ಮೂಲಕ **ಪ್ರಪಂಚಕ್ಕೇ ಮಾದರಿಯನ್ನು** ತೋರಿಸಿದ್ದಾರೆ. 'ಬೃಂದಾವನ'ದ ಉದ್ಯಾನವೂ ಜಲಧಾರಾ ಯಂತ್ರ ಸಾಧನಗಳೂ ಪ್ರಪಂಚದಲ್ಲೇ ಅತ್ಯಂತ ಸುಂದರವಾಗಿಯೂ ಚಿತ್ತಾಕರ್ಷಕವಾಗಿಯೂ ಇವೆ. 'ಮಾದರಿ ಸಂಸ್ಥಾನ'ವೆಂಬ ಹೆಸರನ್ನು ಪಡೆಯಲು ಮೈಸೂರು ಸಂಸ್ಥಾನಕ್ಕೆ ನಿಜವಾಗಿಯೂ ಅರ್ಹತೆಯುಂಟು. ಭರತಖಂಡದ ಸಂಸ್ಥಾನಗಳಲ್ಲೊಂದಾದ ಮೈಸೂರು ಸಂಸ್ಥಾನದಲ್ಲಿ—ಶ್ರೀಮನ್ಮಹಾರಾಜರವರ ನೇತೃತ್ವದಲ್ಲಿ—ಅಸಾಧಾರಣ ಸಾಮರ್ಥ್ಯವುಳ್ಳ ದಿವಾನ್‌ರವರ ವಿಚಕ್ಷಣೆಯ ಆಡಳಿತದಲ್ಲಿ—ಏನೇನು ನಡೆಯುತ್ತಿದೆಯೆಂಬುದನ್ನು ನೋಡಿದುದೇ ನನ್ನದೊಂದು ಸುಯೋಗ" ಎಂದು ಶ್ಲಾಘಿಸಿದ್ದಾರೆ. ಮುಂಬಯಿ ಪ್ರಾಂತದಲ್ಲಿ ಕಾಂಗ್ರೆಸ್ ಪಂಗಡದ ಮುಖ್ಯ ಸಚಿವರಾಗಿದ್ದ ಶ್ರೀಮಾನ್ ಬಿ. ಜಿ. ಖೇರರವರು 'ಬೃಂದಾವನ'ದ ದೃಶ್ಯವು ಮನಮೋಹಕವಾದುದೆಂದೂ, ಅದ್ಭುತವಾದುದೆಂದೂ, ಆನಂದ

ದಾಯಕವಾದುದೆಂದೂ, ಆಶ್ಚರ್ಯಕರವಾದುದೆಂದೂ, ಅದನ್ನು ಎಷ್ಟು ನೋಡಿದರೂ ತೃಪ್ತಿಯಾಗದೆಂದೂ ಹೇಳಿದ್ದಾರೆ. ಅಮೆರಿಕಾ ಖಂಡದಿಂದ ಬಂದಿದ್ದ—ಪ್ರಪಂಚದಲ್ಲೇ ಪ್ರಖ್ಯಾತರಾದ ವಿದ್ವಾಂಸರಲ್ಲೊಬ್ಬರಾದ—ಡಾಕ್ಟರ್ ಎಸ್. ರಾಲ್ಫ್ ಹಾರ್ಲೋರವರು 'ಬೃಂದಾವನ'ದ ಸುಂದರ ದೃಶ್ಯವು ವಾರ್ಸೇಲ್ಸ್ ನಗರದ ಸುಂದರ ದೃಶ್ಯವನ್ನು ಮೀರಿಸಿದೆ ಯೆಂದು ಹೇಳಿದ್ದಾರೆ.* ಇಂಡಿಯಾ ಸರ್ಕಾರದ ಸಚಿವರಲ್ಲೊಬ್ಬರಾದ ಆನರಬಲ್ ಸರ್ ಎ. ರಾಮಸ್ವಾಮಿ ಮುದಲಿಯಾರರು 'ಬೃಂದಾವನ'ವು ಭೂಲೋಕದ ಸ್ವರ್ಗೋದ್ಯಾನವೋ—ಎಂಬಂತೆ ರಮಣೀಯ ವಾಗಿದೆಯೆಂದು ಶ್ಲಾಘಿಸಿದ್ದಾರೆ. ಪ್ರಪಂಚದ ಪ್ರಖ್ಯಾತ ವಿಜ್ಞಾನ ಸಂಶೋಧಕರಲ್ಲೊಬ್ಬರಾದ ಪ್ರೊಫೆಸರ್ ರಾಬರ್ಟ್ ಎ. ಮಿಲಿಕನ್ ಎಂಬ ಮಹಾಶಯರು 'ಬೃಂದಾವನ'ದಲ್ಲಿ ಇಂದ್ರಜಾಲ ನಿರ್ಮಿತವಾಗಿದ್ದಂತೆ ಶೋಭಿಸುತ್ತಿರುವಂತಹ ಸುಂದರದೃಶ್ಯವನ್ನು ತಾವು ಮತ್ತೆಲ್ಲಿಯೂ ಕಂಡುದಿಲ್ಲವೆಂದು ಕೊಂಡಾಡಿದ್ದಾರೆ.

**ರಜತ ಮಹೋತ್ಸವ ದಿಂದೀಚಿನ ರಾಜ್ಯ ಭಾರ ವೈಖರಿ**

ಆಳಿದ ಮಹಾಸ್ವಾಮಿಯವರಾದ ಶ್ರೀಮನ್ಮಹಾರಾಜರವರು ಅರವತ್ತೈದು ಲಕ್ಷಗಳಿಗಿಂತಲೂ ಅಧಿಕ ಸಂಖ್ಯೆಯ ಪ್ರಜೆಗಳನ್ನೂ ಮಕ್ಕಳಂತೆ ಪ್ರೀತಿವಾತ್ಸಲ್ಯಗಳಿಂದ ಪರಿಪೋಷಿಸಿ, ಭಾರತೀಯ ಸಂಸ್ಕೃತಿಯಲ್ಲಿಯೂ ಪಾಶ್ಚಾತ್ಯ ಸಂಸ್ಕೃತಿಯಲ್ಲಿಯೂ ಅಡಕವಾಗಿರುವ ರಾಜನೀತಿ ಕೌಶಲ್ಯದ ಉತ್ತಮೋತ್ತಮ ತತ್ತ್ವಗಳಿಗನುಸಾರ ವಾಗಿ ರಾಜ್ಯಭಾರಮಾಡಿ, ಪ್ರಜೆಗಳ ಸುಖ ಸಂತೋಷಗಳು ವೃದ್ಧಿಯಾಗುವಂತೆ ದಿನದಿನವೂ ಅವಕಾಶವನ್ನು ಹೆಚ್ಚಿಸಿ, ಮೈಸೂರು ಸಂಸ್ಥಾನದ ಕೀರ್ತಿ ಗೌರವಗಳು ಏಕಪ್ರಕಾರವಾಗಿ ವೃದ್ಧಿಹೊಂದುವಂತೆ ಮಾಡಿದರು.

ಆಯವ್ಯಯಗಳ ವಿತರಣೆಗಳನ್ನು ನೋಡಿದರೇ ಆಳಿದ ಮಹಾಸ್ವಾಮಿ ಯವರ ರಾಜ್ಯಭಾರದ ದಕ್ಷತೆಯೂ ವಿಚಕ್ಷಣೆಯೂ ವ್ಯಕ್ತವಾಗುತ್ತವೆ. ಅವರು ರಾಜ್ಯಭಾರವನ್ನು ಸ್ವೀಕರಿಸಿದಾಗ್ಗೆ ಸಂಸ್ಥಾನದ ಹುಟ್ಟುವಳಿಯು ಎರಡು ಕೋಟಿ ರೂಪಾಯಿಗಳಾಗಿದ್ದುದು, ನಾಲ್ಕು ಕೋಟಿ ಮೂವ ತ್ತೊಂಬತ್ತು ಲಕ್ಷ ರೂಪಾಯಿಗಳಿಗೆ ಹೆಚ್ಚಿತು. ಆಗ್ಗೆ ವಿದ್ಯಾಭ್ಯಾಸಕ್ಕಾಗಿ ಆರು ಲಕ್ಷ ರೂಪಾಯಿಗಳು ವೆಚ್ಚವಾಗುತ್ತಿದ್ದುದಕ್ಕೆ ಅವರ ರಾಜ್ಯಭಾರವು ಮುಕ್ತಾಯವಾದ ವೇಳೆಗೆ ವಿಶ್ವವಿದ್ಯಾನಿಲಯದ ವೆಚ್ಚವೂ ಸೇರಿ ಸುಮಾರು

* "More beautiful than Versailles."—Dr. S. Ralph Harlow.

ಅರವತ್ತು ಲಕ್ಷ ರೂಪಾಯಿಗಳು ವೆಚ್ಚವಾಗುವಂತಾಯಿತು. ವೈದ್ಯ ಶಾಖೆಯ ವೆಚ್ಚವು ನಾಲ್ಕುಪಾಲು ಅಧಿಕವಾಯಿತು. ಸಾರ್ವಜನಿಕ ಕಟ್ಟಡಗಳು, ಸೇತುಗಳು, ಸಂಚಾರ ಮಾರ್ಗಗಳು ಮುಂತಾದುವು ಗಳಿಗಾಗಿ ಇಪ್ಪತ್ತೇಳು ಲಕ್ಷ ರೂಪಾಯಿಗಳು ವೆಚ್ಚವಾಗುತ್ತಿದ್ದುದಕ್ಕೆ ಇನ್ನೂ ಅನೇಕ ಲಕ್ಷ ರೂಪಾಯಿಗಳು ಹೆಚ್ಚಾಗಿ ವೆಚ್ಚವಾಗುವಂತಾಯಿತು.

ಆಳಿದ ಮಹಾಸ್ವಾಮಿಯವರು ಲೇಶಮಾತ್ರವೂ ಭೇದವೆಣಿಸದ ನಿಷ್ಪಕ್ಷಪಾತ ದೃಷ್ಟಿಯಿಂದ ಪ್ರಜೆಗಳಲ್ಲಿ ಸಮಸ್ತ ಜಾತಿ ಮತ ಪಂಗಡಗಳ ವರಿಗೂ ನ್ಯಾಯವನ್ನು ದೊರೆಯಿಸುತ್ತಿದ್ದರು. ೧೯೧೮ನೆಯ ಇಸವಿ ಜೂನ್ ತಿಂಗಳು ೧೮ನೆಯ ತಾರೀಖಿನ ದಿನ ಬ್ರಾಹ್ಮಣೇತರ ಪಂಗಡಗಳ ಮತ್ತು ಮುಸಲ್ಮಾನ್ ಪಂಗಡಗಳ ಕೆಲವು ಮಂದಿ ದೊಡ್ಡಮನುಷ್ಯರು ಮಹಾಸ್ವಾಮಿಯವರನ್ನು ಅರಮನೆಯಲ್ಲಿ ಸಂದರ್ಶಿಸಿ ಸರ್ಕಾರಿ ಉದ್ಯೋಗಗಳಲ್ಲಿ ಬ್ರಾಹ್ಮಣ ಪಂಗಡದವರು ಬಹಳ ಮಂದಿಗಳಿದ್ದರೆಂದೂ, ಬ್ರಾಹ್ಮಣೇತರರಿಗೂ ಮುಸಲ್ಮಾನ್ ಪಂಗಡದವರಿಗೂ ಹೆಚ್ಚು ಸಂಖ್ಯೆಯ ಸರ್ಕಾರಿ ಉದ್ಯೋಗಗಳನ್ನು ಕೊಡಿಸುವದೇ ಮುಂತಾದ ಕೆಲವು ಸೌಕರ್ಯ ಗಳನ್ನು ದೊರೆಯಿಸಿಕೊಡಬೇಕೆಂದೂ ವಿಜ್ಞಾಪಿಸಿಕೊಂಡರು. ಆಗ ಮಹಾಪ್ರಭುಗಳವರು ದಯಪಾಲಿಸಿದ ಪ್ರತ್ಯುತ್ತರದಿಂದ, ಸಮಸ್ತ ಪಂಗಡಗಳವರಿಗೂ ಅಭಯಪ್ರದಾನವಾದಂತಿದ್ದ ಕೆಲವು ವಾಕ್ಯಗಳನ್ನು ಇಲ್ಲಿ ಉದಾಹರಿಸಬಹುದಾಗಿದೆ: "....ನಮ್ಮ ಸಂಸ್ಥಾನದ ಸೇವೆಯಲ್ಲಿ ನಮ್ಮ ಪ್ರಜೆಗಳ ಸಮಸ್ತ ಜಾತಿ ಪಂಗಡಗಳ ಪ್ರತಿನಿಧಿಗಳೂ ಯುಕ್ತ ಪ್ರಮಾಣಗಳಲ್ಲಿ ಸರ್ಕಾರಿ ಉದ್ಯೋಗಗಳನ್ನು ಪಡೆಯುವಂತೆ ಮಾಡ ಬೇಕೆಂಬುದೇ ಸಂತತವೂ ಮನಃಪೂರ್ವಕವಾದ ನಮ್ಮ ಪ್ರಯತ್ನವಾಗಿದೆ ಯೆಂಬುದನ್ನು ಕುರಿತು ನಾವು ಈ ಸಂಬಂಧವಾಗಿ ಭರವಸೆ ಕೊಡಬೇಕಾದ ಅಗತ್ಯವೇ ಇಲ್ಲ. ಸರ್ಕಾರಿ ಉದ್ಯೋಗಗಳಲ್ಲಿ ಬ್ರಾಹ್ಮಣರ ಸಂಖ್ಯಾ ಪ್ರಾಬಲ್ಯವು ಪೂರ್ವದಿಂದಲೂ ಅನುಸ್ಯೂತವಾಗಿ ಬಂದ ಸಹಜ ಸಿದ್ಧವಾದ ಕೆಲವು ಕಾರಣಗಳಿಂದ ಉಂಟಾಗಿದೆ. ನೀವುಗಳು ಸೂಚಿಸಿರುವುದು ನ್ಯಾಯವೇ ಆಗಿರುವ ವ್ಯತ್ಯಾಸಗಳು, ಇತರ ಜಾತಿ ಪಂಗಡಗಳವರಲ್ಲಿ ವಿದ್ಯಾಭಿವೃದ್ಧಿಯೂ ಜ್ಞಾನಾಭಿವೃದ್ಧಿಯೂ ಆದಂತೆಲ್ಲ ಕ್ರಮಕ್ರಮವಾಗಿ ಕಡಮೆಯಾಗುತ್ತ ಬರುವುವೆಂಬುದು ನಮಗಿರುವ ನಿರ್ಧರ. ಆದಾಗ್ಗೂ, ಒಂದು ಪಂಗಡದವರು ಇತರ ಪಂಗಡಗಳವರಿಗಿಂತ ಮೊದಲು ವಿದ್ಯಾರ್ಜನೆ ಮಾಡಿ ಪ್ರಜಾವರ್ಗಗಳಿಗೆಲ್ಲ ಸರ್ವಸಮವಾಗಿ ಸಿದ್ಧವಾಗಿದ್ದ ಅಭಿವೃದ್ಧ್ಯವ ಕಾಶಗಳನ್ನು ಪೂರ್ತಿಯಾಗಿ ಉಪಯೋಗಿಸಿಕೊಂಡು ಮುಂದಕ್ಕೆ

ಬಂದಿರುವುದಕ್ಕಾಗಿ ಅವರ ಜಾತಿಯ ದೆಸೆಯಿಂದ ದಂಡ್ಯರೆಂದು ಭಾವಿಸಿ ಪ್ರತಿಕೂಲ ಸನ್ನಿವೇಶಗಳನ್ನು ಕಲ್ಪಿಸಲು ನಮಗೆ ಸರ್ವಥಾ ಅಭಿಲಾಷೆಯಿಲ್ಲ ವೆಂಬುದನ್ನು ನಾವು ಸೂಚಿಸಬೇಕಾದ ಆವಶ್ಯಕತೆಯೇ ಇಲ್ಲ. ಬ್ರಾಹ್ಮಣ ಸಂಗಡದವರೂ ಇತರ ಸಂಗಡಗಳವರಂತೆಯೇ ರಾಜಭಕ್ತಿಯುಳ್ಳವರಾಗಿ ದ್ದಾರೆ. ಆ ಸಂಗಡಕ್ಕೆ ಸೇರಿದವರು ನಮ್ಮ ಮನೆತನಕ್ಕೂ ಸಂಸ್ಥಾನಕ್ಕೂ ಹಿಂದೆ ಮಾಡಿರುವ ಮತ್ತು ಈಗಲೂ ಮಾಡುತ್ತಿರುವ ಶ್ರೇಷ್ಠವಾದ ಉಪಕಾರಗಳನ್ನು ಒಂದು ಕ್ಷಣಕಾಲವೂ ಮರೆಯುವುದು ಸಾಧ್ಯವಿಲ್ಲ. ಯಾವುದೊಂದು ಸಂಗಡಕ್ಕೂ ಮಿತಿಮೀರಿ ಪ್ರೋತ್ಸಾಹ ಕೊಡದೆಯೂ ಅಥವಾ ಮಿತಿಮೀರಿ ಪ್ರತಿಬಂಧಕಗಳನ್ನು ಕಲ್ಪಿಸದೆಯೂ, ನಮ್ಮ ಪ್ರಜಾ ಸಮುದಾಯದಲ್ಲಿ ಸಮಸ್ತ ಜಾತಿ ಸಂಗಡಗಳವರನ್ನೂ ಸಹ ಸಂಸ್ಥಾನದ ಶ್ರೇಯಸ್ಸಾಧನೆಗನುಕೂಲಿಸುವಂತೆ ಪ್ರೋತ್ಸಾಹಿಸಿ ಅಭಿವೃದ್ಧಿಗೆ ತರುವ ನ್ಯಾಯವಾದ ಮತ್ತು ಧರ್ಮಯುತವಾದ ಕಾರ್ಯನೀತಿಯನ್ನನುಸರಿಸ ಬೇಕೆಂಬುದೇ ನಮಗಿರುವ ಧ್ಯೇಯವಾಗಿದೆ.'' ಹಿಂದುಳಿದ ಸಂಗಡಗಳ ಪುರೋಭಿವೃದ್ಧಿಗಾಗಿ ವಿಶೇಷವಿಧದ ಅನುಕೂಲಗಳನ್ನು ಮತ್ತಷ್ಟು ಅಧಿಕ ವಾಗಿ ಕಲ್ಪಿಸಲಾಗುವುದೆಂಬ ಅಂಶವನ್ನೂ ಸೂಚಿಸಿ, ಆ ಸಂಗಡಗಳವರು ಪ್ರಜೆಗಳ ಐಕಮತ್ಯವನ್ನೂ ಪ್ರೀತಿಯನ್ನೂ ಶಿಥಿಲಗೊಳಿಸಕೂಡದೆಂದು ತಿಳಿಯಹೇಳಿ, ಕೊನೆಗೆ ಹಾಗೆಯೇ ಬ್ರಾಹ್ಮಣ ಸಮುದಾಯದವರೂ ಇತರ ಸಂಗಡಗಳವರೊಡನೆ ದ್ವೇಷಾಸೂಯೆಗಳನ್ನು ತೋರಿಸದೆ ಅವರಲ್ಲಿ ಸಹಿಷ್ಣುತೆಯನ್ನು ಪ್ರದರ್ಶಿಸುತ್ತ ಅವರಲ್ಲಿ ಸಹಜವಾಗಿ ತಲೆದೋರಿರತಕ್ಕ ನ್ಯಾಯವಾದ ಆಶೋತ್ತರಗಳ ವಿಷಯದಲ್ಲಿ ಕಾರ್ಯತಃ ಸಹಾನುಭೂತಿ ತೋರಿಸಬೇಕೆಂದೂ ಮಹಾಸ್ವಾಮಿಯವರು ಉಪದೇಶಿಸಿದರು. ಮಹಾ ಪ್ರಭುಗಳವರ ಸರ್ವಸಮಭಾವದ ಮನೋಧರ್ಮದ ಪರಿಣಾಮವಾಗಿ ಮೈಸೂರು ಸಂಸ್ಥಾನದಲ್ಲಿ ಭರತಖಂಡದ ಇತರ ಅನೇಕ ಪ್ರಾಂತಗಳಲ್ಲಿರು ವಂತೆ ಹಿಂದೂ ಮುಸಲ್ಮಾನರ ದ್ವೇಷಾಸೂಯೆಯೂ, ಹೋರಾಟವೂ ಸಮಾಜವನ್ನು ವಿರೂಪಗೊಳಿಸಲಿಲ್ಲ. ಹಿಂದೂ ಮುಸಲ್ಮಾನ್ ಸಂಗಡಗಳ ಪರಸ್ಪರ ಸೌಹಾರ್ದಕ್ಕೆ ಕೂಡ ಮೈಸೂರು ಸಂಸ್ಥಾನದ ಪರಿಸ್ಥಿತಿಯು ಒಟ್ಟು ಭರತಖಂಡಕ್ಕೇ ಮಾದರಿಯಾಗಿದೆ. ಭರತಖಂಡದ ನಾನಾ ಪ್ರದೇಶಗಳಿಗೂ ದಯಮಾಡಿದ್ದ ಲಾರ್ಡ್ ಸ್ಯಾಮ್ಯುಯಲ್‌ರವರು, ''ಭರತಖಂಡದ ದೊಡ್ಡ ಸಮಸ್ಯೆಗಳಲ್ಲಿ ಮೂರನೆಯದಾದ ಹಿಂದೂ ಮುಸಲ್ಮಾನರುಗಳ ವೈಮನಸ್ಯದ ವಿಷಯವಾಗಿ ಈಚಿನ ವರ್ಷಗಳಲ್ಲಿ ಪರಿಸ್ಥಿತಿಯು ಹಿಂದಿದ್ದುದಕ್ಕಿಂತ ಹೀನವಾಗಿರುವುದೆಂದು ನಾನು ಭರತ

ಖಂಡಕ್ಕೆ ಹೋಗಿದ್ದಾಗ ತಿಳಿದು ನನಗೆ ವಿಷಾದವಾಯಿತು. ಪರಿಸ್ಥಿತಿಯು ಹಾಗಿರುವುದು ನಿಜವೆಂದು ಅನೇಕರು ತಿಳಿಸಿ ಸ್ಥಿರೀಕರಿಸಿರುತ್ತಾರೆ. ಈಚಿನ ರಾಜಕೀಯ ಸನ್ನಿವೇಶದ ಪರೋಕ್ಷ ಪರಿಣಾಮ ಫಲವಾಗಿ ಹೀಗಾಗಿದೆ. ಆದರೆ ಈ ಸಂಬಂಧದಲ್ಲಿ ಮೈಸೂರು ಸಂಸ್ಥಾನವು ಭರತಖಂಡದ ಇತರ ಪ್ರಾಂತಗಳಿಗೆಲ್ಲ ಮಾದರಿಯಾಗಿದೆ. ಮೈಸೂರು ಸಂಸ್ಥಾನದಲ್ಲಿ ಶ್ರೀಮನ್ಮಹಾರಾಜರವರು ಹಿಂದೂ ಪಂಗಡಕ್ಕೆ ಸೇರಿದವರಾಗಿಯೂ ದಿವಾನ್‌ರವರು ಮುಸಲ್ಮಾನ್ ಪಂಗಡಕ್ಕೆ ಸೇರಿದವರಾಗಿಯೂ ಇರುವುದಲ್ಲದೆ, ಸರ್ಕಾರಿ ಉದ್ಯೋಗಗಳು ಎರಡು ಪಂಗಡಗಳವರಿಗೂ ದೊರೆಯತಕ್ಕವುಗಳಾಗಿವೆ. ಆದಕಾರಣ, ಇತರ ಪ್ರದೇಶಗಳಲ್ಲಿ ಇವೆರಡು ಪಂಗಡಗಳವರಿಗೂ ಹೋರಾಟ ಮಸಗುತ್ತಿರುವ ವಿಷಾದಕರವಾದ ಪರಿಸ್ಥಿತಿಯಿರುವಲ್ಲಿ, ಮೈಸೂರು ಸಂಸ್ಥಾನದಲ್ಲಿ ಮಾತ್ರ ಅವರಿಗೆ ಪರಸ್ಪರ ಸಾಮರಸ್ಯವಿದ್ದು, ಇತರ ಪ್ರದೇಶಗಳಿಗೆ ಮೇಲ್ಪಂಙ್ತಿಯಾಗಿದೆ"* ಎಂದು ಹೇಳಿದ್ದಾರೆ. ಆಳಿದ ಮಹಾಸ್ವಾಮಿಯವರ ಮತ್ತು ಸರ್ ಮಿರ್ಜಾ ಎಂ. ಇಸ್ಮಾಯಿಲ್‌ರವರ ನಿಷ್ಪಕ್ಷಪಾತ ದೃಷ್ಟಿಯ ಫಲಿತಾಂಶವಾಗಿ ಸ್ತ್ರೀಯರಿಗೆ ವಿದ್ಯಾಭ್ಯಾಸ ಸೌಕರ್ಯಗಳೇ ಮುಂತಾದುವು ಯಥೇಷ್ಟವಾಗಿ ಲಭಿಸಿರುವುದಲ್ಲದೆ, ಅವರಿಗೆ ಪ್ರಜಾಪ್ರತಿನಿಧಿ ಸಭೆ ಮುಂತಾದುವುಗಳ ಸದಸ್ಯರನ್ನು ಚುನಾಯಿಸುವುದಕ್ಕೆ ಅಭಿಮತಗಳನ್ನು ("ವೋಟು"ಗಳನ್ನು) ಕೊಡುವ ಅಧಿಕಾರವೂ, ತಾವೇ ಸದಸ್ಯರಾಗಿ ಚುನಾವಣೆಯಾಗಲು ಉಮೇದುವಾರರಾಗಿ ನಿಲ್ಲುವ ಅಧಿಕಾರವೂ ಲಭಿಸಿದುವು. ಅಲ್ಲದೆ ಮಹಿಳೆಯರಿಗಿದ್ದ ಸ್ವತ್ತುಗಳ ಹಕ್ಕು ಬಾಧ್ಯತೆಗಳು ಮತ್ತಷ್ಟು ಅಧಿಕವಾಗಿ ಉತ್ತಮಗೊಳ್ಳುವಂತೆ ಹಿಂದೂ ಧರ್ಮಶಾಸ್ತ್ರದ ಕಾನೂನು ತಿದ್ದುಪಡಿಯಾಯಿತು. ನಾವು ಹಿಂದೆಯೇ ಅರಿಕೆ ಮಾಡಿರುವಂತೆ ಆದಿಕರ್ಣಾಟಕರ ಸ್ಥಿತಿಯನ್ನು ಉತ್ತಮಪಡಿಸುವುದಕ್ಕಾಗಿ ಏರ್ಪಾಡುಗಳು ನಡೆದಿರುವುದೂ ಸಹ ಆಳಿದ ಮಹಾಸ್ವಾಮಿಯವರ ಮತ್ತು ಸರ್ ಮಿರ್ಜಾ ಎಂ. ಇಸ್ಮಾಯಿಲ್‌ರವರ ಮತ್ತು ಅವರ ಸಹೋದ್ಯೋಗಿಗಳ— ನಿಷ್ಪಕ್ಷಪಾತ ದೃಷ್ಟಿಯ ಪ್ರಭಾವದಿಂದಲೇ;

* "With respect to the third great problem, the conflict between the Hindus and Muslims, I was grieved to learn when I was in India—and the fact has been confirmed in many quarters—that the condition in that respect is rather worse in these years than better. That has been an indirect effect of recent constitutional devolpment, but here Mysore is an example to the rest of India. Here, with a ruler of the Hindu faith and the Dewan who is a Muslim, and all the offices of the State open to men of both the communities, Mysore stands as an example of peace and harmony in this unhappy conflict."—Lord Samuel.

ಭರತಖಂಡದ ಸಂಸ್ಥಾನಗಳಲ್ಲಿ ಉತ್ತಮವಿಧದ ರಾಜ್ಯಭಾರಕ್ಕೆ ಸುಪ್ರಸಿದ್ಧ ವಾದ ಸಂಸ್ಥಾನಗಳ ಪಙ್ತಿಯಲ್ಲಿ ದ್ವಿತೀಯ ಸ್ಥಾನವನ್ನು ಪಡೆದಿದ್ದ ಮೈಸೂರು ಸಂಸ್ಥಾನವು ಆಳಿದ ಮಹಾಸ್ವಾಮಿಯವರ ರಾಜ್ಯಭಾರದ ಫಲವಾಗಿ ಪ್ರಥಮಸ್ಥಾನವನ್ನು ಪಡೆಯಿತು. ಆಳಿದ ಮಹಾಸ್ವಾಮಿ ಯವರೂ, ಸರ್ ಮಿರ್ಜಾ ಎಂ. ಇಸ್ಮಾಯಿಲ್‌ರವರೇ ಮುಂತಾದವರೂ ಅವಿಶ್ರಾಂತರಾಗಿ ಶ್ರಮಿಸಿದುದೂ, ಪ್ರಜೆಗಳು ಸಹಕರಿಸಿದುದೂ ಅದಕ್ಕೆ ಕಾರಣ. ಶ್ರೀಮಾನ್ ಮದನಮೋಹನ ಮಾಳವೀಯರವರು ರಜತ ಮಹೋತ್ಸವ ಕಾಲದಲ್ಲಿ, ಮೈಸೂರು ಸಂಸ್ಥಾನಕ್ಕೆ ಆ ರೀತಿ ದ್ವಿತೀಯ ಸ್ಥಾನವಿದ್ದ ವಿಷಯವನ್ನು ಸೂಚಿಸಿ, "ನಾನು ಅವಲೋಕಿಸಿ ಬರುವ ಸುಯೋಗ ನನಗೆ ಇನ್ನೂ ಒದಗಿಲ್ಲದ ಒಂದು ಸಂಸ್ಥಾನದ ಹೊರತು, ಇತರ ಪ್ರತಿಯೊಂದು ಭಾರತೀಯ ಸಂಸ್ಥಾನವನ್ನೂ ಸಹ, ನೀವುಗಳು ನಿಮ್ಮ ಪ್ರಗತಿ ಸಾಧನೆಯಿಂದ ಮೀರಿಸಿ ಮುಂದುವರಿಸಿದ್ದೀರಿ"* ಎಂದು ಮೈಸೂರು ಸಂಸ್ಥಾನದವರನ್ನುದ್ದೇಶಿಸಿ ಮಾಡಿದ ಭಾಷಣದಲ್ಲಿ ಹೇಳಿದ್ದರು. ಆಗ್ಗೆ, ಬರೋಡೆ ಸಂಸ್ಥಾನಕ್ಕೆರಡನೆಯದೆನಿಸಿದ್ದ ಮೈಸೂರು ಸಂಸ್ಥಾನವು ಒಟ್ಟನಮೇಲೆ ೧೯೩೦ನೆಯ ಇಸವಿಯ ವೇಳೆಗೆ ಅದಕ್ಕೆ ಸಮವೆನಿಸಿತು.

೧೯೩೦ನೆಯ ಇಸವಿಯಿಂದ ಕೆಲವು ವರ್ಷಗಳೊಳಗಾಗಿ ರಾಜ್ಯಭಾರ ವಿಚಕ್ಷಣೆಯ ಮತ್ತು ಪ್ರಗತಿ ಸಾಧನೆಯ ವಿಚಾರದಲ್ಲಿ ಮೈಸೂರು ಸಂಸ್ಥಾನವೇ ಭಾರತೀಯ ಸಂಸ್ಥಾನಗಳಲ್ಲಿ ಅಗ್ರಸ್ಥಾನವನ್ನು ಗಳಿಸಿ ಶೋಭಿಸಲುಪಕ್ರಮಿಸಿತು; ಈ ವಿಚಾರದಲ್ಲಿ ಅದು ತನ್ನ ಪ್ರಥಮಸ್ಥಾನ ವನ್ನು ಸಂತತವಾಗಿ ಉಳಿಸಿಕೊಂಡುಬರುತ್ತಿದೆ. ಆದುದರಿಂದ ನಿಷ್ಪಕ್ಷ ಪಾತವಾಗಿ ನುಡಿಯಬಲ್ಲವರನೇಕರು ಮೈಸೂರು ಸಂಸ್ಥಾನದ ಅಗ್ರಸ್ಥಾನ ವನ್ನು ಕುರಿತು ಶ್ಲಾಘಿಸಿದ್ದಾರೆ. ಮೇಲಾಗಿ, "ಎನ್‌ಸೈಕ್ಲೋಪೀಡಿಯ ಬ್ರಿಟಾನಿಕ" ಎಂಬ ವಿಶ್ವಕೋಶದ ೧೯೩೯ನೆಯ ಇಸವಿಯ ಪುರವಣಿಯಲ್ಲಿ "ಭಾರತೀಯ ಸಂಸ್ಥಾನಗಳಲ್ಲೆಲ್ಲ ಅತ್ಯಧಿಕವಾಗಿ ಪ್ರಗತಿ ಸಾಧನೆ ಮಾಡಿರುವ ಸಂಸ್ಥಾನವೆಂದು ಖ್ಯಾತಿಯನ್ನು ಪಡೆದಿರುವ ಮೈಸೂರು ಸಂಸ್ಥಾನದಲ್ಲಿ ೧೯೩೮ನೆಯ ಸಂವತ್ಸರದಲ್ಲಿ ಸಹ ಆ ಖ್ಯಾತಿಗನುಗುಣ ವಾದ ಪುರೋಭಿವೃದ್ಧಿಕಾರ್ಯಗಳು ನಡೆದುವು"† ಎಂಬ ಶ್ಲಾಘನೆಯ

---

* "Excepting one State which I have not yet had the privilege of visiting, you are ahead of every other Indian State in the progress you have achieved"—Pandit Madan Mohan Malaviya.

† "Mysore continued in 1938 to live up to its reputation as the most progressive of the Indian States."—*Encyclopædia Britannica*, Book Of The Year 1939 (page 446).

ವಾಣಿಯಿದೆ. ಒಂದು ಸಂಸ್ಥಾನದ ಸಿಂಹಾಸನಾಧಿಕಾರಿಗಳೂ ವಿದ್ಯಾವಂತರೂ ಆದ ಮಹಾರಾಜ ಕುಮಾರ ಶ್ರೀ ರಘುವೀರಸಿಂಹ, ಡಿ.ಲಿಟ್. ಅವರು ಈಚೆಗೆ ಬರೆದಿರುವ ಒಂದು ಪ್ರೌಢಗ್ರಂಥದಲ್ಲಿ "ಆಡಳಿತ ನಿರ್ವಹಣ ಕ್ರಮಗಳೂ ಒಂದೊಂದು ಸಂಸ್ಥಾನದಲ್ಲಿ ಒಂದೊಂದು ಬಗೆಯಾಗಿ ಬೇರೆ ಬೇರೆ ಇವೆ. ಮೈಸೂರು, ಬರೋಡೆ, ತಿರುವಾಂಕೂರು— ಈ ಸಂಸ್ಥಾನಗಳಂತಹ ಕೆಲವು ಸಂಸ್ಥಾನಗಳಲ್ಲಿರುವ ಆಡಳಿತ ವಿಧಾನವು, ಬ್ರಿಟಿಷ್ ಇಂಡಿಯಾದಲ್ಲಿರುವ ಬ್ರಿಟಿಷ್ ಆಡಳಿತಕ್ಕಿಂತಲೂ ಸಹ ಹೆಚ್ಚು ವಿಚಕ್ಷಣೆಯಿಂದಲೂ ಉತ್ತಮ ವ್ಯವಸ್ಥೆಯಿಂದಲೂ ಕೂಡಿ ಪ್ರಜೆಗಳ ಯೋಗಕ್ಷೇಮದಲ್ಲಿ ಅಧಿಕತರವಾದ ಆಸಕ್ತಿಯನ್ನು ತೋರಿಸುವುದಾಗಿದೆ. ಆದಾಗ್ಯೂ, ಓಬೀರಾಯನಕಾಲದ ರಾಜ್ಯಭಾರಕ್ರಮವೂ ಪ್ರಜೆಗಳೆಲ್ಲ ಕೇವಲ ದಾಸರೆಂಬ ಮನೋಧರ್ಮವೂ, ನೆಲೆಗೊಂಡಿರುವ ಸಂಸ್ಥಾನಗಳಿರುವುದನ್ನೂ ಒಪ್ಪಿಕೊಳ್ಳಬೇಕಾಗಿದೆ"* ಎಂದು ಹೇಳಿರುವುದು ಗಮನಾರ್ಹವಾಗಿದೆ. ತಾವೇ ಸ್ವಯಂ ಸಿಂಹಾಸನಾಧಿಕಾರಿಗಳಾದ ಮಹಾರಾಜಕುಮಾರರವರು ಈ ರೀತಿ ಶ್ಲಾಘಿಸಿರುವುದರಿಂದ ಅದಕ್ಕೆ ಮತ್ತಷ್ಟು ಬೆಲೆ. ತಿರುವಾಂಕೂರು ಮಹಾರಾಜರು, ಅಕ್ಕಲಕೋಟೆ ಮಹಾರಾಜರು, ಖೈರ್‌ಪುರದ ಮೀರ್‌ಸಾಹೇಬರು ಮುಂತಾದವರೆಲ್ಲರೂ ಮೈಸೂರು ಸಂಸ್ಥಾನದಲ್ಲಿ ರಾಜ್ಯಾಡಳಿತ ಶಿಕ್ಷಣ ಪಡೆದರು. ಈಗಲೂ ಅನೇಕ ರಾಜಕುಮಾರರು ಬಂದು ಮೈಸೂರು ಸಂಸ್ಥಾನದಲ್ಲಿ ರಾಜ್ಯಾಡಳಿತ ಶಿಕ್ಷಣ ಪಡೆಯುತ್ತಿದ್ದಾರೆ.

**ಅಭಿವೃದ್ಧಿ ಕಾರ್ಯಗಳು**

ರಜತ ಮಹೋತ್ಸವವು ನೆರವೇರಿದಾಗಿನಿಂದೀಚಿನ ಹದಿಮೂರು ವರ್ಷಗಳ ಅವಧಿಯಲ್ಲಿ ನಡೆದಿರುವ ವಿವಿಧ ಕಾರ್ಯಕಲಾಪಗಳನ್ನೂ ವಿಚಾರ ಮಾಡುವುದು ಸ್ಥಳ ಸಂಕೋಚದ ದೆಸೆಯಿಂದ ತೀರ ಅಸಾಧ್ಯವಾದ ಕಾರ್ಯ; ಅಲ್ಲದೆ ಅದು ಅಪ್ರಕೃತವೂ ಹೌದು. ಆದಕಾರಣ, ಅವುಗಳಲ್ಲಿ ಕೆಲವನ್ನು ಮಾತ್ರವೇ ಸೂಚಿಸಿ ತೃಪ್ತಿ ಹೊಂದಬೇಕಾಗಿದೆ. ಗ್ರಾಮಾಂತರ ಪ್ರದೇಶಗಳನ್ನು ಅಭಿವೃದ್ಧಿಸ್ಥಿತಿಗೆ

* "The systems of administration also differ widely. Some States like Mysore, Baroda and Travancore can claim systems of administration which are more efficient, better organised and more solicitous for the welfare of the people than even British rule in British India, at the same time it must be admitted that there are States whose administration is mediæval in structure and feudal in spirit." —*Indian States And The New Regime.* By Maharaja Kumar Raghubir Sinh, D.Litt. (Heir-Apparent for Sitamau State.)

ತರುವ ವಿಚಾರದಲ್ಲಿಯೂ ಸಂಸ್ಥಾನದಲ್ಲಿ ಚಿಕಿತ್ಸಾ ಸೌಕರ್ಯಗಳನ್ನು ಹೆಚ್ಚಿಸುವ ವಿಚಾರದಲ್ಲಿಯೂ ಈ ಹದಿಮೂರು ವರ್ಷಗಳ ಅವಧಿಯಲ್ಲಿ ಬಹಳ ಕೆಲಸ ನಡೆದಿದೆ. ವಿದ್ಯುಚ್ಛಕ್ತಿಯ ಉತ್ಪತ್ತಿಯ ಪ್ರಮಾಣವನ್ನು ಹೆಚ್ಚಿಸಿ, ಭಾರಿ ಭಾರಿ ಕೈಗಾರಿಕೆಗಳನ್ನು ನೂತನವಾಗಿ ಪ್ರಾರಂಭಿಸಿ, ಶಿಲ್ಪಕಾರ್ಯಗಳನ್ನೂ ಮತ್ತು ನಗರಾಭಿವೃದ್ಧಿ ಕಾರ್ಯಗಳನ್ನೂ ಅಭಿವೃದ್ಧಿಗೊಳಿಸಿರುವುದಕ್ಕೂ ಸಹ ಸರ್ ಮಿರ್ಜಾ ಎಂ. ಇಸ್ಮಾಯಿಲ್ ರವರು ದಿವಾನ್ ಪದವಿಗೆ ಬಂದಾಗಿನಿಂದ ಇದುವರೆಗೆ ಕಳೆದಿರುವ ಅವಧಿಯು ಸುಪ್ರಸಿದ್ಧವಾಗಿದೆ. ಆಳಿದ ಮಹಾಸ್ವಾಮಿಯವರಾದ ಶ್ರೀಮನ್ಮಹಾರಾಜರವರ ರಾಜ್ಯಭಾರದಲ್ಲಿ — ಮಹಾಸ್ವಾಮಿಯವರ ಆಜ್ಞೆಯ ಮೇರೆಗೆ— ಸರ್ ಮಿರ್ಜಾ ಎಂ. ಇಸ್ಮಾಯಿಲ್‌ರವರೂ ಅವರ ಸಹೋದ್ಯೋಗಿಗಳೂ ಸಾಧಿಸಿಯೂ ಸಾಧಿಸುತ್ತಲೂ ಇರುವ ಮಹತ್ತರವಾದ ಕಾರ್ಯಗಳು ಬಹು ಮುಖವಾಗಿವೆ; ಸಂಸ್ಥಾನದ ಕೀರ್ತಿಗೌರವಗಳು ದಿನ ದಿನವೂ ಅಧಿಕವಾಗುತ್ತಿವೆ. ಸ್ಥೂಲವಾಗಿ ಸೂಚಿಸುವುದಾದರೆ, ಪ್ರಜೆಗಳು ಕೊಡುವ ಕಂದಾಯದಿಂದಲೂ ವರಮಾನದ ತೆರಿಗೆ ಮುಂತಾದ ತೆರಿಗೆಗಳಿಂದಲೂ ಬರುತ್ತಿರುವ ಹುಟ್ಟುವಳಿಯ ಜೊತೆಗೆ, ಚಿನ್ನದ ಗಣಿ, ಕ್ರೋಂ ಗಣಿ, ಗಂಧದ ಮರದ ಹುಟ್ಟುವಳಿ ಸಾಧನ— ಮುಂತಾದ ಸಾಧನ ಸಂಪತ್ತುಗಳನ್ನು ರೂಢಿಸಿ ವರಮಾನವನ್ನು ಹೆಚ್ಚಿಸುವ ಪ್ರಯತ್ನವೂ ನಡೆದಿದೆ; ಸರ್ಕಾರದವರ ಪ್ರಯತ್ನಗಳಿಂದ ಭಾರಿ ಭಾರಿ ಕೈಗಾರಿಕೆಗಳನ್ನೂ ವಾಣಿಜ್ಯೋದ್ಯಮಗಳನ್ನೂ ಪ್ರಾರಂಭಿಸಿ ವೃದ್ಧಿಗೊಳಿಸಿ ಸಂಸ್ಥಾನದ ಹುಟ್ಟುವಳಿಯನ್ನು ಹೆಚ್ಚಿಸುವ ಕಾರ್ಯವೂ ಮುಂದುವರಿದಿದೆ. ಸ್ಥೂಲವಾಗಿ ನೋಡಿದರೆ ಭೂಸ್ಥಿತಿಗಳ ಕಂದಾಯದಿಂದ ಬರುತ್ತಿರುವ ವರಮಾನದ ಮೂರರಷ್ಟು ವರಮಾನವು ಕೈಗಾರಿಕೆ ಮುಂತಾದುವುಗಳಿಂದ ಬರುತ್ತಿದೆ. ಸಂಸ್ಥಾನದ ಅಭ್ಯುದಯ ಸಾಧನೆಗಾಗಿ ಸರ್ಕಾರದವರು ನಡೆಯಿಸಿಯೂ ನಡೆಯಿಸುತ್ತಲೂ ಇರುವ ಕಾರ್ಯಕಲಾಪಗಳಲ್ಲಿ ಕೆಲವನ್ನು ಕುರಿತು, ಈ ಕೆಳಗೆ ಸಂಕ್ಷೇಪವಾಗಿ ಸೂಚಿಸಲಾಗಿದೆ:—

**ವ್ಯವಸಾಯ ಸೌಕರ್ಯಗಳು.**—ಸಂಸ್ಥಾನದ ಮುಖ್ಯ ವೃತ್ತಿಯು ವ್ಯವಸಾಯವಾದುದರಿಂದ, ವ್ಯವಸಾಯಗಾರರಿಗೆ ವಿವಿಧ ರೀತಿಗಳಲ್ಲಿ ಸೌಕರ್ಯಗಳನ್ನು ಕಲ್ಪಿಸುವುದಕ್ಕಾಗಿ ಸಂತತವಾದ ಪ್ರಯತ್ನವು ನಡೆಯುತ್ತ ಬಂದಿದೆ. ಸರ್ಕಾರದವರು ವ್ಯವಸಾಯದ ಇಲಾಖೆಯನ್ನು ಅಭಿವೃದ್ಧಿಗೊಳಿಸಿರುವುದಲ್ಲದೆ, ವ್ಯವಸಾಯಾಭಿವೃದ್ಧಿಗಾಗಿ ಬಬ್ಬೂರು, ಮತ್ತೂರು, ನಾಗೇನಹಳ್ಳಿ, ಬಾಳೆಹೊನ್ನೂರು ಮುಂತಾದ ಸ್ಥಳಗಳಲ್ಲಿ

ಪ್ರಯೋಗಪರೀಕ್ಷೆಗಳನ್ನು ನೆರವೇರಿಸಿ ಸಂಶೋಧನ ನಡೆಯಿಸುವುದಕ್ಕಾಗಿ ವ್ಯವಸಾಯ ಕ್ಷೇತ್ರಗಳನ್ನು ಏರ್ಪಡಿಸಿದ್ದಾರೆ. ೧೯೧೩ನೆಯ ಇಸವಿಯಿಂದಲೂ ಹೆಬ್ಬಾಳದಲ್ಲಿ ವ್ಯವಸಾಯ ಪಾಠಶಾಲೆಯನ್ನು ಏರ್ಪಡಿಸಿ ಸರ್ಕಾರದವರು ಯುವಕರಿಗೆ ಶಿಕ್ಷಣವನ್ನು ದೊರೆಯಿಸುತ್ತಿದ್ದಾರೆ. ಈಚೆಗೆ ರಾಮಕೃಷ್ಣಪುರ ಮುಂತಾದ ಸ್ಥಳಗಳಲ್ಲಿ ವ್ಯವಸಾಯ ಬೋಧನೆಗೆ ಏರ್ಪಾಡು ನಡೆದಿದೆ. ಅಡಕೆ ಮರಗಳಿಗೆ ತಗಲುವ ಕೊಳೆರೋಗ, ಹತ್ತಿಯ ಗಿಡಗಳಿಗೂ ಕಾಫಿಯ ಗಿಡಗಳಿಗೂ ತಗಲುವ ರೋಗಗಳು ಮುಂತಾದುವುಗಳ ನಿವಾರಣೆಗಾಗಿ ಏರ್ಪಾಡು ಮಾಡಿದುದೇ ಮುಂತಾದ ವಿಚಾರಗಳಲ್ಲಿ ಮೈಸೂರು ಸಂಸ್ಥಾನದ ವ್ಯವಸಾಯದ ಇಲಾಖೆಯು ಭರತಖಂಡಕ್ಕೇ ಮಾದರಿಯಾಗಿ ಮಾರ್ಗದರ್ಶಿಯಾಗಿದೆ. ಅದರ ಕಾರ್ಯದಕ್ಷತೆಯನ್ನು ಕಂಡು ಬ್ರಿಟಿಷ್ ಇಂಡಿಯಾ ಪ್ರಾಂತಗಳವರೇ ಮುಗ್ಧರಾಗಿದ್ದಾರೆ. ಉತ್ತಮ ರೀತಿಯಲ್ಲಿ ಕೃಷಿಮಾಡುವುದು, ಹೊಸ ಬೆಳೆಗಳನ್ನಿಡುವುದು, ಮುಂತಾದ ಕಾರ್ಯಕಲಾಪಗಳನ್ನು ರೈತರಿಗೆ ಬೋಧಿಸಿ, ಮೇಲಾದ ವ್ಯವಸಾಯದ ಮುಟ್ಟುಗಳನ್ನು ಅವರಿಗೆ ಮಾರಿ, ಹಸನಾದ ಬೀಜದ ಧಾನ್ಯಗಳೇ ಮುಂತಾದುವುಗಳನ್ನು ವ್ಯವಸಾಯಗಾರರಿಗೆ ಒದಗಿಸಿ ವ್ಯವಸಾಯದ ನೂತನ ವಿಧಾನಗಳನ್ನು ತೋರಿಸಿಕೊಡುವ ಕೆಲಸವೂ ದೋಹದ ಕ್ರಿಯೆಯಿಂದ ನೂತನ ಸಂಶೋಧಗಳನ್ನು ನಡೆಯಿಸಿ ಹತ್ತಿ, ರಾಗಿ, ಕಬ್ಬು ಮುಂತಾದ ಬೆಳೆಗಳ ನೂತನ ಜಾತಿಗಳನ್ನು ಕಂಡುಹಿಡಿದು ರೈತರಿಗೆ ಸುಲಭ ಬೆಲೆಯಲ್ಲಿ ಅವುಗಳನ್ನು ಒದಗಿಸಿ, ಅವರು ಹೆಚ್ಚಿನ ಲಾಭವನ್ನು ಪಡೆಯುವಂತೆ ಮಾಡುವ ಕೆಲಸವೂ ಅವಿಚ್ಛಿನ್ನವಾಗಿ ನಡೆಯುತ್ತಿವೆ. ಈಚೆಗಂತೂ, ರೈತರ ಭೂಸ್ಥಿತಿಗಳ ಕೆಲಕೆಲವು ಭಾಗಗಳಲ್ಲೇ ಉತ್ತಮವಾದ ಶಾಸ್ತ್ರೀಯ ವಿಧಾನಗಳಲ್ಲಿ ವ್ಯವಸಾಯ ಮಾಡಿ ಹೆಚ್ಚುಬೆಳೆಯನ್ನು ತೆಗೆದು ತೋರಿಸುವ ನಿದರ್ಶನಕಾರ್ಯಗಳು ಹೆಚ್ಚುಹೆಚ್ಚಾಗಿ ನಡೆಯುತ್ತಿವೆ. ಹಣ್ಣುಗಳ ವ್ಯವಸಾಯವು ನಡೆಯುವಂತೆ ಪ್ರೋತ್ಸಾಹ ಕೊಡುವ ಕೆಲಸವನ್ನೂ, ಶುದ್ಧವಾದ ಬಿಳಿಯ ಬೆಲ್ಲವನ್ನು ಮಾಡುವ ಕೆಲಸವನ್ನೂ ವ್ಯವಸಾಯದ ಇಲಾಖೆಯವರು ಯಶಸ್ವಿಯಾಗಿ ನೆರವೇರಿಸಿದ್ದಾರೆ; ಗಂಜಾಂ, ಅರ್ವಿನ್‌ನಾಲಾ ಪ್ರದೇಶ, ಹೆಸರುಘಟ್ಟ, ಮುಂತಾದ ಸ್ಥಳಗಳಲ್ಲಿ ಹಣ್ಣುಗಳ ವ್ಯವಸಾಯಕ್ಕೆ ಪ್ರೋತ್ಸಾಹವು ವಿಶೇಷ ರೀತಿಯಲ್ಲಿ ಲಭಿಸಿದೆ. ವ್ಯವಸಾಯಗಾರರಿಗೆ ತಕಾವಿ ಸಾಲಗಳನ್ನು ಕೊಡುವ ವ್ಯವಸ್ಥೆಯೂ, ಸಾಲದ ಹೊರೆಯ ಬಿಡುಗಡೆಗಾಗಿ ಸುಲಭ ಬಡ್ಡಿಯಲ್ಲಿ ದೀರ್ಘಾವಧಿ ಸಾಲಗಳನ್ನು ಕೊಟ್ಟು ಸಹಾಯ

ಮಾಡುವ ಜಮೀನು ಅಡಮಾನದ ಬ್ಯಾಂಕುಗಳ ಏರ್ಪಾಡೂ, ವಿದ್ಯುಚ್ಛಕ್ತಿಯ ಸಹಾಯದಿಂದ ನೀರನ್ನೆತ್ತಿ ನೀರಾವರಿ ಸಾಗುವಳಿಗೆ ಸಹಾಯ ಮಾಡಲು "ಪಂಪು"ಗಳೆಂಬ ಯಂತ್ರಸಾಧನಗಳನ್ನು (ಕಂತಿನ ಮೇಲೆ ಹಣವನ್ನು ಕೊಡಲು ಸಮ್ಮತಿಸುವವರಿಗೆ) ಒದಗಿಸುವ ಏರ್ಪಾಡೂ ನಡೆದಿವೆ. ಬೆಳೆಯಾಗದೆಹೋದ ಪ್ರದೇಶಗಳಲ್ಲಿ ಸರ್ಕಾರದವರು ಬಹಳ ಧಾರಾಳವಾಗಿ ಕಂದಾಯದ ಮಾಫಿಗಳನ್ನು ಬಿಟ್ಟು ರೈತರಿಗೆ ಸಹಾಯ ಮಾಡುತ್ತಾರೆ.

ನೀರಾವರಿ ವ್ಯವಸಾಯಕ್ಕಾಗಿ ಸಮೃದ್ಧವಾಗಿ ನೀರನ್ನೊದಗಿಸಲು ಶ್ರೀಮನ್ಮಹಾರಾಜರವರ ಸರ್ಕಾರದವರು ಏರ್ಪಡಿಸಿರುವ ಜಲಾಶಯಗಳಲ್ಲೆಲ್ಲ ಕೃಷ್ಣರಾಜಸಾಗರವೇ ಅತ್ಯಂತ ದೊಡ್ಡದು. ಅದನ್ನು ನಿರ್ಮಿಸಿದಾಗ ಒಟ್ಟು ಭರತಖಂಡದಲ್ಲಿ ಅದರಷ್ಟು ದೊಡ್ಡದಾದ ಜಲಾಶಯವು ಮತ್ತೊಂದಿರಲಿಲ್ಲ. ೧೯೧೧ನೆಯ ಇಸವಿಯಲ್ಲಿ ಪ್ರಾರಂಭವಾದ ಅದರ ಕೆಲಸವು ೧೯೩೧ನೆಯ ಇಸವಿಯ ವೇಳೆಗೆ ಮುಗಿಯಿತು. ಈಚೆಗೆ ಬ್ರಿಟಿಷ್ ಇಂಡಿಯಾದಲ್ಲಿ ಏರ್ಪಟ್ಟಿರುವ ಒಂದು ಜಲಾಶಯವನ್ನು ಬಿಟ್ಟರೆ, ಈಗಲೂ ಭರತಖಂಡದಲ್ಲಿ ಅದರಷ್ಟು ದೊಡ್ಡದಾದ ಜಲಾಶಯವು ಮತ್ತಾವುದೂ ಇಲ್ಲ. ಅದರ ಏರಿಯು ೧೩೦ ಅಡಿಗಳ ಎತ್ತರವಾಗಿಯೂ ಒಂದೂವರೆ ಮೈಲಿಗಳಿಗಿಂತಲೂ ಹೆಚ್ಚು ಉದ್ದವಾಗಿಯೂ ಇದೆ. ಕೃಷ್ಣರಾಜಸಾಗರ ಜಲಾಶಯವನ್ನು ನಿರ್ಮಿಸಲು ಎರಡು ಕೋಟಿ ನಲವತ್ತೆರಡು ಲಕ್ಷ ರೂಪಾಯಿಗಳು ವೆಚ್ಚವಾಗಿವೆ. ಸರ್ ಮಿರ್ಜಾ ಎಂ. ಇಸ್ಮಾಯಿಲ್‌ರವರು ದಿವಾನ್ ಪದವಿಗೆ ಬಂದಮೇಲೆ ಆಳಿದ ಮಹಾಸ್ವಾಮಿಯವರ ಆಜ್ಞಾನುಸಾರವಾಗಿ ಸುಮಾರು ಎರಡು ಕೋಟಿ ರೂಪಾಯಿಗಳ ವೆಚ್ಚದಲ್ಲಿ ಅರ್ವಿನ್ ನಾಲೆಯನ್ನೇರ್ಪಡಿಸಿ ೧,೨೦,೦೦೦ ಎಕರೆಗಳ ಭೂಸ್ಥಿತಿಗಳಿಗೆ ನೀರಾವರಿ ಸಾಗುವಳಿಗೆ ನೀರನ್ನೊದಗಿಸುವ ಕೆಲಸವು ಪ್ರಾರಂಭವಾಯಿತು. ಈಗಾಗಲೆ ಅದರಲ್ಲಿ ಅರ್ಧದಷ್ಟು ವಿಸ್ತೀರ್ಣಕ್ಕೆ ನೀರು ದೊರೆತು, ಬಂಜರುಗಳಿಂದ ತುಂಬಿದ ಬೆಗ್ಗಾಡು ಪ್ರದೇಶವಾಗಿದ್ದ ಮಂಡ್ಯ ಮತ್ತು ಮದ್ದೂರು ತಾಲ್ಲೂಕುಗಳ ಬಹುಭಾಗವು ಪಚ್ಚೆಯ ಹಾಸಿನಂತೆ ಕಂಗೊಳಿಸುತ್ತಿದೆ. ಮಂಡ್ಯದಲ್ಲಿ ಸಕ್ಕರೆ ಕಾರ್ಖಾನೆಯು ಏರ್ಪಟ್ಟಮೇಲಂತೂ, ಕಬ್ಬಿನ ಬೆಳೆಯು ಬಹಳವಾಗಿ ಹೆಚ್ಚಿ ವ್ಯವಸಾಯಗಾರರಿಗೆ ಬಹಳ ಅನುಕೂಲವಾಗಿದೆ. ಅರ್ವಿನ್ ನಾಲಾ ಪ್ರದೇಶದಲ್ಲಿ ವ್ಯವಸಾಯ ಕಾರ್ಯ ಸಂಬಂಧವಾದ ಪ್ರಯೋಗ ಪರೀಕ್ಷಾ ಶಾಲೆಯನ್ನೇರ್ಪಡಿಸಿದ ಯಶಸ್ಸೂ ಸರ್ ಮಿರ್ಜಾ ಎಂ. ಇಸ್ಮಾಯಿಲ್

ರವರಿಗೆ ಸಲ್ಲಬೇಕಾಗಿದೆ. ಮಂಡ್ಯದ ಡಿಸ್ಟ್ರಿಕ್ಟು ಏರ್ಪಡಬೇಕಾಗಿ ಬಂದುದು ಕೂಡ ಅರ್ವಿನ್ ನಾಲಾ ಪ್ರದೇಶದಲ್ಲಿ ವ್ಯವಸಾಯಾಭಿವೃದ್ಧಿಯಾದುದರ ದೆಸೆಯಿಂದಲೇ. ಸರ್ ಮಿರ್ಜಾ ಎಂ. ಇಸ್ಮಾಯಿಲ್‌ರವರು ದಿವಾನ್ ಹುದ್ದೆಯನ್ನಲಂಕರಿಸಿದಮೇಲೆ ಅಂಜನಾಪುರದ ಜಲಾಶಯ, ಗೋಪಾಲದ ಜಲಾಶಯ, ಭೀಮನಹಳ್ಳಿ ಜಲಾಶಯ, ಚಂದನಹಳ್ಳಿ ಜಲಾಶಯ, ನೆಲ್ಲಿಗೆರೆ ಜಲಾಶಯ, ಭೃಗುನದಿಯ ಅಣೆಕಟ್ಟೆ ಮುಂತಾದುವು ನಿರ್ಮಿತವಾಗಿ ನೀರಾವರಿ ಸಾಗುವಳಿಗೆ ಬಹಳ ಅನುಕೂಲವಾಗಿದೆ. ಕುಣಿಗಲು ತಾಲ್ಲೂಕಿನಲ್ಲಿ ಮಾರ್ಕೋನ ಹಳ್ಳಿಯ ಜಲಾಶಯದ ಕೆಲಸವು ಪೂರೈಸಿದೆ. ಅದರಜೊತೆಗೆ ಲಕ್ಕುವಳ್ಳಿಯ ಬಳಿಯಲ್ಲಿ ಭದ್ರಾನದಿಯ ಅಣೆಕಟ್ಟೆಯೂ ಪೂರೈಸಿದ ಮೇಲೆ ಸುಮಾರು ಎರಡು ಲಕ್ಷ ಎಕರೆಗಳ ಭೂಮಿಗಳು ನೀರಾವರಿ ಸಾಗುವಳಿಗೆ ಬರುತ್ತವೆ. ಕಳೆದ ಹದಿಮೂರು ವರ್ಷಗಳಿಂದ ನೀರಾವರಿ ಕಾಮಗಾರಿಗಳಿಗಾಗಿಯೇ ಸುಮಾರು ಮೂರೂವರೆ ಕೋಟಿ ರೂಪಾಯಿಗಳು ವೆಚ್ಚವಾಗಿವೆ. ಮಳೆಯು ಕಡಮೆಯಾಗಿರುವ ಕಾರಣದಿಂದ ಖುಷ್ಕಿ ಬೆಳೆಯು ಕೂಡ ಸರಿಯಾಗಿ ನಡೆಯದೆ ಬಂಜರು ಬಿದ್ದಿರುವ ಪ್ರದೇಶಗಳಲ್ಲೆಲ್ಲ ನೀರಾವರಿ ವ್ಯವಸಾಯಕ್ಕೆ ಸಮೃದ್ಧವಾಗಿ ಜಲವಸತಿಯನ್ನುಂಟುಮಾಡುವುದಕ್ಕಾಗಿ ಸರ್ಕಾರದವರು ಹೊಸ ಹೊಸ ಅಣೆಗಳನ್ನು ಕಟ್ಟಿಸುವುದು, ಹೊಸ ಹೊಸ ಕೆರೆಗಳನ್ನು ಕಟ್ಟಿಸುವುದು, ಹೀನಸ್ಥಿತಿಯಲ್ಲಿರುವ ಹಳೆಯ ಕೆರೆಗಳನ್ನು ಜೀರ್ಣೋದ್ಧಾರಮಾಡಿಸುವುದು, ಮುಂತಾದ ಕಾರ್ಯಗಳಿಗಾಗಿ ಮತ್ತಾವ ಸರ್ಕಾರದವರೂ ಬಹುಶಃ ವೆಚ್ಚಮಾಡದೆ ಇರುವಷ್ಟು ಮಟ್ಟಿಗೆ ಹಣವನ್ನು ವ್ಯಯಮಾಡುತ್ತಿದ್ದಾರೆ.

ಬ್ರಿಟಿಷ್ ಇಂಡಿಯಾದಲ್ಲಿ ಮದರಾಸು, ಮುಂಬಯಿ ಮುಂತಾದ ಪ್ರಾಂತಗಳಲ್ಲಿ ಕೂಡ, ಜಲಾಶಯಗಳೇ ಮುಂತಾದುವುಗಳನ್ನು ಕಟ್ಟಿಸಿ ವ್ಯವಸಾಯಕ್ಕೆ ಅನುಕೂಲಪಡಿಸಬೇಕಾದರೆ, ಅದಕ್ಕಾಗಿ ವೆಚ್ಚಮಾಡಬೇಕಾದ ಮೂಲಧನದ ಮೇಲೆ ವರ್ಷಕ್ಕೆ ಸೇಕಡ ಆರರಷ್ಟಕ್ಕೆ ಕಡಮೆಯಾಗಿ ಸರ್ಕಾರಕ್ಕೆ ಹುಟ್ಟುವಳಿಯು ಬರುವಂತಿದ್ದರೆ ಅಲ್ಲಿಯ ಸರ್ಕಾರದವರು ಅವುಗಳನ್ನು ಕಟ್ಟಿಸುವುದೇ ಇಲ್ಲ; ತಕ್ಕಷ್ಟು ಹುಟ್ಟುವಳಿಯು ಬಾರದಿರುವ ಉದ್ಯಮಗಳಿಗಾಗಿ ಸರ್ಕಾರದವರು ಹಣವನ್ನು ವೆಚ್ಚಮಾಡಕೂಡದೆಂಬ ಆರ್ಥಿಕ ನಿಯಮದ ಮೇರೆಗೆ ನೋಡಿದರೆ, ಇದು ನ್ಯಾಯವೂ ಹೌದು. ಆದರೆ ಮೈಸೂರು ಸಂಸ್ಥಾನದ ಶ್ರೀಮನ್ಮಹಾರಾಜರವರ ಸರ್ಕಾರದವರ ಪ್ರಜಾವಾತ್ಸಲ್ಯವು ಅನನ್ಯಸಾಧಾರಣವಾದುದು. ಅವರು ಪ್ರಜೆಗಳ ಸುಖ ಸಂತೋಷಗಳೂ ಸೌಕರ್ಯಗಳೂ ತಮ್ಮ ಮೂಲಧನಕ್ಕೆ ಹೆಚ್ಚಿನ

ಪ್ರತಿಫಲಗಳೆಂಬ ಭಾವನೆಯಿಂದ ಕೂಡಿ, ವರ್ಷಕ್ಕೆ ಮೂಲಧನದ ಮೇಲೆ ಸೇಕಡ ಆರರಷ್ಟಕ್ಕಿಂತ ತೀರ ಕಡಮೆ ಹುಟ್ಟುವಳಿಯು ಮಾತ್ರವೇ ಬರುವ ಸನ್ನಿವೇಶಗಳಲ್ಲಿ ಕೂಡ ರೈತರ ಅನುಕೂಲಕ್ಕಾಗಿ ಅನೇಕ ಭಾರಿ ಭಾರಿ ಜಲಾಶಯಗಳನ್ನು ಕಟ್ಟಿಸಿ ವ್ಯವಸಾಯಕ್ಕೆ ಜಲವಸತಿಯನ್ನೇರ್ಪಡಿಸುತ್ತಿದ್ದಾರೆ.

ಆಳಿದ ಮಹಾಸ್ವಾಮಿಯವರ ರಾಜ್ಯಭಾರದ ರಜತಮಹೋತ್ಸವವು ನೆರವೇರಿದಾಗಿನಿಂದ ಈಚಿನ ಹದಿಮೂರು ವರ್ಷಗಳಲ್ಲಿ ಸರ್ಕಾರದವರು ಒಟ್ಟು ಅರವತ್ತೆರಡು ಲಕ್ಷ ರೂಪಾಯಿಗಳನ್ನು ವೆಚ್ಚಮಾಡಿ ೭,೪೦೦ ಕೆರೆಗಳನ್ನು ಜೀರ್ಣೋದ್ಧಾರಮಾಡಿಸಿದ್ದಾರೆ. ಅವುಗಳೂ ಸೇರಿ ೨೩,೪೫೩ ಕೆರೆಗಳಿಗೆ ವರ್ಷವರ್ಷವೂ ಕಾಮಗಾರಿ ನಡೆದು ವ್ಯವಸಾಯಕ್ಕೆ ಅನುಕೂಲವಾಗುತ್ತಿದೆ. ಅನೇಕ ಹೊಸ ಕೆರೆಗಳೂ ನಿರ್ಮಿತವಾಗಿವೆ. ಬೆಂಗಳೂರು ಡಿಸ್ಟ್ರಿಕ್ಟಿನಲ್ಲಿ ಕಟ್ಟಿಸಿರುವ ಕೇತೋಹಳ್ಳಿ ಕೆರೆ ಮತ್ತು ಮರಳವಾಡಿ ಕೆರೆ; ಮೈಸೂರು ಡಿಸ್ಟ್ರಿಕ್ಟಿನಲ್ಲಿ ಕಟ್ಟಿಸಿರುವ ಹೈರಿಗೆ ಕೆರೆ; ತುಮಕೂರು ಡಿಸ್ಟ್ರಿಕ್ಟಿನಲ್ಲಿ ಕಟ್ಟಿಸಿರುವ ತುಂಬಾಡಿ ಕೆರೆ, ದಳವಾಯಿ ಕೆರೆ, ನಿಡಸಾಲೆ ಕೆರೆ ಮತ್ತು ಭಾವನಹಳ್ಳಿ ಕೆರೆ; ಕೋಲಾರ ಡಿಸ್ಟ್ರಿಕ್ಟಿನಲ್ಲಿ ಕಟ್ಟಿಸಿರುವ ಕಾಮಸಮುದ್ರ ಕೆರೆ; ಮತ್ತು ಶಿವಮೊಗ್ಗ ಡಿಸ್ಟ್ರಿಕ್ಟಿನಲ್ಲಿ ಕಟ್ಟಿಸಿರುವ ಸೌಳಂಗ ಕೆರೆ;— ಇವು ಒಂಬತ್ತೂ ನೂತನವಾಗಿ ನಿರ್ಮಿತವಾಗಿರುವ ಕೆರೆಗಳಲ್ಲಿ ಮುಖ್ಯವಾಗಿವೆ. ಇವಕ್ಕಾಗಿಯೇ ಸುಮಾರು ೨೨ ಲಕ್ಷ ರೂಪಾಯಿಗಳು ವೆಚ್ಚವಾಗಿವೆ. ಈಚೆಗಂತೂ, ಮಳೆಯು ಸರಿಯಾಗಿ ಬೀಳದೆ ಪದೇ ಪದೇ ಖುಷ್ಕಿ ಬೆಳೆಗಳೂ ಆಗದಿರುವ ಪ್ರದೇಶಗಳಲ್ಲಿ ವ್ಯವಸಾಯಕ್ಕೆ ಸಮೃದ್ಧವಾಗಿ ಜಲವಸತಿಯನ್ನುಂಟುಮಾಡುವ ಉದ್ದೇಶದಿಂದ "ನೀರಾವರಿ ಅಭಿವೃದ್ಧಿಯ ನಿಧಿ" ("ಇರಿಗೇಷನ್ ಡೆವಲಪ್ಮೆಂಟ್ ಫಂಡ್") ಎಂಬ ನಿಧಿಯೊಂದನ್ನು ಸರ್ಕಾರದವರು ಹೊಸದಾಗಿ ಏರ್ಪಡಿಸಿ ಅದಕ್ಕೆ ಆರಂಭದ ಮೊತ್ತವಾಗಿ ೨೮ ಲಕ್ಷ ರೂಪಾಯಿಗಳನ್ನು ೧೯೩೯ನೆಯ ಇಸವಿ ಜುಲೈ ೧ನೆಯ ತಾರೀಖಿನ ದಿನ ಸೇರಿಸಿದ್ದಾರೆ. ಆ ನಿಧಿಯಿಂದ ಹೊಸ ಜಲಾಶಯಗಳನ್ನೇರ್ಪಡಿಸುವುದಕ್ಕೆ ಮಾತ್ರವೇ ಅಲ್ಲದೆ ಹಳೆಯವುಗಳಿಗೆ ಕಾಮಗಾರಿ ಮಾಡಿಸುವುದಕ್ಕೂ ಹಣವನ್ನೊದಗಿಸುವುದು ಸಾಧ್ಯವಾಗುವಂತೆ ಅದರ ವ್ಯಾಪ್ತಿಯನ್ನೂ ಆಶಯವನ್ನೂ ಹೆಚ್ಚಿಸುವ ಯೋಚನೆಯನ್ನು ಈಗ (೧೯೪೦) ಸರ್ಕಾರದವರು ಮಾಡುತ್ತಿದ್ದಾರೆ. ಬೆಂಗಳೂರು ಡಿಸ್ಟ್ರಿಕ್ಟಿನಲ್ಲಿ ಭೈರಮಂಗಲದ ಕೆರೆ, ಆಲಹಳ್ಳಿ ಕೆರೆ; ಕೋಲಾರ ಡಿಸ್ಟ್ರಿಕ್ಟಿನಲ್ಲಿ ತಿಪ್ಪಗಾನಹಳ್ಳಿ ಕೆರೆ ಮತ್ತು ರಾಗಿಮಾಕಲಹಳ್ಳಿ ಕೆರೆ;— ಈ ನಾಲ್ಕು

ಕೆರೆಗಳನ್ನೂ ಸುಮಾರು ಒಂಬತ್ತೂವರೆ ಲಕ್ಷ ರೂಪಾಯಿಗಳ ವೆಚ್ಚದಲ್ಲಿ ಕಟ್ಟಿಸಬೇಕೆಂದು ನಿರ್ಧರವಾಗಿರುವುದಲ್ಲದೆ, ಈ ವೆಚ್ಚಕ್ಕೆ ಆ ನಿಧಿಯಿಂದ ಹಣವನ್ನೊದಗಿಸುವಂತೆಯೂ ಗೊತ್ತಾಗಿದೆ. ಶಿವಮೊಗ್ಗ ಮತ್ತು ಚಿತ್ರದುರ್ಗ ಡಿಸ್ಟ್ರಿಕ್ಟುಗಳಲ್ಲಿ ತುಂಗಾನದಿಯೇ ಮುಂತಾದ ನದಿಗಳಿಗೆ ಅಣೆಗಳನ್ನು ಕಟ್ಟಿಸಿ ಸುಮಾರು ೩೨,೦೦೦ ಎಕರೆಗಳ ಭೂಪ್ರದೇಶಕ್ಕೆ ಸಮೃದ್ಧವಾಗಿ ನೀರಾವರಿ ವ್ಯವಸಾಯಕ್ಕೆ ಜಲವಸತಿಯುಂಟಾಗುವಂತೆ ಮಾಡುವ ವಿಚಾರವೂ ಸರ್ಕಾರದವರ ಪರ್ಯಾಲೋಚನೆಯಲ್ಲಿದೆ. ಸಣ್ಣ ಪುಟ್ಟ ಕೆರೆಗಳ ಜೀರ್ಣೋದ್ಧಾರಕ್ಕಾಗಿ ತ್ರೈವಾರ್ಷಿಕ ಕಾರ್ಯಕ್ರಮವೊಂದು ಏರ್ಪಟ್ಟು ಮೊದಲನೆಯ ವರ್ಷದ ವೆಚ್ಚಕ್ಕಾಗಿ ಎರಡು ಲಕ್ಷ ರೂಪಾಯಿಗಳು ಮಂಜೂರಾಗಿವೆ. ಚೆನ್ನಪಟ್ಟಣ ತಾಲ್ಲೂಕು ಕನ್ನಮಂಗಲದ ಬಳಿಯಲ್ಲಿ ಕಣ್ವನದಿಯ ಅಣೆಕಟ್ಟೆಯ ಜಲಾಶಯ, ಚಳ್ಳಕೆರೆ ತಾಲ್ಲೂಕು ಪರಶುರಾಮಪುರದ ಬಳಿಯ ಕೆರೆ, ಕುಣಿಗಲು ತಾಲ್ಲೂಕು ಹೊನ್ನಮಾಚೇನಹಳ್ಳಿಯ ಕೆರೆ, ಮತ್ತು ಮೈಸೂರು ತಾಲ್ಲೂಕು ಕಡಕೊಳದ ಬಳಿಯಲ್ಲಿ ಎಣ್ಣೆಹೊಳೆಯ ಅಣೆಕಟ್ಟೆಯ ಜಲಾಶಯ— ಇವು ನಾಲ್ಕೂ ಸಹ ಸುಮಾರು ಇಪ್ಪತ್ತೆರಡೂವರೆ ಲಕ್ಷ ರೂಪಾಯಿಗಳ ವೆಚ್ಚದಲ್ಲಿ ನಿರ್ಮಿತವಾಗಿ ಏಳು ಸಾವಿರ ಎಕರೆಗಳಿಗಿಂತಲೂ ಹೆಚ್ಚಿನ ವಿಸ್ತೀರ್ಣಕ್ಕೆ ವ್ಯವಸಾಯಕ್ಕೆ ನೀರನ್ನೊದಗಿಸಲನುಕೂಲಿಸುತ್ತದೆ.

**ಗ್ರಾಮ ಪುನರುಜ್ಜೀವನ.**— ಗ್ರಾಮ ಪುನರುಜ್ಜೀವನ ಕಾರ್ಯಕಲಾಪಗಳಲ್ಲಿ, ಆಳಿದ ಮಹಾಸ್ವಾಮಿಯವರಾದ ಶ್ರೀಮನ್ಮಹಾರಾಜರವರಿಗೂ, ಸರ್ ಮಿರ್ಜಾ ಎಂ. ಇಸ್ಮಾಯಿಲ್‌ರವರಿಗೂ ಪರಮಾದರ. ಗ್ರಾಮಗಳು ಸಮಸ್ತ ವಿಧಗಳಲ್ಲಿಯೂ ಸೌಕರ್ಯಸುಸಜ್ಜಿತವಾಗಿದ್ದು, ಜನಜೀವನದ ಮಟ್ಟವು ದಿನದಿನವೂ ಮೇಲಕ್ಕೇರುತ್ತ ಬರಬೇಕೆಂಬುದೇ ಸರ್ಕಾರದವರು ಆದರ್ಶವಾಗಿಟ್ಟುಕೊಂಡಿರುವ ಧ್ಯೇಯ. ಆಳಿದ ಮಹಾಸ್ವಾಮಿಯವರು ಲಲಿತಾದ್ರಿಪುರವೆಂಬ ಮಾದರಿ ಗ್ರಾಮವನ್ನೇರ್ಪಡಿಸಿ ಒಟ್ಟು ಭರತಖಂಡಕ್ಕೇ ಮೇಲ್ಪಂಕ್ತಿಯನ್ನು ಹಾಕಿದುದೂ, ಸರ್ಕಾರದವರು ಅದರ ಆಶಯವನ್ನು ಗ್ರಹಿಸಿ ಪ್ರತಿಯೊಂದು ಡಿಸ್ಟ್ರಿಕ್ಟಿನಲ್ಲಿಯೂ ಮಾದರಿ ಗ್ರಾಮಗಳನ್ನೇರ್ಪಡಿಸುತ್ತ ಬಂದಿರುವುದೂ, ಆ ಧ್ಯೇಯಸಾಧನೆಯ ನಿಮಿತ್ತವಾಗಿಯೇ. ನಮ್ಮ ಮೈಸೂರು ಸಂಸ್ಥಾನದ ಸರ್ಕಾರದವರು ಮಾದರಿ ಗ್ರಾಮಗಳನ್ನು ಏರ್ಪಡಿಸುವಷ್ಟರಿಂದಲೇ ತೃಪ್ತಿಹೊಂದದೆ ಹಲವು ರೀತಿಗಳಲ್ಲಿ ಗ್ರಾಮಾಭಿವೃದ್ಧಿ ಕಾರ್ಯಗಳನ್ನು ನೆರವೇರಿಸಿಯೂ ನೆರವೇರಿಸುತ್ತಲೂ, ಬಂದಿದ್ದಾರೆ. ಬಡರೈತರಿಗೆ ತಮ್ಮ ವಿರಾಮಕಾಲಗಳಲ್ಲಿ

ಉಪವೃತ್ತಿಗಳೊದಗುವಂತೆ ಮಾಡುವುದಕ್ಕಾಗಿ ಅನೇಕ ಸಣ್ಣ ಪುಟ್ಟ ಕೈಗಾರಿಕೆಗಳು ಏರ್ಪಟ್ಟಿವೆ. ಅವುಗಳಲ್ಲೆಲ್ಲ, ಅತ್ಯಂತ ದೀರ್ಘಾಲೋಚನೆಯಿಂದಲೂ ದೂರದೃಷ್ಟಿಯಿಂದಲೂ ನೆರವೇರಿಸಿದ ಕಾರ್ಯವು ಬದನವಾಳ ಮುಂತಾದ ಸ್ಥಳಗಳಲ್ಲಿ ಖಾದಿ ಕಾರ್ಯಾಲಯಗಳನ್ನೇರ್ಪಡಿಸಿ ಅಸಂಖ್ಯಾತ ಮಂದಿ ಬಡವರಿಗೆ ಅನುಕೂಲಮಾಡಿಕೊಟ್ಟಿರುವುದು. ಬ್ರಿಟಿಷ್ ಇಂಡಿಯಾದ ನಾನಾ ಪ್ರಾಂತಗಳಲ್ಲಿ ಕೂಡ ಖಾದಿಗೆ ಪ್ರೋತ್ಸಾಹ ಕೊಡುವ ವಿಷಯಕ್ಕೆ ಅಲ್ಲಿಯ ಸರ್ಕಾರದವರು ಪ್ರತಿಕೂಲರಾಗಿದ್ದ ಕಾಲದಲ್ಲಿ, ಶ್ಲಾಘ್ಯತರವಾದ ದೇಶಾಭಿಮಾನದಿಂದಲೂ ದೂರದೃಷ್ಟಿಯಿಂದಲೂ ಮಹಾಪ್ರಭುಗಳವರು ಆಜ್ಞಾಪಿಸಿದ ಮೇರೆಗೆ ಖಾದಿ ಕೈಗಾರಿಕೆಯ ಪುನರುಜೀವನಕ್ಕೆ ಪ್ರೋತ್ಸಾಹ ಕೊಟ್ಟ ಮಹನೀಯರು ಸರ್ ಮಿರ್ಜಾ ಎಂ. ಇಸ್ಮಾಯಿಲ್‌ರವರು ಮತ್ತು ಅವರ ಸಹೋದ್ಯೋಗಿಗಳು. ಈಚಿನ ಹದಿಮೂರು ವರ್ಷಗಳಿಂದ ರೇಷ್ಮೆ ಕೈಗಾರಿಕೆಗೂ ಅದೇ ರೀತಿ ಪ್ರೋತ್ಸಾಹ ಲಭಿಸುತ್ತಿದೆ. ಜಪಾನ್ ಮುಂತಾದ ದೇಶಗಳಿಂದೊದಗಿದ ಮಿತಿಮೀರಿದ ಪೈಪೋಟಿಯ ಹೊಡೆತಕ್ಕೆ ಸಿಕ್ಕಿ ರೇಷ್ಮೆಯ ಕೈಗಾರಿಕೆಯು ಜರ್ಝರಿತವಾಗಿ ಹೋಗುತ್ತಿದ್ದುದು ತಪ್ಪಿದೆ. ಏಕೆಂದರೆ, ಉಪ್ಪುನೇರಳೆ ವ್ಯವಸಾಯಕ್ಕೆ ಭೂಮಿಯನ್ನು ಕೊಡುವುದು, ನೆಪಮಾತ್ರದ ಬಡ್ಡಿಯ ಮೇಲೆ ಸಾಲಗಳನ್ನು ಕೊಡುವುದು, ಉತ್ತಮವಾದ ಜಾತಿಯ ಉಪ್ಪುನೇರಳೆ ಕಡ್ಡಿಗಳನ್ನು ಉಚಿತವಾಗಿ ಒದಗಿಸಿ ಸಹಾಯಮಾಡುವುದು, ರೇಷ್ಮೆ ಕೋಠಿಗಳಲ್ಲಿ ಆಧುನಿಕ ರೀತಿಯ ಯಂತ್ರ ಸಲಕರಣೆಗಳನ್ನಿಟ್ಟು ಮಿಶ್ರಜಾತಿಯ ಮತ್ತು ರೋಗರಹಿತವಾದ ರೇಷ್ಮೆಹುಳುಗಳ ಮೊಟ್ಟೆಗಳನ್ನು ಒದಗಿಸುವುದು, ಮುಂತಾದ ವಿವಿಧ ಸೌಕರ್ಯಗಳನ್ನೊದಗಿಸಿದುದರ ಪರಿಣಾಮವಾಗಿ ಇಂದು ೨,೦೦,೦೦೦ ಕುಟುಂಬಗಳಿಗೆ ಜೀವನವು ನಡೆಯುತ್ತಿದೆ. ರೇಷ್ಮೆ ಗೂಡುಗಳ ನೂಲನ್ನು "ಚರಕ"ವೆಂಬ ರಾಟೆಯಿಂದ ಬಿಚ್ಚುವ ವಿಧಾನಕ್ಕೆ ಬದಲಾಗಿ "ಫಿಲೇಚರ್" ಯಂತ್ರ ಸಾಧನಗಳಿಂದ ಹಸನಾದ ರೇಷ್ಮೆ ನೂಲನ್ನು ತೆಗೆಯುವ ವಿಧಾನವು ಹೆಚ್ಚು ಹೆಚ್ಚಾಗಿ ಪ್ರಚಾರಕ್ಕೆ ಬರುತ್ತಿದೆ. ಮೈಸೂರು ನಗರದಲ್ಲಿ ಸ್ಥಾಪಿತವಾಗಿರುವ ರೇಷ್ಮೆ ಕಾರ್ಖಾನೆಯಲ್ಲಿ ನೆಯ್ಗೆಯಾಗಿ ಸಿದ್ಧವಾದ ರೇಷ್ಮೆ ಸನಗುಗಳು ಫ್ರಾನ್ಸ್ ಮುಂತಾದ ದೇಶಗಳಿಂದ ಆಮದಾಗಿ ಬರುತ್ತಿದ್ದ ರೇಷ್ಮೆ ಸನಗುಗಳಿಗಿಂತ ಶ್ರೇಷ್ಠವಾಗಿವೆ. ತಿರುಮಕೂಡಲು ನರಸೀಪುರದಲ್ಲಿ ಏರ್ಪಟ್ಟಿರುವ "ಫಿಲೇಚರ್" ಕಾರ್ಖಾನೆಯಲ್ಲಿ ಬಹಳ ಹಸನಾದ ರೇಷ್ಮೆಯ ನೂಲು ಸಿದ್ಧವಾಗಿ, ಪ್ರಪಂಚದಲ್ಲೇ ಅತ್ಯಂತ ಹಸನಾದ

ರೇಷ್ಮೆಯನ್ನು ಮಾತ್ರವೇ ಕೊಳ್ಳುವ ಆಸ್ಟ್ರೇಲಿಯಾ ಖಂಡಕ್ಕೆ ಕೂಡ ಮಾರಾಟವಾಗುತ್ತಿರುವುದು ಮೈಸೂರು ಸಂಸ್ಥಾನದವರ ಹೆಮ್ಮೆ.

ವ್ಯವಸಾಯಗಾರರು ವಿರಾಮಕಾಲದ ಉಪವೃತ್ತಿಯಾಗಿ ಕೈಕೊಳ್ಳಲನುಕೂಲಿಸುವಂತೆ ಸರ್ಕಾರದವರು ಊರ್ಜಿತ ಸ್ಥಿತಿಗೆ ತಂದಿರುವ ಮತ್ತೊಂದು ಕೈಗಾರಿಕೆಯು, ಉಣ್ಣೆ ನೆಯ್ಗೆಯ ಕೈಗಾರಿಕೆ. ನಮ್ಮ ಸಂಸ್ಥಾನದ ಕುರಿಗಳ ಉಣ್ಣೆಯು ಒರಟಾಗಿಯೂ ಮೋಟಾಗಿಯೂ ಇರುವ ಕೊರತೆಯನ್ನು ಗಮನಿಸಿ, ಸರ್ ಮಿರ್ಜಾ ಎಂ. ಇಸ್ಮಾಯಿಲ್‌ರವರೂ ಅವರ ಸಹೋದ್ಯೋಗಿಗಳೂ ೧೯೨೬ನೆಯ ಇಸವಿಯಿಂದೀಚೆಗೆ ಹೆಬ್ಬಾಳ, ಅಜ್ಜಂಪುರ, ಯೆಲಚಿಹಳ್ಳಿ, ಕೋಲಾರ ಮುಂತಾದ ಸ್ಥಳಗಳಲ್ಲಿ ಕುರಿಗಳನ್ನು ಉತ್ತಮ ರೀತಿಯಲ್ಲಿ ಸಾಕಿ ತಳಿಯನ್ನು ಮೇಲುಪಡಿಸುವ ಕ್ಷೇತ್ರಗಳನ್ನು ಏರ್ಪಡಿಸಿದ್ದಾರೆ. ಬಹಳ ಬೆಲೆಯನ್ನು ಕೊಟ್ಟು ವಿದೇಶದಿಂದ ತರಿಸಿದ ಮೆರೀನೋ ಕುರಿಗಳ ಮತ್ತು ಮೆರೀನೋ ಟಗರುಗಳ ಸಹಾಯದಿಂದ ಮಿಶ್ರಜಾತಿಯ ಮರಿಗಳನ್ನಿಳಿಸಿ ಕುರಿಗಳ ತಳಿಯನ್ನು ಉತ್ತಮಪಡಿಸುವ ವ್ಯವಸ್ಥೆಯು ಅವುಗಳಲ್ಲಿ ಏರ್ಪಟ್ಟಿದೆ. ಕುರಿಗಳನ್ನು ಸಾಕಲು ಇಷ್ಟಪಡುವವರೆಲ್ಲರೂ ಮಿಶ್ರಜಾತಿಯ ಆ ಮರಿಗಳನ್ನು ಕೊಂಡು ಪ್ರಯೋಜನ ಪಡೆಯುತ್ತಿದ್ದಾರೆ. ಮೆರೀನೋ ಮಿಶ್ರ ತಳಿಯ ಕುರಿಗಳು ಬೇಕೆಂದು ಜನರು ಬಹಳವಾಗಿ ಕೇಳುತ್ತಿರುವ ಕಾರಣ, ಸರ್ಕಾರದವರು ಆರು ಸಾವಿರ ರೂಪಾಯಿಗಳನ್ನು ಕೊಟ್ಟು ದಕ್ಷಿಣ ಆಫ್ರಿಕಾದಿಂದ ಈಚೆಗೆ ಇಪ್ಪತ್ತೇಳು ಮೆರೀನೋ ಕುರಿಗಳನ್ನು ತರಿಸಿದ್ದಾರೆ. ಇಷ್ಟು ಹೆಚ್ಚು ಸಂಖ್ಯೆಯ ಮೆರೀನೋ ಕುರಿಗಳು ಭರತಖಂಡಕ್ಕೆ ಮತ್ತಾವಾಗಲೂ ಅಲ್ಲಿಂದ ಬಂದಿರಲಿಲ್ಲ.

ಗೋಧನವೇ ವ್ಯವಸಾಯಗಾರರ ಮುಖ್ಯಾವಲಂಬನ. ಆದಕಾರಣ, ದನಕರುಗಳ ಯೋಗಕ್ಷೇಮವನ್ನು ಸುರಕ್ಷಿತವಾಗಿ ನೋಡಿಕೊಳ್ಳುವುದೂ ಸಹ ಗ್ರಾಮಾಭಿವೃದ್ಧಿ ಪ್ರಯತ್ನದಲ್ಲಿ ಅತ್ಯವಶ್ಯವಾಗಿ ನಡೆಯಬೇಕಾದ ಕಾರ್ಯ. ಸರ್ ಮಿರ್ಜಾ ಎಂ. ಇಸ್ಮಾಯಿಲ್‌ರವರು ದಿವಾನ್ ಪದವಿಗೆ ಬಂದಮೇಲೆ ಈ ಕಾರ್ಯವು ಎಷ್ಟು ಶ್ರದ್ಧೆಯಿಂದ ನಡೆಯುತ್ತಿದೆಯೆಂಬುದು, ಸಂಸ್ಥಾನದಲ್ಲಿ ಈಗಿರತಕ್ಕ ೮೭ ಪಶು ವೈದ್ಯಶಾಲೆಗಳಲ್ಲಿ ೪೦ ಪಶು ವೈದ್ಯಶಾಲೆಗಳು ೧೯೨೬ನೆಯ ಇಸವಿಯಿಂದೀಚೆಗೆ ಏರ್ಪಟ್ಟವುಗಳೆಂಬ ಒಂದು ಅಂಶದಿಂದಲೇ ವ್ಯಕ್ತವಾಗುವುದು. ಪ್ರತಿ ವರ್ಷವೂ ಕೆಲಕೆಲವು ನೂತನ ಪಶು ವೈದ್ಯಶಾಲೆಗಳು ಏರ್ಪಟ್ಟು, ತಮ್ಮ ಕಷ್ಟವನ್ನು ಹೇಳಿಕೊಳ್ಳಲಾರದ ಮೂಗುಜೀವಿಗಳಿಗೆ ಚಿಕಿತ್ಸಾ ಸೌಕರ್ಯವು

ಲಭಿಸುತ್ತಿದೆ. ದೊಡ್ಡರೋಗವು ಬಾರದಂತೆ ದನಗಳಿಗೆ ಸೂಚೀಮುಖಚಿಕಿತ್ಸೆ ಮಾಡುವ ನವೀನ ವಿಧಾನವು ನಮ್ಮ ಸಂಸ್ಥಾನದಲ್ಲಿ ನಡೆದ ಸಂಶೋಧನ ದಿಂದ ಹೊರಬಿದ್ದುದರ ಫಲಿತಾಂಶವಾಗಿ, ಪ್ರತಿ ವರ್ಷವೂ ಲೆಕ್ಕವಿಲ್ಲದಷ್ಟು ರಾಸುಗಳು ಆ ಅಂಟುರೋಗಕ್ಕೆ ಬಲಿಯಾಗುತ್ತಿದ್ದುದು ತಪ್ಪಿ ರೈತರಿಗೆಲ್ಲ ಅಪಾರವಾದ ಸಂತೋಷವುಂಟಾಗಿದೆ; ಪಶು ವೈದ್ಯರು ವ್ಯವಸಾಯಗಾರರ ಮನೆಯ ಬಾಗಿಲಿಗೇ ಹೋಗಿ ದನಕರುಗಳಿಗೆ ಚಿಕಿತ್ಸೆ ಮಾಡುತ್ತಾರೆ. ಅಲ್ಲದೆ, ಬ್ರಿಟಿಷ್ ಇಂಡಿಯಾದ ಹಲವು ಪ್ರಾಂತಗಳವರೂ ಅನೇಕ ಸಂಸ್ಥಾನಗಳವರೂ ಸಹ ದೊಡ್ಡರೋಗದ ಆ ಚಿಕಿತ್ಸಾ ವಿಧಾನವನ್ನು ಶ್ಲಾಘಿಸಿ ತಾವೂ ಅದನ್ನು ಪ್ರಯೋಗಿಸುತ್ತಿದ್ದಾರೆ. ಸರ್ಕಾರದವರು ಅಜ್ಜಂಪುರ, ಹುಣಸೂರು, ಮುಂತಾದ ಅನೇಕ ಸ್ಥಳಗಳಲ್ಲಿ ಪಶುಪಾಲನೆಯ ಕ್ಷೇತ್ರಗಳನ್ನೇರ್ಪಡಿಸಿ, ಉತ್ತಮವಾದ ಬೀಜದ ಹೋರಿಗಳನ್ನು ಗ್ರಾಮ ಪಂಚಾಯಿತಿಗಳಿಗೆ ಸುಲಭ ಬೆಲೆಗೆ ವಿಕ್ರಯಿಸಿ ದನಗಳ ತಳಿಯ ಅಭಿವೃದ್ಧಿಗೆ ಸಹಾಯಮಾಡುತ್ತಿದ್ದಾರೆ. ಉತ್ತಮ ರೀತಿಯಲ್ಲಿ ಕೋಳಿಗಳನ್ನು ಸಾಕುವುದು, ಜೇನಿನ ಕೈಗಾರಿಕೆ, ಮುಂತಾದುವುಗಳನ್ನು ವೃದ್ಧಿಪಡಿಸುತ್ತಿದ್ದಾರೆ. ೧೯೩೭ನೆಯ ಇಸವಿಯಿಂದೀಚೆಗೆ ಒಟ್ಟು ೧೧,೯೧೮ ಗ್ರಾಮ ಪಂಚಾಯಿತಿಗಳೇರ್ಪಟ್ಟಿವೆ. ಅವುಗಳು ಬಗೆಬಗೆಯ ಗ್ರಾಮಾಭಿವೃದ್ಧಿ ಕಾರ್ಯಗಳನ್ನು ನಡೆಯಿಸುತ್ತಿವೆ. ಗ್ರಾಮದಿಂದ ಗ್ರಾಮಕ್ಕೆ ಹೋಗುವ ಸಂಚಾರ ಮಾರ್ಗಗಳನ್ನೇಪಡಿಸುವುದು; ಪಾಠಶಾಲೆಗಳನ್ನೂ ದೇವಾಲಯಗಳನ್ನೂ ನೋಡಿಕೊಳ್ಳುವುದು; ಕೆರೆ ಕಾಮಗಾರಿಗಳನ್ನು ಮಾಡಿಸುವುದು; ವ್ಯವಸಾಯದ ಮುಟ್ಟುಗಳನ್ನೂ ಬೀಜದ ಧಾನ್ಯಗಳನ್ನೂ ತರಿಸಿ ಮಾರಾಟಮಾಡುವುದು; ಉತ್ತಮವಾದ ಚರಂಡಿಗಳನ್ನು ಮಾಡಿಸುವುದು; ಪುಸ್ತಕ ಭಂಡಾರಗಳು, ಭಜನೆಯ ಮನೆಗಳು, ವಾಚನಾಲಯಗಳು, ಗ್ರಾಮ ಪಂಚಾಯಿತಿ ಮಂದಿರಗಳು ಮೊದಲಾದುವುಗಳನ್ನು ಕಟ್ಟಿಸುವುದು; ಪರಸ್ಪರ ಸಹಾಯಸಂಘಗಳನ್ನೇರ್ಪಡಿಸುವುದು; ಹಳ್ಳಕೊಳ್ಳಗಳನ್ನು ಮುಚ್ಚಿಸಿ, ಅನಾರೋಗ್ಯಕರವಾದ ಗಿಡಗೆಂಟೆಗಳನ್ನು ಕೀಳಿಸಿ ಗ್ರಾಮಗಳನ್ನು ಆರೋಗ್ಯ ಸ್ಥಿತಿಯಲ್ಲಿಟ್ಟುಕೊಳ್ಳುವುದು; ಮುಂತಾದ ಕಾರ್ಯಗಳೆಲ್ಲ ಗ್ರಾಮ ಪಂಚಾಯಿತಿಗಳಿಂದ ಬಹು ಚೆನ್ನಾಗಿ ನಡೆಯುತ್ತಿವೆ. ೧೯೩೬ನೆಯ ಇಸವಿಯಲ್ಲಿ ಬೆಂಗಳೂರು ಮೈಸೂರು ನಗರಗಳೂ ಕೋಲಾರ ಚಿನ್ನದಗಣಿ ಪ್ರದೇಶವೂ ಹೊರತು ಮತ್ತೆಲ್ಲಿಯೂ ವಿದ್ಯುಚ್ಛಕ್ತಿಯ ದೀಪಗಳಿರಲಿಲ್ಲ. ಈಚೆಗೆ ಅನೇಕ ಗ್ರಾಮಗಳಿಗೂ ಪಟ್ಟಣಗಳಿಗೂ ಸರ್ಕಾರದವರು ವಿದ್ಯುಚ್ಛಕ್ತಿಯ ದೀಪಗಳನ್ನು

ಹಾಕಿಸಿದ್ದಾರೆ. ಹಾಗೆ ವಿದ್ಯುಚ್ಛಕ್ತಿಯ ದೀಪಗಳಿರತಕ್ಕ ಗ್ರಾಮಗಳ ಮತ್ತು ಪಟ್ಟಣಗಳ ಸಂಖ್ಯೆಯು ೧೯೪೦ನೆಯ ಇಸವಿ ಜೂನ್ ತಿಂಗಳಿನ ಕೊನೆಯಲ್ಲಿ ೨೦೪. ಇನ್ನೂ ಹಲವು ಸ್ಥಳಗಳಿಗೆ ವಿದ್ಯುಚ್ಛಕ್ತಿಯ ದೀಪಗಳನ್ನು ಹಾಕಿಸುವ ಪ್ರಯತ್ನವು ನಡೆಯುತ್ತಿದೆ. ಐದು ವರ್ಷಗಳ ಅವಧಿಯಲ್ಲಿ ಸಂಸ್ಥಾನದ ಸಮಸ್ತ ಗ್ರಾಮಗಳಿಗೂ ಸಮೃದ್ಧವಾಗಿ ಜಲವಸತಿಯು ದೊರೆಯುವಂತೆ ಕುಡಿಯುವ ನೀರಿನ ಬಾವಿಗಳನ್ನು ತೋಡಿಸಿಕೊಡುವ ಕಾರ್ಯಕ್ರಮವನ್ನೇರ್ಪಡಿಸಲು ಸರ್ಕಾರದವರು ಹದಿನೈದು ಲಕ್ಷ ರೂಪಾಯಿಗಳ ವೆಚ್ಚದ ಒಂದು ಕಾರ್ಯಕ್ರಮವನ್ನು ಮಂಜೂರು ಮಾಡಿದ್ದಾರೆ. ಕೆಲಕೆಲವು ಗ್ರಾಮಾಂತರ ಪ್ರದೇಶಗಳಲ್ಲಿ ಹಿಂದೆ ಊರ್ಜಿತ ಸ್ಥಿತಿಯಲ್ಲಿದ್ದು ಈಚೆಗೆ ಹೀನದಶೆಗೆ ಬಂದಿರುವ ಹಲವು ಕೈಗಾರಿಕೆ ಗಳನ್ನು ಮತ್ತೆ ಪುನರುಜ್ಜೀವನಗೊಳಿಸುವುದಕ್ಕಾಗಿ ಕೈಗಾರಿಕೆ ಇಲಾಖೆಯ ಸಿಬ್ಬಂದಿಯವರು ಕೆಲಕೆಲವು ಗ್ರಾಮಗಳಲ್ಲಿ ಅಲ್ಲಿಗೆ ತಕ್ಕ ಕೈಗಾರಿಕೆ ಗಳನ್ನು ಜನರೆದುರಿಗೇ ನಡೆಯಿಸಿ ಬೋಧಿಸುವ ವ್ಯವಸ್ಥೆಯೊಂದು ಈಚೆಗೆ ಏರ್ಪಟ್ಟಿದೆ. ವೈದ್ಯ ಸಹಾಯ, ವಿದ್ಯಾಭ್ಯಾಸ ಸೌಕರ್ಯ ಮುಂತಾದುವುಗಳನ್ನು ಸಾಧ್ಯ ಕಂಡಷ್ಟು ಹೆಚ್ಚಾಗಿ ಸರ್ಕಾರದವರು ಗ್ರಾಮಸ್ಥರಿಗೆ ಒದಗಿಸುತ್ತಿದ್ದಾರೆ. ಸರ್ಕಾರದ ಹುಟ್ಟುವಳಿಯು ಕಡಮೆ ಬೀಳುವುದನ್ನೂ ಗಮನಿಸದೆ, ಸರ್ಕಾರದವರು ಅವಶ್ಯಕಂಡ ಕೆಲವು ಪ್ರದೇಶ ಗಳಲ್ಲಿ ಕಂದಾಯದ ದರವನ್ನು ಕಡಮೆ ಮಾಡಿದ್ದಾರೆ. ಗ್ರಾಮಾಂತರ ಗಳಲ್ಲಿ ಪ್ರಜೆಗಳ ಸುಖಸಂತೋಷಗಳು ದಿನದಿನವೂ ವೃದ್ಧಿಯಾಗ ಲನುಕೂಲಿಸುವಂತೆ ಮಾಡಲು ಸಾಧ್ಯವಿರುವ ಸಮಸ್ತ ಪ್ರಯತ್ನಗಳೂ ನಡೆಯುತ್ತಿವೆ.

ಲಾರ್ಡ್ ಸ್ಯಾಮ್ಯುಯೆಲ್‌ರವರು ಈಚಿನ ತಮ್ಮ ಭಾಷಣದಲ್ಲಿ, "ಮೈಸೂರು ಸಂಸ್ಥಾನದ ಬಹು ಭಾಗಕ್ಕೆ ನಾನು ಮೋಟಾರುಕಾರಿನಲ್ಲಿ ಹೋಗಿಬಂದೆನು; ಅದಕ್ಕೆ ಅವಕಾಶ ದೊರೆಯಿತು. ಅನೇಕ ಗ್ರಾಮಗಳಿಗೆ ಹೋಗಿ ಪರಿಶೀಲಿಸಿ ಬಂದೆನು. ಶ್ರೀಮನ್ಮಹಾರಾಜರವರಿಗೂ ಮತ್ತು ದಿವಾನ್‌ರವರಿಗೂ ಬಹಳ ಪ್ರಿಯವಾಗಿರುವ ಗ್ರಾಮಪುನರುಜ್ಜೀವನ ಕಾರ್ಯಕಲಾಪಗಳ ವಿಷಯವಾಗಿ ಅನೇಕ ಸಂಗತಿಗಳನ್ನು ಕೇಳಿ ಗ್ರಹಿಸುವ ಅವಕಾಶವೂ ನನಗೆ ಲಭಿಸಿತು. ಈ ವಿಚಾರದಲ್ಲಿ ಮೈಸೂರು ಸಂಸ್ಥಾನ ದಲ್ಲಿ ಬಹಳ ಕೆಲಸವು ನಡೆದಿದೆ. ಅನೇಕ ಗ್ರಾಮಗಳಲ್ಲಿ ಅಸಾಧಾರಣವಾದ ಫಲಿತಾಂಶಗಳುಂಟಾಗಿವೆ. ನಾನು ಬ್ರಿಟಿಷ್ ಇಂಡಿಯಾ ಪ್ರಾಂತಗಳಲ್ಲಿ ಏಳಕ್ಕೂ ಭಾರತೀಯ ಸಂಸ್ಥಾನಗಳಲ್ಲಿ ಏಳಕ್ಕೂ ಹೋಗಿದ್ದೆ. ನಾನು

ಪ್ರತ್ಯಕ್ಷವಾಗಿ ನೋಡಿಯೂ, ಪರೋಕ್ಷವಾಗಿ ಕೇಳಿಯೂ ಮತ್ತು ಓದಿಯೂ ತಿಳಿದುಕೊಂಡ ಅಂಶಗಳಿಗನುಸಾರವಾಗಿ ಪರಿಶೀಲಿಸಿದರೆ, ಬ್ರಿಟಿಷ್ ಇಂಡಿಯಾ ಪ್ರಾಂತಗಳಲ್ಲೆಲ್ಲ ಒಂದು ಪ್ರಾಂತವು ಪ್ರಥಮ ಸ್ಥಾನವನ್ನಲಂಕರಿಸಿದೆ; ಅದು ಪಂಜಾಬು ಪ್ರಾಂತ; ಭಾರತೀಯ ಸಂಸ್ಥಾನಗಳಲ್ಲೆಲ್ಲ ಒಂದು ಸಂಸ್ಥಾನವು ಪ್ರಥಮ ಸ್ಥಾನವನ್ನಲಂಕರಿಸಿದೆ; ಅದು ಮೈಸೂರು ಸಂಸ್ಥಾನ"* ಎಂದು ಹೇಳಿದ್ದಾರೆ. ಮುಂಬಯಿ ಪ್ರಾಂತದಲ್ಲಿ ಕಾಂಗ್ರೆಸ್ ಪಂಗಡದ ಮುಖ್ಯ ಸಚಿವರಾಗಿದ್ದ ಶ್ರೀಮಾನ್ ಬಿ. ಜಿ. ಖೇರರವರು ೧೯೩೯ನೆಯ ಇಸವಿ ಜೂಲೈ ತಿಂಗಳಿನಲ್ಲಿ ಮೈಸೂರು ಸಂಸ್ಥಾನದ ಸ್ಥಿತಿಯನ್ನು ಕಣ್ಣಾರೆ ನೋಡಿ, ಮೈಸೂರು ಸಂಸ್ಥಾನದ ರೈತರು ಇತರೆಡೆಗಳಲ್ಲಿರುವ ರೈತರಿಗಿಂತ ಹೆಚ್ಚು ಸುಖಿಗಳಾಗಿರುವರೆಂದೂ, ಜನತೆಯ ಆರ್ಥಿಕಸ್ಥಿತಿಯನ್ನು ಉತ್ತಮಪಡಿಸುವುದರಲ್ಲಿ ಸರ್ಕಾರದವರು ಇತರೆಡೆಗಳಲ್ಲಿರುವುದಕ್ಕಿಂತ ಹೆಚ್ಚು ಶ್ರದ್ಧೆಯನ್ನು ವಹಿಸುತ್ತಿರುವರೆಂದೂ ಹೇಳಿದರು.

**ಕೈಗಾರಿಕೆಗಳ ಅಭಿವೃದ್ಧಿ.**— ವ್ಯವಸಾಯ ಕೈಗಾರಿಕೆಗಳ ಅಭಿವೃದ್ಧಿಯೇ ದೇಶಾಭ್ಯುದಯ ಸಾಧನೆ. ಇಂಗ್ಲೆಂಡ್, ಜರ್ಮನಿ, ರಷ್ಯ, ಜಪಾನ್, ಮುಂತಾದ ದೇಶಗಳೆಲ್ಲ ಈಗಿನ ಅಭ್ಯುದಯ ಸ್ಥಿತಿಗೆ ಬಂದಿರುವುದು ವ್ಯವಸಾಯ ಕೈಗಾರಿಕೆಗಳ ಅಭಿವೃದ್ಧಿಯಿಂದಲೇ. ಆಳಿದ ಮಹಾಸ್ವಾಮಿಯವರ ರಾಜ್ಯಭಾರದಲ್ಲಿ ಅವುಗಳ ಅಭಿವೃದ್ಧಿಗೆ ಅತ್ಯಂತ ಹೆಚ್ಚಾಗಿ ಅವಕಾಶವು ದೊರೆಯಿತು. ಅವರು, "ನಮ್ಮ ದೇಶವನ್ನು ಇತರ ದೇಶಗಳೊಡನೆ ಹೋಲಿಸಿ ನೋಡಿದುದರಲ್ಲಿ ನಮ್ಮಲ್ಲಿ ಎಷ್ಟರ ಮಟ್ಟಿನ ಬಡತನವೂ ಅಜ್ಞಾನವೂ ಅಲ್ಪಾಯುವೂ ನೆಲಸಿವೆ" ಎಂಬುದನ್ನು ೧೯೧೧ನೆಯ ಇಸವಿಯಷ್ಟು ಹಿಂದೆಯೇ ಮನಗಂಡು, "ತಮ್ಮ ಸಂಪತ್ತನ್ನು ಸ್ವಸಾಮರ್ಥ್ಯದಿಂದ ಹೇರಳವಾಗಿ ಹೆಚ್ಚಿಸಿಕೊಂಡ ಜನಾಂಗಗಳನ್ನು ಮೇಲ್ಪಂಕ್ತಿಯಾಗಿಟ್ಟುಕೊಂಡು" ವರ್ತಿಸುವುದೇ ನಮ್ಮ ಸಂಸ್ಥಾನದ ಅಭ್ಯುದಯ ಸಾಧನೆಗೆ ಮುಖ್ಯ ಮಾರ್ಗವೆಂದು ನಿರ್ಧರಿಸಿ ಆಗಿನಿಂದ ಯಾವಜ್ಜೀವವೂ ಸಂಸ್ಥಾನದಲ್ಲಿ ವ್ಯವಸಾಯ ಕೈಗಾರಿಕೆಗಳನ್ನು

* "I had an opportunity of motoring through a large part of Mysore and of visiting several of the villages and of hearing much of the village uplift movement which is so dear to the heart both of His Highness and of the Dewan, and there, very much has been achieved. The results in many places are remarkable. I visited seven of the Provinces and seven of the States of India and from all I saw and heard and from all I learnt and read, among the Provinces one stands in the forefront of the work done for village improvement, and that is the Punjab, and among the States, one stands pre-eminent, and that is Mysore."—Lord Samuel.

ಅಭಿವೃದ್ಧಿಪಡಿಸುತ್ತ ಬಂದರು. ಸಂಸ್ಥಾನದಲ್ಲಿ ಕೈಗಾರಿಕೆಗಳ ಮತ್ತು ವಾಣಿಜ್ಯದ ಇಲಾಖೆಯು ಏರ್ಪಟ್ಟುದೇ ೧೯೧೧ನೆಯ ಇಸವಿಯಲ್ಲಿ.

ಆಗಿನಿಂದ ಕೈಗಾರಿಕೆಗೆ ವಿಶೇಷ ಪ್ರೋತ್ಸಾಹವು ಲಭಿಸಲುಪಕ್ರಮವಾಯಿತು. ಅನೇಕ ಹೊಸ ಹೊಸ ಕೈಗಾರಿಕೆಗಳು ಏರ್ಪಟ್ಟುವು. ಕೈಗಾರಿಕೆಗಳಲ್ಲಿ ಆಸಕ್ತಿಯಿರತಕ್ಕವರಿಗೆ ಮೂಲಧನಕ್ಕಾಗಿ ಸಾಲಗಳು ದೊರೆಯಲನುಕೂಲಿಸಲೆಂಬ ಘನತರವಾದ ಉದ್ದೇಶದಿಂದ "ಮೈಸೂರ್ ಬ್ಯಾಂಕ್" ಎಂಬ ಕುಸೀದಾಲಯವು ೧೯೧೩ನೆಯ ಇಸವಿಯಲ್ಲಿ, ಆಳಿದ ಮಹಾಸ್ವಾಮಿಯವರ ಪ್ರೇರಣೆ ಪ್ರೋತ್ಸಾಹಗಳಿಂದಲೇ ಏರ್ಪಟ್ಟು ಅಭಿವೃದ್ಧಿಹೊಂದಿತು. ವರ್ತಕರ ತಿಳಿವಳಿಕೆಯು ಹೆಚ್ಚಿ ಅವರಲ್ಲಿ ಸೌಹಾರ್ದ ಸಹಕಾರಗಳೂ ಐಕಮತ್ಯವೂ ವೃದ್ಧಿಯಾಗಲನುಕೂಲಿಸಲೆಂಬ ಉದ್ದೇಶದಿಂದ ೧೯೧೬ನೆಯ ಇಸವಿಯಲ್ಲಿ "ಚೇಂಬರ್ ಆಫ್ ಕಾಮರ್ಸ್" ಎಂಬ ವಾಣಿಜ್ಯ ಶಾಲೆಯು ಬೆಂಗಳೂರು ನಗರದಲ್ಲಿ ಏರ್ಪಟ್ಟಿತು. ಕೈಗಾರಿಕೆಗಳ ಸಂಬಂಧದಲ್ಲಿ ವೃತ್ತಿ ಶಿಕ್ಷಣಪಡೆದು ಬರಲು ವಿದ್ಯಾರ್ಥಿವೇತನಗಳನ್ನು ಕೊಟ್ಟು ವಿದೇಶಗಳಿಗೆ ವಿದ್ಯಾರ್ಥಿಗಳನ್ನು ಕಳುಹಿಸುವ ಏರ್ಪಾಡು ನಡೆಯಿತು. ಸಣ್ಣ ಪುಟ್ಟ ಕೈಗಾರಿಕೆಗಳನ್ನು ನಡೆಯಿಸುವವರಿಗೆ ಸರ್ಕಾರದವರು ಸುಲಭ ಬಡ್ಡಿಯಲ್ಲಿ ತಕಾವಿ ಸಾಲಗಳನ್ನು ಕೊಡುವ ಏರ್ಪಾಡನ್ನು ಮಾಡಿದರು. ಕಬ್ಬಿಣದ ಕಾರ್ಖಾನೆ, ಸಾಬೂನಿನ ಕಾರ್ಖಾನೆ, ಲೋಹದ ಸಾಮಾನುಗಳ ಕಾರ್ಖಾನೆ, "ಕೃಷ್ಣರಾಜೇಂದ್ರ ಮಿಲ್ಸ್" ಗಿರಣಿ ಕಾರ್ಖಾನೆ, ನೆಯ್ಗೆಯ ಕಾರ್ಖಾನೆ, ಕುಶಲವಸ್ತು ರಚನೆಯ ಕಾರ್ಯಾಲಯ, ಮುಂತಾದುವುಗಳನ್ನೆಲ್ಲ ಸ್ಥಾಪಿಸಿ ಸರ್ಕಾರದವರು ಪ್ರೋತ್ಸಾಹವನ್ನಿತ್ತರು. ೧೯೨೪ನೆಯ ಇಸವಿಯಲ್ಲಿ ಲಂಡನ್ ನಗರದಲ್ಲಿ ನಡೆದ ಬ್ರಿಟಿಷ್ ಸಾಮ್ರಾಜ್ಯದ ವೆಂಬ್ಲಿ ವಸ್ತು ಪ್ರದರ್ಶನದಲ್ಲಿ ಮೈಸೂರು ಸಂಸ್ಥಾನಕ್ಕೆ ಮಾನ್ಯ ಸ್ಥಾನವು ಲಭಿಸಿತು. ಆಗ್ಗೆ ಸಮ್ರಾಜ್ಞಿಯವರಾಗಿದ್ದ ಮೇರಿ ರಾಣಿಯವರು ವೆಂಬ್ಲಿ ವಸ್ತು ಪ್ರದರ್ಶನಕ್ಕೆ ದಯಮಾಡಿದಾಗ ಮೈಸೂರು ಸಂಸ್ಥಾನದ ಕುಶಲ ವಸ್ತುಗಳನ್ನು ಬಹಳವಾಗಿ ಮೆಚ್ಚಿ ಅವುಗಳಲ್ಲಿ ಕೆಲವನ್ನು ಕ್ರಯಕ್ಕೆ ತೆಗೆದುಕೊಂಡು ಪ್ರೋತ್ಸಾಹಿಸಿದರು. ಸ್ವದೇಶ ವಿದೇಶಗಳಲ್ಲಿ ನಡೆದ ವಸ್ತು ಪ್ರದರ್ಶನಗಳಲ್ಲೆಲ್ಲ ಮೈಸೂರು ಸಂಸ್ಥಾನದ ಕಾರ್ಖಾನೆಗಳಲ್ಲಿ ರಚಿತವಾಗಿದ್ದ ವಸ್ತುಗಳಿಗೆ ಪಾರಿತೋಷಿಕಗಳೂ ಪ್ರಶಸ್ತಿ ಪತ್ರಿಕೆಗಳೂ ತಪ್ಪದೆ ಲಭಿಸಿದುವು.

ಮಹಾಪ್ರಭುಗಳವರ ರಾಜ್ಯಭಾರದ ರಜತ ಮಹೋತ್ಸವವು ನೆರವೇರಿದಾಗಿನಿಂದ ಈಚಿನ ಹದಿಮೂರು ವರ್ಷಗಳ ಅವಧಿಯಲ್ಲಿ

ನಡೆದಿರುವಷ್ಟು ಮಟ್ಟಿನ ಕೈಗಾರಿಕೆಗಳ ಅಭಿವೃದ್ಧಿಯು ಮತ್ತಾವಾಗಿನ ಹದಿಮೂರು ವರ್ಷಗಳ ಅವಧಿಯಲ್ಲಿಯೂ ನಡೆದಿರಲಿಲ್ಲವೆಂದು ಧಾರಾಳ ವಾಗಿ ಹೇಳಬಹುದಾಗಿದೆ. ಮಹಾಸ್ವಾಮಿಯವರಿಗಿದ್ದ ದೇಶೋನ್ನತಿ ಸಾಧನೆಯ ಮನೋಧರ್ಮದಿಂದ ಸ್ಫೂರ್ತಿಯನ್ನು ಪಡೆದವರಾಗಿ ಸರ್ ಮಿರ್ಜಾ ಎಂ. ಇಸ್ಮಾಯಿಲ್‌ರವರೂ ಮತ್ತು ಅವರ ಸಹೋದ್ಯೋಗಿ ಗಳೂ ಉದಾತ್ತವಾದ **ನಾಲ್ಕು ಆಶಯಗಳಿಂದ** ಕೂಡಿ ಕೈಗಾರಿಕೆಯ ಅಭಿವೃದ್ಧಿಯ ಕಾರ್ಯನೀತಿಯನ್ನು ಮುಂದುವರಿಸುತ್ತಿರುವುದು ಮನೋಜ್ಞವಾಗಿದೆ: ಪ್ರಜೆಗಳ ಬಳಕೆಗೆ ಬೇಕಾದ ನಾನಾ ವಸ್ತುಗಳಲ್ಲಿ ನಮ್ಮ ದೇಶದಲ್ಲಿ ರಚಿಸಿಕೊಳ್ಳುವುದು ಸಾಧ್ಯವಿರತಕ್ಕ ಸಮಸ್ತ ವಸ್ತುಗಳೂ ಸಂಸ್ಥಾನದಲ್ಲಿ ರಚಿತವಾಗುವಂತೆ ಮಾಡಿ, ಈಗ ವಿದೇಶಗಳಿಗೆ ಹೋಗು ತ್ತಿರುವ ಹಣವನ್ನು ನಮ್ಮ ಸಂಸ್ಥಾನದಲ್ಲೇ ಉಳಿಸಿರಬೇಕೆಂಬುದು ಆ ಆಶಯಗಳಲ್ಲಿ **ಮೊದಲನೆಯದು**. ವಿದ್ಯುಚ್ಛಕ್ತಿ ಇಲಾಖೆಗೆ ವಿದೇಶ ಗಳಿಂದ ಆಮದಾಗಿ ಬರಬೇಕಾಗಿದ್ದ "ಎಲೆಕ್ಟ್ರಿಕ್ ಟ್ರ್ಯಾನ್ಸ್‌ಫಾರ್ಮರು" ಗಳನ್ನು ಸಂಸ್ಥಾನದಲ್ಲೇ ರಚಿಸಿ ಒದಗಿಸಿಕೊಂಡು ಹೇರಳವಾಗಿ ಹಣ ವನ್ನುಳಿಸಿಕೊಳ್ಳಲು ವ್ಯವಸ್ಥೆ ಮಾಡಿರುವುದೇ ಮುಂತಾದುವು ಇದಕ್ಕೆ ನಿದರ್ಶನಗಳು. ಅಫೀಮು, ಭಂಗಿಸೊಪ್ಪು (ಗಾಂಜಾ), ಸಾರಾಯಿ, ಹೆಂಡ ಮುಂತಾದ ಮಾದಕವಸ್ತುಗಳ ಮಾರಾಟದಿಂದ ಸರ್ಕಾರಕ್ಕೆ ಬರು ತ್ತಿರುವ "ಎಕ್ಸೈಜು" ಹುಟ್ಟುವಳಿಯೂ, ಚಿನ್ನದ ಮೇಲಿನ ರಾಜಾಯ ಮುಂತಾದ ಬಾಬುಗಳಿಂದ ಕೋಲಾರ ಚಿನ್ನದ ಗಣಿಯ ವರಮಾನ ಮುಂತಾದುವೂ ಕ್ರಮಕ್ರಮವಾಗಿ ತಗ್ಗುತ್ತ ಬಂದು ಕೊನೆಗೆ ನಿಂತೇ ಹೋಗುವ ಸನ್ನಿವೇಶವು ಮುಂದೆ ಒಂದಲ್ಲದಿದ್ದರೆ ಮತ್ತೊಂದು ದಿವಸ ತಪ್ಪದೆ ಸಂಭವಿಸುವ ಕಾರಣ, ಆ ಸನ್ನಿವೇಶವು ಒದಗುವ ವೇಳೆಗೆ ವ್ಯವಸಾಯ ಕೈಗಾರಿಕೆಗಳಿಂದ ಬರುವ ಹುಟ್ಟುವಳಿಯು ಅತ್ಯಧಿಕ ವಾಗಿದ್ದು ಆ ನಷ್ಟವು ಗಮನಕ್ಕೇ ಬಾರದೆ ಅನುಕೂಲವಾಗುವಂತೆ ಮಾಡ ಬೇಕೆಂಬುದು **ಎರಡನೆಯ ಆಶಯ.** ಪಟ್ಟಣಗಳಲ್ಲಿಯೂ ನಗರ ಗಳಲ್ಲಿಯೂ ಭಾರಿ ಭಾರಿ ಕೈಗಾರಿಕೆಗಳನ್ನೇರ್ಪಡಿಸಿ ಗ್ರಾಮಾಂತರಗಳ ಜನರು ಹೆಚ್ಚು ಹೆಚ್ಚುಮಂದಿಗಳು ಕಾರ್ಖಾನೆಗಳ ಕೆಲಸಗಳಿಗೆ ಬಂದು ಸೇರಿಕೊಳ್ಳುವಂತೆ ಅವಕಾಶವನ್ನು ಕಲ್ಪಿಸದೆಹೋದಲ್ಲಿ ಗ್ರಾಮ ಗಳಲ್ಲಿರುವ ಭೂಮಿಗಳಿಂದ ಎಷ್ಟು ಜನರಿಗೆ ಜೀವನವು ಸಾಗುವುದು ಸಾಧ್ಯವೋ ಅಷ್ಟಕ್ಕಿಂತಲೂ ಹೆಚ್ಚು ಜನಸಂದಣಿಯುಂಟಾಗಿ ಜೀವನಕ್ಕೆ ಕಷ್ಟವುಂಟಾಗುವ ಕಾರಣ, ಅದಕ್ಕೆ ಅವಕಾಶವನ್ನು ತಪ್ಪಿಸಿ ಕೈಗಾರಿಕೆಗಳ

ಅಭಿವೃದ್ಧಿಯಿಂದ ಅನುಕೂಲವನ್ನು ಕಲ್ಪಿಸಬೇಕೆಂಬುದು **ಮೂರನೆಯ ಆಶಯ**. ಎಲ್ಲಕ್ಕೂ ಮಿಗಿಲಾಗಿ, ಪ್ರಕೃತಿಮಾತೆಯು ಮೈಸೂರು ಸಂಸ್ಥಾನಕ್ಕೆ ಮುಕ್ತಹಸ್ತದಿಂದ ಕರುಣಿಸಿರುವ ಸಾಧನ ಸಂಪತ್ತುಗಳನ್ನು ರೂಢಿಸಿ, ನಾನಾ ಕೈಗಾರಿಕೆಗಳನ್ನೂ ಪ್ರಾರಂಭಿಸಿ ಅಭ್ಯುದಯವನ್ನು ಸಾಧಿಸಿ, ಮೈಸೂರು ಸಂಸ್ಥಾನವು ಉಚ್ಛ್ರಾಯ ಸ್ಥಿತಿಯಲ್ಲಿರುವ ಪಾಶ್ಚಾತ್ಯ ದೇಶಗಳಿಗೆ ಸರಿದೂಗಿ ಮೈಸೂರು ಸಂಸ್ಥಾನದ ಪ್ರಜಾ ಸಾಮಾನ್ಯರ ಸುಖಜೀವನದ ಮಟ್ಟವು ಮೇಲಕ್ಕೇರಿ ಅವರ ಸಂಪತ್ತೂ ಸಂತೋಷವೂ ಸೌಖ್ಯವೂ ವಿಶೇಷವಾಗಿ ವೃದ್ಧಿಯಾಗಲನುಕೂಲಿಸುವಂತೆ ಮಾಡಲು ಸಾಧ್ಯವಿರುವ ಸಮಸ್ತ ಪ್ರಯತ್ನಗಳೂ ನಡೆಯಬೇಕೆಂಬುದು **ನಾಲ್ಕನೆಯ ಆಶಯ**. ಉದಾತ್ತವಾದ ಈ ನಾಲ್ಕು ಆಶಯಗಳಿಂದ ಕೂಡಿ, ಸರ್ ಮಿರ್ಜಾ ಎಂ. ಇಸ್ಮಾಯಿಲ್‌ರವರೂ ಅವರ ಸಹೋದ್ಯೋಗಿಗಳೂ ಕೈಗಾರಿಕೆಗಳ ಅಭಿವೃದ್ಧಿಯ ಕಾರ್ಯನಿಯಮವನ್ನು ಅಳವಡಿಸಿದ್ದಾರೆ. ಈಚಿನ ವರ್ಷಗಳಲ್ಲಿ ಸರ್ಕಾರದವರು ಅನೇಕ ಭಾರಿ ಭಾರಿ ಕಾರ್ಖಾನೆಗಳನ್ನು ಸ್ಥಾಪಿಸಿದ್ದಾರೆ. ಮೈಸೂರು ನಗರದಲ್ಲಿರುವ ರೇಷ್ಮೆ ಕಾರ್ಖಾನೆ, ಬೆಂಗಳೂರಿನಲ್ಲಿರುವ ಪಿಂಗಾಣಿ ಕಾರ್ಖಾನೆ ಮತ್ತು ವಿದ್ಯುಚ್ಛಕ್ತಿ ಕಾರ್ಖಾನೆ, ಭದ್ರಾವತಿಯಲ್ಲಿರುವ ಎರಕದಕಾರ್ಖಾನೆ, ಉಕ್ಕಿನಕಾರ್ಖಾನೆ ಮತ್ತು ಸಿಮೆಂಟ್ ಕಾರ್ಖಾನೆ— ಮುಂತಾದುವುಗಳು ಅದಕ್ಕೆ ನಿದರ್ಶನ. ಭದ್ರಾವತಿಯಲ್ಲಿ ಬೀಡು ಕಬ್ಬಿಣದಿಂದ ಉಕ್ಕನ್ನು ಮಾಡಲು ಪ್ರಾರಂಭಿಸಿದಾಗಿನಿಂದೀಚೆಗೆ ಲಾಭ ಬರಲು ಪ್ರಾರಂಭವಾಗಿರುವ ಅಂಶವನ್ನು ಹಿಂದೆಯೇ ತಿಳಿಸಲಾಗಿದೆ. ಎಲೆ ಗುದ್ದಲಿ, ಕೋಲುಗುದ್ದಲಿ, ನೇಗಿಲು ಗುಳಗಳು, ಚಾಕುಗಳು, ಮುಂತಾದ ಉಕ್ಕಿನ ಸಾಮಾನುಗಳನ್ನು ರಚಿಸಲು ಹಾಸನದಲ್ಲಿ ಸರ್ಕಾರಿ ಕಾರ್ಖಾನೆಯೊಂದು ಸಿದ್ಧವಾಗುತ್ತಿದೆ. ಅದರಲ್ಲಿ ಆಗಲೇ ಚಾಕುಗಳು ಮುಂತಾದ ಸಾಮಾನುಗಳು ತಯಾರಾಗಲು ಪ್ರಾರಂಭವಾಗಿದೆ. ಅದರ ಕೆಲಸವು ಮುಂದುವರಿದ ಮೇಲೆ ಭದ್ರಾವತಿಯಲ್ಲಿ ಸಿದ್ಧಗೊಳಿಸಿದ ಉಕ್ಕೆಲ್ಲ ಉಪಯೋಗವಾಗಿ ಎರಡು ಕಾರ್ಖಾನೆಗಳಿಗೂ ವಿಶೇಷವಾಗಿ ಲಾಭ ಬರುತ್ತದೆ.

ಸರ್ಕಾರದವರೇ ಏರ್ಪಡಿಸಿರುವ ಅನೇಕ ಕಾರ್ಖಾನೆಗಳ ಜೊತೆಗೆ ಸರ್ಕಾರದವರು "ಷೇರು"ಗಳಿಗೆ ಹಣವನ್ನು ಕೊಟ್ಟಿರುವ ಮತ್ತು ಇತರ ರೀತಿಗಳಲ್ಲಿ ಸಹಾಯಮಾಡಿರುವ "ಜಾಯಿಂಟ್ ಸ್ಟಾಕ್ ಕಂಪನಿ"ಗಳ ಕೈಗಾರಿಕೆ ಉದ್ಯಮಗಳು ಏರ್ಪಟ್ಟಿರುವುದೂ ಒಂದು ವಿಶೇಷ; ಆ ರೀತಿ

ಏರ್ಪಟ್ಟಿರತಕ್ಕ ಉದ್ಯಮಗಳಲ್ಲಿ, ಮಂಡ್ಯದ ಸಕ್ಕರೆ ಕಾರ್ಖಾನೆ, ಚನ್ನಪಟ್ಟಣದಲ್ಲಿರುವ ಜೂಟು ರೇಷ್ಮೆ ಕಾರ್ಖಾನೆ, ಭದ್ರಾವತಿಯಲ್ಲಿರುವ ಕಾಗದದ ಕಾರ್ಖಾನೆ, ಬೆಂಗಳೂರಿನಲ್ಲಿರುವ ಹೊಗೆಸೊಪ್ಪಿನ ಕಂಪೆನಿ, ಮತ್ತು ಗಾಜಿನ ಕಾರ್ಖಾನೆ ಮುಂತಾದುವು, ಮೈಸೂರು ನಗರದ ಬಳಿಯಲ್ಲಿರುವ ಬೆಳಗೊಳದ ಗಂಧಕ ದ್ರಾವಕದ ಕಾರ್ಖಾನೆ— ಇವು ಮುಖ್ಯವಾದವುಗಳು. ಎಣ್ಣೆಗಳನ್ನು ರಸಾಯನ ಪ್ರಕ್ರಿಯೆಗಳಿಂದ ಘನ ವಸ್ತುವಾಗಿ ಮಾರ್ಪಡಿಸಿ ಕೃತಕ ಘೃತ ಮುಂತಾದ ಪದಾರ್ಥಗಳನ್ನು ಮಾಡುವ ಕಾರ್ಖಾನೆ, ವಿದ್ಯುಚ್ಛಕ್ತಿ ದೀಪಗಳ "ಬಲ್ಬು"ಗಳನ್ನು ಮಾಡುವ ಕಾರ್ಖಾನೆ ಮೊದಲಾದ ಹಲವು ಕಾರ್ಖಾನೆಗಳಿಗೆ ವಿಧವಿಧವಾಗಿ ರಿಯಾಯಿತಿಗಳನ್ನು ಕೊಟ್ಟು ಅನುಕೂಲಗಳನ್ನು ಕಲ್ಪಿಸಿ ಸರ್ಕಾರದವರು ಸಹಾಯ ಮಾಡುತ್ತಿದ್ದಾರೆ.

ಇಷ್ಟುಮಟ್ಟಿನ ಕೈಗಾರಿಕೆಗಳ ಅಭಿವೃದ್ಧಿಯಿಂದಲೂ ತೃಪ್ತರಾಗದೆ ಸರ್ಕಾರದವರು ಇನ್ನೂ ಹೊಸ ಹೊಸ ಕೈಗಾರಿಕೆಗಳನ್ನು ಏರ್ಪಡಿಸುವ ಆಲೋಚನೆಯಲ್ಲಿ ಮಗ್ನರಾಗಿದ್ದಾರೆ. ಮೇಲಾಗಿ, ಕೈಗಾರಿಕೆಗಳ ಅಭಿವೃದ್ಧಿಗೆ ಈಗಿನ ಕಾಲದ ಮುಖ್ಯ ಬಲವಾದ ವಿದ್ಯುಚ್ಛಕ್ತಿಯ ಉತ್ಪತ್ತಿಯು ವಿಶೇಷವಾಗಿ ಹೆಚ್ಚುವಂತೆ ವ್ಯವಸ್ಥೆಯು ನಡೆದಿದೆ: ಶಿವನ ಸಮುದ್ರದಲ್ಲಿ ೩೪,೦೦೦ ಅಶ್ವಸಾಮರ್ಥ್ಯಗಳ ಪ್ರಮಾಣದಲ್ಲಿ ವಿದ್ಯುಚ್ಛಕ್ತಿಯ ಉತ್ಪತ್ತಿಯು ನಡೆಯುತ್ತಿದ್ದುದು ಈಗ ೫೬,೦೦೦ ಅಶ್ವಸಾಮರ್ಥ್ಯಗಳ ಪ್ರಮಾಣಕ್ಕೆ ಹೆಚ್ಚಿದೆ. ೧೯೨೬ನೆಯ ಇಸವಿಯಲ್ಲಿ ವಿದ್ಯುಚ್ಛಕ್ತಿಯ ಬಾಬಿನಿಂದ ಬರುತ್ತಿದ್ದ ೨೩ ಲಕ್ಷ ೬೮ ಸಾವಿರ ರೂಪಾಯಿಗಳ ಹುಟ್ಟುವಳಿಯು ಕ್ರಮಕ್ರಮವಾಗಿ ಹೆಚ್ಚಿ ಈಗ (೧೯೪೦) ೫೦ ಲಕ್ಷ ರೂಪಾಯಿಗಳಿಗೆ ಏರಿದೆ. ಷಿಂಷಾಪುರದಲ್ಲಿ ೨೩ ಸಾವಿರ ಅಶ್ವಸಾಮರ್ಥ್ಯಗಳ ಪ್ರಮಾಣದಲ್ಲಿ ವಿದ್ಯುಚ್ಛಕ್ತಿಯು ಉತ್ಪತ್ತಿಯಾಗಲು (೧೯೪೦ನೆಯ ಇಸವಿಯ ಜೂನ್ ತಿಂಗಳಿನಿಂದ) ಪ್ರಾರಂಭವಾಗಿದೆ. ಈ ಏರ್ಪಾಡಿಗಾಗಿ ಸುಮಾರು ೫೬ ಲಕ್ಷ ರೂಪಾಯಿಗಳು ವೆಚ್ಚವಾಗಿವೆ. ಜೋಗ್ ಜಲಪಾತದ ಬಳಿಯಲ್ಲಿ ಶರಾವತಿಯ ನೀರಿನಿಂದ ೭೦ ಸಾವಿರ ಅಶ್ವಸಾಮರ್ಥ್ಯಗಳ ಪ್ರಮಾಣದಲ್ಲಿ ವಿದ್ಯುಚ್ಛಕ್ತಿಯನ್ನು ಉತ್ಪತ್ತಿಮಾಡಲು ಒಂದು ಕಾರ್ಯಕ್ರಮವು ಮಂಜೂರಾಗಿದೆ. ಆಳಿದ ಮಹಾಸ್ವಾಮಿಯವರೇ ೧೯೩೯ನೆಯ ಇಸವಿ ಮಾರ್ಚಿ ತಿಂಗಳು ೫ನೆಯ ತಾರೀಖಿನ ದಿನ ಅದನ್ನು ಸಮಾರಂಭಣಗೊಳಿಸಿ ಶಿಲಾಸ್ಥಾಪನೆಮಾಡಿ ಅನುಗ್ರಹಿಸಿದರು. ಈ ಏರ್ಪಾಡಿಗೆ ಒಂದೂವರೆ ಕೋಟಿ ರೂಪಾಯಿಗಳು ವೆಚ್ಚವಾಗ

ಬಹುದೆಂದು ಅಂದಾಜಾಗಿದೆ. ಈ ಏರ್ಪಾಡೂ ನೆರವೇರಿದರೆ, ಸಂಸ್ಥಾನದ ಮೂಲೆ ಮೂಲೆಗೂ ವಿದ್ಯುಚ್ಛಕ್ತಿಯನ್ನೊದಗಿಸುವುದು ಸರ್ಕಾರದವರಿಗೆ ಸಾಧ್ಯವಾಗುತ್ತದೆ. ಎಲ್ಲೆಲ್ಲಿಯೂ ವಿದ್ಯುಚ್ಛಕ್ತಿಯ ದೀಪಗಳು ಮಿನುಗುವಂತೆ ಮಾಡುವುದು ಮಾತ್ರವೇ ಅಲ್ಲದೆ, ಕೈಗಾರಿಕೆಗಳಿಗೆ ಬೇಕಾದ ಯಂತ್ರಚಾಲನ ಶಕ್ತಿಯನ್ನು ಯಥೇಷ್ಟವಾಗಿ ಒದಗಿಸಿ ಸಹಾಯಮಾಡುವುದು ಇದರ ಪರಿಣಾಮ.

ಗಂಧದ ಎಣ್ಣೆ ಮುಂತಾದುವುಗಳ ವ್ಯಾಪಾರವು ಮೈಸೂರು ಸಂಸ್ಥಾನಕ್ಕೆ ಲಾಭದಾಯಕವಾದ ರೀತಿಯಲ್ಲಿ ಸರಿಯಾಗಿ ನಡೆಯುವಂತೆ ಮಾಡಿ ಆಡಳಿತ ನಡೆಯಿಸುವುದಕ್ಕೂ, ಮೈಸೂರು ಸಂಸ್ಥಾನದ ವರ್ತಕರು ಅಪೇಕ್ಷಿಸಿದಾಗ ವ್ಯಾಪಾರ ವಾಣಿಜ್ಯ ಮುಂತಾದ ವಿಚಾರಗಳಲ್ಲಿ ಸಮರ್ಪಕವಾದ ತಿಳಿವಳಿಕೆಯನ್ನು ಕೊಟ್ಟು ವಿದೇಶಗಳ ವರ್ತಕಮಂಡಲಿಗಳವರೊಡನೆ ವ್ಯವಹರಿಸಲು ಸಹಾಯಮಾಡುವುದಕ್ಕೂ ಅನುಕೂಲಿಸುವಂತೆ ಲಂಡನ್ ನಗರದಲ್ಲಿ ೧೯೨೩ನೆಯ ಇಸವಿಯಿಂದ "ಟ್ರೇಡ್ ಕಮಿಷನರ್" ಹುದ್ದೆಯನ್ನು ಏರ್ಪಡಿಸಿದ ಯಶಸ್ಸು ಮಹಾಪ್ರಭುಗಳವರಿಗೆ ಸಲ್ಲಬೇಕಾದುದು. ಆಳಿದ ಮಹಾಸ್ವಾಮಿಯವರಾದ ಶ್ರೀಮನ್ಮಹಾರಾಜರವರ ಕೃಪಾಮಯವಾದ ರಾಜ್ಯಭಾರದಲ್ಲಿ ಕಳೆದ ಹದಿಮೂರು ವರ್ಷಗಳ ಅವಧಿಯಲ್ಲಿ (೧೯೨೭–೧೯೪೦) ಅಭೂತಪೂರ್ವವೆನಿಸುವ ಮಟ್ಟಿಗೆ ಕೈಗಾರಿಕೆಗಳು ಅಭಿವೃದ್ಧಿಯಾದುವು. ಅದರ ಪರಿಣಾಮವಾಗಿ ಐದು ಕೋಟಿ ರೂಪಾಯಿಗಳ ಮೂಲಧನವು ವಿನಿಯೋಗವಾಗಿ ಅವುಗಳ ದೆಸೆಯಿಂದ ೨೦,೦೦೦ ಮಂದಿ ಕೆಲಸಗಾರರಿಗೆ ಜೀವನವಾಗುತ್ತಿದೆ. ಸಕ್ಕರೆ ಕಾರ್ಖಾನೆಯಿಂದ ವರ್ಷಕ್ಕೆ ಸೇಕಡ ೧೫ರಂತೆ ಷೇರುದಾರರಿಗೆ "ಡಿವಿಡೆಂಡ್" ಮೊತ್ತವು ಸಲ್ಲುತ್ತಿರುವುದೂ, ೧೦ ರೂಪಾಯಿಗಳ ಷೇರಿನ ಬೆಲೆಯು ಅದರ ನಾಲ್ಕರಷ್ಟಕ್ಕಿಂತ ಹೆಚ್ಚಿರುವುದೂ, ಸಕ್ಕರೆಯ ಮೇಲಿನ ಎಕ್ಸೈಜು ಸುಂಕದಿಂದಲೇ ಸರ್ಕಾರಕ್ಕೆ ಪ್ರತಿ ವರ್ಷವೂ ೧೩ ಲಕ್ಷ ರೂಪಾಯಿಗಳ ಹುಟ್ಟುವಳಿಯು ಬರುವಂತಾಗಿರುವುದೂ ಸಕ್ಕರೆ ಕಾರ್ಖಾನೆಯು ಯಶಸ್ವಿಯಾಗಿ ನಡೆಯುತ್ತಿರುವುದಕ್ಕೆ ನಿದರ್ಶನಗಳು. ಮುಂಬಯಿ ಪ್ರಾಂತದಲ್ಲಿ ಕಾಂಗ್ರೆಸ್ ಪಂಗಡದ ಮುಖ್ಯ ಸಚಿವರಾಗಿದ್ದ ಶ್ರೀಮಾನ್ ಬಿ. ಜಿ. ಖೇರರವರು ವಾಸ್ತವ ವಿದ್ಯಮಾನಗಳನ್ನು ಪರಿಶೀಲಿಸಿ ಅರ್ವಿನ್ ನಾಲೆಯಿಂದ ಸರ್ಕಾರದವರು ವ್ಯವಸಾಯಗಾರರಿಗೆ ಹೆಚ್ಚು ಅನುಕೂಲಗಳನ್ನೊದಗಿಸಿದ್ದಾರೆಂದೂ, ಅಲ್ಲಿಯ ಸ್ಥಿತಿಗತಿಗಳು ಆಶ್ಚರ್ಯಕರವಾಗಿವೆಯೆಂದೂ, ಅಲ್ಲಿಯ ರೈತರ ಕೊರತೆಗಳು ಕನಿಷ್ಠತಮವಾಗಿದ್ದು

ಅವರುಗಳು ಸುಖವಾಗಿದ್ದಾರೆಂದೂ ಹೇಳಿರುವುದಕ್ಕಿಂತ ಈ ವಿಚಾರದಲ್ಲಿ ಮತ್ತಾವ ಹೆಚ್ಚಿನ ಪ್ರಮಾಣವು ಬೇಕು? ಭದ್ರಾವತಿ ಕಾರ್ಖಾನೆ, ಸಾಬೂನಿನ ಕಾರ್ಖಾನೆ ಮುಂತಾದುವುಗಳಿಂದ ವರ್ಷ ವರ್ಷವೂ ಲಾಭವು ಹೆಚ್ಚುತ್ತಿದೆ. ಬೆಳಗೊಳದ ಬಳಿಯ ಕಾರ್ಖಾನೆಯಿಂದ ಒದಗುವ ಗಂಧಕ ದ್ರಾವಕದ ಬಹು ಭಾಗಕ್ಕೆ ಮಂಡ್ಯದ ಸಕ್ಕರೆ ಕಾರ್ಖಾನೆಯಲ್ಲಿ ಭಾರಿ ಗಿರಾಕಿಯು ಸಿದ್ಧವಾಗಿರುವುದಲ್ಲದೆ, ಅಲ್ಲಿ ಕೃತಕ ಗೊಬ್ಬರವಾದ "ಅಮೋನಿಯಂ ಸಲ್ಫೇಟ್" ಲವಣವು ಸಿದ್ಧವಾಗಲುಪಕ್ರಮಿಸಿದೊಡನೆಯೇ, ಈಗ ವಿದೇಶೀಯರಿಗೆ ಹೋಗುತ್ತಿರುವ ಹಣವೆಲ್ಲ ಮೈಸೂರು ಸಂಸ್ಥಾನದಲ್ಲಿ ಉಳಿಯುವಂತಾಗುತ್ತದೆ. ಕಾಗದದ ಕಾರ್ಖಾನೆಯಿಂದ ಒದಗುತ್ತಿರುವ ಕಾಗದಕ್ಕೆಲ್ಲ ಸಂಸ್ಥಾನದಲ್ಲೇ ಸಿದ್ಧವಾಗಿ ಗಿರಾಕಿ ದೊರೆತು ವಿದೇಶಗಳಿಗೆ ಹೋಗುತ್ತಿದ್ದ ಹಣವು ಆ ಮಟ್ಟಿಗೆ ಸಂಸ್ಥಾನದಲ್ಲಿ ಉಳಿಯುತ್ತಿದೆ. ಆ ಕಾರ್ಖಾನೆಯಲ್ಲಿ ಕಾಗದದ ರಟ್ಟನ್ನು ಕೂಡ ತಯಾರಿಸುವ ಏರ್ಪಾಡು ಈಚೆಗೆ ನಡೆದಿದೆ. ಸರ್ ಮಿರ್ಜಾ ಎಂ. ಇಸ್ಮಾಯಿಲ್‌ರವರು ದಿವಾನ್ ಪದವಿಗೆ ಬಂದಮೇಲೆ ಏರ್ಪಟ್ಟಿರುವ ಕೈಗಾರಿಕೆ ಉದ್ಯಮಗಳೂ ಸಹ, ಆ ಮೊದಲಿನವುಗಳಂತೆಯೇ ದೀರ್ಘಾಲೋಚನೆಯಿಂದ ಏರ್ಪಟ್ಟವುಗಳೇ. ಪರಿಣಾಮದಲ್ಲಿ ಅವುಗಳೆಲ್ಲದರಿಂದಲೂ ಅತ್ಯಧಿಕ ಲಾಭ ಬರುವಂತಾಗಿ ವಿಶೇಷವಾಗಿ ಸಂಪದಭಿವೃದ್ಧಿ ಸಾಧನೆಯಾಗುವುದರಲ್ಲಿ ಸಂದೇಹವೇ ಇಲ್ಲ.

**ಶಿಲ್ಪಕಲಾ ಕಾಮಗಾರಿಗಳು.**—ವ್ಯವಸಾಯ ಕೈಗಾರಿಕೆಗಳ ಅಭಿವೃದ್ಧಿಯೊಡನೆ ಸಂಚಾರ ಸೌಕರ್ಯಾಭಿವೃದ್ಧಿಯೂ ನಡೆದು ಅನುಕೂಲವಾಗಿದೆ. ಸುಗಮವಾದ ಸಂಚಾರ ಮಾರ್ಗಗಳೂ ಹೊಸ ರೈಲ್ವೇ ಮಾರ್ಗಗಳೂ ಏರ್ಪಟ್ಟಿವೆ. ಕಳೆದ ಹನ್ನೆರಡು ವರ್ಷಗಳ ಅವಧಿಯಲ್ಲಿ, ಗೊರೂರಿನ ಬಳಿಯಲ್ಲಿ ಹೇಮಾವತೀ ನದಿಗೆ ಸೇತು, ಅಕ್ಕಿಹೆಬ್ಬಾಳಿನ ಬಳಿಯಲ್ಲಿ ಅದೇ ನದಿಗೆ ನರಸಿಂಹರಾಜೇಂದ್ರ ಸೇತು, ತಿರುಮಕೂಡಲು ನರಸೀಪುರದ ಬಳಿಯಲ್ಲಿ ಕಾವೇರೀ ನದಿಗೆ ಕೃಷ್ಣರಾಜೇಂದ್ರ ಸೇತು, ತಿರುಮಕೂಡಲು ನರಸೀಪುರದ ಬಳಿಯಲ್ಲಿ ಕಪಿನೀ ನದಿಗೆ ವಾಣೀವಿಲಾಸ ಸೇತು, ರಾಮನಾಥಪುರದ ಬಳಿಯಲ್ಲಿ ಕಾವೇರೀ ನದಿಗೆ ಸೇತು, ಹಲಗೂರಿನ ಬಳಿಯಲ್ಲಿ ಷಿಂಷಾ ನದಿಗೆ ಜಯಚಾಮರಾಜೇಂದ್ರ ಸೇತು—ಮುಂತಾದುವುಗಳು ೧೯ ಲಕ್ಷ ರೂಪಾಯಿಗಳಿಗಿಂತಲೂ ಅಧಿಕ ವೆಚ್ಚದಲ್ಲಿ ನಿರ್ಮಿತವಾಗಿ, ಮೈಸೂರು ಸಂಸ್ಥಾನದ ಶಿಲ್ಪಕಲಾ ಸಾಮರ್ಥ್ಯಕ್ಕೆ ಪ್ರಸಿದ್ಧ ನಿದರ್ಶನಗಳಾಗಿ ಶೋಭಿಸುತ್ತಿವೆ;

ಮತ್ತೆ ಮೂರು ಸೇತುಗಳು ನಿರ್ಮಿತವಾಗುತ್ತಿವೆ. ೧೯೨೬ನೆಯ ಇಸವಿ ಯಿಂದೀಚೆಗೆ ಶಿವಮೊಗ್ಗ ಮತ್ತು ಚಿತ್ರದುರ್ಗ ಡಿಸ್ಟ್ರಿಕ್ಟುಗಳಲ್ಲಿ ೭೪ ಮೈಲಿಗಳ ದೂರದ ರೈಲ್ವೇ ಮಾರ್ಗಗಳು ಸುಮಾರು ೫೯ ಲಕ್ಷ ರೂಪಾಯಿ ಗಳ ವೆಚ್ಚದಲ್ಲಿ ನೂತನವಾಗಿ ಏರ್ಪಟ್ಟಿವೆ. ಸರ್ಕಾರದವರು ಸುಮಾರು ಎರಡು ಕೋಟಿ ರೂಪಾಯಿಗಳ ಸಾಲವನ್ನು ತೀರಿಸಿ, ೧೯೩೮ನೆಯ ಇಸವಿ ಜನವರಿ ತಿಂಗಳು ೧ನೆಯ ತಾರೀಖಿನಿಂದ, ಬೆಂಗಳೂರಿನಿಂದ ಹರಿಹರದ ವರೆಗಿನ ಮತ್ತು ಬೆಂಗಳೂರಿನಿಂದ ಹಿಂದೂಪುರದವರೆಗಿನ ರೈಲ್ವೇ ಮಾರ್ಗ ಗಳನ್ನು ಮದರಾಸು ಮತ್ತು ಸದರನ್ ಮರಾಟಾ ರೈಲ್ವೇ ಕಂಪನಿಯವ ರಿಂದ ತಮ್ಮ ಆಡಳಿತಕ್ಕೆ ವಹಿಸಿಕೊಂಡಿದ್ದಾರೆ. ಚಾಮರಾಜನಗರದಿಂದ ಸತ್ಯಮಂಗಲದವರೆಗೂ ರೈಲ್ವೇ ಮಾರ್ಗವನ್ನು ವಿಸ್ತರಿಸಿದಲ್ಲಿ, ಉತ್ತರ ಭಾರತದಿಂದ ದಕ್ಷಿಣ ಭಾರತಕ್ಕೆ ಈಗಿನಂತೆ ಮದರಾಸಿನ ಮಾರ್ಗವಾಗಿ ಸುತ್ತಿಕೊಂಡು ಹೋಗಬೇಕಾದ ಆವಶ್ಯಕತೆಯು ತಪ್ಪಿ ನೇರವಾಗಿ ಹೋಗುವಂತಾಗುವುದಲ್ಲದೆ, ಮೈಸೂರು ಸಂಸ್ಥಾನದ ರೈಲ್ವೆಗಳ ಪ್ರಾಮುಖ್ಯತೆಯೂ ವರಮಾನವೂ ಹೆಚ್ಚುತ್ತವೆ. ಸರ್ ಮಿರ್ಜಾ ಎಂ. ಇಸ್ಮಾಯಿಲ್‌ರವರ ಸಂಧಾನ ಚಾತುರ್ಯ ಬಲದಿಂದ, ಸತ್ಯ ಮಂಗಲದ ವರೆಗೆ ರೈಲ್ವೇ ಮಾರ್ಗವನ್ನು ವಿಸ್ತರಿಸುವ ಪ್ರಯತ್ನವು ಸುಮುಖರೂಪಕ್ಕೆ ಬರುವ ಕಾಲವು ಸಮಿಾಪಿಸುತ್ತಿದೆಯೆಂದು ತೋರು ತ್ತದೆ; ಇಂಡಿಯಾ ಸರ್ಕಾರದವರು ಈ ವಿಚಾರದಲ್ಲಿ ಆದಷ್ಟು ಬೇಗ ಅನುಕೂಲಮಾಡಿಕೊಟ್ಟಾರೆಂದು ಮೈಸೂರು ಸಂಸ್ಥಾನದ ಪ್ರಜೆಗಳೆಲ್ಲರೂ ನಿರೀಕ್ಷಿಸಿದ್ದಾರೆ. ಮೋಟಾರು ಬಸ್ಸುಗಳ ಸಂಚಾರವು ಹೆಚ್ಚಿರು ವುದರಿಂದ ಜನರಿಗೆ ಸೌಕರ್ಯವೇನೋ ಅಧಿಕವಾಗಿದೆ. ಆದರೆ ಸಂಚಾರ ಮಾರ್ಗಗಳು ಮಾತ್ರ ಜರ್ಝರಿತವಾಗುತ್ತಿವೆ. ಸರ್ಕಾರದವರು ಇದನ್ನು ಗಮನಿಸಿ, "ರಸ್ತೆ ನಿಧಿ" ಎಂಬ ಹೆಸರಿನ ಒಂದು ನಿಧಿಯನ್ನೇರ್ಪಡಿಸಿ, ಅದರ ಸಹಾಯದಿಂದ ಸಂಚಾರ ಮಾರ್ಗಗಳನ್ನು ಉತ್ತಮ ಸ್ಥಿತಿಯಲ್ಲಿಡಿ ಸುವ ವ್ಯವಸ್ಥೆಯನ್ನುಮಾಡಿರುವುದು ಸ್ತೋತ್ರಾರ್ಹವಾಗಿದೆ. ಬೆಂಗಳೂರು ನಗರದಲ್ಲಿ ಜೀವ ವಿಮೆಯ ಕಚೇರಿಯ ಕಟ್ಟಡ, ಶ್ರೀಕೃಷ್ಣರಾಜೇಂದ್ರ ವೃತ್ತಿ ಶಿಕ್ಷಣ ಶಾಲೆ, ವಾಣೀವಿಲಾಸ ಹೆರಿಗೆ ಆಸ್ಪತ್ರೆ, ಮೆದುಳಿನ ರೋಗಗಳ ಆಸ್ಪತ್ರೆ, ಮುಂತಾದ ಸುಂದರವಾದ ಹಲವು ಕಟ್ಟಡಗಳೂ; ಮೈಸೂರು ನಗರದಲ್ಲಿ ರೋಗ ನಿದಾನ ಪ್ರಯೋಗ ಪರೀಕ್ಷಾ ಶಾಲೆ, ವಸ್ತು ಪ್ರದರ್ಶನಾಲಯ, ರೈಲ್ವೇ ಕಚೇರಿ — ಮುಂತಾದುವುಗಳ ಕಟ್ಟಡಗಳೂ; ಶಿವಮೊಗ್ಗಿಯ ಮ್ಯಾಗ್ಗಾನ್ ಆಸ್ಪತ್ರೆ, ಕೋಲಾರದ

ನರಸಿಂಹರಾಜ ಆಸ್ಪತ್ರೆ ಮುಂತಾದ ಕಟ್ಟಡಗಳೂ; ಸಂಸ್ಥಾನದ ನಾನಾ ಪ್ರದೇಶಗಳಲ್ಲಿ ಪಾಠಶಾಲೆಗಳು, ಆಸ್ಪತ್ರೆಗಳು ಮುಂತಾದ ಕಟ್ಟಡಗಳೂ; ಬೆಂಗಳೂರಿನ ಜಲವಸತಿಗಾಗಿ ತಿಪ್ಪಗೊಂಡನಹಳ್ಳಿಯಲ್ಲಿ ನಿರ್ಮಿತ ವಾಗಿರುವ ಜಲಾಶಯವೂ ಮತ್ತು ಇತರ ಜಲಾಶಯಗಳೂ ಶಿಲ್ಪ ಕಲಾ ಚಾತುರ್ಯದ ನಿದರ್ಶನಗಳಾಗಿ ಶೋಭಿಸುತ್ತಿವೆ. ಅವುಗಳೆಲ್ಲ ಪ್ರಜೆಗಳ ಸೌಕರ್ಯವನ್ನು ಹೆಚ್ಚಿಸಿರುವುದಲ್ಲದೆ ಹಣದ ಮುಗ್ಗಟ್ಟು ಒದಗಿ ಆರ್ಥಿಕ ದುರವಸ್ಥೆಯ ಸುಳಿಗೆ ಸಿಕ್ಕಿದ್ದ ಅಸಂಖ್ಯಾತ ಮಂದಿ ಕೈವಾಡಗಳವರಿಗೆ ಜೀವನಕ್ಕೆ ಅನುಕೂಲವನ್ನೂ ಕಲ್ಪಿಸಿ ಪೋಷಿಸಿವೆ.

**ವೈದ್ಯ ಸಹಾಯ, ಆರೋಗ್ಯ ರಕ್ಷಣೆ ಮತ್ತು ವಿದ್ಯಾಭ್ಯಾಸ ಸೌಕರ್ಯ.**—ಸರ್ ಮಿರ್ಜಾ ಎಂ. ಇಸ್ಮಾಯಿಲ್‌ರವರು ದಿವಾನ್ ಪದವಿಯನ್ನಲಂಕರಿಸಿದ ಮೇಲೆ ಪ್ರಜೆಗಳಿಗೆ ವೈದ್ಯ ಸಹಾಯವು ಹೆಚ್ಚು ಹೆಚ್ಚಾಗಿ ದೊರೆಯುವಂತೆ ಏರ್ಪಡಿಸಲು ನಡೆದಿರುವಷ್ಟು ಕೆಲಸವು ಮತ್ತಾವ ದಿವಾನ್‌ರವರ ಕಾಲದಲ್ಲಿಯೂ ನಡೆದಿರಲಿಲ್ಲ. ೧೯೨೬ನೆಯ ಇಸವಿಯಲ್ಲಿ ವೈದ್ಯ ಸಹಾಯಕ್ಕಾಗಿ ವೆಚ್ಚವಾಗಿದ್ದ ಮೊತ್ತವು ಈಗ ಸುಮಾರು ೧೭ ಲಕ್ಷ ರೂಪಾಯಿಗಳಿಗೆ ಏರಿವೆ. ಆಗಿನಿಂದೀಚಿನ ಹದಿಮೂರು ವರ್ಷಗಳ ಅವಧಿಯಲ್ಲಿ ೮೪ ವೈದ್ಯ ಸಂಸ್ಥೆಗಳು ನೂತನವಾಗಿ ಏರ್ಪಟ್ಟಿವೆ. ಡಿಸ್ಪೆನ್ಸರಿಗಳ ಮತ್ತು ಆಸ್ಪತ್ರೆಗಳ ಕಟ್ಟಡಗಳೇ ಮುಂತಾದುವುಗಳಿಗಾಗಿ ಜನಾನುರಾಗಿಗಳಾದ ಸರ್ ಮಿರ್ಜಾ ಎಂ. ಇಸ್ಮಾಯಿಲ್‌ರವರು ಧನಿಕರಿಂದ ಬರಮಾಡಿರುವ ಧರ್ಮಾರ್ಥವಾದ ಹಣವು ಸುಮಾರು ೨೫ ಲಕ್ಷ ರೂಪಾಯಿಗಳು. ಈ ಮೊಬಲಗಿನ ಜೊತೆಗೆ ಸರ್ಕಾರದವರೂ ಸುಮಾರು ೧೫ ಲಕ್ಷ ರೂಪಾಯಿಗಳನ್ನು ವೆಚ್ಚಮಾಡಿದ್ದಾರೆ. ಮಂಡ್ಯ ಮುಂತಾದ ಸ್ಥಳಗಳಲ್ಲಿ ಭಾರಿ ಭಾರಿ ಆಸ್ಪತ್ರೆಗಳು ಏರ್ಪಟ್ಟಿವೆ. ಮೇಲಾಗಿ, ಸಾಧ್ಯವಾದ ಮಟ್ಟಿಗೂ ದೊಡ್ಡ ದೊಡ್ಡ ಆಸ್ಪತ್ರೆಗಳು ಆಧುನಿಕ ಚಿಕಿತ್ಸಾ ಸೌಕರ್ಯಗಳೆಲ್ಲದರಿಂದಲೂ ಸುಸಜ್ಜಿತವಾಗಿರುವಂತೆ ವ್ಯವಸ್ಥೆಯು ನಡೆದಿದೆ. ಮಲೇರಿಯಾ ನಿವಾರಣೆಯ ಏರ್ಪಾಡುಗಳೂ ಮತ್ತು ಸಂಶೋಧನಗಳೂ ವಿಚಕ್ಷಣೆಯಿಂದ ನಡೆಯುತ್ತಿವೆ. ಮಲೆನಾಡು ಪ್ರದೇಶಗಳಲ್ಲಿ ವೈದ್ಯರೇ ಸಿಬ್ಬಂದಿಯೊಡನೆ ಎತ್ತಿನ ಬಂಡಿಗಳಲ್ಲಿ ಗ್ರಾಮಗಳಿಗೆ ಹೋಗಿ ರೋಗಿಗಳಿಗೆ ಚಿಕಿತ್ಸೆಮಾಡುವ ಏರ್ಪಾಡು ನಡೆದಿದೆ. ಜನಾರೋಗ್ಯ ರಕ್ಷಣೆಯ ಇಲಾಖೆಯವರು ಆರೋಗ್ಯಾಭಿವೃದ್ಧಿಗಾಗಿ ಅನೇಕ ಏರ್ಪಾಡುಗಳನ್ನು ಮಾಡುತ್ತಿದ್ದಾರೆ. ಮಲೇರಿಯಾ ರೋಗ, ಕೊಂಡಿ ಹುಳುವಿನ ರೋಗ, ನಾರುಹುಣ್ಣಿನರೋಗ ಮುಂತಾದುವುಗಳ ನಿವಾರಣೆಯ

ಪ್ರಯತ್ನಗಳು ಅವಿಚ್ಛಿನ್ನವಾಗಿ ನಡೆಯುತ್ತಿವೆ. ವೈದ್ಯ ವಿದ್ಯಾಭ್ಯಾಸಕ್ಕಾಗಿ ಏರ್ಪಾಡುನಡೆದು ವಿಶ್ವವಿದ್ಯಾನಿಲಯದಲ್ಲಿ ವೈದ್ಯದ ಮಹಾಪಾಠಶಾಲೆಯು (ಮೆಡಿಕಲ್ ಕಾಲೇಜು) ಸ್ಥಾಪಿತವಾಗಿದೆ. ಕ್ಲೋಸ್ಪೇಟೆಯ ಬಳಿಯಲ್ಲಿ ಆರೋಗ್ಯಾಭಿವೃದ್ಧಿಯ ಕೇಂದ್ರಕಾರ್ಯಾಲಯವೊಂದು ಏರ್ಪಟ್ಟಿದೆ. ಮುಂಬಯಿ ಪ್ರಾಂತದಲ್ಲಿ ಕಾಂಗ್ರೆಸ್ ಪಂಗಡದ ಮುಖ್ಯಸಚಿವರಾಗಿದ್ದ ಶ್ರೀಮಾನ್ ಬಿ. ಜಿ. ಖೇರರವರು ಅದನ್ನೂ, ಬೋಗಾದಿಗ್ರಾಮ ಮುಂತಾದ ಮಾದರಿ ಗ್ರಾಮಗಳ ವ್ಯವಸ್ಥೆಯನ್ನೂ, ವಿದ್ಯುಚ್ಛಕ್ತಿಯನ್ನು ಉತ್ಪತ್ತಿ ಮಾಡಿ ಉತ್ತಮರೀತಿಯಲ್ಲಿ ಉಪಯೋಗಿಸುತ್ತಿರುವ ಚಾತುರ್ಯವನ್ನೂ, ಕೈಗಾರಿಕೆಗಳ ಅಭಿವೃದ್ಧಿಯ ಕಾರ್ಯನೀತಿಯನ್ನೂ, ಪ್ರಶಂಸಿಸಿ ಮೈಸೂರು ಸರ್ಕಾರದವರ ಕಾರ್ಯಕಲಾಪಗಳು ಭರತಖಂಡದ ಇತರ ಭಾಗಗಳಿಗೆಲ್ಲ ಮಾದರಿಯಾಗಿವೆಯೆಂದರು. ವಿದ್ಯಾಭ್ಯಾಸ ಸೌಕರ್ಯಗಳು ವರ್ಷ ವರ್ಷವೂ ಹೆಚ್ಚುತ್ತಿವೆ. ಸ್ತ್ರೀ ವಿದ್ಯಾಭ್ಯಾಸಕ್ಕೂ, ಮುಸಲ್ಮಾನ್ ಪಂಗಡ ದವರ ವಿದ್ಯಾಭ್ಯಾಸಕ್ಕೂ, ಹಿಂದುಳಿದ ಪಂಗಡಗಳವರ ಮತ್ತು ನಿಮ್ನ ತರಗತಿಗಳವರ ವಿದ್ಯಾಭ್ಯಾಸಕ್ಕೂ ವಿಶೇಷ ವಿಧದ ಸೌಕರ್ಯಗಳು ಕಲ್ಪಿತ ವಾಗಿವೆ. ವಿದ್ಯಾಭ್ಯಾಸವು ಜೀವನ ನಿರ್ವಹಣಕ್ಕೂ ಸಹಾಯಕವಾಗುವಂತೆ ವೃತ್ತಿ ಶಿಕ್ಷಣ ಭಾಗದಿಂದಲೂ ಕೂಡಿರುವಹಾಗೆ ಶ್ಲಾಘನೀಯವಾದ ಪ್ರಯತ್ನಗಳು ನಡೆಯುತ್ತಿವೆ. ಹೈಸ್ಕೂಲುಗಳಲ್ಲಿ ಚರಿತ್ರೆ, ಗಣಿತ, ಮುಂತಾದ ಭಾಷೇತರ ವಿಷಯಗಳನ್ನು ಕನ್ನಡ ಭಾಷೆಯಲ್ಲಿ ಬೋಧಿಸುವ ಏರ್ಪಾಡು ನಡೆದಿದೆ. ಆದರೆ ಕನ್ನಡವು ಮಾತೃಭಾಷೆಯಲ್ಲದವರಿಗೆ ಅವುಗಳನ್ನು ಇಂಗ್ಲಿಷಿನಲ್ಲಿ ಬೋಧಿಸುವ ಮೊದಲಿನ ಸೌಕರ್ಯವೂ ಉಳಿದಿದೆ. ಮೈಸೂರು ವಿಶ್ವವಿದ್ಯಾನಿಲಯದಲ್ಲಿ ವಿದ್ಯಾಭ್ಯಾಸಮಾಡಿ ದವರು "ಇಂಡಿಯನ್ ಸಿವಿಲ್ ಸರ್ವಿಸ್" ಮುಂತಾದ ಸ್ಪರ್ಧಾ ಪರೀಕ್ಷೆಗಳಲ್ಲಿ ಉತ್ತಮ ರೀತಿಯಲ್ಲಿ ತೇರ್ಗಡೆ ಹೊಂದುತ್ತಿರುವುದೇ ಮುಂತಾದ ವಿಚಾರಗಳಿಂದ ಸಂಸ್ಥಾನದ ಶಿಕ್ಷಣ ಪ್ರೌಢಿಮೆಯು ಉಚ್ಚಹಂತದಲ್ಲಿರುವುದು ವ್ಯಕ್ತವಾಗುತ್ತದೆ.

**ಇತರ ಮೇಲ್ಪಾಟುಗಳು.**—೧೯೩೦ನೆಯ ಇಸವಿಯಲ್ಲಿ ಸಂಸ್ಥಾನದ ಮುಖ್ಯ ನ್ಯಾಯಸ್ಥಾನವಾದ ಚೀಫ್ ಕೋರ್ಟಿನ ಹೆಸರು ಹೈ ಕೋರ್ಟ್ ಎಂದು ಮಾರ್ಪಾಟಾಯಿತು. ಮೊಕದ್ದಮೆಗಳ ತೀರ್ಮಾನವು ಆಲಸ್ಯ ವಾಗುತ್ತಿದ್ದುದನ್ನು ತಪ್ಪಿಸುವುದಕ್ಕಾಗಿ ಬಗೆಬಗೆಯ ವ್ಯವಸ್ಥೆಗಳು ನಡೆದಿರು ವುದಲ್ಲದೆ, ಹೈಕೋರ್ಟಿನಲ್ಲಿ ಮೊದಲು ಮುಖ್ಯನ್ಯಾಯಾಧೀಶರೂ ಸೇರಿ ಮೂರು ಮಂದಿಗಳಿದ್ದುದಕ್ಕೆ ಪ್ರತಿಯಾಗಿ ಈಗ ಆರು ಮಂದಿಗಳಿರುವ

ಮಟ್ಟಿನ ಆವಶ್ಯಕತೆಯುಂಟಾಗಿದೆ. ಕಾರ್ಖಾನೆಗಳ ಕೆಲಸಗಾರರಿಗೆ ಅಪಾಯಗಳು ಸಂಭವಿಸಿದ ಸಂದರ್ಭಗಳಲ್ಲಿ ಉಚಿತವಾದ ಪರಿಹಾರ ದ್ರವ್ಯಗಳನ್ನು ಕೊಡುವುದಕ್ಕಾಗಿ ಒಂದು ಕಾನೂನಾಯಿತು. ಅದರಿಂದ ಅನೇಕ ಬಡಪಾಯಿಗಳಿಗೆ ಸಹಾಯವಾಗಿದೆ. ಹಿಂದೂ ಧರ್ಮಶಾಸ್ತ್ರದ ತಿದ್ದುಪಡಿ ಕಾನೂನು ೧೯೩೩ನೆಯ ಇಸವಿಯಲ್ಲಿ ಆಚರಣೆಗೆ ಬಂದು ಹಿಂದೂ ಮಹಿಳೆಯರಿಗೆ ನೂತನವಾದ ಹಕ್ಕುಬಾಧ್ಯತೆಗಳುಂಟಾಗಿವೆ. ಪ್ರಜೆಗಳ ಹಿತಸಾಧನೆಗೆ ಅತ್ಯವಶ್ಯವಾದ ಬಗೆಬಗೆಯ ಕಾನೂನುಗಳು ವಿಧಾಯಕವಾಗಿಯೂ ವಿಧಾಯಕವಾಗುತ್ತಲೂ ಇವೆ. ಜಕ್ಕೂರಿನ ಬಳಿಯಲ್ಲಿ ವಿಮಾನಗಳ ನಿಲ್ದಾಣವು ಏರ್ಪಟ್ಟಿದೆ. ವಾರಕ್ಕೆರಡುಸಾರಿ ಬೆಂಗಳೂರಿನ ಮೂಲಕ ಹೈದರಾಬಾದಿನಿಂದ ಮದರಾಸಿಗೆ ವಿಮಾನಗಳು ಪ್ರಯಾಣಿಕರನ್ನು ಕುಳ್ಳಿರಿಸಿಕೊಂಡು ಹೋಗಿಬರುವ ವ್ಯವಸ್ಥೆಯಾಗಿದೆ. ಬೆಂಗಳೂರು ನಗರದ ಬಳಿಯಲ್ಲಿ ವಿಮಾನಗಳ ಕಾರ್ಖಾನೆಯನ್ನೇರ್ಪಡಿಸುವ ಪ್ರಯತ್ನಗಳು ನಡೆಯುತ್ತಿವೆ. ಸರ್ಕಾರದವರು ಉತ್ತಮವಾದ "ಟೆಲಿಫೋನ್" ಏರ್ಪಾಡನ್ನು ಮಾಡಿದ್ದಾರೆ. ಮೈಸೂರು ಬೆಂಗಳೂರು ನಗರಗಳಲ್ಲಿ "ರೇಡಿಯೋ" ಸಂಬಂಧದ ಒಂದು "ಬ್ರಾಡ್‌ಕ್ಯಾಸ್ಟಿಂಗ್ ಸ್ಟೇಷನ್" ವ್ಯವಸ್ಥೆಯನ್ನೂ ಸರ್ಕಾರದವರು ಏರ್ಪಡಿಸಬೇಕೆಂದಿದ್ದಾರೆ; ಇದರ ಸಂಬಂಧದ ಆರಂಭದ ವೆಚ್ಚಕ್ಕಾಗಿ ೧೯೪೦–೪೧ನೆಯ ವರ್ಷದಲ್ಲಿ ಹಣವನ್ನೊದಗಿಸಿದ್ದಾರೆ.

ಆಳಿದ ಮಹಾಸ್ವಾಮಿಯವರಾದ ಶ್ರೀಮನ್ಮಹಾರಾಜರವರು ಸಮಸ್ತ ಕಾರ್ಯಗಳಲ್ಲಿಯೂ ಅಧಿಕಾರಿಗಳಿಗೆ ಸ್ಫೂರ್ತಿಯನ್ನೊದಗಿಸಿ ಮಾರ್ಗ

**ನಮ್ಮ ಹೆಮ್ಮೆ**

ದರ್ಶನಮಾಡುತ್ತ, ಪ್ರಜೆಗಳ ಶ್ರೇಯಸ್ಸೇ ತಮ್ಮ ಶ್ರೇಯಸ್ಸೆಂದು ಅಚಲವಾಗಿ ನಂಬಿ ಸಂಸ್ಥಾನದ ಅಭ್ಯುದಯ ಸಾಧನೆಗಾಗಿ ಸಂತತವಾಗಿ ಶ್ರಮಿಸುತ್ತಿದ್ದುದು ಮೈಸೂರು ಸಂಸ್ಥಾನಕ್ಕೆ ಮಾತ್ರವೇ ಅಲ್ಲದೆ ಅಖಿಲ ಕರ್ಣಾಟಕಕ್ಕೂ, ಅಖಿಲ ಭಾರತೀಯ ಪ್ರಜಾಸಮುದಾಯಕ್ಕೂ, ಅಖಿಲ ರಾಜಮಂಡಲಕ್ಕೂ ಹೆಮ್ಮೆಯ ವಿಷಯವಾಗಿದೆ. ಸಂಸ್ಥಾನದಲ್ಲಿ ನಡೆದಿರುವ ಪುರೋಭಿವೃದ್ಧಿ ಕಾರ್ಯಗಳಿಗೆಲ್ಲ ಮಹಾಸ್ವಾಮಿಯವರೇ ಮೂಲಕಾರಣರಾಗಿದ್ದರು. ಹಿಂದೆ ಮೈಸೂರು ಸಂಸ್ಥಾನದ ಬ್ರಿಟಿಷ್ ರೆಸಿಡೆಂಟರವರಾಗಿದ್ದ ಲೆಫ್ಟಿನೆಂಟ್ ಕರ್ನಲ್ ಸಿ. ಟಿ. ಸಿ. ಪ್ಲೌಡನ್ ರವರು ("ರೋಟರಿ ಕ್ಲಬ್" ಅಧಿವೇಶನದಲ್ಲಿ ಮಾಡಿದ ಅಧ್ಯಕ್ಷಭಾಷಣದಲ್ಲಿ) ಅವರ ವಿಚಾರವನ್ನು ಪ್ರಸ್ತಾವಿಸಿ, "ಶ್ರೀಮನ್ಮಹಾರಾಜರವರ

ಪ್ರಜೆಗಳ ಯೋಗಕ್ಷೇಮಕ್ಕಾಗಿ ಏನೇನು ನಡೆದಿದ್ದರೂ ಅದೆಲ್ಲ ಶ್ರೀಮನ್ಮಹಾರಾಜರವರತ್ತಣಿಂದಲೇ ಬಂದಿದೆ. ಅಧಿಕಾರಿಗಳೆಲ್ಲರಿಗೂ ಮತ್ತು ಪ್ರಜೆಗಳಿಗೂ ಶ್ರೀಮನ್ಮಹಾರಾಜರವರು ಉಚ್ಚಾದರ್ಶದ ಮೇಲ್ಪಂಕ್ತಿಯನ್ನು ಹಾಕಿದ್ದಾರೆ"* ಎಂದು ೧೯೩೦ನೆಯ ಇಸವಿ ನವೆಂಬರು ತಿಂಗಳು ೩ನೆಯ ತಾರೀಖಿನ ದಿನ ಹೇಳಿದರು. ದೇಶೋನ್ನತಿ ಸಾಧನೆಯ ವಿಚಾರಗಳಲ್ಲಿ ಮಗ್ನರಾಗಿ ಮಹಾಸ್ವಾಮಿಯವರು ಸಂತತವೂ ಸಂಸ್ಥಾನ ದಲ್ಲಿ ಶ್ರಮಿಸುತ್ತಿದ್ದುದು ಮಾತ್ರವೇ ಅಲ್ಲದೆ, ತಮ್ಮ ಸಂಧಾನ ಸಾಹಸ ಚಾತುರ್ಯಗಳಿಂದ ಮೇಧಾವಿ ಶ್ರೇಷ್ಠರುಗಳಾದ ಗವರ್ನರುಗಳನ್ನೂ ವೈಸ್ರಾಯಿಗಳನ್ನೂ ಬೆರಗುಗೊಳಿಸಿ, ಕಾರ್ಯನಿರ್ವಹಣದ ಅನೇಕ ಸಂಧಿಕಟ್ಟಿನ ಸಮಯಗಳಲ್ಲಿ ಅವರುಗಳೊಡನೆ ಪತ್ರವ್ಯವಹಾರವನ್ನು ನಡೆಯಿಸಿ, ತಮ್ಮ ಸೌಜನ್ಯದ ಮತ್ತು ವ್ಯಕ್ತಿವೈಶಿಷ್ಟ್ಯ ಪ್ರಭಾವದ ಸಹಾಯದಿಂದ ಕಾರ್ಯಸಾಧನೆ ಮಾಡಿದ್ದರು. ಕೃಷ್ಣರಾಜಸಾಗರದ ಅಣೆಕಟ್ಟೆಯನ್ನು ಎತ್ತರಿಸಿ ಹೆಚ್ಚು ನೀರನ್ನು ತಡೆದಿಟ್ಟುಕೊಳ್ಳುವ ಸಂಬಂಧದಲ್ಲಿ ಮೈಸೂರು ಸರ್ಕಾರದವರಿಗೂ ಮದರಾಸು ಸರ್ಕಾರ ದವರಿಗೂ ವಿವಾದ ಹುಟ್ಟಿದಾಗ ಉಭಯ ಸರ್ಕಾರಗಳ ಇಂಜನಿಯರುಗಳೇ ಮುಂತಾದವರಿಗೆ ಚರ್ಚೆಗಳೂ, ಅನುನಯದ ಪಂಚಾಯಿತಿಗಳೂ ಯಥೇಷ್ಟವಾಗಿ ನಡೆದುವು. ಆದಾಗ್ಗೂ, ಮೈಸೂರು ಸಂಸ್ಥಾನಕ್ಕೆ ಅನುಕೂಲವಾದ ಸುಮುಖ ವ್ಯವಸ್ಥೆಯು ಏರ್ಪಟ್ಟುದಕ್ಕೆ ಅವೆಲ್ಲಕ್ಕಿಂತಲೂ ಅಧಿಕತರವಾದ ಸಾಧನವು, ೧೯೨೨ನೆಯ ಇಸವಿಯಿಂದಲೂ ಸುಮಾರು ಒಂದೂವರೆ ವರ್ಷಕಾಲ ಮಹಾಸ್ವಾಮಿಯವರು ಸಂತತವಾಗಿ ಲಾರ್ಡ್ ವಿಲ್ಲಿಂಗ್ಡನ್‌ರವರೇ ಮುಂತಾದವರೊಡನೆ ನಡೆಯಿಸಿದ ಪತ್ರವ್ಯವಹಾರ. ಆ ಸಂಬಂಧವಾಗಿ ಮಹಾಸ್ವಾಮಿಯವರೇ ಬರೆದಿರುವ ಅಸಂಖ್ಯಾತ ಪತ್ರ ಗಳನ್ನು ನೋಡಿದರೆ ಮಹಾಸ್ವಾಮಿಯವರ ದೇಶಾಭಿಮಾನವೂ, ಪ್ರಜಾ ವಾತ್ಸಲ್ಯವೂ, ಸಾಹಸಬುದ್ಧಿಯೂ, ಅನುಪಮ ಸಂಧಾನ ಚಾತುರ್ಯವೂ, ವಿಶೇಷ ಧೈರ್ಯದಿಂದಲೂ ವಿಸ್ಮಯಕರವಾದ ವಾಗ್ಧೋರಣೆಯಿಂದಲೂ ವಿಷಯ ಪ್ರತಿಪಾದನ ಮಾಡಬಲ್ಲ ಸಾಮರ್ಥ್ಯವೂ, ಅಪ್ರಿಯವಾದ ಸಂಗತಿ ಗಳನ್ನು ಸೂಚಿಸುವಲ್ಲಿ ಕೂಡ ವಿರೋಧ ನಿಷ್ಠುರಗಳಿಲ್ಲದ ಅನುನಯ ಪರತೆಯೂ ಹೃದಯಂಗಮವಾಗಿ ವ್ಯಕ್ತವಾಗುತ್ತದೆ. ಅಷ್ಟೇ ಅಲ್ಲ. ಮಹಾಸ್ವಾಮಿಯವರ ಶಕ್ತಿ ಸಾಮರ್ಥ್ಯಗಳನ್ನೂ, ವ್ಯಕ್ತಿ ವೈಶಿಷ್ಟ್ಯ

---

* "....Whatever has been done for his people has proceeded from His Highness the Maharaja who has set a high standard to all his officers and his people...."—Lt.-Col. C. T. C. Plowden.

ವೈಭವವನ್ನೂ, ಸೌಜನ್ಯ ಸಂಪತ್ತಿಯನ್ನೂ, ವಿನಯ ಗಾಂಭೀರ್ಯ ಗಳನ್ನೂ, ಅನನ್ಯ ಸುಲಭವಾದ ಸಂಧಾನ ಚಾತುರ್ಯವನ್ನೂ ಲಾರ್ಡ್ ವಿಲ್ಲಿಂಗ್ಡನ್‌ರವರೇ ಮುಂತಾದ ಮೇಧಾವಿ ಶ್ರೇಷ್ಠರೆಷ್ಟು ಮಟ್ಟಿಗೆ ಮನಗಂಡು ಶ್ಲಾಘಿಸಿದ್ದಾರೆಂಬುದು ಮಹಾಸ್ವಾಮಿಯವರ ಪತ್ರಗಳಿಗೆ ಬಂದ ಪ್ರತ್ಯುತ್ತರಗಳಿಂದ ವ್ಯಕ್ತವಾಗುತ್ತದೆ. ಅನೇಕ ಸಂಧಿಕಟ್ಟಿನ ಸನ್ನಿವೇಶಗಳೊದಗಿದಾಗ್ಗೆ ಬಹುತರವಾಗಿ ಅವರ ಸಂಧಾನ ಚಾತುರ್ಯ ದಿಂದಲೇ ಮೈಸೂರು ಸಂಸ್ಥಾನಕ್ಕೆ ಅನುಕೂಲವಾದ ಫಲಿತಾಂಶ ಗಳುಂಟಾದುವು. ಇದು ಮೈಸೂರು ಸಂಸ್ಥಾನದವರೆಲ್ಲರಿಗೂ ಅತ್ಯಂತ ಹೆಮ್ಮೆಯ ವಿಷಯವೇ ಸರಿ.

೧೯೩೦ನೆಯ ಇಸವಿಯಲ್ಲಿಯೂ, ೧೯೩೧ನೆಯ ಇಸವಿಯಲ್ಲಿಯೂ ಮತ್ತು ೧೯೩೨ನೆಯ ಇಸವಿಯಲ್ಲಿಯೂ ಲಂಡನ್ ನಗರದಲ್ಲಿ ನಡೆದ ಸರ್ವ ಪಕ್ಷೀಯ ಸಮ್ಮೇಳನಗಳಿಗೆ ("ರೌಂಡ್ ಟೇಬಲ್ ಕಾನ್ಫರೆನ್ಸ್" ಗಳಿಗೆ) ಮೈಸೂರು, ತಿರುವಾಂಕೂರು, ಕೊಚ್ಚಿ ಮತ್ತು ಪುದುಕೋಟೆ ಸಂಸ್ಥಾನಗಳ ಪ್ರತಿನಿಧಿಯವರಾಗಿ ದಯಮಾಡಿದ್ದ ಸರ್ ಮಿರ್ಜಾ ಎಂ. ಇಸ್ಮಾಯಿಲ್‌ರವರು ಅಖಿಲ ಭಾರತೀಯ ಸಂಯುಕ್ತ ರಾಜ್ಯಾಂಗ ವ್ಯವಸ್ಥೆಯೇ ಮುಂತಾದ ವಿಚಾರಗಳಲ್ಲಿ ಅಮೋಘವಾದ ಸಲಹೆಗಳನ್ನಿತ್ತು ಅತ್ಯಂತ ಧೈರ್ಯದಿಂದ ವಾದಿಸಿ ಬ್ರಿಟಿಷ್ ಸರ್ಕಾರದ ಪ್ರಚಂಡ ಮೇಧಾವಿಗಳನ್ನು ಕೂಡ ಬೆರಗುಮಾಡಿದುದೂ ಸಹ ಮೈಸೂರು ಸಂಸ್ಥಾನ ದವರೆಲ್ಲರಿಗೂ ಹೆಮ್ಮೆಯ ವಿಷಯವಾಗಿದೆ. ಪೊಗದಿಯ ಭಾರವು ಪರಿಹಾರ ವಾಗುವುದಕ್ಕಾಗಿಯೂ, ಬೆಂಗಳೂರು ದಂಡಿನ ಪ್ರದೇಶವು ಮೈಸೂರು ಸರ್ಕಾರದ ಆಡಳಿತಕ್ಕೇ ಹಿಂದಕ್ಕೆ ಬರುವಂತೆ ಮಾಡುವುದಕ್ಕಾಗಿಯೂ ಅವರು ಪ್ರಯತ್ನಿಸುತ್ತಿದ್ದಾರೆ.

**ಲಾರ್ಡ್ ವಿಲ್ಲಿಂಗ್ಡನ್ ರವರ ಆಗಮನ**

೧೯೩೩ನೆಯ ಇಸವಿ ಡಿಸೆಂಬರು ತಿಂಗಳಿನಲ್ಲಿ ಆಗ್ಗೆ ವೈಸ್ರಾಯಿ ಯವರಾಗಿದ್ದ ಲಾರ್ಡ್ ವಿಲ್ಲಿಂಗ್ಡನ್‌ರವರೂ ಅವರ ಪತ್ನಿಯವರೂ ಮೈಸೂರು ಸಂಸ್ಥಾನಕ್ಕೆ ದಯಮಾಡಿದ್ದರು. ಡಿಸೆಂಬರು ತಿಂಗಳು [illegible]ನೆಯ ತಾರೀಖಿನ ರಾತ್ರಿ ಮಹಾಸ್ವಾಮಿಯವರು ಅವರ ಗೌರವಾರ್ಥವಾಗಿ ಔತಣ ಕೂಟವನ್ನು ಏರ್ಪಡಿಸಿದ್ದರು. ಆಗ್ಗೆ ಮಹಾ ಸ್ವಾಮಿಯವರು ದಯಪಾಲಿಸಿದ ಭಾಷಣಕ್ಕೆ ಪ್ರತ್ಯುತ್ತರ ಹೇಳಿದಾಗ್ಗೆ ಲಾರ್ಡ್ ವಿಲ್ಲಿಂಗ್ಡನ್‌ರವರು, "ಈಗ್ಗೆ ಹನ್ನೊಂದು ವರ್ಷಗಳ ಹಿಂದೆ ನಾನು ಇಲ್ಲಿಗೆ ಬಂದಿದ್ದಾಗಿನಿಂದೀಚೆಗೆ ಶ್ರೀಮನ್ಮಹಾರಾಜರವರ

ಸಂಸ್ಥಾನದಲ್ಲಿ ನಡೆದಿರುವ ಪ್ರಗತಿಸಾಧನೆಯು ವಾಸ್ತವವಾಗಿಯೂ ಅಸಾಧಾರಣವಾಗಿದೆ. ಈ ಹನ್ನೊಂದು ವರ್ಷಗಳೂ ಜನಾಂಗಗಳ ಚರಿತ್ರೆಯಲ್ಲಿ ಸುಖಮಯವಾದ ಸಂವತ್ಸರಗಳೇನೂ ಅಲ್ಲ. ಅತ್ಯಂತ ಹೆಚ್ಚಿನ ಆರ್ಥಿಕ ದುರವಸ್ಥೆಯನ್ನು ತಂದಿಟ್ಟ ಕ್ಲೇಶದಾಯಕವಾದ ಸಂವತ್ಸರಗಳವು. ಪ್ರಪಂಚವ್ಯಾಪಿಯಾದ ಆ ಕ್ಲೇಶಕ್ಕೆ ಸಿಕ್ಕದೆ ಮೈಸೂರು ಸಂಸ್ಥಾನವು ಪಾರಾಗುವುದು ಸಾಧ್ಯವಿರಲಿಲ್ಲ, ಆದಾಗ್ಗೂ ಆ ಬಗೆಯ ಕಷ್ಟದಶೆಯಿಂದ ತೊಂದರೆಗೆ ಸಿಕ್ಕಿದ್ದೂ ಸಹ, ಮೈಸೂರು ಸಂಸ್ಥಾನದಲ್ಲಿ ಈಗ ನಡೆದಿರುವ ಮಟ್ಟಿಗೆ ಕೈಗಾರಿಕೆಗಳ ಅಭಿವೃದ್ಧಿಯು ನಡೆದು ಪ್ರಜೆಗಳ ಯೋಗಕ್ಷೇಮಕ್ಕೆ ಸಾಧಕವಾದ ಸೌಕರ್ಯಗಳು ಕಲ್ಪಿತವಾಗಿರುವುದನ್ನು ಪರಿಶೀಲಿಸಿದವರೆಲ್ಲರೂ ಮೆಚ್ಚಿ ಶ್ಲಾಘಿಸಲೇ ಬೇಕು....'' ಎಂದು ಹೇಳಿದರು. ಅಲ್ಲದೆ ಮೈಸೂರು ಸಂಸ್ಥಾನದ ರಾಜ್ಯಭಾರ ವಿಚಕ್ಷಣೆಯು ಅಭಿನಂದನಯೋಗ್ಯವಾಗಿದ್ದು ವೃದ್ಧಿಹೊಂದುತ್ತ ಬರುತ್ತಿರುವುದನ್ನು ಬ್ರಿಟಿಷ್ ಸರ್ಕಾರದವರು ಶ್ಲಾಘಿಸಿ, ಆಳಿದ ಮಹಾಸ್ವಾಮಿಯವರಾದ ಶ್ರೀಮನ್ಮಹಾರಾಜರವರು ಕೋರಿದ್ದುದಕ್ಕನುಸಾರವಾಗಿ ೧೯೧೩ನೆಯ ಇಸವಿಯ ಒಪ್ಪಂದದ ೧೮ನೆಯ ಆರ್ಟಿಕಲಿನಿಂದ ಸಂಸ್ಥಾನದಲ್ಲಿ ಕಾನೂನು ರಚನೆಯ ಸಂಬಂಧದಲ್ಲಿ ಪೂರ್ಣಸ್ವಾತಂತ್ರ್ಯವಿಲ್ಲದಂತೆ ಕಲ್ಪಿತವಾಗಿದ್ದ ನಿರ್ಬಂಧಗಳನ್ನು ತೆಗೆದುಹಾಕಿದ್ದುದಾಗಿಯೂ ಅವರು ತಿಳಿಸಿದರು.

# ಹತ್ತನೆಯ ಅಧ್ಯಾಯ

## ಮೃಗಯಾ ವಿಹಾರ

**ಮೇದಶ್ಛೇದ ಕೃಶೋದರಂ ಲಘು ಭವತ್ಯುತ್ಥಾನ ಯೋಗ್ಯಂ ವಪುಃ**
**ಸತ್ವಾನಾಮಪಿ ಲಕ್ಷ್ಯತೇ ವಿಕೃತಿಮಚ್ಚಿತ್ತಂ ಭಯ ಕ್ರೋಧಯೋಃ ।**
**ಉತ್ಕರ್ಷಃ ಸ ಚ ಧನ್ವಿನಾಂ ಯದಿಷವಃ ಸಿಧ್ಯನ್ತಿ ಲಕ್ಷ್ಯೇ ಚಲೇ**
**ಮಿಥ್ಯೈವ ವ್ಯಸನಂ ವದನ್ತಿ ಮೃಗಯಾಮೀದೃಗ್ವಿನೋದಃ ಕೃತಃ ॥**

**ಮಹಾಸ್ವಾಮಿಯವರ ಮೃಗಯಾ ವಿನೋದ ಮಹತ್ವ**

ಆಳಿದ ಮಹಾಸ್ವಾಮಿಯವರು ಮೈಸೂರು ಸಂಸ್ಥಾನದ ರುದ್ರ ರಮಣೀಯಗಳಾದ ಕಾನನ ಪ್ರದೇಶಗಳಲ್ಲಿ ಮಾಡಿಸಿರುವ ಮೃಗಯಾ ವಿನೋದ ವ್ಯವಸ್ಥೆಯದೇ ಒಂದು ಪ್ರತ್ಯೇಕ ಪ್ರಪಂಚ. ಮಹಾಸ್ವಾಮಿಯವರ ಸಾಹಸ ಪ್ರೇಮಕ್ಕೂ, ಧೈರ್ಯೋತ್ಸಾಹಗಳಿಗೂ, ಕಲ್ಪನಾ ಸಾಮರ್ಥ್ಯಕ್ಕೂ, ಶುದ್ಧವಾದ ಸರಳವಾದ ಮತ್ತು ಧ್ವನಿಪೂರಿತವಾದ ತಿಳಿಹಾಸ್ಯಕ್ಕೂ, ಮತ್ತು ಕಾಡುಕುರುಬರು ಮುಂತಾದವರೊಡನೆ ಕೂಡ ಮಹಾಸ್ವಾಮಿಯವರು ಪ್ರದರ್ಶಿಸುತ್ತಿದ್ದ ಕೃಪಾವಾತ್ಸಲ್ಯಗಳಿಗೂ ಎಣೆಯಿಲ್ಲ.

ಬೇಟೆಯು ದುರ್ವ್ಯಸನಗಳಲ್ಲೊಂದೆಂಬುದಾಗಿ ಪ್ರಸಿದ್ಧವಾಗಿರುವಲ್ಲಿ ಅದಕ್ಕಿಷ್ಟು ಪ್ರಾಧಾನ್ಯವೇ – ಎಂದು ಸಂದೇಹವುಂಟಾಗಬಹುದು. ಬೇಟೆಯಿಂದ ಉಂಟಾಗುವ ದೇಹಪಟುತ್ವ, ಮನಸ್ಸಿನ ಉಲ್ಲಾಸೋತ್ಸಾಹಗಳು, ಪೌರುಷ ಸಾಹಸಗಳ ಪ್ರದರ್ಶನ, ಮತ್ತು ಮೃತ್ಯುಮುಖದಲ್ಲಿ ಕೂಡ ನಿರ್ಭೀತಿಯಿಂದಿರುವ ಧೀರತೆಯ ಉತ್ಕರ್ಷ – ಮುಂತಾದ ಗುಣಭಾಗವನ್ನು ಗಮನಿಸಿದರೆ, ಮೃಗಯಾ ವಿಹಾರವು ದುರ್ವ್ಯಸನವೆಂದು ಹೇಳುವುದು ಅನ್ಯಾಯವೆಂಬುದು ಗೊತ್ತಾಗುತ್ತದೆ. ಬೇಟೆಯ ನೆವದಿಂದ ಕ್ರೂರ ಮೃಗಗಳ ಸಂಖ್ಯೆಯನ್ನು ಕಡಮೆಮಾಡದೆಹೋದರೆ ಹಸುಗಳೇ ಮುಂತಾದ ಸಾಧುಪ್ರಾಣಿಗಳಿಗೆ ಉಳಿಗಾಲವೇ ಇರುವುದಿಲ್ಲ. ಒಂದುಸಲ ಒಂದು ಹಸುವು ಮೇಯುತ್ತಿದ್ದ ಬಯಲಿಗೆ ನುಗ್ಗಿ ಒಂದು ಹುಲಿಯು ಅದನ್ನು ಹಿಡಿದುಕೊಂಡಿತು. ಹುಲಿಯು ಅದನ್ನು ಕೊಲ್ಲುವುದಕ್ಕೆ ಮುಂಚಿತವಾಗಿ ಜನರು ಗಲಭೆಮಾಡಿ ಹುಲಿಯನ್ನು ಓಡಿಸಿ ಅದನ್ನುಳಿಸಿದರು. ಆದರೆ, ಆಯತಪ್ಪಿ ಕೆಳಗೆ ಬಿದ್ದಾಗ ಅದರ ಒಂದು ಕಾಲು ಮುರಿದುಹೋಯಿತು. ಕಾಲನ್ನು ಕಳೆದುಕೊಂಡ ಆ ಹಸುವನ್ನು ಪೋಷಿಸು

ವುದಕ್ಕಾಗಿ ಅರಮನೆಗೆ ಸೇರಿದ ಗೋಶಾಲೆಯೊಂದರಲ್ಲಿ ಮಹಾಪ್ರಭುಗಳವರು ಏರ್ಪಾಡು ಮಾಡಿಸಿದರು. ಆಳಿದ ಮಹಾಸ್ವಾಮಿಯವರಾದ ಶ್ರೀಮನ್ಮಹಾರಾಜರವರ ಅಪ್ಪಣೆಯಿಂದ ಅದಕ್ಕೆ ಉತ್ತಮ ರೀತಿಯಲ್ಲಿ ಪೋಷಣೆ ದೊರೆಯಲು ಪ್ರಾರಂಭವಾಯಿತು. ಹಾಗಿದ್ದೂ ಕೂಡ ಮೂರೇ ಕಾಲುಗಳಲ್ಲಿ ನಿಂತು ಆ ಹಸುವು ಕಷ್ಟಪಡುತ್ತಿರುವುದನ್ನು ನೋಡಿದವರೆಲ್ಲರೂ ವ್ಯಥೆಪಟ್ಟಿದ್ದಾರೆ. ಹುಲಿಗಳೇ ಮುಂತಾದ ಮೃಗಗಳ ಬಾಧೆಯಿಂದ ಅನೇಕ ಸಂದರ್ಭಗಳಲ್ಲಿ ಕಾಡಿನ ಪ್ರದೇಶದ ಗ್ರಾಮಾಂತರಗಳಲ್ಲಿ ವಾಸವಾಗಿರುವ ಜನಗಳು ಹಿಂಸೆಗೊಳಗಾಗುವುದನ್ನು ನೋಡಿದವರಿಗೂ, ಕಾಡುಮೃಗಗಳಿಂದ ಸಾಧುಪ್ರಾಣಿಗಳಿಗುಂಟಾಗುವ ಬಾಧೆಯನ್ನು ಬಲ್ಲವರಿಗೂ ಬೇಟೆಯು ಸತ್ಕಾರ್ಯವೆಂದು ತೋರುವುದೇ ಹೊರತು ದುರ್ವ್ಯಸನವೆಂದು ಎಂದಿಗೂ ತೋರದು. ಅಪಾಯಕ್ಕೂ ಗುರಿಯಾಗಲು ಸಿದ್ಧರಾಗಿ ಕಾಡುಮೃಗಗಳನ್ನು ಬೇಟೆಯಾಡುವವರು ಉಪಕಾರಿಗಳೆಂದೇ ಮನವರಿಕೆಯಾಗುವುದು.

ಆಳಿದ ಮಹಾಸ್ವಾಮಿಯವರು ಕೇವಲ ತರುಣ ವಯಸ್ಸಿನಿಂದಲೂ ಸಾಹಸಿಗಳಾಗಿದ್ದುದನ್ನೂ, ನೀಲಗಿರಿಯಲ್ಲಿ ಬೇಟೆಯ ನಾಯಿಗಳೊಡನೆ ಕುದುರೆಯನ್ನೋಡಿಸಿಕೊಂಡುಹೋಗಿ ಬೇಟೆಯಾಡುತ್ತಿದ್ದುದನ್ನೂ ಕಂಡು ಬೇಟೆಯಲ್ಲಿ ಬಹಳ ಗಟ್ಟಿಗರಾಗಿದ್ದ ಯೂರೋಪಿಯನರು ಕೂಡ ಬೆರಗಾಗುತ್ತಿದ್ದರು. ಆ ರೀತಿ ಬೇಟೆಗೆ ಹೋದಾಗ ಮಹಾಸ್ವಾಮಿಯವರು ದೇಹಾಪಾಯದ ಸಂಭವದಿಂದ ಕೂಡ ಭಯಪಡದೆ, ಕಡಿದಾದ ಮತ್ತು ಕಿರಿದಾದ ಬೆಟ್ಟಸಾಲಿನ ಮಾರ್ಗಗಳಲ್ಲಿ ಸಹ ಅತ್ಯಂತ ವೇಗವಾಗಿ ಕುದುರೆಯನ್ನು ಓಡಿಸುತ್ತ, ಮಾರ್ಗ ಮಧ್ಯದಲ್ಲಿದ್ದ ಹಳ್ಳಕೊಳ್ಳಗಳ ಮೇಲೆಲ್ಲ ಕುದುರೆಯನ್ನು ಹಾರಿಸಿಕೊಂಡು ಲೀಲಾಜಾಲವಾಗಿ ಮೃಗಯಾ ವಿಹಾರ ಮಾಡುತ್ತಿದ್ದರು.

ಹುಲಿ, ಕಾಡುಕೋಣ ಮುಂತಾದ ಘಾತುಕ ಮೃಗಗಳನ್ನು ಬೇಟೆಯಾಡುವುದರಲ್ಲಿ ಮಹಾಸ್ವಾಮಿಯವರಿಗೆ ತೀವ್ರಾಸಕ್ತಿಯೇ ಹೊರತು, ನಿರಪರಾಧ ಜಂತುಗಳಾದ ಜಿಂಕೆ, ಸಾರಗ ಮುಂತಾದುವುಗಳನ್ನು ಸದೆಬಡಿಯುವ ಕ್ರೌರ್ಯಪ್ರವೃತ್ತಿಯಲ್ಲಿ ಆದರವಿರಲಿಲ್ಲ. ಹಿಂಸ್ರ ಪಶುಗಳಾದ ಕಾಡುಮೃಗಗಳನ್ನು ಕೊಲ್ಲಬೇಕಾದಲ್ಲಿ ಕೂಡ, ಅವುಗಳನ್ನು ಹೆಚ್ಚುಕಾಲ ಹಿಂಸಿಸದೆ ಆದಷ್ಟು ಶೀಘ್ರವಾಗಿ ಕೊಲ್ಲಬೇಕೆಂಬುದು ಉದಾತ್ತವಾದ ಅವರ ಮನೋಧರ್ಮ. ಬೇಗ ಪ್ರಾಣಹೋಗದ ಸ್ಥಳಗಳಿಗೆ ಗುಂಡು ಹೊಡೆದು ಹೆಚ್ಚುಕಾಲ ಹಿಂಸೆಪಟ್ಟು ಕಾಡುಮೃಗಗಳು ಮರಣ

ಹೊಂದುವಂತೆ ಮಾಡಿದ ಕೆಲವು ಸಂದರ್ಭಗಳಲ್ಲಿ ಹಾಗೆ ಮಾಡಿದ ಬೇಟೆಗಾರರನ್ನು ಕುರಿತು ಮಹಾಸ್ವಾಮಿಯವರು, "ಖೈಮಾ ಮಾಡಿಬಿಟ್ಟಿರಿ. ಆ ಬಡಪ್ರಾಣಿಯನ್ನು ಗೋಳುಗುಟ್ಟಿಸಿ ಬಂದಿರಿ" ಎಂದು ಮುಂತಾಗಿ ಕಟುವಾದ ಹಾಸ್ಯವಚನಗಳನ್ನಾಡಿ ಬುದ್ಧಿಕಲಿಸಿರುವ ಅನೇಕ ನಿದರ್ಶನಗಳುಂಟು. ಒಂದೇ ಗುಂಡಿನ ಪೆಟ್ಟಿಗೆ ಕ್ರೂರ ಮೃಗಗಳನ್ನು ಕೊಂದವರಿಗೆ ಮಹಾಸ್ವಾಮಿಯವರು ಬಹುಮಾನಗಳನ್ನು ಕೊಟ್ಟಿರುವ ಸಂದರ್ಭಗಳುಂಟು.

ಮೈಸೂರು ಸಂಸ್ಥಾನದ ಕಾನನ ಪ್ರದೇಶವೂ ರಮಣೀಯವಾಗಿ ಚೆಲುವಿನ ಆಗರವಾಗಿದೆ. ಪುರಾಣ ಪ್ರಸಿದ್ಧವಾದ ದಂಡಕಾರಣ್ಯದ ಒಂದು ಭಾಗವಾಗಿ ಈಗಿನ ಮೈಸೂರು ಸಂಸ್ಥಾನದ ಕಾನನ ಪ್ರದೇಶಗಳೂ ಅದಕ್ಕೆ ಸೇರಿದ್ದುವೆಂದೂ ಹೇಳುತ್ತಾರೆ. ಅನೇಕ ಪ್ರದೇಶಗಳಲ್ಲಿ ಸೂರ್ಯರಶ್ಮಿಗಳೇ ಪ್ರವೇಶಿಸಲಾರವೋ ಎಂದು ತೋರುವ ಮಟ್ಟಿಗೆ ದಟ್ಟವಾಗಿ ಬೆಳೆದಿರುವ ವೃಕ್ಷಗಳೂ ಬಿದಿರುಮೆಳೆಗಳೂ ಗಗನವನ್ನಣೆದು ನಿಂತಿವೆ. ಆನೆಗಳು, ಕಾಡುಕೋಣಗಳು, ಕಾಡೆಮ್ಮೆಗಳು, ಹುಲಿಗಳು, ಕಡವೆಗಳು (ದುಪ್ಪಿಗಳು), ನಾರಗಗಳು (ಬೊಟ್ಟು ಹುಲ್ಲೆಗಳು), ಕಾಡುಕುರಿಗಳು (Barking Deer), ಕೃಷ್ಣಮೃಗಗಳು, ಮುಂತಾದ ಸುಂದರವಾದ ಮೃಗಗಳಿಂದ ಕೂಡಿ ನಮ್ಮ ಸಂಸ್ಥಾನದ ಕಾನನ ಪ್ರದೇಶಗಳು ಶೋಭಿಸುತ್ತಿವೆ. ಕಾಡುಕುರಿಯ ಕೂಗುಗಳೇ ಎರಡು ಮೈಲಿಗಳ ದೂರಕ್ಕೆ ಕೇಳಿಸಿ ಅದು ಕೋರೆದಾಡೆಯಲ್ಲಿ ಹೊಡೆದರೆ ಬೇಟೆಯ ನಾಯಿಯ ಪಾರ್ಶ್ವವೇ ಸೀಳಿಹೋಗುವುದು; ಹೀಗೆಂದಮೇಲೆ ಉಳಿದ ಘೋರಮೃಗಗಳ ರೌದ್ರನಿನಾದದಿಂದ ಕಾನನ ಪ್ರದೇಶವೆಲ್ಲ ಆಗಾಗ ಪ್ರತಿಧ್ವನಿತವಾಗಿ ಭಯಾನಕವಾಗಿ ತೋರುವುದನ್ನು ಹೇಳಬೇಕಾದುದೇ ಇಲ್ಲ. ಮೊಲಗಳು, ಕರಡಿಗಳು, ಕತ್ತಿಕಿರುಬಗಳು, ಮುಂಗಸಿಗಳು, ಹಾವುಗಳು, ಮುಳ್ಳುಹಂದಿಗಳು ಮುಂತಾದ ನೂರಾರು ಜಾತಿಗಳ ಪ್ರಾಣಿಗಳೂ; ಕಾಡುಗಳ ಮಾರ್ಗವಾಗಿ ಪ್ರವಹಿಸುವ ನದಿಗಳಲ್ಲಿರುವ ಮೊಸಳೆಗಳು, ನೀರುನಾಯಿಗಳು, ಭಾರಿ ಭಾರಿ ಮೀನುಗಳು, ಬಗೆಬಗೆಯ ನೀರು ಹಕ್ಕಿಗಳು — ಮುಂತಾದ ಜಲಚರಗಳೂ; ಮರಗಳ ಮೇಲಿರುವ ವಿವಿಧ ವರ್ಣರಂಜಿತಗಳಾದ ಪಕ್ಷಿಗಳೂ, ನವಿಲುಗಳೂ; ಮತ್ತು ಕಾಡುಕೋಳಿಗಳೂ, ವೃಕ್ಷಗಳ ಮತ್ತು ಲತಾಗುಲ್ಮಗಳ ಸಂಪತ್ತೂ; ಕಾನನ ಪ್ರದೇಶಗಳ ಶೋಭೆಯನ್ನು ಮತ್ತಷ್ಟು ಹೆಚ್ಚಿಸುತ್ತವೆ. ಮೈಸೂರು

**ಕಾನನ ಸೌಂದರ್ಯ**
**ಬೇಟೆಯ ಪ್ರಾಣಿಗಳು**

ಸಂಸ್ಥಾನದ ಕಾನನದ ಸಿರಿಯನ್ನು ಕಣ್ಣಾರೆ ನೋಡಿ ಹರ್ಷಿಸಬೇಕೇ ಹೊರತು, ವರ್ಣಿಸಿ ಮುಗಿಸಲು ಸಾಧ್ಯವೇ ಇಲ್ಲ. ಕಾಕನಕೋಟೆ ಕಾಡುಗಳೇ ಮುಂತಾದುವನ್ನು ಎಷ್ಟು ಸಾರಿ ಎಷ್ಟು ಹೊತ್ತು ನೋಡಿದರೂ ತೃಪ್ತಿಯಾಗುವಂತಿಲ್ಲ. ಮೃಗಗಳನ್ನು ಮನಸ್ವಿಯಾಗಿ ಬೇಟೆಯಾಡಿ ನಾಶಗೊಳಿಸಿದರೆ, ಚೆಲುವಿನ ನೆಲೆಯಂತಿರುವ ಅನೇಕ ಮೃಗಗಳ ಜಾತಿಗಳೇ ನಿರ್ನಾಮವಾಗಿ ನಷ್ಟವಾದಾವೆಂದು ಭಾವಿಸಿ ಶ್ರೀಮನ್ಮಹಾರಾಜರವರ ಸರ್ಕಾರದವರು ಬೇಟೆಯ ನಿಬಂಧನೆಗಳನ್ನು ರಚಿಸಿ ಕಟ್ಟುನಿಟ್ಟಾಗಿ ಆಚರಣೆಯಲ್ಲಿಟ್ಟಿದ್ದಾರೆ; ಮನಸ್ವಿಯಾಗಿ ಮೀನುಗಳನ್ನು ಹಿಡಿಯದಂತೆ ಸಹ ನಿಬಂಧನೆಗಳೇರ್ಪಟ್ಟಿವೆ. ಕಾಡುಗಳಲ್ಲಿ ಮೀನು ಹಿಡಿಯುವ ನದೀ ಪ್ರದೇಶಗಳುಂಟು. ಅಲ್ಲಿ ದೊರೆಯುವ ಮತ್ಸ್ಯಗಳಲ್ಲೆಲ್ಲ "ಮಹ್ಸೀರ್" ಎಂಬ ಮತ್ಸ್ಯವೇ ಅತ್ಯಂತ ದೊಡ್ಡ ಜಾತಿಯದು. ತೂಕದಲ್ಲಿ ಅದು ನೂರು ಪೌಂಡುಗಳವರೆಗೂ ಇರುತ್ತದೆ. ಅದನ್ನು ಹಿಡಿಯಲು ಬಹಳ ಚಾತುರ್ಯವು ಆವಶ್ಯಕ. ಅಲ್ಲದೆ, ಅದನ್ನು ಹಿಡಿಯುವ ಗಾಳದ ಯಂತ್ರ ಸಾಧನ ಮುಂತಾದ ಉಪಕರಣಗಳಿಗೆ ಸುಮಾರು ಏಳು ನೂರು ರೂಪಾಯಿಗಳ ವರೆಗೂ ಕ್ರಯವನ್ನು ಕೊಡಬೇಕಾಗುತ್ತದೆ. ವೈಸ್ರಾಯಿಗಳು, ಗವರ್ನರುಗಳು ಮುಂತಾದ ಯೂರೋಪಿಯನ್ ದೊಡ್ಡಮನುಷ್ಯರೂ, ಮಾಂಸಹಾರಿಗಳಾದ ಭಾರತೀಯ ದೊಡ್ಡಮನುಷ್ಯರೂ ಸಾಹಸ ಚಾತುರ್ಯಗಳಿಂದ ಈ ಜಾತಿಯ ಮೀನುಗಳನ್ನು ಹಿಡಿದು ಆಹ್ಲಾದಪಟ್ಟಿದ್ದಾರೆ. ಬೇಟೆಯಲ್ಲಿ ಹುಲಿಯ ಬೇಟೆಯೂ, ಕಾಡುಕೋಣದ ಬೇಟೆಯೂ, ಒಂಟಿಯಾಗಿ ಅಲೆದಾಡುತ್ತ ದಾಂಧಲೆ ಮಾಡುವ ಆನೆಯ ಸಲಗದ ಬೇಟೆಯೂ ಬಹು ಮುಖ್ಯವಾದುವುಗಳು; ಅತ್ಯಂತ ಧೈರ್ಯ ಸಾಹಸ ಚಾತುರ್ಯಗಳಿಂದ ನಡೆಯಬೇಕಾದುವುಗಳು.

**ಹುಲಿಗಳಿಗಿರುವ ಶಕ್ತಿ ಸಾಮರ್ಥ್ಯಗಳು**

ಹುಲಿಯ ಬೇಟೆಯು ಎಷ್ಟು ಕ್ಲೇಶಕರವಾದುದೆಂಬುದನ್ನು ಗ್ರಹಿಸಬೇಕಾದರೆ, ಅದರ ಶಕ್ತಿ ಸಾಮರ್ಥ್ಯಗಳನ್ನರಿತುಕೊಳ್ಳುವುದು ಅತ್ಯಾವಶ್ಯಕ. ಮೈಸೂರು, ಹಾಸನ, ಕಡೂರು, ಶಿವಮೊಗ್ಗ — ಈ ನಾಲ್ಕು ಡಿಸ್ಟ್ರಿಕ್ಟುಗಳಲ್ಲಿ ಹುಲಿಗಳಿರುವುದು ಹೆಚ್ಚು. ಹುಲಿಯ ಬಲವು ಎದೆಯನ್ನು ಝುಲ್ಲೆನಿಸುವಂತಹದು. ಗುಂಡಿನೇಟು ಬಿದ್ದಾಗ ಒಂದು ಹುಲಿಯು ರೋಷ ಪಾರವಶ್ಯದಿಂದ (ಸಡಿಲವಾಗಿ ಭೂಮಿಯಿಂದ ಬೇರೆಯಾಗಿದ್ದ) ಮರದ ಬೇರನ್ನು ಕಚ್ಚಿ ಪ್ರಾಣಬಿಟ್ಟಿತಂತೆ. ಆ ಬಳಿಕ ಅನೇಕ ಮಂದಿ ಬಲಿಷ್ಠರು ಪ್ರಯತ್ನಪಟ್ಟರೂ, ಅದರ ಹಲ್ಲುಗಳ

ಹಿಡಿತವನ್ನು ಸಡಲಿಸಲು ಸಾಧ್ಯವಾಗದೆ, ಬೇರನ್ನೇ ಗರಗಸದಿಂದ ಕೊಯ್ದು ಹಾಕಿ ಹುಲಿಯನ್ನು ಸಾಗಿಸಿಕೊಂಡು ಹೋಗಬೇಕಾಯಿತು. ಹುಲಿಯು ಎತ್ತಿನ ಅಥವಾ ಎಮ್ಮೆಯ ಹೆಗಲಿನಮೂಳೆಗೆ ಹಲ್ಲುಗಳನ್ನೂರಿದಾಗ ಅವುಗಳ ಹಿಡಿತಕ್ಕೆ ಸಿಕ್ಕಿದೆಡೆಗಳಲ್ಲಿ ಆ ಮೂಳೆಯಲ್ಲಿ ರಂಧ್ರಗಳು ಬೀಳುವುವು. ಹೀಗಿರುವಲ್ಲಿ ಮನುಷ್ಯನು ಅದರ ಹಲ್ಲುಗಳ ಹಿಡಿತಕ್ಕೆ ಸಿಕ್ಕಿದರೆ ಕೇಳ ಬೇಕೆ? ತನ್ನ ಬಾಯಿಗಿಟ್ಟ ಬಂದೂಕವನ್ನು ಒಂದು ಹುಲಿಯು ಕಚ್ಚಿದ ರಭಸಕ್ಕೆ ಕಬ್ಬಿಣದ ಮೇಲೆ ಕೂಡ ಅದರ ಹಲ್ಲುಗಳ ಗುರುತುಗಳು ಬಿದ್ದ ನಿದರ್ಶನವುಂಟು. ಚಿರತೆಯೇ ಘಂಟೆಗೆ ಮೂವತ್ತು ಮೈಲಿಗಳ ವೇಗದಲ್ಲಿ ಓಡಿ, ಜಿಂಕೆಯನ್ನು ಕೂಡ ಸೋಲಿಸಿ ಹಿಡಿದುಕೊಳ್ಳಬಲ್ಲುದೆಂದಮೇಲೆ ಹುಲಿಯ ಶಕ್ತಿಯನ್ನು ವಿವರಿಸಬೇಕಾದುದೇ ಇಲ್ಲ. ಹುಲಿಯ ತೂಕವು ಐನೂರು ಅಥವಾ ಆರು ನೂರು ಪೌಂಡುಗಳ ವರೆಗೂ ಇರುತ್ತದೆ. ಹೀಗಿದ್ದೂ ಹುಲಿಯು ಎರಡು ಸಾವಿರದ ಎಂಟು ನೂರು ಪೌಂಡುಗಳ ವರೆಗೂ ತೂಕವಿರುವ ಕಾಡುಕೋಣವನ್ನು ಕೊಂದು ಕೆಲವು ದಿನಗಳಲ್ಲಿ ಅದರ ಮಾಂಸವನ್ನು ತಿಂದು ಮುಗಿಸಬಲ್ಲುದು. ಒಂದೇ ಸಲಕ್ಕೆ ಹುಲಿಯು ನೂರೈವತ್ತರಿಂದ ಇನ್ನೂರು ಪೌಂಡುಗಳವರೆಗೂ ಮಾಂಸವನ್ನು ತಿನ್ನ ಬಲ್ಲುದು; ಆಹಾರ ದೊರೆಯದಿದ್ದರೆ ಇಪ್ಪತ್ತೆಂಟು ದಿವಸಗಳವರೆಗೆ ಬೇಕಾದರೂ ಉಪವಾಸವಿರಬಲ್ಲುದು. ಒಂದು ಸಲ, ಬೋನಿನೊಳಗಿದ್ದ ಹುಲಿಯು ಬೋನಿನ ಕಂಬಿಗಳಿಗೆ ಅಪ್ಪಳಿಸಿ ಹೊಡೆದ ಆಘಾತಕ್ಕೆ ವ್ಯಾಸ ರೇಖೆಯು ಮುಕ್ಕಾಲು ಅಂಗುಲಕ್ಕಿಂತ ಸ್ವಲ್ಪ ಕಡಮೆಯಾಗಿದ್ದ ಕಬ್ಬಿಣದ ಕಂಬಿಯು ನಾಲ್ಕು ಅಂಗುಲಗಳಷ್ಟು ಬಾಗಿಹೋಗಿ ಹೊರಗಡೆಗೆ ಉಬ್ಬಿತು. ಹುಲಿಯನ್ನು ಗುಂಡಿನಿಂದ ಹೊಡೆಯುವುದಕ್ಕಾಗಿ ಮರದ ಮೇಲೆ ಕಟ್ಟುವ ಅಟ್ಟಣೆಯು ("ಮಚಾನ್") ನೆಲದಿಂದ ಸುಮಾರು ೯ ಅಡಿಗಳಿಂದ ೧೨ ಅಡಿಗಳ ವರೆಗಿನ ಎತ್ತರದಲ್ಲಿರುತ್ತದೆ; ಅದಕ್ಕೆ ಮೇಲಿದ್ದರೆ ಹುಲಿ ಯನ್ನು ಹೊಡೆಯುವುದು ಬಹಳ ಕಷ್ಟ. ಆದರೆ ಗಾಯಹೊಂದಿದ ಹುಲಿಯು ೨೦ ಅಡಿಗಳ ಎತ್ತರಕ್ಕೆ ಹಾರಬಲ್ಲುದು. ಗುಂಡಿನಿಂದ ಗಾಯ ಹೊಂದಿದ ಹುಲಿಗಳು ಮೇಲಕ್ಕೆ ಹಾರಿ ಹೊಡೆದವರನ್ನು ಅಟ್ಟಣೆಯಿಂದ ಕೆಳಕ್ಕೆ ಸೆಳೆದುತಂದು ಕೊಂದುಹಾಕಿದ ನಿದರ್ಶನಗಳುಂಟು. ಆದಕಾರಣ, ಹುಲಿಯ ಬೇಟೆಯು ತೀರ ಅಪಾಯಕರವೆಂಬುದು ಸ್ಪಷ್ಟವಾಗಿಯೇ ಇದೆ.

ಹುಲಿಯ ಬೇಟೆಯಲ್ಲಿ ಕೃತಕಾರ್ಯರಾಗಬೇಕಾದರೆ ಈ ಮೊದಲೇ ಸೂಚಿಸಿರುವಂತೆ ಉತ್ಸಾಹ ಧೈರ್ಯಗಳಿರಬೇಕಲ್ಲದೆ, ಸಾಹಸಪ್ರೇಮವೂ ಶ್ರಮ ಸಹಿಷ್ಣುತೆಯೂ ಇರಬೇಕು. ಏಕೆಂದರೆ, ಮರದಮೇಲಿರುವ

ಅಟ್ಟಣೆಯಮೇಲೆ (ಮಚಾನ್ "ಮೇಲೆ") ಕುಳಿತ ಬಳಿಕ ಏಕಾಗ್ರಚಿತ್ತ ದಿಂದ ಕೂಡಿ ಹುಲಿಯು ಬರುವುದನ್ನೇ ನಿರೀಕ್ಷಿಸುತ್ತ, ನಿದ್ರಾಹಾರಗಳ ಯೋಚನೆಯೇ ಇಲ್ಲದೆ ಬಂದೂಕವನ್ನು ಹಿಡಿದು ಕಾಯುತ್ತ ಕುಳಿತಿರಬೇಕು. ಅವಿಚ್ಛಿನ್ನವಾಗಿ ಹಲವು ರಾತ್ರಿಗಳು ಕೂಡ ಆ ರೀತಿ ಕುಳಿತಿದ್ದು ಹುಲಿಯನ್ನು ಹೊಡೆಯುವ ಮಟ್ಟಿನ ಶ್ರಮ ಸಹಿಷ್ಣುತೆಯು ಆಳಿದ ಮಹಾಸ್ವಾಮಿಯವರಿ

**ಮಹಾಸ್ವಾಮಿಯವರ ಸಾಹಸ ಶ್ರಮ ಸಹಿಷ್ಣುತೆಗಳು**

ಗಿದ್ದಿತು. "ಮಹಾಸ್ವಾಮಿಯವರು 'ಮಚಾನ್' ಮೇಲೆ ಮೂಲದೇವ ರಂತೆ ಕೂತುಬಿಡುತ್ತಾರೆ" ಎಂದು ಅದನ್ನು ಕಂಡವರು ಹೇಳಿದ್ದಾರೆ. ಹಲವು ರಾತ್ರಿಗಳು ಹಾಗೆ ಕುಳಿತಿದ್ದು ಹುಲಿಗೆ ಏಟು ಬಿದ್ದು ಅದು ತಪ್ಪಿಸಿಕೊಂಡರೆ ಅಟ್ಟಣೆಯಿಂದಿಳಿದು ಬಂದು ಹುಲಿಯ ರಕ್ತದ ಜಾಡನ್ನು ಹಿಡಿದುಹೋಗಿ, ಆಳಿದ ಮಹಾಸ್ವಾಮಿಯವರು ಪ್ರಾಣಾಪಾಯ ಸಂಭವದಿಂದಲೂ ಭೀತಿಪಡದೆ ವರ್ತಿಸಿದ ಕೆಲವು ಸಂದರ್ಭಗಳುಂಟು. ಆಗ್ಗೆ ಜೊತೆಯವರು ಬೆದರಿ, ಹಾಗೆ ಮಾಡಕೂಡದೆಂದು ಅವರನ್ನು ಬೇಡಿಕೊಂಡಿರುವುದೂ ಉಂಟು. ಆದರೆ ಹೀಗೆ ನಡೆದಿರುವ ಸಂದರ್ಭಗಳ ಸಂಖ್ಯೆಯು ತೀರ ಕಡಮೆ. ಏಕೆಂದರೆ ಮಹಾಸ್ವಾಮಿಯವರು ಹೊಡೆದ ಗುಂಡಿನಿಂದ ಹುಲಿಯು ಸತ್ತು ನೆಲಕ್ಕುರುಳಿರುತ್ತಿದ್ದುದೇ ಸಾಮಾನ್ಯ ವಾಗಿ ಪ್ರತಿಯೊಂದು ಸಲದ ಬೇಟೆಯಲ್ಲಿಯೂ ನಡೆದಿರುವ ವಿದ್ಯಮಾನ. ಆಳಿದ ಮಹಾಸ್ವಾಮಿಯವರು ಹುಲಿಯ ಬೇಟೆಯಲ್ಲಿ ತೋರಿಸುತ್ತಿದ್ದ ಶ್ರಮಸಹಿಷ್ಣುತೆಯು ಅದ್ಭುತವಾದುದು. ಇಪ್ಪತ್ತೈದು ಮೈಲಿಗಳ ದೂರ ಬೇಕಾದರೂ ನಡೆದು ಮೂವತ್ತು ನಲವತ್ತು ಮೈಲಿಗಳ ದೂರ ಕುದುರೆಸವಾರಿ ಮಾಡುತ್ತಿದ್ದುದೂ, ಕಡಿದಾದ ಬೆಟ್ಟಗಳನ್ನು ಕೂಡ ಅನಾಯಾಸವಾಗಿ ಹತ್ತುತ್ತಿದ್ದುದೂ ಅವರು ಲೀಲಾಜಾಲವಾಗಿ ನೆರವೇರಿಸುತ್ತಿದ್ದ ಕಾರ್ಯಗಳು. ಆದುದರಿಂದಲೇ ಅವರಿಗೆ ಹುಲಿಯ ಬೇಟೆಯಲ್ಲಿ ಆ ಬಗೆಯ ಶ್ರಮಸಹಿಷ್ಣುತೆಯು ಸಾಧ್ಯವಾಗಿದ್ದುದು. ಆಳುವ ಮಹಾಸ್ವಾಮಿಯವರಾದ ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರರವರಿಗೂ ಸಹ, ಹುಲಿಯ ಬೇಟೆಯಲ್ಲಿ ಅದೇ ರೀತಿಯಲ್ಲಿ ಅತ್ಯಂತ ಹೆಚ್ಚಿನ ಧೈರ್ಯ ಸಾಮರ್ಥ್ಯಗಳೂ, ಶ್ರಮ ಸಹಿಷ್ಣುತೆಯೂ ಉಂಟು.

ಆಳಿದ ಮಹಾಸ್ವಾಮಿಯವರು ಹುಲಿಯ ಬೇಟೆಯ ವ್ಯವಸ್ಥೆಯಲ್ಲಿ ಅನೇಕ ಮೇಲ್ಪಾಟುಗಳನ್ನು ಮಾಡಿಸಿ ಅದನ್ನೊಂದು ಕಲೆಯಾಗಿ



ಕಾಡಿನಲ್ಲಿ ಸಂಚರಿಸುತ್ತಿರುವಾಗ್ಗೆ

ಹುಲಿಯ ಬೇಟೆಯಾದಮೇಲೆ

ಪರಿಣಾಮಗೊಳಿಸಿದರು. ಬೇಟೆಯ ಅನುಭವವಿರುವ ಮಹಾಶಯರು ಗಳೆಲ್ಲರೂ ಈ ವಿಚಾರದಲ್ಲಿ ಮತ್ತೆಲ್ಲಿಯೂ ಕಾಣದ ಕೌಶಲ್ಯವನ್ನು ಮೈಸೂರು ಸಂಸ್ಥಾನದಲ್ಲಿ ಕಂಡು, ಮಹಾಸ್ವಾಮಿಯವರ ಕುಶಾಗ್ರಮತಿಯನ್ನೂ ಕಲ್ಪನಾ ಸಾಮರ್ಥ್ಯವನ್ನೂ ಕೊಂಡಾಡಿದ್ದಾರೆ. ಹುಲಿಯು ಒಂದು ಪ್ರಾಣಿಯನ್ನು ಕೊಂದು ಅದರ ದೇಹದ ಸ್ವಲ್ಪ ಭಾಗವನ್ನು ತಿಂದು ಹೊರಟುಹೋಗಿದ್ದುದನ್ನು ಕಂಡಾಗ

**ಈಚೆಗೆ ನಡೆದಿರುವ ಬೇಟೆಯ ಮೇಲ್ಪಾಟುಗಳು**

ಮಾರನೆಯ ದಿನ ಅಲ್ಲಿಗೆ ಸಮೀಪದಲ್ಲಿ ಮರದ ಮೇಲೆ ಅಟ್ಟಣೆಯನ್ನು ಕಟ್ಟಿಸಿ ಕುಳಿತು, ಆ ದಿನ ರಾತ್ರಿ ಮತ್ತೆ ಮಾಂಸವನ್ನು ತಿನ್ನಲು ಹುಲಿಯು ಅಲ್ಲಿಗೆ ಬಂದಾಗ ಗುಂಡು ಹೊಡೆದು ಅದನ್ನು ಕೊಲ್ಲುತ್ತಿದ್ದುದು ಹಿಂದಿನ ಪದ್ಧತಿ. 'ಅಥವಾ ಹುಲಿಯು ಹುದುಗಿರುವ ಪ್ರದೇಶವನ್ನು ಗೊತ್ತು ಮಾಡಿದ ಮೇಲೆ— ಸಮೀಪದಲ್ಲಿ ಒಂದು ಮರದ ಮೇಲೆ ಅಟ್ಟಣೆಯನ್ನು ಕಟ್ಟಿಸಿ ಹುಲಿಯನ್ನು ಹೊಡೆಯುವವರು ಬಂದೂಕದೊಡನೆ ಅಟ್ಟಣೆಯ ಮೇಲೆ ಕುಳಿತ ಬಳಿಕ— ಕಾಡುಕುರುಬರು ತಮಟೆಗಳನ್ನು ಬಡಿಯುತ್ತ, ಕೊಂಬುಗಳನ್ನೂ ತುತ್ತೂರಿಗಳನ್ನೂ ಊದುತ್ತ, ಹುಲಿಯನ್ನು ಹೊರಡಿಸಿ ದಿಗ್ಭ್ರಮೆ ಹಿಡಿಸಿ ಓಡಿಸಿಕೊಂಡು ಬಂದಾಗ ಅಟ್ಟಣೆಯ ಮೇಲಿದ್ದವರು ಗುಂಡನ್ನು ಹಾರಿಸಿ ಅದನ್ನು ಕೊಲ್ಲುತ್ತಿದ್ದುದೂ ಉಂಟು. ಹುಲಿಯು ಮತ್ತೆಲ್ಲಿಗೂ ಹೋಗದೆ ಅಟ್ಟಣೆಯಿರುವ ಮರದ ಕಡೆಗೆ ಮಾತ್ರವೇ ಓಡಿಹೋಗುವಂತೆ ಮಾಡುವುದಕ್ಕಾಗಿ ಅಲ್ಲಲ್ಲಿ ಜನರು ನಿಂತು ಸದ್ದುಮಾಡಬೇಕಾಗುತ್ತಿದ್ದುದೂ, ಅನೇಕ ಸಂದರ್ಭಗಳಲ್ಲಿ ಹುಲಿಯು ಅವರನ್ನು ಘಾತಿಸಿ ಕೊಲ್ಲುತ್ತಿದ್ದುದೂ ಉಂಟು. ಇದರ ಮೇಲೋ, ಸದ್ದಿನಿಂದ ದಿಗ್ಭ್ರಮೆ ಹಿಡಿದ ಹುಲಿಯು ಬಹಳ ವೇಗವಾಗಿ ಓಡಿಹೋಗುತ್ತಿದ್ದುದರಿಂದ, ಗುಂಡಿನ ಪೆಟ್ಟು ಸರಿಯಾದ ಸ್ಥಳಕ್ಕೆ ಬಿದ್ದು ಅದು ಮರಣ ಹೊಂದುತ್ತಿದ್ದುದು ವಿರಳ; ಗುಂಡಿನ ಪೆಟ್ಟು ಸರಿಯಾದ ಸ್ಥಳಕ್ಕೆ ಬೀಳದೆ, ಗಾಯಹೊಂದಿದ ಹುಲಿಯು ಮುಂದೆ ಓಡಿಹೋಗಿ ಹುದುಗಿ ತಲೆಮರೆಸಿಕೊಂಡಿದ್ದು (ಜನರು ಅದು ಹುದುಗಿಕೊಂಡಿರುವ ಸ್ಥಳವನ್ನರಿಯದೆ ಮತ್ತೆ ಅದನ್ನೋಡಿಸಲು ತಮಟೆಗಳನ್ನು ಬಡಿದುಕೊಂಡು ಕೊಂಬುಗಳನ್ನೂ ತುತ್ತೂರಿಗಳನ್ನೂ ಊದುತ್ತ ಬಂದಾಗ) ಹಲವರನ್ನು ಆಹುತಿ ತೆಗೆದುಕೊಳ್ಳುತ್ತಿದ್ದುದು ತಪ್ಪದೆ ನಡೆಯುತ್ತಿದ್ದ ಘಟನೆಯೆನ್ನಬಹುದು. ಹುದುಗಿಕೊಳ್ಳಲು ಹುಲಿಗಿರುವ ಅದ್ಭುತ ಸಾಮರ್ಥ್ಯವನ್ನೂ ನಾವು ಈ ಸಂದರ್ಭದಲ್ಲಿ ಗಮನಿಸಬೇಕು; ಭೂಮಟ್ಟದಿಂದ ಮೇಲಕ್ಕೆ ಸುಮಾರು

ಆರೇ ಅಂಗುಲಗಳ ಎತ್ತರದಲ್ಲಿ ಅಡಕವಾಗಿ ಅದಕ್ಕಿಂತ ಎತ್ತರವಾಗದಂತೆ ತನ್ನ ದೇಹದ ಗಾತ್ರವನ್ನು ಸಂಕೋಚಗೊಳಿಸಿ, "ನೆಲವನ್ನು ಕಚ್ಚಿ" ಮಲಗಿಕೊಳ್ಳುವ ಮಟ್ಟಿಗೆ ಮಾಂಸಖಂಡಗಳ ಮೇಲೆ ಹತೋಟಿಯಿರುವ ಶಕ್ತಿಯನ್ನು ಸೃಷ್ಟಿಕರ್ತನು ಹುಲಿಗೆ ಕೊಟ್ಟಿದ್ದಾನೆ. ಆದಕಾರಣ, ಅದು ಹಾಗೆ ಮಲಗಿದಾಗ ಅದರ ತಲೆಯೊಂದರ ಹೊರತು ಅದರ ದೇಹದ ಉಳಿದ ಭಾಗವೆಲ್ಲ ಕಾಡಿನಲ್ಲಿ ಬೆಳೆದು ನಿಂತಿರುವ ಹುಲ್ಲಿನೊಳಗೆ ಅಡಗಿ ಹೋಗಿ, ತಲೆಯು ಇರುವ ಭಾಗಕ್ಕೆ ಒಂದು ಪೊದೆಯೋ ಅಥವಾ ಒಂದು ಕುರುಚು ಗಿಡವೋ ಮರೆಯಾಗಿದ್ದರೆ ದೂರದಿಂದ ಬಂದವರಿಗೆ ಹುಲಿಯು ಮಲಗಿರುವುದೇ ಗೊತ್ತಾಗುವುದಿಲ್ಲ. ಹುಲಿಯ ಆ ಬಗೆಯ ಸಾಮರ್ಥ್ಯವನ್ನು ಚೆನ್ನಾಗಿ ಬಲ್ಲ ಮೇಧಾವಿಗಳಾದ ಮಹಾಶಯರೊಬ್ಬರ ಸೊಗಸಾದ ವರ್ಣನೆಯ ಮಾತುಗಳಲ್ಲಿ ಅದನ್ನು ಹೇಳುವುದಾದರೆ, "ನೆಲ ಕಚ್ಚಿದಂತೆ ಮಲಗಿಬಿಟ್ಟರೆ ನೆಲದಿಂದ ಆರೇ ಅಂಗುಲಗಳ ಎತ್ತರವಿರುವಂತೆ ದೇಹವನ್ನೆಲ್ಲ ಹುದುಗಿಸಿಬಿಡಬಲ್ಲವನು, ನಮ್ಮ ಹುಲಿರಾಯ!" ಹಾಗೆ ಮಲಗಿದ ಹುಲಿಯು ಹೊಂಚುಹಾಕುತ್ತಿದ್ದು, ಸಮೀಪಕ್ಕೆ ಬಂದವರನ್ನು ಘಾತಿಸಿ ತನ್ನ ರೋಷವನ್ನೂ ಸೇಡನ್ನೂ ತೀರಿಸಿಕೊಳ್ಳುವುದು.

ಮಹಾಪ್ರಭುಗಳವರು ತಮ್ಮ ಬುದ್ಧಿ ಶಕ್ತಿಯ ಪ್ರಭಾವದಿಂದ ದೀರ್ಘಾಲೋಚನೆ ಮಾಡಿ, ಮೇಲೆ ಹೇಳಿದ ಬಗೆಯ ಅಪಾಯಗಳಾವುವೂ ಜನರಿಗೆ ಸಂಭವಿಸದಂತೆ ಹಲವು ಮೇಲ್ಪಾಟುಗಳನ್ನು ಮಾಡಿಸಿ, ಅನೇಕ ಬಡಪಾಯಿಗಳ ಸಾವನ್ನು ತಪ್ಪಿಸಿದರು. ಅವರು ಹುಲಿಗಳ ಸ್ವಭಾವವನ್ನೂ ಜೀವನ ವಿಧಾನವನ್ನೂ ಪರಿಶೀಲಿಸಿ ಮನನಮಾಡಿ, ತಮ್ಮ ಸೂಕ್ಷ್ಮ ಬುದ್ಧಿಯಿಂದ ನಾನಾ ಕಾರ್ಯವಿಧಾನಗಳನ್ನೂ ನಿರ್ಧರಿಸಿ, ಯಾವಜ್ಜೀವವೂ ಬೇಟೆಯಲ್ಲಿ ನಿರತರಾಗಿರುವ ಮೇಧಾವಿಗಳು ಕೂಡ ಅಚ್ಚರಿಯಿಂದ ತಲೆ ದೂಗುವಂತೆ ಹುಲಿಯ ಬೇಟೆಯನ್ನೇ ಒಂದು ನೂತನ ಕಲೆಯಾಗಿ ಪರಿಣಾಮಗೊಳಿಸಿದರು. ಹೀಗೆ ಮಾಡುವುದರಲ್ಲಿ, ಹುಲಿಗಳು ಎಂತಹ ಸನ್ನಿವೇಶದಲ್ಲಿ ವಾಸಮಾಡಲಿಚ್ಛಿಸುತ್ತವೆಂಬ ಪರಿಶೀಲನವು ನಡೆಯಿತು. ಹುಲಿಯು, ಅರಣ್ಯದಲ್ಲಿ ನೀರಿಗೆ ಅನುಕೂಲವಾಗಿದ್ದು ಸುತ್ತಮುತ್ತಲೂ ಕುರುಚು ಗಿಡಗಳು ಬೆಳೆದು ತಾನು ಅವುಗಳ ನಡುವೆ ಇತರರಿಗೆ ಗೋಚರವಾಗದಂತೆ ಸಂಚರಿಸುವ ಸೌಕರ್ಯವಿರುವ ಸ್ಥಳವನ್ನು ಬಯಸುತ್ತದೆ. ಅಲ್ಲದೆ, ತಾನು ಕೊಂದು ಸಾಗಿಸಿತಂದ ದನಕರುಗಳೇ ಮುಂತಾದುವುಗಳನ್ನು ದಟ್ಟವಾದ ಮರಗಳಿಂದ ಮರೆಯಾಗಿರುವ ಸ್ಥಳಕ್ಕೆ ಹೊತ್ತುಕೊಂಡು ಹೋಗಲು ಹುಲಿಯು ಇಚ್ಛಿಸುತ್ತದೆ; ಹದ್ದುಗಳೇ ಮುಂತಾದುವು



ಗೋ ಸೇವೆ
(ಆಳಿದ ಮಹಾಸ್ವಾಮಿಯವರಾದ ಶ್ರೀಮನ್ಮಹಾರಾಜ ಶ್ರೀ ಕೃಷ್ಣರಾಜೇಂದ್ರ ಒಡೆಯರವರು ಪಟ್ಟದ ಹಸುವಿಗೆ ರಸಬಾಳೆ ಹಣ್ಣನ್ನು ತಿನ್ನಿಸುತ್ತಿರುವುದು)



ಹುಲಿಯ ಬೇಟೆ

ಬಂದು ತಿಂದಾವೆಂಬ ಕಾರಣದಿಂದ ಅವುಗಳನ್ನು ಮರೆಯಾಗಿರುವ ಸ್ಥಳದಲ್ಲಿ ಮುಚ್ಚಿಟ್ಟುಕೊಂಡು ತಿನ್ನಬೇಕೆಂದು ಹುಲಿಯು ಬಯಸುತ್ತದೆ. ಕಾಡಿನಲ್ಲಿ ಹದ್ದುಗಳ ಪಡೆಯು ಬಂದು ಮುತ್ತಿದರೆ ತೀರಿತು. ಸತ್ತು ಬಿದ್ದಿರುವ ಆನೆಯ ದೇಹವನ್ನು ಕೂಡ ಒಂದೇ ದಿನದಲ್ಲಿ ಕಿತ್ತು ಮಾಂಸ ವನ್ನೆಲ್ಲ ಪೂರ್ತಿಯಾಗಿ ತಿಂದು ಮುಗಿಸಿಬಿಡಬಲ್ಲುವು, ಆ ಹದ್ದುಗಳು. ಆದಕಾರಣ ಅವುಗಳ ಕಣ್ಣಿಗೆ ಗೋಚರವಾಗದಂತೆ ಹುಲಿಯು ಬೀಳನ್ನು (ಎಂದರೆ ತಾನು ಕೊಂದು ಸಾಗಿಸಿ ತಂದ ಪ್ರಾಣಿಯ ಮೃತದೇಹವನ್ನು) ಮುಚ್ಚಿಡಲು ಬಯಸುವುದರಲ್ಲಿ ಆಶ್ಚರ್ಯವಿಲ್ಲ.

ಮಹಾಪ್ರಭುಗಳವರು ಮೈಸೂರು ನಗರದಿಂದ ದೂರವಾಗಿ ಕಾಡಿನಲ್ಲಿರುವ ಓಂಕಾರೇಶ್ವರನ ಗುಡಿಗೆ ಸ್ವಲ್ಪ ದೂರದಲ್ಲೊಂದು, ಕೆಂಡಗಣ್ಣ ಸ್ವಾಮಿಯವರ ಗದ್ದುಗೆಯ ಬಳಿಯ ಕಾಡಿನಲ್ಲಿ ಮತ್ತೊಂದು, ಈ ರೀತಿ ಅಲ್ಲಲ್ಲಿ ಅನೇಕ ಹುಲಿಯ ಬೇಟೆಯ ಪ್ರದೇಶಗಳನ್ನು ಏರ್ಪಾಡು ಮಾಡಿಸಿದರು. ಆ ಪ್ರದೇಶಗಳಲ್ಲಿ ಪ್ರತಿಯೊಂದರಲ್ಲಿಯೂ, ಮೇಲೆ ವಿವರಿಸಿದಂತೆ ಹುಲಿಯು ಅಪೇಕ್ಷಿಸುವ ಎಲ್ಲ ಲಕ್ಷಣಗಳಿಂದಲೂ ಕೂಡಿರುವ ಪ್ರಶಸ್ತವಾದ ವಿಸ್ತರಪ್ರದೇಶವೊಂದನ್ನು ಅದಕ್ಕಾಗಿ ಬಿಡಿಸಿರು ತ್ತಾರೆ. ಹುಲಿಯು ಬೀಳನ್ನು ತಿನ್ನುವೆಡೆಗೆ ಸ್ವಲ್ಪ ದೂರದಲ್ಲಿ ಬಯಲಿರು ತ್ತದೆ. ಅಲ್ಲಿಗೆ ಹೋಗಲು ಒಂದು ಕಿರಿಯ ದಾರಿಯು ಏರ್ಪಟ್ಟಿರುತ್ತದೆ. ಅದರ ಉಭಯ ಪಾರ್ಶ್ವಗಳಲ್ಲಿಯೂ ದಟ್ಟವಾಗಿ ಗಿಡಗಳನ್ನು ಬೆಳೆಯಿ ಸಿರುತ್ತಾರೆ. ಉಳಿದ ಕಡೆಗಳಲ್ಲಿ ಗಿಡಗಳು ದಟ್ಟವಾಗಿಲ್ಲದಂತೆ ಕಡಿಸಿ ಹಾಕಿರುವುದರಿಂದಲೂ, ಹುಲಿಗೆ ಮತ್ತಾರಿಗೂ ಗೋಚರವಾಗದಂತೆ ಮರೆಯಲ್ಲಿ ಸಾಗಿಹೋಗಲು ಬಹಳ ಇಷ್ಟವಾದುದರಿಂದಲೂ, ಅದು ತನ್ನನ್ನು ಜನರು ಓಡಿಸಿದಾಗ್ಗೆ ಉಭಯ ಪಾರ್ಶ್ವಗಳಲ್ಲಿಯೂ ಗಿಡಗಳು ದಟ್ಟವಾಗಿ ಬೆಳೆದಿರುವ ಆ ಕಿರಿಯ ದಾರಿಯಲ್ಲಿ ಹೋಗಲುಪಕ್ರಮಿಸುತ್ತದೆ. ಅದರಲ್ಲಿ ಹೋದರೆ ಹುಲಿಗೆ ಬಯಲು ಸಿಕ್ಕುತ್ತದೆ. ಅಲ್ಲಿಗೆ ಸ್ವಲ್ಪ ದೂರ ದಲ್ಲಿ ಮರದ ಮೇಲಿರುವ ಅಟ್ಟಣೆಯಲ್ಲಿ ಬಂದೂಕವನ್ನಿಟ್ಟುಕೊಂಡು ಬೇಟೆಯವರು ಕುಳಿತಿರುತ್ತಾರೆ. ಹುಲಿಯು ಆ ಕಿರಿಯ ದಾರಿಯಿಂದ ಆ ಬಯಲಿಗೆ ತಲೆಯಿಟ್ಟೊಡನೆಯೇ "ಢಂ" ಎಂದು ಗುಂಡು ಬರುತ್ತದೆ. ಸಾಮಾನ್ಯವಾಗಿ ಅದು ತಗಲಿ ಹುಲಿಯು ಮೃತಪಡುತ್ತದೆ. ಒಂದುವೇಳೆ ಗುಂಡು ಅದಕ್ಕೆ ತಗುಲದೆಹೋದರೆ ಅಥವಾ ತಗುಲಿಯೂ ಅಲ್ಪ ಸ್ವಲ್ಪ ಪೆಟ್ಟುಬಿದ್ದರೆ, ಅದು ಭಯಪಟ್ಟು ಆ ಬಯಲಿನಿಂದ ಓಡಲಿಚ್ಛಿಸುತ್ತದೆ. ಹುಲಿಯು ತಾನು ಬಂದ ದಾರಿಯಲ್ಲೇ ಹಿಂತಿರುಗುವಂತಿರುವುದಿಲ್ಲ;

ಏಕೆಂದರೆ ಆ ದಾರಿಯ ಹಿಂಭಾಗದಲ್ಲಿ ಕಾಡುಕುರುಬರು ("ಷಿಕಾರಿ" ಗಳು) ಮುಂತಾದವರು ಕೊಂಬುಗಳನ್ನೂ ತುತೂರಿಗಳನ್ನೂ ಊದುತ್ತ ತಮಟೆಯನ್ನು ಬಡಿಯುತ್ತ ಸದ್ದುಮಾಡುತ್ತಿರುತ್ತಾರೆ; ಆದುದರಿಂದ ಹುಲಿಯು ಹಿಂದಕ್ಕೆ ಹೋಗುವುದಿಲ್ಲ. ಬಯಲಿನಿಂದ ಮುಂದಕ್ಕೆ ಮತ್ತೊಂದು ಕಿರಿಯ ದಾರಿಯೂ ಅದರ ಉಭಯ ಪಾರ್ಶ್ವಗಳಲ್ಲಿಯೂ ಬೆಳೆಯಿಸಿರುವ ಕುರುಚು ಗಿಡಗಳೂ ಪ್ರಾರಂಭವಾಗುವಕಾರಣ, ಆ ಕಿರಿಯ ದಾರಿಯಲ್ಲಿ ಸಾಗಿದರೆ ತಾನು ಯಾರ ಕಣ್ಣಿಗೂ ಗೋಚರವಾಗದಂತೆ ಓಡಿ ಹೋಗಿ ಪಾರಾಗಬಹುದೆಂದು ಭಾವಿಸಿ ಹುಲಿಯು ಹಾಗೆ ಮಾಡುತ್ತದೆ. ಅದರಲ್ಲಿ ಓಡಿಹೋದರೆ ಸ್ವಲ್ಪ ದೂರದಲ್ಲಿ ಮತ್ತೊಂದು ಬಯಲು ಪ್ರದೇಶ; ಅಲ್ಲಿಗೆ ಸ್ವಲ್ಪ ದೂರದಲ್ಲಿ ಮರದ ಮೇಲೆ ಅಟ್ಟಣೆಯಲ್ಲಿ ಮತ್ತೊಬ್ಬರು ಬೇಟೆಗಾರರು. ಹುಲಿಯು ಆ ಬಯಲಿಗೆ ಪ್ರವೇಶಿಸಿ ದೊಡನೆಯೇ ಅವರ ಬಂದೂಕದಿಂದ ಗುಂಡು ಬರುತ್ತದೆ. ಹುಲಿಯು ಆಗಲೂ ಮೃತಪಡದೆಹೋದರೆ, ಅದು ಮುಂದೆ ಹೋಗಲು ಮತ್ತೊಂದು ಕಡೆಗೆ ಉಭಯ ಪಾರ್ಶ್ವಗಳಲ್ಲಿಯೂ ಎತ್ತರವಾದ ಕುರುಚು ಗಿಡಗಳನ್ನು ಬೆಳೆಯಿಸಿರುವ ಮತ್ತೊಂದು ಕಿರಿಯ ದಾರಿಯು ಸಿದ್ಧ. ಅದರಲ್ಲಿ ಹುಲಿಯು ಓಡುತ್ತದೆ. ಅಲ್ಲಿಂದ ಮುಂದೆ ಸ್ವಲ್ಪ ದೂರದಲ್ಲಿ ಮತ್ತೊಂದು ಬಯಲು. ಅಲ್ಲಿಗೆ ಹುಲಿಯು ತಲೆಯಿಟ್ಟೊಡನೆಯೇ ಸಮೀಪದಲ್ಲಿರುವ ಮರದ ಮೇಲಿನ ಅಟ್ಟಣೆಯಿಂದ ಗುಂಡು. ಹೀಗೆ ಹಲವು ಅಟ್ಟಣೆಗಳು ಏರ್ಪಟ್ಟಿರುವುದರಿಂದ, ಒಂದು ಕಡೆಯಲ್ಲಲ್ಲದಿದ್ದರೆ ಮತ್ತೊಂದು ಕಡೆ ಗುಂಡಿನ ಪೆಟ್ಟು ಬಿದ್ದು ಹುಲಿಯು ಮೃತಪಡುತ್ತದೆ.

ಆಳಿದ ಮಹಾಸ್ವಾಮಿಯವರು ಬಹಳ ಯುಕ್ತಿಯಿಂದ ಹೀಗೆ ಏರ್ಪಾಡು ಮಾಡಿಸಿದುದಕ್ಕಿಂತ ಮುಂಚೆ, ಹುಲಿಯು ತನ್ನ ಮನಸ್ಸು ಬಂದ ಕಡೆಗೆ ಓಡಿಹೋಗುತ್ತಿದ್ದುದು ವಾಡಿಕೆ. ಆಗ ಸುತ್ತಮುತ್ತಲೂ ಅಲ್ಲಲ್ಲಿ ಜನರು ನಿಂತು, ತಮಟೆಗಳನ್ನು ಬಡಿದು ತುತ್ತೂರಿಗಳನ್ನೂ ಕೊಂಬುಗಳನ್ನೂ ಊದಿ ಬೆದರಿಸಿ, ಹುಲಿಯು ಅಟ್ಟಣೆ ("ಮಚಾನ್") ಇರುವ ಮರದ ಬಳಿಗೆ ಹೋಗುವುದು ಹೊರತು ಮತ್ತೆಲ್ಲಿಗೂ ಹೋಗದಂತೆ ಸುತ್ತುಗಟ್ಟಿ ನಿಂತು ಸದ್ದುಮಾಡುತ್ತಿದ್ದರು. ಅದರಿಂದ ಅಪಾಯಕ್ಕೆ ಗುರಿಯಾಗುತ್ತಿದ್ದರು. ಹುಲಿಗೆ ಗುಂಡಿನ ಪೆಟ್ಟುಬಿದ್ದು ಮರಣ ಸಂಭವಿಸದೆ ಕೇವಲ ನೋವಿನಿಂದ ಪರ್ಯವಸಾನವಾದಾಗಲಂತೂ ಅದು ರೋಷದಿಂದ ಘುಡುಘುಡಿಸುತ್ತ ಹಲವರನ್ನು ಆಹುತಿಗೊಳ್ಳುತ್ತಿದ್ದುದು ವಾಡಿಕೆ. ಈಗ ಅದರ ಅವಕಾಶವೇ ತಪ್ಪಿಹೋಗಿದೆ. ಈಗಲೂ ಒಂದೊಂದು ವೇಳೆ

ಹುಲಿಯು ತನಗಾಗಿ ಏರ್ಪಟ್ಟಿರುವ ಕುರುಚು ಗಿಡಗಳ ಮರೆಯ ಕಿರಿಯ ದಾರಿಯನ್ನು ಬಿಟ್ಟು ಇತರ ಕಡೆಗೆ ಹೊರಡುವುದುಂಟು. ಆದರೆ ಹಿಂದಿನಂತೆ ತಮಟೆ ತುತ್ತೂರಿಗಳಿಂದ ಬೊಬ್ಬೆಯಿಡಲು ಜನಗಳನ್ನು ಅಲ್ಲಲ್ಲಿ ನಿಲ್ಲಿಸಿ ಅಪಾಯಕ್ಕೆ ಗುರಿಪಡಿಸದೆಯೇ ಉದ್ದಿಷ್ಟಕಾರ್ಯವು ನೆರವೇರುವಂತೆ ಆಳಿದ ಮಹಾಸ್ವಾಮಿಯವರು ಉಪಾಯವನ್ನು ಕಲ್ಪಿಸಿದರು: ಹುಲಿಯು ಅತ್ಯಂತ ಸಂಶಯ ಪ್ರಕೃತಿಯುಳ್ಳ ಪ್ರಾಣಿಯಾಗಿರುವಕಾರಣ ಅಲ್ಪ ಸ್ವಲ್ಪ ಅನುಮಾನವುಂಟಾದೆಡೆಯಿಂದ ಕೂಡ ಅದು ಹಿಂತಿರುಗುವ ಅಂಶವನ್ನುಪಯೋಗಿಸಿಕೊಂಡು ಅವರು ಸರ್ವೋತ್ತಮವಾದೊಂದು ಏರ್ಪಾಡನ್ನು ಕಲ್ಪಿಸಿದ್ದಾರೆ. ಅಲ್ಲಲ್ಲಿ—ಒಂದೊಂದು ಮರದ ಮೇಲೂ—ಒಬ್ಬಿಬ್ಬರಂತೆ ಕಾಡುಕುರುಬರು ಮರಗಳಮೇಲೆ ಮರೆಯಾಗಿ ಕುಳಿತಿರುತ್ತಾರೆ. ಹುಲಿಯೇನಾದರೂ ಅಟ್ಟಣೆಯ ("ಮಚಾನ್") ಕಡೆಗೆ ಹೋಗುವ ಕಿರಿಯ ದಾರಿಯನ್ನು ಬಿಟ್ಟು ಬೇರೆ ಕಡೆಗೆ ತಿರುಗಿ ತಾವು ಕುಳಿತಿರುವ ಮರದ ಕಡೆಗೆ ಹೊರಟಿತೆಂದರೆ ಮರದ ಕೊಂಬೆಗಳಿಂದ ಸಣ್ಣ ಕೊನೆಗಳನ್ನು ಮುರಿದು ಅವರು ಕಟಕ್ಕೆಂದು ಶಬ್ದಮಾಡುವರು. ಹುಲಿಯು ಒಡನೆಯೇ ಅಪಾಯವನ್ನು ಶಂಕಿಸಿ ಆ ಸ್ಥಳವನ್ನು ಬಿಟ್ಟು ಮತ್ತೊಂದು ಕಡೆಗೆ ತಿರುಗಿದರೆ ಅಲ್ಲಿ ಸಹ ಅದೇ ರೀತಿ ಶಬ್ದವಾಗುವುದು. ಇದರ ಫಲಿತಾಂಶವಾಗಿ ಅದು ತಾನು ಮೊದಲು ಹೋಗುತ್ತಿದ್ದ (ಕುರುಚು ಗಿಡಗಳಿಂದ ಮರೆಯಾಗಿರುವ) ಕಿರಿಯ ದಾರಿಯನ್ನು ಹಿಡಿದು ಮುಂದೆ ಹೊರಡುವುದೇ ಕ್ಷೇಮವೆಂದು ಭಾವಿಸಿ ಆ ರೀತಿ ಮಾಡುವುದು. ಅಟ್ಟಣೆ ("ಮಚಾನ್") ಇರುವ ಮರದ ಕಡೆಗೆ ಹೋಗುವಂತೆ ಮಾಡುವುದಕ್ಕಾಗಿ ಹುಲಿಯನ್ನು ಮೊಟ್ಟಮೊದಲು ಹೊರಡಿಸುವಾಗ್ಗೆ ಕೂಡ ಹಿಂದಿನಂತೆ ತಮಟೆ ತುತ್ತೂರಿಗಳಿಂದ ಧ್ವನಿಮಾಡಿಸುವುದನ್ನು ಆಳಿದ ಮಹಾಸ್ವಾಮಿಯವರು ನಿಲ್ಲಿಸಿಬಿಟ್ಟರು. ಹುಲಿಯು ಪ್ರಾಣಿಯನ್ನು ಕೊಂದು ತಂದು ಮರೆಯಲ್ಲಿ ಮುಚ್ಚಿಟ್ಟು ಸಂಚಾರಾರ್ಥವಾಗಿ ಹೊರಟುಹೋಗಿರುವಾಗ "ಷಿಕಾರಿ"ಗಳಾದ ಕಾಡುಕುರುಬರು ಮುಂತಾದವರು ಸಮೀಪದ ಮರಗಳ ಮೇಲೆ ಹತ್ತಿ ಕುಳಿತು ಕಾಯುತ್ತಿರುತ್ತಾರೆ. ಹುಲಿಯು ಮತ್ತೆ ಬಂದು ಮಾಂಸವನ್ನು ತಿಂದು ಹಿಂದಕ್ಕೆ ಹೊರಟರೆ ಮರಗಳ ಮೇಲಿರುವವರು ನಿಂಬೆಯ ಕಾಯಿಗಳ ಗಾತ್ರದ ಕಲ್ಲುಗಳನ್ನು ಕೆಳಕ್ಕೆ ಹಾಕುತ್ತಾರೆ; ಕೆಲವರು ಲಟಕ್ಕೆಂದು ಕೊಂಬೆಗಳ ಕೊನೆಗಳನ್ನು ಮುರಿದು ಸದ್ದುಮಾಡುತ್ತಾರೆ. "ಮಚಾನ್" ಕಡೆಗೆ ಹೋಗುವ ಕುರುಚು ಗಿಡಗಳ ಮಧ್ಯದ ಕಿರಿಯ ದಾರಿಯಲ್ಲಿ ಹೊರತು ಮತ್ತೆಲ್ಲಿ ಹೊರಟರೂ

ಕೊಂಬೆಯ ಕೊನೆಗಳನ್ನು ಮುರಿದು ಕಲ್ಲುಗಳನ್ನು ಹಾಕಿ, ಹುಲಿಯು ಆ ಕಿರಿಯ ದಾರಿಯಲ್ಲಿ ಮಾತ್ರವೇ ಹೋಗುವಂತೆ ಮಾಡುತ್ತಾರೆ.

ಜನಗಳಿಗೆ ಅಪಾಯವನ್ನು ತಪ್ಪಿಸುವುದಕ್ಕಾಗಿ, ಆಳಿದ ಮಹಾಸ್ವಾಮಿಯವರು ಮತ್ತೊಂದು ಉಪಾಯವನ್ನೂ ಮಾಡಿಸಿದ್ದರು. ಅಟ್ಟಣೆಯ ಮೇಲಿರುವವರು ಗುಂಡು ಹೊಡೆದ ಕೂಡಲೆ ಹುಲಿಯು ಸತ್ತುಬಿದ್ದರೆ ಒಂದು ಬಗೆಯ ಸಿಳ್ಳುಗಳನ್ನು ಊದುವಂತೆಯೂ, ಹುಲಿಗೆ ಬಹಳ ಪೆಟ್ಟು ಬಿದ್ದು ಅದು ಸಮೀಪದಲ್ಲೇ ಇದ್ದರೆ ಮತ್ತೊಂದು ಬಗೆಯ ಸಿಳ್ಳುಗಳನ್ನು ಊದುವಂತೆಯೂ ಈಗ ಏರ್ಪಾಡಾಗಿದೆ. ಹಿಂದೆ ಈ ರೀತಿ ನಡೆಯುತ್ತಿರಲಿಲ್ಲ. ಗುಂಡಿನ ಶಬ್ದವು ಕೇಳಿದ ಕೂಡಲೆ "ಷಿಕಾರಿ"ಗಳೆಲ್ಲರೂ ತಮ್ಮ ತಮ್ಮ ಸ್ಥಳದಿಂದ ಮುಂದಕ್ಕೆ ನುಗ್ಗುತ್ತಿದ್ದರು. ಅನೇಕ ಸಂದರ್ಭಗಳಲ್ಲಿ ಗುಂಡಿನ ಗುರಿಯು ತಪ್ಪಿಹೋಗಿ ಗಾಯಹೊಂದಿ ರೋಷೋನ್ಮತ್ತವಾಗಿದ್ದ ಹುಲಿಯ ಬಾಯಿಗೆ ಅವರಲ್ಲನೇಕರು ಆಹುತಿಯಾಗುತ್ತಿದ್ದರು. ಈಗ ಅಟ್ಟಣೆಯ ಮೇಲಿರುವವರು ಸಿಳ್ಳುಗಳನ್ನೂದುವ ಸಂಕೇತದ ಮೂಲಕ ಬೇರೆ ವ್ಯವಸ್ಥೆಯು ಏರ್ಪಟ್ಟಿದೆ. ಹುಲಿಗೆ ಗುಂಡಿನೇಟು ಬಿದ್ದಿದ್ದರೂ ಅದು ಮೃತಪಟ್ಟಿಲ್ಲದ ಸಂಕೇತದ ಸಿಳ್ಳು ಕೇಳಿದರೆ, ಕಾಡುಕುರುಬರು ಮೈಯೆಲ್ಲ ಕಣ್ಣಾಗಿ ಕೆಲಸಮಾಡುತ್ತಾರೆ; ಯಥಾಕಾಲದಲ್ಲಿ ಅಟ್ಟಣೆಯ ಮೇಲಿದ್ದವರು ಕೆಳಕ್ಕಿಳಿದು ಬಂದು ಮತ್ತೆ ಗುಂಡಿನಿಂದ ಹೊಡೆದು ಗಾಯಗೊಂಡಿದ್ದ ಹುಲಿಯನ್ನು ಕೊಲ್ಲುತ್ತಾರೆ. (ಈಗಿನ ವ್ಯವಸ್ಥೆಯಲ್ಲಿ ಹೀಗೆ ಸನ್ನಿವೇಶವು ಒದಗುವುದು ತೀರ ವಿರಳವೆನ್ನಬಹುದು. ಒಂದಲ್ಲ ಮತ್ತೊಂದು ಅಟ್ಟಣೆಯಿಂದ ಬಂದ ಗುಂಡಿಗೆ ಹುಲಿಯು ಆಹುತಿಯಾಗಿಯೇ ಆಗುತ್ತದೆ.) ಹುಲಿಗೆ ಗುಂಡಿನೇಟು ಬಿದ್ದು ಅದು ಮೃತಪಟ್ಟಿತೆಂಬ ಸಂಕೇತದ ಸಿಳ್ಳು ಕೇಳಿಸಿದರೆ, ಅಟ್ಟಣೆಯ ಮೇಲಿನಿಂದ ಬಂದ ಆ ಸಿಳ್ಳಿನ ಸದ್ದನ್ನು ಕೇಳಿ "ಷಿಕಾರಿ"ಗಳೆಲ್ಲರೂ ಮರಗಳಿಂದಿಳಿದು ನಭೋಮಂಡಲವನ್ನು ಭೇದಿಸುವಂತೆ "ಚಾಮುಂಡೀಕು ಜೈ; ಚಾಮುಂಡೀಕು ಜೈ"; ಎಂದು ಆನಂದಘೋಷ ಮಾಡುತ್ತ ಕೋಲಾಹಲದ ಸಡಗರದಿಂದ ನುಗ್ಗುತ್ತಾರೆ.

ಲಾರ್ಡ್ ರೀಡಿಂಗ್‌ರವರು, ಲಾರ್ಡ್ ಹಾರ್ಡಿಂಜ್‌ರವರು, ಮುಂತಾದ ವೈಸ್ರಾಯಿಗಳೆಲ್ಲರೂ ಈಗಿನ ಪರಿಷ್ಕೃತವಾದ ಮೃಗಯಾ ವಿಧಾನವನ್ನು ಶ್ಲಾಘಿಸಿ ಕೊಂಡಾಡಿದ್ದಾರೆ. ಲಾರ್ಡ್ ರೀಡಿಂಗ್‌ರವರು ಆಳಿದ ಮಹಾಸ್ವಾಮಿಯವರೊಡನೆ ಅಟ್ಟಣೆಯ ಮೇಲೆ ಕುಳಿತು, ಹುಲಿಯು ಯಾವ ಕಡೆಯಿಂದ ಎಷ್ಟು ವೇಗದಲ್ಲಿ ಹೇಗೆ ಬರುತ್ತದೆ,

ಹೇಗೆ ಬಂದೂಕವನ್ನು ಎಷ್ಟು ಮಟ್ಟಿನ ಕೋನದಲ್ಲಿ ತಿರುಗಿಸಿ ಹೊಡೆಯ ಬೇಕು — ಎಂಬ ಸಂಗತಿಗಳೆಲ್ಲ ಆಳಿದ ಮಹಾಸ್ವಾಮಿಯವರು ಮೊದಲೇ ತಿಳಿಸಿದ್ದಂತೆ ನಡೆದುದನ್ನು ಕಂಡು, ಬೇಟೆಯ ಏರ್ಪಾಡುಗಳು ಸಂಪೂರ್ಣ ವಾಗಿ ಪರಿಷ್ಕಾರವಾಗಿದ್ದುವೆಂದೂ ಮಹಾಪ್ರಭುಗಳವರಿಗೆ ಬೇಟೆಯ ವಿಷಯದಲ್ಲಿ ಜ್ಞಾನ ಪರಿಶ್ರಮಗಳು ಅದ್ಭುತವಾಗಿದ್ದುವೆಂದೂ ಶ್ಲಾಘಿಸಿ ಆಶ್ಚರ್ಯಚಕಿತರಾದರು. ಬೇಟೆಯ ವಿಧಾನದಲ್ಲಿ ಮಹಾಸ್ವಾಮಿಯವರು ವರ್ಷ ವರ್ಷವೂ ಪರಿಷ್ಕರಣಗಳನ್ನು ನಡೆಯಿಸುತ್ತಿದ್ದರು.

ಮಹಾಪ್ರಭುಗಳವರು ನೂತನ ವಿಧಾನಗಳನ್ನೇರ್ಪಡಿಸಿ ಇತರರಿಗೆ ಅಪಾಯದ ಸಂಭವವನ್ನು ತಪ್ಪಿಸಿದ್ದರೂ ಕೂಡ, ಹುಲಿಯ ಬೇಟೆಗಾಗಿ ಅಟ್ಟಣೆಯ ಮೇಲೆ ಕುಳಿತುಕೊಳ್ಳುವ ತಮಗೂ ತಮ್ಮ ಜೊತೆಯ ಬೇಟೆ ಗಾರರಿಗೂ ಅಪಾಯದ ಸಂಭವವನ್ನು ತಪ್ಪಿಸುವುದು ಮಾತ್ರ ಸಾಧ್ಯ ವಾಗಲಿಲ್ಲ. ಏಕೆಂದರೆ, ಗುಂಡಿನೇಟು ಬಿದ್ದ ಹುಲಿಯು ಒಂದುವೇಳೆ ಮೃತಪಡದೆ ಅಥವಾ ಪೆಟ್ಟುಬಿದ್ದ ಭಯದಿಂದ ಓಡಿಹೋಗದೆ ಮೇಲಕ್ಕೇನಾದರೂ ಹಾರಿದರೆ ಅಟ್ಟಣೆಯ ಮೇಲಿರತಕ್ಕವರಿಗೆ ಪ್ರಾಣಾ ಪಾಯವೇ. ಅದು ಹಾರಲಾರದಷ್ಟು ಮೇಲಕ್ಕೆ ಅಟ್ಟಣೆಯಿದ್ದರೆ, ಹಿಂದೆಯೇ ತಿಳಿಸಿರುವಂತೆ ಹುಲಿಗೆ ಗುಂಡಿನೇಟು ಬೀಳುವ ಸಂಭವವೇ ಕಡಮೆ. ಪ್ರಜೆಗಳಿಗೂ, ವ್ಯವಸಾಯಗಾರರ ಗೋಧನಕ್ಕೂ ವ್ಯಾಘ್ರ ಬಾಧೆಯ ವಿಪತ್ತನ್ನು ತಪ್ಪಿಸಿ, ಮೃಗಯಾ ವಿಹಾರವನ್ನೊಂದು ಕಲೆಯಾಗಿ ಪರಿಣಾಮಗೊಳಿಸಿ, ತಮಗೂ ತಮ್ಮ ಜೊತೆಯ ಮೃಗಯಾ ವಿನೋದಿ ಗಳಿಗೂ ಪ್ರಾಣಾಪಾಯದ ಸಂಭವವಿರುವ ಸನ್ನಿವೇಶದಲ್ಲಿಯೂ ನಿರ್ಭೀತಿ ಯಿಂದ ವ್ಯವಹರಿಸಿ ಮಹಾಸ್ವಾಮಿಯವರು ಪ್ರಜಾವಾತ್ಸಲ್ಯವನ್ನು ತೋರಿಸುತ್ತಿದ್ದರು: ೧೯೩೯ನೆಯ ಇಸವಿ ಮಾರ್ಚಿ ತಿಂಗಳು ೪ನೆಯ ತಾರೀಖಿನ ದಿನ ಮಹಾಪ್ರಭುಗಳವರು ಇತರರಿಂದ ಸಂಹಾರವು ಸಾಧ್ಯ ವಿಲ್ಲದೆ ಹಲವು ವೇಳೆ ಗುಂಡಿನೇಟಿನಿಂದ ತಪ್ಪಿಸಿಕೊಂಡಿದ್ದ ದೊಡ್ಡ ನರಭಕ್ಷಕನನ್ನು ಕೊಂದು, ಆ ದೊಡ್ಡ ಹುಲಿಯಿಂದ ಅನೇಕ ಗ್ರಾಮಗಳಿಗೆ ಉಂಟಾಗಿದ್ದ ಬಾಧೆಯನ್ನು ಕೊನೆಗಾಣಿಸಿದ ಸನ್ನಿವೇಶವು ಕಟ್ಟಾಳುಗಳ ಕೆಚ್ಚೆದೆಯನ್ನೂ ಝುಲ್ಲೆನಿಸುವಂತಹದು.

ಆಳಿದ ಮಹಾಸ್ವಾಮಿಯವರು ಸಜೀವವಾಗಿ ವ್ಯಾಘ್ರಗಳನ್ನು ಹಿಡಿಯುವ ಉತ್ತಮವಾದ ವ್ಯವಸ್ಥೆಯೊಂದನ್ನು ಮಾಡಿ ಅಪ್ರತಿಮ ಕೌಶಲ್ಯವನ್ನು ಪ್ರದರ್ಶಿಸಿದರು. ಅದನ್ನು ಅತಿ ಸಂಕ್ಷೇಪವಾಗಿ ಇಲ್ಲಿ ವಿವರಿಸಬಹುದಾಗಿದೆ: ಹುಲಿಗಳ ಸಂಚಾರವು ಸಾಮಾನ್ಯವಾಗಿ ಯಾವ

ಮಾರ್ಗದಲ್ಲಿ ನಡೆಯುವುದು ಹೆಚ್ಚೆಂಬುದನ್ನು ಅವರು ಪರಿಶೀಲನ ಮಾಡಿಸಿದರು. ಅದು ನಿರ್ಧರವಾದ ಬಳಿಕ ಆ ಮಾರ್ಗದ ಬಳಿಯಲ್ಲಿ ಎಂಟು ಅಡಿಗಳ ವ್ಯಾಸವೂ ಹದಿನೆಂಟು ಅಡಿಗಳ ಆಳವೂ ಉಳ್ಳ ಒಂದು ಗುಂಡಿಯನ್ನು ತೋಡಿಸಿ; ಗುಂಡಿಯಿರುವುದರ ಸುಳಿವೇ ಹುಲಿಗೆ ಗೊತ್ತಾಗದಂತೆ ಅದರ ಮೇಲೆ ತೆಳುವಾದ ಅಡ್ಡ ಕಡ್ಡಿಗಳನ್ನಿಟ್ಟು ಅವುಗಳ ಮೇಲೆ ಸೊಪ್ಪನ್ನೂ ಹುಲ್ಲನ್ನೂ ಮುಚ್ಚಿ, ಸುತ್ತಮುತ್ತಲೂ ತರಗೆಲೆ ಗಳನ್ನು ಹರಡಿ, ಗುಂಡಿಯ ಬಳಿಯಲ್ಲೊಂದು ಕೋಣವನ್ನು ಕಟ್ಟಿಹಾಕಿ, ಆ ಕೋಣನನ್ನು ತಿನ್ನಲು ಬಂದ ಹುಲಿಯು ಹಳ್ಳಕ್ಕೆ ಬೀಳುವಂತೆ ಏರ್ಪಾಡು ಮಾಡಬೇಕೆಂದು ಗೊತ್ತಾಯಿತು. ಈ ಏರ್ಪಾಡಿನಿಂದ, ಒಂದೊಂದು ವೇಳೆ ಹುಲಿಯು ಹಳ್ಳದ ಮೇಲೆ ನಡೆದು ಹಳ್ಳದೊಳಕ್ಕೆ ಬೀಳುತ್ತಿದ್ದುದು ನಿಜವಾದರೂ ಅನೇಕ ಸಂದರ್ಭಗಳಲ್ಲಿ ಅದು ಬಳಸಿ ಕೊಂಡು ಬೇರೆ ಕಡೆಯಿಂದ ಬಂದು ಕೋಣನನ್ನು ತಿಂದು ಹೊರಟು ಹೋಗುತ್ತಿದ್ದುದೇ ಫಲಿತಾಂಶವಾಯಿತು. ಕೋಣನೂ ಜೀವದಿಂದುಳಿದು ಹುಲಿಯೂ ಹಳ್ಳಕ್ಕೆ ಬೀಳುವಂತೆ ಮಾಡಬೇಕೆಂದು ಮಹಾಸ್ವಾಮಿಯವರು ಬಹು ಕಾಲ ಯೋಚಿಸಿ ಮತ್ತಾರಿಗೂ ಹೊಳೆಯದಿದ್ದ ನವೀನ ವಿಧಾನ ವೊಂದನ್ನು ಕಂಡುಹಿಡಿದರು. ಅದುವರೆಗೆ ಗುಂಡಿಯ ಹಿಂಭಾಗಕ್ಕೆ ಬಯಲಿ ನಲ್ಲಿ ಕೋಣವನ್ನು ಕಟ್ಟುತ್ತಿದ್ದುದರಿಂದ, ಹುಲಿಯು ಬಳಸಿ ಬಂದು ಹಳ್ಳಕ್ಕೆ ಬೀಳದೆಯೇ ಕೋಣನಮೇಲೆ ಹಾರಿ ಅದನ್ನು ಕೊಂದು ತಿನ್ನಲು ಆಸ್ಪದವಿದ್ದಿತು. ಹುಲಿಯ ಸ್ವಭಾವವನ್ನು ಕುರಿತು ಸೂಕ್ಷ್ಮವಾಗಿ ವಿಚಾರಮಾಡಿ ನೋಡಿದುದರಲ್ಲಿ, ಅದು ತಾನು ಕೊಲ್ಲಬೇಕೆಂದಿರುವ ಪ್ರಾಣಿಯ ಮೇಲಕ್ಕೆ ದೂರದಿಂದ ಹಾರಿ ಅದರ ಹೆಗಲನ್ನೇರಿ ಅನಂತರ ಮುಂದಿನ ಕೆಲಸವನ್ನು ನೆರವೇರಿಸುವುದೆಂಬುದೂ, ಹಾಗೆ ಒಂದೇ ಸಲಕ್ಕೆ ಹಾರುವುದು ಸಾಧ್ಯವಿಲ್ಲದಷ್ಟು ದೂರದಲ್ಲಿ ಆ ಪ್ರಾಣಿಯು ನಿಂತಿದ್ದರೆ ಒಂದುಸಲ ಅರ್ಧದೂರಕ್ಕೆ ಹಾರಿ ಒಡನೆಯೇ ಮತ್ತೊಂದುಸಲ ನೆಗೆದು ಆ ಪ್ರಾಣಿಯ ಹೆಗಲನ್ನೇರಿ ಅದನ್ನು ಕೊಲ್ಲುವುದೆಂಬುದೂ ಗೊತ್ತಾದುವು. ಹುಲಿಯು ಕೋಣನ ಹೆಗಲಿಗೆ ಹಾರುವಾಗ ಸಾಮಾನ್ಯವಾಗಿ ಈ ರೀತಿ ನಡೆಯುವುದೆಂಬ ಅಂಶದ ಆಧಾರದಮೇಲೆ ನೂತನ ವಿಧಾನವು ಕಲ್ಪಿತ ವಾಯಿತು: ಕೋಣವನ್ನು ಗುಂಡಿಯಿಂದ ಆಚೆಗೆ ಕಟ್ಟಿ ಕೋಣನ ಹಿಂಭಾಗದಲ್ಲಿಯೂ, ಗುಂಡಿಯಷ್ಟು ಭಾಗವನ್ನು ಮಾತ್ರ ಹಾಗೆಯೇ ಬಿಟ್ಟು ಗುಂಡಿಯ ಉಭಯ ಪಾರ್ಶ್ವಗಳಲ್ಲಿಯೂ ಎತ್ತರವಾದ ಕಾಡುಮರ ಗಳನ್ನು ಭೂಮಿಯೊಳಕ್ಕೆ ಹೂಳಿ ಬಲವಾದ ಆವರಣವು ನಿರ್ಮಿತವಾಗ

ಬೇಕೆಂದು ಗೊತ್ತಾಯಿತು; ಗುಂಡಿಯ ಮೇಲಿನ ಭಾಗವನ್ನು ಹುಲಿಯು ಸಮನೆಲವೆಂದು ಭ್ರಮಿಸುವಂತೆ ಹುಲ್ಲಿನಿಂದಲೂ ಸೊಪ್ಪಿನಿಂದಲೂ ಮರೆ ಮಾಡಿರುವುದರಿಂದ, ಗುಂಡಿಯಿರುವ ಭಾಗದಲ್ಲಿ ಬರುವುದನ್ನು ಬಿಟ್ಟು ಮತ್ತಾವ ಕಡೆಯಿಂದ ಬಂದರೂ ಹುಲಿಗೆ ಕೋಣವು ಸಿಕ್ಕುವಂತಿಲ್ಲದ ಏರ್ಪಾಡು ನಡೆಯಿತು. ಆದಕಾರಣ, ಹುಲಿಯು ನಡೆದುಬಂದರೂ ಗುಂಡಿಯೊಳಕ್ಕೆ ಬೀಳುತ್ತದೆ; ಕೋಣವನ್ನು ಕಂಡ ಬಳಿಕ ಹಾರಿಬರಲು ಹುಲಿಯು ಇಷ್ಟಪಟ್ಟರೆ ಒಂದುಸಲ ನೆಗೆದಾಗ ಗುಂಡಿಯಿರುವ ಭಾಗದ ಮಧ್ಯಕ್ಕೆ ಸೇರಿ ಅನಂತರ ಮತ್ತೊಂದು ಸಲ ನೆಗೆದು ಕೋಣವನ್ನು ಹಿಡಿಯುವಷ್ಟು ಮಟ್ಟಿಗೆ ಸರಿಯಾದ ಅಗಲದಲ್ಲಿ ಗುಂಡಿಯನ್ನು ಲೆಕ್ಕಾಚಾರದಲ್ಲಿ ತೋಡಿರುವುದರಿಂದ, ಹುಲಿಯು ಕೋಣವನ್ನು ಕಂಡ ಸ್ಥಳದಿಂದ ನೆಗೆದುಬಂದರೂ ಮತ್ತಷ್ಟು ರಭಸದಿಂದ ಗುಂಡಿಯೊಳಕ್ಕೆ ಬೀಳುತ್ತದೆ. ಏಕೆಂದರೆ, ಕೋಣವು ಹುಲಿಯ ಕಣ್ಣಿಗೆ ಕಾಣಿಸಿದ ಸ್ಥಳದಿಂದ ಗುಂಡಿಯವರೆಗಿನ ದೂರವೂ, ಗುಂಡಿಯ ಅಗಲವೂ, ಗುಂಡಿಯಿಂದಾಚೆಗೆ ಕೋಣವನ್ನು ಕಟ್ಟಿರುವ ವರೆಗಿನ ದೂರವೂ ಸಹ ಸರಿಯಾದ ಲೆಕ್ಕಾಚಾರದ ಮೇರೆಗೆ ಏರ್ಪಟ್ಟಿರುವುದರಿಂದ ಹುಲಿಯು ಕೋಣವನ್ನು ಕಂಡ ಬಳಿಕ ಗುಂಡಿಯಿರುವ ಭಾಗವು ಸಮನೆಲವೆಂದು ಭ್ರಮಿಸಿ ಎರಡುಸಲ ನೆಗೆದು ಕೋಣನ ಹೆಗಲನ್ನು ಸೇರುವ ಪ್ರಯತ್ನಮಾಡಿದರೂ, ಅಥವಾ ಸ್ವಲ್ಪ ದೂರ ನಡೆದೇ ಹೋಗಿ ಅನಂತರ ಒಂದೇ ನೆಗೆತಕ್ಕೆ ಕೋಣನ ಹೆಗಲಿಗೆ ಹಾರುವ ಪ್ರಯತ್ನಮಾಡಿದರೂ, ಹೇಗೇ ಮಾಡಿದರೂ ಕೋಣವು ಸುರಕ್ಷಿತವಾಗಿದ್ದು ಹುಲಿಯು ಮಾತ್ರ ಹಳ್ಳಕ್ಕೆ ಬೀಳುತ್ತದೆ. ಕೋಣವನ್ನು ಬಲಿಕೊಡಬೇಕಾಗಿಲ್ಲದೆಯೇ ಹುಲಿಯನ್ನು ಸಜೀವವಾಗಿ ಹಳ್ಳದೊಳಕ್ಕೆ ಮುಗುಚಿಸುವ ಈ ನವೀನ ವಿಧಾನವನ್ನು ಮಹಾಪ್ರಭುಗಳವರು ಕಂಡುಹಿಡಿದುದಕ್ಕಾಗಿ, ಮೃಗಯಾ ವಿಚಾರದಲ್ಲಿ ಮೇಧಾವಿಗಳೆನಿಸಿರುವವರೆಲ್ಲರೂ ಮಹಾಸ್ವಾಮಿಯವರ ಕಲ್ಪನಾ ಸಾಮರ್ಥ್ಯವನ್ನೂ ಬುದ್ಧಿಚಾತುರ್ಯವನ್ನೂ ಕಂಡು ಆಶ್ಚರ್ಯದಿಂದ ಬೆರಗಾದರು. ಹುಲಿಯು ಹಳ್ಳಕ್ಕೆಬಿದ್ದ ಬಳಿಕ ಅದರ ಸುತ್ತಲೂ ಎತ್ತರವಾದ ಮರದ ಕಂಬಗಳನ್ನು ಹೂಳಿ ಅಡ್ಡಕಂಬಗಳನ್ನು ಬಿಗಿದು ಆವರಣವನ್ನು ಕಲ್ಪಿಸಿ, ಒಂದು ಕಡೆಗೆ ಮಾತ್ರ ಬಾಗಿಲನ್ನು ಬಿಟ್ಟು ಅಲ್ಲಿಂದ ಮುಂದೆ ದಾರಿಯಿರುವಂತೆ ಮಾಡಿ ಅದರ ಇಕ್ಕೆಲಗಳಲ್ಲಿಯೂ ಅದೇ ರೀತಿ ಮರದ ಕಂಬಗಳನ್ನು ಹೂಳಿ ಅವಕ್ಕೂ ದಟ್ಟವಾಗಿ ಅಡ್ಡಕಂಬಗಳನ್ನು ಬಿಗಿದು ಅದರ ಕೊನೆಗೆ ಬೋನನ್ನು ಒಡ್ಡಿ ಜೋಡಿಸಿರುತ್ತಾರೆ. ಅನಂತರ ಆ ಆವರಣದ ಹಿಂದೆ

ನಿಂತು ಗುಂಡಿಯೊಳಕ್ಕೆ ಸೊಪ್ಪುಸೆದೆಗಳನ್ನೂ ಮಣ್ಣನ್ನೂ ತುಂಬುತ್ತ ಬರುತ್ತಾರೆ. ಅವು ಗುಂಡಿಯೊಳಕ್ಕೆ ತುಂಬುತ್ತ ಬಂದಂತೆಲ್ಲ ಹುಲಿಯು ಕ್ರಮಕ್ರಮವಾಗಿ ಮೇಲಕ್ಕೆ ಬಂದು ಕೊನೆಗೆ ಗುಂಡಿಯನ್ನು ಬಿಟ್ಟು ನೆಗೆದು ಹೊರಗೆ ಬರುತ್ತದೆ. ಆಗ ಸುತ್ತಲೂ ಜನರು ಸದ್ದುಮಾಡುತ್ತಿರುತ್ತಾರೆ. ಅದರಿಂದ ಬೆದರಿದ ಹುಲಿಯು, ಮತ್ತೆಲ್ಲಿ ಹೋಗುವುದಕ್ಕೂ ಆಸ್ಪದ ವಿಲ್ಲದಕಾರಣ, ಗುಂಡಿಯ ಒಂದು ಕಡೆಗೆ ಕಾಣುವ ದಾರಿಯಲ್ಲಿ ಹೋಗಿ ಬೋನಿನಲ್ಲಿ ಸೇರಿ ಸುರಕ್ಷಿತವಾಗಿರುವ ಪ್ರಯತ್ನಮಾಡುತ್ತದೆ. ಬೋನಿ ನೊಳಕ್ಕೆ ಹೋದ ಕೂಡಲೆ ಅದರ ತುಳಿತದಿಂದಲೇ ಬೋನಿನ ಬಾಗಿಲು ರಭಸದಿಂದ ಮುಚ್ಚಿಕೊಂಡುಬಿಡುತ್ತದೆ.

**ಹಾಸ್ಯಪ್ರಿಯತೆಯ ಕೆಲವು ನಿದರ್ಶನ ಗಳು**

ಆಳಿದ ಮಹಾಸ್ವಾಮಿಯವರ ಹಾಸ್ಯಪ್ರಿಯತೆಯು ಮನೋಜ್ಞ ವಾದುದು. ಚಿತ್ತಾಕರ್ಷಕವಾಗಿಯೂ ಸುಸಂಸ್ಕೃತವಾಗಿಯೂ ಇರುವ ಹಾಸ್ಯವಚನಗಳನ್ನು ನುಡಿಯುವ ಸಾಮರ್ಥ್ಯವು ಅವರಲ್ಲಿ ಹುಟ್ಟುಗುಣವಾಗಿ ನೆಲಸಿ ಪರಿಸ್ಫುಟ ವಾಗಿದ್ದಿತು. ವಿವಿಧ ಸನ್ನಿವೇಶಗಳಿಗೂ, ಹಾಸ್ಯಕ್ಕೆ ವಿಷಯರಾದವರ ಸಂಸ್ಕೃತಿಯ ಮತ್ತು ಸ್ಥಾನದ ಅಂತಸ್ತಿಗೂ ತಕ್ಕಂತೆ ಯುಕ್ತ ಸಮಯಗಳಲ್ಲಿ ಮಾತ್ರ ಹಾಸ್ಯವಚನಗಳನ್ನಾಡುವ ಹೃದಯಂಗಮವಾದ ಶಕ್ತಿಯೂ ಅವರಲ್ಲಿದ್ದಿತು.

ಒಂದು ಸಲ, ಕಾರಾಪುರದಲ್ಲಿ ಖೆಡ್ಡಾ ಏರ್ಪಾಡು ನಡೆದಿದ್ದಾಗ ಅದನ್ನು ನೋಡಲು ಬಂದಿದ್ದ ಆಗಿನ ವೈಸ್ರಾಯಿಯವರೂ ಅವರ ಪತ್ನಿ ಯವರೂ ಆಳಿದ ಮಹಾಸ್ವಾಮಿಯವರ ಮೋಟಾರುಬಂಡಿಯಲ್ಲಿ ಕುಳಿ ತಿದ್ದರು. ಮೋಟಾರುಬಂಡಿ ಖೆಡ್ಡಾ ಏರ್ಪಾಡು ನಡೆದಿದ್ದ ಬಳಿಗೆ ಹೊರಡುವು ದರಲ್ಲಿದ್ದಿತು. ವೈಸ್ರಾಯಿಯವರ ಪತ್ನಿಯವರು ಮೋಟಾರುಬಂಡಿಯೊಳಗೆ ಮುಂಭಾಗದಲ್ಲಿದ್ದ ಅಂದವಾದ ರೇಷ್ಮೆಯ ಒರಗುದಿಂಬನ್ನೆಳೆದುಕೊಳ್ಳುವ ಪ್ರಯತ್ನಮಾಡಿದಾಗ ಅಲ್ಲಿ ನಿಂತಿದ್ದ ಮಹಾಪ್ರಭುಗಳವರು, "ಅದು ಮೋಟಾರುಕಾರನ್ನು ನಡೆಯಿಸುವವನಿಗಾಗಿ ಇಟ್ಟಿರುವ ದಿಂಬು" ಎಂದು ಅರ್ಥವಾಗುವಂತೆ ಇಂಗ್ಲಿಷಿನಲ್ಲಿ ಅಪ್ಪಣೆ ಕೊಡಿಸಿದರು. ವೈಸ್ರಾಯಿ ಯವರ ಪತ್ನಿಯವರಿಗೆ ಕೊಂಚ ಅಸಮಾಧಾನವಾಯಿತೆಂಬುದನ್ನು ಹೇಳ ಬೇಕಾದುದೇ ಇಲ್ಲ. ಕ್ಷಣಮಾತ್ರದಲ್ಲಿ ಮಹಾಸ್ವಾಮಿಯವರ ಸಂಜ್ಞಾ ಸೂಚನೆಗನುಸಾರವಾಗಿ ಮತ್ತಷ್ಟು ಉತ್ತಮವಾದೆರಡು ದಿಂಬುಗಳು ಬಂಗಲೆಯೊಳಗಿನಿಂದ ಬಂದು ಅವರ ಅಸಮಾಧಾನವು ಕೊಂಚ ಕಡಮೆ

ಯಾದರೂ, ಮಹಾಸ್ವಾಮಿಯವರು ಮೋಟಾರುಬಂಡಿಯನ್ನು ನಡೆಯಿಸುವಾತನಿಗೇ ಪ್ರಾಶಸ್ತ್ಯವನ್ನು ಕೊಟ್ಟು ಆತನಿಗಾಗಿ ಇಟ್ಟಿದ್ದ ದಿಂಬನ್ನು ತೆಗೆದುಕೊಳ್ಳಲು ಅವಕಾಶಕೊಡದೆ ತಮ್ಮನ್ನು ಕಡೆಗಂಡರಲ್ಲಾ ಎಂಬ ಭಾವನೆಯ ಅಸಮಾಧಾನವೇನೊ ಇನ್ನೂ ಮುಖದಮೇಲೆ ಕಾಣುತ್ತಲೇ ಇದ್ದಿತು. ಸಂಗಡಲೇ ಮೋಟಾರುಬಂಡಿ ಹೊರಟಿತು. ಎತ್ತಲೋ ನೋಡುತ್ತಿದ್ದ ವೈಸ್ರಾಯಿಯವರ ಪತ್ನಿಯವರು ಮುಂದೆ ನೋಡಿದರೆ, ದಿಂಬನ್ನೊರಗಿಕೊಂಡು "ಮೋಟಾರುಕಾರನ್ನು ನಡೆಯಿಸುವಾತ" ಮತ್ತಾರೂ ಅಲ್ಲ; ಸ್ವಯಂ ಮಹಾಪ್ರಭುಗಳವರೇ. ವೈಸ್ರಾಯಿ ದಂಪತಿಗಳಿಬ್ಬರೂ ಘೊಳ್ಳನೆ ನಗಲಾರಂಭಿಸಿ, ಮಹಾಪ್ರಭುಗಳವರ ಶುದ್ಧವಾದ ತಿಳಿಹಾಸ್ಯದ ಜಾಣ್ಮೆಯನ್ನು ಮನವಾರೆ ಕೊಂಡಾಡಿ ನಲಿದರು.

ಈಚಿನಂತೆ ಪರಿಷ್ಕೃತ ವಿಧಾನದಲ್ಲಿ ನಡೆಯದೆ ಹಿಂದಿನ ವಿಧಾನದಲ್ಲಿ ಹುಲಿಯ ಬೇಟೆಯು ನಡೆಯುತ್ತಿದ್ದಾಗ, ಒಂದುಸಲ ಹುಲಿಯು ಗುಂಡಿನೇಟಿಗೆ ಸಿಕ್ಕದೆ ತಪ್ಪಿಸಿಕೊಂಡು ಹೊರಟುಹೋಯಿತು. ಮಹಾಸ್ವಾಮಿಯವರು ಮೈಸೂರಿಗೆ ಚಿತ್ತೈಸಿದರು. ಸಂಬಂಧಪಟ್ಟ ಅಧಿಕಾರಿಗಳು "ಷಿಕಾರಿ"ಗಳಾದ ಕಾಡುಕುರುಬರಿಗೆ ವಾಡಿಕೆಯಂತೆ ಕೊಡಬೇಕಾಗಿದ್ದ ಪಾರಿತೋಷಿಕಗಳ ಪಟ್ಟಿಯನ್ನು ಪ್ರಭುಗಳ ಸನ್ನಿಧಿಯಲ್ಲಿ ಒಪ್ಪಿಸಿದಾಗ ಅವರು "ಇದೇನು, ಪಟ್ಟಿ?" ಎಂದು ಕೇಳಿದರು. ಇನಾಂ ಕೊಡಬೇಕಾದ ಹೆಸರುಗಳ ಪಟ್ಟಿಯೆಂದು ಉತ್ತರಬಂದ ಮೇಲೆ ಮಹಾಸ್ವಾಮಿಯವರು, "ಓಹೊ! ಮೊನ್ನೆ ನಾವು ಹುಲಿಗಳನ್ನೆಲ್ಲ ಹೊಡೆದು ಬಂದೆವಲ್ಲಾ, ಆ ಹುಲಿಗಳ ಬೇಟೆಯ ಸಂಬಂಧದಲ್ಲಿ ತಾನೆ? ಸರಿ. ಆ ಹುಲಿಗಳ ಚರ್ಮಗಳನ್ನು ಹದಮಾಡಲು ಯಾರಿಗೆ ಕಳುಹಿಸಿದ್ದೀರಿ?" ಎಂದು ಕೇಳಿ ನಕ್ಕರು. ಆದರೆ ಪಾರಿತೋಷಿಕಗಳೇನೊ ಕಾಡುಕುರುಬರಿಗೆ ವಾಡಿಕೆಯಂತೆ ಲಭಿಸಿದುವು.

ಒಂದು ಸಲ, ಪ್ರಭುಗಳವರು ಬೇಟೆಗೆ ಚಿತ್ತೈಸಿ ಅಟ್ಟಣೆಯ ಮೇಲೆ ಕುಳಿತು ನಿರೀಕ್ಷಿಸುತ್ತಿದ್ದಾಗ ಹುಲಿಯು ಅಲ್ಲಿಗೆ ಬರಲಿಲ್ಲ. ಆ ಬಳಿಕ ಅವರು ಅದಕ್ಕೆ ಕಾರಣವನ್ನು ಕೇಳಿದಾಗ ಬೇಟೆಯ ಅಧಿಕಾರಿಗಳು, "ಈ ಕಡೇ ಹುಲಿಗಳೆಲ್ಲಾ ಕೆಟ್ಟ ಹುಲಿಗಳು. ಹಿಂದೆ ಪೆಟ್ಟುತಿಂದು ತಪ್ಪಿಸಿಕೊಂಡುಹೋದ ಹುಲಿಗಳು. ಸುತರಾಂ ಹೇಳಿದಹಾಗೆ ಕೇಳುವುದಿಲ್ಲ, ಮಹಾಸ್ವಾಮಿ" ಎಂದರು. ಪ್ರಭುಗಳವರು ಆಗ ಮಾತನಾಡದೆ ಮೌನದಿಂದಿದ್ದು, ಆ ಬಳಿಕ ಎರಡು ವರ್ಷಗಳಾದ ಮೇಲೆ ಮತ್ತೊಂದು ಪ್ರದೇಶದ ವಿಚಾರವನ್ನು ಪ್ರಸ್ತಾವಿಸಿ ಅದೇ

ಅಧಿಕಾರಿಗಳು ಉತ್ಸಾಹದಿಂದ "ಮಹಾಸ್ವಾಮಿ, ಅಲ್ಲಿ ಹುಲಿಗಳು ಯಥೇಷ್ಟವಾಗಿವೆ. ಷಿಕಾರಿಗೆ ಅನುಕೂಲ" ಎಂದು ವಿಜ್ಞಾಪಿಸಿದಾಗ "ಓಹೊ! ಹಾಗೇನು? ಅಲ್ಲಿಯ ಹುಲಿಗಳು ಕೆಟ್ಟ ಹುಲಿಗಳಲ್ಲ, ತಾನೆ? ಅವು ಹೇಳಿದಹಾಗೆ ಕೇಳಿಕೊಂಡಿರುವ ಹುಲಿಗಳೋ ಹೇಗೆ?" ಎಂದು ಮಂದಸ್ಮಿತವದನರಾಗಿ ಪ್ರಶ್ನೆಮಾಡಿದರು. ಮತ್ತೊಂದುಸಲ, ಹುಲಿಯು ತಪ್ಪಿಸಿಕೊಂಡು ಓಡಿಹೋಗಿದ್ದುದನ್ನರಿಯದೆ, ಅಧಿಕಾರಿವರ್ಗದವರೆಲ್ಲರೂ ಉತ್ಸಾಹದಿಂದ ಓಡಾಡುತ್ತಿದ್ದುದನ್ನು ಕಂಡು ಮಹಾಸ್ವಾಮಿಯವರು, "ಎಲ್ಲಾ ಹುಲಿಗಳನ್ನೂ ಇವೊತ್ತೇ ಹೊಡೆದು ಕಾಡನ್ನೇ ಬರಿದುಮಾಡಿದರೆ ಹೇಗೆ? ಮುಂದಕ್ಕೂ ಒಂದೆರಡು ಹುಲಿಗಳಿರಲಿ" ಎಂದು ಹೇಳಿ ನಕ್ಕರು.

ಮಹಾಸ್ವಾಮಿಯವರು ಮೃಗಯಾ ವಿಹಾರದ ನೂತನ ವ್ಯವಸ್ಥೆಯನ್ನೇರ್ಪಡಿಸಿದ ಮೇಲೆ ಮದರಾಸು ಗವರ್ನರವರು ಬೇಟೆಗೆ ದಯಮಾಡಿದ್ದು, ಹುಲಿಯ ಬೇಟೆಯು ಸುಸೂತ್ರವಾಗಿಯೂ ಸುಲಲಿತವಾಗಿಯೂ ನಡೆದುಹೋದುದಕ್ಕಾಗಿ ಹರ್ಷಿಸಿದರು. ಆಳಿದ ಮಹಾಸ್ವಾಮಿಯವರ ಕಲ್ಪನಾ ಸಾಮರ್ಥ್ಯವನ್ನೂ ಚಾತುರ್ಯವನ್ನೂ ಕೊಂಡಾಡಿ, ಅನಂತರ ಅವರು, "ಶ್ರೀಮನ್ಮಹಾರಾಜರವರ 'ಷಿಕಾರಿ' ಗಳ ಸಾಮರ್ಥ್ಯಕ್ಕೆ ಎಣೆಯಿಲ್ಲ. ಅವರ ಧೈರ್ಯ ಚಾತುರ್ಯಗಳು ಅದ್ಭುತವಾಗಿವೆ" ("Hats off to Your Highness's men They are wonderfully clever and courageous") ಎಂದು ಹೇಳಿದರು. ಮಹಾಸ್ವಾಮಿಯವರು ಹರ್ಷಿತರಾಗಿ—ಬೇಟೆಯ ಅಧಿಕಾರಿಗಳ ಸಾಮರ್ಥ್ಯದಿಂದ ಸುಪ್ರೀತರಾಗಿ—"ಏನು! 'ಷಿಕಾರಿ'ಗಳೊಡನೆ ಹೋಗಿ ಭಹದ್ದೂರ್ ಬೇಟೆ ಮಾಡಿಸಿಬಿಟ್ಟರಿ!" ಎಂದು ಅಪ್ಪಣೆ ಕೊಡಿಸಿದರು. ಅಧಿಕಾರಿಗಳು "ಹೌದು, ಮಹಾಸ್ವಾಮಿ! 'ಷಿಕಾರಿ'ಗಳು ಬಹು ಚೆನ್ನಾಗಿ ಬೇಟೆ ಆಗಮಾಡಿಸಿದರು. ಆ ಕಾಡುಕುರುಬರೂ ನಮ್ಮ ಕಡೆಯ ಆಳುಗಳೂ ದಣಿದು ತಟ್ಟಾಗಿದ್ದಾರೆ" ಎಂದರು. ಆಗ ಮಹಾಪ್ರಭುಗಳು, "ಹಾಗೇನು? ದಣಿದವರಿಗೆ ಹೊಟ್ಟೆ ಹಸಿವೂ ಆಗುತ್ತದೆ, ಅಲ್ಲವೆ?" ಎಂದು ಕೇಳಿದರು. ಅಧಿಕಾರಿಯವರು ಅರಮನೆ ಬಿಡದಿಯವರಿಂದ ಭೋಜನದ ಏರ್ಪಾಡು ನಡೆದಿದ್ದುದನ್ನರಿಯದೆ, "ಹೌದು, ಮಹಾಸ್ವಾಮಿ. ಅವರಿಗೆಲ್ಲಾ ಬಹಳ ಹಸಿವಾಗಿದೆ. ಇನ್ನು ಅವರೆಲ್ಲಾ ಈ ಸಲ ಹಿಟ್ಟು ಹುಡುಕಿಕೊಂಡು ಹೊರಡಬೇಕಾಗಿದೆ. ಇನ್ನು ಹೊರಡುತ್ತಾರೆ" ಎಂದು ಉತ್ತರ ಹೇಳಿದರು. ಮಹಾಸ್ವಾಮಿಯವರು, "ಅದೇನೂ ಆವಶ್ಯಕವಿಲ್ಲ. ಎಂದಿನಂತೆಯೇ ಈ ಸಲವೂ ಬಿಡದಿಯಲ್ಲಿ ಅವರಿಗೆಲ್ಲ

ಔತಣದ ಊಟವೇ ಸಿದ್ಧವಾಗಿದೆ” ಎಂದು ನಗುತ್ತ ಅಪ್ಪಣೆ ಕೊಡಿಸಿದರು. ಮಹಾಸ್ವಾಮಿಯವರ ಖಾಸಾ ಬಿಡದಿಯ ಮಿಷ್ಟಾನ್ನ ಭೋಜನವು ದೊರೆತ ಮೇಲೆ “ಷಿಕಾರಿ”ಗಳಾದ ಕಾಡುಕುರುಬರೆಲ್ಲ ಮಹಾಸ್ವಾಮಿಯವರಿಗೆ ಅಡ್ಡಬಿದ್ದು “ಮಾಸ್ವಾಮಿ! ಜಂಗಲಿಯಾಗೆ ಹುಲ್ಲುಬನ್ನಿ ವಸೂಲ್ಮಾಡ್ತಾರೆ. ಮಾಫ್ ಮಾಡಬೇಕು. ನಾವೆಲ್ರೂವೇ ಬಡವರೂ ಮಾಸ್ವಾಮಿ” ಎಂದು ಬೇಡಿಕೊಂಡರು. ಮಹಾಪ್ರಭುಗಳವರು, (ವರ್ಷಕ್ಕೆ ೨,೪೦೦ ರೂಪಾಯಿಗಳಿಗಿಂತಲೂ ಹೆಚ್ಚಾಗಿ ಬರುತ್ತಿದ್ದ) ಹುಲ್ಲುಬನ್ನಿ ತೆರಿಗೆಯನ್ನು ಅಲ್ಲಿಂದ ಮುಂದೆ ಅವರುಗಳು ಕೊಡಬೇಕಾದ ಆವಶ್ಯಕತೆಯಿಲ್ಲದಂತೆ ಅರಮನೆಯಿಂದ ಸಹಾಯವಾಗುವಹಾಗೆ ವಾಗ್ದಾನ ಮಾಡಿದರು. ಆ ಅನುಗ್ರಹವನ್ನು ಕಂಡು, ಅವರುಗಳ ಆಶೆಯು ಉಕ್ಕಿಹರಿಯಿತು. ಒಡನೆಯೇ ಅವರುಗಳು ತಾವು ಮನೆಗಳನ್ನು ಕಟ್ಟಿಕೊಳ್ಳುವುದಕ್ಕೆ ಉಚಿತ ವಾಗಿ ಚೌಬೀನೆಯನ್ನು ಕಾಡಿನಿಂದ ಸಾಗಿಸಿಕೊಂಡುಹೋಗಲು ಅಪ್ಪಣೆ ಯಾಗಬೇಕೆಂದು ಪ್ರಾರ್ಥಿಸಿದರು. ಅವರು ಮಿತಿಮೀರಿದ ಪ್ರಮಾಣದಲ್ಲಿ ಚೌಬೀನೆಯು ಬೇಕೆಂದು ಕೇಳಿದ ಕಾರಣ, ಮರವನ್ನು ಮಾರಿಕೊಂಡು ಲಾಭಹೊಂದಬೇಕೆಂದಿದ್ದುದು ಅವರ ನಿಜವಾದ ಉದ್ದೇಶವೆಂಬುದು ವ್ಯಕ್ತ ವಾಯಿತು. ಅವರುಗಳಲ್ಲಿ ಅನೇಕರು ಒಂದೇ ಕುಟುಂಬಕ್ಕೆ ಸೇರಿದವ ರಾಗಿದ್ದೂ ತಮ್ಮಲ್ಲಿ ಪ್ರತಿಯೊಬ್ಬರೂ ಹತ್ತು ಅಂಕಣಗಳ ಮನೆಯನ್ನು ಕಟ್ಟಿಕೊಳ್ಳಬೇಕೆಂದಿದ್ದುದಾಗಿ ಅರಿಕೆಮಾಡಿದರು. ಮಹಾಸ್ವಾಮಿಯವರು ಅವರ ನಿಜವಾದ ಆಶಯವನ್ನು ಗ್ರಹಿಸಿ, “ಸರಿ. ಎರಡು ಸಾವಿರ ಜನ. ಒಂದೇ ಕುಟುಂಬಕ್ಕೆ ಸೇರಿದವರಲ್ಲಿ ಸಹ ಪ್ರತಿಯೊಬ್ಬರಿಗೂ ಬೇರೆ ಬೇರೆ ಮನೆ. ಪ್ರತಿಯೊಂದು ಮನೆಯೂ ಹತ್ತು ಅಂಕಣಗಳಿರಬೇಕು. ನೀವುಗಳು ಹಾಗೆ ಮನೆಗಳನ್ನು ಕಟ್ಟಿ, ಒಟ್ಟು ಇಪ್ಪತ್ತು ಸಾವಿರ ಅಂಕಣಗಳಿಗೆ ಬೇಕಾಗುವಷ್ಟು ಚೌಬೀನೆಯನ್ನು ಕಡಿದು ಸಾಗಿಸಬೇಕು. ಹಾಗೆ ಮಾಡಿದ ಮೇಲೆ, ಇಲ್ಲಿ ಕಾಕನಕೋಟೆ ಕಾಡು ಉಳಿದಿದ್ದೀತೇ — ಎಂಬುದೊಂದೇ ಯೋಚನೆ” ಎಂದು ಹೇಳಿ ನಕ್ಕರು.

ಒಂದು ಸಲ, ಹುಲಿಯ ಕಾಟವು ಹೆಚ್ಚಾಗಿದ್ದ ಒಂದು ಪ್ರದೇಶದಲ್ಲಿ ಬೇಟೆಗೆ ಏರ್ಪಾಡು ಮಾಡಬೇಕೆಂದು ಮಹಾಸ್ವಾಮಿಯವರು ಬೇಟೆಯ ಅಧಿಕಾರಿಯವರಿಗೆ ವರ್ತಮಾನ ಕಳುಹಿಸಿದರು. ಆ ಅಧಿಕಾರಿಯವರು ಆಗ್ಗೆ ಇನ್ನೂ ಆ ಹುದ್ದೆಗೆ ಬಂದು ಸ್ವಲ್ಪಕಾಲವೇ ಆಗಿದ್ದಿತು. ಅವರು ಮರದ ಮೇಲೆ ಅಟ್ಟಣೆ ಕಟ್ಟಿಸಿ ಆ ಅಟ್ಟಣೆಯ (“ಮಚಾನ್”) ಸುತ್ತಲೂ ಮುಚ್ಚಿಸಿ ಒಂದೇ ಒಂದು ಕಡೆಯಲ್ಲಿ ಮಾತ್ರ ತೆರಪಾಗಿ ಬಿಡಿಸಿ

ಆ ಕಡೆಗೆ ಅಭಿಮುಖವಾಗಿ ಹುಲಿಯು ಬಂದರೆ ಮಾತ್ರ ಅದನ್ನು ಹೊಡೆಯುವುದು ಸಾಧ್ಯವಾಗುವಂತೆ ಏರ್ಪಾಡು ಮಾಡಿಸಿದ್ದರು. ಅವರು ಮಾಡಿಸಿದ್ದ ಏರ್ಪಾಡುಗಳೆಲ್ಲ ಪ್ರಶಸ್ತವಾಗಿದ್ದುವು. ಮಹಾಸ್ವಾಮಿಯವರು ಅವುಗಳನ್ನು ಪರಿಶೀಲಿಸಿ ಸುಪ್ರೀತರಾದರು. ಅಲ್ಲಿಯ ಏರ್ಪಾಡುಗಳು ಅಷ್ಟು ಸಮರ್ಪಕವಾಗಿದ್ದಾವೆಂದು ಮಹಾಸ್ವಾಮಿಯವರು ನಿರೀಕ್ಷಿಸಿರಲಿಲ್ಲವಾದಕಾರಣ, ಅವರಿಗೆ ಬಹಳ ಸಂತೋಷವುಂಟಾಯಿತು. ಮಹಾಸ್ವಾಮಿಯವರು ಲೇಶವೂ ಅದನ್ನು ತೋರ್ಪಡಿಸಿಕೊಳ್ಳದೆ, ಆ ಏರ್ಪಾಡುಗಳೆಲ್ಲ ಆ ಅಧಿಕಾರಿಯವರ ಜಾಣ್ಮೆಯಿಂದ ಅಷ್ಟು ಉತ್ಕೃಷ್ಟವಾಗಿ ನಡೆದಿದ್ದುವೋ ಅಥವಾ ಬುದ್ಧಿಪೂರ್ವಕವಾಗಿಲ್ಲದೆ ಕೇವಲ ಆಕಸ್ಮಿಕವಾಗಿ ನಡೆದಿದ್ದುವೋ — ಎಂಬುದನ್ನು ನಿರ್ಧರಿಸುವುದಕ್ಕಾಗಿ, "ನಿಮ್ಮಷ್ಟು ಅನುಭವವೂ ತಿಳಿವಳಿಕೆಯೂ ಉಳ್ಳವರು ಈ ಮಟ್ಟಿಗೆ ಹದಗೆಡಿಸಿ ಕೆಲಸ ಮಾಡಿಸುವಿರೆಂದು ನಾವು ನಿರೀಕ್ಷಿಸಿರಲಿಲ್ಲ" ಎಂದು ಹೇಳಿ ಅಸಮಾಧಾನವಾಗಿದ್ದಂತೆ ನಟಿಸಿದರು. ಆ ಅಧಿಕಾರಿಯವರು ಹೊಸಬರಾಗಿದ್ದುದರಿಂದ ಮಹಾಪ್ರಭುಗಳವರ ಆಗ್ರಹಕ್ಕೆ ಗುರಿಯಾದುದಾಗಿ ಭಾವಿಸಿಕೊಂಡು ಭಯದಿಂದ ನಡುಗಿಹೋದರು; ನಿರುತ್ತರರಾಗಿ ಸುಮ್ಮನಿದ್ದರು. ಆಳಿದ ಮಹಾಸ್ವಾಮಿಯವರು ಮತ್ತಷ್ಟು ಅಸಮಾಧಾನವಾಗಿದ್ದಂತೆ ನಟಿಸುತ್ತ, "ಹೀಗೇಕೆ ಮಾಡಿಸಿದಿರಿ? ಸುತ್ತಲೂ ಮಚಾನ್ ಮುಚ್ಚಿಸಿ ಒಂದೇ ಕಡೆ ಅತ್ಯಂತ ಸ್ವಲ್ಪ ಸ್ಥಳವನ್ನೇ ಬಿಡಿಸಿದ್ದೀರಿ. ಹುಲಿಯು ಅಲ್ಲಿಗೆ ಎದುರಾಗಿಯೇ ಬರಬೇಕಲ್ಲಾ! ಮತ್ತೆಲ್ಲಿಯಾದರೂ ಬಂದರೆ ನಾವು ಹೊಡೆಯುವುದಕ್ಕೆ ಆಸ್ಪದವೇ ಇಲ್ಲವಲ್ಲಾ! ಹೀಗೇಕೆ ಮಾಡಿಸಿದಿರಿ? ಹೇಳಿ" ಎಂದರು. ಕೊನೆಗೆ ನಿರ್ವಾಹವಿಲ್ಲದೆ ಆ ಅಧಿಕಾರಿಯವರು, "ಕಾಡಿನಲ್ಲಿ ಹತ್ತು ಸಲ ಸುತ್ತಿ ನೋಡಿದರೆ, ನಾನು ಮಾಡಿಸಿರುವ ಏರ್ಪಾಡೇ ಸರಿಯೆಂತ ತಿಳಿಯುತ್ತೆ, ಮಹಾಸ್ವಾಮಿ. ನಾನು ಸರಿಯಾಗಿ ಮಾಡಿಸಿದ್ದೇನೆಂತಲೇ ತಿಳಿದುಕೊಂಡಿದ್ದೇನೆ. ಇಷ್ಟರ ಮೇಲೆ ತಪ್ಪಾಗಿದ್ದರೆ ಕ್ಷಮಿಸಬೇಕು, ಮಹಾಸ್ವಾಮಿ" ಎಂದರು. ಆ ಉತ್ತರದಿಂದ ಮಹಾಸ್ವಾಮಿಯವರಿಗೆ ಸಂದೇಹನಿವೃತ್ತಿಯಾಗಿ ಅವರೆಷ್ಟು ಮೇಧಾವಿಗಳೆಂಬುದನ್ನರಿತು ಮನಸ್ಸು ಪ್ರಫುಲ್ಲವಾಯಿತು. ಮಹಾಸ್ವಾಮಿಯವರು ನಕ್ಕು, "ಈಗ ಒಂದು ಸಲ ಕಾಡಿನಲ್ಲಿ ಸುತ್ತಿ ಬಂದುದಾಯಿತು. ಇನ್ನು ಒಂಬತ್ತು ಸಲ ಸುತ್ತಬೇಕೋ ಹಾಗಾದರೆ? ಅಲ್ಲಿಗೆ ತಾನೇ ನೀವು ಹೇಳಿದಂತೆ ಹತ್ತು ಸಲ ಸುತ್ತಿದಂತಾಗುವುದು?" ಎಂದು ಅನನ್ಯ ಸುಲಭವಾದ ಸರಸವಾಣಿಯಿಂದ ಅಪ್ಪಣೆ ಕೊಡಿಸಿ ಮುಂದೆ ಚಿತ್ತೈಸಿದರು. ಅಲ್ಲಿಗೆ ಸ್ವಲ್ಪ ದೂರದಲ್ಲಿ ದೊಡ್ಡದೊಂದು

ಹೊಂಡವು ಸಿಕ್ಕಿತು. ಅದನ್ನು ದಾಟಿಕೊಂಡು ಹೋಗುವುದು ಸಾಧ್ಯವಿಲ್ಲ ದಿದ್ದರೂ ಮಹಾಸ್ವಾಮಿಯವರು ತಮ್ಮ ಪರಿವಾರದವರ ಹಿಂದೆ ಬರುತ್ತಿದ್ದ ಬೆಸ್ತನೊಬ್ಬನನ್ನು ಕುರಿತು, "ನಮ್ಮನ್ನು ಎತ್ತಿಕೊಂಡುಹೋಗಿ ಹೊಂಡದ ಆಚೆಕಡೆಗೆ ಬಿಡುತ್ತೀಯೇನೊ?" ಎಂದು ವಿನೋದಕ್ಕಾಗಿ ಪ್ರಶ್ನಿಸಿದರು. ಅವನು ಆ ಪ್ರಶ್ನೆಯ ಆಶಯವನ್ನರಿಯದೆ "ನೀರು ಭಲೇ ಆಳವಾಗೈತೆ, ಮಾಸಾಮಿ. ಆಳದ ನೀರ್ನಾಗೆ ಮಾಸಾಮಿ ತಮ್ನೂ ಎತ್ಕೊಂಡು ಹೋಗೋಕಾದಾತೆ? ಇದರ ಮ್ಯಾಗೋ, ನೀರಿನೊಳಗೆ ನೆಲದ ಅಡಿಯಾಗೆ ಕೊಳವಳಿಕೇ ಮುಳ್ಳೂ ಅವೆ" ಎಂದನು. ಆಗ ಮಹಾಪ್ರಭುಗಳವರು, "ಹೋಗಲಿ, ಬಿಡಪ್ಪ. ನಿನ್ನಿಂದ ಕೊಳವಳಿಕೆ ಮುಳ್ಳು ತುಳಿಸಿದ ಪಾಪ ನಮಗೇಕೆ ಬರಬೇಕು?" ಎಂದು ಹೇಳಿ ಅಧಿಕಾರಿಯವರ ಕಡೆಗೆ ತಿರುಗಿ, "ಇದನ್ನು ದಾಟುವಹಾಗಿಲ್ಲ. ದಾಟದೆ ಹಿಂದಕ್ಕೆ ಹೊರಟುಹೋದರೆ ಕಾಡಿನಲ್ಲಿ ಹತ್ತು ಸಲ ಸುತ್ತಲಿಲ್ಲವೆಂದು ನೀವು ಹೇಳುತ್ತೀರೋ ಏನೊ! ಇನ್ನೂ ಒಂಬತ್ತು ಸಲ ಸುತ್ತಬೇಕಾಗಿದೆ. ಈಗೇನು ಮಾಡುವುದು?" ಎಂದು ಪ್ರಶ್ನೆಮಾಡಿ ಕರುಣಾಪೂರಿತ ದೃಷ್ಟಿಯಿಂದ ನೋಡಿ ನಕ್ಕರು. ಆ ಬಳಿಕ ಆ ಅಧಿಕಾರಿಯವರು, "ಮಚಾನ್ ಸರಿಯಾಗಿದೆ, ಮಹಾ ಸ್ವಾಮಿ, ಸುತ್ತಲೂ ಬಯಲಾಗಿದೆ. ಇಲ್ಲೇ ಗಿಡಗಳು ಬೆಳೆದಿರುವುದೆಲ್ಲಾ. ಮಚಾನ್ ಇರುವ ಭಾಗಕ್ಕೆ ಎದುರಾಗಿಯೇ ದಟ್ಟವಾಗಿಯೂ ಎತ್ತರ ವಾಗಿಯೂ ಗಿಡಗೆಂಟೆಗಳು ಬೆಳೆದಿವೆ. ಹುಲಿ ಬಂದರೆ ಅಲ್ಲಿಂದಲೇ ಮಚಾನ್ ಕಡೆಗೆ ಬರುತ್ತದೆ. ಅದಕ್ಕಾಗಿ ಆ ಭಾಗದಲ್ಲಿ ಮರೆಮಾಡಿಸಿ ಬಿಡುಗಂಡಿಗಳನ್ನು ಬಿಡಿಸಿ ಬಂದೂಕದಿಂದ ಹೊಡೆಯಲು ಅಣಿಮಾಡಿ ಸಿದ್ದೇನೆ. ಮಚಾನ್ ಪಕ್ಕಗಳಲ್ಲಿ ಮತ್ತು ಹಿಂಭಾಗದಲ್ಲಿ ಪೂರ್ತಿಯಾಗಿ ಮರೆಮಾಡಿಸಿ ಮುಚ್ಚಿಸಿಬಿಟ್ಟಿದ್ದೇನೆ. ಮಚಾನ್ ಕಟ್ಟಿರುವ ಮರದ ಹಿಂಭಾಗದಲ್ಲಿ ಬಟ್ಟಬಯಲು; ಎತ್ತರದ ದಿಣ್ಣೆ. ದಿಣ್ಣೆಯ ಮೇಲೇನಾ ದರೂ ಹುಲಿ ಬಂದು ನಿಂತು ಮಚಾನ್ ಮೇಲೆ ಜನರಿರುವುದನ್ನು ಕಂಡು ಓಡಿಹೋದೀತೆಂತ, ಮುಂಭಾಗದ ಹೊರತು ಮಚಾನ್ ಸುತ್ತಲೂ ಸೊಪ್ಪುಗಳಿಂದ ಮರೆಮಾಡಿಸಿಬಿಟ್ಟಿದ್ದೇನೆ; ಪೂರ್ತಿ ಮುಚ್ಚಿಸಿಬಿಟ್ಟಿದ್ದೇನೆ. ನನ್ನ ಬುದ್ಧಿ ಓಡುವಷ್ಟು ದೂರವೂ ಓಡಿಸಿ ಮಚಾನ್ ಏರ್ಪಾಡೆಲ್ಲ ಮಾಡಿಸಿಬಿಟ್ಟಿದ್ದೇನೆ, ಮಹಾಸ್ವಾಮಿ" ಎಂದರು. ಮಹಾಸ್ವಾಮಿಯವರು ನಗುತ್ತ, "ಸರಿ. ಸರಿ. ಅದೆಲ್ಲಾ ಮೊದಲೇ ಅರ್ಥವಾಯಿತು. ಬುದ್ಧಿ ಓಡಿಸಿ ಮಾಡಿಸಿದ್ದೀರೋ ಅಥವಾ ಅಕಸ್ಮಾತ್ತಾಗಿ ಇದೆಲ್ಲಾ ನಡೆದುಹೋಯಿತೋ — ಎಂಬುದನ್ನು ತಿಳಿದುಕೊಳ್ಳುವುದಕ್ಕಾಗಿಯೇ

ಅಸಮಾಧಾನಪಟ್ಟಂತೆ ತೋರಿಸಿಕೊಂಡು ನಾವು ಹಾಗೆಲ್ಲಾ ಕೇಳಿದುದೂ ಕೂಡ'' ಎಂದು ಅಪ್ಪಣೆ ಕೊಡಿಸಿದರು. ಕೈಕೆಳಗಿನವರ ಸ್ಥಾನಕ್ಕೂ ಮಹಾರಾಜಪದವಿಗೂ ಇರುವ ಮಹತ್ತರವಾದ ಅಂತರವನ್ನೇ ಗಮನಿಸದೆ ಅವರಲ್ಲಿ ಕೃಪೆತೋರಿ ಸ್ನೇಹಪ್ರಪತ್ತಿಯಿಂದ ಹಾಸ್ಯವಚನಗಳನ್ನಾಡುವ ಈ ಬಗೆಯ ದೊಡ್ಡ ಗುಣವು ಅಮೋಘವಾದುದು. ಇದು ಮಹಾ ವ್ಯಕ್ತಿಗಳ ಶ್ರೇಷ್ಠ ಗುಣ.

ಒಂದು ಸಲ, ಪ್ರಾತಃಕಾಲದ ವೇಳೆಯಲ್ಲಿ ಮಹಾಪ್ರಭುಗಳವರು ತಾವೇ ಕುದುರೆಯನ್ನು ಹಿಡಿದು ನಡೆಯಿಸಿಕೊಂಡು ಬಿಡಾರದಿಂದ ಹೊರಗೆ ದಯಮಾಡಿದರು. ಕೆಲವು ಮಂದಿ ಹಳ್ಳಿಯವರು ನಿಂತಿದ್ದುದನ್ನು ಕಂಡು, ''ಏಕೆ ಬಂದಿದ್ದೀರಿ?'' ಎಂದು ಪ್ರಶ್ನೆಮಾಡಿದರು. ಸಾಮಾನ್ಯ ವಾದ ಉಡುಪನ್ನು ಧರಿಸಿ ಕುದುರೆಯನ್ನು (ಲಗಾಮನ್ನು ಹಿಡಿದು) ನಡೆಯಿಸಿಕೊಂಡು ಬರುತ್ತಿದ್ದವರಾರೆಂಬುದನ್ನರಿಯದೆ ಹಳ್ಳಿಯವರು ''ನಮ್ಮ ಧೊರೆಗಳ ದರ್ಶಣಕ್ಕೆ ಬಂದಿದ್ದೀವಿ. ಧೊರೆಗಳು ಇರೋದೆಲ್ಲಿ?'' ಎಂದು ಕೇಳಲು ಮಹಾಸ್ವಾಮಿಯವರು, ''ಹಿಂದೆ ಬರುತ್ತಾರೆ. ಈಗಲೇ ಬರುತ್ತಾರೆ'' ಎಂದು ಅಪ್ಪಣೆ ಕೊಡಿಸಿ ಕುದುರೆಯನ್ನೇರಿ ಚಿತ್ತೈಸಿದರು. ಆಳಿದ ಮಹಾಸ್ವಾಮಿಯವರ ಪರಿವಾರದವರು ಆ ಬಳಿಕ ಒಬ್ಬೊಬ್ಬರಾಗಿ ಬಂದಾಗ ಹಳ್ಳಿಯವರಲ್ಲೊಬ್ಬನು, ''ಇವರೊಬ್ಬರ ಮೊಕದಾಗೂ ಅವರಷ್ಟು ಖಳೆಯೇ ಇಲ್ಲ. ಅವರೇ ಧೊರೆಗಳಿರಬೇಕೊ!'' ಎಂದನು. ಮತ್ತೊಬ್ಬನು ಪರಿವಾರದ ಅಧಿಕಾರಿಯವರನ್ನೇ ಕುರಿತು, ''ನಿಮ್ಮ ಪೈಕಿ ಯಾರು, ಬುದ್ಧಿ, ಧೊರೆಗಳು? ಮುಂದೆ ಹೋದೋರು ಹೇಳಿದ್ರೂ, ಧೊರೆಗಳು ಹಿಂದೆ ಬರ್ತಾರೇ ಅಂತ'' ಎಂದು ಹೇಳಿ ಅವರ ಉತ್ತರದಿಂದ ಮೊಟ್ಟ ಮೊದಲು—ಇತರರೆಲ್ಲರಿಗಿಂತ ಬಹಳ ಮುಂಚಿತವಾಗಿ—ದಯಮಾಡಿದ್ದವರೇ ಮಹಾಪ್ರಭುಗಳೆಂದು ತಿಳಿದುಕೊಂಡು ಇತರರಿಗೂ ಆ ಸಂಗತಿಯನ್ನು ತಿಳಿಸಿದನು. ಅನಂತರ ಅವರೆಲ್ಲರೂ ಸಂತೋಷ ಸಡಗರಗಳಿಂದ ಮಾತ ನಾಡುತ್ತಿದ್ದು ಪುನಃ ಮಹಾಪ್ರಭುಗಳವರ ಸವಾರಿಯು ಚಿತ್ತೈಸಿದಾಗ ಹರ್ಷಾತಿಶಯದಿಂದ ಕೋಲಾಹಲ ಮಾಡಿ ಅಡ್ಡಬಿದ್ದರು. ಅಂದು ಅವರೆಲ್ಲರಿಗೂ ಮಿಷ್ಟಾನ್ನ ಭೋಜನವಾದುದಲ್ಲದೆ ಪಾರಿತೋಷಿಕಗಳೂ ಲಭಿಸಿದುವು. ಇದು ನಡೆದುದು ಕೆಮ್ಮಣ್ಣಗುಂಡಿಯಲ್ಲಿ.

ಒಂದು ದಿನ ಮಹಾಪ್ರಭುಗಳವರು ಸಮ್ಮುಖದ ಅಧಿಕಾರಿಗಳನ್ನೆಲ್ಲ ಕರೆದುಕೊಂಡು ಇಪ್ಪತ್ತು ಮೈಲಿಗಳಿಗಿಂತಲೂ ಹೆಚ್ಚು ದೂರ ಕಾಲು ನಡಿಗೆಯಲ್ಲಿ ಸುತ್ತಿ ಮಧ್ಯಾಹ್ನದ ವೇಳೆಗೆ ಕೆಮ್ಮಣ್ಣಗುಂಡಿಗೆ ಹಿಂತಿರುಗಿದರು.

ಭೋಜನಾನಂತರ ಸಮ್ಮುಖದ ಅಧಿಕಾರಿಗಳೆಲ್ಲರೂ ಆಯಾಸದ ದೆಸೆಯಿಂದ ಗಾಢವಾಗಿ ನಿದ್ರಿಸುತ್ತಿದ್ದಾಗ ಅವರುಗಳ ಬಿಡಾರದ ಬಳಿಗೆ ಮಹಾಸ್ವಾಮಿಯವರು ದಯಮಾಡಿ ಅಮಟೆಕಾಯಿಗಳ ಗಾತ್ರವಿರತಕ್ಕ ಕಾಡುಪತ್ರೆ ಕಾಯಿಗಳನ್ನು ಕಿಟಕಿಗಳಿಂದ ಒಳಕ್ಕೆಸೆದರು. ನಿದ್ರಿಸುತ್ತಿದ್ದವರಾರಿಗೂ ಎಚ್ಚರವಾಗಲಿಲ್ಲ. ಆದರೆ ಅವರು ನಿದ್ರೆಯಿಂದೆಚ್ಚೆತ್ತಮೇಲೆ ಕಾಡುಪತ್ರೆ ಕಾಯಿಗಳು ಒಳಗೆಲ್ಲ ಬಿದ್ದಿದ್ದುದನ್ನು ಕಂಡು ಆಶ್ಚರ್ಯಭರಿತರಾಗಿ ಆ ಸೋಜಿಗದ ವಾರ್ತೆಯನ್ನು ಸನ್ನಿಧಿಗೆ ಅರಿಕೆಮಾಡಿದರು. ಆಳಿದ ಮಹಾಸ್ವಾಮಿಯವರೂ ಆಶ್ಚರ್ಯವನ್ನು ಸೂಚಿಸಿ ಸ್ವಲ್ಪ ಹೊತ್ತು ಆಲೋಚನಾ ಮಗ್ನರಾಗಿದ್ದಂತೆ ನಟಿಸಿ, "ಇಲ್ಲಿ ಮನೆಗಳಿಗೆ ಶಾಸ್ತ್ರೋಕ್ತವಾಗಿ ಸರಿಯಾಗಿ ಗೃಹಪ್ರವೇಶ ನಡೆಯಲಿಲ್ಲವೋ ಏನೊ! ಸರಿಯಾಗಿ ಭೂತ ಶಾಂತಿಯಾದಹಾಗಿಲ್ಲ. ಅಲ್ಲವೆ?" ಎಂದು ಕೇಳಿದರು. ಹಿರಿಯ ಅಧಿಕಾರಿಯವರು, "ಉಂಟೆ, ಮಹಾಸ್ವಾಮಿ? ಶಾಸ್ತ್ರಿಗಳು ಸರಿಯಾಗಿ ಶಾಂತಿ ಮಾಡಿಸಿದ್ದಾರೆ" ಎಂದು ಉತ್ತರ ಹೇಳಿದಾಗ ಮಹಾಪ್ರಭುಗಳವರು, "ಇಲ್ಲ; ಇಲ್ಲ. ಇಲ್ಲಿ ಪಿಶಾಚಗಳೂ ಭೂತಗಳೂ ಇವೆಯಂತೆ. ಮನೆಯೊಳಕ್ಕೆ ಕೂಡ ಕಾಯಿಗಳನ್ನೆಸೆಯುವುವಂತೆ; ಎಸೆದಿವೆಯಂತೆ" ಎಂದು ಅಪ್ಪಣೆ ಕೊಡಿಸಿದರು. ಕೆಲವರು ಭೂತಗಳಲ್ಲಿ ತಮಗೆ ನಂಬಿಕೆಯಿರಲಿಲ್ಲವೆಂದರು. ಕೆಲವರು ಕಾಯಿಗಳೆಲ್ಲ ಮನೆಯೊಳಕ್ಕೆ ಬಿದ್ದಿದ್ದುದು ಭೂತಚೇಷ್ಟೆಯಿಂದಲೇ—ಎಂದು ಸಿದ್ಧಾಂತ ಮಾಡಿದರು. ಮಾರನೆಯ ದಿನ ಭೂತಶಾಂತಿಗೆಂದು ಮಹಾಸ್ವಾಮಿಯವರು ಸಂತರ್ಪಣೆ ಮಾಡಿಸಿದುದರಿಂದ ಪುಷ್ಕಳ ಭೋಜನವು ಲಭಿಸಿದ ಮೇಲಂತೂ ಅವರಲ್ಲನೇಕರಿಗೆ ಭೂತಚೇಷ್ಟೆಯಲ್ಲಿ ನಂಬಿಕೆಯು ದೃಢವಾಯಿತು. ಆ ಬಳಿಕ ಮತ್ತೊಂದು ದಿನ ಮಹಾಸ್ವಾಮಿಯವರು ಅವರೆಲ್ಲರೂ ಹಿಂದಿನಂತೆಯೇ ಆಯಾಸದಿಂದ ಬಳಲುವಷ್ಟು ದೂರ ಸಂಚಾರಮಾಡಿ ಬಂದು ಅವರೆಲ್ಲರೂ ಭೋಜನಾನಂತರ ಮಾರ್ಗಾಯಾಸದ ದೆಸೆಯಿಂದ ಗೊರಕೆ ಹೊಡೆಯುತ್ತ ನಿದ್ರಿಸುತ್ತಿದ್ದಾಗ ಚಿನ್ನದ ಗಡಿಯಾರಗಳು, ಕರ ವಸ್ತ್ರಗಳು ಚಿನ್ನದ ಗುಂಡಿಗಳು, ಮುಂತಾದ—ಅಲ್ಲಲ್ಲಿದ್ದ—ಅವರ ಸಾಮಾನುಗಳನ್ನೆಲ್ಲ ತೆಗೆದುಕೊಂಡು ತೆರಳಿದರು. ಅವರುಗಳು ನಿದ್ರೆಯಿಂದೆಚ್ಚೆತ್ತ ಮೇಲೆ ಕೋಲಾಹಲಕ್ಕುಪಕ್ರಮವಾಯಿತು. ಒಬ್ಬರು, "ಪೋಲೀಸಿಗೆ ತಿಳಿಸಬೇಕು" ಎಂದರು. ಮತ್ತೊಬ್ಬರು, "ಸಿ. ಐ. ಡಿ.ಗಳನ್ನು ಕರೆಯಿಸಬೇಕು" ಎಂದರು. ಮಗದೊಬ್ಬರು, "ಹುಜೂರು ಸನ್ನಿಧಾನಕ್ಕೆ ಅರಿಕೆ ಮಾಡಬೇಕು.

ಹುಜೂರು ಕ್ಯಾಂಪಿನಲ್ಲಿ ಹೀಗೆ ಕಳ್ಳತನವೆಂದರೇನು ? ಹೊರಬಾಗಿಲುಗಳಲ್ಲಿ ಪಹರೆಯವರಿದ್ದೂ ದಂಡ" ಎಂದರು. ಹೀಗೆ ಒಬ್ಬೊಬ್ಬರೂ ಒಂದೊಂದು ವಿಧದಲ್ಲಿ ಮಾತನಾಡಿ ಕೊನೆಗೆ ಮಹಾಪ್ರಭುಗಳವರ ಸನ್ನಿಧಿಯಲ್ಲಿ, "ಕಳ್ಳತನ ನಡೆದುಹೋಗಿದೆ, ಮಹಾಸ್ವಾಮಿ. ಪೋಲೀಸಿಗೆ ಹೇಳಿ ಕಳುಹಿಸಲು ಅಪ್ಪಣೆಯಾಗಬೇಕು" ಎಂದರು. ಮಹಾಸ್ವಾಮಿಯವರು ನಗುತ್ತ, "ಆ ದಿನ ನಾವು ಹೇಳಿದಾಗ ಭೂತ ಚೇಷ್ಟೆಯಿದೆಯೆಂಬುದರಲ್ಲಿ ನಿಮಗೆ ಕೆಲವರಿಗೆ ನಂಬಿಕೆ ಬರಲಿಲ್ಲ. ಇಲ್ಲಿಗೆ ಕಳ್ಳರು ಬರುವುದೆಂದರೇನು? ಅದೂ ಹಗಲಿನಲ್ಲಿ. ಇಲ್ಲಿ ಭೂತಚೇಷ್ಟೆಯಿಂದಲೇ ಹೀಗಾಗಿರಬೇಕು" ಎಂದರು. ಅನಂತರ ಒಂದು ಕರವಸ್ತ್ರವನ್ನು ತೆಗೆದು, "ಇದು ನಮ್ಮ ಕರವಸ್ತ್ರ" ಎಂದೂ, ಒಂದು ಗಡಿಯಾರವನ್ನು ತೆಗೆದು ತೋರಿಸಿ, "ನಮ್ಮ ಈ ಗಡಿಯಾರ ಸರಿಯಾಗಿ ನಡೆಯುತ್ತಿಲ್ಲ. ಸರಿಮಾಡಿಸಿ ತರಿಸಿ" ಎಂದೂ, ಇದೇ ರೀತಿ ಒಂದೊಂದು ಸಾಮಾನನ್ನೂ ಕೊಟ್ಟು, "ಭೂತ ಚೇಷ್ಟೆಯಲ್ಲಿ ನಿಮ್ಮಲ್ಲಿ ಕೆಲವರಿಗೆ ನಂಬಿಕೆಯಿಲ್ಲ. ಭೂತ ಚೇಷ್ಟೆಯಲ್ಲಿ ನಂಬಿಕೆಯಿರುವವರ ಮೇಲ್ಪಜ್ತಿಯನ್ನೂ ನಿಮ್ಮಲ್ಲಿ ಇತರರು ಅನುಸರಿಸುವುದಿಲ್ಲ. ಭೂತ ಚೇಷ್ಟೆಯಿಲ್ಲದೆ ನಿಮ್ಮ ಸಾಮಾನುಗಳು ಕಳವಾದ ಬಗೆಯಾದರೂ ಹೇಗೆ? ಇಲ್ಲಿ ಭೂತಗಳು ಖಂಡಿತ ಇರಲೇಬೇಕು" ಎಂದು ಅಪ್ಪಣೆ ಕೊಡಿಸಿ ನಕ್ಕರು. ಈ ಬಗೆಯಲ್ಲಿ ವಿನೋದವಾಡಲ ಸರಳಹೃದಯದ ಪರಾಕಾಷ್ಠೆಯೇ ಆವಶ್ಯಕವೆಂಬುದನ್ನು ಸಮಸ್ತರೂ ಒಪ್ಪಲೇಬೇಕು.

ಕಾಡುಕುರುಬರಂತಹ ಕೇವಲ ಅಸಂಸ್ಕೃತರಾದ ಜನರಲ್ಲಿ ಕೂಡ ಮಹಾಸ್ವಾಮಿಯವರು ಕೃಪಾನ್ವಿತರಾಗಿ ಸಹೃದಯತೆಯಿಂದ ವರ್ತಿಸುತ್ತಿದ್ದರು. ಈಗ್ಗೆ ಮೂರು ನಾಲ್ಕು ವರ್ಷಗಳ ಹಿಂದೆ ಮಹಾಸ್ವಾಮಿಯವರು ಕಲ್ಹತ್ತಗಿರಿಯ ಕಾಡಿನಲ್ಲಿದ್ದ ಒಂದು ದೇವಾಲಯದ ಬಳಿಗೆ ಹೋದಾಗ ಅವರಿಗೂ ಅಲ್ಲಿದ್ದ ಕಾಡು ಕುರುಬನಿಗೂ ನಡೆದ ಸಂಭಾಷಣೆಯ ವಿವರವಿದು :—

"ಈ ದೇವರು ಯಾವುದು ?"

"ವೀರಭದ್ರ, ಬುದ್ದಿ."

"ವೀರಭದ್ರನೆಂದರೇನಯ್ಯ ?"

"ಅದೂ ಗೊತ್ತಿಲ್ಲವಾ? ವೀರಭದ್ರ ಎಂದರೇ ಬೆಂಕಿ, ಬೆಂಕಿ, ಬೆಂಕೀ ಬುದ್ಧಿ"

"ಬೆಂಕಿಯೆ ? ಹಾಗೆಂದರೆ ? ಈ ದೇವಸ್ಥಾನದೊಳಗೆ ಏನಾದರೂ ಆಗುವುದೇನಯ್ಯ ?"

"ಅಗ್ತೈತೆ. ಒಂದೊಂದು ರಾತ್ರಿ ಬೆಂಕೀ ಬೆಳಕೂ ಹೊಡ್ತಾ ಹೊಡೆದೇ ಅಂದ್ರೆ ಒಳಗೇ ಹೊರಗೇ ಎಲ್ಲಾ ಕಡೆಯೂ ಬೆಳಕ್ ಬೆಳಾಕ್ ಅಗ್ತದಂತೆ. ನಮ್ಮ ಹಿಂದಿನವ್ರೆಲ್ಲಾ ನೋಡಿದ್ರಂತೆ."

"ದೇವಸ್ಥಾನದ ಬಾಗಿಲು ಮುಚ್ಚಿದೆಯಲ್ಲಯ್ಯಾ?"

"ಪೂಜಾರಿ ಬಂದು ತೆಗೀತಾನೆ? ಇಲ್ಲೀ ಇರಿ. ನೀವು ಯಾವೂರೋರೋ ಏನೋ ಎಂತೋ! ಇದೊಂದೂ ಗೊತ್ತೇ ಇಲ್ವಾ ಎಂದೆ."

"ನೀನೇ ಬಾಗಿಲು ತೆಗೆಯಬಾರದೇನಯ್ಯ?"

"ಪೂಜಾರಿ ಬರಲಿ. ನಾನೂ ಕಾದಿದ್ದೀನಿ. ನಾನು ತಾನಾ ಮಾಡಿಲ್ಲ. ಪೂಜಾರೀ ಹಂಗೆ ನೀರು ಮುಳ್ಗಿ ತಾನಾ ಮಾಡಿ ಮಡೀ ಬಟ್ಟೆ ಉಟ್ಟಿಲ್ಲ. ನಾನು ಬಾಗಿಲು ತೆಗೆದು ಒಳಗೆ ಹೋದ್ರೆ ಬೆಂಕೀ ಒಡೆಯ ಸುಮ್ಕೇ ಬಿಡ್ತಾನಾ? ಬೆಂಕೀ ಒಡೆಯ ಅದರಾಗೂ."

"ನಾವು ಬೆಳಗ್ಗೆ ಸ್ನಾನ ಮಾಡಿದ್ದೇವೆ. ನಾವು ಬಾಗಿಲು ತಳ್ಳಿ ತೆಗೆಯಬಹುದೇನಯ್ಯ? ಒಳಕ್ಕೆ ಹೋಗಬಹುದೇನಯ್ಯ?"

"ಉಂಟಾ ಬುದ್ದಿ! ಈಗ ಮಧ್ಯಾಹ್ನವಾಗ್ತಾ ಬಂದೈತೆ. ಬೆಳಗ್ಗೆ ತಾನಾ ಮಾಡಿದ್ರೇ ಈಗ ತಾನಾ ಮಾಡಿದ್ದಂಗಾದಾತಾ? ತಣ್ಣೀರು ಮುಳುಗಿ ಬಂದೇ ಪೂಜಾರೀನೇ ಬಾಗಿಲು ತೆಗೀಬೇಕು. ಅವನೇ ಒಳಗ್ಹೋಗಬೇಕು. ನೀವು ತೆಗೀಬೇಡಿ. ಈ ದೇವರು ಬೆಂಕಿ ಯಂಥಾ ದೇವರು. ಕೆಟ್ಟದ್ದಾದಾತು, ಹೋಗಬೇಡಿ ಬುದ್ದಿ."

"ಹೋಗಲಿ, ಮುಚ್ಚಿರುವ ಬಾಗಿಲಿಗೇ ಆದರೂ ನಾವು ಕೈ ಮುಗಿದು ಹೋಗಬಹುದೇನಯ್ಯ?"

"ಕೈ ಮುಗ್ದೀ ಏಕೆ, ಬಾಗಲ್ಗೆ ಪೂಜೇನೂ ಮಾಡಿ ಹೋಗಿ, ದೇವರು. ನಾನು ಇಲ್ಲೆಲ್ಲಾವೇ ಸುತ್ತಿ ಹೂವಾ ತಂದ್ಕೊಡ್ತೀನಿ. ಬಾಗಲು ಮಾತ್ರ ತೆಗೀಬೇಡಿ. ತಣ್ಣೀರು ಮುಳುಗಿ ಬಂದು ಪೂಜಾರೀನೇ ಬಾಗಲು ತೆಗೀಬೇಕು. ಬೆಂಕೀ ವೀರಭದ್ರ ಬೆಂಕಿಯಂಥಾ ದೇವರು."

ಒಂದು ಸಲ, ಕಾಕನಕೋಟೆ ಕಾಡಿನಲ್ಲಿ ಒಂದು ಆನೆಯ ಸಲಗವು ಹಿಂಡಿನಿಂದ ತಪ್ಪಿಸಿಕೊಂಡು ಬಂದು ದಾಂಧಲೆಮಾಡಿ ಜನರನ್ನು ಸಿಗಿದು ಹಾಕುತ್ತಿದ್ದುದಾಗಿ ವರ್ತಮಾನ ಬಂದಾಗ ಅದನ್ನು ಗುಂಡಿನಿಂದ ಹೊಡೆದು ಪ್ರಜೆಗಳ ಪ್ರಾಣವನ್ನುಳಿಸುವುದಕ್ಕಾಗಿ ಮಹಾಸ್ವಾಮಿಯವರು ಆನೆಯ ಮೇಲೆ ಕುಳಿತು ಚಿತ್ತೈಸಿದರು. ಕಾಡಾನೆಯು ಓಡಾಡುತ್ತಿದ್ದ ಸ್ಥಳಕ್ಕೆ ತಲಪಿದ ಮೇಲೆ, "ಎಲ್ಲಿ, ಬಂದೂಕ ಕೊಡಿ" ಎಂದು ಕೇಳಿದಾಗ ಜೊತೆಯಲ್ಲಿದ್ದ ಪರಿವಾರದವರಲ್ಲೊಬ್ಬರು ಬಂದೂಕವನ್ನು ಕೊಟ್ಟರು. ಆದರೆ ಅದಕ್ಕೆ ತೋಟಾ ಹಾಕಿರಲಿಲ್ಲ. ಮಹಾಸ್ವಾಮಿಯವರು ಅದಕ್ಕಾಗಿ ಹಾಸ್ಯಮಾಡಿ, "ಬಂದೂಕವನ್ನೇನೊ ಕೈಗೆ ಕೊಟ್ಟರಿ. ಆದರೆ ತೋಟಾ ಗಳನ್ನು ಮಾತ್ರ ನಿಮ್ಮಲ್ಲೇ ಉಳಿಸಿಕೊಂಡಿದ್ದೀರಿ. ಸಲಗ ಯಾವ ಕ್ಷಣ ದಲ್ಲಿ ಬರುವುದೋ ಏನೊ! ತೋಟಾಗಳನ್ನೂ ಇಲ್ಲಿ ಕೊಡಿ" ಎಂದು

ಹುಜೂರು ಕ್ಯಾಂಪಿನಲ್ಲಿ ಹೀಗೆ ಕಳ್ಳತನವೆಂದರೇನು? ಹೊರಬಾಗಿಲುಗಳಲ್ಲಿ ಪಹರೆಯವರಿದ್ದೂ ದಂಡ" ಎಂದರು. ಹೀಗೆ ಒಬ್ಬೊಬ್ಬರೂ ಒಂದೊಂದು ವಿಧದಲ್ಲಿ ಮಾತನಾಡಿ ಕೊನೆಗೆ ಮಹಾಪ್ರಭುಗಳವರ ಸನ್ನಿಧಿಯಲ್ಲಿ, "ಕಳ್ಳತನ ನಡೆದುಹೋಗಿದೆ, ಮಹಾಸ್ವಾಮಿ. ಪೋಲೀಸಿಗೆ ಹೇಳಿ ಕಳುಹಿಸಲು ಅಪ್ಪಣೆಯಾಗಬೇಕು" ಎಂದರು. ಮಹಾಸ್ವಾಮಿಯವರು ನಗುತ್ತ, "ಆ ದಿನ ನಾವು ಹೇಳಿದಾಗ ಭೂತ ಚೇಷ್ಟೆಯಿದೆಯೆಂಬುದರಲ್ಲಿ ನಿಮಗೆ ಕೆಲವರಿಗೆ ನಂಬಿಕೆ ಬರಲಿಲ್ಲ. ಇಲ್ಲಿಗೆ ಕಳ್ಳರು ಬರುವುದೆಂದರೇನು? ಅದೂ ಹಗಲಿನಲ್ಲಿ. ಇಲ್ಲಿ ಭೂತಚೇಷ್ಟೆಯಿಂದಲೇ ಹೀಗಾಗಿರಬೇಕು" ಎಂದರು. ಅನಂತರ ಒಂದು ಕರವಸ್ತ್ರವನ್ನು ತೆಗೆದು, "ಇದು ನಮ್ಮ ಕರವಸ್ತ್ರ" ಎಂದೂ, ಒಂದು ಗಡಿಯಾರವನ್ನು ತೆಗೆದು ತೋರಿಸಿ, "ನಮ್ಮ ಈ ಗಡಿಯಾರ ಸರಿಯಾಗಿ ನಡೆಯುತ್ತಿಲ್ಲ. ಸರಿಮಾಡಿಸಿ ತರಿಸಿ" ಎಂದೂ, ಇದೇ ರೀತಿ ಒಂದೊಂದು ಸಾಮಾನನ್ನೂ ಕೊಟ್ಟು, "ಭೂತ ಚೇಷ್ಟೆಯಲ್ಲಿ ನಿಮ್ಮಲ್ಲಿ ಕೆಲವರಿಗೆ ನಂಬಿಕೆಯಿಲ್ಲ. ಭೂತ ಚೇಷ್ಟೆಯಲ್ಲಿ ನಂಬಿಕೆಯಿರುವವರ ಮೇಲ್ಪಂಕ್ತಿಯನ್ನೂ ನಿಮ್ಮಲ್ಲಿ ಇತರರು ಅನುಸರಿಸುವುದಿಲ್ಲ. ಭೂತ ಚೇಷ್ಟೆಯಿಲ್ಲದೆ ನಿಮ್ಮ ಸಾಮಾನುಗಳು ಕಳವಾದ ಬಗೆಯಾದರೂ ಹೇಗೆ? ಇಲ್ಲಿ ಭೂತಗಳು ಖಂಡಿತ ಇರಲೇಬೇಕು" ಎಂದು ಅಪ್ಪಣೆ ಕೊಡಿಸಿ ನಕ್ಕರು. ಈ ಬಗೆಯಲ್ಲಿ ವಿನೋದವಾಡಲ ಸರಳಹೃದಯದ ಪರಾಕಾಷ್ಠೆಯೇ ಆವಶ್ಯಕವೆಂಬುದನ್ನು ಸಮಸ್ತರೂ ಒಪ್ಪಲೇಬೇಕು.

ಕಾಡುಕುರುಬರಂತಹ ಕೇವಲ ಅಸಂಸ್ಕೃತರಾದ ಜನರಲ್ಲಿ ಕೂಡ ಮಹಾಸ್ವಾಮಿಯವರು ಕೃಪಾನ್ವಿತರಾಗಿ ಸಹೃದಯತೆಯಿಂದ ವರ್ತಿಸುತ್ತಿದ್ದರು. ಈಗ್ಗೆ ಮೂರು ನಾಲ್ಕು ವರ್ಷಗಳ ಹಿಂದೆ ಮಹಾಸ್ವಾಮಿಯವರು ಕಲ್ಹತ್ತಗಿರಿಯ ಕಾಡಿನಲ್ಲಿದ್ದ ಒಂದು ದೇವಾಲಯದ ಬಳಿಗೆ ಹೋದಾಗ ಅವರಿಗೂ ಅಲ್ಲಿದ್ದ ಕಾಡು ಕುರುಬನಿಗೂ ನಡೆದ ಸಂಭಾಷಣೆಯ ವಿವರವಿದು:—

"ಈ ದೇವರು ಯಾವುದು?"

"ವೀರಭದ್ರ, ಬುದ್ಧಿ."

"ವೀರಭದ್ರನೆಂದರೇನಯ್ಯ?"

"ಅದೂ ಗೊತ್ತಿಲ್ಲವಾ? ವೀರಭದ್ರ ಎಂದರೇ ಬೆಂಕಿ, ಬೆಂಕಿ, ಬೆಂಕೀ ಬುದ್ಧಿ"

"ಬೆಂಕಿಯೆ? ಹಾಗೆಂದರೆ? ಈ ದೇವಸ್ಥಾನದೊಳಗೆ ಏನಾದರೂ ಆಗುವುದೇನಯ್ಯ?"

"ಆಗ್ತೈತೆ. ಒಂದೊಂದು ರಾತ್ರಿ ಬೆಂಕೀ ಬೆಳಕೂ ಹೊಡ್ತಾ ಹೊಡೆದೇ ಅಂದ್ರೆ ಒಳಗೇ ಹೊರಗೇ ಎಲ್ಲಾ ಕಡೆಯೂ ಬೆಳಕ್ ಬೆಳಾಕ್ ಆಗ್ತದಂತೆ. ನಮ್ಮ ಹಿಂದಿನವ್ರೆಲ್ಲಾ ನೋಡಿದ್ರಂತೆ."

"ದೇವಸ್ಥಾನದ ಬಾಗಿಲು ಮುಚ್ಚಿದೆಯಲ್ಲಯ್ಯಾ?"

"ಪೂಜಾರಿ ಬಂದು ತೆಗೀತಾನೆ? ಇಲ್ಲೇ ಇರಿ. ನೀವು ಯಾವೂರೋರೋ ಏನೋ ಎಂತೋ! ಇದೊಂದೂ ಗೊತ್ತೇ ಇಲ್ವಾ ಎಂದೆ."

"ನೀನೇ ಬಾಗಿಲು ತೆಗೆಯಬಾರದೇನಯ್ಯ?"

"ಪೂಜಾರಿ ಬರಲಿ. ನಾನೂ ಕಾದಿದ್ದೀನಿ. ನಾನು ತಾನಾ ಮಾಡಿಲ್ಲ. ಪೂಜಾರೀ ಹಂಗೆ ನೀರು ಮುಳ್ಗಿ ತಾನಾ ಮಾಡಿ ಮಡೀ ಬಟ್ಟೆ ಉಟ್ಟಿಲ್ಲ. ನಾನು ಬಾಗಿಲು ತೆಗೆದು ಒಳಗೆ ಹೋದ್ರೆ ಬೆಂಕೀ ಒಡೆಯ ಸುಮ್ಕೇ ಬಿಡ್ತಾನಾ? ಬೆಂಕೀ ಒಡೆಯ ಅದರಾಗೂ."

"ನಾವು ಬೆಳಗ್ಗೆ ಸ್ನಾನ ಮಾಡಿದ್ದೇವೆ. ನಾವು ಬಾಗಿಲು ತಳ್ಳಿ ತೆಗೆಯಬಹುದೇನಯ್ಯ? ಒಳಕ್ಕೆ ಹೋಗಬಹುದೇನಯ್ಯ?"

"ಉಂಟಾ ಬುದ್ದಿ! ಈಗ ಮಧ್ಯಾಹ್ನವಾಗ್ತಾ ಬಂದೈತೆ. ಬೆಳಗ್ಗೆ ತಾನಾ ಮಾಡಿದ್ರೇ ಈಗ ತಾನಾ ಮಾಡಿದ್ಹಂಗಾದಾತಾ? ತಣ್ಣೀರು ಮುಳುಗಿ ಬಂದೇ ಪೂಜಾರೀನೇ ಬಾಗಿಲು ತೆಗೀಬೇಕು. ಅವನೇ ಒಳಗ್ಹೋಗಬೇಕು. ನೀವು ತೆಗೀಬೇಡಿ. ಈ ದೇವರು ಬೆಂಕಿಯಂಥಾ ದೇವರು. ಕೆಟ್ಟದ್ದಾದಾತು, ಹೋಗಬೇಡಿ ಬುದ್ದಿ."

"ಹೋಗಲಿ, ಮುಚ್ಚಿರುವ ಬಾಗಿಲಿಗೇ ಆದರೂ ನಾವು ಕೈ ಮುಗಿದು ಹೋಗಬಹುದೇನಯ್ಯ?"

"ಕೈ ಮುಗ್ದೀ ಏಕೆ, ಬಾಗಲ್ಗೆ ಪೂಜೇನೂ ಮಾಡಿ ಹೋಗಿ, ದೇವರು. ನಾನು ಇಲ್ಲೆಲ್ಲಾವೇ ಸುತ್ತಿ ಹೂವಾ ತಂದ್ಕೊಡ್ತೀನಿ. ಬಾಗಲು ಮಾತ್ರ ತೆಗೀಬೇಡಿ. ತಣ್ಣೀರು ಮುಳುಗಿ ಬಂದು ಪೂಜಾರೀನೇ ಬಾಗಲು ತೆಗೀಬೇಕು. ಬೆಂಕೀ ವೀರಭದ್ರ ಬೆಂಕಿಯಂಥಾ ದೇವರು."

ಒಂದು ಸಲ, ಕಾಕನಕೋಟೆ ಕಾಡಿನಲ್ಲಿ ಒಂದು ಆನೆಯು ಸಲಗವು ಹಿಂಡಿನಿಂದ ತಪ್ಪಿಸಿಕೊಂಡು ಬಂದು ದಾಂಧಲೆಮಾಡಿ ಜನರನ್ನು ಸಿಗಿದು ಹಾಕುತ್ತಿದ್ದುದಾಗಿ ವರ್ತಮಾನ ಬಂದಾಗ ಅದನ್ನು ಗುಂಡಿನಿಂದ ಹೊಡೆದು ಪ್ರಜೆಗಳ ಪ್ರಾಣವನ್ನುಳಿಸುವುದಕ್ಕಾಗಿ ಮಹಾಸ್ವಾಮಿಯವರು ಆನೆಯ ಮೇಲೆ ಕುಳಿತು ಚಿತ್ತೈಸಿದರು. ಕಾಡಾನೆಯು ಓಡಾಡುತ್ತಿದ್ದ ಸ್ಥಳಕ್ಕೆ ತಲಪಿದ ಮೇಲೆ, "ಎಲ್ಲಿ, ಬಂದೂಕ ಕೊಡಿ" ಎಂದು ಕೇಳಿದಾಗ ಜೊತೆಯಲ್ಲಿದ್ದ ಪರಿವಾರದವರಲ್ಲೊಬ್ಬರು ಬಂದೂಕವನ್ನು ಕೊಟ್ಟರು. ಆದರೆ ಅದಕ್ಕೆ ತೋಟಾ ಹಾಕಿರಲಿಲ್ಲ. ಮಹಾಸ್ವಾಮಿಯವರು ಅದಕ್ಕಾಗಿ ಹಾಸ್ಯಮಾಡಿ, "ಬಂದೂಕವನ್ನೇನೊ ಕೈಗೆ ಕೊಟ್ಟಿರಿ. ಆದರೆ ತೋಟಾಗಳನ್ನು ಮಾತ್ರ ನಿಮ್ಮಲ್ಲೇ ಉಳಿಸಿಕೊಂಡಿದ್ದೀರಿ. ಸಲಗ ಯಾವ ಕ್ಷಣದಲ್ಲಿ ಬರುವುದೋ ಏನೊ! ತೋಟಾಗಳನ್ನೂ ಇಲ್ಲಿ ಕೊಡಿ" ಎಂದು

ಹೇಳಿ ನಕ್ಕರು. ಪ್ರಮಾದವಶದಿಂದ ಹೀಗೆ ತಪ್ಪುಮಾಡಿದವರ ವಿಷಯದಲ್ಲಿ ಹೀಗೆ ಹಾಸ್ಯಮಾಡಿದರೂ ಇತರ ರೀತಿಯಲ್ಲಿ ಉದ್ದೇಶಪೂರ್ವಕವಾಗಿ ತಪ್ಪುಮಾಡಿದವರ ವಿಷಯದಲ್ಲಿ ಚುಚ್ಚುನುಡಿಯನ್ನಾಡಿ ಅವರು ಬುದ್ಧಿಕಲಿಸಿರುವುದುಂಟು. ಕೆಲಸವಮಾಡದೆ ಅಲಸರಾಗಿದ್ದ ಅಧಿಕಾರಿಯವರೊಬ್ಬರು ಮಹಾಪ್ರಭುಗಳಿಗೆ ಪುಷ್ಪಮಾಲಿಕೆಯನ್ನು ಸಮರ್ಪಿಸಿದಾಗ, "ಮನಃಪೂರ್ವಕವಾಗಿ ನಿಮ್ಮನ್ನು ಅಭಿನಂದಿಸಲು ನಮಗೆ ಆಶೆ. ಅದಕ್ಕೊಂದು ಒಳ್ಳೆಯ ಅವಕಾಶವನ್ನು ಕಲ್ಪಿಸಿಕೊಟ್ಟು ನಮ್ಮನ್ನು ಸಂತೋಷಪಡಿಸಬಾರದೆ!" ಎಂದು ಅಪ್ಪಣೆಕೊಡಿಸಿದರು. ಒಂದು ಸಲ, ಮಹಾಸ್ವಾಮಿಯವರು ಕಾಕನಕೋಟೆಯ ಕಾಡಿಗೆ ಕೆಲಸದ ಮೇಲೆ ಒಬ್ಬರು ಅಮಲ್ದಾರರನ್ನು ಕರೆಯಿಸಿದ್ದರು. ಕಾಡಿನಿಂದ ಹಿಂತಿರುಗುವಾಗ ಅಮಲ್ದಾರರಿಗೆ ಒಂದು ದೊಡ್ಡ ಬುಟ್ಟಿಯ ತುಂಬ ಹಣ್ಣುಗಳನ್ನು ಕೊಡಿಸಿ ಅರಮನೆಯ ಅಧಿಕಾರಿಗಳಲ್ಲೊಬ್ಬರ ಮೋಟಾರು ಬಂಡಿಯಲ್ಲಿ ಅವರು ಹೊರಡುವಂತೆ ಆಜ್ಞಾಪಿಸಿ ಆ ಮೋಟಾರು ಬಂಡಿಯು ಹೊರಟ ಕೆಲವು ನಿಮಿಷಗಳ ಮೇಲೆ ಮಹಾಸ್ವಾಮಿಯವರು ಖಾಸಾ ಮೋಟಾರಿನಲ್ಲಿ ಚಿತ್ತೈಸಿದರು. ಮುಂದೆ ಹೋದ ಅಧಿಕಾರಿಯವರು ಅಮಲ್ದಾರರ ತಾಲ್ಲೂಕು ಕಸಬೆಗೆ ಸಂಚಾರಮಾರ್ಗವು ಕವಲೊಡೆಯುವ ಸ್ಥಳಕ್ಕೆ ಬಹಳ ಹಿಂದೆಯೇ ಅವರನ್ನಿಳಿಸಿ ಮುಂದೆ ಹೊರಟರು. ಮಾರ್ಗವು ಕವಲೊಡೆಯುವ ಸ್ಥಳದವರೆಗೂ ಅಮಲ್ದಾರರು ನಡೆದುಹೋಗಿ ಅಲ್ಲಿಂದ ಮುಂದೆ ಎರಡು ಮೈಲಿಗಳ ದೂರ ನಡೆದುಹೋಗಬೇಕಾದ ಘಟ್ಟವು ಒದಗಿತು. ಅವರು ಉರಿ ಬಿಸಿಲಿನಲ್ಲಿ ಹಣ್ಣಿನ ಬುಟ್ಟಿಯನ್ನೂ ಹೊತ್ತುಕೊಂಡು ನಡೆದುಹೋಗುತ್ತಿದ್ದುದನ್ನು ಮಹಾಸ್ವಾಮಿಯವರು ನೋಡಿ ಅತಿವೇಗದಿಂದ ಮೋಟಾರು ಬಂಡಿಯಲ್ಲಿ ಚಿತ್ತೈಸಿದರು. ಮುಂದೆ ಸ್ವಲ್ಪ ದೂರ ಹೋಗಿದ್ದ ಆ ಅಧಿಕಾರಿಯವರು ಹಿಂದೆ ಮಹಾಸ್ವಾಮಿಯವರು ಚಿತ್ತೈಸಿದುದರಿಂದ ತಮ್ಮ ಮೋಟಾರು ಬಂಡಿಯನ್ನು ನಿಲ್ಲಿಸಿ ಕೆಳಕ್ಕಿಳಿಯುವ ವೇಳೆಗೂ, ಮಹಾಸ್ವಾಮಿಯವರ ಮೋಟಾರು ಬಂಡಿಯು ಬಂದು ನಿಂತ ವೇಳೆಗೂ ಸರಿಹೋಯಿತು. ಮಹಾಸ್ವಾಮಿಯವರು ಅವರನ್ನು ಕುರಿತು, "ನಿಮ್ಮ ಡ್ರೈವರೊಡನೆ ನಿಮ್ಮ ಮೋಟಾರ್‌ಕಾರು ಹಿಂದಕ್ಕೆ ಕಳುಹಿಸಿ, ಅವನು ಆ ಅಮಲ್ದಾರರನ್ನು ಊರಿಗೆ ಬಿಟ್ಟುಬರಲಿ" ಎಂದು ಆಜ್ಞಾಪಿಸಿದರು. ಒಡನೆಯೇ ಆ ಮೋಟಾರು ಬಂಡಿಯು ಹೊರಟುಹೋಯಿತು. ಅನಂತರ ಮಹಾಸ್ವಾಮಿಯವರು ತಮ್ಮ ಮೋಟಾರು ಬಂಡಿಯನ್ನು ಮುಂದಕ್ಕೆ ಬಿಟ್ಟರು. ಅಧಿಕಾರಿಯವರು ಪಾರ್ಶ್ವದಲ್ಲಿ ಓಡಿಬರುತ್ತಾ

ಏದಲಾರಂಭಿಸಿದಾಗ ಮಹಾಸ್ವಾಮಿಯವರು, "ಹೀಗೇಕೆ ಉಸಿರು ಬಿಡುತ್ತೀರಿ? ಮುಖವೇಕೆ ಕೆಂಪಗಾಯಿತು?" ಎಂದು ಕೇಳಿದರು. ಅಧಿಕಾರಿಯವರು ಏದುತ್ತ, "ಮಹಾಸ್ವಾಮಿ! ಮೋಟಾರಿನ ಜೊತೆಗೆ ಓಡಲಾದೀತೆ? ಬಿಸಿಲು, ಬಹಳ ಬಿಸಿಲು, ಮಹಾಸ್ವಾಮಿ" ಎಂದಾಗ ಮಹಾಪ್ರಭುಗಳು, "ಹಾಗೇನು? ನಿಮಗಾಗಿ ಬೇರೆ ಬಿಸಿಲೇ ಬಂದಹಾಗಿದೆಯಲ್ಲಾ! ಆ ಅಮಲ್ದಾರರಿಗೆ ಬಿಸಿಲಿರಲಿಲ್ಲವೇನು? ಬಹುಶಃ ಅದು ಎಳೆಯ ಬಿಸಿಲು. ಇದು ಬಲಿತ ಬಿಸಿಲು. ಅಲ್ಲವೆ?" ಎಂದು ಕೇಳಿದರು. ಮಹಾಪ್ರಭುಗಳವರು ಒಡನೆಯೇ ಮೋಟಾರು ಬಂಡಿಯನ್ನು ನಿಲ್ಲಿಸಿದರು. ಆ ಅಧಿಕಾರಿಯವರು ಕ್ಷಮಾಪಣೆ ಬೇಡಿದ ಮೇಲೆ ಅವರನ್ನು ಮೋಟಾರು ಬಂಡಿಯಲ್ಲಿ ಕುಳಿತುಕೊಳ್ಳ ಹೇಳಿ, ಅವರು ಆ ರೀತಿ ಮಾಡಿದಮೇಲೆ ಮಹಾಸ್ವಾಮಿಯವರ ಸವಾರಿಯು ಮುಂದಕ್ಕೆ ಚಿತ್ತೈಸಿತು. ಒಂದು ಸಲ ಒಬ್ಬರು ಮಹಾಶಯರು ಹೃದಯದಲ್ಲಿದ್ದುದಕ್ಕಿಂತ ಹೆಚ್ಚಿನ ಭಯ ಭಕ್ತಿಗಳನ್ನು ಪ್ರದರ್ಶಿಸುವ ಆಟವನ್ನು ಹೂಡಿ, "ಮಹಾಸ್ವಾಮಿ, ಸನ್ನಿಧಾನದಲ್ಲಿ ನನಗೆ ಬಹಳ ಭಯ! ಯಾವ ಮಾತನಾಡಿದರೆ ಹೇಗೋ, ಯಾವ ಮಾತಾಡದೆ ಬಿಟ್ಟರೆ ಹೇಗೋ! ಬಹಳ ಭಯ, ಬಹಳ ಸಂಕೋಚ; ಅಭಯವಾಗಬೇಕು, ಮಹಾಸ್ವಾಮಿ" ಎಂದು ಹೇಳಿದಾಗ ಮಹಾಸ್ವಾಮಿಯವರು, "ಅಷ್ಟು ಕಷ್ಟವೇಕೆ? ಯಾವ ಮಾತನ್ನೂ ಆಡದೆ ಸುಮ್ಮನಿದ್ದರಾಯಿತು" ಎಂದು ಅಪ್ಪಣೆ ಕೊಡಿಸಿ ನಕ್ಕರು. ತಾವು ಅಲ್ಪಸ್ವಲ್ಪ ಕೆಲಸ ಮಾಡಿದರೂ ಬಹಳವಾಗಿ ಶ್ರಮಿಸಿದಂತೆ ತೋರ್ಪಡಿಸಿಕೊಳ್ಳುತ್ತಿದ್ದ ಅಧಿಕಾರಿಯವರೊಬ್ಬರು ಆನೆಗಳನ್ನು ಹಿಡಿಯುವ ಖೆಡ್ಡಾ ಏರ್ಪಾಡಿನ ಸಂಬಂಧದಲ್ಲಿ ಬಹಳ ಕೆಲಸ ಮಾಡಿದಂತೆಯೂ ಆಯಾಸಗೊಂಡಂತೆಯೂ ನಟಿಸುತ್ತ ಮಹಾಸ್ವಾಮಿಯವರ ಸನ್ನಿಧಿಗೆ ಬಂದಾಗ "ಏನು, ಕಾಡೆಲ್ಲಾ ಸುತ್ತಿ ದಣಿದು ಬಂದಂತಿದೆ" ಎಂದು ಅಪ್ಪಣೆಯಾಯಿತು. ಆ ಅಧಿಕಾರಿಯವರು ಉಬ್ಬಿಹೋಗಿ, "ಖೆಡ್ಡಾ ಕೆಲಸ ದಣಿವಾಗದೆ ನಡೆಯುವ ಹಾಗಿಲ್ಲ, ಮಹಾಸ್ವಾಮಿ" ಎಂದುದನ್ನು ಕೇಳಿ ನಗುತ್ತ, ಮಹಾಸ್ವಾಮಿಯವರು, "ಹಾಗಾದರೆ ನೀವು ಬಹಳ ದೂರ ಸಂಚರಿಸಿ ದಣಿದು ತಟ್ಟಾಗಿ ಬಂದಿರಬೇಕು. ಆನೆಗಳ ಹಿಂಡುಗಳಿಗೆಲ್ಲಾ 'ಖೆಡ್ಡಾ ಮಾಡುತ್ತೇವೆ. ನೀವುಗಳು ಬೇಗ ಬನ್ನಿ. ನಿಮ್ಮನ್ನೆಲ್ಲಾ ಒಳಗೆ ಕೂಡಿ ಹಿಡಿಯುತ್ತೇವೆ' ಎಂದು ಆಹ್ವಾನ ಕೊಟ್ಟುಬರಲು ಹೋಗಿದ್ದಿರೇನು?" ಎಂದು ಅಪ್ಪಣೆ ಕೊಡಿಸಿದರು. ಆ ಅಧಿಕಾರಿಯವರ ವಿಚಾರಗಳೆಲ್ಲ ಮಹಾಸ್ವಾಮಿಯವರಿಗೆ ಗೊತ್ತಿದ್ದುದೇ ಅದಕ್ಕೆ ಕಾರಣ.

ಇತರರ ಬುದ್ಧಿಕೌಶಲ್ಯವನ್ನು ಪರೀಕ್ಷಿಸುವುದಕ್ಕಾಗಿ ಸಹ ಮಹಾಸ್ವಾಮಿಯವರು ವಿನೋದವನ್ನು ಹೂಡುತ್ತಿದ್ದುದುಂಟು. ಅದಕ್ಕೆ ಹಲವು ನಿದರ್ಶನಗಳಿದ್ದರೂ ಸ್ಥಳ ಸಂಕೋಚದಿಂದ ಒಂದೇ ಒಂದು ನಿದರ್ಶನವನ್ನು ಸೂಚಿಸಿ ತೃಪ್ತಿಪಟ್ಟುಕೊಳ್ಳಬೇಕಾಗಿದೆ: ಒಂದು ಸಲ, ಮಹಾಸ್ವಾಮಿಯವರು ಕೆಮ್ಮಣ್ಣುಗುಂಡಿಗೆ ಚಿತ್ತೈಸಿದ ಮೇಲೆ, ಬೇಟೆಯ ಅಧಿಕಾರಿಯವರಿಗೆ (ಮೈಸೂರಿಗೆ) ಬಕ್ಷಿಯವರಿಂದ ಒಂದು ಕಾಗದವನ್ನು ಬರೆಯಿಸಿ ಅದರೊಡನೆ ಒಂದು ಹುಲಿಯ ಚಕ್ಕಳವನ್ನೂ ಕಳುಹಿಸಿದರು. ಕಾಗದದ ಒಕ್ಕಣೆಯ ಸಾರಾಂಶವಿಷ್ಟು: "ನಾವುಗಳು ಕೆಮ್ಮಣ್ಣುಗುಂಡಿಗೆ ಬಂದ ಎರಡನೆಯ ದಿವಸವೇ ಇಲ್ಲಿಯವರೊಬ್ಬರು ಒಂದು ಭಾರಿ ಹುಲಿಯು ಇದ್ದ ಸಂಗತಿಯನ್ನು ತಿಳಿಸಿದರು. ಮಚಾನ್ ಮೇಲೆ ಕುಳಿತ ಬಳಿಕ ಕೆಲವು ನಿಮಿಷಗಳಲ್ಲೇ ಇಲ್ಲಿದ್ದ ಹಳೆಯ ಬಂದೂಕದಿಂದಲೇ ಒಂದೇಸಲ ಗುಂಡು ಹೊಡೆದು ಅದನ್ನು ಕೊಂದುದಾಯಿತು. ಹುಲಿಯ ಚಕ್ಕಳವನ್ನು ಹದಮಾಡಿಸಲು ನಿಮ್ಮಲ್ಲಿಗೆ ಕಳುಹಿಸಿದ್ದೇವೆ." ಬೇಟೆಯ ಅಧಿಕಾರಿಯವರು ಆ ಹುಲಿಯ ಚಕ್ಕಳವನ್ನು ಚೆನ್ನಾಗಿ ಪರಿಶೀಲಿಸಿ ನೋಡಿ ಬಕ್ಷಿಯವರಿಗೆ ಬರೆದ ಪ್ರತ್ಯುತ್ತರದ ಸಾರಾಂಶ ವೇನೆಂದರೆ: "ಹುಲಿಯ ಚರ್ಮವನ್ನು ಹದಮಾಡಿಸುತ್ತಿರುವ ಅಂಶವನ್ನು ಮಹಾಸ್ವಾಮಿಯವರ ಸನ್ನಿಧಿಗೆ ಅರಿಕೆ ಮಾಡಬೇಕೆಂದು ಪ್ರಾರ್ಥಿಸುತ್ತೇನೆ. ಈ ಹುಲಿಗೆ ಗುಂಡು ತಗಲಿರುವ ರೀತಿಯನ್ನು ನೋಡಿದರೆ, ಬಾಯಿಗೆ ಪೆಟ್ಟುಬಿದ್ದು ಅಲ್ಲಿಂದ ಹೊರಟ ಗುಂಡು (ಬಂದೂಕದ ರಭಸದ ದೆಸೆಯಿಂದ ಗುಂಡಿನ ವೇಗವು ಬಹಳ ಹೆಚ್ಚಿ) ಬಾಲವನ್ನು ಹಾರಿಸಿಕೊಂಡು ಹೊರಟುಹೋದಂತಿದೆ. ಇದನ್ನು ಕಂಡು ಬಹಳ ಸಂತೋಷವಾಯಿತು. ಆದರೆ ಹೀಗೆ ಹುಲಿಯನ್ನು ಹೊಡೆಯು ವುದು ಸಾಧ್ಯವಾಗುವ ಬಂದೂಕವೇ ಎಲ್ಲಿಯೂ ರಚಿತವಾದಹಾಗಿಲ್ಲ. ಅಲ್ಲದೆ, ಈ ಹುಲಿಯೂ ಉಪಕಾರ ಬುದ್ಧಿಯುಳ್ಳ ಹುಲಿ. ಮಚಾನ್ ಮೇಲೆ ಕುಳಿತ ಕೆಲವು ನಿಮಿಷಗಳಲ್ಲೇ ಎದುರಿಗೆ ಬಂದು ನಿಂತು, ಗುಂಡಿನ ಪೆಟ್ಟು ಹೊಡೆಯಲು ಅನುಕೂಲ ಮಾಡಿಕೊಟ್ಟು ಪೆಟ್ಟು ತಿಂದಿದೆ. ಅಷ್ಟೇ ಅಲ್ಲ. ಅದು ಉಗುರುಗಳನ್ನು ಕೂಡ ಕಾಡಿನಲ್ಲಿ ಎಲ್ಲಿಯೋ ಬಿಟ್ಟುಬಂದಿದೆ. ಬಹಳಮಟ್ಟಿಗೆ ಉಪಕಾರ ಬುದ್ಧಿಯುಳ್ಳ ಹುಲಿ. ಇಂಥ ಹುಲಿಗಳೇ ಎಂದೂ ಸಿಕ್ಕದೆಹೋದುದು ನನ್ನ ದುರದೃಷ್ಟ." ಹೀಗೆ ಪ್ರತ್ಯುತ್ತರವನ್ನು ಬರೆದ ಬಳಿಕ ಕೆಲವು ದಿನಗಳಾದ ಮೇಲೆ ಅವರು ಕೆಮ್ಮಣ್ಣುಗುಂಡಿಗೆ ಹೋದಾಗ ಮಹಾಸ್ವಾಮಿಯವರು, "ಹುಲಿಯ

ಚರ್ಮದ ವಿಷಯದಲ್ಲಿ ನಿಜವನ್ನು ಊಹಿಸಿಬಿಟ್ಟರಿ. ಅದು ಇಲ್ಲಿ ಷಿಕಾರಿಯಾಗಲಿಲ್ಲವೆಂಬುದನ್ನು ನಿರ್ಧರಿಸಿ ಬರೆದು ಬಿಟ್ಟರಿ. ಸಂತೋಷ" ಎಂದು ಅಪ್ಪಣೆ ಕೊಡಿಸಿ ನಕ್ಕರು. ನಡೆದಿದ್ದ ವಿಷಯವೇನೆಂದರೆ: ಕೆಮ್ಮಣ್ಣುಗುಂಡಿಯಲ್ಲಿ ಯಾರೋ ಕೆಲವರು ತಾವು ಷಿಕಾರಿಯವರೆಂಬ ನಟನೆಯನ್ನು ಹೂಡಿ, ಆ ಹುಲಿಯ ಚರ್ಮವನ್ನು ತಂದೊಪ್ಪಿಸಿ, ತಾವು ಹುಲಿಯನ್ನು ಹೊಡೆದುದಾಗಿ ಅರಿಕೆ ಮಾಡಿ, ಪಾರಿತೋಷಿಕವನ್ನು ಬೇಡಿದರು. ಅದು ದೂರದ ಕಾಡಿನಲ್ಲಿ ತಾನಾಗಿ ಸತ್ತುಬಿದ್ದಿದ್ದ ಹುಲಿಯ ಚರ್ಮ; ಅವರು ಕೊಂದಿದ್ದ ಹುಲಿಯದಲ್ಲ. ಅವರು ಆ ಹುಲಿಯ ಚರ್ಮದ ಬಾಲವನ್ನು ಕೊಯ್ದುಹಾಕಿ, ಉಗುರುಗಳನ್ನು ಕೊಯ್ದಿಟ್ಟು ಕೊಂಡು, ಹುಲಿಯ ಬಾಯಿಗೆ ಗುರಿಯಿಟ್ಟು ತಾವು ರಭಸದಿಂದ ಹೊಡೆದ ಗುಂಡು ಬಾಲದ ಬಳಿಗೆ ಹೋಗಿ ಬಾಲವನ್ನೂ ಭೇದಿಸಿಕೊಂಡುಹೋಯಿತೆಂದು ಸಲ್ಲದ ಸುಳ್ಳನ್ನು ಹೇಳಿದ್ದರು. ಕರುಣಾರ್ದ್ರಹೃದಯರಾದ ಮಹಾಪ್ರಭುಗಳವರು, ಅವರಿಗೂ ಪಾರಿತೋಷಿಕವನ್ನನುಗ್ರಹಿಸಿ ಆ ಹುಲಿಯ ಚರ್ಮವನ್ನು ಸ್ವೀಕರಿಸಿ, "ಈ ಹಣ ನಿಮ್ಮ ಬೇಟೆಗೆ ಕೊಟ್ಟ ಬಹುಮಾನವಲ್ಲ. ಮುಂದಾದರೂ ನೀವು ಹೀಗೆ ಸುಳ್ಳು ಹೇಳದಿರಬೇಕೆಂದು ಮುಂಗಡವಾಗಿ ಕೊಟ್ಟ ಬೆಲೆ" ಎಂದು ಅಪ್ಪಣೆಕೊಡಿಸಿ ಅವರಿಗೆ ಬುದ್ಧಿ ಕಲಿಸಿದ್ದರು. ಹುಲಿಯ ಚರ್ಮವನ್ನು ಮೈಸೂರಿಗೆ ಕಳುಹಿಸುವಂತೆ ಆ ಬಳಿಕ ಆಜ್ಞಾಪಿಸಿದರು.

**ನಿಷ್ಕೃಷ್ಟವಾದ ತಿಳಿವಳಿಕೆ**

ಬೇಟೆಯ ಸಂಬಂಧವಾದ ಸಮಸ್ತ ವಿಚಾರಗಳಲ್ಲಿಯೂ, ಕಾಡಿನಲ್ಲಿ ಎಲ್ಲೆಲ್ಲಿ ಏನೇನುಂಟೆಂಬ ವಿಚಾರದಲ್ಲಿಯೂ ಮಹಾಸ್ವಾಮಿಯವರಿಗೆ ನಿಷ್ಕೃಷ್ಟವಾದ ತಿಳಿವಳಿಕೆಯೂ, ಅಪಾರವಾದ ಅನುಭವವೂ ಇದ್ದುವು. ಆದಕಾರಣ, ತಲಸ್ಪರ್ಶಿಯಾದ ರೀತಿಯಲ್ಲಿ ನಾನಾ ಅಂಶಗಳನ್ನೂ ಗ್ರಹಿಸಿಲ್ಲದವರಾರೂ ಪೊಳ್ಳುಮಾತುಗಳಿಂದ ಮಹಾಸ್ವಾಮಿಯವರನ್ನು ಬೆರಗುಮಾಡುವಂತಿರಲಿಲ್ಲ. ಮಹಾಸ್ವಾಮಿಯವರು ಕಾಡುಗಳಲ್ಲಿ ಸಂಚಾರ ಹೊರಟಾಗ ಅವುಗಳ ನಕಾಶೆಗಳನ್ನು ತರಿಸಿಕೊಂಡು ಸಮಗ್ರವಾಗಿ ನಾನಾ ಅಂಶಗಳನ್ನೂ ಗ್ರಹಿಸಿ ಕರತಲಾಮಲಕ ಮಾಡಿಕೊಂಡಿರುತ್ತಿದ್ದರು. ಒಂದುಸಲ, ಅರಣ್ಯಪ್ರದೇಶದಲ್ಲಿ ಸಂಚರಿಸುತ್ತಿದ್ದಾಗ ಫಾರೆಸ್ಟ್ ಇಲಾಖೆಯ ಅಧಿಕಾರಿಯವರೊಬ್ಬರನ್ನು ಕುರಿತು, "ಕಲ್ಕೆರೆ ಬೆಟ್ಟ ಎಲ್ಲಿದೆ?" ಎಂದು ಕೇಳಿದರು. ಅವರು ನಕಾಶೆಯಲ್ಲಿ ಒಂದು ಬೆಟ್ಟವನ್ನು ತೋರಿಸಿದ ಮೇಲೆ ಮಹಾಸ್ವಾಮಿಯವರು "ಕಲ್ಕೆರೆ

ಬೆಟ್ಟ ಇಲ್ಲಿಗೆಷ್ಟು ದೂರವಿದೆ?" ಎಂದು ಕೇಳಲು, ಆ ಅಧಿಕಾರಿಯವರು ಇಲ್ಲಿಗೆ ಒಂದೂವರೆ ಅಥವಾ ಎರಡು ಮೈಲಿಗಳ ದೂರವಿರಬಹುದು. ಅದೇ ಕಲ್ಕೆರೆ ಬೆಟ್ಟ. ಇಲ್ಲಿಗೇ ಕಾಣಿಸುತ್ತಿದೆ" ಎಂದು ಉತ್ತರ ಹೇಳಿದರು; ಅಲ್ಲದೆ ಒಂದು ಬೆಟ್ಟವನ್ನು ತೋರಿಸಿದರು. ಮಹಾಸ್ವಾಮಿಯವರು ನಕ್ಕು, "ಓಹೊ! ಈಗ ನೀವು ತೋರಿಸಿದುದೇ ಕಲ್ಕೆರೆ ಬೆಟ್ಟವೇನು? ಆದರೆ ನಕಾಶೆಯಲ್ಲಿ ಈ ಮೊದಲೇ ನೀವು ತೋರಿಸಿದ ಬೆಟ್ಟವೇ ಕಲ್ಕೆರೆ ಬೆಟ್ಟವಾದರೆ ಅದು ಇಲ್ಲಿಗೆ ಹದಿನೈದು ಮೈಲಿಗಳ ದೂರವಿರಬೇಕಲ್ಲಾ!" ಎಂದು ಹೇಳಿದಾಗಲೂ ಅವರು ಸುಮ್ಮನಾಗದೆ, "ಕಲ್ಕೆರೆ ಬೆಟ್ಟ ಬಹಳ ಸಮೀಪ. ಅದೇ ಕಲ್ಕೆರೆ ಬೆಟ್ಟ, ಮಹಾಸ್ವಾಮಿ" ಎಂದು ಅದೇ ಬೆಟ್ಟವನ್ನೇ ಮತ್ತೆ ತೋರಿಸಿದರು. ಅನಂತರ ಮಹಾಸ್ವಾಮಿಯವರು ದೂರದಲ್ಲಿ ನಿಂತಿದ್ದ ಬೆಳ್ಳಿ ಎಂಬ ಕಾಡುಕುರುಬನನ್ನು ಕರೆದು, "ಬೆಳ್ಳಿ, ಬೆಳ್ಳಿ, ಅದೇ ತಾನೆ ಕಲ್ಕೆರೆ ಬೆಟ್ಟ?" ಎಂದು ಕೇಳಿದರು. ಅದಕ್ಕವನು, "ಅದ್ಯಾಕಾದಾತು, ಮಾಸ್ವಾಮಿ. ನಾವೂ ಮಾಸ್ವಾಮಿಯವರೂ ಎಷ್ಟೋಸಲ ಕಲ್ಕೆರೆ ಬೆಟ್ಟಕ್ಕೆ ಹೋಗಿ ಬಂದಿಲ್ವಾ? ಅದು ಬೇರೇ ಬೆಟ್ಟ. ಕಲ್ಕೆರೆ ಬೆಟ್ಟ ಇಲ್ಲೈತಾ!" ಎಂದು ಉತ್ತರ ಹೇಳಿದನು.

ಫಾರೆಸ್ಟ್ ಇಲಾಖೆಯ ಅಧಿಕಾರಿಗಳಲ್ಲಿ ಕೆಲವರು ತಮಗೆ ನಿಷ್ಕೃಷ್ಟ ಜ್ಞಾನವಿಲ್ಲದಿದ್ದ ವಿಚಾರಗಳಲ್ಲಿ ಕೂಡ ತಾವು ನಿರೀಕ್ಷಿಸುವ ಉತ್ತರಗಳೇ ಬರುವಂತೆ ಕಾಡುಜನರಿಗೆ ಪ್ರಶ್ನೆಗಳನ್ನು ಹಾಕಿ, ಮಹಾಸ್ವಾಮಿಯವರೆದುರಿಗೆ ತಮ್ಮ ಪ್ರೌಢಿಮೆಯನ್ನು ಪ್ರದರ್ಶಿಸುವ ನಟನೆಯನ್ನು ಹೂಡಿ ಹಳ್ಳಕ್ಕೆ ಬಿದ್ದಿರುವ ಅನೇಕ ನಿದರ್ಶನಗಳುಂಟು. ಉದಾಹರಣೆಗಾಗಿ ಸಮಯೋಚಿತವಾಗಿ "ಇಲ್ಲಿ ಕಾಡುಕೋಣ ಸಿಕ್ಕೋದಿಲ್ಲ, ಅಲ್ಲವೇನೊ?" ಎಂದು ಕೇಳಿ "ಸಿಕ್ಕೋದಿಲ್ಲ, ಬುದ್ಧಿ" ಎಂದೂ, ಕಾಡುಕೋಣ ನಿನ್ನೇವರೆಗೂ ಇಲ್ಲಿದ್ದು ಓಡಿಹೋಗಿರಬೇಕು. ಇಲ್ಲಿನ ಸ್ಥಿತಿ ನೋಡಿದರೆ ಹಾಗಿದೆ. ಅಲ್ಲವೇನೋ?" ಎಂದು ಕೇಳಿ "ಹೌದು, ಬುದ್ಧಿ" ಎಂದೂ, ಮತ್ತು "ಈ ಸುತ್ತಿನಲ್ಲಿ ಕಾಡುಕೋಣ ಇರಲಾರದು. ಅಲ್ಲವೇನೊ?" ಎಂದು ಕೇಳಿ "ಹೌದು, ಬುದ್ಧಿ" ಎಂದೂ ಉತ್ತರ ಪಡೆಯುತ್ತಿದ್ದುದನ್ನು ಇಲ್ಲಿ ಸೂಚಿಸಬಹುದು. ಮಹಾಸ್ವಾಮಿಯವರು ಈ ಬಗೆಯ ವರ್ತನೆಯ ರಹಸ್ಯವನ್ನೂ, ಫಾರೆಸ್ಟ್ ಇಲಾಖೆಯ ಅಧಿಕಾರಿಗಳಲ್ಲಿ ಸಮರ್ಥರಾರು, ಸಾಮರ್ಥ್ಯದಲ್ಲಿ ಕಡಮೆಯಾಗಿರುವವರಾರು ಎಂಬ ಸಂಗತಿಗಳನ್ನೂ ಬಲ್ಲವರಾಗಿದ್ದರು. ಮೇಲೆ ಹೇಳಿದ ರೀತಿಯಲ್ಲಿ ಕೊಡುವ ಉತ್ತರಗಳಿಗೆ

"ಇಲಾಖೆ ಉತ್ತರ" ಎಂಬ ಸಂಕೇತ ನಾಮವನ್ನಿಟ್ಟಿದ್ದರು. ಮಹಾಪ್ರಭುಗಳವರ ಸನ್ನಿಧಿಯಲ್ಲಿ ಪುರಸ್ಕಾರ ಲಭಿಸುತ್ತಿದ್ದುದು ಶಕ್ತರಾದ ಅಧಿಕಾರಿಗಳಿಗೆ ಮಾತ್ರವೇ. ೧೯೪೦ನೆಯ ಇಸವಿಯಲ್ಲಿ ಲಾರ್ಡ್ ಹಾರ್ಡಿಂಜ್‌ರವರು ಮಹಾಸ್ವಾಮಿಯವರ ಸ್ನೇಹಪ್ರಭಾವದಿಂದ ಮೈಸೂರು ಸಂಸ್ಥಾನಕ್ಕೆ ಎರಡನೆಯಸಾರಿ ಬಂದಿದ್ದಾಗ ಬಹಳ ಚೆನ್ನಾಗಿ ಹುಲಿಯ ಬೇಟೆಯು ನಡೆಯಿತು. ಮಾರನೆಯ ದಿನ ಲಾರ್ಡ್ ಹಾರ್ಡಿಂಜ್‌ರವರು ಕಾಡುಕೋಣನ ಬೇಟೆಗೆ ಮಹಾಸ್ವಾಮಿಯವರೊಡನೆ ಆನೆಯ ಮೇಲೆ ಕುಳಿತು ದಯಮಾಡಿದರು. ಕಾಡುಕುರುಬನೊಬ್ಬನು ಮಾರ್ಗದರ್ಶನ ಮಾಡುತ್ತ ಮುಂದೆ ನಡೆದನು. ಆದರೆ, ಸ್ವಲ್ಪ ದೂರ ಹೋಗುವುದರೊಳಗಾಗಿ, ಆ ಕಿರಿಯ ಮಾರ್ಗದ ಉಭಯಪಾರ್ಶ್ವಗಳಲ್ಲಿಯೂ ಮಲೆತು ನಿಂತು ಪರಸ್ಪರವಾಗಿ ಮೇಲ್ಭಾಗದಲ್ಲಿ ಹೆಣೆದುಕೊಂಡಿದ್ದ ಬಿದಿರು ಮೆಳೆಗಳು ಸಿಕ್ಕಿದುವು. ಅವುಗಳ ಮೇಲ್ಭಾಗವನ್ನು ಕಡಿದು ಆನೆಯ ಮೇಲೆ ಕುಳಿತಿದ್ದವರ ತಲೆಗೆ ಅವು ತಗಲದಂತೆ ತಪ್ಪಿಸಿ ದಾರಿಯನ್ನು ಬಿಡಿಸಲು ಸುಮಾರು ಇಪ್ಪತ್ತು ನಿಮಿಷಗಳು ಹಿಡಿದುವು. ಆ ವೇಳೆಗೆ ಅಲ್ಲಿಗೆ ಬಂದ ಫಾರೆಸ್ಟ್ ಇಲಾಖೆಯ ಸಮರ್ಥರಾದ ಬೇಟೆಯ ಅಧಿಕಾರಿಯವರು "ಈ ಭಾಗದಲ್ಲಿ ದಾರಿಯು ಸರಿಯಾಗಿಲ್ಲ, ಮಹಾಸ್ವಾಮಿ" ಎಂದು ಅರಿಕೆಮಾಡಲು, ಅವರು ಮಾರ್ಗದರ್ಶನ ಮಾಡುತ್ತಿದ್ದವನ ಕಡೆಗೆ ನೋಡಿದರು. ಅವನು "ದಾರಿ ಸರಿಯಾಗಿ ಸಲೀಸಾಗೈತೆ, ಮಾಸ್ವಾಮಿ" ಎನ್ನಲು, ಮಹಾಸ್ವಾಮಿಯವರು ಅಧಿಕಾರಿಯವರನ್ನು ಕುರಿತು "ನೀವು 'ಇಲಾಖೆ ಉತ್ತರ' ಹೇಳಬೇಡಿ. ಕಾಡಿನಲ್ಲೇ ಬೆಳೆದಿರುವ ಈ ಷಿಕಾರಿಯವನು ಹೇಳುತ್ತಾನಲ್ಲಾ ದಾರಿ ಸರಿಯಾಗಿದೆಯೆಂದು" ಎಂದರು. ಆ ಅಧಿಕಾರಿಯವರು, "ಕ್ಷಮಿಸಬೇಕು, ಮಹಾಸ್ವಾಮಿ. ದಾರಿ ಅವನಿಗೆ ಸರಿಯಾಗಿದೆ. ಅವನು ಎಂದೂ ಆನೆಯ ಮೇಲೆ ಹೋಗಿಲ್ಲ. ಹೆಬ್ಬಿದಿರು ಮೆಳೆಗಳು ಮೇಲೆ ಹೆಣೆದುಕೊಂಡಿದ್ದರೂ ಅವನು ಸರಾಗವಾಗಿ ಕೆಳಗೆ ನಡೆದುಹೋಗಬಲ್ಲ. ಆದರೆ ಆನೆಯ ಮೇಲೆ ಕುಳಿತು ಈ ಮಾರ್ಗವಾಗಿ ಹೋಗುವಹಾಗಿಲ್ಲ" ಎಂದು ಹೇಳಲು, ಮಹಾಸ್ವಾಮಿಯವರು "ಸರಿ. ಇದು 'ಇಲಾಖೆ ಉತ್ತರ'ವಲ್ಲ" ಎಂದು ಹೇಳಿ ನಕ್ಕು ಬೇರೆ ಮಾರ್ಗವಾಗಿ ಚಿತ್ತೈಸಿದರು. ಮಹಾಸ್ವಾಮಿಯವರು ಮತ್ತೊಂದುಸಲ ಕಾಡುಕೋಣನ ಬೇಟೆಗೆ ದಯಮಾಡಿದಾಗ, ಎಷ್ಟು ಸುತ್ತಿದರೂ ಕಾಡುಕೋಣವೇ ಸಿಕ್ಕಲಿಲ್ಲ. ಷಿಕಾರಿಯವರಾದ "ಪರಿವಾರ" ಜಾತಿಯವರನ್ನು ಕೇಳಿದರೆ "ಇಲ್ಲೇ ದಂಡೇಲೇ ಸಿಕ್ಕಬೈದು" ಎಂದು ಹೇಳುತ್ತಲೇ

ಬಂದರು. ಅವರು ಹೇಳಿದ "ದಂಡೆ" ಎಂಬುದು ಎಷ್ಟು ಹತ್ತಿರವಾದರೂ ಆಗಬಹುದು; ಅಥವಾ ಎಷ್ಟು ದೂರವಾದರೂ ಆಗಬಹುದು. ಅಂದು, ಫಾರೆಸ್ಟ್ ಇಲಾಖೆಯ ಸಮರ್ಥರಾದ ಬೇಟೆಯ ಅಧಿಕಾರಿಯವರೂ ಮಹಾಸ್ವಾಮಿಯವರ ಜೊತೆಯಲ್ಲಿದ್ದರು (ಅವರು ಅರಮನೆ ಇಲಾಖೆಯಲ್ಲಿ ಕೆಲಸಮಾಡಲು ಬಂದವರು). ಅವರು, "ಮಹಾಸ್ವಾಮಿ, ಕಾಡುಕೋಣ ಇಲ್ಲಿಗೆ ಸಮೀಪದಲ್ಲೇ ಇರಬೇಕು" ಎಂದರು. ಮಹಾಸ್ವಾಮಿಯವರು ವಿನೋದವಾಡುತ್ತ "ಓಹೋ! ವಾಡಿಕೆಯ 'ಇಲಾಖೆ ಉತ್ತರ' ಸರಿ. ಬೆಳ್ಳಾ, ಬೆಳ್ಳಾ! ಇಲ್ಲಿ ಕಾಡುಕೋಣ ಸಿಕ್ಕೋದಿಲ್ಲ, ಅಲ್ಲವೇನೊ? ಕಾಡುಕೋಣ ನಿನ್ನೆಯವರೆಗೂ ಇಲ್ಲಿದ್ದು ಓಡಿಹೋಗಿರಬೇಕು, ಅಲ್ಲವೇನೊ? ಈ ಸುತ್ತಿನಲ್ಲಿ ಕಾಡುಕೋಣ ಇರಲಾರದು ಅಲ್ಲವೇನೊ?" ಎಂದು ಪ್ರಶ್ನೆಗಳನ್ನು ಹಾಕಿದರು. ಆದರೂ ಬೇಟೆಯ ಅಧಿಕಾರಿಯವರು ಅಪ್ರತಿಭರಾಗದೆ, "ಕಾಡುಕೋಣ ಇಲ್ಲಿಯೇ ಸಮೀಪದಲ್ಲಿದ್ದೇ ಇರಬೇಕು, ಮಹಾಸ್ವಾಮಿ. ಏಕೆಂದರೆ, ನಿನ್ನೆ ಮಳೆ ಬಿದ್ದಿರಲಿಲ್ಲ. ಈಗ ಅರ್ಧ ಘಂಟೆಯ ಹಿಂದೆ ಮಳೆ ಬಂದು ನೆಲ ಒದ್ದೆಯಾಗಿದೆ. ಹುಲ್ಲಿನ ಮೇಲೆ ಕೆಲವು ಕಡೆ ಮಳೆಹನಿಗಳಿಲ್ಲ. ಅಲ್ಲಿ ಕೋಣ ನಿಂತಿದ್ದ ಕಾರಣ, ಮಳೆಹನಿಗಳು ಅದರ ಮೇಲೆ ಬಿದ್ದು ಕೆಳಕ್ಕೆ ಹುಲ್ಲಿನ ಮೇಲೆ ಬೀಳದೆ ಹಾಗಾಗಿರಬೇಕು. ಅಲ್ಲಿಂದ ಮುಂದೆ ಹೆಜ್ಜೆಯ ಗುರುತುಗಳಿವೆ. ಆದಕಾರಣ, ಮಳೆ ಬಿಟ್ಟಮೇಲೆ ಕೋಣ ಇಲ್ಲಿಂದ ಮುಂದೆ ಹೋಗಿರಬೇಕು. ಮಳೆ ಬಿಟ್ಟು ಅರ್ಧ ಘಂಟೆಯಾಗಿದೆ. ಆದಕಾರಣ, ಕಾಡುಕೋಣ, ಅರ್ಧ ಘಂಟೆಯಿಂದ ಈಚೆಗೆ ಇಲ್ಲಿಂದ ಹೋಗಿರಬೇಕು. ಇಲ್ಲಿಗೆ ಸಮೀಪದಲ್ಲಿ, ಕಾಡುಕೋಣಗಳಿಗೆ ಬಹಳ ಇಷ್ಟವಾದ ಜಾತಿಯ ಹುಲ್ಲು ಯಥೇಷ್ಟವಾಗಿ ಬೆಳೆದಿದೆ. ಕಾಡುಕೋಣ ಹುಲ್ಲು ಮೇಯುತ್ತಾ ಅಲ್ಲಿ ನಿಂತಿರಲೇಬೇಕು. ಅದಕ್ಕಾಗಿ ಹಾಗೆ ಅರಿಕೆ ಮಾಡಿದ್ದೇನೆ, ಮಹಾಸ್ವಾಮಿ" ಎಂದರು. ಮಹಾಸ್ವಾಮಿಯವರು "ಹಾಗೋ! ಸರಿ. ಸರಿ. ಇಲಾಖೆ ಉತ್ತರವಲ್ಲ" ಎಂದು ಹೇಳಿ ನಕ್ಕರು. ಬೇಟೆಯ ಅಧಿಕಾರಿಯವರು ನಿರ್ಧರಿಸಿದ್ದಂತೆ ಕಾಡುಕೋಣವು ಸಮೀಪದಲ್ಲಿದ್ದೇ ಇದ್ದಿತು. ಗುರಿಗೆ ಸರಿಯಾಗಿ ಗುಂಡು ಹಾರಿಸುವುದರಲ್ಲಿ ವಿಶೇಷ ಕೈಚಳಕ ಕೌಶಲ್ಯವುಳ್ಳ ಮಹಾಸ್ವಾಮಿಯವರ ಬಂದೂಕದ ಪೆಟ್ಟಿನಿಂದ ಅದು ಮೃತವಾಗಿ ಅದರ ದಾಂಧಲೆಯೂ ತಪ್ಪಿತು. ಸಮರ್ಥರಾದ ಬೇಟೆಯ ಅಧಿಕಾರಿಯವರಿಗೆ ಖಿಲ್ಲತ್ತೂ, ಹಣ್ಣುಗಳ ಬುಟ್ಟಿಯೂ, ಮಹಾಸ್ವಾಮಿಯವರ ಮೆಚ್ಚಿಕೆಯ ಅನುಗ್ರಹವಾಗಿ ಲಭಿಸಿದುವು.

ಮೃಗಯಾ ವಿಹಾರದಲ್ಲಿ ಜನ ಸಹಾಯವು ಬಹಳವಾಗಿ ಆವಶ್ಯಕ. ಹುಲಿಯ ಬೇಟೆಯಲ್ಲಿಯೂ ಖೆಡ್ಡಾ ಏರ್ಪಾಡು ಮಾಡಿ ಆನೆಗಳನ್ನು ಹಿಡಿಯುವುದಕ್ಕೂ ಮೂರು ನಾಲ್ಕು ಸಾವಿರ ಮಂದಿಗಳ ಸಹಾಯವೇ ಬೇಕು. ಹುಲಿಗಳ ಬೇಟೆಯೂ ಖೆಡ್ಡಾ ಏರ್ಪಾಡೂ ಆಗಾಗ ನಡೆಯದೆಹೋದರೆ ಹುಲಿಗಳಿಂದಲೂ ಕಾಡಾನೆಗಳಿಂದಲೂ ಪ್ರಜೆಗಳಿಗೆ ಉಂಟಾಗುವ ಬಾಧೆಗಳಿಗೆ ಪರಿಮಿತಿಯೇ ಇರುವುದಿಲ್ಲ. ಆದಕಾರಣ, ಹುಲಿಯ ಬೇಟೆಯಿಂದಲೂ ಖೆಡ್ಡಾ ಏರ್ಪಾಡಿನಿಂದಲೂ ಪ್ರಜೆಗಳಿಗೆ ಪರಮೋಪಕಾರ. ಕರಿಮುದ್ದನಹಳ್ಳಿ, ಆಸ್ವಾಳ ಮುಂತಾದ ಅನೇಕ ಗ್ರಾಮಗಳಲ್ಲಿರುವ ಕಾಡುಕುರುಬರು, ಬೆಸ್ತರು, "ಪರಿವಾರ" ಜಾತಿಯವರು, ಆದಿಕರ್ಣಾಟಕರು ಮುಂತಾದವರೆಲ್ಲ ಹುಲಿಯ ಬೇಟೆಗೂ ಖೆಡ್ಡಾ ಏರ್ಪಾಡಿಗೂ ಸಹಾಯಕರಾಗಿ ಪ್ರಭುಸೇವೆ ಮಾಡುತ್ತಿದ್ದರು. ಮಹಾಸ್ವಾಮಿಯವರು ಅವರನ್ನೆಲ್ಲ ಮಕ್ಕಳಂತೆ ವಾತ್ಸಲ್ಯದಿಂದ ನೋಡಿಕೊಳ್ಳುತ್ತಿದ್ದರು. ಅವರಿಗೆಲ್ಲ ಮಹಾಸ್ವಾಮಿಯವರ ಖಾಸಾ ಬೊಕ್ಕಸದಿಂದ ಧನ ಸಹಾಯವು ದೊರೆಯುತ್ತದೆ. ಅವರ ಮಕ್ಕಳಿಗಾಗಿ ಮಹಾಸ್ವಾಮಿಯವರು ಅವರವರ ಗ್ರಾಮಗಳಲ್ಲೇ ಏರ್ಪಡಿಸಿದ ಪಾಠಶಾಲೆಗಳು ಅನೇಕ ವರ್ಷಗಳಕಾಲ ಅರಮನೆಯ ವೆಚ್ಚದಿಂದಲೇ ನಡೆಯುತ್ತಿದ್ದುವು. ಅವುಗಳನ್ನು ಆಗ್ಗೆ ಪ್ರತ್ಯಕ್ಷವಾಗಿ ನೋಡಿದ್ದ ಬ್ರಿಟಿಷ್ ರೆಸಿಡೆಂಟರ ಪತ್ನಿಯವರೊಬ್ಬರು ಲಂಡನ್ ನಗರದ ಇಂಗ್ಲಿಷ್ ಭಾಷೆಯ ಪತ್ರಿಕೆಯೊಂದರಲ್ಲಿ ೧೯೩೬ನೆಯ ಇಸವಿಯಲ್ಲಿ ಬರೆದ ಲೇಖನದಲ್ಲಿ ಅದಕ್ಕಾಗಿ ಮಹಾಸ್ವಾಮಿಯವರನ್ನು ಶ್ಲಾಘಿಸಿ, ಸರ್ಕಾರದವರು ಪಾಠಶಾಲೆಗಳನ್ನೇರ್ಪಡಿಸಲು ಸಾಧ್ಯವಿಲ್ಲವೆಂದು ಸೂಚಿಸಿದ್ದ ಕೆಲವು ಗ್ರಾಮಗಳಲ್ಲಿ ಅವರು ಪಾಠಶಾಲೆಗಳನ್ನೇರ್ಪಡಿಸಿಕೊಟ್ಟು ಕೃಪೆತೋರಿದ್ದುದನ್ನು ಕೊಂಡಾಡಿದ್ದರು. ಮಹಾಸ್ವಾಮಿಯವರು ಅನೇಕ ಗ್ರಾಮಗಳಲ್ಲಿ ಆದಿಕರ್ಣಾಟಕ ಪಂಗಡದವರಿಗೆ ಪ್ರತ್ಯೇಕವಾದ ಬಾವಿಗಳನ್ನು ತೋಡಿಸಿಕೊಟ್ಟು ಕೃಪೆಮಾಡಿದ್ದರು. ಇತರ ಪಂಗಡಗಳವರಿಗೂ ಬಾವಿಗಳನ್ನು ತೋಡಿಸಿಕೊಟ್ಟು ಅನುಗ್ರಹಿಸಿದ್ದರು. ಶಿಕಾರಿಯವರಲ್ಲಿ ಬಹು ಮಂದಿಗಳ ಹೆಸರುಗಳನ್ನೆಲ್ಲ ಮಹಾಪ್ರಭುಗಳವರು ಬಲ್ಲರು. ಬೇಟೆ ನಡೆದ ಪ್ರತಿ ಸಲವೂ ಸುಮಾರು ಮೂರು ನಾಲ್ಕು ಸಾವಿರ ಮಂದಿ ಶಿಕಾರಿಯವರಿಗೆ ಭಕ್ಷ್ಯಭೋಜ್ಯಗಳ ಮಿಷ್ಟಾನ್ನ ಭೋಜನವು ನಡೆಯುವಂತೆ ಅರಮನೆಯ ಬಿಡದಿಯವರು ಏರ್ಪಾಡು ಮಾಡುತ್ತಿದ್ದರು. ಅನ್ನದಾನವು ಮಹಾದಾನವೆಂದು

**ಶಿಕಾರಿಯವರಲ್ಲಿ ಪರಮ ಕಾರುಣ್ಯ**

ನಂಬಿದ್ದ ಮಹಾಪ್ರಭುಗಳವರು ಅವರನ್ನೆಲ್ಲ ತಣಿಸಿ ಪುಣ್ಯದ ರಾಶಿಯನ್ನು ಗಳಿಸುತ್ತಿದ್ದರು. ಷಿಕಾರಿಗಳಲ್ಲಿ ವಂಶಾನುಗತವಾದ ಧೈರ್ಯ ಸ್ಥೈರ್ಯಗಳು ನೆಲಸಿರುವುದು ಪರಿಪುಷ್ಟವಾಗುತ್ತ ಬರುವಂತೆ ವಿವಿಧ ರೀತಿಗಳಲ್ಲಿ ಪ್ರೋತ್ಸಾಹ ಕೊಡುತ್ತಿದ್ದುದರಲ್ಲಿ ಮಹಾಪ್ರಭುಗಳವರಿಗೆ ಪರವಾದರ. ಅವರು ಷಿಕಾರಿಯವರಿಗೆ ಆಗಾಗ ಬಟ್ಟೆಗಳನ್ನು ಕೊಡಿಸುತ್ತಿದ್ದರು. ಒಂದೊಂದು ಸಲಕ್ಕೆ ಅವರಿಗೆ ನಾಲ್ಕಾರು ಸಾವಿರ ಜುಬ್ಬಗಳು, ಅವರ ಹೆಂಗಸರಿಗೆ ಸೀರೆಗಳು, ಬೆಟ್ಟಗಳಲ್ಲಿರುವ ಕಾಡುಕುರುಬರಿಗೆ ಚಳಿಯು ಹೆಚ್ಚೆಂಬ ಭಾವನೆಯಿಂದ "ಕ್ವಿಲ್ಟು"ಗಳು ಮತ್ತು ಅಲ್ಲಿಯ ಚಳಿಗೆ ತಡೆಯುವ ಶಾಖವಾದ ಉಣ್ಣೆಯ ಬಟ್ಟೆಗಳು ಮುಂತಾದವುಗಳನ್ನು ಹಂಚಿಸುತ್ತಿದ್ದರು. ಯಾವ ಮಾದರಿಯ ಜುಬ್ಬಗಳಾದರೆ ಅವರುಗಳು ಮಾಡುವ ಕೆಲಸಗಳಿಗೆ ಅಡ್ಡಿಯಾಗುವುದಿಲ್ಲವೆಂಬುದನ್ನು ಪರೀಕ್ಷೆಮಾಡಿಸಿ ನೋಡಿ ಅದೇ ಮಾದರಿಯ ಜುಬ್ಬಗಳನ್ನು ಹೊಲಿಸಿಕೊಡುತ್ತಿದ್ದರು. ಷಿಕಾರಿಯವರ ಮಕ್ಕಳಿಗೆ ಪೀಪಿಗಳು ಮತ್ತು ಆಟದ ಸಾಮಾನುಗಳೊಡನೆ ಲಾಡುಗಳನ್ನು ಹಂಚುತ್ತಿದ್ದರು. ಕಾಡುಕುರುಬರು ಮುಂತಾದವರೂ ನಗರವಾಸದ ಸೌಖ್ಯವನ್ನು ಪಡೆಯಲೆಂಬ ಉದ್ದೇಶದಿಂದ ಆಗಾಗ ಅವರನ್ನು ಮೈಸೂರು ನಗರಕ್ಕೆ ಕರೆಯಿಸಿ, ಅರಮನೆಯ ಮೋಟಾರು ಬಂಡಿಗಳಲ್ಲಿ ಕುಳ್ಳಿರಿಸಿ ತಿರುಗಿಸಿ, ಚಲಚ್ಚಿತ್ರಗಳೇ ಮುಂತಾದುವುಗಳನ್ನು ತೋರಿಸಿ ಕಳುಹಿಸುವಂತೆ ಮಹಾಸ್ವಾಮಿಯವರು ಆಜ್ಞಾಪಿಸುತ್ತಿದ್ದರು. ಆದರೆ ನಗರಜೀವನದಲ್ಲಿ ಷಿಕಾರಿಯವರಿಗೆ ಆಸ್ಥೆಯಿಲ್ಲದ ಕಾರಣ, ಅವರನ್ನು ಬಲಾತ್ಕಾರಪಡಿಸಿ ಕರೆಯಿಸಬೇಕಾಗುತ್ತದೆ. ಅಥವಾ ಬಲ್ಲವರೊಬ್ಬರು ಹೇಳಿದಂತೆ "ಕಾಡುಕುರುಬರನ್ನು ಸಿಟಿಗೆ ಬರಮಾಡುವುದು ಹುಲಿಗಳನ್ನು ಹಿಡಿದು ತರಿಸಿದಹಾಗೆ." ಒಂದು ಸಲ, ಮಹಾಸ್ವಾಮಿಯವರು ಅವರನ್ನು ಮೈಸೂರು ನಗರಕ್ಕೆ ಕರೆಯಿಸಿ ಎರಡು ಮೂರು ದಿನಗಳು ಅವರು ಸೌಖ್ಯವಾಗಿದ್ದ ಬಳಿಕ ಮೈಸೂರು ನಗರದಲ್ಲೇ ಅವರು ಇದ್ದುಬಿಡಬೇಕೆಂದು ತಿಳಿಸಿದಾಗ ಗುಂಪಿನ ಯಜಮಾನನು ಅದು ಸಾಗದ ಕೆಲಸವೆಂದು ಬೇಡಿಕೊಂಡು, "ಇಲ್ಲಾ ಮಾಸ್ವಾಮಿ. ಬೇಡ. ಅಲ್ಲಿ ಹುಟ್ಟು ನೀರು ; ಇಲ್ಲಿ ಬುಟ್ಟ ನೀರು"* ಎಂದುದನ್ನು ಕೇಳಿ ಮಹಾಸ್ವಾಮಿಯವರು ನಕ್ಕರು. ಮಹಾಸ್ವಾಮಿಯವರು ನೀಲಗಿರಿಯಲ್ಲಿ ನರಿಯ ಬೇಟೆಯ ಏರ್ಪಾಡು ಮಾಡಿಸುವುದನ್ನೇ ಜನರು ನಿರೀಕ್ಷಿಸಿಕೊಂಡು ಕುತೂಹಲಪಡುತ್ತಿದ್ದರು. ಆಗ ಸುಮಾರು ಮುನ್ನೂರು ನಾನೂರು ಮಂದಿ ಕುದುರೆಯವರಿಗೆ ಅವರು ಔತಣದ ಊಟವನ್ನು ಏರ್ಪಡಿಸುತ್ತಿದ್ದರು.

---

* "ಬುಟ್ಟನೀರು" ಎಂದರೆ ಕೊಳಾಯಿ ನೀರು ಎಂಬುದು ಆತನ ಆಶಯ.

ಕಾಡುಕುರುಬರೇ ಮುಂತಾದ ಷಿಕಾರಿಯವರು ಎಷ್ಟೇ ಬೇಸರವಾಗುವಂತೆ ಮಾತನಾಡಲಿ, ಆಳಿದ ಮಹಾಸ್ವಾಮಿಯವರು ಅವರಲ್ಲಿ ಆದರವನ್ನು ತೋರಿಸುತ್ತ ತಾಳ್ಮೆಯಿಂದ ಉತ್ತರ ಹೇಳಿ ಕೃಪೆತೋರಿಸುತ್ತಿದ್ದುದು ವಾಡಿಕೆ. ಅಲ್ಲದೆ, ಅವರು ಪ್ರಾರ್ಥಿಸಿದುದನ್ನು ನೆರವೇರಿಸುವುದು. ಸಾಧ್ಯವಿಲ್ಲದ ಸಂದರ್ಭದಲ್ಲಿ ಕೂಡ ಅವರೇ ಒಪ್ಪಿಕೊಳ್ಳುವಂತೆ ಸಮಾಚೀನವಾಗಿ ಉತ್ತರ ಹೇಳುತ್ತಿದ್ದುದು ಆಳಿದ ಮಹಾಸ್ವಾಮಿಯವರ ಪದ್ಧತಿ. ಇದಕ್ಕೆ ಎರಡು ಮೂರು ನಿದರ್ಶನಗಳನ್ನು ಇಲ್ಲಿ ಸೂಚಿಸಬಹುದಾಗಿದೆ.

**ತಾಳ್ಮೆಯ ವರ್ತನೆ**

ಒಂದು ಸಲ, ಷಿಕಾರಿಯವರು ತಾವು ಹುಲಿಗಳನ್ನೂ, ಕಾಡುಹಂದಿಗಳನ್ನೂ ಕೋವಿಯಲ್ಲಿ ಹೊಡೆಯಲು ತಮ್ಮೆಲ್ಲರಿಗೂ ಉಚಿತವಾಗಿ ಲೈಸೆನ್ಸನ್ನು ಕೊಡುವಂತೆ ಸಂಬಂಧಪಟ್ಟ ಅಧಿಕಾರಿಗಳಿಗೆ ಅಪ್ಪಣೆಮಾಡಬೇಕೆಂದು ಪ್ರಾರ್ಥಿಸಿಕೊಂಡರು. ಅವರ ಪ್ರಾರ್ಥನೆಯನ್ನು ನೆರವೇರಿಸಿ ಅವರಲ್ಲಿ ಪ್ರತಿಯೊಬ್ಬರಿಗೂ ಬಂದೂಕದ ಲೈಸೆನ್ಸನ್ನು ಕೊಟ್ಟರೆ ಕಾಡಿನಲ್ಲಿ ಹುಲಿಗಳೇ ಮುಂತಾದ ಮೃಗಗಳು ನಾಮಾವಶೇಷವಾಗುವುದು ನಿಸ್ಸಂದೇಹವೆಂದು ಭಾವಿಸಿ, "ನಿಮ್ಮ ತಾತಪ್ಪಾಜಿಯವರ ಕಾಲದಲ್ಲಿ ಕೋವಿಗಳಿರಲಿಲ್ಲ. ಅವರು ಹೇಗೆ ಮಾಡುತ್ತಿದ್ದರು?" ಎಂದು ಮಹಾಸ್ವಾಮಿಯವರು ಕೇಳಿದರು. ಷಿಕಾರಿಯವರ ಯಜಮಾನನಾದ ವೃದ್ಧನು, "ಸಿಡಿಗೋಲುಕೊಟ್ಟು ಬಲೇ ಒಡ್ಡಿ, ಬಲೇ ಹತ್ತಿರ್ಕೇ ಹುಲೀನೂ ಹಂದಿನೂವೆ ಓಡಿಸಿ ಅಟ್ಟಬಂದು ಅವು ಬಲೆಯೊಳ್ಗೆ ಹೋಗಿ ಸಿಡಿಗೋಲು ಉರುಳಿ ಕವಿದ್ಕೊಂಡ ಬಲೇ ಬಿಡಿಸಿಕೊಳ್ಳೋದ್ರೊಳ್ಗೇನೇ ಭರ್ಜೀ ಎಸಗೇ ದೂರದಾಗೆ ಸೊಪ್ಪು ಕವಿಚ್ಕೊಂಡು ಕಾಣಿಸದ್ಹಂಗೆ ಕೂತಿದ್ದೋರೆಲ್ಲಾ ಬುಡಕ್ಕನೆ ಎದ್ದು ಭರ್ಜಿಯಾಗೆ ತಿವೀತಿದ್ರು, ಮಾಸ್ವಾಮಿ. ಆ ಸಾಹಸಾನೂವೇ ಆ ಧೈರ್ಯಾನೂವೇ ಕೇಳಬೇಕ್ರೇ, ಮಾಸ್ವಾಮಿ? ನಮ್ಮ ಪರಿವಾರ ಜಾತೀ ವೀರರೂ ಅಂದ್ರೆ ವೀರರೇ. ಆ ಹುಲಿಯಾಗಲೀ ಆ ಹಂದಿಯಾಗಲೀ ಬಲೆಯಿಂದಾ ಬಿಡಿಸಿಕೊಳ್ಳೋದ್ರಾಗೆ, ಒಂದು ನಿಮಿಷದಾಗೆ, ರಪ್ಪೇ ಹೊಡೆಯೋದ್ರಾಗೆ ಭರ್ಜೀಲಿ ತಿವಿದು ಸಾಯಿಸಿ ಮಲಗಿಸಿಬಿಡ್ತಿದ್ರು. ರುಸ್ತುಂ ಬೇಟೆ. ಅದೀಗ ರುಸ್ತುಂ ಬೇಟೆ" ಎಂದು ಆವೇಶದಿಂದ ಉತ್ತರ ಹೇಳಿದನು. ಮಹಾಸ್ವಾಮಿಯವರು ಆ ಮಾತುಗಳನ್ನು ಆಲಿಸಿ, "ನಾವು ಹೇಳಿರುವುದೂ ಅದಕ್ಕೇ. ನೀವುಗಳು ಇದನ್ನು ಕಾಪಾಡಿಕೊಂಡು ಬನ್ನಿ. ಇದು ಸಾಧ್ಯವಿಲ್ಲದವರಿಗೆ ಬಂದೂಕದ ಷಿಕಾರಿ ಬಿಟ್ಟುಬಿಡಿ. ರಟ್ಟೆಯ ಬಲವೂ ಎದೆಯ ಬಲವೂ ಇರುವ ನೀವು ಭರ್ಜಿ ಷಿಕಾರಿ ಉಳಿಸಿಕೊಂಡು ಬನ್ನಿ" ಎಂದು ಅಪ್ಪಣೆ ಕೊಡಿಸಿದರು.

ಒಂದು ದಿನ, ಷಿಕಾರಿಯವರು ಮಹಾಪ್ರಭುಗಳವರ ಸನ್ನಿಧಿಯಲ್ಲಿ, "ಮಾಸ್ವಾಮಿ! ಈ ರೇಂಜರು, ಗೇಂ ಆಫೀಚರು, ಇವರ ಕಾಟದಾಗೆ ನಮಗೆ ಉಳಿಬಾಳೀ ಇಲ್ಲ. ನಾವೆಲ್ಲೂ್ರವೇ ಕಾಫಿ ತೋಟಕ್ಕಾದ್ರೂ ವಲಸೆ ಹೋಗ್ತೀವಿ" ಎಂದು ದೂರು ಹೇಳಿದರು. ಮಹಾಸ್ವಾಮಿಯವರು ನಕ್ಕು, "ಏಕೆ? ಏನಾಗಿದೆ? ಅವರೇನು ಮಾಡುತ್ತಾರೆ?" ಎಂದು ಕೇಳಿದರು. ಅದಕ್ಕೆ ಷಿಕಾರಿಯವರು, "ನಾವು ಕಾಡಿನಿಂದ ಸೌದೇ ಸಾಗಿಸಿದ್ರೆ ರಹದಾರೀಗೆ ಮುಂದಾಗಿ ಒಂದು ಪಾವಲೀ ಮಡಗು ಅಂತಾರೆ. ಆದ್ರೆ ಮನೇಗೆ ಉಪಯೋಗಿಸೋಕೆ ನಾವೇನಾರಾ ಸೌದೆ ತಂದ್ರೆ ಅವರು ತಂಟೆ ಮಾಡಾಕಿಲ್ಲ. ಕಾಟಾಕೊಡಾಕಿಲ್ಲ. ಅದೇನೋ ಉಂಟು. ಇಲ್ಲಾ ಅಂದ್ರೆ ಶಿವ ಮೆಚ್ಚಾನಾ; ಮಾಸ್ವಾಮಿ?" ಎಂದರು. ಮಹಾಸ್ವಾಮಿ ಯವರು, ಹಾಗಾದರೆ ಏನೂ ಕಾಟವಿಲ್ಲವಲ್ಲಾ! ಅವರಿಂದ ಕಾಟವೆಂದಿರಿ" ಎಂದರು. ಆಗ ಷಿಕಾರಿಯವರ ಆ ಮುಂದಾಳು, "ಬಲೇ ಕಾಟ, ಮಾಸ್ವಾಮಿ, ರೇಂಜರ್ದೂ ಗೇಂ ಆಫೀಚರ್ದೂ ಬಲೇ ಕಾಟ. ಅವರಿಬ್ಬರೂ ಒಂದು, ನಾವು ಭಂಡೀಲಿ ಸೌದೇ ತುಂಬಿ ಮಾರಾಕೇ ಅಡ್ಡಿ ಮಾಡ್ತಾರೆ. ಮೊದಲು ನಾಲ್ಕಾಣೆ ರಹದಾರೀ ಮಡಗಿ ಮಾತಾಡು ಅಂತಾರೆ. ಸೌದೇ ಮಾರಿ ಹಣಾ ತಂದಮ್ಯಾಗೆ ನಿಧಾನದಾಗೆ ಕೊಡ್ತೀವಿ ಅಂದ್ರೂ ಬಿಡಾಕಿಲ್ಲ. ಬಲೇ ಕಾಟ ಇವರಿಂದ" ಎಂದನು. ಮಹಾಸ್ವಾಮಿಯವರು ಆತನನ್ನು ಕುರಿತು, "ಓಹೋ ಹಾಗೇನು? ಹೋಗಲಿ. ಒಂದು ಬಂಡಿ ಸೌದೆ ಮಾರಿದರೆ ನಿಮಗೆ ಬರುವುದು ಎಷ್ಟು ಹಣ?" ಎಂದು ಕೇಳಿದರು. ಆಗ ಆತನು, "ಆರೇ ರೂಪಾಯಿ, ಮಾಸ್ವಾಮಿ. ಮೈಸೂರು ಪೇಟೆಗೆ ಸೌದೇ ತುಂಬಿದ್ರೆ ಬರೋದು ಆರೇ ರೂಪಾಯಿ" ಎಂದು ಉತ್ತರ ಹೇಳಿದನು. ಒಡನೆಯೇ ಮಹಾಸ್ವಾಮಿಯವರು, "ಆರು ರೂಪಾಯಿಗಳು ಬರುವಾಗ ಆ ಹಣದಲ್ಲಿ ಸರ್ಕಾರಕ್ಕೆ ನಾಲ್ಕಾಣೆ ಕೊಡಬಾರದೆ? ಸರ್ಕಾರದವರು ದೊಡ್ಡ ಇಲಾಖೆ ಏರ್ಪಾಡು ಮಾಡಿ ಮರಗಳನ್ನು ಬೆಳೆಯಿಸಿ ನೋಡಿಕೊಳ್ಳುತ್ತಿರುವುದ ರಿಂದಲೇ ಅಲ್ಲವೇ ನಿಮಗೆ ಸೌದೆ ಸಿಕ್ಕುತ್ತಿರುವುದು? ನಿಮಗೆ ಬರುವ ಆರು ರೂಪಾಯಿಗಳಲ್ಲಿ ಸರ್ಕಾರದವರ ವೆಚ್ಚಕ್ಕಾಗಿ ನಾಲ್ಕಾಣೆ ಕೊಡ ಬಾರದೆ?" ಎಂದರು. ಅನಂತರ ಆತನು, "ಕೊಡಬೈದು, ಮಾಸ್ವಾಮಿ. ಆದರೆ ತುಂಬ ವಾಯಿದೇ ಕೊಟ್ರೆ ಹಿಂದಿನಿಂದ ಹಣ ಕೊಡಬೈದು. ಅದರಾಗೇನೂ ಇಲ್ಲ. ಇವರ ಕಾಟವೇ ಕಾಟ" ಎಂದು ಉತ್ತರ ಹೇಳಿ ದಾಗ ಮಹಾಪ್ರಭುಗಳವರು, "ಎಂದಿದ್ದರೂ ಕೊಡಬೇಕು. ಅವರ ದಾಕ್ಷಿಣ್ಯವೇ ಬೇಡ. ಕೊಟ್ಟೇಬಿಡಿ" ಎಂದು ಅಪ್ಪಣೆ ಕೊಡಿಸಿದರು.

ಅಲ್ಲದೆ, ಬಂಡಿಗಳನ್ನಿಟ್ಟುಕೊಂಡಿದ್ದು ಸೌದೆ ವ್ಯಾಪಾರ ಮಾಡುತ್ತಿದ್ದ ಷಿಕಾರಿಯವರಲ್ಲಿ ಪ್ರತಿಯೊಬ್ಬನಿಗೂ ನಾಲ್ಕು ನಾರಿ ಸೌದೆಯನ್ನು ಸಾಗಿಸಲು ರಹದಾರಿಗಾಗಿ ಒಂದೊಂದು ರೂಪಾಯಿ ಕೊಡುವಂತೆ ಸನ್ನಿಧಿಯ ಅಧಿಕಾರಿಯವರಿಗೆ ಅಪ್ಪಣೆಮಾಡಿದರು; ಮಹಾಸ್ವಾಮಿಯವರ ಖಾಸಾ ಬೊಕ್ಕಸದಿಂದ ಆ ಮೊತ್ತವು ಸಂದಾಯವಾಯಿತು. ಷಿಕಾರಿಯವರ ಧೈರ್ಯಸ್ಥೈರ್ಯಗಳನ್ನೂ ಸಾಹಸ ಬುದ್ಧಿಯನ್ನೂ ಮೆಚ್ಚಿ, ಅವರ ಕಷ್ಟ ಕಾರ್ಪಣ್ಯಗಳಿಗಾಗಿ ಮರುಕಪಟ್ಟು ಸಹಾನುಭೂತಿ ತೋರಿ, ಅಪ್ರಾರ್ಥಿತವಾಗಿಯೇ ಆಗಾಗ ಅವಶ್ಯಕಂಡಂತೆ ಬಗೆಬಗೆಯ ಸಹಾಯ ಮಾಡುತ್ತಿದ್ದ ಮಹಾಪ್ರಭುಗಳು ಆ ಸನ್ನಿವೇಶದಲ್ಲಿ ಸಹ ಸಹಾಯ ಮಾಡಿದುದರಲ್ಲಿ ಆಶ್ಚರ್ಯವೇನೂ ಇಲ್ಲ. ನಾಲ್ಕು ಸಲಗಳ ರಹದಾರಿ ಮೊತ್ತವೇ ತಮಗೆ ಲಭಿಸಿದುದಕ್ಕಾಗಿ ಷಿಕಾರಿಯವರಿಗುಂಟಾದ ಸಂತೋಷಕ್ಕೆ ಪಾರವೇ ಇರಲಿಲ್ಲ.

ಒಂದು ಸಲ, ಮಹಾಸ್ವಾಮಿಯವರು ಆಗಿನ ಮೈಸೂರು ಡಿಸ್ಟ್ರಿಕ್ಟ್ ಡೆಪ್ಯುಟಿ ಕಮಿಷನರವರನ್ನೂ ಆನೆಯ ಮೇಲೆ ಕುಳ್ಳಿರಿಸಿಕೊಂಡು ಕಪಿನೀ ನದಿಯನ್ನು ದಾಟಿ ಕಾರಾಪುರದ ಬಂಗಲೆಗೆ ಬಿಜಯಮಾಡಿದರು. ಇತರ ಅಧಿಕಾರಿಗಳೂ ಓವರ್ಸಿಯರವರೂ ಕಪಿನೀ ನದಿಯನ್ನು ತೆಪ್ಪದಲ್ಲಿ ದಾಟಿಕೊಂಡುಬರುವುದು ತಡವಾಯಿತು. ಓವರ್ಸಿಯವರು ಮಹಾಸ್ವಾಮಿಯವರ ಬಳಿಯಲ್ಲಿಲ್ಲದ ಸಮಯ ಸಿಕ್ಕೀತೇ— ಎಂದು ಕಾಯುತ್ತಿದ್ದ ವ್ಯವಸಾಯಗಾರರು ಕೆಲವರು ಓಡಿಬಂದು ಅಡ್ಡಬಿದ್ದು "ಮಾಸ್ವಾಮಿ! ಇಲ್ಲಿ ಈ ಬಂಗಲೇ ಓವರ್ಸೀರ ಕಾಟ; ಬಲೇ ರಗಳೆ. ನಮ್ಮ ದುಡ್ಡೆಲ್ಲಾ ಸುಲೀತಾರೆ. ಅವಾಂತರವಾಗೈತೆ. ಕಾಪಾಡಬೇಕು, ಮಾಸ್ವಾಮಿ" ಎಂದು ಬೇಡಿಕೊಂಡರು. ಡೆಪ್ಯುಟಿ ಕಮಿಷನರವರು ಕೂಡ ದುಡುಕಿ, ಓವರ್ಸಿಯರವರಿಗೆ ತಕ್ಕ ಶಾಸ್ತಿಯಾಗಬೇಕೆಂದು ಮಹಾಸ್ವಾಮಿಯವರಿಗೆ ವಿಜ್ಞಾಪಿಸಿದರು. ಆದರೆ, ಮಹಾಪ್ರಭುಗಳವರು ಸಮುದ್ರ ಗಾಂಭೀರ್ಯದಿಂದಲೂ ತಾಳ್ಮೆಯಿಂದಲೂ ಕೂಡಿ, "ಪೂರ್ತಿಯಾಗಿ ವಿಚಾರಮಾಡಿ ಪರಾಮರ್ಶಿಸಿದ ಮೇಲೆ ತಾನೆ, ಶಿಕ್ಷೆಯ ಮಾತು?" ಎಂದು ಕೇಳಿದರು. ಅನಂತರ, ಮಹಾಸ್ವಾಮಿಯವರು ವ್ಯವಸಾಯಗಾರರನ್ನು ಕುರಿತು "ಅವರೇಕೆ ಹಣವನ್ನು ಕೇಳುತ್ತಾರೆ? ಎಷ್ಟು ಕೊಡಬೇಕೆನ್ನುತ್ತಾರೆ?" ಎಂದು ಕೇಳಲು, ವ್ಯವಸಾಯಗಾರರಲ್ಲೊಬ್ಬನು, "ಒಬ್ಬೊಬ್ಬನ ಹತ್ತಿರ್ಲ್ಲೂ ರೂಪಾಯಿ ರೂಪಾಯೇ ಸುಲೀತಾರೆ. ನಮ್ಮ ಮನೇ ಹಾಳ್ಮಾಡ್ತಿದ್ದಾರೆ" ಎಂದನು. ಮಹಾಸ್ವಾಮಿಯವರು ಅದಕ್ಕೇನು ಕಾರಣವೆಂದು

ಕೇಳಲು ಅವನು, "ನಾವು ಈ ಬಂಗಲೇ ಕಾಂಪೌಂಡ್ಗೆ ದನಾ ಕರಾ ಮೇಯಿಸೋಕೆ ಬಿಟ್ಟೇ ಅಂದ್ರೆ ದೊಡ್ಡೀಗೆ ಹೊಡೆದು ರೂಪಾಯಿ ಮೇಲೆ ರೂಪಾಯಿ ಝುಣ ಝುಣ ಝುಣಾ ಅಂತ ಸುಲೀತಾರೆ" ಎಂದು ಉತ್ತರ ಹೇಳಿದನು. ಮಹಾಸ್ವಾಮಿಯವರು ನಕ್ಕು "ಓಹೊ ಹಾಗೋ! ಬಂಗಲೆಯೊಳಕ್ಕೆ ದನಕರುಗಳನ್ನು ನೀವು ಬಿಡಲೇಬೇಡಿ" ಎಂದರು. ವ್ಯವಸಾಯಗಾರರು, "ಹಂಗಾದ್ರೆ ನಮ್ಮ ಮಾಮೂಲೋ? ಬಂಗಲೇಗೇ ಈಚಿಗೇ ತಾನೇ ಕಾಂಪೌಂಡು ಗೋಡೆ ಆಗಿರೋದು? ಆದ್ರೇ ಅದಕ್ಕೆ ಮುಂಚಿನಿಂದಾಲೂವೆ ನಾವು ದನಕರಾ ಮೇಯಿಸೋ ಮಾಮೂಲೈತೆ. ಈಗ ಈ ಓವರ್ಸೀರು ಇಲ್ಲದ್ದುಮಾಡಿ ಗೋಡೇ ಹಾಕ್ಸಿಬಿಟ್ರು. ಆದ್ರೆ ನಮ್ಮ ಮಾಮೂಲೋ, ಮಾಸ್ವಾಮಿ?" ಎಂದು ಕೇಳಿದರು. ಕೃಪಾಳುಗಳಾದ ಮಹಾಪ್ರಭುಗಳವರು, "ಈಗ ಗೋಡೆ ಹಾಕಿಸಿ ಅಲ್ಲಿ ಹುಲ್ಲು ಬೆಳೆಯಿಸಿದ್ದಾರೆ. ಬಂಗಲೆ ಅಂದವೂ ಕೆಟ್ಟುಹೋಗಬಾರದು. ನಿಮ್ಮ ದನಕರುಗಳ ಮೇವಿಗೂ ಕಷ್ಟವಾಗಬಾರದು. ನಿಮ್ಮ ದನಕರುಗಳಿಗೆ ಇಷ್ಟು ಸ್ವಲ್ಪ ಸ್ಥಳದಲ್ಲಿರುವ ಹುಲ್ಲಾದರೂ ಸಾಕೆ? ನಿಮ್ಮ ರಾಸುಗಳು ಮೇಯಲು ಬೇರೆ ಸ್ಥಳವನ್ನು ಕೊಡಿಸುತ್ತೇವೆ. ಚಿಂತಿಸಬೇಡಿ; ಸುಮ್ಮನಿರಿ" ಎಂದು ಅಪ್ಪಣೆ ಕೊಡಿಸಿದರು.

**ಆನೆಗಳನ್ನು ಹಿಡಿಯುವುದರಲ್ಲಿ ಮೇಲ್ಪಾಟುಗಳು**

ಕಾಡಾನೆಗಳನ್ನು ಹಿಡಿದು ಪಳಗಿಸುವ ಖೆಡ್ಡಾ ಏರ್ಪಾಡು, ಅವುಗಳ ಹಾವಳಿಯಿಂದ ವ್ಯವಸಾಯಗಾರರ ಬೆಳೆಗಳನ್ನೂ ಅವರ ಜೀವಗಳನ್ನೂ ರಕ್ಷಿಸುವುದಕ್ಕೆ ಅವಶ್ಯವಾಗಿರುವುದಲ್ಲದೆ, ಮೈಸೂರು ಸಂಸ್ಥಾನದ ವೈಶಿಷ್ಟ್ಯಗಳಲ್ಲೊಂದೆನಿಸಿ ಪ್ರಸಿದ್ಧವಾಗಿಯೂ ಇದೆ. ಆಳಿದ ಮಹಾಸ್ವಾಮಿಯವರಾದ ಶ್ರೀಮನ್ಮಹಾರಾಜರವರು ರಾಜ್ಯಭಾರ ಸೂತ್ರಗಳನ್ನು ಸ್ವೀಕರಿಸಿದ ಮೇಲೆ, ಈ ಖೆಡ್ಡಾ ಏರ್ಪಾಡಿನಲ್ಲಿ ಕೂಡ ತೀವ್ರಾಸಕ್ತಿಯನ್ನು ವಹಿಸಿ, ಒಂದು ಸಲದಿಂದ ಮತ್ತೊಂದು ಸಲಕ್ಕೆ ಅಧಿಕತರವಾದ ಮೇಲ್ಪಾಟುಗಳನ್ನು ಮಾಡಿಸಿ, ಖೆಡ್ಡಾಕಾರ್ಯಕ್ರಮವೇ ಒಂದು ಕುಶಲ ಕಲೆಯೆನಿಸಿ ಸುಪ್ರಸಿದ್ಧವಾಗುವಂತೆ ಪರಿಣಾಮಗೊಳಿಸಿದರು. ಅದನ್ನು ನೋಡಿದ ರಾಜಮಹಾರಾಜರುಗಳೂ, ಗವರ್ನರುಗಳೂ, ವೈಸ್ರಾಯಿಗಳೂ ಆಶ್ಚರ್ಯದಿಂದ ಬೆರಗಾಗಿ ಮಹಾಸ್ವಾಮಿಯವರ ಬುದ್ಧಿ ಚಾತುರ್ಯಗಳನ್ನು ಶ್ಲಾಘಿಸಿ ತೆರಳಿದ್ದಾರೆ. ಕಾಡಾನೆಗಳನ್ನು ಹಿಡಿದಮೇಲೆ ಅವಕ್ಕೆ ಮೇವೂ ನೀರೂ ತಕ್ಕಷ್ಟು ದೊರೆಯುದಂತೆ ಮಾಡಿ— ಕೆಲವು ಸಂದರ್ಭಗಳಲ್ಲಿ ಅವು ದೊರೆಯ



ಕಾರಾಪುರದಲ್ಲಿ

(ಆಳಿದ ಮಹಾಸ್ವಾಮಿಯವರು ಖೆಡ್ಡಾ ಏರ್ಪಾಡನ್ನು ಪರಾಂಬರಿಸಲು ಕಾರಾಪುರದ ಬಿಡಾರದಿಂದ ಚಿತ್ತೈಸುತ್ತಿರುವುದು)

ದಂತೆಯೇ ಮಾಡಿ— ಕ್ರೌರ್ಯವನ್ನು ತೋರಿಸುತ್ತಿದ್ದುದನ್ನು ತಪ್ಪಿಸಿ, ಅವುಗಳು ಮರಿಗಳೊಡನೆ ಜಲಕ್ರೀಡೆಯಾಡಿ ಆನಂದಿಸುವಷ್ಟು ಮಟ್ಟಿಗೆ ಕೂಡ ಜಲ ಸಮೃದ್ಧಿಯುಳ್ಳ ಒಂದು ಕೃತಕ ಜಲಾಶಯುವನ್ನೇ ಖೆಡ್ಡಾ ಆವರಣದೊಳಗೆ ನಿರ್ಮಾಣ ಮಾಡಿಸಿ, ಆಗಾಗ ಕೊಳಕು ನೀರನ್ನು ಆ ಜಲಾಶಯುದಿಂದ ಹೊರಡಿಸಿ ಕಪಿಲಾ ನದಿಯಿಂದ ಶುದ್ಧವಾದ ನೀರನ್ನು ವಿದ್ಯುಚ್ಛಕ್ತಿಯ ಯಂತ್ರದಿಂದ ಎತ್ತಿಸಿ ಭರ್ತಿಮಾಡಿಸುವ ಏರ್ಪಾಡನ್ನು ಮಾಡಿಸಿ, ಕಾಡಾನೆಗಳಿಗೆ ಯಥೇಷ್ಟವಾಗಿ ನೀರೂ ಮೇವೂ ದೊರೆಯುು ವಂತೆ ಮಹಾಪ್ರಭುಗಳವರು ವ್ಯವಸ್ಥೆಮಾಡಿಸಿದರು. ಕಾಡಾನೆಗಳನ್ನು ಹಿಡಿದು ಪಳಗಿಸುವುದಕ್ಕಾಗಿ ಮೈಸೂರು ಸಂಸ್ಥಾನದಲ್ಲಿ ಆಗಾಗ ನಡೆಯುುವ ಖೆಡ್ಡಾ ಏರ್ಪಾಡು ಹೆಜ್ಜೆ ಹೆಜ್ಜೆಗೂ ಪ್ರಾಣಾಪಾಯ ಸಂಭವಗಳಿಂದ ಕೂಡಿ ಸಾಹಸಪ್ರಿಯತೆಗೂ ಧೈರ್ಯೋತ್ಸಾಹಗಳಿಗೂ ನೆಲೆಯೆನಿಸಿದ ಅದ್ಭುತ ದೃಶ್ಯವೆಂದು ಪ್ರಸಿದ್ಧವಾಗಿದೆ. ಅದನ್ನು ನೋಡಿದ ಸ್ವದೇಶ ವಿದೇಶೀಯ ರೆಲ್ಲರೂ ಮನವಾರೆ ಕೊಂಡಾಡಿದ್ದಾರೆ.

ಹಿಂದೆ ಕಾಡಾನೆಗಳ ವಿಷಯದಲ್ಲಿ ಎಷ್ಟು ಕ್ರೌರ್ಯದಿಂದ ವರ್ತಿಸು ತ್ತಿದ್ದರೆಂಬುದನ್ನೂ ಅವುಗಳನ್ನು ಹೇಗೆ ಹಿಡಿಯುತ್ತಿದ್ದರೆಂಬುದನ್ನೂ ಇಲ್ಲಿ ಸೂಚಿಸಿದರೆ, ಆಳಿದ ಮಹಾಸ್ವಾಮಿಯವರಾದ ಶ್ರೀಮನ್ಮಹಾರಾಜರವರು ಮಾಡಿಸಿದ ಮೇಲ್ಪಾಟುಗಳ ಮಹತ್ವವು ಹೃದಯಂಗಮವಾಗಿ ಗೊತ್ತಾಗು ತ್ತದೆ. ಕಾಡಾನೆಗಳ ಹಾವಳಿಯುು ಹೆಚ್ಚಿ ವ್ಯವಸಾಯುಗಾರರ ಬೆಳೆಗಳು ನಷ್ಟವಾಗಲು ಪ್ರಾರಂಭವಾದಾಗಲೆಲ್ಲ ಯಾರು ಬೇಕಾದರೂ ಅವುಗಳನ್ನು ಕೊಲ್ಲಬಹುದೆಂದೂ ಅಥವಾ ಹಿಡಿಯುಬಹುದೆಂದೂ ಸರ್ಕಾರದವರು ಅನುಜ್ಞೆಕೊಡುತ್ತಿದ್ದುದು ಬಹು ಕಾಲದಿಂದ ನಡೆದುಬಂದಿದ್ದ ಪದ್ಧತಿ. ಹಾಗೆ ಅನುಜ್ಞೆಯಾದಮೇಲೆ ಕೆಲವರು ಸಾಹಸಿಗಳು ಅರ್ಧ ಪೌಂಡು ತೂಕದ (ಎಂದರೆ ಇಪ್ಪತ್ತು ತೊಲಗಳ ತೂಕದ) ಗುಂಡುಗಳನ್ನು ಸಣ್ಣ ಫಿರಂಗಿಗಳಿಂದ ಹಾರಿಸಿ ಆನೆಗಳನ್ನು ಕೊಲ್ಲುತ್ತಿದ್ದರು. ಹಾಗೆ ಕೊಂದ ಆನೆಗಳ ಕಿವಿಗಳನ್ನೂ ಬಾಲಗಳನ್ನೂ ಮತ್ತು ಉಗುರುಗಳನ್ನೂ ತಂದೊಪ್ಪಿ ಸಿದರೆ, ಮೃತಪಟ್ಟ ಪ್ರತಿಯೊಂದು ಆನೆಗೂ ಇಪ್ಪತ್ತೈದು ರೂಪಾಯಿಗಳ ಮೇರೆಗೆ ಬಹುಮಾನದ್ರವ್ಯವು ಆನೆಗಳನ್ನು ಕೊಂದವರಿಗೆ ಸಲ್ಲುತ್ತಿದ್ದಿತು. ಗಂಡಾನೆಯು ವಿಷಯುದಲ್ಲಾದರೆ, ಅದರ ದಂತಗಳನ್ನೂ ತಂದೊಪ್ಪಿಸಿ ಬಹುಮಾನವನ್ನು ಪಡೆಯಬೇಕಾಗಿದ್ದಿತು. ಈ ಕ್ರಮದಿಂದ ಆನೆಗಳ ಹಿಂಡು ಹಿಂಡುಗಳೇ ನಾಶವಾಗುವುದಕ್ಕೆ ಕಾರಣವಾಗುತ್ತಿದ್ದುದರಿಂದ, ಅದನ್ನು ತಪ್ಪಿಸಿ, ಕಾಡಾನೆಗಳು ಮೋಸಹೋಗಿ ಗುಂಡಿಗಳಿಗೆ ಬೀಳುವಂತೆ

ಮಾಡಿ ಅವುಗಳನ್ನು ಹಿಡಿಯುವ ಕೆಲಸವು ಪ್ರಾರಂಭವಾಯಿತು. ಆನೆಗಳ ಹಿಂಡು ತಪ್ಪದೆ ಸಂಚರಿಸುವ ಸ್ಥಳಗಳಲ್ಲಿ ಅವು ಮತ್ತೆಲ್ಲಿಗೋ ಹೋಗಿದ್ದಾಗ, ಹತ್ತೂವರೆ ಅಡಿಗಳ ಉದ್ದವೂ ಏಳೂವರೆ ಅಡಿಗಳ ಅಗಲವೂ ಮತ್ತು ಹದಿನೈದು ಅಡಿಗಳ ಆಳವೂ ಇದ್ದ ಗುಂಡಿಗಳನ್ನು ತೋಡಿಸಿ, ಅಲ್ಲಿ ಗುಂಡಿಗಳಿರುವುದು ಗೊತ್ತಾಗದಂತೆ ಗುಂಡಿಗಳ ಮೇಲ್ಭಾಗವನ್ನು ಅಡ್ಡದಬ್ಬೆಗಳಿಂದಲೂ ಸೊಪ್ಪುಸೆದೆಗಳಿಂದಲೂ ಮುಚ್ಚಿ ಹೊರಟುಹೋಗುತ್ತಿದ್ದುದು ವಾಡಿಕೆ. ಆನೆಗಳ ಹಿಂಡು ಆ ಮಾರ್ಗವಾಗಿ ಬಂದಾಗ ಒಂದು ಆನೆಯು ಹಳ್ಳಕ್ಕೆ ಬಿದ್ದು ಘೀಳಿಟ್ಟಿತೆಂದರೆ ಉಳಿದ ಆನೆಗಳು ಭ್ರಾಂತಿಗೊಂಡು ಅತ್ತಿತ್ತ ಓಡಾಡುವುದರಲ್ಲಿ ಸುತ್ತಮುತ್ತಲೂ ಇದ್ದ ಗುಂಡಿಗಳಿಗೆ ಅವುಗಳಲ್ಲಿ ಕೆಲವು ಬೀಳುತ್ತಿದ್ದುವು. ಉಳಿದ ಆನೆಗಳು ಭಯಪಟ್ಟು ದೂರವಾಗಿ ಓಡಿಹೋಗಿ ಮತ್ತೆ ಆ ಕಡೆಗೆ ಸುಳಿಯದೆ ಪ್ರಾಣರಕ್ಷಣೆ ಮಾಡಿಕೊಳ್ಳುತ್ತಿದ್ದುವು. ಗುಂಡಿಗಳಿಗೆ ಬಿದ್ದ ಆನೆಗಳಲ್ಲಿ ಕೆಲವಕ್ಕೆ ಅಂಗಭಂಗವುಂಟಾಗುತ್ತಿದ್ದಿತು. ಕೆಲವು ಆನೆಗಳು ಹದಿನೈದು ಅಡಿಗಳ ಆಳದ ಗುಂಡಿಗೆ ಬಿದ್ದ ರಭಸದಲ್ಲಿ ಅಪಾಯಕರವಾಗಿ ಪೆಟ್ಟುಬಿದ್ದು ಸತ್ತೇಹೋಗುತ್ತಿದ್ದುದೂ ಉಂಟು. ಬದುಕಿದ್ದ ಕೆಲವು ಆನೆಗಳನ್ನೂ ಸಹ ಮೇವೂ ನೀರೂ ಇಲ್ಲದೆ ಅನೇಕ ದಿನಗಳಕಾಲ ಸೊರಗಿಸಿ, ಅವು ಹಸಿವಿನಿಂದಲೂ ಬಾಯಾರಿಕೆಯಿಂದಲೂ ತಲ್ಲಣಿಸಿ ತಟ್ಟಾದಮೇಲೆ, ಅವುಗಳನ್ನು ಪಳಗಿದ ಆನೆಗಳ ಸಹಾಯದಿಂದ ಮೇಲಕ್ಕೆ ತಂದು ಪಳಗಿಸುವ ಕೆಲಸವು ನಡೆಯುತ್ತಿದ್ದಿತು. ಆದರೆ, ಕಾಡಾನೆಗಳನ್ನು ಪಳಗಿಸುವಾಗ್ಗೆ ಅವುಗಳಿಗೆ ಆಗುತ್ತಿದ್ದ ಹಿಂಸೆಯು ಅಷ್ಟಿಷ್ಟಲ್ಲ. ಆಳಿದ ಮಹಾಸ್ವಾಮಿಯವರಾದ ಶ್ರೀ ಚಾಮರಾಜೇಂದ್ರ ಒಡೆಯರವರ ಕಾಲದಲ್ಲಿ ಆ ಪದ್ಧತಿಯು ತಪ್ಪಿಹೋಗಲೇ ಬೇಕೆಂದು ಅಪ್ಪಣೆಯಾಯಿತು. ಆನೆಗಳನ್ನು ಗುಂಡಿಗಳಿಗೆ ಕೆಡುಹದೆ ಇತರ ವಿಧಗಳಲ್ಲಿ ಹಿಡಿಯಬೇಕೆಂದು ವಿಧಾಯಕವಾಯಿತು. ಪಳಗಿದ ಹೆಣ್ಣಾನೆಗಳ ಮೇಲೆ ಕುಳಿತುಕೊಂಡುಹೋಗಿ, ಹಿಂಡಿನಿಂದ ತಪ್ಪಿಸಿಕೊಂಡು ದಾಂಧಲೆ ಮಾಡುತ್ತಿದ್ದ ಸಲಗವನ್ನು ಹಿಂಬಾಲಿಸಿ ಓಡಿಸಿ ಓಡಿಸಿ ಅದು ನಿದ್ರಿಸುವುದಕ್ಕೆ ಅವಕಾಶವನ್ನು ತಪ್ಪಿಸಿ, ಕೊನೆಗೆ ಅದು ದಣಿದು ತಟ್ಟಾಗಿ ಗಾಢ ನಿದ್ರೆ ಮಾಡುವಂತೆ ಸನ್ನಿವೇಶವನ್ನು ಕಲ್ಪಿಸಿ ಅದರ ಕೊರಳಿಗೂ ಕಾಲುಗಳಿಗೂ ಹಗ್ಗಗಳನ್ನು ಕಟ್ಟಿ ಹಗ್ಗಗಳ ಬಿಡಿಕೊನೆಗಳನ್ನು ಮರಗಳಿಗೆ ಬಿಗಿದು ಅದನ್ನು ಬಂಧಿಸಿ ಪಳಗಿಸುವ ವಿಧಾನವೂ ಸ್ವಲ್ಪ ಕಾಲ ಆಚರಣೆಯಲ್ಲಿದ್ದು ಅದೂ ಸರಿಯಾಗಿ ಸಾಗದೆಹೋಯಿತು. ಇದರ ಮೇಲೋ ಪಳಗಿದ ಆನೆಗಳು ಕಾಡಾನೆಯನ್ನು ಅಟ್ಟಿಕೊಂಡುಹೋಗುವುದಕ್ಕೆ ಅವಕ್ಕೆ ಅದರಷ್ಟು

ಬಲವಿರುತ್ತಿರಲಿಲ್ಲ. ಆದಕಾರಣ, ಪಳಗಿದ ಆನೆಗಳ ಬಾಲಗಳ ಪಾರ್ಶ್ವ ಗಳಲ್ಲಿ ದೊಡ್ಡ ಗಾಯುಗಳನ್ನು ಮಾಡಿ ಆ ಗಾಯುಗಳನ್ನು ಮೊನೆಯಾದ ಕಬ್ಬಿಣದ ಕೊಕ್ಕೆಗಳಿಂದ ತಿವಿದು ಅವುಗಳು ಶಕ್ತಿಮಾರಿ ಓಡುವಂತೆ ಮಾಡುತ್ತಿದ್ದ ಕ್ರೂರಕೃತ್ಯವೂ ನಡೆಯಬೇಕಾಗಿದ್ದಿತು. ಅನೇಕ ಸಂದರ್ಭ ಗಳಲ್ಲಿ ಕಾಡಾನೆಯು ಅವುಗಳಿಗಿಂತ ಬಹಳ ವೇಗವಾಗಿ ಓಡಿ ಅವಕ್ಕೆ ದಕ್ಕದೆ ತಪ್ಪಿಸಿಕೊಂಡು ಹೋಗುತ್ತಿದುದೂ ಉಂಟು. ಆದಕಾರಣ, ಕಾಡಾನೆಯನ್ನು ಹಿಡಿಯಲು ಆ ವಿಧಾನವೂ ಪೂರ್ಣವಾಗಿ ಸಫಲವಾಗಲಿಲ್ಲ. ಆದಕಾರಣ, ಆನೆಯ ಹಿಂಡನ್ನೇ ಹಿಡಿಯುವ ಖೆಡ್ಡಾ ಏರ್ಪಾಡು ಆಗಿನಿಂದ ನಡೆದು ಯಶಸ್ವಿಯಾಗಿ ನೆರವೇರುತ್ತ ಬಂದಿದೆ. ಹಿಂಡಿನಿಂದ ತಪ್ಪಿಸಿ ಕೊಂಡು ಜನರಿಗೆ ಪ್ರಾಣಭೀತಿಯನ್ನುಂಟುಮಾಡಿ, ಬೆಳೆಯನ್ನು ಧ್ವಂಸ ಮಾಡಿ ಒಂಟಿಯಾಗಿ ಸುತ್ತಾಡುತ್ತ ಜನರನ್ನು ಸೀಳಿ ಹಾವಳಿಮಾಡುವ ಕಾಡಾನೆಯನ್ನು ಮಾತ್ರ—ಅದನ್ನು ಹಿಡಿಯುವುದಕ್ಕೆ ಸಾಧ್ಯವಾಗದೆ ಹೋದಾಗ—ಗುಂಡಿನಿಂದ ಹೊಡೆದು ಕೊಲ್ಲಬೇಕಾಗುತ್ತದೆ.

ಖೆಡ್ಡಾ ಕಾರ್ಯಕಲಾಪಗಳ ಸಂಕ್ಷೇಪವಿವರವನ್ನು ಇಲ್ಲಿ ಸೂಚಿಸ ಬಹುದಾಗಿದೆ. ನಮ್ಮ ಸಂಸ್ಥಾನದಲ್ಲಿ ಕಾಕನಕೋಟೆ ಕಾಡಿನ ಕಾರಾಪುರ, ಚಾಮರಾಜನಗರದ ತಾಲ್ಲೂಕಿನ ಬೂದಿಪಡಗ, ಮುಂತಾದ ಸ್ಥಳಗಳಲ್ಲಿ ಆನೆಗಳನ್ನು ಹಿಡಿಯುವುದಕ್ಕಾಗಿ ಖೆಡ್ಡಾ ಏರ್ಪಾಡು ಮಾಡುವುದಕ್ಕೆ ಅವಶ್ಯವಾದ ಸಮಸ್ತ ಸೌಕರ್ಯಗಳೂ ಇವೆ. ಅತ್ಯಂತ ಸ್ಥೂಲವಾಗಿ ಹೇಳುವುದಾದರೆ, ಹಲವು ಸಾವಿರ ಮಂದಿ ಷಿಕಾರಿಯವರೂ ಅನೇಕ ಅಧಿಕಾರಿಗಳೂ ಸೇರಿ ಕಾಡಾನೆಯನ್ನು ನೆಲದ ಮಾರ್ಗವಾಗಿಯೋ ಅಥವಾ ನದಿಯ ಮಾರ್ಗವಾಗಿಯೋ ಅಟ್ಟಿಕೊಂಡುಬಂದು ದೊಡ್ಡದೊಂದು ಆವರಣದೊಳಕ್ಕೆ ಕೂಡಿ, ಅನಂತರ ಪಳಗಿದ ಆನೆಗಳ ಸಹಾಯದಿಂದ ಅವಕ್ಕೆ ಹಗ್ಗಗಳನ್ನು ಕಟ್ಟಿ ನಾಗಿಸಿಕೊಂಡು ಹೊರಕ್ಕೆ ತಂದು ಬೇರೆ ಬೇರೆ ಯಾಗಿ ಮರಗಳಿಗೆ ಕಟ್ಟಿಹಾಕಿ ಉಪಾಯದಿಂದ ಪಳಗಿಸುವುದೇ ಖೆಡ್ಡಾ ಕಾರ್ಯಕ್ರಮವೆನ್ನಬಹುದು. ಖೆಡ್ಡಾ ಕೆಲಸವು ಕಾರಾಪುರದ ಸಮೀಪ ದಲ್ಲಿ ನಡೆಯುವುದೇ ಈಗ ಹೆಚ್ಚಾಗಿದೆ. ಅಲ್ಲಿರುವ ಕಾಕನಕೋಟೆ ಕಾಡನ್ನು ನೋಡಿ ಹರ್ಷಾತಿಶಯದಿಂದ ಮೈಮರೆಯದವರೇ ವಿರಳ. ಕಾಡಾನೆಗಳನ್ನು ಕೂಡುವ ಆವರಣವು ಅವುಗಳ ಬಲಕ್ಕೆ ತಡೆಯು ವಂತಿರಲೇ ಬೇಕಷ್ಟೆ? ಕಾಡುಮರಗಳ ಕಂಬಗಳನ್ನೇ ಆಳವಾದ ಗುಂಡಿ ಗಳಲ್ಲಿ ಹೂಳಿ ಅವುಗಳಿಗೆ ಅಡ್ಡಮರಗಳನ್ನು ಹಗ್ಗಗಳಿಂದ ಬಿಗಿದು ಹತ್ತು ಅಡಿಗಳ ಎತ್ತರದ (ಎರಡಾಳುಗಳ ಎತ್ತರದ) ಬಲವಾದ ಆವರಣವನ್ನು

ಏರ್ಪಡಿಸಿರುತ್ತಾರೆ. ಆ ಆವರಣಕ್ಕೆ ಮುಂಭಾಗದಲ್ಲೊಂದು ದೊಡ್ಡ ಬಾಗಿಲೂ ಹಿಂಭಾಗದಲ್ಲೊಂದು ದೊಡ್ಡ ಬಾಗಿಲೂ ಇರುತ್ತವೆ. ಆ ಬಾಗಿಲುಗಳು ಮೇಲಿನಿಂದ ಕೆಳಕ್ಕೆ ಮುಚ್ಚಿಕೊಳ್ಳುವಂತಿರುತ್ತವೆ. ಅವು ಗಳಲ್ಲೊಂದನ್ನು ಮುಚ್ಚಿಯೇ ಇರುತ್ತಾರೆ. ಮತ್ತೊಂದನ್ನು ಮೇಲಕ್ಕೆಳೆದು ಅದರ ಹಗ್ಗಗಳನ್ನು ಮರದ ಕೊಂಬೆಗಳಿಗೆ ಕಟ್ಟಿರುತ್ತಾರೆ. ಆನೆಗಳ ಹಿಂಡು ಆವರಣದೊಳಕ್ಕೆ ನುಗ್ಗಿದೊಡನೆಯೇ ಆ ಹಗ್ಗಗಳನ್ನು ಬಿಚ್ಚಿದರೆ ಬಾಗಿಲು ದಢಾರೆಂದು ಕೆಳಕ್ಕೆ ಬಿದ್ದು ಮುಚ್ಚಿಕೊಳ್ಳುತ್ತದೆ. ಆವರಣಕ್ಕೆ ಐದಾರು ಅಡಿಗಳ ದೂರದಲ್ಲಿ ಅದರ ಹೊರಗಡೆಗೆ ಅದರ ಸುತ್ತಲೂ ಬಹಳ ಆಳವಾದ ಕಂದಕವೊಂದನ್ನು ತೋಡಿರುತ್ತಾರೆ. ಆನೆಗಳು ಆವರಣವನ್ನು ಭೇದಿಸಿ ಕೊಂಡು ಬರುವುದು ಸಾಧ್ಯವಿರುವುದಿಲ್ಲ. ಒಂದುವೇಳೆ ಅವು ಅದನ್ನು ಭೇದಿಸಿಕೊಂಡು ಹೊರಗೆ ಬಂದರೂ ಆ ಕಂದಕವನ್ನು ನೋಡಿ ಹೆದರಿ ಹಿಮ್ಮೆಟ್ಟಬೇಕೆಂಬುದು ಅದನ್ನು ತೋಡಿರುವ ಉದ್ದೇಶ. ಆ ಕಂದಕದ ಅಗಲವು ಮೇಲ್ಭಾಗದಲ್ಲಿ ಎಂಟು ಅಡಿಗಳು ಮತ್ತು ತಳದಲ್ಲಿ ಅಗಲವು ನಾಲ್ಕು ಅಡಿಗಳು. ಅದರ ಆಳವು ಎಂಟು ಅಡಿಗಳು. ಆವರಣದ ಬಾಗಿಲು ಗಳಿರುವ ಸ್ಥಳಗಳಲ್ಲಿ ಮಾತ್ರ ಅದರ ಹೊರಗಡೆಗೆ ಕಂದಕವಿರುವುದಿಲ್ಲ; ಕಂದಕವು ಸುತ್ತಲೂ ಇರುವುದು ಬಾಗಿಲುಗಳ ವರೆಗೆ ಮಾತ್ರವೇ. ಈ ಮೊದಲೇ ಸೂಚಿಸಿದಂತೆ ಆನೆಗಳು ಆವರಣದೊಳಕ್ಕೆ ಪ್ರವೇಶಿಸು ವುದಕ್ಕೆ ಮುಂಚೆ, ಆವರಣದ ಒಂದು ಬಾಗಿಲನ್ನು ಮುಚ್ಚಿಬಿಟ್ಟಿರುತ್ತಾರೆ. ಮತ್ತೊಂದು ಬಾಗಿಲು ತೆರೆದಿದ್ದು ಆ ಬಾಗಿಲಿನಿಂಪ ಕಪಿಲಾ ನದಿಯ ದಡದವರೆಗೂ ಒಂದು ದೊಡ್ಡ ಮಾರ್ಗವು ಏರ್ಪಟ್ಟಿರುತ್ತದೆ. ಆ ಮಾರ್ಗದ ಎರಡು ಪಾರ್ಶ್ವಗಳಲ್ಲಿಯೂ ದೊಡ್ಡ ದೊಡ್ಡ ಕಂಬಗಳನ್ನು ನೆಟ್ಟು ಅವಕ್ಕೆ ಅಡ್ಡಕಂಬಗಳನ್ನು ಬಿಗಿದು, ಆ ಮಾರ್ಗವಾಗಿ ಬಂದ ಆನೆಗಳು ಪಾರ್ಶ್ವ ಗಳಲ್ಲಿ ತಪ್ಪಿಸಿಕೊಂಡುಹೋಗುವುದು ಸಾಧ್ಯವಿಲ್ಲದಂತೆ ಮಾಡಿರುತ್ತಾರೆ. ಆ ಮಾರ್ಗವೂ ಕೂಡ ನದಿಯ ದಡಕ್ಕೆ ಹೋಗುವಾಗ ಅಗಲದಲ್ಲಿ ಕ್ರಮ ಕ್ರಮವಾಗಿ ಹೆಚ್ಚುತ್ತ ಬಂದಿರುತ್ತದೆ. ನದಿಯ ಮಾರ್ಗವಾಗಿ ಹೊರಡಿಸಿ ಕೊಂಡು ಬಂದ ಆನೆಗಳ ಹಿಂಡು ಆ ಮಾರ್ಗಕ್ಕೆ ತಿರುಗಿ ಅದರಲ್ಲಿ ಮುಂದುವರಿಯುವಂತೆ ಮಾಡಿದರೆ ಅದು ಖೆಡ್ಡಾ ಆವರಣದೊಳಕ್ಕೆ ಹೋಗಿ ಸೇರುವುದೊಂದು ಹೊರತು, ಪಾರ್ಶ್ವಗಳಲ್ಲಿ ಮತ್ತೆಲ್ಲಿಂದಲೂ ಹೊರಟುಹೋಗುವುದು ಸಾಧ್ಯವೇ ಇರುವುದಿಲ್ಲ. ಹೀಗೆ ಕಪಿನೀ ನದಿಯ ಒಂದು ಕಡೆಗೆ ಖೆಡ್ಡಾ ಆವರಣವು ಕಲ್ಪಿತವಾಗಿದ್ದು ನದಿಯ ಮತ್ತೊಂದು ಕಡೆಗೆ ದೂರದಲ್ಲಿ ಆನೆಗಳ ಕಾಡು ಇರುತ್ತದೆ. ಆನೆಗಳನ್ನು ಹಿಡಿಯುವ

ಕೆಲಸವು ಸಾಮಾನ್ಯವಾಗಿ ವೈಸ್ರಾಯಿಯವರೇ ಮುಂತಾದವರು ಬಂದಾಗ್ಗೆ ಐದಾರು ವರ್ಷಗಳಿಗೊಂದೊಂದು ಸಲವೂ, ಅಥವಾ ಆನೆಗಳ ಹಾವಳಿಯು ಹೆಚ್ಚಾದರೆ ಇನ್ನೂ ಮುಂಚೆ ಮುಂಚೆಯೂ ನಡೆಯುತ್ತದೆ. ವೈಸ್ರಾಯಿಯವರೇ ಮುಂತಾದವರು ಬರುವುದಕ್ಕೆ ಒಂದೆರಡು ತಿಂಗಳುಗಳ ಮುಂಚೆಯೇ ಅರಮನೆಯ ಬೇಟೆ ಅಧಿಕಾರಿಗಳೂ ಸರ್ಕಾರದ ಫಾರೆಸ್ಟ್ ಇಲಾಖೆಯ ಅಧಿಕಾರಿಗಳೂ ಕಾರಾಪುರದಲ್ಲಿ ಮೊಕ್ಕಾಂ ಮಾಡಿ ಮೇಲ್ವಿಚಾರಣೆ ನೋಡಿಕೊಳ್ಳುತ್ತಾರೆ. ಅವರು ಹಲವು ಸಾವಿರ ಮಂದಿ ಶಿಕಾರಿಯವರನ್ನು ಕಪಿನೀ ನದಿಯ ಆಚೆಯಲ್ಲಿ ದೂರದಲ್ಲಿರುವ ಆನೆಯ ಕಾಡಿಗೆ ಕಳುಹಿಸಿಕೊಟ್ಟು ತಾವೂ ಆಗಾಗ ಅಲ್ಲಿಗೆ ಹೋಗಿ ಕೆಲಸವನ್ನು ನಿರ್ವಹಿಸುತ್ತಾರೆ. ಕಾಡುಕುರುಬರೇ ಮುಂತಾದವರು ಸೇರಿರುವ ಶಿಕಾರಿಯವರು ಆನೆಯ ಹಿಂಡು ಇರುವ ಸ್ಥಳವನ್ನು ಕಂಡುಹಿಡಿದು ಆನೆಗಳು ಯಾವ ಕಡೆಗೆ ಬರುತ್ತಿವೆಯೆಂಬುದನ್ನು ಗೊತ್ತುಮಾಡುತ್ತಾರೆ. ಉಭಯ ಪಾರ್ಶ್ವಗಳಲ್ಲಿಯೂ ಆನೆಯ ಹಿಂಡಿನಿಂದ ಸುಮಾರು ಒಂದು ಮೈಲಿಯ ದೂರದಲ್ಲಿದ್ದು ಅದನ್ನು ಸುತ್ತುವರಿದು, ಹಿಂಡು ಎಡಕ್ಕೆ ತಿರುಗುವ ಸೂಚನೆಯು ಕಂಡುಬಂದರೆ ಎಡ ಭಾಗದವರೂ ಬಲಕ್ಕೆ ತಿರುಗುವ ಸೂಚನೆಯು ಕಂಡುಬಂದರೆ ಬಲ ಭಾಗದವರೂ, ಹಿಂಭಾಗದವರೂ ಆಗಾಗ ಸದ್ದುಮಾಡುತ್ತಿರುವುದರಿಂದ ಆನೆಗಳು ಅಪಾಯವನ್ನು ಶಂಕಿಸಿ ಕ್ರಮ ಕ್ರಮವಾಗಿ ನದಿಯ ಕಡೆಗೆ ಹೊರಡುತ್ತವೆ. ಆದರೆ ಆನೆಗಳೇನಾದರೂ ರೇಗಿದರೆ ಶಿಕಾರಿಯವರಲ್ಲಿ ಒಬ್ಬರೂ ಉಳಿಯುವಂತಿಲ್ಲದ ಅಪಾಯ ಸಂಭವವೇನೊ ಸರ್ವದಾ ಉಂಟು. ನದಿಯಿಂದ ಕ್ಲುಪ್ತ ದೂರದವರೆಗೆ ಆನೆಗಳ ಹಿಂಡು ಬಂದ ಕೂಡಲೆ, ಸಮೀಪದಲ್ಲಿ ಗುಡ್ಡದ ಮೇಲಿನಿಂದ ನೋಡುತ್ತಿರುವವರು ಸಂಜ್ಞೆ ಮಾಡಿದೊಡನೆಯೇ ಮೂರು ನಾಲ್ಕು ಸಾವಿರ ಮಂದಿ ಶಿಕಾರಿಯವರೂ ಹಿಂಡಿನ ಸುತ್ತಲೂ ಬಹು ದೂರದಲ್ಲಿ ಆವರಿಸಿ ನಿಂತು ಕ್ಲುಪ್ತವಾದ ಅಂತರಗಳಲ್ಲಿ ಬೆಂಕಿಯನ್ನು ಹೊತ್ತಿಸಿ ಉರಿಸುತ್ತಾರೆ. ಆನೆಗಳಿಗೆ ಬೆಂಕಿಯನ್ನು ಕಂಡರೆ ಬಹಳ ಭಯ. ಆಗ್ಗೆ ಅವು ನದಿಯೊಳಕ್ಕಿಳಿಯುವುದು ಹೊರತು ಮತ್ತೆಲ್ಲಿಂದ ಪಾರಾಗುವುದಕ್ಕೂ ಅವಕಾಶವಿರುವುದಿಲ್ಲ. ಮಾನ್ಯ ಅತಿಥಿಗಳೂ, ಶ್ರೀಮನ್ಮಹಾರಾಜರವರೂ, ರಾಜಕುಟುಂಬದವರೂ, ಇತರ ಪ್ರೇಕ್ಷಕರೂ, ನದೀ ಪಾತ್ರದಿಂದ ಬಹಳ ಎತ್ತರದಲ್ಲಿರುವ ನದಿಯ ದಡಮುದ್ದಕ್ಕೂ ಹಾಕಿರುವ ಸುಖಾಸನಗಳಲ್ಲಿ ಮಂಡಿಸಿದ ಬಳಿಕ ಕ್ಲುಪ್ತ ಸಂಕೇತದ ಮೂಲಕ ಆಜ್ಞೆಯಾದೊಡನೆಯೇ ಆನೆಗಳನ್ನು ಸುತ್ತುಗಟ್ಟಿರುವವರು ಕೊಂಬುಗಳನ್ನೂದುವುದು, ಡಬ್ಬಗಳನ್ನು

ಬಡಿಯುವುದು, ಬಹಳ ಸದ್ದಾಗುವ ಬಿದಿರಿನ ಕಡಕುಗಳನ್ನಲ್ಲಾಡಿಸುವುದು, ತಮಟೆಗಳನ್ನು ಬಡಿಯುವುದು, ಮುಂತಾದುವುಗಳಿಂದ ಗಗನವನ್ನೇ ಭೇದಿಸುವಂತೆ ಸದ್ದುಮಾಡುತ್ತಾರೆ. ಕಾಡಾನೆಗಳು ಬೆದರಿ ನದಿಯ ನೀರಿಗಿಳಿದು ಓಡಿಹೋಗಲು ಪ್ರಯತ್ನಿಸಿ ನೀರಿಗಿಳಿಯುತ್ತವೆ. ನದಿಯ ಎರಡು ದಡಗಳುದ್ದಕ್ಕೂ ಜನಗಳು ನಿಂತು ಸದ್ದುಮಾಡುತ್ತಿರುತ್ತಾರೆ. ಆನೆಗಳು ನದಿಯ ನೀರಿಗಿಳಿದ ಬಳಿಕ ಮೇಲ್ಭಾಗಕ್ಕೆ ಹೋಗದಂತೆ ತಪ್ಪಿಸುವುದಕ್ಕಾಗಿ ನದಿಯೊಳಗೆ ಅಡ್ಡವಾಗಿ ಬಿದಿರಿನ ಒಡ್ಡುಮಾರ್ಗವನ್ನು ಕಟ್ಟಿ ಅದರ ಮೇಲೆ ಷಿಕಾರಿಯವರು ನಿಂತು ಸದ್ದುಮಾಡುತ್ತಿರುತ್ತಾರೆ. ಆದಕಾರಣ, ಆನೆಗಳು ಆ ಕಡೆಗೆ ತಿರುಗದೆ ನೀರಿನ ಪ್ರವಾಹವು ಹರಿಯುವ ಕಡೆಗೆ ನದೀ ಪಾತ್ರದಲ್ಲಿ ಮುಂದುವರಿಯುತ್ತವೆ. ಆಗ ಪಳಗಿದ ಆನೆಗಳ ಮೇಲೆ ಕುಳಿತು ಬೇಟೆಯ ಅಧಿಕಾರಿಗಳೂ ಇತರ ಅಧಿಕಾರಿಗಳೂ ಸದ್ದುಮಾಡುತ್ತ ಆನೆಗಳನ್ನು ಹಿಂಬಾಲಿಸುತ್ತಾರೆ. ಅದು ಅವರ ಅದೃಷ್ಟ ಪರೀಕ್ಷೆಯ ಸಮಯ. ಅವರುಗಳು ಪಳಗಿದ ಆನೆಗಳಮೇಲೆ ಕುಳಿತಿದ್ದರೂ ಸಹ ಕಾಡಾನೆಗಳೇನಾದರೂ ಎದುರುಬಿದ್ದರೆ ಅವರುಗಳ ಆಯುಸ್ಸು ತೊಡೆದುಹೋದಂತೆಯೇ. ಅವರುಗಳು ನದಿಯ ನೀರಿನಲ್ಲಿ ಆ ರೀತಿ ಕಾಡಾನೆಗಳನ್ನು ಅಟ್ಟಿಕೊಂಡು ಹೋಗುವಾಗಿನ ದೃಶ್ಯವು ಬಹಳ ರಮಣೀಯವಾಗಿರುತ್ತದೆ. ನದಿಯ ಮಾರ್ಗವಾಗಿ ಸಾಗುವಾಗ ಮರಿಯಾನೆಗಳು ನೀರಿನಲ್ಲಿ ಮುಳುಗಿಹೋಗದಂತೆ ದೊಡ್ಡ ಆನೆಗಳು ಸಹಾಯ ಮಾಡುವುದು, ದೊಡ್ಡ ಆನೆಗಳು ಮರಿಯಾನೆಗಳೊಡನೆ ಸರಸವಾಡುತ್ತ ಕರೆದೊಯ್ಯುವುದು, ಕೆಲವು ಆನೆಗಳು ಭಯದಿಂದ ಘೀಳಿಡುವುದು, ಮುಂತಾದುವು ಚಿತ್ತಾಕರ್ಷಕವಾಗಿರುತ್ತವೆ. ನದಿಯ ತೀರದಿಂದ ಖೆಡ್ಡಾ ಆವರಣದ ಕಡೆಗೆ ತಿರುಗುವ ಮಾರ್ಗಕ್ಕೆ ಸ್ವಲ್ಪ ದೂರದಲ್ಲಿ, ಕಾಡಾನೆಗಳು ನದಿಯಲ್ಲಿ ಮುಂದಕ್ಕೆ ಹೋಗದಂತೆ ತಡೆಗಟ್ಟಲು ಪಳಗಿದ ಆನೆಗಳ ಒಂದು ಸಾಲು ನದಿಯಲ್ಲಿ ಅಡ್ಡವಾಗಿ ನಿಂತಿರುತ್ತದೆ. ಅವುಗಳ ಮೇಲೆ ಕುಳಿತಿರುವವರೂ ಕೊಂಬುಗಳನ್ನೂ ತುತ್ತೂರಿಗಳನ್ನೂ ಊದುತ್ತ ಸದ್ದು ಮಾಡುತ್ತಿರುತ್ತಾರೆ. ಆದಕಾರಣ, ಹಿಂದೆ ಅಟ್ಟಿಕೊಂಡು ಬರುತ್ತಿರುವವರು ಕೈಗೆ ಸಿಕ್ಕದೆ ತಪ್ಪಿಸಿಕೊಂಡು ಓಡಿಹೋಗಲು ಖೆಡ್ಡದ ಆವರಣಕ್ಕೆ ಸಾಗುವ ಮಾರ್ಗದಲ್ಲಿ ಹೋಗುವುದೊಂದೇ ತಾವು ಸುರಕ್ಷಿತವಾಗಿರುವ ಉಪಾಯವೆಂದು ಭಾವಿಸಿ ಕಾಡಾನೆಗಳು ಆ ಮಾರ್ಗಕ್ಕೆ ತಿರುಗುತ್ತವೆ. ಅಲ್ಲದೆ ಪಳಗಿದ ಆನೆಗಳಿಂದ ಆ ಮಾರ್ಗದಲ್ಲಿ ಅಲ್ಲಲ್ಲಿ ಲದ್ದಿ ಹಾಕಿಸಿಯೂ ಇರುವುದರಿಂದ, ಕಾಡಾನೆಗಳಿಗೆ

ತಮಗಿಂತ ಮುಂಚೆ ಮತ್ತೆ ಕೆಲವು ಕಾಡಾನೆಗಳು ಆ ಮಾರ್ಗವಾಗಿ ಸಾಗಿವೆಯೆಂದೂ ಆ ಮಾರ್ಗದಲ್ಲಿ ತಾವೂ ಹೋಗುವುದು ಕ್ಷೇಮಕರವೆಂದೂ ತೋರಿಬಂದು ಅವು ಮುಂದೆ ಹೋಗುತ್ತವೆ. ಇದರಮೇಲೆ ಆ ಮಾರ್ಗವು ನಿಶ್ಶಬ್ದವಾಗಿರುವುದರಿಂದಲೂ ಆವರಣದ ಕಂಬಗಳನ್ನೆಲ್ಲ ಸೊಪ್ಪಿನಿಂದ ಮುಚ್ಚಿರುವುದರಿಂದಲೂ ನಿರಾಪದವೆಂದು ನಂಬಿ ಕಾಡಾನೆಗಳು ಧೈರ್ಯದಿಂದ ಮುಂದೆ ಸಾಗುತ್ತವೆ. ಹಿಂದೆ ಅಟ್ಟಿಕೊಂಡು ಬರುತ್ತಿರುವವರ ಸದ್ದು ಹೆಚ್ಚಿದಷ್ಟೂ ಅವು ಉತ್ಸಾಹದಿಂದ ಮುಂದು ವರಿದು ಖೆಡ್ಡಾ ಆವರಣದೊಳಕ್ಕೆ ಸೇರುತ್ತವೆ. ಹಿಂಡಿನಲ್ಲಿ ಕೊನೆಯ ಆನೆಯು ಆವರಣದ ಬಾಗಿಲಿನಿಂದ ಒಳಕ್ಕೆ ಹೋದೊಡನೆಯೇ ಮರಗಳ ಮೇಲಿರುವ ಷಿಕಾರಿಯವರು ಕೊಂಬೆಗಳಿಗೆ ಕಟ್ಟಿರುವ ಬಾಗಿಲಿನ ಹಗ್ಗಗಳ ಕೊನೆಗಳನ್ನು ಬಿಚ್ಚಿಬಿಡುತ್ತಾರೆ. ಖೆಡ್ಡಾ ಆವರಣದ ಬಾಗಿಲು ರಭಸದಿಂದ ಕೆಳಕ್ಕೆ ಬಂದು ಮುಚ್ಚಿಕೊಂಡುಬಿಡುತ್ತದೆ. ಆ ಬಾಗಿಲಿನ ಬಳಿಯಲ್ಲಿ ಮೂರು ಮೂರು ವರಸೆಗಳಲ್ಲಿ ಹತ್ತು ಹತ್ತು ಅಡಿಗಳಿಗಿಂತ ಎತ್ತರವಾಗಿರುವ ಕಾಡುಮರದ ಕಂಬಗಳನ್ನು ಹೂಳಿ ಅವಕ್ಕೆ ಅಡ್ಡವಾಗಿ ಅವುಗಳಂತೆಯೇ ತೊಲೆಗಳಂತಿರುವ ಕಂಬಗಳನ್ನೇ ಹಗ್ಗಗಳಿಂದ ಬಿಗಿದು ಭದ್ರಪಡಿಸಿರುತ್ತಾರೆ. ಕಾಡಾನೆಗಳೆಲ್ಲ ಆವರಣದೊಳಗೆ ಸೆರೆಸಿಕ್ಕಿ ಬಾಗಿಲು ಕೆಳಕ್ಕೆ ಬಿದ್ದೊಡನೆಯೇ ಅನೇಕ ಸಾವಿರ ಮಂದಿ ಷಿಕಾರಿಯವರು ಆವರಣವನ್ನು ಬಳಸಿರುವ ಕಂದಕದ ಸುತ್ತಲೂ ಇಪ್ಪತ್ತು ಇಪ್ಪತ್ತು ಗಜಗಳ ದೂರಕ್ಕೆ ಇಬ್ಬಿಬ್ಬರಂತೆ ಕುಳಿತು ಕಡಕುಗಳು ಮುಂತಾದುವುಗಳನ್ನುಪಯೋಗಿಸಿ ಸದ್ದುಮಾಡುತ್ತಲೂ, ಬೆಂಕಿಯನ್ನು ಹೊತ್ತಿಸಿ ರಾತ್ರಿಗಳಲ್ಲೆಲ್ಲಾ ಒಂದೇಸಮವಾಗಿ ಉರಿಹಾಕಿಕೊಂಡು ಗಲಭೆ ಮಾಡುತ್ತಲೂ ಕಾವಲಿರುತ್ತಾರೆ.

ಆನೆಗಳನ್ನು ಆವರಣದೊಳಗೆ ಸೇರಿಸಿದಮೇಲೆ ಅವಕ್ಕೆ ಸಮೃದ್ಧಿಯಾಗಿ ಮೇವನ್ನೂ ನೀರನ್ನೂ ಒದಗಿಸುತ್ತಿದ್ದು ಅನಂತರ ಒಂದೆರಡು ದಿನಗಳಮೇಲೆ ಅಥವಾ ಇನ್ನೂ ಸ್ವಲ್ಪ ಹೆಚ್ಚು ಕಾಲದ ಮೇಲೆ ಕಾಡಾನೆಗಳಲ್ಲಿ ಕೆಲಕೆಲವನ್ನು ಆವರಣದ ಬಾಗಿಲಿನಿಂದ ಹೊರಕ್ಕೆ ಬಿಟ್ಟುಕೊಂಡು ಅವುಗಳ ಕಾಲುಗಳಿಗೂ ಕೊರಳಿಗೂ ಭಾರಿ ಭಾರಿ ಹಗ್ಗಗಳನ್ನು ಬಿಗಿದು ಸಾಗಿಸಿಕೊಂಡುಹೋಗಿ ಮರಗಳಿಗೆ ಕಟ್ಟಿಹಾಕುವ ಸಾಹಸ ಕಾರ್ಯವು ನಡೆಯುತ್ತದೆ. ಅದಕ್ಕಾಗಿ ಖೆಡ್ಡಾ ಆವರಣದ ಬಾಗಿಲಿನಿಂದ ಮುಂದೆ ಹೊರಭಾಗದಲ್ಲಿ ಮೂರು ಮೂರು ವರಸೆಗಳಲ್ಲಿ ಭಾರಿ ಭಾರಿ ಮರದ ಕಂಬಗಳನ್ನು ಹೂಳಿ, ಅಂತಹವುಗಳನ್ನೇ ಅಡ್ಡವಾಗಿ ಹಲವೆಡೆಗಳಲ್ಲಿ ಹಗ್ಗಗಳಿಂದ

ಬಿಗಿದು ಭದ್ರವಾಗಿ ಏರ್ಪಡಿಸಿರುವ ಕಿರಿದಾದ ಆವರಣವೊಂದು ಆ ಮೊದಲೇ ಸಿದ್ಧವಾಗಿರುತ್ತದೆ. ಅದರ ಹಿಂಭಾಗದಲ್ಲಿ ಮಹಾಸ್ವಾಮಿಯವರೂ, ರಾಜಕುಟುಂಬದವರೂ, ಮಾನ್ಯ ಅತಿಥಿಗಳೂ ಇತರ ಪ್ರೇಕ್ಷಕರೂ ವಿಶೇಷ ರೀತಿಯಲ್ಲಿ ಕಲ್ಪಿತವಾಗಿರುವ "ಗ್ಯಾಲರಿ"ಯಲ್ಲಿ ಮಂಡಿಸಿರುತ್ತಾರೆ. ಈ ಚಿಕ್ಕ ಆವರಣವು ಹೇಗಿದ್ದರೆ ಕಾಡಾನೆಗಳನ್ನು ಬಂಧಿಸುವಾಗಿನ ಅಪಾಯವು ಅತ್ಯಂತ ಕಡಮೆಯಾಗಿರುವುದೆಂಬುದನ್ನು ಬಹು ದೀರ್ಘ ಕಾಲದ ಆಲೋಚನೆಯಿಂದ ನಿರ್ಧರಿಸಿ ಅದಕ್ಕೆ ತಕ್ಕಂತೆ ಏರ್ಪಾಡು ಮಾಡಿಸಿದ ಯಶಸ್ಸು ಆಳಿದ ಮಹಾಸ್ವಾಮಿಯವರಾದ ಶ್ರೀಮನ್ಮಹಾ ರಾಜರವರದು. ಹೀಗೆ ಏರ್ಪಾಡಾಗಿದ್ದೂ ಕೂಡ, ಎಂತಹ ಅಪಾಯ ಗಳೊದಗುವುವೆಂಬುದಕ್ಕೂ, ಹಾಗೆ ಅಪಾಯವು ಸನ್ನಿಹಿತವಾಗಿದ್ದ ಸಂದರ್ಭ ಗಳಲ್ಲಿ ಕೂಡ ಮಹಾಸ್ವಾಮಿಯವರೆಷ್ಟು ಧೈರ್ಯ ಸಾಹಸಗಳಿಂದ ವರ್ತಿಸಿ ಬಹು ಜನರ ಪ್ರಾಣರಕ್ಷಣೆ ಮಾಡಿದ್ದಾರೆಂಬುದಕ್ಕೂ ಮೊದಲನೆಯ ಅಧ್ಯಾಯದಲ್ಲಿ ಕೆಲವು ನಿದರ್ಶನಗಳು ಸೂಚಿತವಾಗಿವೆ. ಬಂಧನಕ್ಕೊಳಗಾಗ ಬೇಕಾಗಿ ಬಂದಾಗ ಕಾಡಾನೆಗಳು ಮಾಡುವ ಭಯಾನಕವಾದ ಬೃಂಹಿತ ಧ್ವನಿಯೂ, ಅವುಗಳು ಪ್ರದರ್ಶಿಸುವ ರೋಷಭೀಷಣತೆಯೂ ಅಸೀಮ ಬಲ ಪ್ರಕಾಶವೂ ಪ್ರತ್ಯಕ್ಷವಾಗಿ ನೋಡಿ ಗ್ರಹಿಸಬೇಕಾದ ಅಂಶಗಳೇ ಹೊರತು ವರ್ಣನೆಯಿಂದ ತಿಳಿಸಿ ಮುಗಿಸಬಹುದಾದವುಗಳಲ್ಲ. ದೊಡ್ಡ ಆವರಣದ ಬಾಗಿಲನ್ನು ಮೇಲಕ್ಕೆತ್ತಿಸಿ, ಅದರ ಮುಂದಕ್ಕಿರುವ ಕಿರಿಯ ಆವರಣದಲ್ಲಿರುವ ಕಬ್ಬಿನ ಜಲ್ಲೆಗಳೇ ಮುಂತಾದುವುಗಳ ಆಕರ್ಷಣದಿಂದ ಕೆಲಕೆಲವು ಕಾಡಾನೆಗಳನ್ನು ದೊಡ್ಡ ಆವರಣದಿಂದ ಅದಕ್ಕೆ ಬಿಟ್ಟು ಕೊಂಡು ಬಾಗಿಲನ್ನು ಮೇಲಿನಿಂದಿಳಿಸಿ ಬಂಧಿಸಿ, ಅವುಗಳು ಇಕ್ಕಟ್ಟಿನಲ್ಲಿ ಸಿಕ್ಕುವಂತೆ ಮಾಡಿ, ಅವುಗಳೆದುರಿಗೂ ಅವುಗಳ ಹಿಂದೆಯೂ, ಅವುಗಳ ಪಾರ್ಶ್ವದಲ್ಲಿಯೂ ಪಳಗಿದ ಆನೆಗಳು ("ಕುಮ್ಕಿ" ಆನೆಗಳು) ಬಳಸಿ ನಿಲ್ಲುವಂತೆ ಏರ್ಪಾಡು ನಡೆಯುವುದು. ಬಂಧನಕ್ಕೊಳಗಾಗುವಾಗ್ಗೆ ಒಂದೊಂದೂ ಏಳೆಂಟು ಟನ್ನುಗಳ ತೂಕವಿದ್ದು ಮಲೆತು ಸಿಂತಿರುವ ಮತ್ತಗಜಗಳು ಆವರಣದ ಕಂಬಗಳನ್ನು ಸೊಂಡಿಲಿನಿಂದ ಸೆಳೆದು ಕುಂಭ ಸ್ಥಳದಿಂದ ಢಿಕ್ಕಿ ಹೊಡೆದು ಪ್ರದರ್ಶಿಸುವ ಭೀಮಬಲ ಪ್ರಕಾಶವನ್ನು ಕಂಡು ತಲೆದೂಗದವರಾರೂ ಇಲ್ಲ. ವಿಶೇಷರೀತಿಯಲ್ಲಿ ಶಿಕ್ಷಣ ಹೊಂದಿರುವ ಅನುಭವಶಾಲಿಗಳಾದ ಸಾಹಸಿಗರು ಕೆಳಕ್ಕಿಳಿದುಹೋಗಿ ಪಳಗಿದ ಆನೆಗಳ ಮಧ್ಯದಲ್ಲಿರುವ ಕಾಡಾನೆಗಳ ಹಿಂಗಾಲುಗಳಿಗೆ ಹೆಬ್ಬೆರಳು ಗಾತ್ರದ ಬಹಳ ಉದ್ದವಾದ ನೂಲು ಹಗ್ಗಗಳಲ್ಲಿ ಹಲವು ವರಸೆಗಳ



ಕುಂಕಿ ಆನೆಗಳ ಸಹಾಯದಿಂದ ಕಾಡಾನೆಯನ್ನು ಬಂಧಿಸಿ ಸಾಗಿಸಿಕೊಂಡುಹೋಗುವುದು



ಕಾಡಾನೆಯನ್ನು ಕುಂಕಿ ಆನೆಯ ಸಹಾಯದಿಂದ ಪಳಗಿಸುತ್ತಿರುವುದು



ಮರಕ್ಕೆ ಬಿಗಿದಿರುವ ಮರಿಯಾನೆ

ಮಟ್ಟಿಗೆ ಘಾಸಿಪಡಿಸಿತು. ಪ್ರಜ್ಞೆತಪ್ಪಿದ ಆತನನ್ನು ದೂರವಾಗಿ ಸಾಗಿಸಿ ಕೊಂಡು ಹೋದಮೇಲೆ ಸಹ ಆತನ ಜೊತೆಯವರು ಆ ಸಲಗವನ್ನು ಬಂಧಿಸುವ ಪ್ರಯತ್ನಮಾಡಿದರು. ಅವರು ಅತ್ಯಂತ ಧೈರ್ಯದಿಂದಲೂ ಜಾಣ್ಮೆಯಿಂದಲೂ ಕೆಲಸ ಮಾಡಿಯೂ ಕೂಡ ಆ ಆನೆಯನ್ನು ಬಂಧಿಸಲು ಬಹು ಕಾಲ ಹೆಣಗಬೇಕಾಯಿತು. ಕೊನೆಗೆ ಅದರ ಕಾಲುಗಳಿಗೆ ಹಗ್ಗ ಗಳನ್ನು ಬಿಗಿದು, ಅದರ ಕೊರಳಿಗೂ ಮೈಗೂ ಬಿಗಿದಿದ್ದ ಹಗ್ಗಗಳ ಕೊನೆ ಗಳನ್ನು ಅದರ ಉಭಯ ಪಾರ್ಶ್ವಗಳಲ್ಲಿಯೂ ಇದ್ದ ಪಳಗಿದ ಆನೆಗಳ (ಎಂದರೆ "ಕುಮ್ಕಿ" ಆನೆಗಳ) ಕೊರಳಿಗೂ ಮೈಗೂ ಬಿಗಿದು ಮುಂದೆ ಸಾಗಿಸಲು ಪ್ರಯತ್ನಿಸಿದಾಗ ಅದು ಅತ್ಯಂತ ರಭಸದಿಂದ— ತನ್ನ ಅಂಗಾಂಗಗಳೂ ಬಂಧಿತವಾಗಿ ಸ್ವಾಧೀನ ತಪ್ಪಿದ್ದ ಆಗಿನ ಸ್ಥಿತಿಯಲ್ಲಿ ಕೂಡ— ಜೊತೆಯ ಆನೆಗಳನ್ನೇ ದರದರನೆ ಸೆಳೆದುಕೊಂಡು ಅಗಡುತನ ವನ್ನು ತೋರಿಸಿತು. ಒಡನೆಯೇ ಆ ಸಲಗವು ಆವರಣದ ಅಡ್ಡಕಂಬ ವೊಂದನ್ನು ಸೊಂಡಿಲಿನಲ್ಲಿ ಹಿಡಿದು ಅದನ್ನು ಅಲುಗಾಡಿಸಿ ಅದನ್ನು ಕಿತ್ತು ಹಾಕಿದುದನ್ನು ಕಂಡು ಪ್ರೇಕ್ಷಕರನೇಕರು ಭಯದಿಂದ ನಡುಗಿದರು. ಮಾವಟಿಗರಲ್ಲಿ ಕೆಲವರು ಪ್ರಾಣಭೀತಿಯಿಂದ ತಲ್ಲಣಿಸಿ ತಾವು ಕುಳಿತಿದ್ದ ಪಳಗಿದ ಆನೆಗಳ ಮೇಲಿನಿಂದಲೇ ಹಾರಿ ಕೆಳಕ್ಕೆ ಧುಮ್ಮಿಕ್ಕಿ ತಲೆ ಮರೆಸಿ ಕೊಂಡರು. ಆಳಿದ ಮಹಾಸ್ವಾಮಿಯವರಾದ ಶ್ರೀಮನ್ಮಹಾರಾಜರವರು ಆಗ ತಮ್ಮ ದೇಹಾಪಾಯವನ್ನು ಕೂಡ ಗಮನಿಸದೆ ಮುಂದೆ ನುಗ್ಗಿ, ಕಾರ್ಯಸಾಧನೆಗೆ ಜಾಣ್ಮೆಯಿಂದ ಸಲಹೆಗಳನ್ನಿತ್ತು, ಸಲಗದೊಡನೆ— ಸೆಣಸಿ ಅದರ ಅಗಡುತನಕ್ಕೆ ಅಡ್ಡಿಯನ್ನುಂಟುಮಾಡುತ್ತಿದ್ದ ಐದು ಪಳಗಿದ ದೊಡ್ಡ ಆನೆಗಳ ಜೊತೆಗೆ ಆರು ಭಾರಿ ಆನೆಗಳನ್ನು ಬರಮಾಡಿ ಕೆಲಸ ನಡೆಯಿಸುವಂತೆ ಆಜ್ಞಾಪಿಸಿದರು. ಮಹಾಸ್ವಾಮಿಯವರು ತಾವೇ ಮುಂದೆ ಬಂದು ನಿಂತು ಅಸಾಧಾರಣವಾದ ಸಮಯಸ್ಫೂರ್ತಿಯಿಂದ ಸಲಹೆಗಳನ್ನಿತ್ತು ಭೀತರಾಗಿದ್ದ ಕೆಲಸಗಾರರ ಹೃದಯದಲ್ಲಿ ಮತ್ತೆ ಧೈರ್ಯವು ಮೂಡುವಂತೆ ಮಾಡಿದ ಬಗೆಯನ್ನು ಎಷ್ಟು ಕೊಂಡಾಡಿದರೂ ಸಾಲದು. ಮಹಾಸ್ವಾಮಿಯವರು ಅಪಾಯವನ್ನೂ ಗಮನಿಸದೆ ಮುಂದೆಬಂದ ಪ್ರತ್ಯಕ್ಷ ನಿದರ್ಶನದ ಪ್ರಭಾವದಿಂದ ಉತ್ತೇಜಿತರಾದ ಮಾವಟಿಗರೂ ಇತರರೂ ಆ ಹನ್ನೊಂದು ಆನೆಗಳ ಸಹಾಯದಿಂದ ಆ ಕಾಡಾನೆಯನ್ನು ಅಂಕೆಯಲ್ಲಿಟ್ಟು ಮುಂದಕ್ಕೆ ಸಾಗಿಸಿಕೊಂಡು ಹೋದರು. ಆದರೂ ಹಿಂಡಿನ ಸಲಗವಾಗಿದ್ದ ಆ ಹೆಣ್ಣಾನೆಯೂ, ತಮ್ಮ ಒಡತಿಯಾಗಿದ್ದ ಅದರ ನಿದರ್ಶನದಿಂದ ಇತರ ಕಾಡಾನೆಗಳೂ,



ಹುಲಿಯ ಬೇಟೆಗಾಗಿ

(ಆಳುವ ಮಹಾಸ್ವಾಮಿಯವರು ತಮ್ಮ ವಿವಾಹವಾದ ತರುಣದಲ್ಲಿ ಶ್ರೀ ಮಹಾರಾಣಿಯವರೊಡನೆ ಆನೆಯಮೇಲೆ ಕುಳಿತು ಹುಲಿಯ ಬೇಟೆಗಾಗಿ ದಯಮಾಡುತ್ತಿರುವುದು)

(ಅವುಗಳನ್ನು ಬಂಧಿಸಿ ಸಾಗಿಸಿಕೊಂಡು ಹೋಗುವಾಗ್ಗೆ) ಪ್ರದರ್ಶಿಸಿದ ಅಗಡುತನವನ್ನು ಕಂಡು ಸಮಸ್ತರೂ ಪ್ರಾಣಭೀತಿಯಿಂದ ತಲ್ಲಣಿಸುವಂತಾಯಿತು. ಎರಡು ಮೂರು ಕಾಡಾನೆಗಳಂತೂ ಪಳಗಿದ ಆನೆಗಳ ಮೈಗೆ ಬಂಧಿತವಾಗಿದ್ದೂ ಅವುಗಳನ್ನೂ ದರದರನೆ ಎಳೆದುಕೊಂಡು ಅಂಕೆ ತಪ್ಪಿ ಮನಸ್ವಿಯಾಗಿ ಅತ್ತಿತ್ತ ನುಗ್ಗುತ್ತ, ಎದುರಿಗೆ ಸಿಕ್ಕಿದ ಬಿದಿರುಮೆಳೆ ಮುಂತಾದುವುಗಳನ್ನು ಧ್ವಂಸಮಾಡುತ್ತ, ಯಾರಿಗೆ ಯಾವ ಕ್ಷಣದಲ್ಲಿ ಯಾವ ಅಪಾಯವೋ—ಎಂಬ ಭಯವನ್ನುಂಟುಮಾಡುತ್ತ, ಮೊದಲೇ ಮೈಸೂರು ಸಂಸ್ಥಾನದ ವೈಶಿಷ್ಟ್ಯವೆನಿಸಿ ಪ್ರಖ್ಯಾತವಾಗಿದ್ದ ಖೆಡ್ಡಾ ಕಾರ್ಯಕಲಾಪಗಳು ಅಂದು ಮತ್ತಷ್ಟು ರುದ್ರಸೌಂದರ್ಯದಿಂದ ಬೆಳಗಿ ಭಯಾನಕವೆನಿಸುವಂತೆ ಮಾಡಿದುವು. ಆ ಆನೆಗಳನ್ನು ಸಾಗಿಸಿಕೊಂಡು ಹೋಗುತ್ತಿರುವಾಗ, (ಆಗ್ಗೆ ಪ್ರಿನ್ಸ್ ಆಫ್ ವೇಲ್ಸರವರಾಗಿದ್ದ) ಜಾರ್ಜ್ ಪ್ರಭುಗಳವರೂ ಅವರ ಪತ್ನಿಯುವರಾದ ಮೇರೀ ರಾಣಿಯವರೂ ಆಶ್ಚರ್ಯಚಕಿತರಾಗಿ, ಆಳಿದ ಮಹಾಸ್ವಾಮಿಯವರಾದ ಶ್ರೀಮನ್ಮಹಾರಾಜರವರು ಅಪಾಯಕ್ಕೆದೆಕೊಟ್ಟು ಕೆಲಸಗಾರರಿಗೆಲ್ಲ ಧೈರ್ಯವನ್ನುಂಟುಮಾಡಿ ಹುರಿದುಂಬಿಸುತ್ತ ಹೇಗೆ ಕೆಲಸನಡೆಯಬೇಕೆಂದು ಸಲಹೆ ಹೇಳುತ್ತ ಆನೆಗಳಿಗೆ ತೀರ ಸಮೀಪದಲ್ಲಿ ಪಾದಚಾರಿಗಳಾಗಿ ತೆರಳಿದ ಬಗೆಯನ್ನು ಕಂಡು ಹರ್ಷಿಸಿ, ತಾವೂ ಸಹ ನಿರ್ಭೀತರಾಗಿ ಅನತಿದೂರದಲ್ಲಿ ಪಾದಚಾರಿಗಳಾಗಿಯೇ ಹಿಂಬಾಲಿಸಿ, ಅರ್ಧ ಮೈಲಿಗಿಂತ ಹೆಚ್ಚು ದೂರ ನಡೆದುದನ್ನು ಆಗಿನ ಪತ್ರಿಕೆಗಳೆಲ್ಲ ಶ್ಲಾಘಿಸಿದುವು. ಆಳಿದ ಮಹಾಸ್ವಾಮಿಯವರಾದ ಶ್ರೀಮನ್ಮಹಾರಾಜರವರು ಮತ್ತೂ ಹೆಚ್ಚಿನ ಅಪಾಯ ಸಂಭವಕ್ಕೊಳಗಾಗಿ ಮತ್ತಷ್ಟು ಮುಂದೆ ಚಿತ್ತೈಸುತ್ತಿದ್ದರೆಂಬುದನ್ನು ತಿಳಿಸಬೇಕಾದ ಆವಶ್ಯಕತೆಯೇ ಇಲ್ಲ. ೧೯೧೩ನೆಯ ಇಸವಿ ನವೆಂಬರು ೧೪ನೆಯ ತಾರೀಖಿನ ದಿನ ಕಾರಾಪುರದ ಖೆಡ್ಡಾದಲ್ಲಿ ಕಾಡಾನೆಗಳನ್ನು ಬಂಧಿಸುವ ಕೆಲಸವು ನಡೆದಾಗ ಅರುವತ್ತು ವರ್ಷಗಳಿಗಿಂತಲೂ ಹೆಚ್ಚು ವಯಸ್ಸಾಗಿದ್ದ ಒಂದು ಆನೆಯು ಗುಂಪಿನ ಸಲಗಕ್ಕಿಂತ ಹೆಚ್ಚು ಅಗಡುತನಕ್ಕಾರಂಭಿಸಿ ತನ್ನ ಅಧಟನ್ನು ತೋರಿಸಿತು. ತನ್ನ ಕಾಲುಗಳಿಗೆ ಹಗ್ಗಗಳನ್ನು ಕಟ್ಟಿದಾಗಲೂ ಅದು ಸುಮ್ಮನಿದ್ದು ಕೊರಳಿಗೆ ಹಗ್ಗದ ಕುಣಿಕೆಯು ಬಿದ್ದಾಗ ಅದು ವಿಸ್ಮಯಕರವಾದ ಹೋರಾಟಕ್ಕೆ ಪ್ರಾರಂಭಿಸಿ ವಿಜೃಂಭಿಸಿತು. ಅದಕ್ಕೆ ನಾಲ್ಕು ದಿನಗಳಿಗೆ ಮುಂಚೆ (ನವೆಂಬರು ೧೦ನೆಯ ತಾರೀಖು ಸೋಮವಾರ) ಸಲಗವನ್ನು ಬಂಧಿಸಿದಾಗ ಕೂಡ ಅಷ್ಟು ಕಷ್ಟವಾಗಿರಲಿಲ್ಲ. ಅರಮನೆಯ ಗಜಶಾಲೆಯ ಆನೆಗಳಲ್ಲೆಲ್ಲ ಅತ್ಯಂತ ಬಲಿಷ್ಠವಾದ

ಕಾಳಿಗದ ಆನೆಯಾಗಿದ್ದ "ಮೋತೀಲಾಲ್" ಎಂಬ ಹೆಸರಿನ ಗಜರಾಜನನ್ನು ಹೋರಾಟದ ರಂಗಕ್ಕೆ ತಂದೂ ಫಲವಾಗಲಿಲ್ಲ. ಆ ಕಾಡಾನೆಯು ಘಾತಿಸಿದ ರಭಸಕ್ಕೆ ಅದು ಕೂಡ ಘೀಳಿಟ್ಟು ಆರ್ತಸ್ವರದಿಂದ ಬೃಂಹಿತ ಧ್ವನಿಮಾಡಿ, ನೋವನ್ನು ಸಹಿಸಿಕೊಂಡು ಮೊದಲಿಗಿಮ್ಮಡಿಯಾದ ರಭಸ ದಿಂದಲೂ ಹುಮ್ಮಸ್ಸಿನಿಂದಲೂ ಕಾಳಿಗವಾಡಿತು. ಆದರೆ ಕಾಡಾನೆಯು ಬೆಟ್ಟದಂತೆ ಅದರ ಮೇಲೆರಗಿದಾಗ ಅದು ಕೆಳಕ್ಕುರುಳುವ ಸ್ಥಿತಿಗೆ ಬಂದು ತತ್ತರಿಸಿತು. ಪ್ರೇಕ್ಷಕರಿಗೆ ದಿಗ್ಭ್ರಮೆಹಿಡಿಯುವ ಮಟ್ಟಿನ ಬಲಾಢ್ಯತೆ ಯಿಂದ ಕಾಡಾನೆಯು ತನ್ನ ಹಿಂದಿನ ಆನೆಗಳೆರಡನ್ನು ತಳ್ಳಿ ಹಿಮ್ಮೆಟ್ಟಿಸಿ, ತನ್ನ ಮುಂದಿದ್ದ ಎರಡು ಆನೆಗಳನ್ನು ಮುಂದೆ ನೂಕಿ ಹೆಬ್ಬಾಗಿಲಿಗೆ ಒತ್ತರಿಸಿದ ರಭಸಕ್ಕೆ ಖೆಡ್ಡದ ಹೆಬ್ಬಾಗಿಲಿನ ಅಡ್ಡಕಂಬಗಳು ಮುರಿದು ನೆಲಕ್ಕುರುಳಿದುವು. ಕಾಡಾನೆಯು ಸೊಂಡಿಲಿನಿಂದ ಜಗ್ಗಿಸಿ ಎಳೆದ ರಭಸಕ್ಕೆ ಮತ್ತೆ ಕೆಲವು ಕಳಚಿಬಂದುವು. ಪಳಗಿದ ಆನೆಗಳಲ್ಲೊಂದರ ಮಾವಟಿಗನು ಪ್ರಾಣಭಯದಿಂದ ಬಾಗಿಲುವಾಡದ ಅಡ್ಡತೊಲೆಯೊಂದಕ್ಕೆ ನೇತುಬಿದ್ದನು. ಮತ್ತೊಬ್ಬ ಮಾವಟಿಗನು ಉನ್ಮತ್ತನಂತೆ ಪಾರ್ಶ್ವಕ್ಕೆ ನೆಗೆದು ಕಾಲನ್ನುಳುಕಿಸಿಕೊಂಡು ಬಾಧೆಪಟ್ಟನು. ಕಾಡಾನೆಯ ಹಾವಳಿಗೆ ಕೋಲಾಹಲವೆದ್ದಿತು. ವಿಪತ್ತೇ ಅಂಗವನ್ನು ತಳೆದು ಆ ಕಾಡಾನೆಯ ರೂಪದಲ್ಲಿ ಬಂದಿದ್ದಂತೆ ತೋರುತ್ತಿದ್ದ ಆ ಸಮಯದಲ್ಲಿ ಮಹಾಸ್ವಾಮಿ ಯವರೂ, ಕೆಲವರು ಅಧಿಕಾರಿಗಳೂ ಅಸೀಮಧೈರ್ಯದಿಂದ ಮುಂದೆ ಬಂದರು. ಮಹಾಸ್ವಾಮಿಯವರು ಉತ್ತಮವಾದ ಸಲಹೆಗಳನ್ನಿತ್ತು, ದೂರದಲ್ಲಿದ್ದ ಅನೇಕ ಪಳಗಿದ ಆನೆಗಳನ್ನು ನಿಮಿಷ ಮಾತ್ರದಲ್ಲಿ ಬರಮಾಡಿ, ಅವುಗಳಿಂದ ವ್ಯೂಹರಚನೆ ಮಾಡಿಸಬೇಕಾದ ವಿಚಕ್ಷಣೆಯನ್ನು ತಿಳಿಸಿದರು. ಆ ಕಾಡಾನೆಯ ಅಗಡುತನವನ್ನು ನಿಲ್ಲಿಸಿ ಅದನ್ನು ಹತೋಟಿಗೊಳಪಡಿಸಿದ ಪ್ರಯತ್ನದಲ್ಲಿ ಅವರು ತಮ್ಮ ದೇಹಾಪಾಯ ಸಂಭವದ ಕಡೆಗೆ ಗಮನವೇ ಇಲ್ಲದೆ ವರ್ತಿಸಿದ ಬಗೆಯನ್ನು ಕಂಡವರೆಲ್ಲರೂ ಬೆರಗಾದರು; ಮಾನ್ಯರಾದ ಅತಿಥಿಗಳಾಗಿದ್ದ ವೈಸ್ರಾಯಿಯವರು ಅದನ್ನು ಬಹುವಾಗಿ ಶ್ಲಾಘಿಸಿದರು. ಕೊನೆಗೆ ಆ ಕಾಡಾನೆಯು ಅನೇಕ ಪಳಗಿದ ಆನೆಗಳ ಮಧ್ಯದಲ್ಲಿ, ಸೆರೆ ಸಿಕ್ಕಿದ ವೀರನಂತೆ ಹೆಜ್ಜೆ ಹೆಜ್ಜೆಗೂ ಬಂಧನದಿಂದ ಪಾರಾಗುವ ಪ್ರಯತ್ನ ಮಾಡುತ್ತ, ಪ್ರಯತ್ನವು ವಿಫಲವಾದುದಕ್ಕಾಗಿ ರೋಷೋನ್ಮತ್ತತೆ ಯಿಂದ ಮತ್ತೆ ಮತ್ತೆ ಬಲಪ್ರಕಾಶಮಾಡುತ್ತ ನಿರ್ವಾಹವಿಲ್ಲದೆ ಮುಂದೆ ಸಾಗಿದುದನ್ನು ಕಂಡು ಸಾವಿರಾರು ಮಂದಿಗಳು ಕೋಲಾಹಲಧ್ವನಿ ಮಾಡಿದರು; ಅಂದಿನ ವಿಪತ್ತಿನಿಂದ ತಮ್ಮನ್ನು ಪಾರುಮಾಡಿದ



ಆಳುವ ಮಹಾಸ್ವಾಮಿಯವರು
(ಪ್ರಜೆಗಳಿಗೆ ಬಹಳ ಹಿಂಸೆಯನ್ನುಂಟುಮಾಡುತ್ತಿದ್ದ ಕಾಡಾನೆಯನ್ನು ಕೊಂದು

ಮಹಾಸ್ವಾಮಿಯವರ ಅತುಳ ಧೈರ್ಯವನ್ನೂ ಅಮಿತ ಕಾರ್ಯವಿಚಕ್ಷಣೆ ಯನ್ನೂ ತಮ್ಮ ಮನಸ್ಸಿನಲ್ಲೇ ಮೌನವಾಗಿ ಶ್ಲಾಘಿಸಿ ಹೃತ್ಪೂರ್ವಕವಾಗಿ ಶ್ರೇಯಃಪ್ರಾರ್ಥನೆ ಮಾಡಿದರು. ಮಹಾಸ್ವಾಮಿಯವರು ಆಗಿನಿಂದ ಅನೇಕವೇಳೆ ಹೀಗೆ ಅಸೀಮಧೈರ್ಯದಿಂದ ವರ್ತಿಸಿ ಪ್ರೇಕ್ಷಕರನ್ನು ವಿಪತ್ತಿನಿಂದ ಪಾರುಮಾಡಿದ್ದರು; ಅಲ್ಲದೆ ಅನನ್ಯ ಸುಲಭವಾದ ಬುದ್ಧಿ ಕೌಶಲ್ಯವನ್ನು ಪ್ರದರ್ಶಿಸಿ, ಕಾಡಾನೆಗಳನ್ನು ಬಂಧನಕ್ಕೊಳಗುಮಾಡುವ ಆವರಣವು ವಿಶಾಲವಾಗಿರುತ್ತಿದ್ದುದರಿಂದ ಅವಕ್ಕೆ ಕಾಲುಗಳಿಗೂ ಕೊರಳುಗಳಿಗೂ ಹಗ್ಗಗಳನ್ನು ಬಿಗಿಯುವಾಗ ಅವುಗಳ ಅಗಡುತನಕ್ಕವಕಾಶ ವಾಗುತ್ತಿದ್ದುದನ್ನು ಗ್ರಹಿಸಿ, ಆ ಆವರಣದ ರಚನೆಯಲ್ಲೇ ಅನೇಕ ಮಾರ್ಪಾಟುಗಳನ್ನು ಮಾಡಿಸಿ, ಅದು ಮೊದಲಿರುತ್ತಿದ್ದುದಕ್ಕಿಂತ ವಿಸ್ತೀರ್ಣದಲ್ಲಿ ಕಡಮೆಯಾಗಿರುವಂತೆ ಏರ್ಪಡಿಸಿ ಅಪಾಯದ ಸಂಭವ ವನ್ನೇ ಕಡಮೆಮಾಡಿಸಿದ್ದರು.

ಹಗ್ಗಗಳನ್ನು ಕಟ್ಟಿ ಆನೆಗಳನ್ನು ಖೆಡ್ಡಾ ಆವರಣದಿಂದ ದೂರ ದೂರವಾಗಿ ಸಾಗಿಸಿಕೊಂಡುಹೋಗಿ ಮರಗಳಿಗೆ ಕಟ್ಟಿಹಾಕಿದ ಮೇಲೆ, ಅವುಗಳು ಬಂಧನದಿಂದ ಪಾರಾಗಲು ಎಳೆದಾಡುವ ರಭಸದಲ್ಲಿ ಹಗ್ಗಗಳು ಒತ್ತಿ ಒತ್ತಿ ಚರ್ಮವು ಕಿತ್ತುಹೋಗಿ ಹುಣ್ಣಾಗುತ್ತದೆ. ಹಿಂದೆ ಆ ಹುಣ್ಣು ಗಳು ಕೆರಳಿ, ಕೀತು, ಹುಳುಗಳು ಬಿದ್ದು, ಆ ಕಾಡಾನೆಗಳಿಗೆ ಅಪಾಯ ವಾಗುತ್ತಿದ್ದುದುಂಟು. ದಯಾಳುಗಳಾದ ಶ್ರೀಮನ್ಮಹಾರಾಜ ಶ್ರೀ ಕೃಷ್ಣರಾಜೇಂದ್ರ ಒಡೆಯರವರು ಅದಕ್ಕೆ ಅವಕಾಶವೇ ಇಲ್ಲದಂತೆ ತಪ್ಪಿಸಿ, ಉತ್ತಮ ರೀತಿಯ ಚಿಕಿತ್ಸೆ ನಡೆಯುವಂತೆಯೂ, ಗಾಯವಿಲ್ಲದ ಭಾಗ ಗಳಿಗೆ (ಪಳಗಿದ ಆನೆಗಳ ಸಹಾಯದಿಂದ) ಹಗ್ಗಗಳನ್ನು ಕಟ್ಟಿಸು ವಂತೆಯೂ ಏರ್ಪಾಡು ಮಾಡಿಸಿದ್ದರು. ಮರಗಳಿಗೆ ಕಟ್ಟಿದ ಮೇಲೆ ಕಾಡಾನೆಗಳು ಸ್ವಾತಂತ್ರ್ಯವನ್ನು ಕಳೆದುಕೊಂಡು ಬಂಧನಕ್ಕೊಳಗಾದ ದುಃಖದಿಂದಲೂ ರೋಷದಿಂದಲೂ ಮೇವನ್ನು ಕೂಡ ಸ್ವೀಕರಿಸದೆ ನಿಂತಿರುತ್ತವೆ. ಅವಕ್ಕೆ ಸಂತೋಷವುಂಟಾಗುವಂತಹ ಹಾಡುಗಳನ್ನೂ ಪರಾಕು ಗೀತಗಳನ್ನೂ ಹೇಳಿಸಿ ಅವು ಮೇವನ್ನು ಸ್ವೀಕರಿಸುವಂತೆ ಮಾಡುವ ಸುಸಂಸ್ಕೃತವಾದ ಏರ್ಪಾಡನ್ನು, ಆಳಿದ ಮಹಾಸ್ವಾಮಿ ಯವರಾದ ಶ್ರೀಮನ್ಮಹಾರಾಜರವರು ಈಚೆಗೆ ಮಾಡಿಸಿದರು. ಇದು ಬಹು ಕಾಲ ಯೋಚಿಸಿ ಯೋಚಿಸಿ, ಅನೇಕ ಪ್ರಯೋಗಪರೀಕ್ಷೆಗಳನ್ನು ನೆರವೇರಿಸಿ ಗಜಹೃದಯವನ್ನರಿತುಕೊಂಡು ಕೊನೆಗೆ ಯಶಸ್ವಿಯಾದ ಸಫಲ ರೀತಿಯಲ್ಲಿ ನಡೆದಿರುವ ಹೊಸ ಏರ್ಪಾಡು. ಇದರ

ಮೇರೆಗೆ ಕಾಡಾನೆಗಳು ಮೇವನ್ನು ಸ್ವೀಕರಿಸುವಂತೆ ಮಾಡುವ ನವೀನ ವಿಧಾನಕ್ಕೂ, ಕಾಡಾನೆಗಳು ಮೇವು ಬಿಟ್ಟು ಸೊರಗಿ ಸೊರಗಿ ಸಾಕಾಗಿ ಕೊನೆಗೆ ತಾವೇ ಮೇವನ್ನು ಸ್ವೀಕರಿಸುವವರೆಗೂ ತಾಟಸ್ಥ್ಯ ವಹಿಸಿ ಸುಮ್ಮನಿರುತ್ತಿದ್ದ ಹಿಂದಿನ ವಿಧಾನಕ್ಕೂ ಎಷ್ಟು ವ್ಯತ್ಯಾಸವೆಂಬುದನ್ನೂ ಆಳಿದ ಮಹಾಸ್ವಾಮಿಯವರ ಕೃಪಾಳುತನವೆಷ್ಟು ಶ್ರೇಷ್ಠವಾದು ದೆಂಬುದನ್ನೂ ಹೇಳಬೇಕಾದ ಆವಶ್ಯಕತೆಯೇ ಇಲ್ಲ. ಕಾಡಾನೆಗಳನ್ನು ಬಂಧಿಸಿದ ಮೇಲೆ ಅವುಗಳನ್ನು ಪಳಗಿಸುವ ಕೆಲಸವು ಕ್ರಮ ಕ್ರಮ ವಾಗಿಯೂ ನಿಧಾನವಾಗಿಯೂ ನಡೆಯುತ್ತದೆ. ಅದರಲ್ಲಿ ಅನುಭವಸ್ಥರಾದ ಮೇಧಾವಿಗಳು ವಿಶೇಷ ಬುದ್ಧಿವಂತಿಕೆಯಿಂದಲೂ ಚಾತುರ್ಯದಿಂದಲೂ ಕೆಲಸಮಾಡಿ ಕಾಡಾನೆಗಳನ್ನು ಪಳಗಿಸುತ್ತಾರೆ.

ಕ್ರಿಸ್ತಪೂರ್ವ ಮೂರನೆಯ ಶತಮಾನದಲ್ಲಿ ಗ್ರೀಸ್ ದೇಶದಿಂದ ಚಂದ್ರಗುಪ್ತ ಚಕ್ರವರ್ತಿಯ ಆಸ್ಥಾನಕ್ಕೆ ರಾಯಭಾರಿಯಾಗಿ ಬಂದಿದ್ದ ಮೆಗಾಸ್ತನೀಸನು ಭರತಖಂಡದಲ್ಲಿ ಕಾಡಾನೆಗಳನ್ನು ಹಿಡಿದು ಪಳಗಿಸುತ್ತಿದ್ದ ವಿಧಾನವನ್ನು ಕಂಡು ಆಶ್ಚರ್ಯಭರಿತನಾಗಿ ಅದನ್ನು ವಿಶದವಾಗಿ ವಿವರಿಸಿ ವಿಶೇಷವಾಗಿ ಶ್ಲಾಘಿಸಿದ್ದಾನೆ. ಈಗಿನ ಖೆಡ್ಡಾ ವಿಧಾನಕ್ಕೂ ಅದಕ್ಕೂ ಪರಸ್ಪರವಾಗಿ ವಿಶೇಷ ಸಾಮ್ಯವುಂಟೆಂಬುದೇನೊ ನಿಜವಾದರೂ ಅದಕ್ಕಿಂತ ಬಹಳ ಮೇಲಾಗಿರುವಂತೆ ಅನೇಕ ಮಾರ್ಪಾಟು ಗಳನ್ನು ನಡೆಯಿಸಿದ ಯಶಸ್ಸು ಆಳಿದ ಮಹಾಸ್ವಾಮಿಯವರಿಗೆ ಸಲ್ಲ ಬೇಕೆಂದು ಧಾರಾಳವಾಗಿ ಹೇಳಬಹುದಾಗಿದೆ. ಹಿಡಿದ ಕಾರ್ಯವನ್ನು ಶ್ಲಾಘ್ಯತಮವಾಗಿಯೂ ಸರ್ವೋತ್ತಮವಾಗಿಯೂ ಸಾಧಿಸಬೇಕೆಂಬುದು ನಿರಂತರವೂ ಮಹಾಸ್ವಾಮಿಯವರಿಗಿದ್ದ ಧ್ಯೇಯ. ಅದಕ್ಕೆ, ಹುಲಿಯ ಬೇಟೆಯ ವಿಧಾನದಲ್ಲಿಯೂ ಕಾಡಾನೆಗಳನ್ನು ಹಿಡಿಯುವ ವಿಧಾನ ದಲ್ಲಿಯೂ ಮಹಾಸ್ವಾಮಿಯವರು ಸಂತತವಾಗಿ ಮಾಡಿಸುತ್ತ ಬಂದಿದ್ದ ಮೇಲ್ಪಾಟುಗಳೂ ಸಹ ಉತ್ತಮ ನಿದರ್ಶನಗಳೇ ಸರಿ.

# ಹನ್ನೊಂದನೆಯ ಅಧ್ಯಾಯ

## ಕಲಾಭಿಮಾನ

" ರಸೋ ವೈ ಸಃ । "

" ಕಲಾಭ್ಯಾಂ ಚೂಡಾಲಂಕೃತ ಶಶಿಕಲಾಭ್ಯಾಂ ನಿಜ ತಪಃ
ಫಲಾಭ್ಯಾಂ ಭಕ್ತೇಷು ಪ್ರಕಟಿತ ಫಲಾಭ್ಯಾಂ ಭವತು ಮೇ ।
ಶಿವಾಭ್ಯಾಮಸ್ತೋಕ ತ್ರಿಭುವನ ಶಿವಾಭ್ಯಾಂ ಹೃದಿ ಪುನ
ರ್ಭವಾಭ್ಯಾಮಾನಂದ ಸ್ಫುರದನುಭವಾಭ್ಯಾಂ ನತಿರಿಯಮ್ ॥ "

" ನಾದೋಪಾಸನಯಾ ದೇವಾ ಬ್ರಹ್ಮಾ ವಿಷ್ಣು ಮಹೇಶ್ವರಾಃ ।
ಭವಂತ್ಯುಪಾಸಿತಾ ನೂನಂ ಯತ ಏತೇ ತದಾತ್ಮಕಾಃ ॥ "

ಕಲಾಭಿಜ್ಞರೂ. ಕಲಾ ಪ್ರೋತ್ಸಾಹಕರೂ ಆಗಿದ್ದ ಶ್ರೀ ಚಾಮ ರಾಜೇಂದ್ರ ಒಡೆಯರವರೂ ಶ್ರೀ ವಾಣೀವಿಲಾಸ ಸನ್ನಿಧಾನದವರೂ ಜೀವನದಲ್ಲಿ ಕಲೆಗಿರಬೇಕಾದ ಉಚಿತ ಸ್ಥಾನವನ್ನು ಮನಗಂಡು, ತಮ್ಮ ಪುತ್ರ ಪುತ್ರಿಯರಿಗೆ ಬಾಲ್ಯ ದಿಂದಲೇ ಕಲಾಶಿಕ್ಷಣವನ್ನು ಕೊಡಿಸಿ, ಲಲಿತ ಕಲೆಗಳಲ್ಲಿ ಅವರುಗಳಿಗೇ ಜನ್ಮಸಿದ್ಧವಾಗಿ ಲಭಿಸಿದ್ದ ಅಭಿರುಚಿಯನ್ನು ವೃದ್ಧಿಗೊಳಿಸಿದರು; ಅದರ ವಿಚಾರವನ್ನು ಹಿಂದೆಯೇ ಸೂಚಿಸಲಾಗಿದೆ.

**ಕಲಾ ಶಿಕ್ಷಣ**

ರಾಜಕುಮಾರಿ ಶ್ರೀ ಜಯಲಕ್ಷ್ಮಮ್ಮಣ್ಣಿಯವರು ಬಾಲ್ಯದಲ್ಲಿ ಪಿಯಾನೋ ತಿದಿಯನ್ನು ಕಾಲಿನಲ್ಲಿ ಒತ್ತಿ ಒಂದು ಕೈಯಲ್ಲಿ ಅದನ್ನು ನುಡಿಸುತ್ತ, ಮತ್ತೊಂದು ಕೈಯಲ್ಲಿ ತಬಲದ ಮೇಲೆ ಟೇಕ ಹಾಕುತ್ತ ಹಾಡುವಷ್ಟು ಮಟ್ಟಿನ ಸಾಮರ್ಥ್ಯವನ್ನು ಪಡೆದಿದ್ದರು. ವೀಣೆಯನ್ನು ನುಡಿಸುವುದರಲ್ಲಿ ಅವರಿಗೆ ವಿಶೇಷ ಸಾಮರ್ಥ್ಯ. ಬಾಲ್ಯದಲ್ಲಿ ಅವರಿಗೆ ವ್ಯವಸಾಯ ಕಲೆಯಲ್ಲಿ ಬಹಳ ಪ್ರೀತಿಯಿದ್ದಕಾರಣ, ಪುಷ್ಪವಾಟಿಯಲ್ಲಿ ತಾವೇ ಕೃಷಿಮಾಡಿ ಉಲ್ಲಾಸಪಡುತ್ತಿದ್ದರು. ಅವರು ಚಿತ್ರಲೇಖನದಲ್ಲಿ ವಿಶೇಷ ಪರಿಶ್ರಮವನ್ನು ಪಡೆದಿದ್ದರು. ರಾಜಕುಮಾರಿ ಶ್ರೀ ಕೃಷ್ಣಾ ಜಮ್ಮಣ್ಣಿಯವರಿಗೆ ವೀಣಾವಾದನದಲ್ಲಿ ಕೌಶಲ್ಯವೂ, ರಾಜಕುಮಾರಿ ಶ್ರೀ ಚೆಲುವಾಜಮ್ಮಣ್ಣಿಯವರಿಗೆ ಚಿತ್ರಲೇಖನದಲ್ಲಿ ಕೌಶಲ್ಯವೂ ಬಹಳ ವಿಶೇಷವಾಗಿದ್ದುವು. ಶ್ರೀ ಚೆಲುವಾಜಮ್ಮಣ್ಣಿಯವರಿಗೆ ಅನೇಕ ಕುಶಲ ಕಲೆಗಳಲ್ಲಿ ಪರಿಶ್ರಮವಿದ್ದಿತು. ಅವರ ಕೈಚಳಕವೆಷ್ಟು ಸೂಕ್ಷ್ಮವಾಗಿದ್ದಿ ತೆಂಬುದಕ್ಕೆ, ಅವರು ಶ್ರೀ ಚಾಮುಂಡೇಶ್ವರೀ ದೇವಿಯವರ ರಥೋತ್ಸವದ

ದಿನ ದಾಳಿಂಬದ ಬೀಜಗಳನ್ನು ಸೂಜಿಯಲ್ಲಿ ಪೋಣಿಸಿ ಚಿತ್ರ ವಿಚಿತ್ರವಾದ ಆಭರಣಗಳನ್ನೂ ಬಹು ಸೊಗಸಾದ ತುಂಬೆಯ ಹೂವಿನ ದಂಡೆಗಳನ್ನೂ ಬಾಲ್ಯದಲ್ಲಿ ತಾವೇ ಭಕ್ತಿಯಿಂದ ರಚಿಸಿ ಸಮರ್ಪಿಸುತ್ತಿದ್ದುದೇ ಒಂದು ನಿದರ್ಶನ; ಚಿತ್ರಲೇಖನದಲ್ಲಿ ಅವರಿಗೆ ಪರಮಾದರ. ಶ್ರೀಮದ್ಯುವರಾಜ ಶ್ರೀ ಕಂಠೀರವ ನರಸಿಂಹರಾಜ ಒಡೆಯರವರಿಗೆ ಸಂಗೀತದಲ್ಲಿ ತಕ್ಕಷ್ಟು ಪರಿಶ್ರಮವುಂಟಾಯಿತಾದರೂ ಚಿತ್ರಲೇಖನದಲ್ಲುಂಟಾದಷ್ಟು ಮಟ್ಟಿನ ಅಸಾಧಾರಣ ಜ್ಞಾನವುಂಟಾಗಲಿಲ್ಲ. ಉತ್ತಮವಾದ ಚಿತ್ರಪಟಗಳನ್ನು ಕೊಂಡು ಚಿತ್ರಕಾರರಿಗೆ ಪ್ರೋತ್ಸಾಹ ಕೊಡುವುದರಲ್ಲಿ ಅವರು ಸುಪ್ರಸಿದ್ಧ ರಾಗಿದ್ದರು.

ಆಳಿದ ಮಹಾಸ್ವಾಮಿಯವರಾದ ಶ್ರೀಮನ್ಮಹಾರಾಜರವರಿಗೆ ಚಿತ್ರಲೇಖನದಲ್ಲಿಯೂ, ಇತರ ಕುಶಲ ಕಲೆಗಳಲ್ಲಿಯೂ ವಿಶೇಷ ಪ್ರಾವೀಣ್ಯವಿದ್ದುದು ನಿಜವಾದರೂ, ಸಂಗೀತದಲ್ಲಿ ಮಾತ್ರ ಪೂರ್ಣ ಪಾಂಡಿತ್ಯವೆಂಬುದೂ ಅಸಾಧಾರಣ ಜ್ಞಾನವೆಂಬುದೂ ಸುಪ್ರಸಿದ್ಧವಾದ ಸಂಗತಿಗಳು. ಅವರಿಗೆ ದಾಕ್ಷಿಣಾತ್ಯ ಸಂಗೀತವಾದ ಕರ್ಣಾಟಕ ಸಂಗೀತದಲ್ಲಿಯೂ, ಔತ್ತರೇಯ ಸಂಗೀತವಾದ ಹಿಂದೂಸ್ಥಾನಿ ಸಂಗೀತ ದಲ್ಲಿಯೂ ಮತ್ತು ಪಾಶ್ಚಿಮಾತ್ಯ ಸಂಗೀತದಲ್ಲಿಯೂ, ಮೂರರಲ್ಲಿಯೂ ಆದರವಿದ್ದಿತು. ಇದು ಅಸಾಧಾರಣವಾದ ಸಂಗತಿ. ಏಕೆಂದರೆ, ಪಾಶ್ಚಾತ್ಯರ ಸಂಗೀತದಲ್ಲಿ ಭಾರತೀಯರನೇಕರಿಗೆ ಆದರವಿಲ್ಲ; ಪಾಶ್ಚಾತ್ಯ ರನೇಕರ ಭಾವನೆಯಲ್ಲಿ ಭಾರತೀಯ ಸಂಗೀತವು ಸಂಗೀತವೇ ಇಲ್ಲ; ಇದಕ್ಕೆ ಮೂಲಕಾರಣವು ಒಂದರಲ್ಲಿ ವಿದ್ವತ್ತಿರತಕ್ಕವರಿಗೆ ಮತ್ತೊಂದರಲ್ಲಿ ಆಸಕ್ತಿಯಾಗಲಿ ಅಥವಾ ಪರಿಶ್ರಮವಾಗಲಿ ಇಲ್ಲದ—ಸಹಾನುಭೂತಿದೂರ ವಾದ— ಅಜ್ಞಾನವೇ. ಅಷ್ಟೇಕೆ? ಕರ್ಣಾಟಕ ಸಂಗೀತದಲ್ಲಿ ನಿಷ್ಣಾತ ರಾದವರಿಗೆ ಸಾಮಾನ್ಯವಾಗಿ ಹಿಂದೂಸ್ಥಾನಿ ಸಂಗೀತದಲ್ಲಿ ಅನಾದರ; ಹಿಂದೂಸ್ಥಾನಿ ಸಂಗೀತದಲ್ಲಿ ಪಾಂಡಿತ್ಯವಿರತಕ್ಕವರಿಗೆ ಸಾಮಾನ್ಯವಾಗಿ ಕರ್ಣಾಟಕ ಸಂಗೀತದಲ್ಲಿ ಆದರವಿಲ್ಲ. ಅವೆರಡರಲ್ಲಿಯೂ ಮತ್ತು ಪಾಶ್ಚಾತ್ಯ ಸಂಗೀತದಲ್ಲಿಯೂ ಅಭಿರುಚಿಯಿರತಕ್ಕವರ ಸಂಖ್ಯೆಯೋ ತೀರ ಕಡಮೆ. ಅವು ಮೂರರಲ್ಲಿಯೂ ಪರಿಶ್ರಮವಿರತಕ್ಕವರ ಸಂಖ್ಯೆಯು ಇನ್ನೂ ಕಡಮೆ. ಅವು ಮೂರರಲ್ಲಿಯೂ ನಿಷ್ಕೃಷ್ಟ ಜ್ಞಾನವನ್ನು ಪಡೆದಿರ ತಕ್ಕವರು ಒಟ್ಟು ಪ್ರಪಂಚದಲ್ಲೇ ಅಧಿಕ ಮಂದಿಗಳಿಲ್ಲ. ಅವು ಮೂರ ರಲ್ಲಿಯೂ ಅಸೀಮ ವಿದ್ವತ್ತನ್ನು ಪಡೆದು ಅಸಾಧಾರಣ ಪ್ರತಿಭೆಯಿಂದ ಕೂಡಿದ್ದುದು ಆಳಿದ ಮಹಾಸ್ವಾಮಿಯವರ ವೈಶಿಷ್ಟ್ಯ.

**ಪಾಶ್ಚಾತ್ಯ ಸಂಗೀತ ಪ್ರೌಢಿಮೆ**

ಆಳಿದ ಮಹಾಸ್ವಾಮಿಯವರು ವಿದ್ಯಾಭ್ಯಾಸ ಮಾಡುತ್ತಿದ್ದಾಗ್ಗೆ, ಪಾಶ್ಚಾತ್ಯ ಸಂಗೀತದಲ್ಲಿ ವಿಶೇಷ ಪರಿಶ್ರಮ ಪಡೆದು, ಬ್ಯಾಂಡ್ ಮಾಸ್ಟರ್ ಶ್ರೀಮಾನ್ ಡೆಫ್ರೀಸ್‌ರವರೇ ಮುಂತಾದವರ ಶಿಕ್ಷಣ ಪ್ರಭಾವದಿಂಥ ದಿನದಿನವೂ ಜ್ಞಾನಾಭಿವೃದ್ಧಿ ಮಾಡಿಕೊಂಡರು. ೧೯೦೦ನೆಯ ಇಸವಿಯಲ್ಲಿ ಅಮೇರಿಕಾ ಖಂಡದಿಂದ ಬಂದಿದ್ದ ಸುಪ್ರಸಿದ್ಧರಾದ ಪಾಶ್ಚಾತ್ಯ ಸಂಗೀತ ವಿದ್ವಾಂಸರೊಬ್ಬರು ಹದಿನಾರು ವರ್ಷ ವಯಸ್ಸಿನವರಾಗಿದ್ದ ತರುಣ ಮಹಾರಾಜರವರು ಸಕ್ಸೊಫೋನ್ ವಾದ್ಯವನ್ನು ನುಡಿಸಿದ ಸೊಬಗಿಗೆ ಮನಸೋತು ಮಹಾಸ್ವಾಮಿಯವರ ಚಾತುರ್ಯವು ಪ್ರಕೃತಿಸಿದ್ಧವಾಗಿ ಭಗವಂತನ ಅನುಗ್ರಹದಿಂದ ಲಭಿಸಿದ್ದಿತೇ ಹೊರತು ಮನುಷ್ಯ ಪ್ರಯತ್ನದಿಂದ ಆ ಚಿಕ್ಕವಯಸ್ಸಿನಲ್ಲಿ ಲಭ್ಯವಾಗುವಂತಹದಾಗಿರಲಿಲ್ಲವೆಂದು ಪರೋಕ್ಷವಾಗಿ ಶ್ಲಾಘಿಸಿ ಇತರರೆದುರಿಗೆ ಕೊಂಡಾಡಿದರು. ಪಾಶ್ಚಾತ್ಯ ಸಂಗೀತದಲ್ಲಿ ಆಗಲೇ ಅಷ್ಟು ಪ್ರಬುದ್ಧರಾಗಿದ್ದ ಮಹಾಸ್ವಾಮಿಯವರು ಅನಂತರ ಪಾಶ್ಚಾತ್ಯ ಸಂಗೀತಕ್ರಮದ ಮೇರೆಗೆ ಪಿಟೀಲನ್ನು ನುಡಿಸುವುದರಲ್ಲಿ ಅದ್ಭುತವಾದ ಪ್ರಾವೀಣ್ಯವನ್ನು ಪಡೆದು ಕರ್ನಲ್ ಫೌಕ್ಸ್, ಶ್ರೀಮಾನ್ ಡೆಫ್ರೀಸ್, ಮುಂತಾದವರನ್ನೆಲ್ಲ ಬೆರಗುಮಾಡಿದರು. ಪಾಶ್ಚಾತ್ಯ ಸಂಗೀತ ಲಿಪಿಯಲ್ಲಿ ಮುದ್ರಣವಾಗಿ ಬಂದ ಗೀತ ಮುಂತಾದುವುಗಳನ್ನು ಎದುರಿಗಿಟ್ಟುಕೊಂಡು ವಿಶೇಷ ಸಾಧಕಮಾಡಿದಲ್ಲದೆ ಹೊಸವುಗಳನ್ನು ಹಾಡುವುದಾಗಲಿ ನುಡಿಸುವುದಾಗಲಿ ಬಹಳ ಕಷ್ಟ. ಮಹಾಸ್ವಾಮಿಯವರು ಆ ರೀತಿ ಸಾಧಕಮಾಡಬೇಕಾದ ಆವಶ್ಯಕತೆಯೇ ಇಲ್ಲದೆ ಮೊಟ್ಟಮೊದಲನೆಯ ಸಲವೇ ಆ ಲಿಪಿಯನ್ನು ನೋಡಿಕೊಂಡು ಬಹುಕಾಲ ಸಾಧಕಮಾಡಿದವರಿಗೂ ಸಾಧ್ಯವಿಲ್ಲದಷ್ಟು ಖಚಿತವಾಗಿ ಅತ್ಯಂತ ಜಾಣ್ಮೆಯಿಂದ ಅದ್ಭುತ ರೀತಿಯಲ್ಲಿ ನುಡಿಸಬಲ್ಲವರಾಗಿದ್ದರು. ಅದನ್ನು ನೋಡಿ ಪಾಶ್ಚಾತ್ಯ ಸಂಗೀತ ಕೋವಿದರೆಲ್ಲರೂ ಬೆರಗಾಗಿಹೋಗಿದ್ದಾರೆ. ೧೯೧೪ನೆಯ ಇಸವಿಯಲ್ಲಿ ನಡೆದ ಯೂರೋಪಿನ ಘೋರ ಯುದ್ಧಕ್ಕೆ ಸ್ವಲ್ಪಕಾಲ ಮುಂಚೆ ನಡೆದ ಘಟನೆಯೊಂದನ್ನು ಸೂಚಿಸಿದರೇ ಅವು ಹೃದಯಂಗಮವಾಗಿ ಗೋಚರವಾದಾವೆಂದು ನಂಬಬಹುದಾಗಿದೆ. ಪಾಶ್ಚಾತ್ಯ ಸಂಗೀತದಲ್ಲಿ ಪ್ರಪಂಚದಲ್ಲೇ ಪ್ರಸಿದ್ಧರಾಗಿದ್ದ ಮೂವರು ಸಹೋದರರು ಮೈಸೂರು ಸಂಸ್ಥಾನಕ್ಕೆ ದಯಮಾಡಿದ್ದರು. ಅವರಲ್ಲೊಬ್ಬರು ಪಿಟೀಲನ್ನೂ, ಮತ್ತೊಬ್ಬರು ಪಿಯಾನೋ ವಾದ್ಯವನ್ನೂ ಮಗದೊಬ್ಬರು ಸೆಲ್ಲೋ ಎಂಬ ಹೆಸರಿನ (ನಾಲ್ಕು

ಅಡಿಗಳಿಗಿಂತ ಹೆಚ್ಚು ಉದ್ದವಾಗಿರುವ ದೊಡ್ಡ ಪಿಟೀಲಿನಂತಹ) ವಾದ್ಯವನ್ನೂ ಅದ್ಭುತ ರೀತಿಯಲ್ಲಿ ನುಡಿಸಬಲ್ಲವರು. ರಷ್ಯಾದ ಜ಼ಾರ್ ಚಕ್ರವರ್ತಿ, ಆಸ್ಟ್ರಿಯಾ ಚಕ್ರವರ್ತಿ ಮತ್ತು ಇಟಲಿಯ ರಾಜರು ಮುಂತಾದ ಪಾಶ್ಚಾತ್ಯ ಸಂಗೀತಕೋವಿದರ ಸಮ್ಮುಖದಲ್ಲಿ ಸಂಗೀತ ಕಚೇರಿ ಮಾಡಿ ಪ್ರಖ್ಯಾತರಾದವರು. ಅವರಿಗೆ ಯಾರ ಲಕ್ಷ್ಯವೂ ಇಲ್ಲದ ಮಟ್ಟಿಗೆ ವಿದ್ವತ್ತಿನ ಕೆಚ್ಚು. ಆಳಿದ ಮಹಾಸ್ವಾಮಿಯವರಾದ ಶ್ರೀಮನ್ಮಹಾರಾಜ ರವರು ಪಾಶ್ಚಾತ್ಯ ಸಂಗೀತ ಕ್ರಮದ ಮೇರೆಗೆ ಪಿಟೀಲನ್ನು ನುಡಿಸತಕ್ಕ ಅಸಾಧಾರಣ ವೈಖರಿಯನ್ನೂ ಮಹಾಸ್ವಾಮಿಯವರ ಪ್ರತಿಭೆ ಪಾಂಡಿತ್ಯ ಗಳನ್ನೂ ತಜ್ಞರಿಂದ ಕೇಳಿ ಅದರ ಅನುಭವ ಮಾಡಿಕೊಂಡ ಬಳಿಕ ಅವರು, ತಮ್ಮ ಕಚೇರಿಯು ಮಹಾಸ್ವಾಮಿಯವರ ಸಮ್ಮುಖದಲ್ಲಿ ನಡೆದಾಗ ಸಭಾಕಂಪವುಂಟಾಗಿ ಅಪಸ್ವರವನ್ನು ("false note") ನುಡಿಸಿಬಿಟ್ಟರಂತೆ. ಅನಂತರ ಒಂದೆರಡು ತಿಂಗಳುಗಳ ಕಾಲ ಬೆಂಗಳೂರು ಮೈಸೂರು ನಗರ ಗಳಲ್ಲಿ ಎಲ್ಲಿ ನೋಡಿದರೂ ಸಂಗೀತಜ್ಞರಲ್ಲಿ ಅದರ ವಿಚಾರವೇ ಪ್ರಸ್ತಾ ವಿಸಲ್ಪಟ್ಟು ಆಳಿದ ಮಹಾಸ್ವಾಮಿಯವರ ಶ್ಲಾಘನೆಯು ಏಕಪ್ರಕಾರ ವಾಗಿ ನಡೆಯಿತಂತೆ.

ಆಳಿದ ಮಹಾಸ್ವಾಮಿಯವರು ತಮ್ಮ ಸಹೋದರರ ಕುಮಾರಿ ಯರು ಮೂವರಿಗೂ ಕೂಡ ಪಾಶ್ಚಾತ್ಯ ಸಂಗೀತದಲ್ಲಿ ಸಹ ವಿಶೇಷ ಪರಿಶ್ರಮವುಂಟಾಗುವಂತೆ ಶಿಕ್ಷಣ ಕೊಡಿಸಿದರು. ಅವರುಗಳು ಪಿಯಾನೋ ಮುಂತಾದ ವಾದ್ಯಗಳನ್ನು ನುಡಿಸುವುದರಲ್ಲಿ ಪ್ರಾವೀಣ್ಯವನ್ನು ಪಡೆ ದಿದ್ದಾರೆ. ಲಂಡನ್ನಿನ ಟ್ರಿನಿಟಿ ಕಾಲೇಜಿನ ಸಂಗೀತ ಪರೀಕ್ಷಕರು ಭರತ ಖಂಡಕ್ಕೆ ಬಂದು ನಡೆಯಿಸಿದ ಪರೀಕ್ಷೆಯಲ್ಲಿ ಅವರುಗಳು ಉತ್ತಮ ರೀತಿಯಲ್ಲಿ ಉತ್ತೀರ್ಣರಾಗಿದ್ದಾರೆ. ಪರೀಕ್ಷಕರುಗಳು ಅವರ ಪಾಶ್ಚಾತ್ಯ ಸಂಗೀತ ಪ್ರೌಢಿಮೆಯನ್ನು ಶ್ಲಾಘಿಸಿ ಪ್ರಶಸ್ತಿಪತ್ರಿಕೆಗಳನ್ನು ಕೊಟ್ಟಿದ್ದಾರೆ. "ಪಿಯಾನೋ" ವಾದ್ಯವನ್ನು ನುಡಿಸುವುದರಲ್ಲಿ ಪ್ರಪಂಚದಲ್ಲೇ ಪ್ರಸಿದ್ಧ ರಾದ ಮಿಸ್ಟೋಸ್ಕಿ ಎಂಬವರೂ ಪರೀಕ್ಷಕರಲ್ಲೊಬ್ಬರಾಗಿದ್ದರೆಂದಮೇಲೆ ಪರೀಕ್ಷಕರುಗಳ ಶ್ಲಾಘನೆಗೆಷ್ಟು ಮಹತ್ವವೆಂಬುದನ್ನೂ, ಅದನ್ನು ಪಡೆ ದವರ ಸಾಮರ್ಥ್ಯವೆಷ್ಟೆಂಬುದನ್ನೂ ವರ್ಣಿಸಬೇಕಾದ ಅಗತ್ಯವೇ ಇಲ್ಲ. ಆಳಿದ ಮಹಾಸ್ವಾಮಿಯವರಾದ ಶ್ರೀಮನ್ಮಹಾರಾಜರವರ ಮತ್ತು ಅವರ ಸೋದರರ ಔದಾರ್ಯದ ಫಲವಾಗಿ "ಪಿಯಾನೋ" ವಾದ್ಯವನ್ನು ನುಡಿಸಿ "ರೇಡಿಯೋ" ಮುಖಾಂತರವಾಗಿ ಅವರುಗಳು ಭರತಖಂಡದ ಸಂಗೀತ ಪ್ರೇಮಿಗಳನ್ನು ಅನೇಕಸಾರಿ ಸಂತೋಷಪಡಿಸಿದ್ದಾರೆ.

ಆಳಿದ ಮಹಾಸ್ವಾಮಿಯವರಾದ ಶ್ರೀಮನ್ಮಹಾರಾಜರವರಿಗೆ ಕರ್ಣಾಟಕ ಸಂಗೀತದಲ್ಲಿಯೂ ಹಿಂದೂಸ್ಥಾನಿ ಸಂಗೀತದಲ್ಲಿಯೂ ಇದ್ದ ಅದ್ಭುತವಾದ ವಿದ್ವತ್ತು ಭರತಖಂಡದಲ್ಲೆಲ್ಲ ಪ್ರಸಿದ್ಧವಾಗಿದೆ. ಪೂರ್ವಪುಣ್ಯದ ಪ್ರಭಾವದಿಂದಲೂ, ಸರಸ್ವತೀದೇವಿಯ ಅನುಗ್ರಹದಿಂದಲೂ, ಅಧ್ಯವಸಾಯದ ಫಲದಿಂದಲೂ ಅವರು ಅದನ್ನು ಸಾಧಿಸಿದ್ದರು. ಸಂಗೀತಪ್ರಪಂಚದಲ್ಲಿ ಜಯಭೇರಿ ಮೊಳಗುತ್ತಿರುವ ಘನವಿದ್ವಾಂಸರಲ್ಲನೇಕರು ಮಹಾಸ್ವಾಮಿಯವರ ಸಮ್ಮುಖದಲ್ಲಿ ಸಭಾಕಂಪದಿಂದ ತತ್ತರಿಸಿಹೋಗಿ ಮತ್ತೆ ಮತ್ತೆ ಅವಕಾಶ ಲಭಿಸಿಯೂ ಸಂಗೀತ ಕಚೇರಿಗೆ ಕಳೆಯೇರದೆ ಹೋದ ನಿದರ್ಶನಗಳಿವೆ. ಆಳಿದ ಮಹಾಸ್ವಾಮಿಯವರಿಗೆ ಸಂಗೀತದಲ್ಲಿ ಶಿಕ್ಷಣ ಕೊಟ್ಟ ಪ್ರಥಮ ಗುರುಗಳಾದ ಶ್ರೀಮಾನ್ ವೀಣೆ ಶಾಮಣ್ಣನವರ ವಿಚಾರವನ್ನು ಹಿಂದೆಯೇ ಪ್ರಸ್ತಾವಿಸಲಾಗಿದೆ. ವೈಣಿಕಶಿಖಾಮಣಿ ಶ್ರೀಮಾನ್ ಶೇಷಣ್ಣನವರು ಮಹಾಸ್ವಾಮಿಯವರಿಗೆ ಸಂಗೀತದಲ್ಲಿ ಶಿಕ್ಷಣಕೊಟ್ಟ ದ್ವಿತೀಯ ಗುರುಗಳಾದ ಕಾರಣ, ಅವರ ಶಕ್ತಿಸಾಮರ್ಥ್ಯಗಳ ಮತ್ತು ಅವರ ಖ್ಯಾತಿಯ ವಿಷಯವಾಗಿ ಇಲ್ಲಿ ಕೆಲವು ಅಂಶಗಳನ್ನು ಸೂಚಿಸಬಹುದಾಗಿದೆ: ಹೈದರಾಲಿಯವರ ಕಾಲಕ್ಕೆ ಹಿಂದೆಯೇ ತಂಜಾವೂರಿನ ಶರಭೋಜಮಹಾರಾಜರ ಸನ್ಮಾನಕ್ಕೆ ಪಾತ್ರರಾಗಿ ದಕ್ಷಿಣ ಭಾರತದಲ್ಲೆಲ್ಲ ಪ್ರಖ್ಯಾತರಾಗಿದ್ದ ವೈಣಿಕರನ್ನು ಸೋಲಿಸಿ, ಅವರಲ್ಲೆಲ್ಲ ಪ್ರಸಿದ್ಧರಾಗಿದ್ದವರನ್ನು ಗೆದ್ದುದರ ಕಾಣಿಕೆಯಾಗಿ ವೀಣೆಯನ್ನೊಪ್ಪಿಸಿಕೊಂಡು ಬಂದ ವೀಣೆ ಕುಪ್ಪಯ್ಯನವರ ವಂಶಸ್ಥರು, ಶ್ರೀಮಾನ್ ವೀಣೆ ಶೇಷಣ್ಣನವರು. ಶ್ರೀಮಾನ್ ಶೇಷಣ್ಣನವರ ತಂದೆಯವರು ಆಳಿದ ಮಹಾಸ್ವಾಮಿಯವರಾದ ಶ್ರೀ ಮುಮ್ಮಡಿ ಕೃಷ್ಣರಾಜ ಒಡೆಯರವರ ಆಸ್ಥಾನ ವಿದ್ವಾಂಸರು. ಶ್ರೀಮಾನ್ ಶೇಷಣ್ಣನವರು ತೀರ ಚಿಕ್ಕವಯಸ್ಸಿನಿಂದಲೇ ಸಂಗೀತದಲ್ಲಿ ತೀವ್ರಾಸಕ್ತಿಯನ್ನೂ ಅದ್ಭುತವಾದ ಪ್ರತಿಭೆಯನ್ನೂ ಪಡೆದಿದ್ದರು. ಅವರು ಬಾಲ್ಯದಲ್ಲೇ ಪಿತೃವಿಯೋಗ ದುಃಖವನ್ನನುಭವಿಸಿ (ಈಚೆಗೆ ದಿವಂಗತರಾದ ಶ್ರೀಮಾನ್ ಸುಬ್ಬಣ್ಣನವರ ತಂದೆಯವರಾದ) ಶ್ರೀಮಾನ್ ದೊಡ್ಡಶೇಷಣ್ಣನವರಲ್ಲಿ ವೀಣೆಯನ್ನು ಕಲಿತರು. ಶ್ರೀಮಾನ್ ಶೇಷಣ್ಣನವರ ಅಕ್ಕ ಶ್ರೀಮತಿ ವೆಂಕಮ್ಮನವರಿಗೆ ಸಂಗೀತದಲ್ಲಿ ಬಹಳ ಜ್ಞಾನ. ಆಕೆ ಪ್ರತಿದಿನವೂ "ಹೊಸ ಸಂಗತಿ

**ಭಾರತೀಯ ಸಂಗೀತ ಶಿಕ್ಷಣದ ದ್ವಿತೀಯ ಗುರುಗಳಾದ ವೈಣಿಕ ಶಿಖಾಮಣಿ ಶ್ರೀ ಶೇಷಣ್ಣನವರು**

ಹಾಕಿ ವೀಣೆ ನುಡಿಸಿದರೇ ನಿಂಗೆ ಅನ್ನ" ಎಂದು ಹೇಳಿ ತಮ್ಮ ತಮ್ಮನಿಗೆ ಕಟ್ಟಪ್ಪಣೆ ಮಾಡಿ ಸಾಧಕ ಮಾಡಿಸುತ್ತಿದ್ದರು. ಈ ಬಗೆಯ ಶಿಕ್ಷಣ ಸಾಧಕಗಳ ಪ್ರಭಾವದಿಂದ ಶ್ರೀಮಾನ್ ಶೇಷಣ್ಣನವರ ವೀಣಾವಾದನ ಕೌಶಲ್ಯವು ಪಟ್ಟೆಹೊಡೆದು ಸಾಣೆಯಾಡಿದ ವಜ್ರವಾಯಿತು. ಯಥಾ ಕಾಲದಲ್ಲಿ ಅವರು ಆಸ್ಥಾನವಿದ್ವಾಂಸರಾಗಿ ಆಳಿದ ಮಹಾಸ್ವಾಮಿಯವರಾದ ಶ್ರೀ ಚಾಮರಾಜೇಂದ್ರ ಒಡೆಯರವರ ಮೆಚ್ಚಿಕೆಗೂ ಅನುಗ್ರಹಕ್ಕೂ ಪಾತ್ರರಾದರು.

ಶ್ರೀಮಾನ್ ಶೇಷಣ್ಣನವರ ಪ್ರತಿಭೆಯನ್ನೂ ವಿದ್ವತ್ತನ್ನೂ ಬೆಳಗಿದ ಎರಡು ನಿದರ್ಶನಗಳನ್ನು ಇಲ್ಲಿ ಸೂಚಿಸಬಹುದಾಗಿದೆ: ಪಿಟೀಲು ನುಡಿಸು ವುದರಲ್ಲಿ ಸುಪ್ರಸಿದ್ಧರಾಗಿದ್ದ ಶ್ರೀಮಾನ್ ತಿರುಕ್ಕೋಡಿಕಾವಲ್ ಕೃಷ್ಣ ಐಯರವರು ಮೈಸೂರು ನಗರಕ್ಕೆ ದಯಮಾಡಿದ್ದರು. ಅವರು ಮೂವರು ವೀಣೆ ವಿದ್ವಾಂಸರುಗಳ ಮನೆಗಳಿಗೆ ಹೋಗಿ ಸಂಗೀತವನ್ನು ಕೇಳಿದರು. ಆ ಮೂವರಲ್ಲಿ ಪ್ರತಿಯೊಬ್ಬರೂ ಕಲ್ಯಾಣಿರಾಗದ "ತಾರಕಬ್ರಹ್ಮ ಸ್ವರೂಪಿಣೀ...." ಪಲ್ಲವಿಯನ್ನೇ ನುಡಿಸಿದ್ದರು. ಅನಂತರ ಕೃಷ್ಣ ಐಯರವರು ವೀಣೆ ಸುಬ್ಬಣ್ಣನವರ ಬಳಿಗೆ ಹೋದಾಗ ಅವರೂ ಅದೇ ಪಲ್ಲವಿಯನ್ನೇ ನುಡಿಸಬೇಕೆ! ಶ್ರೀಮಾನ್ ತಿರುಕ್ಕೋಡಿ ಕಾವಲ್ ಕೃಷ್ಣ ಐಯರವರು ಮೈಸೂರು ವಿದ್ವಾಂಸರುಗಳಿಗೆ ಕಲ್ಯಾಣಿರಾಗದ "ತಾರಕ ಬ್ರಹ್ಮ ಸ್ವರೂಪಿಣೀ...." ಪಲ್ಲವಿಬಿಟ್ಟರೆ ಮತ್ತಾವರಾಗದ ಪಲ್ಲವಿಯೂ ಗೊತ್ತಿರಲಿಲ್ಲವೆಂದು ಕೆಲವರೊಡನೆ ದುಡುಕಿ ಆಡಿದ ಅಪಹಾಸ್ಯ ವಚನ ಗಳು ಶ್ರೀಮಾನ್ ವೀಣೆ ಸುಬ್ಬಣ್ಣನವರ ಕಿವಿಗೆ ಬಿದ್ದುವು. ಅದರ ಪರಿಣಾಮವಾಗಿ ಅವರ ಸಂಧಾನದಿಂದ (ಶ್ರೀಮಾನ್ ಬಕ್ಷಿ ಬಸವಪ್ಪಾಜಿ ಅರಸಿನವರ ಮನೆಯಲ್ಲಿ ನಡೆದ ಉತ್ಸವ ಕಾಲಕ್ಕೆ ಅಲ್ಲಿಗೆ ಚಿತ್ತೈಸಿದ) ಶ್ರೀ ಚಾಮರಾಜೇಂದ್ರ ಒಡೆಯರವರ ಸನ್ನಿಧಿಯಲ್ಲಿ ಶ್ರೀಮಾನ್ ಕೃಷ್ಣ ಐಯರವರ ಪಿಟೀಲುವಾದನದ ಮತ್ತು ಶ್ರೀಮಾನ್ ಶೇಷಣ್ಣನವರ ವೀಣಾವಾದನದ ಕಚೇರಿಯು, ಘಟವಾದ್ಯವನ್ನು ನುಡಿಸುವುದರಲ್ಲಿ ಪ್ರಖ್ಯಾತರಾಗಿದ್ದ ಶ್ರೀಮಾನ್ ಅನಂತಾಚಾರ್ಯರ ಘಟವಾದನದೊಡನೆ ನಡೆಯಿತು. ಶ್ರೀಮಾನ್ ಶೇಷಣ್ಣನವರು ಆ ದಿನ ಶಾರದಾದೇವಿ ಆವೇಶ ಬಂದಿದ್ದಳೋ—ಎಂಬಂತೆ ವೀಣೆಯನ್ನು ನುಡಿಸಲಾರಂಭಿಸಿ ಎಣೆಯಿಲ್ಲದ ರೀತಿಯಲ್ಲಿ•ತೋಡಿ ರಾಗವನ್ನು ನುಡಿಸಿದರು. ಕಚೇರಿ ಪ್ರಾರಂಭವಾದುದ ಕ್ಕಿಂತ ಮುಂಚಿತವಾಗಿ ಶ್ರೀಮಾನ್ ಕೃಷ್ಣ ಐಯರವರು, ತಮ್ಮೊಡನೆ ವೀಣೆ ಯನ್ನು ನುಡಿಸಬೇಕಾಗಿ ಬಂದುದಕ್ಕಾಗಿ ಯೋಚಿಸ ಕೆಲಸವಿಲ್ಲವೆಂದೂ,

ತಾವು ತೇಲಿಸಿ ಲಘುವಾಗಿ ಪಿಟೀಲನ್ನು ನುಡಿಸುವುದಾಗಿಯೂ ಮತ್ತು ಭಯಪಡದೆ ತಮ್ಮ ಪಿಟೀಲಿನೊಡನೆ ವೀಣೆಯನ್ನು ನುಡಿಸಬಹುದೆಂದೂ ಶ್ರೀಮಾನ್ ಶೇಷಣ್ಣನವರ ಕಿವಿಯಲ್ಲಿ ಆಡಿದ್ದ ಅನವಶ್ಯವಾದ ದುಡುಕುನುಡಿಗಳು ಮಿತಿಮೀರಿದ ಸ್ಪರ್ಧೆಯನ್ನು ಹುಟ್ಟಿಸಿದ್ದುದೂ ಅದಕ್ಕೊಂದು ಕಾರಣ. ಶ್ರೀಮಾನ್ ಕೃಷ್ಣ ಐಯರವರ ದುಡುಕು ಮಾತುಗಳು ಎಷ್ಟು ಕಟುವಾಗಿದ್ದುವೋ ಅವರ ಔದಾರ್ಯವೂ ಅಷ್ಟೇ ಶ್ಲಾಘನೀಯವಾಗಿದ್ದಿತು. ಅವರು ವೀಣೆಯಲ್ಲಿ ಆ ರೀತಿ ತೋಡಿ ರಾಗ ನುಡಿದುದನ್ನು ತಾವು ಮತ್ತೆಲ್ಲಿಯೂ ಕೇಳಿರಲಿಲ್ಲವೆಂದೂ, ಅಂದಿನ ವೀಣೆಯೊಡನೆ ಪಿಟೀಲನ್ನು ನುಡಿಸುವುದು ಸಾಧ್ಯವಿರಲಿಲ್ಲವೆಂದೂ, ತಾವು ಪಿಟೀಲನ್ನು ಚೀಲಕ್ಕೆ ಸೇರಿಸಿ ಸಾವಧಾನವಾಗಿ ತೋಡಿ ರಾಗದ ಪಲ್ಲವಿಯನ್ನು ಕೇಳಲು ಅಪ್ಪಣೆಯಾಗಬೇಕೆಂದೂ ಪ್ರಭುಗಳಿಗೆ ಕೈಮುಗಿದು ಅರಿಕೆ ಮಾಡಿದರು. ಮಂದರದ ತಂತಿಯ ಮೇಲೆ ಮಧ್ಯದ ಬೆರಳನ್ನಾಡಿಸುತ್ತ ತ್ರಿಕಾಲಗಳಲ್ಲಿ ವರ್ಣವನ್ನು ಬಾರಿಸಬಲ್ಲ ಸಾಮರ್ಥ್ಯವನ್ನು ಪಡೆದಿದ್ದ ಶ್ರೀಮಾನ್ ಕೃಷ್ಣ ಐಯರವರು ಹಾಗೆ ಹೇಳಿದುದು ಸಾಮಾನ್ಯವಲ್ಲ. ತೋಡಿ ರಾಗದ ಪಲ್ಲವಿಗೆ ಪ್ರಾರಂಭವಾದಾಗ, ಶ್ರೀಮಾನ್ ಅನಂತಾಚಾರ್ಯರಿಗೆ ತಾಳದ ಎಡಪೇ ತಿಳಿಯದೆ ಘಟವಾದ್ಯ ನುಡಿಯದೆ ಅವರ ಕೈಯೇ ನಿಂತು ಹೋಗಲು, ಅವರ ಕೋರಿಕೆಯಂತೆ ಶ್ರೀಮಾನ್ ಶೇಷಣ್ಣನವರು ತಾಳ ಹಾಕಿ ತೋರಿಸಿದರಂತೆ. ಆ ತರುವಾಯ ಅವರು ಅರ್ಧಘಂಟೆಯ ಕಾಲ ವೀಣೆಯ ಮೇಲೆ ತೋಡಿ ರಾಗದ ಪಲ್ಲವಿಯನ್ನು ನುಡಿಸಿ ತಮ್ಮ ಅದ್ಭುತ ಕೌಶಲ್ಯವನ್ನು ಪ್ರದರ್ಶಿಸಿದರು. ಇಲ್ಲಿ ಅದ್ಭುತ ಕೌಶಲ್ಯವೆಂದು ಹೇಳಿರುವುದಕ್ಕೆ ಅರ್ಥವಿದೆ: ವಾದ್ಯಗಾರರಿಗೆ ಪಲ್ಲವಿಯನ್ನು ವಿಸ್ತಾರವಾಗಿ ನುಡಿಸುವುದು ಸುಲಭಸಾಧ್ಯವಲ್ಲ. ಮತ್ತೊಬ್ಬರು ತಾಳಹಾಕದೆ ತಾವೇ ತಾಳಕ್ಕೆ ಗಮನಕೊಟ್ಟು ವಿಸ್ತಾರವಾಗಿ ಪಲ್ಲವಿ ಬಾರಿಸುವುದು ಅವರಿಗೆ ಬಹಳ ಕಷ್ಟ. ಆದುದರಿಂದ, ವಾದ್ಯಗಾರರು ಸುಲಭ ಮಾರ್ಗವನ್ನು ಹಿಡಿದು ಆದಿತಾಳದಲ್ಲಿ ಅಥವಾ ತ್ರಿಶ್ರಜಾತಿ ತ್ರಿಪುಟ ತಾಳದಲ್ಲಿ ಮಾತ್ರ ಪಲ್ಲವಿಯನ್ನು ಬಾರಿಸುವುದೇ ರೂಢಿ. ಶ್ರೀಮಾನ್ ಶೇಷಣ್ಣನವರು ಯಾವ ತಾಳದಲ್ಲಿ ಬೇಕಾದರೂ ಲೀಲಾಜಾಲವಾಗಿ ಎಷ್ಟು ವಿಸ್ತಾರವಾಗಿ ಬೇಕಾದರೆ ಅಷ್ಟು ವಿಸ್ತಾರವಾಗಿ ಪಲ್ಲವಿ ಬಾರಿಸಿ ವೀಣಾವಾದನ ಮಾಡಬಲ್ಲವರಾಗಿದ್ದರು. ಅಲ್ಲದೆ ಅವರು ಇಂಗ್ಲಿಷ್ ನೋಟನಂತೆ ಅಥವಾ ಹಿಂದೂಸ್ಥಾನಿಯ ಪಲಕುಪಡಿಯಂತೆ ಬೇಕಾದರೂ ಕರ್ಣಾಟಕ ರಾಗಗಳನ್ನು ನುಡಿಸಲು ಶಕ್ತರಾಗಿದ್ದರು.

ಇನ್ನು, ವೈಣಿಕಶಿಖಾಮಣಿ ಶ್ರೀಮಾನ್ ಶೇಷಣ್ಣನವರ ವೈಶಿಷ್ಟ್ಯ ವನ್ನು ಕುರಿತು ಒಂದೆರಡು ಮಾತು. ಅವರು ನಾಲ್ಕೈದು ಘಂಟೆಗಳ ಕಾಲವಾದರೂ ಒಂದೇ ರಾಗವನ್ನು ನುಡಿಸಬಲ್ಲವರಾಗಿದ್ದರು. ಅವರ ಮನೋಧರ್ಮದ ವೈಖರಿಯೇ ಒಂದು ಬಗೆ. "ಒಂದೇ ರಾಗವನ್ನು ಸಾವಿರ ಸಲ ನುಡಿಸಿದರೆ ಸಾವಿರ ಬಗೆಯಲ್ಲಿ ಬೇರೆ ಬೇರೆ ವಿನ್ಯಾಸ. ಒಬ್ಬರು ವಿದ್ವಾಂಸರು ಒಂದು ರಾಗವನ್ನು ಮೂರು ನಾಲ್ಕು ಸಲ ಹಾಡಿ ದುದನ್ನು ನಾವು ಕೇಳಿಬಿಟ್ಟರೆ, ಐದನೆಯ ಸಲ ಅವರು ಹಾಡುವಾಗ ಇಷ್ಟೇ ವಿನ್ಯಾಸ ಹೀಗೆಯೇ ಬರುತ್ತದೆಂದು ನಿರ್ಧರವಾಗಿ ಹೇಳಿಬಿಡ ಬಹುದು. ಶ್ರೀಮಾನ್ ಶೇಷಣ್ಣನವರು ಈ ರೀತಿ ಅಚ್ಚಿಗೆ ಒಳಪಟ್ಟರಲಿಲ್ಲ. ಒಂದೊಂದು ಸಲ ರಾಗವನ್ನು ನುಡಿಸಿದರೆ ಒಂದೊಂದು ಸೊಬಗಿನ ವಿನ್ಯಾಸ. ಅಚ್ಚಿನ ಸಂಗೀತವಲ್ಲ. ಅಚ್ಚು ಸಂಗೀತದವರಲ್ಲದವರ ಸಂಖ್ಯೆ ತೀರ ಕಡಮೆ" ಎಂಬಿವು ಶ್ರೀಮಾನ್ ಶೇಷಣ್ಣನವರ ಹೃದಯ ವನ್ನರಿತವರೊಬ್ಬರ ವಾಣಿಗಳು. ವೀಣೆಯಲ್ಲಿ ಅತ್ಯಂತ ಸೂಕ್ಷ್ಮತಮ ವಾದುದನ್ನೆಲ್ಲ ನುಡಿಸಬಹುದೆಂಬುದನ್ನು ಕಂಡುಹಿಡಿದು, ಹಿಂದಿನವರಂತೆ ಒಬ್ಬರು ಬಾರಿಸಿದ ಪಡಿಯಚ್ಚಿನಂತೆಯೇ ವೀಣೆಯನ್ನು ಬಾರಿಸುವುದನ್ನು ಬಿಟ್ಟು ತಮ್ಮದೇ ಅದೊಂದು ವೈಶಿಷ್ಟ್ಯದಿಂದ ಬೇರೆ ವಿಧಾನವನ್ನನುಸರಿಸಿ ಪೂರ್ಣತೆಯನ್ನು ಪಡೆಯಲೆಳಸಿದವರು ಶ್ರೀಮಾನ್ ವೀಣೆ ಶೇಷಣ್ಣ ನವರು. ನವರಾತ್ರಿ ಹಬ್ಬದಲ್ಲಿ ಸರಸ್ವತೀ ಆವಾಹನದ ದಿನ ಎಷ್ಟು ಗೂಡೆ ಗಳಲ್ಲಿ ಹೂಗಳನ್ನೊದಗಿಸಿಕೊಂಡು ಎಷ್ಟು ಪೂಜೆಮಾಡಿದರೂ ಅವರಿಗೆ ತೃಪ್ತಿಯಿರಲಿಲ್ಲ. ಅದೇ ರೀತಿಯಲ್ಲಿ ವೀಣೆಯನ್ನು ಕೈಯಲ್ಲಿ ಹಿಡಿದು ಕುಳಿತಾಗ ಎಷ್ಟು ಬಗೆಗಳಲ್ಲಿ ನೂತನ ವಿನ್ಯಾಸಗಳನ್ನು ನುಡಿಸಿದರೂ ಅವರಿಗೆ ತೃಪ್ತಿಯಿರುತ್ತಿರಲಿಲ್ಲ. ರಸಾನುಭವದಲ್ಲಿ ಸಹ ಅದ್ವಿತೀಯ ರಾದ ವೈಣಿಕರೆನಿಸಿದ್ದುದು ಅವರಲ್ಲಿದ್ದ ಮತ್ತೊಂದು ಅಮೋಘ ಗುಣ. ಗಾಯನ ಮಾಡುವಾಗ ಸಾಹಿತ್ಯದ ಸಹಾಯವೂ ಇರುತ್ತದೆ. ಆದಕಾರಣ, ಸಾಹಿತ್ಯದ ಸಹಾಯವೂ ಇರುವ ಗಾಯನದಿಂದ ರಸಾವಿರ್ಭಾವವನ್ನುಂಟು ಮಾಡುವುದಕ್ಕೂ, ಸಾಹಿತ್ಯದ ಸಹಾಯವಿಲ್ಲದೆ ವಾದ್ಯವನ್ನು ನುಡಿಸಿ ರಸಾನುಭವ ಮಾಡಿಕೊಡುವುದಕ್ಕೂ ಬಲು ದೂರ. ಶ್ರೀಮಾನ್ ಶೇಷಣ್ಣನವರದು, ವಿಚಿತ್ರ ಶಕ್ತಿ; ಅದ್ಭುತ ಸಾಮರ್ಥ್ಯ; ಅವರು ವೀಣೆ ಯನ್ನು "ಮಾತನಾಡಿಸುತ್ತಿದ್ದರು". ಶ್ರೋತೃವೃಂದದವರನ್ನು ಅಳಿಸು ವರು, ನಗಿಸುವರು, ದೈನ್ಯಗೊಳಿಸುವರು; ತಾವು ನುಡಿಸಿದ ಸೊಗಸಿನಿಂದ ಹುಟ್ಟಿದ ರಸಾನುಭವದ ಭಾರವನ್ನು ಮನಸ್ಸು ತಡೆಯಲಾರದೆಹೋಗಿ

ತಾವೇ ಕಂಬನಿದುಂಬಿ ವೀಣಾಪಾಣಿಯಾದ ದೇವಿಗೆ ಕಾಣಿಕೆಯನ್ನೊಪ್ಪಿಸುತ್ತಿದ್ದರು. ಗಾನರಸಲೋಲರಾದ ರಸಿಕರಿಗೆ "ಮಂಪರ" ಬರುವ ಮಟ್ಟಿನ ಸುಖಾಧಿಕ್ಯವನ್ನುಂಟುಮಾಡಿ ಅವರು ತಮ್ಮ ವಾದನ ಕೌಶಲ್ಯದ ಪರಾಕಾಷ್ಠೆಯನ್ನು ಮೆರೆದ ಸಂದರ್ಭಗಳೂ ಕೆಲವುಂಟು. ಅಷ್ಟೇ ಅಲ್ಲ. ರಸಾನುಭವದ ಪಾರವಶ್ಯದಿಂದ ಅವರಿಗೆ ಬಾಹ್ಯ ಸ್ಮರಣೆಯೇ ತಪ್ಪಿಹೋಗಿ ವೀಣೆಯು ಕೈಯಿಂದ ಬಿದ್ದುಹೋದ ನಿದರ್ಶನಗಳೂ ಎರಡು ಮೂರು ಸಲ ನಡೆದಿವೆ. "ಪಶುರ್ವೇತ್ತಿ ಶಿಶುರ್ವೇತ್ತಿ ವೇತ್ತಿ ಗಾನರಸಂ ಫಣೀ" ಎಂಬ ಅನುಭವೋಕ್ತಿಗನುಸಾರವಾಗಿ ಒಂದು ಸಲ ಶ್ರೀಮಾನ್ ಶೇಷಣ್ಣನವರು ವೀಣೆಯನ್ನು ನುಡಿಸುತ್ತಿದ್ದಾಗ ಒಂದು ದೊಡ್ಡ ನಾಗರಹಾವು ಸಭೆಗೆ ಬಂದು ಹೆಡೆಯನ್ನರಳಿಸಿ ಮಂಡಲ ಹಾಕಿಕೊಂಡು ತಲೆದೂಗುತ್ತಿದ್ದು ಕಚೇರಿಯು ಮುಗಿದಮೇಲೆ ಯಾರ ಗೊಡವೆಗೂ ಹೋಗದೆ ಸಭಾ ಮಂಟಪದಿಂದ ತೆರಳಿತಂತೆ. ಸಭಿಕರಲ್ಲಿ ಕೆಲವರು ಉತ್ಸಾಹಿಗಳು "ಶೇಷಣ್ಣನ ವೀಣೆಯನ್ನು ಕೇಳಲು ಶೇಷನೇ ಬಂದಿದ್ದ" ಎಂದು ಹರ್ಷಿಸಿ ಅದರ ಸವಿನೆನಪಿಗಾಗಿ ಹೆಡೆಗೆ ಉತ್ತಮವಾದ ಪಚ್ಚೆಯನ್ನು ಖಚಿತಗೊಳಿಸಿದ ನಾಗರಹಾವನ್ನು ಮಾಡಿಸಿ ವೀಣೆಗೆ ಕೀಲಿಸಿಕೊಟ್ಟು ಗೌರವಿಸಿದರು. ವೈಣಿಕ ಶಿಖಾಮಣಿ ಶೇಷಣ್ಣನವರು ರಚಿಸಿರುವ ತಿಲ್ಲಾನಗಳೂ ವರ್ಣಗಳೂ ಸಂಗೀತ ಪ್ರಪಂಚದಲ್ಲಿ ಅತ್ಯಂತ ಶ್ಲಾಘನೆಗೆ ಪಾತ್ರವಾಗಿ ಸುಪ್ರಸಿದ್ಧವಾಗಿವೆ. ಏಳು ತಾಳಗಳಿಗೂ ಸರಿಹೋಗುವಂತೆ ಅವರು ರಚಿಸಿರುವ "ಮಹಿಷಾಸುರ ಸಂಹಾರಿಣೀ" ಎಂಬ ಸಪ್ತ ತಾಲೇಶ್ವರೀ ವರ್ಣವು ಸಂಗೀತಗಾರರಿಗೆ ಕಬ್ಬಿಣದ ಕಡಲೆಯಾಗಿ ಪ್ರಖ್ಯಾತವಾಗಿದೆ.

ಶ್ರೀಮಾನ್ ಶೇಷಣ್ಣನವರು ಖ್ಯಾತಿಯನ್ನೂ ಹಣವನ್ನೂ ಹೇರಳವಾಗಿ ಗಳಿಸಿದರು. ಸರ್ ಇವ್ಯಾನ್ ಮೆಕಾನಿಕಿ ಅವರು ಶ್ರೀಮಾನ್ ಶೇಷಣ್ಣನವರನ್ನು ಧಾರವಾಡಕ್ಕೆ ಕರೆಯಿಸಿದ್ದಾಗ ಅಲ್ಲಿಯವರು ಒಂದೆರಡು ವಾರಗಳ ಕಾಲ ಅವರನ್ನು ಮರುಪ್ರಯಾಣಕ್ಕೆ ಬಿಟ್ಟುಕೊಡದೆ ಸಂಗೀತವನ್ನು ಕೇಳಿ ಹರ್ಷಿಸಿದರು.* ಆಳಿದ ಮಹಾಸ್ವಾಮಿಯವರಾದ

* "One year, I got an old Mysore friend Mr. Seshanna, the head *Vina* player at the Palace, to come and play to the guests. The *Vina* is an instrument of the lute type of great beauty and delicacy, and when properly played, appeals to the Western ear as much as to the Indian. Mr. Seshanna, a handsome and charming old gentleman, was a great artist; and his instrument, which had been in his family for two hundred years or more, was a Stradivarius among *Vinas*. Dharwar went into raptures over him, and for a week or two declined to let him go, so his visit was a great success from every point of view."—Sir Evan Maconochie.

ಶ್ರೀ ಕೃಷ್ಣರಾಜೇಂದ್ರ ಒಡೆಯರ್ ಬಹದ್ದೂರರವರು ಶ್ರೀಮಾನ್ ಶೇಷಣ್ಣನವರಿಗೆ "ವೈಣಿಕಶಿಖಾಮಣಿ" ಎಂಬ ಬಿರುದನ್ನು ರತ್ನಖಚಿತ ವಾದ ತೋಡಾ ಖಿಲ್ಲತ್ತುಗಳೊಡನೆ ದಯಪಾಲಿಸಿದರು. ರಾಮನಾಡು ಸಂಸ್ಥಾನದ ರಾಜರಾಗಿದ್ದ ಶ್ರೀ ಭಾಸ್ಕರ ಸೇತುಪತಿಯವರು ಅವರನ್ನು ಬರಮಾಡಿಕೊಂಡು ಅನೇಕ ದಿನಗಳು ಅವರಿಂದ ವೀಣೆಯನ್ನು ನುಡಿಯಿಸಿ ಕೇಳಿ, ಆನೆಯಮೇಲೆ ಅಂಬಾರಿಯಲ್ಲಿ ಕುಳ್ಳಿರಿಸಿ ಮೆರೆವಣಿಗೆ ಮಾಡಿಸಿ ಸಂಭಾವನೆಯನ್ನೂ ಖಿಲ್ಲತ್ತನ್ನೂ ಕೊಟ್ಟರು. ಶ್ರೀಮಾನ್ ಶೇಷಣ್ಣ ನವರು ದಯಮಾಡಿದ ಸ್ಥಳಗಳಲ್ಲೆಲ್ಲ ಸಂಗೀತ ಪ್ರೇಮಿಗಳು ಅವರ ಅಗಾಧವಾದ ವಿದ್ವತ್ತಿನಿಂದಲೂ ವಿನಯ ಗಾಂಭೀರ್ಯಗಳಿಂದಲೂ ಮುಗ್ಧರಾಗಿ ಅವರಿಗೆ ಅನನ್ಯ ಸಾಧಾರಣವಾದ ಗೌರವವನ್ನೂ ಆದರ ವನ್ನೂ ತೋರಿಸಿ ಕಾಣಿಕೆಗಳನ್ನು ಸಮರ್ಪಿಸುತ್ತಿದ್ದರು. ಬರೋಡಾ ಸಂಸ್ಥಾನದ ಶ್ರೀ ಸಯ್ಯಾಜಿರಾವ್ ಗಾಯಕವಾಡ್ ಮಹಾರಾಜರವರು ಅವರಿಗೆ ಖಿಲ್ಲತ್ತುಗಳನ್ನು ದಯಪಾಲಿಸಿ, ಮೇನಾದಲ್ಲಿ ಮೆರೆವಣಿಗೆ ಮಾಡಿಸಿ, ೧,೫೦೦ ರೂಪಾಯಿಗಳು ಬೆಲೆ ಬಾಳುವ ಮೇನಾವನ್ನು ಕೊಟ್ಟು ಗೌರವಿಸಿದರು. ಆಳಿದ ಮಹಾಸ್ವಾಮಿಯವರಾದ ನಮ್ಮ ಶ್ರೀಮನ್ಮಹಾ ರಾಜರವರು ೧೯೧೧ನೆಯ ಇಸವಿಯಲ್ಲಿ ಶ್ರೀಮಾನ್ ಶೇಷಣ್ಣನವರಿಗೆ ಅಮೂಲ್ಯವಾದ ಖಿಲ್ಲತ್ತುಗಳೇ ಮುಂತಾದುವುಗಳನ್ನು ದಯಪಾಲಿಸಿ, ಅರಮನೆಯ ಅತ್ಯಂತ ಶ್ರೇಷ್ಠ ಮರ್ಯಾದೆಯಾದ ಜೋಡಿ ಸುತ್ತು ವೀಳೆಯ ದಿಂಡುಹಾರಗಳ ಮರ್ಯಾದೆ ಮಾಡಿಸಿ, ಅರಮನೆಯ ಕರಿಕಲ್ಲು ತೊಟ್ಟಿಯಿಂದ ಅರಮನೆಯ "ಬ್ರಹ್ಮಪುರಿ" ಮಹಾದ್ವಾರದ ಮಾರ್ಗವಾಗಿ ಮೇನಾ ಮೆರೆವಣಿಗೆ ಮಾಡಿಸಿದರು. ಮೇರೀ ಮಹಾರಾಣಿ ಯವರು ಲಂಡನ್ ನಗರದಲ್ಲಿ ನಡೆದ ವಸ್ತುಪ್ರದರ್ಶನಕ್ಕೆ ದಯಮಾಡಿ ದ್ದಾಗ್ಗೆ (ಹಿಂದೆ ಮೈಸೂರು ನಗರದಲ್ಲಿ ವೀಣಾವಾದನವನ್ನು ಕೇಳಿದ್ದ ಸವಿ ನೆನಪಿನಿಂದ) ಶ್ರೀಮಾನ್ ಶೇಷಣ್ಣನವರ ಚಿಕ್ಕ ಪ್ರತಿಮೆಯನ್ನು ಕ್ರಯಕ್ಕೆ ತೆಗೆದುಕೊಂಡರು.

ಶ್ರೀಮಾನ್ ಶಾಮಣ್ಣನವರಿಂದಲೂ, ಶ್ರೀಮಾನ್ ಶೇಷಣ್ಣನವ ರಿಂದಲೂ ಆಳಿದ ಮಹಾಸ್ವಾಮಿಯವರಿಗೆ ಲಭಿಸಿದ ಶಿಕ್ಷಣವು, ಸಚ್ಛಿಷ್ಯ ರಿಗೆ ಅರ್ಪಿತವಾದ ವಿದ್ಯೆಯೇ ಭೂಲೋಕದ ಕಲ್ಪಲತೆಯೆಂಬ ಆರ್ಯೋಕ್ತಿಯನ್ನು ಸಾರ್ಥಕ ಗೊಳಿಸಿತು. ಪೂರ್ವಜನ್ಮ ಸಂಸ್ಕಾರದಿಂದ ಲಭಿಸಿದ್ದ

**ಸಂಗೀತ ಪ್ರೌಢಿಮೆ**

ಪ್ರತಿಭೆಯಿಂದಲೂ, ಉತ್ತಮ ಶಿಕ್ಷಣದಿಂದಲೂ, ಶ್ರಮವನ್ನರಿಯದ

ಸಂತತವಾದ ಸಾಧನೆಯಿಂದಲೂ ಅವರು ಅಸಾಧಾರಣವಾದ ಸಂಗೀತ ಪ್ರೌಢಿಮೆಯನ್ನು ಪಡೆದರು. ಶ್ರೀಮಾನ್ ಶೇಷಣ್ಣನವರು ಒಬ್ಬರು ದೊಡ್ಡ ಮನುಷ್ಯರೊಡನೆ, "ಈಗಿನ ಮಹಾರಾಜರಿಗೆ ನಾನೂ ಪಾಠ ಹೇಳಿದೆ. ಅವರು ಅತ್ಯಂತ ಹೆಚ್ಚಾಗಿ ನನ್ನಲ್ಲಿ ಪ್ರೀತಿಯನ್ನಿಟ್ಟಿದ್ದಾರೆ. ಹಿಂದಿನ ಮಹಾರಾಜರಾದ ಶ್ರೀ ಚಾಮರಾಜೇಂದ್ರ ಒಡೆಯರಿಗಿಂತಲೂ ಎಷ್ಟೋ ಹೆಚ್ಚಾಗಿ ಸಂಭಾವನೆಗಳನ್ನೂ ಖಿಲ್ಲತ್ತುಗಳನ್ನೂ ದಯಪಾಲಿಸಿದ್ದಾರೆ. ಬಿರುದುಕೊಟ್ಟಿದ್ದಾರೆ. ಇಷ್ಟಾದರೂ ನಾನು ಬೇರೆ ಈಗಿನ ಮಹಾರಾಜರೆದುರಿಗೆ ಹಿಂದಿನ ಮಹಾರಾಜರೆದುರಿಗೆ ನುಡಿಸುತ್ತಿದ್ದಂತೆ ನಿರಾತಂಕವಾಗಿ ವೀಣೆಯನ್ನು ನುಡಿಸುವಂತಿಲ್ಲ. ಎಲ್ಲಿ ಏನು ತಪ್ಪಾದೀತೋ — ಎಂಬ ಆತಂಕದಿಂದ ಮೈಯೆಲ್ಲಾ ಕಣ್ಣಾಗಿ, ಎದೆಯೆಲ್ಲಾ ಅಳುಕಾಗಿ, ವೀಣೆಯನ್ನು ನುಡಿಸಿ ಬರಬೇಕಾಗಿದೆ. ನಾನೇ ನಾನಾಗಿ ಮೈಮರೆತು ನುಡಿಸುವ ಧೈರ್ಯವು ಬೇರೆ ಇಲ್ಲ. ಅಷ್ಟುಮಟ್ಟಿನ ವಿದ್ವತ್ತಿನ ರಾಶಿ, ನಮ್ಮ ಮಹಾರಾಜರವರು. ಅದೂ ಒಂದು ಪೂರ್ವಜನ್ಮ ಪುಣ್ಯ ಪ್ರಭಾವ" ಎಂದು ನುಡಿದರು. ದಿವಂಗತರಾದ ವೈಣಿಕ ಪ್ರವೀಣ ಶ್ರೀಮಾನ್ ವೀಣೆ ಸುಬ್ಬಣ್ಣನವರು, "ಚಾಮರಾಜ ಒಡೆಯರವರು 'ನನ್ನ ಜೀವವಿರುವುದೇ ಎರಡರಲ್ಲಿ; ಒಂದು ಕುದುರೆ, ಇನ್ನೊಂದು ಸಂಗೀತ' ಅನ್ನುತ್ತಿದ್ದರು. ಅವರ ಕಾಲದಲ್ಲಿ ಸಂಗೀತ ಬಹಳ ಮುಂದಕ್ಕೆ ಬಂತು. ಆದರೆ ನಮ್ಮ ಮಹಾರಾಜರು ಸಂಗೀತ ವಿದ್ಯೆಯನ್ನು ಇನ್ನೂ ಪ್ರಕಾಶಮಾಡಿ, ಮೈಸೂರು ವಿದ್ವಾಂಸರನ್ನೆಲ್ಲಾ ಒಂದು ಜಿತಕ್ಕೆ ನಿಲ್ಲಿಸಿ ಗೌರವಿಸಿದರು. ನಮ್ಮ ಮಹಾರಾಜರಂತೆ ಯಾವ ಸಂಸ್ಥಾನದ ಪ್ರಭುಗಳಿಗೂ ವಿದ್ವತ್ತೂ ಇಲ್ಲ. ನಮ್ಮ ಮಹಾರಾಜರಂತೆ ಯಾವ ಸಂಸ್ಥಾನದ ಪ್ರಭುಗಳೂ ಪ್ರೋತ್ಸಾಹ ಕೊಡುವುದಿಲ್ಲ. ನಮ್ಮ ಮಹಾರಾಜರಿಗಿರುವಷ್ಟು ಸಂಗೀತ ಜ್ಞಾನವು ಯಾರಿಗೂ ಇಲ್ಲ. ನಮ್ಮ ಮಹಾರಾಜರಿಗೆ ಸಂಗೀತದ ವಿಚಾರದಲ್ಲಿ ಸಕಲವೂ ತಿಳಿಯುವುದು. ಸರಸ್ವತೀ ದೇವಿ ಅವರಿಗೆ ಪೂರ್ಣಾನುಗ್ರಹಮಾಡಿದ್ದಾಳೆ" ಎಂದು ಹೇಳಿದರು. ದಿವಂಗತರಾದ ಆಫ್ತಾ-ಬೇ-ಸಿತಾರ್ ಶ್ರೀಮಾನ್ ಬರಖತ್ತುಲ್ಲಾಖಾನ್ ರವರು, "ಅನೇಕ ಜನ ರಾಜರುಗಳೆದುರಿಗೂ ನವಾಬರುಗಳೆದುರಿಗೂ ಸಿತಾರ್ ನುಡಿಸಿದ್ದೇನೆ. ಅವರಲ್ಲಿ ಬಹಳ ಮಂದಿ 'ಬಜಾವ್' ಎಂದು ಹೇಳಿ ಯಂತ್ರಗಳ ಹಾಗೆ ಕುಳಿತು ಕೇಳಿದ್ದಾರೆ. ಸಂಗೀತ ಜ್ಞಾನವಿಲ್ಲ. ಮಾಡಿದ ಕೆಲಸದ ಜಾಡು ಹಿಡಿದು ಹಿಗ್ಗಿದ ಆನಂದವಿಲ್ಲ. ಮೈಸೂರಿನ ಮಾತೇ ಬೇರೆ. ಇಲ್ಲಿ ಹುಜೂರ್ ಒಂದು ಸಲ ತಲೆದೂಗಿದರೆ

ನಮಗೊಂದು ಸ್ವರ್ಗ ಸಿಕ್ಕಿದಹಾಗೆ. ಆದರೆ ಹುಜೂರ್ ಎದುರಿಗೆ
ತಾರ್ ನುಡಿಸುವಾಗ ಮಾತ್ರ ಎದೆ ಡುಬ್ ಡುಬ್. ಸಂಗೀತದಲ್ಲಿ
ಲಿ ಮುಳುಗಿ ಈಜುಹೊಡೆಯುವ ನನಗೂ ಎದೆಯೆಲ್ಲಾ ಡುಬ್
ಡುಬ್'' ಎಂದು ಅರ್ಥವಾಗುವಂತೆ ಉರ್ದು ಭಾಷೆಯಲ್ಲಿ ಆಪ್ತರೊಬ್ಬ
ರೊಡನೆ ಹೇಳಿಕೊಂಡು ಹರ್ಷಿಸಿದ್ದರು.

ಅನೇಕ ಸಂಸ್ಥಾನಗಳ ರಾಜ ಮಹಾರಾಜರುಗಳಿಂದ ಸನ್ಮಾನಿತರಾಗಿ
ದೊಡ್ಡ ಹೆಸರನ್ನು ಪಡೆದು, ಆಳಿದ ಮಹಾಸ್ವಾಮಿಯವರ ಆದರ ಸನ್ಮಾನ
ಗಳಿಗೂ ಪಾತ್ರರಾಗಿದ್ದು ಸುಪ್ರಸಿದ್ಧರಾಗಿರುವ ಆಸ್ಥಾನ ವಿದ್ವಾಂಸರಾದ
ಮಹಾಶಯರೊಬ್ಬರ ಸೊಗಸಾದ ಮಾತುಗಳನ್ನೂ ಇಲ್ಲಿ ಉದಾಹರಿಸ
ಬಹುದಾಗಿದೆ: ''........೧೯೨೭ನೆಯ ಇಸವಿಯಲ್ಲಿ ಸಮ್ಮುಖದಲ್ಲಿ
ಕಚೇರಿಯಾಗಬೇಕೆಂದು ಆಹ್ವಾನ ಬಂತು. ಪ್ರಭುಗಳ ಹತ್ತಿರ—
ಮೈಸೂರು ಅರಮನೆ ಡ್ರಾಯಿಂಗ್ ರೂಮಿನಲ್ಲಿ ಹಾಡುವ ಸುಯೋಗ
ದೊರೆಯಿತು. ಮಹಾಸ್ವಾಮಿಯವರನ್ನು ಮೊದಲು ನೋಡಿದಾಗ
ಸಂಗೀತ ಬರುತ್ತೆಂದೇ ಹೇಳುವುದಕ್ಕಾಗಲಿಲ್ಲ. ಮೊದಲು ವರ್ಣ
ಹಾಡಿದೆ. ಪ್ರತಿಮೆಯಂತೆ ಸುಮ್ಮನೆ ಕೂತಿದ್ದರು. ಮಾರನೆಯ ದಿನ
ಉದಾರವಾದ ಸಂಭಾವನೆ ಬಂದುದಲ್ಲದೆ, ನಾನು ಊರಿಗೆ ಹೊರಡಕೂಡ
ದೆಂದೂ ಮತ್ತೊಂದು ದಿನ ಕಚೇರಿಯಾಗಬೇಕೆಂದೂ ಅಪ್ಪಣೆಯಾಗಿದ್ದು
ದಾಗಿ ಬಕ್ಷಿಯವರು ತಿಳಿಸಿದರು. ಎರಡನೆಯ ದಿನದ ಕಚೇರಿಯಲ್ಲಿ
ಅರ್ಧ ಘಂಟೆ ಹಾಡಿದೆ. ಇತರ ಮಹಾರಾಜರುಗಳಂತೆ ಮಹಾಸ್ವಾಮಿ
ಯವರು ತಲೆದೂಗುತ್ತಿರಲಿಲ್ಲ; ಕೈಯಾಡಿಸುತ್ತಿರಲಿಲ್ಲ. ಆದರೆ ಕಾಲಿನ
ಹೆಬ್ಬೆರಳು ಅಲುಗುತ್ತಿದ್ದುದನ್ನು ಕಂಡು ಲಯಜ್ಞಾನ ಬಹು ಚೆನ್ನಾಗಿದೆ
ಯೆಂದುಕೊಂಡೆ. ಮಾರನೆಯ ದಿನ ಅರಮನೆಯ ವಿದ್ವಾಂಸರಲ್ಲೊಬ್ಬ
ರಾದ........ರು ಬಂದು 'ನಿನ್ನೆ ರಾಗರತ್ನ ಮಾಲಿಕಚೇ ಎಂಬ
ರೀತಿ ಗೌಳ ರಾಗದ ಕೃತಿಯನ್ನು ತಾವು ಹಾಡಿದಿರಿ. ತಮ್ಮ ಚಿಟ್ಟೆ ಬಹಳ
ಚೆನ್ನಾಗಿದೆ. ಬರೆದುಕೊಂಡು ಬರಬೇಕೆಂದು ಅಪ್ಪಣೆಯಾಗಿದೆ' ಎಂದರು.
ನನಗೆ ಬಹಳ ಸಂತೋಷವಾಯಿತು. ಆನಂದದಿಂದ ಚಿಟ್ಟೆ ಬರೆದು
ಕಳುಹಿಸಿದೆ. ಮೂರನೆಯ ಸಲದ ಕಚೇರಿಯಲ್ಲಿ ಭೈರವಿ ರಾಗ ವಿಸ್ತಾರ
ಮಾಡಿ ಹಾಡಿದೆ. ಸಮ್ಮುಖದಲ್ಲಿ ಕಚೇರಿ ಒಂದೂಕಾಲು ಘಂಟೆ
ನಡೆಯಿತು. ಪ್ರಭುಗಳು ಆ ದಿನವೇ ನನ್ನೊಡನೆ ಮೊಟ್ಟಮೊದಲು
ಮಾತನಾಡಿದ್ದು. '....ರವರೇ! ಚೆನ್ನಾಗಿತ್ತು. ಇಂಥಾ ಸಂಗೀತ
ಕೇಳಿ ಇಪ್ಪತ್ತು ವರ್ಷವಾಗಿತ್ತು' ಎಂದರು. ಆ ದಿನ ಸಂಗೀತಶಾಸ್ತ್ರ

ಸೂಕ್ಷ್ಮಗಳೆಲ್ಲಾ–ಪ್ರಸ್ತಾರ ಕ್ರಮಗಳೆಲ್ಲಾ–ತೋರಿಸಿ ಭೈರವಿ ರಾಗ ಹಾಡಿದಾಗ ಮಹಾಸ್ವಾಮಿಯವರು ಸಂಗೀತ ಸೂಕ್ಷ್ಮಗಳ ಮರ್ಮಗಳನ್ನು ಗ್ರಹಿಸಿದ ಬಗೆಯನ್ನು ತಿಳಿದು ಮಹಾಪ್ರಭುಗಳಿಗೆ ಎಷ್ಟು ಆಳವಾದ ಜ್ಞಾನವಿದೆಯೆಂಧುಕೊಂಡು ಸಂತೋಷಪಟ್ಟಿದ್ದ ನಾನು, ಮಹಾಸ್ವಾಮಿಯವರು ಆಡಿದ ಆ ಮಾತುಗಳನ್ನು ಕೇಳಿ, 'ನಮ್ಮ ತಾಯಿಯ ಹೊಟ್ಟೆಯಲ್ಲಿ ಇವೊತ್ತು ಹುಟ್ಟಿದಹಾಗಾಯಿತು. ಇವರ ಸಂಗೀತಶಾಸ್ತ್ರ ಪಾಂಡಿತ್ಯಕ್ಕೆ ಪರಿಮಿತಿಯೇ ಇಲ್ಲ' ಎಂದುಕೊಂಡೆ. ಭೈರವಿ ರಾಗದ ಹೃದಯಸ್ಥಾನವಾದ ಷಡ್ಜ ಮಧ್ಯಮ ಸ್ಥಾನದಲ್ಲಿ ಆ ದಿನ ಕೆಲಸ ಮಾಡಿದ್ದೇ ಸಾರ್ಥಕವಾಯಿತೆಂದುಕೊಂಡೆ. ಮಹಾಸ್ವಾಮಿಯವರಿಗೆ ಭಾವ ರಾಗ ತಾಲ ಇವು ಮೂರರಲ್ಲೂ ಪಾಂಡಿತ್ಯ. ಕೆಲವು ಕೃತಿಗಳನ್ನು ಭಾವಸಹಿತವಾಗಿ ಹಾಡಿದರೆ ಅವರ ಮುಖವು ಭಾವರಸ ಪುಂಜಿತವಾಗಿ ಶೋಭಿಸುತ್ತಿತ್ತು. ಆಗ ಸ್ವಲ್ಪ ಮುಂದಕ್ಕೆ ಬಾಗಿ ಕುಳಿತು ಕೃತಿಯ ಭಾವರಸವನ್ನನುಭವಿಸುತ್ತಿದ್ದರು. ಶ್ರುತಿಯನ್ನೂ, ತಾಳವನ್ನೂ ಕಣ್ಣಲ್ಲಿ ಕಣ್ಣಾಗಿ ನೋಡುತ್ತಿದ್ದರು. ಒಂದು ದಿನ ಹಾಡುತ್ತಿದ್ದೆ. ಆಗ ತಂಬೂರಿಯನ್ನೇ ನೋಡುತ್ತಿದ್ದರು. ಕೃತಿ ಮುಗಿದ ಮೇಲೆ, ಹೀಗೇಕೆ ನೋಡುತ್ತಾರೆಂದು ಆಲೋಚಿಸಿ, ತಂಬೂರಿ ನೋಡಿಕೊಂಡೆ; ಮಂದರ ಒಂದು ರವೆಯಷ್ಟು ಇಳಿದಿತ್ತು. ಕಾಯಿ ಸರಿಮಾಡಿದ ಮೇಲೆ ಮಹಾಸ್ವಾಮಿಯವರು ಮುಖ ಸುಷ್ಮುವಾಗಿ ಕುಳಿತರು.''

ಆಳಿದ ಮಹಾಸ್ವಾಮಿಯವರಿಗೆ ಅದ್ಭುತವಾದ ಸಂಗೀತ ಪ್ರೌಢಿಮೆಯಷ್ಟು ಮಟ್ಟಿಗೇ ಅದ್ಭುತವಾದ ಶ್ರುತಿಜ್ಞಾನವೂ ಇದ್ದಿತು. ಒಂದು ಸಲ, ನಿಷಾತ್ ಬಾಗಿನಲ್ಲಿ ಅರಮನೆಯ ಮೇಳ ಸಂಗೀತವಾಗುತ್ತಿದ್ದಾಗ ಮಹಾಸ್ವಾಮಿಯವರು ಮೋಟಾರು ಬಂಡಿಯಲ್ಲಿ ಆ ಮಾರ್ಗವಾಗಿ ಚಿತ್ತೈಸಿ, ಅಲ್ಲಿ ಒಂದು ನಿಮಿಷ ಮಾತ್ರ ಮೋಟಾರು ಬಂಡಿಯನ್ನು ನಿಲ್ಲಿಸಿ, ಮೆಲ್ಲಗೆ ಅದನ್ನು ನಡೆಯಿಸಿಕೊಂಡು ದಯಮಾಡಿದರು. ಹಾಗಿದ್ದೂ ಮೃದಂಗದ ಶ್ರುತಿಯು ಇಳಿದುಹೋಗಿದ್ದುದನ್ನು ಗಮನಿಸಿ ಮಾರನೆಯ ದಿನ ಅದನ್ನು ತಿಳಿಸಿದರು. ವಾದ್ಯಮೇಳದಲ್ಲಿ ಮೂವತ್ತು ನಲವತ್ತು ವಾದ್ಯಗಳು ನುಡಿಯುತ್ತಿದ್ದಾಗಲೂ ಕೂಡ, ಅವುಗಳನ್ನು ನುಡಿಸುತ್ತಿದ್ದವರಲ್ಲಿ ಒಬ್ಬರು ಒಂದು ಅಪಸ್ವರವನ್ನು ನುಡಿಸಿದರೂ ತಟಕ್ಕನೆ ಗುರುತಿಸುವ ಮಟ್ಟಿನ ಸಾಮರ್ಥ್ಯವನ್ನು ಅವರು ಪಡೆದಿದ್ದರು; ಘನ ವಿದ್ವಾಂಸರೇ ಅದನ್ನು ಕಂಡು ಆಶ್ಚರ್ಯದಿಂದ ಬೆರಗಾಗುತ್ತಿದ್ದರು. ಖಾಸ್ ಬಂಗಲೆಯಲ್ಲಿ ಒಂದು ಸಲ ಆಸ್ಥಾನ ವಿದ್ವಾಂಸರೊಬ್ಬರು

ಯೂರೋಪಿಯನ್ ದೊಡ್ಡ ಮನುಷ್ಯರೊಬ್ಬರ ಪಿಯಾನೋ ಜೊತೆಗೆ ಜಲತರಂಗ್ ನುಡಿಸುತ್ತಿದ್ದರು. ಮಹಾಪ್ರಭುಗಳವರು ಅಲ್ಲಿಗೆ ದಯಮಾಡಿದಾಗ ಅವರಿಬ್ಬರೂ "ಇಂಗ್ಲಿಷ್ ನೋಟ್" ನುಡಿಸುತ್ತಿದ್ದರು. ಜಲತರಂಗ್ ಪಂಚಮದ ಬಟ್ಟಲು ಶ್ರುತಿ ಇಳಿದಿದ್ದಿತು. ಮಹಾಪ್ರಭುಗಳವರು ಒಡನೆಯೇ ಅದನ್ನು ಕಂಡುಹಿಡಿದು ಸರಿಪಡಿಸಿಕೊಳ್ಳುವಂತೆ ಹೇಳಿದರು. ಅವರು ಗಾಯನ ವಾದನಗಳೆರಡರಲ್ಲಿ ಸಹ ಅಸಾಧಾರಣವಾದ ಕೌಶಲ್ಯವನ್ನು ಪಡೆದಿದ್ದರು. ಒಂದು ಕೀರ್ತನೆಯನ್ನು ಕೆಲವೇ ನಿಮಿಷಗಳಲ್ಲಿ ಮನನಮಾಡಿ ಪಿಟೀಲಿನಲ್ಲಿ ಒಂದೇ ತಂತಿಯಲ್ಲಿ ನುಡಿಸುವಷ್ಟು ಸಾಮರ್ಥ್ಯವನ್ನು ಪಡೆದಿದ್ದರು.

ಆಳಿದ ಮಹಾಸ್ವಾಮಿಯವರು ತಾವು ಸಂಗೀತ ವಿದ್ಯಾಪಾರಂಗತರಾಗಿದ್ದರೂ, ರಸಿಕತೆ ಮತ್ತು ಸಹೃದಯತೆಗಳ ಮನೋಧರ್ಮದಿಂದ ಕೂಡಿದ್ದರು. ಸಣ್ಣವರ ಸಂಗೀತ ದೊಡ್ಡವರ ಸಂಗೀತವೆಂಬ ಭೇದವಿಲ್ಲದೆ ಶ್ರದ್ಧೆಯಿಂದ ಸಂಗೀತವನ್ನು ಕೇಳಿ ಪ್ರೋತ್ಸಾಹಿಸುತ್ತಿದ್ದರು; ಕೊನೆಗೆ, ಹಾವಾಡಿಗನ ನಾಗಸ್ವರದಿಂದ ಹರ್ಷಿಸಿದ ಸಂದರ್ಭವೂ ಉಂಟು. ಯಾರ ಕೆಲಸವನ್ನು ಯಾವ ಮಟ್ಟದಿಂದ ಮತ್ತು ಯಾವ ದೃಷ್ಟಿಯಿಂದ ವಿಮರ್ಶಿಸಬೇಕೆಂಬ ಔಚಿತ್ಯವನ್ನು ಪ್ರಭುಗಳು ಬಲ್ಲವರಾಗಿದ್ದರು. ಯಕ್ಷಗಾನವನ್ನಾಡಿಸಿ ಪ್ರೋತ್ಸಾಹಿಸುತ್ತಿದ್ದರು. ಯಾರಾದರೂ ತಪ್ಪಿ ಹಾಡಿದರೂ, "ಗಾಯನವು ದೇಹಧರ್ಮಕ್ಕೂ ಶೀತೋಷ್ಣಗಳಿಗೂ ಅಧೀನ" ಎಂದು ಹೇಳಿ ಸಹಾನುಭೂತಿ ತೋರಿಸಿ ಮತ್ತೆ ಮತ್ತೆ ಅವಕಾಶಕೊಟ್ಟು ಯೋಗ್ಯತೆಯನ್ನು ನಿಷ್ಕರ್ಷೆ ಮಾಡುತ್ತಿದ್ದರು. ಒಬ್ಬರು ಸಂಗೀತ ವಿದ್ವಾಂಸರನ್ನು ಮೂರು ಸಲ ಕರೆಯಿಸಿ ಕಚೇರಿ ಮಾಡಿಸಿದರು; ಮೂರು ಸಲಗಳೂ ಕಚೇರಿ ಕೆಟ್ಟುಹೋದ ಮೇಲೆ ಅವರನ್ನು ಕರೆಯಿಸದೆ ಬಿಟ್ಟುಬಿಟ್ಟರು. ೧೯೧೦ನೆಯ ಇಸವಿಯಲ್ಲಿ ಶ್ರೀಮದ್ಯುವರಾಜ ಶ್ರೀ ಕಂಠೀರವ ನರಸಿಂಹರಾಜ ಒಡೆಯರ್ ಬಹದ್ದೂರರವರ ವಿವಾಹ ಕಾಲದಲ್ಲಿ ನಡೆದ ಒಂದು ಸಂಗೀತ ಕಚೇರಿಗೆ ಒಬ್ಬರು ಮೃದಂಗ ವಿದ್ವಾಂಸರನ್ನು ಆರಿಸಿ ಕಳುಹಿಸುವಂತೆ ಮಹಾಪ್ರಭುಗಳವರು ಆಪ್ತರೊಬ್ಬರಿಗೆ ಆಜ್ಞಾಪಿಸಿದ್ದರು. ಅವರು ಮೃದಂಗ ವಿದ್ವಾಂಸರೊಬ್ಬರ ಯೋಗ್ಯತೆಯನ್ನು ಪ್ರಶಂಸಿಸಿ ಕಳುಹಿಸಿಕೊಟ್ಟರು. ಆತನು ಮೃದಂಗವನ್ನು ನುಡಿಸಿದುದು ಸರಿಹೋಗಲಿಲ್ಲ. ಮಹಾಸ್ವಾಮಿಯವರು ಆತನನ್ನು ಕಳುಹಿಸಿದವರೊಡನೆ, "ಬಹಳ ಹೊಗಳಿದ್ದಿರಿ. ಆತನ ಮೃದಂಗ

ರಸಿಕತೆ; ಸಹೃದಯತೆ

ಉಪಯೋಗವಿಲ್ಲ" ಎಂದು ಹೇಳಿದಾಗ ಅವರು, "ಮಹಾಸ್ವಾಮಿ! ಅವನಿಗೆ ಆ ದಿನ ಜ್ವರ. ಇದರಮೇಲೆ ಸನ್ನಿಧಿಯಲ್ಲಿ ಭಯ. ಮತ್ತೊಂದು ಸಲ ಅವಕಾಶ ಕೊಟ್ಟು ಕೃಪೆಮಾಡಿದರೆ ತನ್ನ ವಿದ್ಯೆ ತೋರಿಸಿಕೊಂಡು ಧನ್ಯನಾದಾನು" ಎಂದು ಪ್ರತ್ಯುತ್ತರಹೇಳಿದರು. ಆತನಿಗೆ ಮತ್ತೊಂದು ಅವಕಾಶ ಲಭಿಸಿತು. ಆಳಿದ ಮಹಾಸ್ವಾಮಿಯವರು ಮೂರನೆಯ ದಿನ ಅದೇ ಆಪ್ತರೊಡನೆ "ಆದಿನ ಆತನ ಮೃದಂಗ ಉಪಯೋವಿಲ್ಲವೆಂದಿದ್ದೆವು. ನಿನ್ನೆ ಬಹಳ ಚೆನ್ನಾಗಿ ನುಡಿಸಿದರು. ಬಹಳ ಗಟ್ಟಿಗರು. ಆದರೂ ಇನ್ನೂ ಕೈ ಪಳಗಬೇಕು. ಆ ದಿನ ಅವರಿಗೆ ಭಯವಾಯಿತೆಂದಿರಿ. ಭಯವೇಕೆ? ನಾವೇನು ಮಾಡುತ್ತೇವೆ?" ಎಂದು ಹೇಳಿ ನಕ್ಕರು. ಆಗ ಆ ಮಹಾಶಯರು, "ಮಹಾಸ್ವಾಮಿ! ಮಹಾಸನ್ನಿಧಿಗೆ ಬಂದು ಕುಳಿತಾಗ ಏಕೆ ಹಾಗಾಗುವುದೆಂಬುದು ಇತರರ ಅನುಭವದ ವಿಷಯ. ಅದು ಮಹಾಸ್ವಾಮಿಯವರಿಗೆ ಅನುಭವಕ್ಕೆ ಬರುವ ಬಗೆ ಹೇಗೆ?" ಎಂದುದನ್ನು ಕೇಳಿ ಅವರು ಮತ್ತಷ್ಟು ನಕ್ಕರಂತೆ. ಆಳಿದ ಮಹಾಸ್ವಾಮಿಯವರ ಸನ್ನಿಧಿಯಲ್ಲಿ ಈಚೆಗೆ ಒಂದು ಸಂಗೀತ ಕಚೇರಿ ನಡೆದಾಗ್ಗೆ, ಸಂಗೀತ ವಿದ್ವಾಂಸರು ಹೊಟ್ಟೆ ಬಿಗಿಯುವಷ್ಟುಮಟ್ಟಿಗೆ ಉಪಾಹಾರ ಸೇವನೆಮಾಡಿ ಬಂದಿದ್ದ ಕಾರಣದಿಂದ ಸಂಗೀತ ಕಚೇರಿ ಕೆಟ್ಟುಹೋದುದನ್ನು ಕಂಡು ಅದನ್ನು ಕುರಿತು ಕಟುವಾಗಿ ಟೀಕೆ ಮಾಡಿ ಆಕ್ಷೇಪಿಸಿದವರೊಡನೆ, "ಆತನಿಗೆ ಯೋಗ್ಯತೆಯಿದ್ದೂ ಅವರು ಸರಿಯಾಗಿ ಹಾಡಲಿಲ್ಲ. ಜಿಹ್ವಾಚಾಪಲ್ಯದ ದೆಸೆಯಿಂದ ಹೊಟ್ಟೆ ಭಾರವಾಗಿ ತೇಗುಗಳಿಗೇ ಶಕ್ತಿಯಲ್ಲ ವ್ಯಯವಾಗಿ ಹೀಗಾಗಿರಬೇಕು" ಎಂದು ಅಪ್ಪಣೆಕೊಡಿಸಿ, ಮತ್ತೊಂದು ಅವಕಾಶ ಕೊಟ್ಟು ಕೃಪೆಮಾಡಿದರು. ಅರಮನೆಯ ಸಂಗೀತ ವಿದ್ವಾಂಸರು ಹಾಡುತ್ತಿದ್ದಾಗ ಪ್ರಮಾದವಶದಿಂದ ತಾಳ ತಪ್ಪಿದರೆ ಅಥವಾ ಅಪಸ್ವರ ನುಡಿದರೆ ಅವರು ತೇಜೋವಧೆಮಾಡದೆ ಕೇವಲ ಕಣ್ಸನ್ನೆ ಮಾತ್ರದಿಂದಲೇ ತಿದ್ದುತ್ತಿದ್ದರು. ದಿವಗಂತರಾದ ಆಫ್ತಾ-ಬೇ-ಸಿತಾರ್ ಶ್ರೀಮಾನ್ ಬರಖತ್ತುಲ್ಲಾಖಾನ್‌ರವರು ಒಬ್ಬರು ದೊಡ್ಡಮನುಷ್ಯರೊಡನೆ, "ಹುಜೂರ್ ಎದುರಿಗೆ ಮೊದಲನೆಯ ದಿನ ಸಿತಾರ್ ನುಡಿಸಿದೆ. ಎರಡನೆಯ ದಿನ ನುಡಿಸಿದೆ. ಮೂರನೆಯ ದಿನ ನುಡಿಸಿದೆ. ದೇವಸ್ಥಾನದ ಕಲ್ಲು ವಿಗ್ರಹದ ಹಾಗೆ ಹುಜೂರ್ ಕುಳಿತಿದ್ದರು. ಅವರಿಗೆ ಸಂಗೀತ ತಿಳಿಯದೆಂದು ಭಾವಿಸಿ ಉದ್ದೇಶಪೂರ್ವಕವಾಗಿ ಶ್ರುತಿ ತಪ್ಪಿಸಿ ಅಪಸ್ವರ ನುಡಿಸಿದೆ. ಹುಜೂರ್ ನಕ್ಕರು. ಕಿರಿಗಣ್ಣುಮಾಡಿಕೊಂಡು ನಕ್ಕರು. ಆಮೇಲೆ ಇದ್ದ ಸಂಗತಿ ತಿಳಿಸಿ ಕ್ಷಮೆಬೇಡಿದೆ. ಸಂತೋಷಪಟ್ಟೆ" ಎಂದು ಅರ್ಥವಾಗುವಂತೆ ಉರ್ದು ಭಾಷೆಯಲ್ಲಿ ಹೇಳಿಕೊಂಡು ಹಿಗ್ಗಿದ್ದರು.

ಆಳಿದ ಮಹಾಸ್ವಾಮಿಯವರು ಅಷ್ಟು ಸಹೃದಯರಾಗಿದ್ದರೂ ಸಂಗೀತ ವಿದ್ವಾಂಸರುಗಳಲ್ಲಿ ದುರಹಂಕಾರಿಗಳಾದವರಿಗೆ ವಿನೋದ ಪೂರ್ವಕವಾಗಿಯೇ ಬುದ್ಧಿ ಕಲಿಸಿದ ಅನೇಕ ಸಂದರ್ಭಗಳಿವೆ: ೧೯೩೩ನೆಯ ಇಸವಿಯಲ್ಲಿ ಒಬ್ಬರು ವಿದ್ವಾಂಸರು ದೊಡ್ಡವರಿಂದ ಪತ್ರವನ್ನು ತಂದು, ತಾವು..........ಭಾಗವತರ ಪ್ರಿಯಶಿಷ್ಯರೆಂದು ಮಾತು ಮಾತಿಗೂ ಪಲ್ಲವಿಯಾಗಿ ಹೇಳಿ ಮಿತಿಮೀರಿ ಆತ್ಮಶ್ಲಾಘನೆಮಾಡಿಕೊಂಡರು. ಆಳಿದ ಮಹಾಸ್ವಾಮಿಯವರ ಸನ್ನಿಧಾನದಲ್ಲಿ ಕಚೇರಿಯ ಏರ್ಪಾಡಾಯಿತು. ಹಾರ್ಮೋನಿಯಂ ಮತ್ತು ತಂಬೂರಿ—ಇವೆರಡನ್ನೂ ಶ್ರುತಿಗಿಟ್ಟುಕೊಂಡು ಅವರು ಹಂಸಧ್ವನಿ ರಾಗದ "ವಾತಾಪಿ ಗಣಪತಿಂ ಭಜೇಹಂ" ಎಂಬ ಕೀರ್ತನೆಯನ್ನು ಹಾಡಿದರು. ಹಾರ್ಮೋನಿಯಂ ಮತ್ತು ತಂಬೂರಿ ಶ್ರುತಿಸೇರಲಿಲ್ಲ. ಅವುಗಳೊಡನೆ ಗಾಯಕರ ಕಂಠಶ್ರುತಿಯೂ ಸೇರಲಿಲ್ಲ. ಆಳಿದ ಮಹಾಸ್ವಾಮಿಯವರು ಹಾರ್ಮೋನಿಯಂ ಮತ್ತು ತಂಬೂರಿ—ಅವೆರಡರ ಕಡೆಗೂ ಕೈತೋರಿಸಿ, "ಇವೆರಡೂ ಏತಕ್ಕೆ?" ಎಂದು ಕೇಳಲು, ಅವರಿಗೆ ಸಂಗೀತದ ವಿಚಾರವೇ ಸುತರಾಂ ತಿಳಿದಿರಲಿಲ್ಲವೆಂದು ಭಾವಿಸಿ ಮೊದಲಿಗಿಂತ ಹೆಚ್ಚಿನ ಗರ್ವದಿಂದ "ಇವು ಶ್ರುತಿಗಾಗಿ" ಎಂದರು. ಪ್ರಭುಗಳು, "ಇವುಗಳ ಶ್ರುತಿಯು ಏಕೆ?" ಎಂದು ಕೇಳಲು ವಿದ್ವಾಂಸರು ನಕ್ಕು—ಮತ್ತಷ್ಟು ಉಬ್ಬಿಹೋಗಿ—"ಸಂಗೀತಕ್ಕೆ ಶ್ರುತಿಯೇಕೆಂದರೆ ಏನು ಹೇಳಲಿ? ಸಂಗೀತಕ್ಕೆ 'ಶ್ರುತಿರ್ಮಾತಾ ಲಯಃ ಪಿತಾ'—ಎಂದಿದೆ. ಸಂಗೀತಕ್ಕೆ ಶ್ರುತಿ ತಾಯಿ. ತಾಳ ತಂದೆ. ಸಂಗೀತಗಾರರು ಶ್ರುತಿಯನ್ನನುಸರಿಸಿಕೊಂಡೇ ಹಾಡಬೇಕು" ಎಂದರು. ಪ್ರಭುಗಳವರು ಒಡನೆಯೇ, "ಅದನ್ನು ಕಲಿತುಕೊಂಡು ಬಂದು ಆಮೇಲೆ ಕಚೇರಿ ಮಾಡಿ. ಹಾರ್ಮೋನಿಯಂ ಶ್ರುತಿಯೊಡನೆ ತಂಬೂರಿಯ ಶ್ರುತಿಯೂ, ಅವೆರಡರೊಡನೆ ನಿಮ್ಮ ಕಂಠಶ್ರುತಿಯೂ ಸೇರುವಹಾಗೆ ಹಾಡುವಷ್ಟನ್ನಾದರೂ ಅಭ್ಯಾಸಮಾಡಿಕೊಂಡು ಬನ್ನಿ. ನಿಮ್ಮ ಗುರುಗಳಾದ ಭಾಗವತರ ದೊಡ್ಡ ಹೆಸರನ್ನುಳಿಸಿ" ಎಂದು ತಿಳಿಸಿದರು. ಒಂದು ಸಲ, ದಕ್ಷಿಣ ದೇಶದವರಾದ ಒಬ್ಬರು ಮೃದಂಗ ವಿದ್ವಾಂಸರು ಬಂದು, ಕಚೇರಿಯಾಗುವುದಕ್ಕೆ ಮುಂಚೆಯೇ, ತಮಗೆ ರತ್ನಖಚಿತವಾದ ತೋಡದ ಬಹುಮಾನವನ್ನು ಕೊಡಿಸಬೇಕೆಂದು ಬಕ್ಷಿಯವರನ್ನು ಕೇಳತೊಡಗಿದರು; ಸ್ವಪ್ರತಿಷ್ಠೆಯಿಂದ ಬೀಗಿದರು. ಶ್ರೀಮಾನ್ ಮುತ್ತುಸ್ವಾಮಿತೇವರು ಆಸ್ಥಾನದಲ್ಲಿದ್ದ ದಕ್ಷಿಣ ದೇಶದ ವಿದ್ವಾಂಸರು. ಹೊರಗಿನ ವಿದ್ವಾಂಸರ ಹೆಸರಿನಲ್ಲಿಯೂ "ಮುತ್ತು" ಎಂಬ ಪದವಿದ್ದುದರಿಂದ ಆಳಿದ

ಮಹಾಸ್ವಾಮಿಯವರು, "ಸರಿ. ಎರಡೂ ಮುತ್ತೇ. ಎರಡರಲ್ಲಿ ಯಾವುದು ಹೆಚ್ಚು ಬೆಲೆಬಾಳುವುದೋ ಪರೀಕ್ಷಿಸಿ ನೋಡಿಬಿಡೋಣ" ಎಂದು ಅಪ್ಪಣೆ ಕೊಡಿಸಿದರು. ಕಚೇರಿ ನಡೆದಾಗ್ಗೆ ಹೊರಗಿನ ವಿದ್ವಾಂಸರು ಮೃದಂಗ ವನ್ನು ನುಡಿಸಿ ನುಡಿಸಿ ಕೊನೆಗೆ ಶ್ರುತಿಗೆ ಸೇರದಂತೆ "ಗಾನಲೋಲಾ" ಎಂದು ಕೂಗಿ ನಿಲ್ಲಿಸಿದರು. ಅವರು ಮುಕ್ತಾಯಮಾಡಿದುದು ಪಲ್ಲವಿ ಪ್ರಾರಂಭವಾದ ಸ್ಥಳಕ್ಕೆ ಸೇರಲಿಲ್ಲ. ಅನಂತರ, ಸ್ಥಳದ ವಿದ್ವಾಂಸರವರಾದ ಮುತ್ತುಸ್ವಾಮಿತೇವರು ಮೃದಂಗವನ್ನು ನುಡಿಸಿ, ಭಾವಲಯಸಮನ್ವಿತ ವಾಗಿ ಶ್ರುತಿಗೂಡಿಸಿ "ಗಾನಲೋಲಾ" ಎಂದು ಹೇಳಿ ಪಲ್ಲವಿಯನ್ನು ಪ್ರಾರಂಭಮಾಡಿದ್ದ ಸ್ಥಳಕ್ಕೆ ಸೇರಿಸಿ ಮುಕ್ತಾಯಗೊಳಿಸಿದರು. ಮಹಾಸ್ವಾಮಿಯವರು ಆನಂದಭರಿತರಾಗಿ ಚಪ್ಪಾಳೆ ಹೊಡೆದರು. ಹೊರಗಿನ ಮೃದಂಗ ವಿದ್ವಾಂಸರಿಗೂ ಸಂಭಾವನೆಯೇನೊ ದೊರೆಯಿತು. ಆದರೆ ಸ್ಥಳದ ವಿದ್ವಾಂಸರಾದ ಶ್ರೀಮಾನ್ ಮುತ್ತುಸ್ವಾಮಿತೇವರಿಗೆ ಸಂಭಾವನೆಯ ಜೊತೆಗೆ ಮೃದಂಗಕ್ಕೆ ಕಿಂಕಾಪಿನ ಗವಸಣಿಗೆಯೂ, ಒಂದು ಸಾವಿರ ರೂಪಾಯಿಗಳಿಗಿಂತ ಹೆಚ್ಚು ಬೆಲೆಯ ಸುವರ್ಣರಚಿತ ವಾದ ಲಕ್ಷ್ಮೀವಿಗ್ರಹವೂ ಬಹುಮಾನವಾಗಿ ದೊರೆತುವು.

ಇದೇ ಬಗೆಯ ಮತ್ತೊಂದು ನಿದರ್ಶನವು ಈಚೆಗೆ ನಡೆದುದನ್ನು ಕುರಿತು ಆಸ್ಥಾನ ವಿದ್ವಾಂಸರಾದ ಸಂಗೀತರತ್ನಂ ಶ್ರೀಮಾನ್ ಟಿ. ಚೌಡಯ್ಯನವರು "ತಾಯಿನಾಡು" ಪತ್ರಿಕೆಗೆ ಒಂದು ಲೇಖನವನ್ನು ಬರೆದಿದ್ದಾರೆ. ಅದರಲ್ಲಿ ಅವರು ಸೂಚಿಸಿರುವುದೇನೆಂದರೆ: "ಈಗ್ಗೆ ಕೆಲವು ವರ್ಷಗಳ ಹಿಂದೆ ದಕ್ಷಿಣದೇಶದ ಸುಪ್ರಸಿದ್ಧ ಮೃದಂಗ ವಿದ್ವಾಂಸ ರೊಬ್ಬರು ಮಹಾಸ್ವಾಮಿಯವರ ಸನ್ನಿಧಿಯಲ್ಲಿ ತಮ್ಮ ವಿನಯಿಕೆ ಮಾಡಲು ಬಂದಿದ್ದರು. ದಕ್ಷಿಣ ದೇಶದಲ್ಲೆಲ್ಲಾ ಬಹಳ ಕೀರ್ತಿಯನ್ನು ಪಡೆದಿದ್ದುದ ರಿಂದ, ಮೈಸೂರಿನಲ್ಲಿ ತಮ್ಮ ಜತೆಯಲ್ಲಿ ಹಾಡುವವರಾಗಲಿ, ಮೃದಂಗ ಬಾರಿಸುವವರಾಗಲಿ ಇಲ್ಲವೆಂಬ ಭಾವನೆ ಅವರಲ್ಲಿತ್ತು. ಈ ವಿಷಯ ಮಹಾಸ್ವಾಮಿಯವರಿಗೆ ಯಾವ ಮೂಲಕವೋ ತಿಳಿದು ಈ ವಿದ್ವಾಂಸರ ವಿದ್ಯಾಪ್ರತಿಭೆ ಎಷ್ಟರಮಟ್ಟಿಗಿದೆಯೆಂಬುದನ್ನು ಪರೀಕ್ಷಿಸಲು, ಶ್ರೀ ಸೇಲಂ ದೊರೆಸ್ವಾಮಯ್ಯಂಗಾರರ ಹಾಡುಗಾರಿಕೆಯೊಡನೆ, ಬಂದಿದ್ದ ವಿದ್ವಾಂಸರ ಮೃದಂಗ ಪಕ್ಕವಾದ್ಯವನ್ನೇರ್ಪಡಿಸಿದರು. ಅದೇ ದಿನ ತಮ್ಮ ಆಸ್ಥಾನ ದಲ್ಲೇ ಇದ್ದ ದಕ್ಷಿಣ ದೇಶದ ಲೇಟ್ ಮೃದಂಗ ವಿದ್ವಾನ್ ಶ್ರೀ ಮುತ್ತು ಸ್ವಾಮಿತೇವರೆಂಬವರನ್ನೂ ಕೂಡ ಅವರೊಡನೆ ಮೃದಂಗ ಬಾರಿಸುವಂತೆ ಅಪ್ಪಣೆ ಕೊಡಿಸಿದರು. ನಾನೇ ಮಹಾಸ್ವಾಮಿಯವರ ಸನ್ನಿಧಿಯಲ್ಲಿ

ಆ ದಿನ ಪಿಟೀಲು ಬಾರಿಸಿದವನು. ಸಭೆಯಲ್ಲಿ ಸಕಲ ವಿದ್ವಾಂಸರೂ ನೆರೆದಿದ್ದರು. ಶ್ರೀ ದೊರೆಸ್ವಾಮಯ್ಯಂಗಾರರವರು ಭೈರವಿ ರಾಗವನ್ನು ಹಾಡಿ 'ಮಾಮಧುರಮೀನಾಕ್ಷಿ' ಎಂಬ ಪಲ್ಲವಿಯನ್ನು ಹಾಡಿದರು. ಇದಕ್ಕೆ ತನಿ ಆವರ್ತವಾಗಿ ದಕ್ಷಿಣ ದೇಶದಿಂದ ಬಂದಿದ್ದ ಮೃದಂಗ ವಿದ್ವಾಂಸರು ಮೃದಂಗ ಬಾರಿಸಿದರು. ಇವರು ಮುಕ್ತಾಯ ಮಾಡಿದಾಗ ಪಲ್ಲವಿಯನ್ನು ಪ್ರಾರಂಭಮಾಡಿದ ಸ್ಥಳಕ್ಕೆ ಸೇರಿಸಲಿಲ್ಲ. ಇದು ಮಹಾ ಸ್ವಾಮಿಯವರ ಮನಸ್ಸಿಗೆ ತಕ್ಷಣವೇ ವೇದ್ಯವಾಯಿತು. ಎದುರಾಗಿ ಕುಳಿತಿದ್ದ ಆಸ್ಥಾನ ವಿದ್ವಾನ್ ಶ್ರೀ ಮುತ್ತುಸ್ವಾಮಿತೇವರು ತನಿ ಆವರ್ತ ವನ್ನು ಬಾರಿಸಿದರು. ಪಲ್ಲವಿಯನ್ನು ಯಾವ ಜಾಗದಲ್ಲಿ ವಿದ್ವಾಂಸರು ಪ್ರಾರಂಭಿಸಿದ್ದರೋ ಆ ಜಾಗಕ್ಕೆ ಸರಿಯಾಗಿ ಮುಕ್ತಾಯವನ್ನು ಕೊಟ್ಟು ಪಲ್ಲವಿ ಹಾಡುವವರಿಗೆ ಸುಲಲಿತ ಮಾರ್ಗವನ್ನು ತೋರಿಸಿಕೊಟ್ಟರು. ಇದಕ್ಕೆ ಮಹಾಪ್ರಭುಗಳು ಸಂತೋಷಪಟ್ಟು ಶ್ರೀ ಮುತ್ತುಸ್ವಾಮಿತೇವರು ಬಾರಿಸಿದ್ದು ಎತ್ತುಗಡೆಗೆ ಸರಿಯಾಗಿ ಮುಕ್ತಾಯ ಬಂದಿತೆಂಬುದನ್ನು ವ್ಯಕ್ತಪಡಿಸಲು ತಾವೇ ಕರತಾಡನ ಮಾಡಿದರು." ವಿದ್ವತ್ತಿನ ಮಟ್ಟ ವೊಂದನ್ನೇ ಮುಖ್ಯವಾಗಿಟ್ಟುಕೊಂಡು, ಆಳಿದ ಮಹಾಸ್ವಾಮಿಯವರು ಸಂಗೀತ ವಿದ್ವಾಂಸರಿಗೆ ಯಥಾಯೋಗ್ಯವಾದ ಬಹುಮಾನಗಳನ್ನೂ ಖಿಲ್ಲತ್ತುಗಳನ್ನೂ ಉದಾರವಾಗಿ ದಯಪಾಲಿಸುತ್ತಿದ್ದರಾದರೂ ದುರ ಹಂಕಾರಿಗಳಿಗೆ ತಕ್ಕ ಬುದ್ಧಿಯನ್ನೂ ಕಲಿಸುತ್ತಿದ್ದರು. ಈಚೆಗೆ ಮತ್ತೊಬ್ಬರು ಮೃದಂಗ ವಿದ್ವಾಂಸರು ಆತ್ಮಶ್ಲಾಘನೆಯ ಮಾತುಗಳನ್ನು ಹೇಳಿಕೊಂಡು ಸ್ವಪ್ರತಿಷ್ಠೆಯಿಂದ ಬೀಗುತ್ತ ಕಚೇರಿಮಾಡಿದರು. ಕಚೇರಿ ಕೆಟ್ಟುಹೋಯಿತು. ಅವರು ಮೃದಂಗಕ್ಕೆ ಮೆತ್ತಲು ಕಲಸಿಟ್ಟಿದ್ದ ಹಿಟ್ಟಿನ ಉಂಡೆಯನ್ನು ಬಿಟ್ಟುಹೋಗಿದ್ದರು. ಮಹಾಪ್ರಭುಗಳವರು ಅದನ್ನು ಅಂದವಾಗಿ ಬಸ್ತುಕಟ್ಟಿಸಿ ("ಪ್ಯಾಕ್"ಮಾಡಿಸಿ), "ವಿದ್ವಾಂಸರ ಕೈಗೇ ಕೊಟ್ಟುಬರಲು ಅಪ್ಪಣೆಯಾಗಿದೆ" ಎಂದು ಹೇಳಿ ಅವರಿಗೆ ಕೊಟ್ಟು ಬರಲು ಹರಿಕಾರನನ್ನು ಕಳುಹಿಸಿದರು. ವಿದ್ವಾಂಸರು ಭಾರಿ ಬಹು ಮಾನವೇ ಬಂದಿರಬೇಕೆಂದು ಭಾವಿಸಿ, "ಆಶೆಯಿಂದ ಕೂಡಿದ ಪುಲಕಿತ ದೇಹದಿಂದಲೂ, ಮಿತಿಮೀರಿದ್ದ ಸಂತೋಷದಿಂದ ನಡುಕ ಹುಟ್ಟಿದ್ದ ಕೈಗಳಿಂದಲೂ ಬಸ್ತನ್ನು ಒಡೆದು ನೋಡಿದರು." ಸ್ವಪ್ರತಿಷ್ಠೆಯ ಜ್ವರವು ಇಳಿದು ಬುದ್ಧಿಬಂದಿತು. ಆಳಿದ ಮಹಾಸ್ವಾಮಿಯವರು ಆ ಬಗೆಯ ವಿನೋದದಿಂದ ಅವರಿಗೆ ಬುದ್ಧಿಯನ್ನು ಕಲಿಸಿದರಾದರೂ ಸಂಭಾವನೆಯ ಹಣವನ್ನು ಕಳುಹಿಸುವುದನ್ನೇನೂ ಮರೆಯಲಿಲ್ಲ. ದುರಹಂಕಾರ ಪಡದೆ

ವಿನಯಶೀಲರಾದ ಸಂಗೀತಗಾರರು ಪ್ರಮಾದವಶದಿಂದ ಒಮ್ಮೊಮ್ಮೆ ಅಪಸ್ವರ ಹಾಡಿ, ಯಾರಾದರೂ ಇತರ ಸಂಗೀತಗಾರರು ವ್ಯಂಗ್ಯ ಕುಚೇಷ್ಟೆ ಮಾಡುತ್ತ ತಮ್ಮ ತಮ್ಮ ಮುಖಗಳನ್ನು ನೋಡಿಕೊಂಡು ನಕ್ಕರೆ, ಆಳಿದ ಮಹಾಸ್ವಾಮಿಯವರು ತಾವು ಕುಳಿತೆಡೆಯಿಂದಲೇ ಅವರರಿಯದಂತೆ "ಬೈನಾಕ್ಯುಲರ್" ದುರ್ಬೀನಿನಿಂದ ಅದನ್ನೆಲ್ಲ ನೋಡಿ, "ನಡೆಯುವ ಕಾಲು ಎಡವುವುದು ಸಹಜ. ಇವರುಗಳಿಗೆ ಇನ್ನೂ ತಾಳ್ಮೆ ಸಹಿಷ್ಣುತೆಗಳೇ ಬಂದಿಲ್ಲವಲ್ಲಾ!" ಎಂದು ತಮ್ಮ ಜೊತೆಯವರಿಗೆ ಹೇಳಿ ಮನನೊಂದ ಸಂದರ್ಭಗಳೂ ಉಂಟು. ಅವರು, "ಕವಿಯ ಆಶಯವನ್ನೇ ಗ್ರಹಿಸಿ ತೋರಿಸದೆ ಅಕ್ಷರಗಳನ್ನೇ ಅಗಿದುಬಿಟ್ಟರೆ ಪ್ರಯೋಜನವೇನು?", "ಸುಖಭಾಗಕ್ಕೆ ಗಮನಕೊಡದೆ ಅಕ್ಷರಗಳನ್ನು ಎಳೆದೂ ಎಳೆದೂ ಹಾಡಿದರೆ ಏನು ಫಲ?", "ಪ್ರಸನ್ನ ಗಂಭೀರತೆಯಿಂದ ಭಾವಗಳನ್ನು ತೋರಿಸಿ ಹಾಡದೆ ಆಯಾಸಪಟ್ಟು ಭತ್ತವನ್ನು ಕುಟ್ಟುವಂತೆಯೂ ರಾಗಿಯನ್ನು ಬೀಸುವಂತೆಯೂ ಕೈಗಳನ್ನಾಡಿಸಿದರೆ ಯಾವ ದೇವರಿಗೆ ಪ್ರೀತಿ?" ಎಂದು ಮುಂತಾಗಿ ಅಪ್ಪಣೆಕೊಡಿಸಿ ಸಂಗೀತಗಾರರುಗಳನ್ನು ತಿದ್ದಿರುವ ಸಂದರ್ಭಗಳೂ ಉಂಟು.

ಆಳಿದ ಮಹಾಸ್ವಾಮಿಯವರು ವಿದ್ವತ್ಪಕ್ಷಪಾತಿಗಳಾಗಿದ್ದು, ಸಂಗೀತದ ಅಂಗಗಳಾದ ನೃತ್ಯ, ಗಾನ, ವಾದ್ಯಗಳಿಗೆಲ್ಲಕ್ಕೂ ಮತ್ತಾವ ಸಂಸ್ಥಾನದ ಮಹಾರಾಜರೂ ಕೊಡದಷ್ಟು ಪ್ರೋತ್ಸಾಹವನ್ನು ಕೊಡುತ್ತಿದ್ದರು. ವಿದ್ವತ್ಪಕ್ಷಪಾತಿಗಳಾಗಿದ್ದ ಮಹಾಸ್ವಾಮಿಯವರಿಗೆ ಸ್ಥಳದ ವಿದ್ವಾಂಸರು ಪರಸ್ಥಳದ ವಿದ್ವಾಂಸರೆಂಬ ಭೇದವೇ ಇರಲಿಲ್ಲ; ಪೌರ್ವಾತ್ಯ ಪಾಶ್ಚಾತ್ಯ ಸಂಗೀತಗಳೆಂಬ ಪಕ್ಷಪಾತವಿರಲಿಲ್ಲ.

**ಸಂಗೀತ ಪ್ರೋತ್ಸಾಹ**

ಪಾಶ್ಚಾತ್ಯ ಸಂಗೀತ, ಹಿಂದೂಸ್ಥಾನಿ ಸಂಗೀತ, ಕರ್ಣಾಟಕ ಸಂಗೀತ— ಈ ಮೂರು ಸಂಗೀತಗಳ ಜೀವಾಳವನ್ನೂ ಅರಿತು ಅವುಗಳಲ್ಲಿ ಪ್ರತಿಯೊಂದನ್ನೂ ಅದರದರ ಸಂಪ್ರದಾಯಕ್ರಮಕ್ಕನುಸಾರವಾಗಿ ಕೇಳಿ ಆನಂದಿಸುತ್ತಿದ್ದರು. ವಿದ್ವಾಂಸರೊಬ್ಬರು ಹೇಳಿದಂತೆ ಅವರು "ಯಾವ ಸಂಗೀತ ವಿದ್ವಾಂಸರಲ್ಲಿ ಯಾವ ನೂತನ ಕೃತಿಯಿದ್ದರೂ ಅದನ್ನು ಶೇಖರಿಸಿ ತಮ್ಮ ಭಂಡಾರಕ್ಕೆ ಸೇರಿಸುತ್ತಿದ್ದರು. ಸಾವಿರಗಟ್ಟಲೆಯಾಗಿ ಅಪರೂಪ ಕೃತಿಗಳು ಆ ಭಂಡಾರದಲ್ಲಿವೆ."

ಭರತನಾಟ್ಯಶಾಸ್ತ್ರದಲ್ಲಿ ಅವರಿಗೆ ನಿಷ್ಕೃಷ್ಟಜ್ಞಾನವಿದ್ದಿತು. ನಾಟ್ಯಕಲಾಕೋವಿದರಿಂದ ಅನೇಕ ವೇಳೆ ಅವರು ಅರಮನೆಯಲ್ಲಿ ನಾಟ್ಯ

ಪ್ರದರ್ಶನಮಾಡಿಸಿ ಪ್ರೋತ್ಸಾಹಿಸುತ್ತಿದ್ದರು. ಅವರ ವರ್ಧಂತ್ಯುತ್ಸವದ ದಿನ ಅರಮನೆಯ ದರ್ಬಾರಿನಲ್ಲಿ ಭರತನಾಟ್ಯವು ತಪ್ಪದೆ ನಡೆಯುತ್ತಿದ್ದಿತು. ಕಥಕ್ಕಳಿ, ಯಕ್ಷಗಾನ, ಮಣಿಪುರಿ, ಬೊಂಬೆಯ ಆಟ ಮುಂತಾದುವುಗಳೆಲ್ಲ ಅರಮನೆಯಲ್ಲಿ ನಡೆದು ಪ್ರೋತ್ಸಾಹ ದೊರೆತಿದೆ. ನಾಟ್ಯದಮೇಲಿನ ಪ್ರೇಮದಿಂದಲೇ ಅವರು ಜಗನ್ಮೋಹನ ಪ್ರಾಸಾದ ದಲ್ಲಿ ಅನೇಕ ನಾಟಕಗಳನ್ನಾಡಿಸಿ ಪ್ರೋತ್ಸಾಹಿಸುತ್ತಿದ್ದರು. ಅವರ ಅಭಿರುಚಿಯು ಶುದ್ಧವಾದುದೂ ಶ್ರೇಷ್ಠವಾದುದೂ ಆಗಿದ್ದಿತು. "ಶ್ರೀ ಚಾಮರಾಜೇಂದ್ರ ಕರ್ಣಾಟಕ ನಾಟಕ ಸಭಾ" ಎಂಬ ಅರಮನೆಯ ನಾಟಕ ಸಂಘವಿದ್ದಾಗ್ಗೆ ಅದಕ್ಕೆ ಆಳಿದ ಮಹಾಸ್ವಾಮಿಯವರು ಅಮಿತ ವಾದ ಪ್ರೋತ್ಸಾಹವನ್ನಿತ್ತರು; ಪೌರಾಣಿಕ ನಾಟಕಗಳಲ್ಲಿ ಹಿಂದೂಸ್ಥಾನಿ ರಾಗಗಳ ಹಾಡುಗಳನ್ನು ಹೇಳಕೂಡದೆಂದು ನಿಷೇಧಿಸಿ, ಕರ್ಣಾಟಕ ಸಂಗೀತ ಕ್ರಮದ ಹಾಡುಗಳನ್ನು ಮಾತ್ರವೇ ಹೇಳಬೇಕೆಂದು ಆಜ್ಞಾಪಿಸಿದ್ದರು; ಯಾವ ರಸದ ಹಾಡುಗಳು ಯಾವ ರಾಗಗಳಲ್ಲಿರ ಬೇಕೆಂಬುದನ್ನು ವಿಧಿಸಿ ಗೊತ್ತುಮಾಡಿದ್ದರು; ವಾಲ್ಮೀಕಿ, ಲವ, ಕುಶ ಮುಂತಾದ ಪಾತ್ರಗಳನ್ನು ವಹಿಸಿದವರು ರಾಮಾಯಣ ಕಾಲದ ಉಡಿಗೆ ತೊಡಿಗೆಗಳನ್ನೇ ಧರಿಸಬೇಕೆಂದು ಕಟ್ಟಪ್ಪಣೆ ಮಾಡಿದ್ದರು. ಈಚೆಗಂತೂ ಅನೇಕ ನಾಟಕ ಸಂಘಗಳವರಿಂದ ನಾಟಕಗಳನ್ನಾಡಿಸಿ ಉದಾರವಾದ ಪ್ರೋತ್ಸಾಹವನ್ನು ಕೊಡುತ್ತಿದ್ದರು.

ಆಳಿದ ಮಹಾಸ್ವಾಮಿಯವರು ಸಂಗೀತಕ್ಕೆ ಕೊಟ್ಟ ಪ್ರೋತ್ಸಾಹವು ಅಸಾಧಾರಣವಾದುದು. ೧೯೧೫ನೆಯ ಇಸವಿಯಲ್ಲಿ ಅವರು ಅರಮನೆ ಯಲ್ಲಿ ಒಂದು ಸಂಗೀತ ಪಾಠಶಾಲೆಯನ್ನೇರ್ಪಡಿಸಿ, ಅಲ್ಲಿ ಯಾರು ಬೇಕಾದರೂ ಶಿಕ್ಷಣ ಪಡೆಯಬಹುದೆಂದು ಅವಕಾಶ ಕಲ್ಪಿಸಿ ಕೇವಲ ಈಚಿನವರೆಗೂ ಅದನ್ನು ನಡೆಯಿಸಿಕೊಂಡು ಬಂದು, ಅಲ್ಲಿ ಬಹು ಮಂದಿ ಗಳಿಗೆ ಉಚಿತವಾಗಿ ಸಂಗೀತವಿದ್ಯಾದಾನ ಮಾಡಿಸಿದರು. ಭರತಖಂಡ ದಲ್ಲಿ ಮೊಟ್ಟಮೊದಲು ಕರ್ಣಾಟಕ ಸಂಗೀತದ ಮತ್ತು ಹಿಂದೂಸ್ಥಾನಿ ಸಂಗೀತದ "ಆರ್ಕೆಸ್ಟ್ರಾ" ಎಂಬ ವಾದ್ಯ ಸಂಗೀತವನ್ನೇರ್ಪಡಿಸಿ ಮಾರ್ಗ ದರ್ಶನ ಮಾಡಿದವರೇ ಆಳಿದ ಮಹಾಸ್ವಾಮಿಯವರು. ನಮ್ಮ ಸಂಗೀತಕ್ಕೆ ಸ್ವರ ಸಂಯೋಜನವನ್ನು ("ಹಾರ್ಮೊನಿ") ಹಾಕಿಸಿ ಸಂಗೀತ ಲಿಪಿಯಲ್ಲಿ ಮೊಟ್ಟಮೊದಲು ಬರೆಯಿಸಿದವರೇ ಅವರು. ಸಂಗೀತ ವಿದ್ವಾಂಸರುಗಳಿಗೆ "ವೈಣಿಕಶಿಖಾಮಣಿ", "ಗಾಯಕಶಿಖಾಮಣಿ", "ವೈಣಿಕಪ್ರವೀಣ", "ಗಾನವಿಶಾರದ", "ಸಂಗೀತ ಶಾಸ್ತ್ರರತ್ನಂ", "ಸಂಗೀತರತ್ನಂ"

ಮುಂತಾದ ಬಿರುದುಗಳನ್ನು ದಯಪಾಲಿಸಿ ಮಹತ್ತರವಾದ ಪ್ರೋತ್ಸಾಹ ವನ್ನು ಅವರು ಕೊಡುತ್ತಿದ್ದರು. ಉತ್ತಮ ರೀತಿಯಲ್ಲಿ ನಾದ ಸ್ವರವನ್ನು (ಓಲಗವನ್ನು) ನುಡಿಸಿದವರಿಗೆ ಚಿನ್ನದ ನಾದಸ್ವರಗಳನ್ನೂ, ಡೋಳನ್ನು ಚೆನ್ನಾಗಿ ಬಾರಿಸಿದವರಿಗೆ ಡೋಲಿಗೆ ಹಾಕಲು ಕಿಂಕಾಪಿನ ಗವಸಣಿಗೆ, ಚಾಮುಂಡೇಶ್ವರೀ ವಿಗ್ರಹವಿರುವ ಚಿನ್ನದ ಪದಕ ಮುಂತಾದುವುಗಳನ್ನು ಅವರು ದಯಪಾಲಿಸುತ್ತಿದ್ದರು. ಸಂಗೀತ ವಿದ್ವಾಂಸರುಗಳಿಗೆ ಆಸ್ಥಾನ ವಿದ್ವಾಂಸರಾಗಿ ವೇತನಗಳು ದೊರೆಯುವಂತೆ ಅವರು ಏರ್ಪಾಡು ಮಾಡಿಸಿದರು; ಹಾಗೆ ವೇತನಗಳು ಸಲ್ಲತಕ್ಕವರು ಕ್ಲುಪ್ತಕಾಲಗಳಲ್ಲಿ ಒಂದೊಂದು ವೇಳೆ ಹೊರತು ಉಳಿದ ವೇಳೆಗಳಲ್ಲಿ ಮೈಸೂರು ನಗರದಲ್ಲಿರಬೇಕಾದ ನಿರ್ಬಂಧವಿಲ್ಲ; ಹುಬ್ಬಳ್ಳಿ, ಕಲ್ಕತ್ತೆ, ತಿರುವಾಂಕೂರು, ಮುಂತಾದುವುಗಳ ಸಂಗೀತ ವಿದ್ವಾಂಸರಿಗೂ ಸಹ ಅರಮನೆಯ ಸಂಬಳಗಳು ಸಲ್ಲುತ್ತಿವೆ. ಭರತಖಂಡದ ಸಮಸ್ತ ಪ್ರಾಂತ ಗಳಿಂದಲೂ ಶ್ರೇಷ್ಠವರ್ಗದ ಸಂಗೀತ ವಿದ್ವಾಂಸರುಗಳನ್ನು ಮೈಸೂರು ಅರಮನೆಗೆ ಬರಮಾಡಿ, ಅವರಿಂದ ಸಂಗೀತ ಕಚೇರಿಗಳನ್ನು ಮಾಡಿಸಿ, ಉದಾರವಾದ ಸಂಭಾವನೆಗಳನ್ನೂ ಖಿಲ್ಲತ್ತುಗಳನ್ನೂ ದಯಪಾಲಿಸಿ ಮಹಾಪ್ರಭುಗಳವರು ಪ್ರೋತ್ಸಾಹಿಸುತ್ತಿದ್ದರು. ಭಾಷಾಜ್ಞಾನವಿದ್ದು ಭಾಷೆ ಶುದ್ಧವಾಗಿರಬೇಕು; ಶ್ರುತಿಲಯ ಶುದ್ಧವಾಗಿರಬೇಕು; ಭಾವರಸ ಶುದ್ಧವಾಗಿರಬೇಕು; ಈ ಮೂರುಗುಣಗಳಿದ್ದ ಸಂಗೀತದಲ್ಲಿ ಅವರಿಗೆ ಪರಮಾದರವಿದ್ದಿತು.

ಅರಮನೆಯಲ್ಲಿ ನಡೆಯುತ್ತಿದ್ದ ಸಂಗೀತಗಳನ್ನು ಪ್ರಜೆಗಳೆಲ್ಲರೂ ಕೇಳಿ ಹರ್ಷಿಸಲೆಂಬ ಉದ್ದೇಶದಿಂದ ಅವರು ಅರಮನೆಯ ಮುಂಭಾಗ ದಲ್ಲಿಯೂ, ಅರಮನೆಯ ಮಹಾದ್ವಾರಗಳ ಬಳಿಯಲ್ಲಿಯೂ "ಲೌಡ್ ಸ್ಪೀಕರು"ಗಳೆಂಬ ಧ್ವನಿವರ್ಧಿನಿಗಳನ್ನು ಸ್ಥಾಪನೆಗೊಳಿಸಿ ಸಾವಿರಾರು ಮಂದಿಗಳು ಸಂಗೀತವನ್ನು ಕೇಳುವ ಸೌಕರ್ಯವನ್ನು ಕಲ್ಪಿಸಿದ್ದರು. "ಕ್ಯಾಲಿಫ಼ೋನ್" ವಾದ್ಯದ ಸವಿಯು ಪ್ರಜೆಗಳಿಗೆ ಲಭಿಸಲು ಅವರು ಏರ್ಪಾಡುಮಾಡಿಸಿ ಭಾರತೀಯ ಸಂಗೀತವು ಅದರಲ್ಲಿ ನುಡಿದು ಮೈಸೂರು ನಗರ ನಿವಾಸಿಗಳಿಗೆ ಕೇಳುವ ವ್ಯವಸ್ಥೆಯನ್ನು ಮಾಡಿಸಿದರು. ಬೆಂಗಳೂರು ಮೈಸೂರು ನಗರ ನಿವಾಸಿಗಳಿಗೆ, ಆಳಿದ ಮಹಾಸ್ವಾಮಿಯವರ ಕೃಪೆಯಿಂದ ಅರಮನೆಯ "ಆರ್ಕೆಸ್ಟ್ರಾ" ಎಂಬ ವಾದ್ಯ ಸಂಗೀತವನ್ನು ಆಗಾಗ ಕೇಳುವ ಸುಯೋಗವು ಲಭಿಸಿ ಅವರು ಆನಂದಿಸುತ್ತಿದ್ದರು. ಅನೇಕ ಹಳ್ಳಿಯವರಿಗೆ ಕೂಡ ಆಳಿದ ಮಹಾಸ್ವಾಮಿಯವರು ಅದನ್ನು ಆಗಾಗ

ದೊರೆಯಿಸುತ್ತಿದ್ದರು. ಮೈಸೂರು ನಗರದಲ್ಲಿ ಶ್ರೀ ಕೃಷ್ಣಾಜಮ್ಮಣ್ಣಿಯವರ ನಾಮಾಂಕಿತದ ಮೇಲೆ ಏರ್ಪಟ್ಟಿರುವ ಕ್ಷಯರೋಗ ಚಿಕಿತ್ಸಾಲಯದಲ್ಲಿಯ ರೋಗಿಗಳ ಸಂತೋಷಾರ್ಥವಾಗಿ ವಾರಕ್ಕೊಂದು ಸಲ ಅಲ್ಲಿ ಅರಮನೆಯ ವಾದ್ಯ ಸಂಗೀತವು ("ಆರ್ಕೆಸ್ಟ್ರಾ") ನಡೆಯಬೇಕೆಂದು ಮಹಾಪ್ರಭುಗಳವರು ಅಪ್ಪಣೆಮಾಡಿದ್ದರು.

ನೂತನ ಕೃತಿಗಳನ್ನು ರಚಿಸಿದವರಿಗೆ ಆಳಿದ ಮಹಾಸ್ವಾಮಿಯವರು ವಿಶೇಷವಾದ ಪ್ರೋತ್ಸಾಹವನ್ನು ಕೊಟ್ಟು ಸನ್ಮಾನಿಸುತ್ತಿದ್ದರು. ಗಾಯಕ ಶಿಖಾಮಣಿ ಶ್ರೀಮಾನ್ ಮುತ್ತಯ್ಯಭಾಗವತರು ಶ್ರೀ ಚಾಮುಂಡೇಶ್ವರೀ ದೇವಿಯ ಮೇಲೆ ನೂರೆಂಟು ಕೀರ್ತನೆಗಳನ್ನು ರಚಿಸಿಯೂ, ಸಂಗೀತ ಶಾಸ್ತ್ರರತ್ನಂ ಶ್ರೀಮಾನ್ ವಾಸುದೇವಾಚಾರ್ಯರವರು ಅನೇಕ ಕೃತಿಗಳನ್ನು ರಚಿಸಿಯೂ ಅವರ ಕೃಪೆಗೆ ಪಾತ್ರರಾದರು. ಹೀಗೆ ವಿದ್ವಾಂಸರಿಗೆ ಪ್ರೋತ್ಸಾಹಕೊಡುತ್ತಿದ್ದುದು ಮಾತ್ರವೇ ಅಲ್ಲ. ಸಾಮಾನ್ಯರಿಗೆ ಕೂಡ ಸಂಗೀತ ಶಿಕ್ಷಣವು ಲಭಿಸುವ ವ್ಯವಸ್ಥೆಯನ್ನೂ ಅವರು ಮಾಡಿಸಿದ್ದ ಅನೇಕ ಸಂದರ್ಭಗಳಿವೆ: ಚಾಮುಂಡೀಬೆಟ್ಟದ ಮೇಲೆ ಮನಸ್ವಿಯಾಗಿ ಮೃದಂಗವನ್ನು ಬಾರಿಸುತ್ತಿದ್ದ ಯುವಕನೊಬ್ಬನನ್ನು ಕಂಡು, ಅವರು, "ಸರಿಯಾಗಿ ನುಡಿಸುವುದನ್ನು ಕಲಿಯದೆ ಹೀಗೆ ಅಪಸ್ವರದಲ್ಲಿ ಬಡಿಯಬೇಕೆ?" ಎಂದು ಕೇಳಿದರು. ಆತನು ಅದಕ್ಕೆ, "ಕೈಯಿಗಳು ಪಳಗಲೆಂದು ಹೀಗೆ ಮಾಡ್ತಿದ್ದೇನೆ. ಅಪಸ್ವರಗಳೇ ನುಡಿದೂ ನುಡಿದೂ ಕೊನೆಗೆ ಒಳ್ಳೇ ಸ್ವರಗಳ ರೂಪಕ್ಕಿಳೀತವೆ" ಎಂದು ಹೇಳಿದುದನ್ನು ಕೇಳಿ ನಕ್ಕು, ಆತನಿಗೆ ಮೃದಂಗದಲ್ಲಿ ಶಿಕ್ಷಣಕೊಡಿಸುವುದರ ಜೊತೆಗೆ ವಿದ್ಯಾಭ್ಯಾಸವನ್ನೂ ಮಾಡಿಸುವ ವ್ಯವಸ್ಥೆಯನ್ನು ಮಹಾಸ್ವಾಮಿಯವರು ಮಾಡಿಸಿದರು. ಅರಮನೆಯ ಮೋಟಾರ್ ಗರಾಜಿನಲ್ಲಿ ತಿಂಗಳಿಗೆ ಹನ್ನೆರಡು ರೂಪಾಯಿಗಳ ಸಂಬಳದ ಮೇಲೆ ಸಣ್ಣ ಕೆಲಸದಲ್ಲಿದ್ದವರೊಬ್ಬನು ಮನಸ್ವಿಯಾಗಿ ಹಾಡಿಕೊಳ್ಳುತ್ತಿದ್ದರಂತೆ. ಆಳಿದ ಮಹಾಸ್ವಾಮಿಯವರು ಆತನ ಶಾರೀರ ಸಂಪತ್ತಿಯನ್ನು ತಮ್ಮ ಚಿತ್ತಕ್ಕೆ ತಂದುಕೊಂಡು ಆತನಿಗೆ ಸಂಗೀತ ಶಿಕ್ಷಣಕೊಡಿಸಿ, ತಿಂಗಳಿಗೆ ನಲವತ್ತು ರೂಪಾಯಿಗಳ ಸಂಬಳ ಬರುವಂತೆ ಮಾಡಿ, ವಾದ್ಯ ಸಂಗೀತಗೋಷ್ಠಿಯಲ್ಲಿ ಹಾಡಲು ನೇಮಕ ಮಾಡಿದರು.

ಆಳಿದ ಮಹಾಸ್ವಾಮಿಯವರು ಪಾಶ್ಚಾತ್ಯ ಸಂಗೀತ ಪ್ರೌಢಿಮೆಯಿಂದ ಪಾಶ್ಚಾತ್ಯ ವಿದ್ವಾಂಸರನ್ನೇ ಮುಗ್ಧಗೊಳಿಸಿದ್ದುದರ ಜೊತೆಗೆ ಆ ಸಂಗೀತಕ್ಕೂ ಅನೇಕ ವಿಧಗಳಲ್ಲಿ ಅಮಿತವಾದ ಪ್ರೋತ್ಸಾಹವನ್ನು

ಕೊಡುತ್ತಿದ್ದರು. ಅದಕ್ಕೆ ಸರ್ವಶ್ರೇಷ್ಠವಾದ ನಿದರ್ಶನವೆಂದರೆ, ಪಾಶ್ಚಾತ್ಯ ಸಂಗೀತ ಪ್ರಪಂಚದಲ್ಲಿ ತ್ಯಾಗರಾಜರಂತೆ ಪ್ರಸಿದ್ಧರಾದ ಬೀಥೋವನರ ಶತಮಾನೋತ್ಸವ ಕಾಲದಲ್ಲಿ (೧೯೨೦ನೆಯ ಇಸವಿಯಲ್ಲಿ ಅದು ಬೆಂಗಳೂರು ನಗರದಲ್ಲಿ ನಡೆದಾಗ್ಗೆ) ಅವರಿಂದ ಲಭಿಸಿದ ಕೃಪಾ ವಲಂಬನ. ಅವರು ಆ ಉತ್ಸವಕ್ಕಾಗಿಯೇ ಬೀಥೋವನನ ಪ್ರತಿಮೆ ಯನ್ನು ಮಾಡಿಸಿ ಅದಕ್ಕೆ ಸೊಗಸಾದ ವಸ್ತ್ರಗಳಿಂದಲೂ ಪುಷ್ಪದಾಮ ಗಳಿಂದಲೂ ಅಲಂಕಾರಮಾಡಿಸಿದ್ದ ಬಗೆಯನ್ನೂ, ಅರಮನೆಯ ಬ್ಯಾಂಡಿ ನವರಾದ ಭಾರತೀಯರು ಪಾಶ್ಚಾತ್ಯರಂತೆಯೇ ಬೀಥೋವನನ ಕೃತಿ ರತ್ನಗಳನ್ನು ನುಡಿಸಿದ ವಾದ್ಯ ಸಂಗೀತಗೋಷ್ಠಿ ವೈಖರಿಯನ್ನೂ ಕಂಡು ಸಭಿಕರೆಲ್ಲರೂ ಬೆರಗಾದರು. ಮಹಾಸ್ವಾಮಿಯವರಿಂದ ಪೋಷಿತರಾದ ಕಲಾಪಟುಗಳು ಬೀಥೋವನನಿಂದ ರಚಿತವಾದ ಕೃತಿಗಳಲ್ಲಿ ಹಾಡಲು ಮತ್ತು ನುಡಿಸಲು ಅತಿಕಷ್ಟವಾದ ("ಸಿ ಮೈನರ್ ಸಿಮ್ಫನಿ" ಎಂಬ) ಕೃತಿಯನ್ನು ಲೀಲಾಜಾಲವಾಗಿ ನುಡಿಸಿದರು. ಅರಮನೆಯ "ರೀಡ್ ಬ್ಯಾಂಡ್", "ಕ್ಯಾವಲ್ರಿ ಬ್ಯಾಂಡ್", "ಕರ್ನಾಟಕ್ ಬ್ಯಾಂಡ್" ಮುಂತಾದುವು ಬಹಳ ಉತ್ಕೃಷ್ಟವಾಗಿವೆಯೆಂಬ ಖ್ಯಾತಿಯನ್ನು ಪಡೆದಿವೆ. ಲಂಡನ್ನಿನ ಟ್ರಿನಿಟಿ ಕಾಲೇಜು ಪ್ರಪಂಚದಲ್ಲೇ ಪ್ರಸಿದ್ಧವಾಗಿದೆ. ಅಲ್ಲಿಯ ಪರೀಕ್ಷಕರು ಮಾಡಿದ ಪರೀಕ್ಷೆಯಲ್ಲಿ ಶ್ಲಾಘ್ಯ ರೀತಿಯಲ್ಲಿ ತೇರ್ಗಡೆ ಹೊಂದಿದ ಮೈಸೂರು ಸಂಸ್ಥಾನದ ಯುವಕರಿಗೆ ಮಹಾಪ್ರಭುಗಳವರು ಪಾರಿತೋಷಿಕಗಳನ್ನು ದಯಪಾಲಿಸುತ್ತಿದ್ದರು. ಆ ಯುವಕರ ಶಿಕ್ಷಣವು ಅವರ ಮೇಲ್ವಿಚಾರಣೆಯಲ್ಲಿ ಅರಮನೆಯ ಪಾಶ್ಚಾತ್ಯ ಸಂಗೀತ ವಿದ್ವಾಂಸ ರಿಂದ ನಡೆಯುತ್ತಿದ್ದುದನ್ನೂ ಈ ಸಂದರ್ಭದಲ್ಲಿ ಸೂಚಿಸಬಹುದಾಗಿದೆ. "ಪಿಯಾನೊ" ವಾದ್ಯದ ತಂತಿಗಳನ್ನು ಅನುಗೂಡಿಸಿ ಜೋಡಿಸುವ ಕೆಲಸದಲ್ಲಿ ವಿಶೇಷ ಚತುರರಾದ ಅರಸು ಪಂಗಡದ ಯುವಕರೊಬ್ಬರಿಗೆ ಅವರು ಉತ್ತೇಜನಕೊಟ್ಟು ಪ್ರೋತ್ಸಾಹಿಸುತ್ತಿದ್ದರು; ಇನ್ನೂರಕ್ಕೆ ಮೇಲ್ಪಟ್ಟ ಸಂಖ್ಯೆಯಲ್ಲಿರುವ ವಿವಿಧ ಸ್ಥಾಯಿಗಳ ತಂತಿಗಳನ್ನು ಅನು ಗೂಡಿಸಿ ಹದವಾಗಿ ಜೋಡಣೆಗೊಳಿಸುವುದು ಬಹಳ ಕುಶಲತೆಯ ಕೆಲಸ. ಸಂಗೀತ ಲಿಪಿಯಲ್ಲಿ ಸ್ವರಪ್ರಸ್ತಾರವನ್ನು ಮುದ್ರಿಸಿರುವ ಹಾಳೆಗಳನ್ನು ನೋಡಿಕೊಳ್ಳದೆಯೇ ಪಿಯಾನೊ ವಾದ್ಯವನ್ನು ನುಡಿಸುವುದರಲ್ಲಿ ಅದ್ಭುತ ಕೌಶಲ್ಯವನ್ನು ತೋರಿಸಿರುವ ಹನ್ನೆರಡು ವರ್ಷ ವಯಸ್ಸಿನ ಶ್ರೀವೈಷ್ಣವ ಬಾಲಕನಲ್ಲಿ ಅವರು ಅಮಿತವಾದ ಆದರಾಸಕ್ತಿಗಳನ್ನು ತೋರಿಸುತ್ತಿದ್ದರು. ಕುಶಲಿಗಳಾದ ಮತ್ತೊಬ್ಬರು ಕಲಾವಿದರಿಗೆ ಉತ್ತಮವಾದ "ಹಾರ್ಪ್"

ಎಂಬ ತಂತ್ರೀ ವಾದ್ಯವನ್ನು ತರಿಸಿಕೊಟ್ಟಿದ್ದರು. ಆಳಿದ ಮಹಾಸ್ವಾಮಿಯವರ ಅಂತಃಪುರದಲ್ಲಿ ಪೌರ್ವಾತ್ಯ ಪಾಶ್ಚಾತ್ಯ ಸಂಗೀತಕ್ರಮಗಳ ಸಮಸ್ತ ವಾದ್ಯಗಳೂ ಇರುವುವಲ್ಲದೆ, ಅವುಗಳಂತೆಯೇ ಅತ್ಯಂತ ಉತ್ಕೃಷ್ಟವಾದುದಾಗಿ ವಿದ್ಯುಚ್ಛಕ್ತಿಯ ಸಹಾಯದಿಂದ ನುಡಿಯುವ "ಆರ್ಗನ್" ವಾದ್ಯವೂ ಇದೆ.

ಆಳಿದ ಮಹಾಸ್ವಾಮಿಯವರಿಗೆ ಚಿತ್ರಲೇಖನದಲ್ಲಿ ಅತಿಶಯವಾದ ಪ್ರೇಮವಿದ್ದಿತು. ಅವರು ಶ್ರೇಷ್ಠವಾದ ಚಿತ್ರಗಳನ್ನು ಸಂಗ್ರಹಿಸಿ, ಖಾಸಾ ಅಂತಃಪುರದಲ್ಲಿಟ್ಟುಕೊಂಡಿದ್ದರು. ಅರಮನೆಯ ಚಿತ್ರಕಾರರಲ್ಲೊಬ್ಬರ ಪುತ್ರರಾದ ಶ್ರೀಮಾನ್ ವೆಂಕಟಪ್ಪನವರಿಗೆ—ಅವರು ಬಾಲ್ಯದಲ್ಲಿ ಬರೆದಿದ್ದ ಪಾಶ್ಚಾತ್ಯ ಚಿತ್ರದ ಪ್ರತಿಕೃತಿಯನ್ನು ಕಂಡು ಅಭಿನಂದಿಸಿ—ಆಳಿದ ಮಹಾಸ್ವಾಮಿಯವರು ನೂರು ರೂಪಾಯಿಗಳ ಪಾರಿತೋಷಿಕವನ್ನು ದಯಪಾಲಿಸಿದ್ದರು. ಅಲ್ಲದೆ, ಅವರಿಗೆ ಇಂಗ್ಲಿಷ್ ಮತ್ತು ಹಿಂದೂಸ್ಥಾನಿ ಭಾಷೆಗಳಲ್ಲಿ ಶಿಕ್ಷಣಕೊಡಿಸಿ, ಅರಮನೆಯಿಂದ ವಿದ್ಯಾರ್ಥಿವೇತನವನ್ನು ಕೊಟ್ಟು ಸುಪ್ರಸಿದ್ಧ ಕಲಾವಿದರಾದ ಶ್ರೀಮಾನ್ ಅವನೀಂದ್ರನಾಥ ಠಾಕೂರರವರಲ್ಲಿ ಏಳು ವರ್ಷಗಳ ಕಾಲ ಮಹಾಪ್ರಭುಗಳವರು ಶಿಕ್ಷಣ ಕೊಡಿಸಿದರು. ಚಿತ್ರಕಲಾಕೋವಿದರಾದ ಅವರಿಂದ ಮಹಾಪ್ರಭುಗಳವರು ಅನೇಕ ಚಿತ್ರಗಳನ್ನು ಬರೆಯಿಸಿ, ಅನೇಕ ಉಬ್ಬುಚಿತ್ರಗಳನ್ನು "ಪ್ಲ್ಯಾಸ್ಟರ್ ಆಫ್ ಪ್ಯಾರಿಸ್" ಎಂಬುದರಿಂದ ರಚಿಸಿದ ಫಲಕಗಳ ಮೇಲೆ ಮಾಡಿಸಿದರು; ಶ್ರೀಮಾನ್ ಕೇಶವಯ್ಯನವರು, ಶ್ರೀಮಾನ್ ನಾಗರಾಜಯ್ಯನವರು ಮುಂತಾದ ಅನೇಕ ಮಂದಿ ಚಿತ್ರಕಲಾವಿದರನ್ನು ಅರಮನೆಯಲ್ಲಿ ಕೆಲಸಕ್ಕೆ ನೇಮಿಸಿ, ವೃತ್ತಿಕಲ್ಪನೆ ಮಾಡಿ, ಅವರಿಂದ ಉತ್ತಮವಾದ ಚಿತ್ರಗಳನ್ನು ಬರೆಯಿಸಿ ಪ್ರೋತ್ಸಾಹಿಸುತ್ತಿದ್ದರು. ಮಹಾಪ್ರಭುಗಳವರ ಕೃಪೆಯಿಂದ, ಆಳಿದ ಮಹಾಸ್ವಾಮಿಯರುಗಳಾದ ಶ್ರೀ ಮುಮ್ಮಡಿ ಕೃಷ್ಣರಾಜ ಒಡೆಯರವರ ಮತ್ತು ಶ್ರೀ ಚಾಮರಾಜೇಂದ್ರ ಒಡೆಯರವರ ದೊಡ್ಡ ದೊಡ್ಡ ತಸ್ವೀರುಗಳೂ, ಮಹಾಪ್ರಭುಗಳವರ ಮತ್ತು ಅವರ ಸೋದರರಾದ ಶ್ರೀಮದ್ಯುವರಾಜರವರ ದೊಡ್ಡ ದೊಡ್ಡ ತಸ್ವೀರುಗಳೂ ಮತ್ತು ಈಗಿನ ಶ್ರೀಮನ್ಮಹಾರಾಜರವರಾದ ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರರವರ ದೊಡ್ಡ ತಸ್ವೀರುಗಳೂ (ಅವುಗಳನ್ನು ದಯಪಾಲಿಸುವಂತೆ ಪ್ರಾರ್ಥಿಸಿಕೊಂಡ) ಅನೇಕ ಸಾರ್ವಜನಿಕ ಸಂಸ್ಥೆಗಳಿಗೆ ಲಭಿಸಿದುವು.

**ಚಿತ್ರಲೇಖನ ಪ್ರೇಮ**

ಜಗನ್ಮೋಹನ ಪ್ರಾಸಾದದಲ್ಲಿಯ ಚಿತ್ರಶಾಲೆಯಲ್ಲಿ ಉತ್ತಮ ವಿಧಗಳ ಅನೇಕ ಚಿತ್ರಗಳಿವೆ: ಷಿಕಾರಿಪುರದ ಶ್ರೀಮಾನ್ ಅಪ್ಪಾಜಿಯವರ ಭಗವದ್ಗೀತಾಚಾರ್ಯ ಚಿತ್ರಪಟವೂ, ಶ್ರೀಮಾನ್ ಅಬ್ದುಲ್ ಅಜೀಜ್ ರವರು ಬರೆದಿರುವ ಹಿಂದಿನ ಶ್ರೀಮನ್ಮಹಾರಾಜರವರ ಚಿತ್ರಪಟವೂ, ಶ್ರೀಮಾನ್ ವೆಂಕಟಪ್ಪನವರು ಬರೆದಿರುವ "ಮಹಾಶಿವರಾತ್ರಿ" ಎಂಬ ಅಭಿಧಾನದ ಚಿತ್ರಪಟವೂ, ಇತರ ಕಲಾಕೋವಿದರುಗಳು ಬರೆದಿರುವ ಹಲವು ಚಿತ್ರಪಟಗಳೂ ಚಿತ್ತಾಕರ್ಷಕಗಳಾಗಿವೆ. ಅರಮನೆಯ ಅಶ್ವಶಾಲೆ ಯಲ್ಲಿ ಕುದುರೆಗಳ ಸಾಹಸಕೃತ್ಯಗಳ ಕೆಲವು ಅದ್ಭುತ ಚಿತ್ರಗಳನ್ನೂ ನೋಡಬಹುದು. ಅರಮನೆಯ ಸೇವೆಯನ್ನು ಮಾಡಿದ ಅಧಿಕಾರಿಗಳೇ ಮುಂತಾದವರ ಚಿತ್ರಗಳನ್ನೂ, ವಿಜಯದಶಮಿಯ ದಿನದ ಮೆರೆವಣಿಗೆಯ ಚಿತ್ರಗಳನ್ನೂ, ಆಳಿದ ಮಹಾಸ್ವಾಮಿಯವರು ಅರಮನೆಯ ಕಲ್ಯಾಣ ಮಂಟಪದ ಗೋಡೆಗಳಮೇಲೆ, ಬರೆಯಿಸಿದ್ದಾರೆ. ಬಹಳ ಚೆನ್ನಾಗಿ ನಾದಸ್ವರವನ್ನು ನುಡಿಸುತ್ತಿದ್ದ ಶ್ರೀಮಾನ್ ಕಂದಸ್ವಾಮಿಯೆಂಬವರ ಚಿತ್ರವನ್ನೂ ಅವರು ಬರೆಯಿಸಿದ್ದಾರೆ. ಈ ಚಿತ್ರಗಳನ್ನೆಲ್ಲ ಬರೆದಿರುವ ಕಲಾಕೋವಿದರೆಲ್ಲ, ಅವರ ಕೃಪೆಯಿಂದ ಶಿಕ್ಷಣಪಡೆದು ಅವರ ಪೋಷಣೆಯಲ್ಲಿದ್ದ ಮೈಸೂರು ದೇಶೀಯರೇ ಎಂಬುದು ಹೆಮ್ಮೆಯ ಸಂಗತಿ.

ಆಳಿದ ಮಹಾಸ್ವಾಮಿಯವರಿಗೆ ಚಿತ್ರಲೇಖನದಲ್ಲಿದ್ದ ಪರಿಶ್ರಮವೂ ಪರಿಜ್ಞಾನವೂ ಸಾಮಾನ್ಯವಾದವುಗಳಲ್ಲ: ೧೯೦೬ನೆಯ ಇಸವಿಯಲ್ಲಿ ಆಗಿನ ಪ್ರಿನ್ಸ್ ಆಫ್ ವೇಲ್ಸರವರಾಗಿದ್ದ ಐದನೆ ಜಾರ್ಜ್ ಪ್ರಭುಗಳವರು ದಯಮಾಡಿದ್ದಾಗ ಮೈಸೂರು ನಗರದಲ್ಲಿ ಒಂದು ವಸ್ತುಪ್ರದರ್ಶನವು ಏರ್ಪಟ್ಟಿದ್ದಿತು. ಆಗ ರಾಜಾ ರವಿವರ್ಮರವರು ಬರೆದಿದ್ದ ಸುಮಾರು ಐದಾರು ಅಡಿಗಳ ಎತ್ತರದ ಶ್ರೀಕೃಷ್ಣದೌತ್ಯ ಚಿತ್ರಪಟವು ಪ್ರದರ್ಶಿತ ವಾಗಿದ್ದಿತು. ವಸ್ತುಪ್ರದರ್ಶನವು ಪ್ರಾರಂಭವಾಗಬೇಕಾಗಿದ್ದ ದಿನದ ಹಿಂದಿನ ದಿನ ಮಹಾಪ್ರಭುಗಳವರು ಅಲ್ಲಿಗೆ ದಯಮಾಡಿದರು. ರಾಜಾ ರವಿವರ್ಮರವರು ಆ ಚಿತ್ರಪಟವನ್ನು ತೋರಿಸಿದ ಮರುಕ್ಷಣದಲ್ಲೇ ಅವರು, ಚಿತ್ರಪಟದಲ್ಲಿ ದುರ್ಯೋಧನನ ಮೇಲೆ ರೋಷಗೊಂಡಿದ್ದ ಸಾತ್ಯಕಿಯ ಕೈಯನ್ನು ಹಿಡಿದು ಸಮಾಧಾನಪಡಿಸುತ್ತಿದ್ದ ಶ್ರೀಕೃಷ್ಣನ ಒಂದು ತೋಳು (ಸಾತ್ಯಕಿಯು ನಿಂತಿದ್ದ ದೂರವೇ ಮುಂತಾದ ಅಂಶ ಗಳನ್ನು ಗಮನಿಸಿ ಯೋಚಿಸಿದರೆ) ಮತ್ತೊಂದಕ್ಕಿಂತ ಬಹಳ ಉದ್ದವಾ ಗಿದ್ದಂತೆ ಲಿಖಿತವಾಗಿದ್ದುದೇಕೆಂದು ನಯವಾಗಿ ಪ್ರಶ್ನೆಮಾಡಿದರು.

ಆ ಅಂಶವು ಅದುವರೆಗೆ ಚಿತ್ರಲೇಖಕರಿಗೇ ಹೊಳೆದಿರಲಿಲ್ಲ; ಚಿತ್ರಪಟ ವನ್ನು ಸುಮ್ಮನೆ ನೋಡಿದವರಾರಿಗೂ ಹೊಳೆಯುವಂತೆಯೂ ಇರಲಿಲ್ಲ. ಆ ಪ್ರಶ್ನೆಯು ಕಿವಿಗೆಬಿದ್ದೊಡನೆಯೇ ರಾಜಾ ರವಿವರ್ಮರವರು ಪರಾಮರ್ಶ ಮಾಡಿ ನೋಡಿ, ಸೋಲನ್ನೊಪ್ಪಿಕೊಂಡು, ಮಹಾಪ್ರಭುಗಳ ವಿಮರ್ಶಾ ಶಕ್ತಿಯನ್ನು ಶ್ಲಾಘಿಸಿ, ಆ ಚಿತ್ರಪಟವನ್ನು ಒಡನೆಯೇ ಅಲ್ಲಿಂದ ಸಾಗಿಸಿ ಕೆಲವು ದಿನಗಳಲ್ಲಿ ಸರಿಪಡಿಸಿದರು. ಈಗ ಮೈಸೂರು ಅರಮನೆಯ ಸೆಜ್ಜೆಯಲ್ಲಿರುವುದು ಅವರು ಆಗ ಸರಿಮಾಡಿದ ಚಿತ್ರಪಟವೇ.

**ಶಿಲ್ಪಕಲಾಭಿಮಾನ**

ವಾಸ್ತುಶಿಲ್ಪವೂ ಸೇರಿ ಒಟ್ಟು ಶಿಲ್ಪಕಲೆಯಲ್ಲಿ, ಆಳಿದ ಮಹಾ ಸ್ವಾಮಿಯವರಿಗೆ ವಿಶೇಷ ಅಭಿಮಾನವೂ, ಅಭಿರುಚಿಯೂ, ಪ್ರೌಢಿಮೆಯೂ ಇದ್ದುವು. ಕೇವಲ ಸಂಚಾರಮಾರ್ಗಗಳನ್ನು ಮಾಡಿಸುವುದು ಮೊದಲುಗೊಂಡು ಶಿಲ್ಪಕಲೆಯ ಭವ್ಯವಾದ ಮಾದರಿಗಳ ರಚನೆಯವರೆಗೂ ಅವರಿಗೆ ನಿಷ್ಕೃಷ್ಟಜ್ಞಾನವಿದ್ದಿತು. ಅರಿತ ನುರಿತ ಅನುಭವಸ್ಥರಾದ ಶಿಲ್ಪಕಲಾ ಕೋವಿದರು ರಚಿಸಿದ ವಾಸ್ತುಶಿಲ್ಪ ಸಂಬಂಧವಾದ ನಕ್ಷೆಗಳನ್ನು ಕೂಡ ತಿದ್ದಿ ಸರಿಪಡಿಸುವಷ್ಟು ಜಾಣ್ಮೆಯು ಅವರಿಗೆ ಹುಟ್ಟುಗುಣವಾಗಿಯೇ ಲಭಿಸಿದ್ದಿತು. ಭಿನ್ನಾಭಿಪ್ರಾಯವೇನಾದರೂ ಸೂಚಿತವಾದರೆ, "ಮಾದರಿ ಯನ್ನು ಮಾಡಿಸಿ, ಹಾಗಾದರೆ. ಅದನ್ನು ನೋಡಿದ ಮೇಲೆ, ದೊಡ್ಡ ಕಾಮಗಾರಿಯನ್ನು ಪ್ರಾರಂಭಿಸುವ ವಿಚಾರ" ಎಂದು ಅಪ್ಪಣೆಮಾಡಿ, ಮಾದರಿಯು ರಚಿತವಾದಾಗ ಎದ್ದು ಕಾಣುತ್ತಿದ್ದ ಕುಂದುಕೊರತೆಗಳನ್ನು ತೋರಿಸಿ, ಅವರು ತಮಗೆ ಸಮಾಧಾನ ಹೇಳಲು ಪ್ರಯತ್ನಿಸಿದ್ದವರ ಬಾಯಿ ಮುಚ್ಚಿಸುತ್ತಿದ್ದರು. ಚಾಮುಂಡೀ ಬೆಟ್ಟದ ಒಂದು ಭಾಗದಲ್ಲಿ ನೂತನವಾಗಿ ನಿರ್ಮಿತವಾದ ಸಂಚಾರಮಾರ್ಗದಲ್ಲಿ ಮೋಟಾರು ಬಂಡಿ ಯಲ್ಲಿ ಮೊದಲು ದಯಮಾಡಿದ್ದಾಗ ಅವರು, "ಇಲ್ಲಿ ರಸ್ತೆಯ ಮಟ್ಟ ಸರಿಯಾಗಿಲ್ಲ" ಎಂದರು. ಸಂಬಂಧಪಟ್ಟ ಅಧಿಕಾರಿಯವರು, "ಮಹಾ ಸ್ವಾಮಿ! ಅದು ಮೋಟಾರಿನ ವೇಗದ ದೆಸೆಯಿಂದ ನೋಟದ ಭ್ರಮೆ ಯಿಂದ ಹಾಗೆ ಕಾಣುತ್ತೆ. ರಸ್ತೆ ಸರಿಯಾಗಿದೆ" ಎಂದರು. ಮಹಾಸ್ವಾಮಿ ಯವರು ಒಡನೆಯೇ ಮೋಟಾರು ಬಂಡಿಯನ್ನು ನಿಲ್ಲಿಸಿ ಕೆಳಕ್ಕಿಳಿದು ಹಿಂದಕ್ಕೆ ಚಿತ್ತೈಸಿ, ಮಟ್ಟಸೂಚಿಗಳಾದ ಯಂತ್ರಸಾಧನಗಳನ್ನು ತರಿಸಿ ಪರೀಕ್ಷೆಮಾಡಿಸಿದರು. ಶಿಲ್ಪವಿದ್ಯಾಚತುರರಾದ ಅಧಿಕಾರಿಗಳು ತಮ್ಮ ಅಭಿಪ್ರಾಯವು ತಪ್ಪೆಂಬುದನ್ನು ಮನಗಂಡರು. ಕೆಲವು ಸಂದರ್ಭಗಳಲ್ಲಿ ಕಣ್ಣುಮಟ್ಟದಲ್ಲಿ ನೋಡಿದೊಡನೆ—ಹಲವು ಸಂದರ್ಭಗಳಲ್ಲಿ ಸುಮ್ಮನೆ

ನಡೆದುಹೋದ ಮಾತ್ರದಿಂದಲೇ — ಸಂಚಾರಮಾರ್ಗಗಳ ನ್ಯೂನಾತಿರೇಕ ಗಳನ್ನು ಕಂಡುಹಿಡಿಯುವ ಸಾಮರ್ಥ್ಯವು ಅವರಿಗಿದ್ದುದನ್ನು ಕಂಡು ತಜ್ಞರಾದ ಇಂಜನಿಯರುಗಳು ಕೂಡ ಬೆರಗಾಗುತ್ತಿದ್ದರು. ನೂತನ ಸಂಚಾರಮಾರ್ಗಗಳ ತಿರುವುಗಳಲ್ಲಿ ಸವಾರಿ ಚಿತ್ತೈಸಿದಾಗ್ಗೆ, "ಈ ತಿರುವು ಘಂಟೆಗೆ ಮೂವತ್ತು ಮೈಲಿಗಳ ವೇಗದಲ್ಲಿ ಮೋಟಾರ್‌ಕಾರ್ ಬಂದರೆ ತಿರುಗಿಸುವುದಕ್ಕೆ ಸರಿಯಾಗಿಲ್ಲ. ಈ ತಿರುವು ನಲವತ್ತು ಮೈಲಿಗಳ ವೇಗದ ಮೋಟಾರುಕಾರಿನ ಪ್ರಯಾಣಕ್ಕೆ ಅಸಾಧ್ಯ" ಎಂದು ಮುಂತಾಗಿ ಅವರು ಅಪ್ಪಣೆ ಕೊಡಿಸಿಬಿಡುತ್ತಿದ್ದರು. ಬಂಡಿಪುರದ ಬಳಿಯ ತಿರುವುಗಳ ವಿಚಾರದಲ್ಲಿ ಮಹಾಸ್ವಾಮಿಯವರು ಆ ರೀತಿ ಅಪ್ಪಣೆಕೊಡಿಸಿದಾಗ, ಆ ಸಂಚಾರಮಾರ್ಗವನ್ನು ಮಾಡಿಸಿದ್ದ ಅಧಿಕಾರಿಯವರು ಆ ಆಕ್ಷೇಪಕ್ಕೆ ಸಮಾಧಾನ ಹೇಳಲು ಪ್ರಯತ್ನಿಸಿ ಇಂಗ್ಲಿಷ್ ಭಾಷೆಯಲ್ಲಿದ್ದ ಶಿಲ್ಪಕಲೆಯ ಪ್ರಮಾಣ ಗ್ರಂಥಗಳ ಕೆಲವು ವಾಕ್ಯಗಳನ್ನು ಉದಾಹರಿಸಿದರಂತೆ. ಆಗ ಮಹಾಸ್ವಾಮಿಯವರು ನಕ್ಕು, "ಅವು ಅನ್ವಯಿಸತಕ್ಕ ರಸ್ತೆಗಳ ಸನ್ನಿವೇಶಕ್ಕೂ ಈ ರಸ್ತೆಯದಕ್ಕೂ ವ್ಯತ್ಯಾಸವಿದೆ. ಇದರಮೇಲೆ, ಪುಸ್ತಕದ ಬದನೆಯಕಾಯಿ ಹಾಗಿರಲಿ. ಮೋಟಾರ್‌ಕಾರ್ ಬಿಟ್ಟು ಪರೀಕ್ಷಿಸಿ ನೋಡಿದರೆ, ತಾನೇ ಗೊತ್ತಾದೀತು" ಎಂದು ಅಪ್ಪಣೆ ಕೊಡಿಸಿ ಪ್ರತ್ಯಕ್ಷ ಪ್ರಮಾಣದಿಂದ ತಪ್ಪನ್ನು ತೋರಿಸಿಕೊಟ್ಟು, ಸಂಚಾರಮಾರ್ಗವನ್ನು ಸರಿಪಡಿಸುವಂತೆ ಆಜ್ಞಾಪಿಸಿದರು. ಮತ್ತೊಂದು ಸಂದರ್ಭದಲ್ಲಿ ಇಂಜನಿ ಯರವರೊಬ್ಬರು ತೋರಿಸಿದ ಕಟ್ಟಡದ ನಕ್ಷೆಯನ್ನು ("ಪ್ಲ್ಯಾನನ್ನು") ಪರಿಶೀಲಿಸಿ ಮಹಾಪ್ರಭುಗಳವರು ಕೆಲವು ನ್ಯೂನತೆಗಳನ್ನು ಸೂಚಿಸಿದರಂತೆ. ಆ ಅಧಿಕಾರಿಯವರು ಪರೋಕ್ಷದಲ್ಲಿ "ಅರೆಗೆಲಸ ಅರಸನಿಗೆ ತೋರಿಸ ಬೇಡವೆಂಬ ಮಾತು ನಿಜ" ಎಂದು ಆಡಿದ ಮಾತುಗಳು ಕಿವಿಗೆ ಬಿದ್ದಾಗ ಅವರು ನಸುನಕ್ಕು ಆ ಕಾಮಗಾರಿ ನಡೆಯಬಹುದೆಂದು ಅಪ್ಪಣೆಮಾಡಿ ದರು. ತಮ್ಮ ವಾದವೇ ಗೆದ್ದಿತೆಂದು ಉಬ್ಬಿಹೋದ ಆ ಅಧಿಕಾರಿಯವರು ತಮ್ಮ ನಕ್ಷೆಗನುಸಾರವಾಗಿ ಕಟ್ಟಡವನ್ನು ಕಟ್ಟಿಸಿದಾಗ ಮಹಾಪ್ರಭು ಗಳವರು ಮೊದಲೇ ಸೂಚಿಸಿದ್ದ ಕುಂದುಗಳೆಲ್ಲ ವ್ಯಕ್ತವಾಗಿ ಆ ಅಧಿಕಾರಿ ಯವರ ಜೊತೆಯ ಅಧಿಕಾರಿಗಳು ಕೂಡ ಹಾಸ್ಯಮಾಡಿದರು. ಮಹಾ ಪ್ರಭುಗಳು ಕ್ಷಮೆತೋರಿದ ಕಾರಣ, ಆ ಅಧಿಕಾರಿಗಳು ಬಹಳವಾಗಿ ಪಶ್ಚಾತ್ತಾಪಪಟ್ಟು, ಶಿಲ್ಪಕಲಾ ಪ್ರೌಢಿಮೆಯು ಮಹಾಪ್ರಭುಗಳ ಹುಟ್ಟು ಗುಣವೆಂದು ಕೊಂಡಾಡಿದರು.

ಆಳಿದ ಮಹಾಸ್ವಾಮಿಯವರು ತಮ್ಮ ತೀರ್ಥರೂಪರವರಾದ

ಶ್ರೀ ಚಾಮರಾಜೇಂದ್ರ ಒಡೆಯರವರ ಅಮೃತಶಿಲಾ ಮೂರ್ತಿಗಳನ್ನು ಬೆಂಗಳೂರು ಮೈಸೂರು ನಗರಗಳಲ್ಲಿ ಪ್ರತಿಷ್ಠೆ ಮಾಡಿಸಿದ್ದಾರೆ; ಶ್ರೀ ಕಾವೇರೀಮಾತೆಯ ಕಮನೀಯಮೂರ್ತಿಯನ್ನುಮಾಡಿಸಿ ಕೃಷ್ಣರಾಜ ಸಾಗರದ ಏರಿಯ ಹಿಂಭಾಗದಲ್ಲಿ ಪ್ರತಿಷ್ಠೆ ಮಾಡಿಸಿದ್ದಾರೆ. ಅಷ್ಟೇ ಅಲ್ಲ. ಅವರು ಶ್ರದ್ಧೆಯಿಂದ ತಮ್ಮನ್ನು ಸೇವಿಸಿದ ಹಲವು ಮಹಾಶಯ ರುಗಳ ಪ್ರತಿಮೆಗಳನ್ನು ನಾನಾ ಪ್ರಮಾಣಗಳಲ್ಲಿ ಅರಮನೆಯ ಶಿಲ್ಪಿ ಗಳಿಂದ ಮಾಡಿಸಿ ಬಣ್ಣ ಹಾಕಿಸಿದ್ದಾರೆ. ಮೊಖ್ತೇಸರರಾಗಿದ್ದ ಶ್ರೀಮಾನ್ ವೆಂಕಟಸ್ವಾಮಿರಾಜು — ಎಂಬವರ ಪ್ರತಿಮೆಯನ್ನುಮಾಡಿಸಿ ಬೆಂಗಳೂರು ಅರಮನೆಯಲ್ಲಿಡಿಸಿರುವುದರಿಂದ ಮಹಾಪ್ರಭುಗಳವರ ಸರ್ವ ಸಮಭಾವವೂ ಆಶ್ರಿತ ವಾತ್ಸಲ್ಯವೂ ವ್ಯಕ್ತವಾಗುತ್ತವೆ. ಅರಮನೆಯ ಶಿಲ್ಪಿಶ್ರೇಷ್ಠರು ರಚಿಸಿರುವ ಆಳಿದ ಮಹಾಸ್ವಾಮಿಯವರಾದ ಶ್ರೀಮನ್ಮಹಾ ರಾಜ ಶ್ರೀ ಕೃಷ್ಣರಾಜೇಂದ್ರ ಒಡೆಯರವರ ಮಂಗಳಮೂರ್ತಿಯು ಒಡ್ಡೋಲಗ ಮಂಟಪದ ("ದರ್ಬಾರ್ ಹಾಲ್") ಹೊರಭಾಗದಲ್ಲಿ ಶೋಭಿಸುತ್ತಿದೆ. ಆಳಿದ ಮಹಾಸ್ವಾಮಿಯವರು (ಪೂರ್ವಾಶ್ರಮದಲ್ಲಿ ವಿದ್ಯಾನಿಧಿ ವೇದಮೂರ್ತಿ ಬ್ರಹ್ಮಶ್ರೀ ವಿರೂಪಾಕ್ಷಶಾಸ್ತ್ರಿಗಳೆಂದು ಪ್ರಸಿದ್ಧರಾಗಿದ್ದು ಈಚೆಗೆ ಮುಕ್ತರಾದ) ಶ್ರೀಮದಭಿನವ ವಾಲು ಕೇಶ್ವರ ಭಾರತೀಸ್ವಾಮಿಗಳವರ ಅಮೃತಶಿಲಾ ಮೂರ್ತಿಯನ್ನು ಶ್ರೀಮಾನ್ ಬಸವಯ್ಯನವರಿಂದ ಮಾಡಿಸಿದರು. ಶ್ರೀಮಾನ್ ವೆಂಕಟಪ್ಪ ನವರಿಂದ "ಸಿದ್ಧಾರ್ಥನ ತ್ಯಾಗ", "ಶಕುಂತಲಾ", "ಶ್ರೀ ರಾಮ ಮುದ್ರಿಕಾ ಪ್ರೇಷಣ", "ಗಂಡಭೇರುಂಡ", "ಶಿವತಾಂಡವ", "ದ್ರೋಣಾಚಾರ್ಯರ ಅಸ್ತ್ರವಿದ್ಯಾಶಿಕ್ಷಣ", "ಏಕಲವ್ಯ" ಮುಂತಾದ ಉಬ್ಬುಚಿತ್ರ (Relief) ಮಾದರಿಗಳನ್ನು ಮಾಡಿಸಿ ಅರಮನೆಯಲ್ಲಿಡಿಸಿದರು; ಮಹಾಮಾತೃಶ್ರೀ ವಾಣೀವಿಲಾಸ ಸನ್ನಿಧಾನದವರ ಅಂದವಾದ ಸಣ್ಣ ಸಣ್ಣ ಪಿಂಗಾಣಿ ಪ್ರತಿಮೆಗಳನ್ನು ಬೆಂಗಳೂರಿನ ಪಿಂಗಾಣಿ ಕಾರ್ಖಾನೆ ಯಲ್ಲಿ ಮಾಡಿಸಿ ಅರಸು ಪಂಗಡದ ಮಹಾಶಯರುಗಳನೇಕರಿಗೆ ದಯ ಪಾಲಿಸಿದರು. ಮೈಸೂರು ನಗರದಲ್ಲಿ ವಿಶಾಲವಾದ ಮತ್ತು ಸುಗಮವಾದ ಸಂಚಾರಮಾರ್ಗಗಳೂ, ಮನೋಹರವಾದ ಉದ್ಯಾನಗಳೂ, ರಮಣೀಯ ವಾದ ಮತ್ತು ಸುಪ್ರಸಿದ್ಧವಾದ ಅರಮನೆಯೂ, ಲಲಿತಮಹಲ್ ಪ್ರಾಸಾದವೂ, ನಯನಮನೋಹರಗಳಾದ ಸಾರ್ವಜನಿಕ ಕಟ್ಟಡಗಳೂ ನಿರ್ಮಿತವಾಗಿ ಮೈಸೂರು ನಗರವು ಉದ್ಯಾನ ನಗರಿಯೆಂದು ಸ್ವದೇಶ ವಿದೇಶಗಳಲ್ಲೆಲ್ಲ ಪ್ರಖ್ಯಾತವಾಗಿರುವುದಕ್ಕೆ ಆಳಿದ ಮಹಾಸ್ವಾಮಿಯವರ

ಕಲಾಭಿಜ್ಞತೆಯೇ ಮುಖ್ಯಕಾರಣ; ಒಟ್ಟು ಮೈಸೂರು ನಗರದ ರಮಣೀಯತೆಯೇ ಅವರ ಕಲಾಭಿಜ್ಞತೆಯ ಶಾಶ್ವತ ಸ್ಮಾರಕ. ಶಿಲ್ಪ ಚಾತುರ್ಯ ಭಂಡಾರದಂತಿದ್ದ ಮಹಾಪ್ರಭುಗಳ ಮೇಧಾಶಕ್ತಿಯನ್ನು ಕಂಡು ಶಿಲ್ಪ ಕಲಾಕೋವಿದರೇ ಆಶ್ಚರ್ಯದಿಂದ ಬೆರಗಾದ ಅಸಂಖ್ಯಾತ ನಿದರ್ಶನಗಳುಂಟು.

ಆಳಿದ ಮಹಾಸ್ವಾಮಿಯವರ ಶಿಲ್ಪಕಲೋಪಾಸನೆಯ ಅಮೋಘ ಫಲವಾಗಿ ಮೈಸೂರು ನಗರದಲ್ಲಿ ರಾಜಿಸುತ್ತಿರುವ ಅರಮನೆಯು ಬಹಳ ಸುಂದರವಾಗಿದೆ. ಬೇಲೂರು ಹಳೇಬೀಡು

**ಮೈಸೂರಿನ ಅರಮನೆ**

ಮುಂತಾದ ಸ್ಥಳಗಳಲ್ಲಿರುವ ದೇವಾಲಯಗಳನ್ನು ನಿರ್ಮಿಸಿದ ನಾನಾ ಶಿಲ್ಪಿಶ್ರೇಷ್ಠರುಗಳ ಮನೆತನಗಳವರೂ, ಆಗ್ರಾ ಮುಂತಾದ ಉತ್ತರ ಭಾರತ ಪ್ರದೇಶಗಳಿಂದ ಬಂದಿದ್ದ ಶಿಲ್ಪಿಗಳೂ ಪರಸ್ಪರವಾಗಿ ವಿಷಯ ವಿನಿಮಯಮಾಡಿಕೊಂಡು ಅದನ್ನು ನಿರ್ಮಿಸಿದರು. ಭರತಖಂಡದ ನಾನಾ ಪ್ರದೇಶಗಳಿಂದಲೂ ಬಂದಿದ್ದ ವಾಸ್ತುಶಿಲ್ಪ ಪರಿಣತರೂ, ಅಮೃತಶಿಲೆಯ ಕೆಲಸಗಾರರೂ, ಗಂಧದ ಮರವನ್ನು ಕೊರೆದು ಬೇಲು ಬಿಡಿಸಿ ಕೆತ್ತನೆ ಕೆಲಸಮಾಡಬಲ್ಲವರಾದ ಶಿಲ್ಪಿಶ್ರೇಷ್ಠರೂ, ಚಿನ್ನ ಬೆಳ್ಳಿಯ ತಗಡುಗಳಿಂದಲೂ ಮತ್ತು ದಂತದಿಂದಲೂ ಮನೋಹರವಾಗಿ ಕೆತ್ತನೆ ಕೆಲಸಮಾಡಬಲ್ಲವರಾದ ಕುಶಲಮತಿಗಳೂ, ರಾಜಾರವಿವರ್ಮರೇ ಮುಂತಾದ ಚಿತ್ರಲೇಖಕರೂ ಮುಂತಾಗಿ ಅಸಂಖ್ಯಾತ ಮಂದಿ ಕಲಾಕೋವಿದರು ಅರಮನೆಯ ನಿರ್ಮಾಣಕ್ಕೆ ಸಹಾಯಮಾಡಿದರು. ಅರಮನೆಯು ನಿರ್ಮಿತವಾಗುತ್ತಿದ್ದಾಗ್ಗೆ ನಡೆಯುತ್ತಿದ್ದ ಕಾರ್ಯವಿಸ್ತರ ವೈಖರಿಗಳನ್ನು ಕಂಡು ಹರ್ಷಿಸಿದ ಕಲಾವಿದರೊಬ್ಬರು, "ಇದನ್ನು ಕಟ್ಟಡ ನಿರ್ಮಾಣವೆನ್ನುವುದಕ್ಕಿಂತ, ಶ್ರೀಮನ್ಮಹಾರಾಜರವರ ಕೃಪೆಯಿಂದ ಏರ್ಪಟ್ಟಿರುವ ಅಪೂರ್ವವಾದ ಮತ್ತು ಅತಿ ದೊಡ್ಡದಾದ ಕಲಾಶಿಕ್ಷಣ ಶಾಲೆಯೆಂದು ಕರೆಯುವುದು ಉಚಿತವಾಗಿದೆ" ಎಂದರು. ಇನ್ನೊಬ್ಬರು ಕಲಾಪ್ರೇಮಿಗಳು, "ಶ್ರೀಮನ್ಮಹಾರಾಜರವರು ನಿರ್ಮಾಣ ಮಾಡಿಸುತ್ತಿರುವ ಭವ್ಯವಾದ ಪ್ರಾಸಾದವು ಸಮಸ್ತರ ಮೆಚ್ಚಿಕೆಗೂ ಪಾತ್ರವಾಗುತ್ತದೆ. ಅಲ್ಲದೆ ಚಾಲುಕ್ಯ ಸಂಪ್ರದಾಯದ ಮತ್ತು ದ್ರಾವಿಡ ಸಂಪ್ರದಾಯದ ದೇವಾಲಯಗಳಲ್ಲಿ ವಿಶೇಷ ಮೆಚ್ಚಿಕೆಗೆ ಪಾತ್ರವಾಗಿರುವ ಕಲ್ಲಿನ ಮತ್ತು ಮರದ ಕೆತ್ತನೆಯ ಕಲೆಯ ಪುನರುಜ್ಜೀವನ ಕಾರ್ಯವನ್ನೂ ಶ್ರೀಮನ್ಮಹಾರಾಜರವರು ನೆರವೇರಿಸುತ್ತಿದ್ದಾರೆ. ಈ ಅರಮನೆಯು ನಿರ್ಮಾಣವಾದ ಬಳಿಕ ಮುಂದಿನ ಪೀಳಿಗೆಗಳ ಭಾವನೆಗಳನ್ನು

ಉದಾತ್ತಗೊಳಿಸಿ ಸ್ಫೂರ್ತಿಯನ್ನೊದಗಿಸುವ ಭಾರತೀಯ ಕಲೆಯ ಭವ್ಯವಾದ ಮಾದರಿಯಾಗಿ ಶೋಭಿಸುತ್ತದೆ''* ಎಂದು ಶ್ಲಾಘಿಸಿದರು.

ಪೂರ್ವಾಭಿಮುಖವಾಗಿರುವ ಅರಮನೆಯ ಕಟ್ಟಡದ ಉದ್ದವು ೨೪೫ ಅಡಿಗಳು; ಅಗಲವು ೧೫೬ ಅಡಿಗಳು; ಮತ್ತು ಎತ್ತರವು (ನೆಲದ ಮಟ್ಟದಿಂದ ಅರಮನೆಯ ಮೇಲಿರುವ ಸುವರ್ಣಕಲಶದವರೆಗೆ) ೧೪೫ ಅಡಿಗಳು. ಕಟ್ಟಡದೊಳಗೆ ಗೋಡೆಗಳಮೇಲೂ ಕಂಬಗಳ ಬೋದಿಗೆಗಳೇ ಮುಂತಾದುವುಗಳಮೇಲೂ ಬಳಪದಕಲ್ಲು ಮುಂತಾದುವುಗಳಲ್ಲಿ ಮಾಡಿರುವ ಹೊಯ್ಸಳ ವಾಸ್ತುಶಿಲ್ಪಕ್ರಮದ ಕೆತ್ತನೆ ಕೆಲಸವು ಮನೋಹರ ವಾಗಿದೆ. ವಿದ್ಯುದ್ದೀಪ ಮಾಲೆಗಳು, ಗೋಡೆಗಳ ಮೇಲಿರುವ ಚಿತ್ರಗಳು, ನೆಲಕ್ಕೆ ಹಾಸಿರುವ ರತ್ನಕಂಬಳಿಗಳು ಚಿತ್ತಾಕರ್ಷಕವಾಗಿವೆ. ಅರಮನೆಯು ಮೂರು ಅಂತಸ್ತುಗಳ ಸುಂದರವಾದ ಕಟ್ಟಡ. ಕೆಳಗಿನ ಅಂತಸ್ತಿನಲ್ಲಿ ಆಯುಧಶಾಲೆ, ಕಲ್ಯಾಣಮಂಟಪ, ಸರಸ್ವತೀ ಭಂಡಾರ ಮುಂತಾದುವು ಮುಖ್ಯವಾದ ಭಾಗಗಳು. ಆಯುಧಶಾಲೆಯಲ್ಲಿರುವ ಆಯುಧಗಳನ್ನು ನೋಡಿ ವಿಸ್ಮಿತರಾಗದಿರುವವರೇ ವಿರಳ. ಶಿವಪ್ರಭುವಿನ "ವ್ಯಾಘ್ರನಖ" ವೆಂಬ ಉಕ್ಕಿನ ಆಯುಧ; "ಪಂಚಕಠಾರಿ" ಎಂಬ ಪ್ರಾಚೀನಕಾಲದ ಶಸ್ತ್ರ; ಸೊಂಟಕ್ಕೆ ಹಾಕಿಕೊಂಡರೆ ಸೊಂಟಪಟ್ಟಿಯಂತೆಯೂ ಕೈಯಲ್ಲಿ ಧರಿಸಿದರೆ ತೀಕ್ಷ್ಣಾಯುಧದಂತೆಯೂ ಇರುವ ರಣಧೀರ ಕಂಠೀರವ ನರಸರಾಜ ಒಡೆಯರವರ ಮೆಚ್ಚಿನ ಕತ್ತಿ; ವಜ್ರಮುಷ್ಟಿ; ಪಿಸ್ತೂಲು ಭರ್ಜಿ; ಅಲಗಿನಮೇಲೆ ಮಹಾವಿಷ್ಣುವಿನ ದಶಾವತಾರಗಳನ್ನು ಕೆತ್ತಿರುವ ಕತ್ತಿ; ಒಂದಾಳು ಮುಕ್ಕರಿದು ಮೇಲಕ್ಕೆತ್ತಬೇಕಾಗಿದ್ದರೂ ಹಿಂದಿನ ವೀರರು ಲೀಲಾಜಾಲವಾಗಿ ಉಪಯೋಗಿಸುತ್ತಿದ್ದ ಆನೆಬಂದೂಕ; ಮುಂತಾದ ಬಗೆಬಗೆಯ ಆಯುಧಗಳು ಆಯುಧಶಾಲೆಯಲ್ಲಿ ಶೋಭಿಸುತ್ತಿವೆ. ಆಯುಧಶಾಲೆಯ ಪಕ್ಕದ ಮಹಲಿನಲ್ಲಿ ಬಗೆಬಗೆಯ ಕುಶಲ ವಸ್ತುಗಳೂ, ಆಳಿದ ಮಹಾಸ್ವಾಮಿಯವರಿಗೆ ಸಮರ್ಪಿತವಾಗಿದ್ದ ರಜತ ಕರಂಡಗಳೂ, ಅನೇಕ ರಾಜ ಮಹಾರಾಜರುಗಳು, ವೈಸ್ರಾಯಿಗಳು ಮುಂತಾದವರ ಭಾವಚಿತ್ರಗಳೂ ಶೋಭಿಸುತ್ತಿವೆ. ಹೆಗ್ಗಡದೇವನಕೋಟೆ ತಾಲ್ಲೂಕಿನಲ್ಲಿ ದೊರೆಯುವ ಕೃಷ್ಣಶಿಲೆಯಿಂದ ನಿರ್ಮಿತವಾಗಿರುವ ಅಶ್ವವೂ, ವೃಷಭವೂ ಮತ್ತು ಚಿನ್ನ ಬೆಳ್ಳಿಗಳಲ್ಲಿ ರಚಿತವಾಗಿರುವ ಬೇಲೂರು

* "He is raising an edifice which will attract universal admiration and at the same time he is also revivifying the art of carving in stone and wood in the style so much admired in the Chalukyan and Dravidian temples. The Palace when completed will be a monument of Indian art which will serve to inspire and elevate the ideas of future generations."

ದೇವಾಲಯದ ಅಲ್ಪಾಂತರಾಕೃತಿಯ ಮಾದರಿಯೂ ಕಣ್ಮನಗಳನ್ನು ಸೆಳೆದು ಮೈ ಮರೆಯಿಸುವಷ್ಟು ಸುಂದರವಾಗಿವೆ. ಸರಸ್ವತೀ ಭಂಡಾರ ದಲ್ಲಿ ಅಮೂಲ್ಯಗಳಾದ ಅಸಂಖ್ಯಾತ ಗ್ರಂಥರತ್ನಗಳು ಬೆಳಗುತ್ತಿವೆ.

ಅಂದವಾಗಿರುವ ಅಮೃತಶಿಲಾ ಸೋಪಾನವನ್ನೇರಿ ಮೇಲಕ್ಕೆ ಹೋದರೆ, ಎರಡನೆಯ ಅಂತಸ್ತಿನಲ್ಲಿ, ಅಂಬಾವಿಲಾಸವೆಂಬ ಅಂತಃಪುರ, ಆಳಿದ ಮಹಾಸ್ವಾಮಿಯವರ ಅಂತಃಪುರ, ಸಂಗೀತಶಾಲೆ, "ಸೆಜ್ಜೆ" ಎಂಬ ಒಡ್ಡೋಲಗಶಾಲೆ ("ದರ್ಬಾರ್ ಹಾಲ್") ಮೊದಲಾದುವು ಮುಖ್ಯವಾದವುಗಳು. ಅಂಬಾವಿಲಾಸದ ಬಾಗಿಲುಗಳೆರಡಕ್ಕೂ ಬೆಳ್ಳಿಯ ತಗಡನ್ನು ಹೊದ್ದಿಸಿ ಅದರ ಮೇಲೆ ದಶಾವತಾರ ಚಿತ್ರಗಳನ್ನು ಕೆತ್ತಿದ್ದಾರೆ. ಅದರ ಎದುರು ಭಾಗದಲ್ಲಿರುವ ಎರಡು ಬೆಳ್ಳಿಯ ಬಾಗಿಲುಗಳೂ, ದಂತದ ಕೆತ್ತನೆಯ ನಕಾಸುಗೆಲಸದಿಂದ ಶೋಭಿಸುತ್ತಿರುವ ಮರದ ಬಾಗಿಲುಗಳೂ ಮನೋಹರವಾಗಿವೆ. ಅಂಬಾವಿಲಾಸದೊಳಕ್ಕೆ ಹೋಗಿ ತಲೆಯೆತ್ತಿ ನೋಡಿದರೆ ನಯನ ಮನೋಹರವಾಗಿರುವಂತೆ ಮರವನ್ನು ಕೊರೆದು ಮಾಡಿರುವ ನಯಗೆಲಸವನ್ನು ನೋಡಬಹುದು. ಅಲ್ಲಿ ಕಂಗೊಳಿಸುವ ಮರದ ಕಮಲಗಳು, ಎಲೆಗಳು ಮುಂತಾದುವುಗಳಷ್ಟು ಸೊಗಸಾಗಿ ಕಮಲಗಳು, ಎಲೆಗಳು ಮುಂತಾದುವುಗಳನ್ನು ಮೇಣದಲ್ಲಿ ರಚಿಸುವುದು ಕೂಡ ಅಸಾಧ್ಯವೆಂದು ತೋರುತ್ತದೆ. ನಾನಾ ಬಾಗಿಲುವಾಡಗಳ ಮೇಲೆ ಕೆತ್ತಿರುವ ಶ್ರೀ ಚಾಮುಂಡೇಶ್ವರಿ, ವೇಣುಗೋಪಾಲ ಮುಂತಾದ ದೇವತಾವಿಗ್ರಹಗಳೂ, ಗೋವುಗಳು ಮೊದಲಾದುವೂ, ಕಲಾಕೌಶಲ್ಯದ ಶ್ರೇಷ್ಠಮಾದರಿಗಳಾಗಿ ಶೋಭಿಸುತ್ತಿವೆ. ಆಳಿದ ಮಹಾಸ್ವಾಮಿಯವರಾದ ಶ್ರೀ ಮುಮ್ಮಡಿ ಕೃಷ್ಣರಾಜ ಒಡೆಯರವರ ಕಾಲದ ರಜತನಿರ್ಮಿತ ಭದ್ರಾಸನವೂ, ರಜತನಿರ್ಮಿತಗಳಾದ ಇತರ ಭದ್ರಾಸನಗಳೂ ಕಲಾ ಸಂಪತ್ತಿಯಿಂದ ಕೂಡಿ ಅಂಬಾವಿಲಾಸವನ್ನು ಬೆಳಗುತ್ತಿವೆ. ಸಾಣೆ ಹಿಡಿದು ಪಟ್ಟೆಹೊಡೆದ ಗಾಜಿನಿಂದಲೇ ನಿರ್ಮಿತವಾಗಿರುವ ಮೊಕಮಲಿನ ಮೆತ್ತೆ ಕುರ್ಚಿಯೊಂದೂ ಅವುಗಳ ಜೊತೆಯಲ್ಲಿದೆ. ಆಳಿದ ಮಹಾಸ್ವಾಮಿ ಯವರ ಅತಃಪುರದಲ್ಲಿ ನೆಲಕ್ಕೆ ಹಾಸಿರುವ ಹಸಿರುಬಣ್ಣದ ಸುಂದರವಾದ ರತ್ನಕಂಬಳಿಯೂ, ಅದರ ಮೇಲೆ ಅಂದವಾಗಿ ಓರಣಗೊಂಡು ಅಲಂಕಾರ ವಾಗಿರುವ ಉತ್ತಮಾಸನಗಳೂ, ಅಲ್ಲಲ್ಲಿ ರಾಜಿಸುತ್ತಿರುವ ಕುಶಲವಸ್ತು ಗಳೂ, ಅಂತಃಪುರದೊಳಗೆ ಎಡಭಾಗದಲ್ಲಿ ಬೆಳಗುತ್ತಿರುವ ಶ್ರೀ ಕೃಷ್ಣಾ ಜಮ್ಮಣ್ಣಿಯವರ ಅಲ್ಪಾಂತರಾಕೃತಿಯ ಪ್ರತಿಮೆಯೂ, ಗೋಡೆಗಳ ಮೇಲೆ ಪರಿಶೋಭಿಸುತ್ತಿರುವ ರಾಜಕುಟುಂಬದವರ ಭಾವಚಿತ್ರಗಳೂ,

ಒಂದು ಪಾರ್ಶ್ವದಲ್ಲಿರುವ "ಪಿಯಾನೋ" ವಾದ್ಯವೂ, ಅಮೃತಶಿಲಾ ರಚಿತವಾದ ಗೋವು, ಮರಕತ ಶಿಲಾರಚಿತವಾದ ಮಹಿಷ ಮುಂತಾದುವೂ ಕಣ್ಣಿಗೆ ಹಬ್ಬವನ್ನೊದಗಿಸುತ್ತ ಮನಸ್ಸನ್ನು ಮುಗ್ಧಗೊಳಿಸುತ್ತಿವೆ. ಅಲ್ಲಿಯೇ ಸಮೀಪದಲ್ಲಿರುವ ಸಂಗೀತಶಾಲೆಯಲ್ಲಿ ನಮ್ಮ ದೇಶದ ಮತ್ತು ವಿದೇಶಗಳ ಸಮಸ್ತವಾದ್ಯಗಳೂ ಇವೆ. ಆಳಿದ ಮಹಾಸ್ವಾಮಿಯವರಿಗೆ ಬಾಯಿ ಹಾಡಿಕೆಯ ಜೊತೆಗೆ ವೀಣೆ, ಪಿಟೀಲು, ಸಿತಾರ್, ಮೃದಂಗ, ಕೊಳಲು, ನಾದಸ್ವರ ಮುಂತಾದುವುಗಳಲ್ಲೆಲ್ಲ ಅಸಾಧಾರಣ ಪರಿಶ್ರಮ; ಸಂಗೀತಶಾಲೆಯಲ್ಲಿರುವ ವಾದ್ಯಗಳೆಲ್ಲ ಅತ್ಯಂತ ಶ್ರೇಷ್ಠವರ್ಗದವುಗಳು. ಖಾಸಾ ಅಂತಃಪುರದಿಂದ ಸೆಜ್ಜೆಗೆ (ಎಂದರೆ, "ದರ್ಬಾರ್ ಹಾಲ್" ಎಂಬ ಒಡ್ಡೋಲಗ ಶಾಲೆಗೆ) ಬರುವ ಮಾರ್ಗದಲ್ಲಿ ಗೋಡೆಯಮೇಲೆ ಖಾಸಾ ಭಾವ ಮೈದಂದಿರುಗಳು, ಹಿಂದಿನಿಂದ ದಿವಾನ್ ಪದವಿಯನ್ನಲಂಕರಿಸಿದ್ದವರು ಮತ್ತು ಈಗಿನ ದಿವಾನ್‌ರವರು— ಇವರುಗಳ ತೈಲವರ್ಣ ಚಿತ್ರಗಳು ಕಂಗೊಳಿಸುತ್ತಿವೆ. ಒಡ್ಡೋಲಗ ಶಾಲೆಯ ಒಂದು ಭಾಗವು, ಹಿಂದಿನಿಂದ ಇದ್ದುದು; ಮತ್ತೊಂದು ಭಾಗವು, ದರ್ಬಾರಿಗೆ ಬಂದಿರತಕ್ಕವರಿಗೆ ಮೊದಲಿಗಿಂತ ಹೆಚ್ಚಿನ ಸ್ಥಳಾವಕಾಶವಿದ್ದು ಅರಮನೆಯ ಮುಂದೆ ನಡೆಯುವ ಸಾಹಸಪ್ರದರ್ಶನ ಮುಂತಾದುವು ಕಾಣಲನುಕೂಲಿಸುವಂತೆ ಏರ್ಪಡಿಸುವ ಉದ್ದೇಶದಿಂದ ಮಹಾಪ್ರಭುಗಳವರು ಈಚೆಗೆ ನಿರ್ಮಾಣ ಮಾಡಿಸಿದುದು. ಅದರ ಅಗಲವು ೮೦ ಅಡಿಗಳು; ಉದ್ದವು ೨೪೫ ಅಡಿಗಳು; ಅದು ನೆಲದಿಂದ ಮೇಲಕ್ಕೆ ೫೦ ಅಡಿಗಳ ಎತ್ತರದಲ್ಲಿದೆ. ಅಲ್ಲಿ ಕುಳಿತರೆ ಅರಮನೆಯ ಮುಂಭಾಗದ ಪ್ರಶಸ್ತವಾದ ಮೈದಾನವನ್ನೂ, ನವರಾತ್ರಿ ದರ್ಬಾರುಗಳು ಬೆಳೆಯುವಾಗ ಆ ಮೈದಾನದಲ್ಲಿ ನಡೆಯುವುದನ್ನೂ* ಚೆನ್ನಾಗಿ ನೋಡಬಹುದು. ಸೆಜ್ಜೆಯ ಗೋಡೆಯ ಮೇಲೆ ರಾಜಾ ರವಿವರ್ಮರವರು "ಸಮುದ್ರಗರ್ವಭಂಗ", "ಸೀತಾಪಹರಣ", "ಭೀಷ್ಮಪ್ರತಿಜ್ಞೆ", "ಕೃಷ್ಣದೌತ್ಯ", ಮುಂತಾದ ಚಿತ್ರಗಳನ್ನು ಬರೆದಿದ್ದಾರೆ. ಅವುಗಳ ಜೊತೆಯಲ್ಲಿ ಆಳಿದ ಮಹಾಸ್ವಾಮಿಯವರುಗಳಾದ ಮೂರು ಮಂದಿ ಮಹಾರಾಜರುಗಳು, ದಿವಂಗತರಾದ ಶ್ರೀಮದ್ಯುವರಾಜರವರು ಮತ್ತು ಆಳುವ ಮಹಾಸ್ವಾಮಿಯವರಾದ ಶ್ರೀಮನ್ಮಹಾರಾಜರವರು— ಇವರುಗಳ ಚಿತ್ರಗಳೂ ಇವೆ. ತಲೆಯೆತ್ತಿ ನೋಡಿದರೆ, ಬ್ರಹ್ಮಾ ವಿಷ್ಣು ಮಹೇಶ್ವರರ ಒಡ್ಡೋಲಗಗಳು, ಅಷ್ಟದಿಕ್ಪಾಲಕರು, ನವಗ್ರಹಗಳು, ದ್ವಾದಶರಾಶಿಗಳು, ಶ್ರೀ ಚಾಮುಂಡೇಶ್ವರೀ

* ಅದರ ವಿವರವನ್ನು ಮುಂದೆ ಹದಿಮೂರನೆಯ ಅಧ್ಯಾಯದಲ್ಲಿ ಸೂಚಿಸಲಾಗಿದೆ.

ದೇವಿ— ಮುಂತಾದ ಚಿತ್ರಗಳಿವೆ; ಇವುಗಳನ್ನೆಲ್ಲ ಮೈಸೂರಿನ ಚಿತ್ರ ಕಾರರುಗಳಿಂದ ಆಳಿದ ಮಹಾಸ್ವಾಮಿಯವರೇ ಬರೆಯಿಸಿದರು. ಸೆಜ್ಜೆ ಯೊಳಗೂ, ಅರಮನೆಯ ಹೊರ ಮೈಮೇಲೂ, ಅರಮನೆಯ ಮುಂದೂ, ಅಸಂಖ್ಯಾತ ವಿದ್ಯುದ್ದೀಪಮಾಲೆಗಳು ತೊಳಗುತ್ತ ರಾತ್ರಿಯನ್ನು ಹಗಲಾಗಿಸುವಷ್ಟು ಮಟ್ಟಿಗೆ ಬೆಳಕನ್ನು ಬೀರುತ್ತವೆ. ಅರಮನೆಯ ಎದುರಿಗೆ ಪ್ರಶಸ್ತವಾದೊಂದು ಚೌಕವೂ ಮತ್ತು ಬಲರಾಂ, ಜಯರಾಂ, ಜಯ ಮಾರ್ತಾಂಡ, ವರಾಹ, ಬ್ರಹ್ಮಪುರಿ— ಎಂಬ ಐದು ಮಹಾದ್ವಾರಗಳೂ ಇವೆ. ವರ್ಧಂತ್ಯುತ್ಸವದ ಮತ್ತು ನವರಾತ್ರಿ ಉತ್ಸವದ ಕಾಲದಲ್ಲಿ ಅನೇಕ ಸಾವಿರ ಮಂದಿ ಪ್ರಜೆಗಳು ಅರಮನೆಯ ಮುಂದಿರುವ ಸುವಿಸ್ತರ ವಾದ ಆ ಚೌಕದಲ್ಲಿ ಸೇರಿ, ದರ್ಬಾರಿನ ವೈಭವವನ್ನೂ ಮಲ್ಲಕಾಳಿಗ ಮುಂತಾದುವುಗಳನ್ನೂ ನೋಡಿ ಹರ್ಷಿಸುತ್ತಾರೆ.

ಆಳಿದ ಮಹಾಸ್ವಾಮಿಯವರಿಗಿದ್ದ ನಾನಾ ಭಾಷಾಸಾಹಿತ್ಯ ಪ್ರೌಢಿಮೆಯ ವಿಚಾರವನ್ನೂ ಹಿಂದೆಯೇ ಸ್ವಲ್ಪಮಟ್ಟಿಗೆ ಸೂಚಿಸಲಾಗಿದೆ.

**ಸಾಹಿತ್ಯಾಭಿಮಾನ**

ಅವರು ಕನ್ನಡ, ಸಂಸ್ಕೃತ, ಇಂಗ್ಲಿಷ್, ಪಾರ್ಸಿ, ಉರ್ದು, ತಮಿಳು, ಮರಾಠಿ ಮುಂತಾದ ಭಾಷೆ ಗಳಲ್ಲಿ ವಿಶೇಷ ಪರಿಶ್ರಮವನ್ನು ಪಡೆದಿದ್ದರು; ಕನ್ನಡ, ಸಂಸ್ಕೃತ ಮತ್ತು ಇಂಗ್ಲಿಷ್ ಭಾಷೆಗಳಲ್ಲಿಯೂ ಉರ್ದು ಭಾಷೆ ಯಲ್ಲಿಯೂ ಉದ್ದಾಮ ಪಾಂಡಿತ್ಯವನ್ನು ಪಡೆದಿದ್ದರು; ಪ್ರಪಂಚದ ನಾನಾ ಸಾಹಿತ್ಯಗಳ ಸಾರವನ್ನೆಲ್ಲ ಸವಿದಿದ್ದರು. ಮಹಾಪ್ರಭುಗಳವರು ಸಂಸ್ಕೃತ ಭಾಷೆಯಲ್ಲಿ ಧಾರಾಳವಾಗಿ ಮಾತನಾಡಬಲ್ಲವರಾಗಿದ್ದರು. ಅವರು ಕುಚ್‌ಬಿಹಾರ ಸಂಸ್ಥಾನಕ್ಕೆ ದಯಮಾಡಿದ್ದಾಗ್ಗೆ ಅಲ್ಲಿಯ ಸಂಸ್ಕೃತ ಪಾಠಶಾಲೆಯಲ್ಲಿ ನಡೆದ ಒಂದು ಉತ್ಸವದಲ್ಲಿ ಅಧ್ಯಕ್ಷತೆವಹಿಸಿದಾಗ ಸಂಸ್ಕೃತದಲ್ಲಿ ಅವರಿಗೆ ವಿಜ್ಞಾಪನಾ ಪತ್ರಿಕೆಯು ಸಮರ್ಪಿತವಾಯಿತು. ಮಹಾಪ್ರಭುಗಳವರು ಅಸ್ಖಲಿತವಾಣಿಯಿಂದ ಅದಕ್ಕೆ ಸಂಸ್ಕೃತಭಾಷೆ ಯಲ್ಲೇ ಪ್ರತ್ಯುತ್ತರವನ್ನಿತ್ತರು. ಪ್ರವಾಹರೂಪದಲ್ಲಿದ್ದ ಅವರ ವಾಗ್ಝರಿ ಯನ್ನೂ, ಸ್ಫುಟವಾದ ಉಚ್ಚರಣೆಯನ್ನೂ, ಉದಾತ್ತಭಾವಗಳನ್ನೂ ಕಂಡು ಸಭೆಯಲ್ಲಿದ್ದ ಉದ್ದಾಮ ಪಂಡಿತರೆಲ್ಲರೂ ಬೆರಗಾದರು. ಮಹಾ ಪ್ರಭುಗಳವರಿಗೆ ಸಂಸ್ಕೃತ ಭಾಷೆಯಲ್ಲಿ ಕವಿತಾ ಸಾಮರ್ಥ್ಯವೂ ಇದ್ದಿತು. ಅವರು ತಮ್ಮ ಸಂಸ್ಕೃತೋಪಾಧ್ಯಾಯರಿಗೆ ವರ್ಧಂತಿಯ ಕಾಲದಲ್ಲಿ ಅಭಿನಂದನ ಪತ್ರವನ್ನು ಬರೆದಾಗ ಪ್ರತಿ ವರ್ಷವೂ ಆ ಪತ್ರದ ಮೇಲ್ಭಾಗ ದಲ್ಲಿ ತಮ್ಮಿಂದ ರಚಿತವಾದ ನೂತನ ಶ್ಲೋಕಗಳನ್ನು ಬರೆದಿರುತ್ತಿದ್ದರು.

ಮಹಾಪ್ರಭುಗಳವರು ಕಾಶೀ ವಿಶ್ವೇಶ್ವರಸ್ವಾಮಿಯವರ ಮೇಲೆ ರಚಿಸಿದ ಎರಡು ಶ್ಲೋಕಗಳು ಕಾಶಿಯಲ್ಲಿರುವ ವಿಶ್ವೇಶ್ವರ ದೇವಾಲಯದಲ್ಲಿ ಅವರ ಚಿತ್ರಪಟದ ಮೇಲೆ ಉಲ್ಲಿಖಿತವಾಗಿ ಶೋಭಿಸುತ್ತಿವೆ. ಮಹಾಪ್ರಭುಗಳವರು ಯಾವಜ್ಜೀವವೂ ಪ್ರತಿ ದಿನವೂ ಕೆಲವು ಘಂಟೆಗಳನ್ನು ವ್ಯಾಸಂಗಕ್ಕಾಗಿ ಮೀಸಲಾಗಿಟ್ಟುಕೊಂಡು ಪ್ರತ್ಯಹದಲ್ಲಿಯೂ ಜ್ಞಾನ ಭಂಡಾರವನ್ನು ವೃದ್ಧಿಪಡಿಸಿಕೊಳ್ಳುತ್ತಿದ್ದರು. ಜ್ಞಾನದ ಬೆಳಕು ಎಲ್ಲಿಂದ ಬಂದರೂ ಆದರದಿಂದ ಸ್ವಾಗತಿಸುತ್ತಿದ್ದುದು ಅವರ ಚಿತ್ತವೃತ್ತಿ. ಜಗನ್ಮೋಹನ ಪ್ರಾಸಾದದ ಚಿತ್ರಶಾಲೆಯಲ್ಲಿ ಒಂದು ಕಡೆ ಬೀಥೋವನರ ಪ್ರತಿಮೆಯನ್ನೂ ಮತ್ತೊಂದುಕಡೆ ವೈಣಿಕಶಿಖಾಮಣಿ ಶ್ರೀಮಾನ್ ವೀಣೆ ಶೇಷಣ್ಣನವರ ಪ್ರತಿಮೆಯನ್ನೂ ಇಡಿಸಿರುವುದೇ ಜೀವನಗೀತದಲ್ಲಿ ಪಾಶ್ಚಾತ್ಯ ಪೌರ್ವಾತ್ಯ ಸಾಧನೆಗಳೆರಡಕ್ಕೂ ಸ್ಥಾನವಿರಬೇಕೆಂಬುದರ ಸಂಕೇತ. ಆಳಿದ ಮಹಾಸ್ವಾಮಿಯವರಿಗೆ ಗ್ರಂಥಾವಲೋಕನದಲ್ಲಿ ಪರಮಾದರ. ತಮ್ಮ ಪ್ರಜಾವರ್ಗದಲ್ಲಿ ಇತರರೂ ಜ್ಞಾನಾರ್ಜನೆ ಮಾಡಬೇಕೆಂಬುದು ಅವರಿಗಿದ್ದ ತೀವ್ರಾಭಿಲಾಷೆ. ಆದಕಾರಣ, ಸಾಹಿತ್ಯ ಭಕ್ತರಿಗೆ ಅವರು ಬಗೆಬಗೆಯಲ್ಲಿ ಪ್ರೋತ್ಸಾಹಕೊಡುತ್ತಿದ್ದರು. ಅನೇಕ ವರ್ಷಗಳು ಕವಿತಾ ಸ್ಪರ್ಧೆಯನ್ನೇರ್ಪಡಿಸಿ ಬಹುಮಾನಗಳನ್ನೂ ದಯ ಪಾಲಿಸುತ್ತಿದ್ದರು. ಸಾಹಿತಿಗಳಿಂದ ಉಪನ್ಯಾಸಗಳನ್ನು ಮಾಡಿಸಿ ಪ್ರೋತ್ಸಾಹಿಸುತ್ತಿದ್ದರು. ಹೆಚ್ಚು ಬೆಲೆ ಬಾಳುವ ಗ್ರಂಥಗಳನ್ನು ತರಿಸಿ ಪುಸ್ತಕಭಂಡಾರಗಳಿಗೆ ದಾನಮಾಡುತ್ತಿದ್ದರು. ನಾನಾ ವಿಚಾರಗಳನ್ನೂ ಕುರಿತು ವಿದ್ವಾಂಸರ ಅಭಿಪ್ರಾಯಗಳನ್ನು ಕೇಳಿ ಚರ್ಚೆಮಾಡುತ್ತಿದ್ದುದು, ಮಹಾಪ್ರಭುಗಳ ನಿತ್ಯವಿಧಿಗಳಲ್ಲೊಂದು. ಸಂಸ್ಕೃತ ಭಾಷೆಯ ಮತ್ತು ಕನ್ನಡ ಭಾಷೆಯ ಏಳಿಗೆಯಲ್ಲಿ ಮಹಾಪ್ರಭುಗಳವರಿಗೆ ತೀವ್ರಾಸಕ್ತಿ. ಸಂಸ್ಕೃತ ಮಹಾಪಾಠಶಾಲೆಗಳಿಗೂ, ಕನ್ನಡ ಸಾಹಿತ್ಯ ಪರಿಷತ್ತಿಗೂ, ಇತರ ಸಂಸ್ಥೆಗಳಿಗೂ ಮಹಾಪ್ರಭುಗಳು ನೀಡಿದ ಉದಾರವಾದ ಸಹಾಯವೇ ಅದಕ್ಕೊಂದು ನಿದರ್ಶನ.

ಬೆಂಗಳೂರು ಮೈಸೂರು ನಗರಗಳಲ್ಲಿರುವ ಸಂಸ್ಕೃತ ಮಹಾಪಾಠ ಶಾಲೆಗಳನ್ನು ವಿಶೇಷವಾಗಿ ಅಭಿವೃದ್ಧಿಗೊಳಿಸಿ, ಬೆಂಗಳೂರಿನಲ್ಲಿರುವ ಸಂಸ್ಕೃತ ಮಹಾಪಾಠಶಾಲೆಯಲ್ಲಿ ಸಮಸ್ತ ಜಾತಿಮತಗಳವರೂ ವ್ಯಾಸಂಗ ಮಾಡಬಹುದೆಂದು ಅವಕಾಶವನ್ನು ಕಲ್ಪಿಸಿದ ಕೀರ್ತಿಯು ಮಹಾಸ್ವಾಮಿಯವರದು. ಸಂಸ್ಕೃತ ಮಹಾಪಾಠಶಾಲೆಗಳ ಅಧ್ಯಾಪಕರುಗಳಿಗೆ ಲಭಿಸುತ್ತಿದ್ದ ಕೇವಲ ೧೭ ರೂಪಾಯಿಗಳ ಪರಮಾವಧಿ ವೇತನಗಳನ್ನು ಕ್ರಮ

ಕ್ರಮವಾಗಿ ಹೆಚ್ಚಿಸಿ ತಿಂಗಳಿಗೆ ೧೦೦ ರೂಪಾಯಿಗಳವರೆಗೆ ಅಧಿಕಗೊಳಿಸಿದವರು, ಆಳಿದ ಮಹಾಸ್ವಾಮಿಯವರು. ಮೈಸೂರು ಸಂಸ್ಕೃತ ಮಹಾಪಾಠಶಾಲೆಯ ಈಗಿನ ಕಟ್ಟಡವನ್ನು ಅರಮನೆಯ ವೆಚ್ಚದಲ್ಲಿ ನೂತನವಾಗಿ ನಿರ್ಮಾಣಮಾಡಿಸಿ, ವಿದ್ಯಾರ್ಥಿಗಳ ಭೋಜನ ವಸತಿಗಳ ಅನುಕೂಲವನ್ನು ಹೆಚ್ಚಿಸಿ, ವಿದ್ಯಾರ್ಥಿಗಳಿಗೆ ಅಭ್ಯಂಜನ ಸೌಕರ್ಯ ಮುಂತಾದ ವಿವಿಧ ಸೌಕರ್ಯಗಳನ್ನು ಕಲ್ಪಿಸಿಕೊಟ್ಟು, ಆಳಿದ ಮಹಾಸ್ವಾಮಿಯವರು ಕೃಪೆ ಮಾಡಿದರು. ಮೈಸೂರು ನಗರದಲ್ಲಿರುವ ಸಂಸ್ಕೃತ ಮಹಾಪಾಠಶಾಲೆಯಲ್ಲಿ ವ್ಯಾಸಂಗಮಾಡಿ ದೊಡ್ಡ ಪರೀಕ್ಷೆಗಳಲ್ಲಿ ತೇರ್ಗಡೆ ಹೊಂದಿದವರಿಗೆ ಪ್ರಶಸ್ತಿಯೂ ಪಾರಿತೋಷಿಕಗಳೂ ಮಹಾಪ್ರಭುಗಳ ಅಮೃತ ಹಸ್ತದಿಂದ ಪ್ರತಿ ವರ್ಷವೂ ಆಶ್ವಿಯುಜ ಶುದ್ಧ ದ್ವಾದಶಿಯ ದಿನದ ಅರಮನೆ ದರ್ಬಾರಿನಲ್ಲಿ ಲಭಿಸುವ ವ್ಯವಸ್ಥೆ ನಡೆಯಿತು.

೧೯೨೬ನೆಯ ಇಸವಿಯಲ್ಲಿ ನಡೆದ ಮೈಸೂರು ನಗರದ ಸಂಸ್ಕೃತ ಮಹಾಪಾಠಶಾಲೆಯ "ಪಂಚಾಶತ್ಸಂವತ್ಸರ ಮಹೋತ್ಸವ" ಸಂದರ್ಭದಲ್ಲಿ, ಆಳಿದ ಮಹಾಸ್ವಾಮಿಯವರು ದಯಪಾಲಿಸಿದ ಭಾಷಣದಲ್ಲಿರುವ, "ಪೂಜ್ಯರಾದ ನಮ್ಮ ತಂದೆಯವರು ಈ ಮಹಾಪಾಠಶಾಲೆಯ ಪುರೋಭಿವೃದ್ಧಿಯಲ್ಲಿ ಯಾವಾಗಲೂ ವಿಶೇಷ ಆದರವುಳ್ಳವರಾಗಿದ್ದರು. ನಾವೂ ಸಹ ಅವರ ಮೇಲ್ಪಂಕ್ತಿಯನ್ನೇ ಅನುಸರಿಸಿ ಅದೇ ರೀತಿಯಲ್ಲಿ ಇಲ್ಲಿಯ ಕಾರ್ಯಕಲಾಪಗಳನ್ನು ಅಭಿಮಾನದಿಂದಲೂ ಆನಂದದಿಂದಲೂ ಪರಿಶೀಲಿಸುತ್ತ ಬಂದಿದ್ದೇವೆ. . . . ಸಂಸ್ಕೃತದಲ್ಲಿ ಉಪದಿಷ್ಟವಾಗಿರುವ ಉದಾತ್ತ ಸಂಸ್ಕೃತಿ, ಶಿಕ್ಷಣವ್ಯವಸ್ಥೆ, ಮಾನವಧರ್ಮ, ಇವುಗಳು ಅಸಾಧಾರಣವಾದವುಗಳು. ಸಂಸ್ಕೃತವನ್ನುಳಿದು ಮತ್ತಾವ ನವೀನ ಅಥವಾ ಪ್ರಾಚೀನ ವಿದ್ಯೆಯೂ ಅವುಗಳನ್ನು ಅಷ್ಟು ಚೆನ್ನಾಗಿ ಬೋಧಿಸಲಾರದು. . . . . . ಗುಡಿಗೋಪುರಗಳೇ ಮುಂತಾದುವುಗಳ ವಾಸ್ತುರೀತಿ ವೈಶಿಷ್ಟ್ಯ; ನಟರಾಜ ಅಥವಾ ಬುದ್ಧದೇವನ ಶಿಲಾಪ್ರತಿಮೆಗಳಲ್ಲಿ ನೆಲೆಗೊಂಡಿರುವ ಅನನ್ಯಸಾಧಾರಣವಾದ ಭಾವೋಪನ್ನತೆಯಿಂದ ಕೂಡಿದ ಲಾವಣ್ಯ ವಿಶೇಷ; ಅಜಂತಾ ಗುಹಾಂತರ್ದೇವಾಲಯಗಳಲ್ಲಿರುವ ಚಿತ್ರಕೌಶಲ ಸಂಪತ್ತಿಯ ರಮ್ಯವಾದ ರೇಖಾವಿನ್ಯಾಸ; ರಾಗರಾಗಿಣಿಗಳ ತಂಡದಿಂದ ಕೂಡಿ ಆನಂದ ರಸಮಗ್ನತೆಯನ್ನುಂಟುಮಾಡುವ ನಾದ ಮಧುರ್ಯ—ಇವೇ ಮೊದಲಾದ ವಿವಿಧ ರೂಪಗಳನ್ನು ತಳೆದು ಶೋಭಿಸುತ್ತಿರುವ ಭರತಖಂಡದ ಕಲಾಸೌಭಾಗ್ಯದ ದಿವ್ಯ ಚೇತನದಂತಿರುವ ಸಾರಭೂತವಾದ ಗೂಢತತ್ತ್ವವನ್ನರಿಯಬೇಕಾದರೆ ಸಂಸ್ಕೃತ ಸಾಹಿತ್ಯ ಮಾಲೆಯಲ್ಲಿ ಬೆಳಗುತ್ತಿರುವ

ಮಣಿದೀಪಗಳ ತನಿಬೆಳಕಿನ ಸಹಾಯವೊಂದರಿಂದಲೇ ಸಾಧ್ಯ'' ಎಂಬ ದಿವ್ಯವಾಣಿಗಳು ಆಳಿದ ಮಹಾಸ್ವಾಮಿಯವರಿಗಿದ್ದ ಸಂಸ್ಕೃತ ಭಾಷಾಭಿಮಾನವನ್ನು ಬಹು ಚೆನ್ನಾಗಿ ವ್ಯಕ್ತಗೊಳಿಸುತ್ತವೆ. ಆ ಉತ್ಸವಕಾಲದಲ್ಲಿ ಮಹಾಸ್ವಾಮಿಯವರು ಮಹಾಪಾಠಶಾಲೆಯ ವಿದ್ವಾಂಸರುಗಳೊಡನೆ ಮಂಡಿಸಿ ಭಾವಚಿತ್ರವನ್ನು ('' ಫೋಟೋ '') ತೆಗೆಸಿಕೊಂಡು, '' ಈ ದಿನ ಪಂಡಿತರುಗಳೊಡನೆ ಸೇರಿ ಭಾವಚಿತ್ರ ತೆಗೆಸಿಕೊಂಡಿರುವುದರಿಂದ ನಮಗೆ ವಿಶೇಷ ಸಂತೋಷವಾಗಿದೆ. ಇದು ನಮ್ಮ ಸೌಭಾಗ್ಯವೆಂದು ಭಾವಿಸಿದ್ದೇವೆ'' ಎಂದರು.

ಕವಿಗಳಿಗೂ, ಸಾಹಿತಿಗಳಿಗೂ, ವಿದ್ವಾಂಸರಿಗೂ, ಶಾಸ್ತ್ರಜ್ಞರಿಗೂ ಅರಮನೆಯ ವೇತನಗಳು ದೊರೆಯುತ್ತಿವೆ. ಹೀಗೆ ವೇತನಗಳನ್ನು ಪಡೆಯುವವರ ಸಂಖ್ಯೆಯು ಆಳಿದ ಮಹಾಸ್ವಾಮಿಯವರ ಕಾಲದಲ್ಲಿ ಬಹಳ ಹೆಚ್ಚಿತು. ಅವರಲ್ಲಿ ವಿದ್ವಾಂಸರುಗಳೆಂದೂ ಮಹಾವಿದ್ವಾಂಸರುಗಳೆಂದೂ ಎರಡು ತರಗತಿಗಳಿವೆ. ಮಹಾವಿದ್ವಾಂಸರುಗಳಿಗೆ ಆಳಿದ ಮಹಾಸ್ವಾಮಿಯವರು '' ವಿದ್ಯಾನಿಧಿ '', '' ಪಂಡಿತರತ್ನಂ '', '' ಪೌರಾಣಿಕ ರತ್ನಂ'' ಮುಂತಾದ ಬಿರುದುಗಳನ್ನು ಖಿಲ್ಲತ್ತುಗಳೊಡನೆ ದಯಪಾಲಿಸುತ್ತಿದ್ದರು. ಮಹಾವಿದ್ವಾಂಸರುಗಳಾದ ವೈದಿಕ ಮಹಾಶಯರುಗಳಲ್ಲಿ ಜ್ಞಾನವೃದ್ಧರೂ ವಯೋವೃದ್ಧರೂ ಆದ ನಾಲ್ವರನ್ನು ಅರಮನೆಯ ಧರ್ಮಾಧಿಕಾರಿಗಳನ್ನಾಗಿ ನೇಮಿಸಿ ತಿಂಗಳಿಗೆ ಐವತ್ತು ರೂಪಾಯಿಗಳಂತೆ ಸಂಭಾವನೆಯು ಸಲ್ಲುವ ಏರ್ಪಾಡು ನಡೆದಿದೆ. ಈಚೆಗೆ ಮತ್ತೊಬ್ಬರು ಮಹಾವಿದ್ವಾಂಸರೂ ಧರ್ಮಾಧಿಕಾರಿಯವರಾಗಿ ನೇಮಕವಾಗಿದ್ದಾರೆ. ಬಿರುದು ಬಂದ ವೈದಿಕ ವಿದ್ವಾಂಸರುಗಳಿಗೆ ತಿಂಗಳಿಗೆ ಹದಿನೈದು ರೂಪಾಯಿಗಳಂತೆ ಯಾವಜ್ಜೀವವೂ ಸಂಭಾವನೆಯು ಲಭಿಸುತ್ತದೆ. ಅರಮನೆಯಲ್ಲಿ ಹತ್ತು ಮಂದಿ ಋತ್ವಿಕ್ಕುಗಳೂ, ನಾಲ್ವರು ಜ್ಯೋತಿಷ್ಕರುಗಳೂ, ನಾಲ್ವರು ಪುರೋಹಿತರುಗಳೂ ನೇಮಕವಾಗಿದ್ದಾರೆ.

ಆಳಿದ ಮಹಾಸ್ವಾಮಿಯವರು ಉತ್ತಮವಾದ ಗ್ರಂಥಗಳನ್ನು ರಚಿಸಿದವರಿಗೆ ಸಂಭಾವನೆಗಳನ್ನು ದಯಪಾಲಿಸುತ್ತಿದ್ದರು. ಸಂಗೀತ ಸಾಹಿತ್ಯ ಕಲಾಲೋಲರಾಗಿ ಅವು ಮೂರೂ ವೃದ್ಧಿಹೊಂದುವಂತೆ ಸಂತತವೂ ಅಧ್ಯವಸಾಯ ಮಾಡುತ್ತ ಅನುಗ್ರಹಿಸುತ್ತಿದ್ದರು. ಎಲ್ಲಿ ಯಾವ ಕಲಾವಿದನಲ್ಲಿ ಯೋಗ್ಯತೆಯಿದ್ದರೂ ಮಹಾಪ್ರಭುಗಳ ಪ್ರೋತ್ಸಾಹವು ಲಭಿಸುತ್ತಿದ್ದಿತು. ಹಾಸ್ಯಗಾರರು, ವ್ಯಾಯಾಮಕೋವಿದರು ಮುಂತಾದವರಲ್ಲಿಯೂ ಅವರು ಅಭಿಮಾನ ತೋರಿ ಪ್ರೋತ್ಸಾಹಿಸುತ್ತಿದ್ದರು.

# ಹನ್ನೆರಡನೆಯ ಅಧ್ಯಾಯ

## ಧರ್ಮಾಭಿಮಾನ

"ಪೂರ್ಣಮದಃ ಪೂರ್ಣಮಿದಂ ಪೂರ್ಣಾತ್ಪೂರ್ಣಮುದಚ್ಯತೇ ।
ಪೂರ್ಣಸ್ಯ ಪೂರ್ಣಮಾದಾಯ ಪೂರ್ಣಮೇವಾವಶಿಷ್ಯತೇ॥
ಈಶಾವಾಸ್ಯಮಿದಂ ಸರ್ವ ಯತ್ಕಿಂಚ ಜಗತ್ಯಾಂ ಜಗತ್ ।
ತೇನ ತ್ಯಕ್ತೇನ ಭುಂಜೀಥಾ ಮಾ ಗೃಧಃ ಕಸ್ಯಸ್ವಿದ್ಧನವ್॥
ಕುರ್ವನ್ನೇವೇಹ ಕರ್ಮಾಣಿ ಜಿಜೀವಿಷೇಚ್ಛತಂ ಸಮಾಃ ।
ಏವಂ ತ್ವಯಿ ನಾನ್ಯಥೇತೋಽಸ್ತಿ ನ ಕರ್ಮ ಲಿಪ್ಯತೇ ನರೇ ॥"
"ಸತ್ಯಂ ವದ । ಧರ್ಮಂ ಚರ । ಸ್ವಾಧ್ಯಾಯಾನ್ಮಾಪ್ರಮುದಃ ।"
"ಧರ್ಮೋ ಧಾರಯತಿ ಪ್ರಜಾಃ ।"

ಆಳಿದ ಮಹಾಸ್ವಾಮಿಯವರ ಧರ್ಮಾಭಿಮಾನದ ಅಂಗಗಳಾದ ಕರ್ಮಾನುಷ್ಠಾನ ತೀರ್ಥ ಯಾತ್ರಾದಿಗಳ ವಿಷಯವನ್ನು ಕುರಿತು ಈ ಅಧ್ಯಾಯದಲ್ಲಿ ಅತಿ ಸಂಕ್ಷೇಪವಾಗಿ ಕೆಲವು ಅಂಶಗಳನ್ನು ಸೂಚಿಸಲಾಗುವುದು. ಅದಕ್ಕೆ ಮೊದಲು ಒಂದು ಸಂದೇಹಕ್ಕೆ ಸಮಾಧಾನ ಹೇಳುವುದು ಆವಶ್ಯಕ. ವಿಜ್ಞಾನದ ಜಯಭೇರಿ ಮೊಳಗುತ್ತಿರುವ ವಿಚಾರ ಶೀಲತೆಯ ಈ ಪ್ರಗತಿಯುಗದಲ್ಲಿ ಅಂಧಶ್ರದ್ಧೆಯ ಆಗರವಾದ ಪೊಳ್ಳು ಮತಾಚಾರಗಳ ವಿಷಯಕ್ಕೆ ಸ್ಥಾನವುಂಟೇ — ಎಂಬುದು ಅನೇಕರ ಮನಸ್ಸಿನಲ್ಲಿರುವ ಸಂದೇಹ. ಆದರೆ ಅದಕ್ಕೆ ಸ್ವಲ್ಪವೂ ಅವಕಾಶವಿಲ್ಲ ವೆಂಬುದು ಅನೇಕ ಮಂದಿ ಮಹನೀಯರ ಅಭಿಪ್ರಾಯ.

**ಪೀಠಿಕಾಂಶಗಳು**

ಬ್ರಿಟಿಷ್ ಚಕ್ರಾಧಿಪತ್ಯದ ಮಹಾಪ್ರಧಾನರಾಗಿದ್ದು ಈಚೆಗೆ ದಿವಂಗತರಾದ ರ್‍ಯಾಮ್ಸೇ ಮೆಕ್ಡೊನಾಲ್ಡ್ ಅವರು, "ನಾನಾ ಬುಡಕಟ್ಟುಗಳ ಜನಾಂಗಗಳಿಗೂ ಪರಸ್ಪರವಾಗಿ ಸೌಹಾರ್ದ ಸಾಮರಸ್ಯಗಳನ್ನು ಕಲ್ಪಿಸಬೇಕಾದರೆ, ಪರಸ್ಪರ ವಿರೋಧಿಗಳಾಗಿ ಒಳತೋಟಿಯನ್ನುಂಟು ಮಾಡುತ್ತಿರುವ ನಾನಾ ಭಾವಗಳಿಗೂ ಸಾಮರಸ್ಯವನ್ನು ಕಲ್ಪಿಸಬೇಕಾದರೆ, ಯಾವುದರ ಅವಲಂಬನದಿಂದ ಸಾಧ್ಯವೋ ಆ ದರ್ಶನ ಶಾಸ್ತ್ರವನ್ನು ಅಥವಾ ಆಲೋಚನಾಮೃತ ವ್ಯವಸ್ಥೆಯನ್ನು ಕಾಣಬೇಕಾದರೆ ಸಂಗಡಲೇ ಭರತಖಂಡದ ದರ್ಶನ ಶಾಸ್ತ್ರಗಳ ಕಡೆಗೆ ತಿರುಗದೆ ಮತ್ತೆಲ್ಲಿಗೆತಾನೆ ಹೋಗಲಾದೀತು? ಸಮಸ್ತರೂ ಸಹೋದರರೆಂಬ ಉದಾತ್ತಭಾವನೆಯನ್ನುಂಟುಮಾಡುವ ಶಾಂತಿ ಸೌಹಾರ್ದ ಸಹಕಾರಗಳನ್ನುಪದೇಶಿಸುವ

ಮತ್ತು ಕಾರ್ಯರಂಗಕ್ಕೆ ದೂರವಾದ ಶುಷ್ಕ ಸಿದ್ಧಾಂತ ರೂಪದ ಜೀವನ ಮೀಮಾಂಸೆಯನ್ನಿಟ್ಟುಕೊಳ್ಳದೆ, ಭಾವನೆಗಳೂ ವರ್ತನೆಗಳೂ ಸಮಸ್ತ ರಲ್ಲಿಯೂ ಒಂದೇ ಆಗಿರದೆ ಭಿನ್ನಭಿನ್ನವಾಗಿರುವುದೇ ಸಹಜವೆಂಬುದನ್ನು ಅಂಗೀಕರಿಸಿರುವ ಭಾರತೀಯ ದರ್ಶನ ಶಾಸ್ತ್ರಗಳನ್ನು ಬಿಟ್ಟು ಮತ್ತೆಲ್ಲಿಗೆ ತಾನೆ ಹೋಗೋಣ?"* ಎಂದು ಹೇಳಿದ್ದರು. ಒಟ್ಟು ಪ್ರಪಂಚದಲ್ಲೇ ಪ್ರಸಿದ್ಧರಾದ ಶ್ರೀಮಾನ್ ರೊಮೇನ್ ರೋಲಾ ಅವರು "ಪ್ರಪಂಚದಲ್ಲಿ ಮಾನವನಿಗೆ ಲಭಿಸುವುದು ಸಾಧ್ಯವಿರುವ ಮಹತ್ತಮವಾದ ಆನಂದವನ್ನು ಪಡೆಯುವುದಕ್ಕೆ ಅವಕಾಶವಾಗಬೇಕಾದರೆ, ಇನ್ನೂ ಬಹು ಕಾಲದವರೆಗೂ ಸಹ ಯೂರೋಪು ಖಂಡದ ಧ್ಯೇಯಗಳ ಜೊತೆಗೆ ಏಷ್ಯಾ ಖಂಡದ ಧ್ಯೇಯಗಳನ್ನೂ ಸೇರಿಸಿ ಅಳವಡಿಸುವುದರಿಂದ ಮಾತ್ರವೇ ಆಗಬೇಕು"† ಎಂದು ಹೇಳಿದ್ದಾರೆ. ಪ್ರಚಂಡ ಮೇಧಾವಿಗಳಾದ ಆ ಮಹಾಶಯರು ನಿರಕ್ಷರ ಕುಕ್ಷಿಗಳಾಗಿದ್ದ ಮತ್ತು ವಿಜ್ಞಾನದ ಗಂಧವನ್ನೇ ಅರಿಯದಿದ್ದ ಶ್ರೀರಾಮಕೃಷ್ಣ ಪರಮಹಂಸರ ಜೀವನ ಚರಿತ್ರೆಯನ್ನು ಬರೆದಿರುವುದೇ ವಿಜ್ಞಾನಕ್ಕೆ ದುರ್ಲಭವಾದ ಶ್ರೇಷ್ಠಸ್ಥಾನವು ವೇದಾಂತ ಸಿದ್ಧಾಂತಕ್ಕೆ ಇಂದಿನ ಪಾಶ್ಚಾತ್ಯ ಪ್ರಪಂಚದಲ್ಲಿ ಕೂಡ ದೊರೆಯುವುದೆಂಬುದಕ್ಕೊಂದು ನಿದರ್ಶನ.

ಸರ್ ಎಸ್. ರಾಧಾಕೃಷ್ಣನ್‌ರವರು ಹೇಳಿರುವಂತೆ, "ಮತಧರ್ಮ ಗಳ ಅನುಷ್ಠಾನದಿಂದ ತತ್ತ್ವ ಸಾಕ್ಷಾತ್ಕಾರವನ್ನು ಪಡೆದಿಲ್ಲದ ಜನರು ಇರುವ ಮಾತ್ರಕ್ಕೇ ತತ್ತ್ವ ಸಾಕ್ಷಾತ್ಕಾರವೇ ಸುಳ್ಳೆಂದೂ ಸಾಧ್ಯವಿಲ್ಲ ವೆಂದೂ ನಾವು ಹೇಳುವುದು ಯುಕ್ತವಲ್ಲ. ನಮ್ಮ ಪರಿಮಿತವಾದ ಅನುಭವಗಳೇ, ಎಲ್ಲರಿಗೂ ಪ್ರಮಾಣವಾಗಿ ಎಲ್ಲರ ಅನುಭವಗಳ ಮಟ್ಟಗಳೂ ಅಷ್ಟೇ ಆಗಿರಬೇಕಾದುದಿಲ್ಲ. ಸೌಂದರ್ಯವೆಂಬುದು ಅರ್ಥ ವಿಲ್ಲದ ಮಾತೆಂದೂ, ಸಂಗೀತವು ಕೋಟಲೆಪಡಿಸುವ ಸದ್ದೆಂದೂ ಭಾವಿಸು ವವರೂ ಅನೇಕರಿದ್ದಾರೆ. ಆದಮಾತ್ರಕ್ಕೇ ಕಲಾವಿದನು ಸಂಗೀತ

* "If one were to turn to any great philosophy or any great system of thought upon which could be built up a harmony between races, a harmony between conflicting thoughts where could one go to find it more readily than to the great philosophies of India itself, those philosophies where brotherhood is inculcated, where peace and harmony and co-operation are enjoined, those philosophies which look at the world not in a mere abstract way but as something essentially composed of differences than a mere uniformity of thought or action." —Right Honourable Ramsay Macdonald.

† "For a long time to come the intensest joy which man can know on earth will be derived from supplementing ideals of Europe by the ideals of Asia."—Romain Rolland.

ಸುಧೆಯನ್ನು ಸವಿಯುವನೆಂಬುದೇ ಸುಳ್ಳೆನ್ನುವಹಾಗಿಲ್ಲ......ಮತ ಧರ್ಮಗಳನ್ನು ಅನುಷ್ಠಾನಕ್ಕೆ ತಂದುಕೊಂಡು ಸಿದ್ಧಿಹೊಂದುವುದೆಂಬುದೆಲ್ಲ ಬುದ್ಧಿಭ್ರಮಣೆಯ ಮಾತೆನ್ನುವುದಾದರೆ, ಅದು ವಾಸ್ತವ ಸ್ಥಿತಿಗೆ ವಿರುದ್ಧವಾದ ಮಾತು. ಏಕೆಂದರೆ, ಹಾಗೆ ಸಿದ್ಧಿಹೊಂದಿದ ಮಹಾ ಪುರುಷರಲ್ಲಿ ಕೆಲವರು ಅಸಾಧಾರಣ ಮೇಧಾ ಶಕ್ತಿಯುಳ್ಳವರೂ, ಮರ್ಮಜ್ಞರಾದ ವಿವೇಚನಾ ಶೀಲರೂ ಮತ್ತು ದಕ್ಷರಾದ ಕಾರ್ಯ ಸಾಧನಪಟುಗಳೂ ಎನಿಸಿದವರು."* ಇಂದು ಒಟ್ಟು ಪ್ರಪಂಚದಲ್ಲೇ ಪ್ರಸಿದ್ಧರಾದ ವೈಜ್ಞಾನಿಕ ಸಂಶೋಧಕರಲ್ಲೊಬ್ಬರಾದ ಸರ್ ಜೇಮ್ಸ್ ಜೀನ್ಸ್‌ರವರು, "ಮಾನವನು ಆತ್ಮದಮನ ಶಕ್ತಿಯನ್ನು ಪಡೆಯುವುದಕ್ಕೆ ಮುಂಚಿತವಾಗಿಯೇ ವಿಜ್ಞಾನವು ಪ್ರಕೃತಿಯಮೇಲೆ ಅಧಿಕಾರ ಪ್ರದರ್ಶನ ಮಾಡುವ ಸಾಮರ್ಥ್ಯವನ್ನು ಅವನಿಗೆ ಕೊಟ್ಟುಬಿಟ್ಟಿದೆ. ಹೀಗೆ, (ಜ್ಞೇಯವಾದ) ಬಾಹ್ಯವಸ್ತು ಪರಿಜ್ಞಾನ ಸಂಬಂಧವಾದ ತಿಳಿವಳಿಕೆಯು ಹೆಚ್ಚಿರುವ ವಿಷಯದಲ್ಲಿ ಮಾತ್ರ ಪ್ರತಿಯೊಂದು ಪೀಳಿಗೆಯವರೂ ತಮ್ಮ ಹಿಂದಿನ ಪೀಳಿಗೆಯವರಿಗಿಂತ ಮುಂದುವರಿದು ಅವರ ತಲೆಗಳನ್ನು ಮೆಟ್ಟಿ ನಿಂತಿದ್ದರೂ, ಮಾನವನು (ಜ್ಞಾತೃವಾದ) ತನ್ನನ್ನು ತಿಳಿದುಕೊಳ್ಳುವ ವಿಚಾರದಲ್ಲಿ ಮಾತ್ರ ಪ್ರತಿಯೊಂದು ಪೀಳಿಗೆಯವರೂ ಸ್ವಲ್ಪವೂ ಮುಂದು ವರಿಯದೆ ಎಲ್ಲರೂ ಒಂದೇ ಮಟ್ಟದಲ್ಲೇ ನಿಂತಿದ್ದಾರೆ......ಮಾನವನ ದೀರ್ಘಕಾಲದ ಇತಿಹಾಸದಲ್ಲಿ ಕಡೆಗೆ ಇಷ್ಟು ದಿನಗಳ ಮೇಲಾದರೂ ಮಾನವನು 'ನಿನ್ನನ್ನು ನೀನು ತಿಳಿ' ಎಂಬ ನಿರೂಪಕ್ಕೆ ತಲೆ ಬಾಗಿ ವರ್ತಿಸಲನುಕೂಲಿಸುವುದೆಂಬ ಭರವಸೆಯನ್ನು ಮನಶ್ಶಾಸ್ತ್ರವು ನೀಡುವು ದಾಗಿದೆ"† ಎಂದು ಹೇಳಿ ವಿಜ್ಞಾನದ ದೆಸೆಯಿಂದ ಪಾಶ್ಚಾತ್ಯ ದೇಶಗಳ ಲ್ಲಾಗಿರುವ ಅನರ್ಥಗಳಿಗಾಗಿ ವ್ಯಥೆಪಟ್ಟಿದ್ದಾರೆ. ಅವರು ಕೂಡ ಬಹಳ ವಾಗಿ ಬಯಸುವಂತೆ ಮಾನವನು ಆತ್ಮದಮನ ಮಾಡುವುದಕ್ಕಾಗಲಿ,

---

* "Simply because there are persons to whom religious experience is unknown, we cannot say that it is unreal or impossible. Our limited experiences are not the standard for all. There are many for whom beauty is a word and music only a noise, but that does not mean that there is no reality in the artist's experience.. To suggest that men who have religious experience are mental invalids is inconsistent with the well-known fact that some of the greatest mystics are men of remarkable intellectual power, shrewd discrimination and practical ability."—Sir S. Radhakrishnan.

† "Science has given man control over Nature before he has gained control over himself. Thus in respect of knowledge, each generation stands on the shoulders of its predecessors; but in respect of himself both stand on the same ground..... ..Psychology holds out a hope that for the first time in his long history man may be enable to obey the command, Know Thyself."—Sir James Jeans.

ಜ್ಞಾತೃಸಾಕ್ಷಾತ್ಕಾರ ಪಡೆಯುವುದಕ್ಕಾಗಲಿ, ಭಾರತೀಯ ದರ್ಶನಗಳ ಆಶಯವಾದ ಪರಮಾರ್ಥವನ್ನರಿತು ಅನುಷ್ಠಾನಕ್ಕೆ ತರುವುದರಷ್ಟು ಶ್ರೇಷ್ಠವಾದ ಮಾರ್ಗವು ಈ ಪೃಥ್ವಿಯಲ್ಲಿ ಮತ್ತೊಂದಿಲ್ಲ. ಅನುಷ್ಠಾನ ದಿಂದ ಸಿದ್ಧರಾಗುವ ಮಹಾಪುರುಷರಾದ ಸಾಧಕ ಶ್ರೇಷ್ಠರ ವಿಚಾರವೂ ಹಾಗಿರಲಿ. ಉಪನಿಷತ್ತುಗಳು, ಬ್ರಹ್ಮಸೂತ್ರ, ಭಗವದ್ಗೀತೆ, ಮುಂತಾ ದುವುಗಳನ್ನು ಆಸ್ಥೆಯಿಂದ ಒಮ್ಮೆ ಓದಿದರೆ ಕೂಡ ಆತ್ಮವಿಕಾಸದ ಸುವರ್ಣದ್ವಾರವು ತೆರೆಯುತ್ತದೆ. ವೈಜ್ಞಾನಿಕ ಸಂಶೋಧನಕ್ಕಾಗಿ ನೊಬೇಲ್ ಪಾರಿತೋಷಕವನ್ನು ಪಡೆದ ಪ್ರತಿಭಾಶಾಲಿಗಳಾದ ಪಾಶ್ಚಾತ್ಯ ರಲ್ಲೇ ಒಬ್ಬರು ವೇದದ ಕೆಲವು ಋಕ್ಕುಗಳ ವಿಷಯವನ್ನು ಪ್ರಸ್ತಾವಿಸಿ ಅವು ವೈಜ್ಞಾನಿಕ ದೃಷ್ಟಿಯಿಂದ ಅದ್ಭುತವಾಗಿರುವುದಲ್ಲದೆ, ಇನ್ನೂ ಹತ್ತಾರು ಶತಮಾನಗಳ ಕಾಲ ವೈಜ್ಞಾನಿಕ ಸಂಶೋಧನ ನಡೆದರೂ ಅವು ಆಗಲೂ ಸರಿಹೊಂದಿ ಮುನ್ನಡೆಯಲ್ಲಿರುವುವೆಂದು ಕೊಂಡಾಡಿದ್ದಾರೆ.

ಆಳಿದ ಮಹಾಸ್ವಾಮಿಯವರಾದ ಶ್ರೀಮನ್ಮಹಾರಾಜ ಶ್ರೀಮನ್ನಾಲ್ವಡಿ ಶ್ರೀ ಕೃಷ್ಣರಾಜೇಂದ್ರ ಒಡೆಯರವರು ದಯಪಾಲಿಸಿದ ಒಂದು ಭಾಷಣದಲ್ಲಿರುವ "......ಜ್ಞಾನ ಭಂಡಾರದ ಪರಿಪೂರ್ಣತೆಗೆ ವಿಜ್ಞಾನಶಾಸ್ತ್ರ ಲಬ್ಧವಾದ ಬಾಹ್ಯವಸ್ತು ಪರಿಜ್ಞಾನವೊಂದೇ ಸಾಲದು. ಬಾಹ್ಯ ಜಗತ್ತಿನ ವಿವಿಧ ವ್ಯಾಪಾರಗಳಿಗೂ ಸಾಕ್ಷಿಸ್ವರೂಪನಾಗಿರುವ ಅಂತರಾತ್ಮನ ವಿಷಯವನ್ನು ತಿಳಿದುಕೊಳ್ಳುವುದೂ ಅತ್ಯಾವಶ್ಯಕ. ಈ ಬಾಹ್ಯ ವಸ್ತು ಪರಿಜ್ಞಾನಕ್ಕೆ ಅಧಿಷ್ಠಾತೃವಾದ ಜ್ಞಾತೃವನ್ನೇ ಸಾಕ್ಷಾತ್ಕಾರ ಮಾಡಿಕೊಡುವುದಕ್ಕೆ ಆತ್ಮವಿದ್ಯೆಯ ಮೂಲಕ ಸಂಸ್ಕೃತ ಭಾಷೆಯು ದಾರಿ ತೋರಿಸಿಕೊಡುತ್ತದೆ. ಇಂತಹ ಕಾರ್ಯವು ಮತ್ತಾವ ಸಾಹಿತ್ಯ ದಿಂದಲೂ ಇಷ್ಟರಮಟ್ಟಿಗೆ ನಡೆಯಲಾರದು. ಈ ವಿದ್ಯೆಯನ್ನು ಶುಷ್ಕ ವಿದ್ಯೆಯೆಂದು ತಿರಸ್ಕರಿಸುವಹಾಗಿಲ್ಲ. ಇದು ಪರಾತ್ಪರವೆನಿಸುವ ಅತಿ ಶ್ರೇಷ್ಠ ವಿದ್ಯೆ......ಇಂದಿನ ಪ್ರಪಂಚಕ್ಕೆ ಬೇಕಾಗಿರುವುದು ಸಂಸ್ಕೃತ ದಲ್ಲಿ ಉಕ್ತವಾಗಿರುವ ಉದಾತ್ತವಾದ ಪಾರಮಾರ್ಥಿಕ ತತ್ತ್ವ ವಿಚಾರ. ಇದನ್ನು ಮತ್ತಾವ ವಿದ್ಯೆಯಾಗಲಿ, ಮತ್ತಾವ ಸಾಹಿತ್ಯವಾಗಲಿ ಇಷ್ಟು ವಿಶದವಾಗಿ ಹೇಳಿಲ್ಲ. ಜಗತ್ಕಲ್ಯಾಣ ಸಾಧನೆಯನ್ನು ಗುರಿಯಾಗಿಟ್ಟು ಕೊಳ್ಳದೆ ವಿಜ್ಞಾನವನ್ನೂ ಅಧಿಕಾರವನ್ನೂ ದುರುಪಯೋಗಪಡಿಸುತ್ತ ಬಂದುದರ ಫಲಿತಾಂಶವಾಗಿ ಇಂದಿನ ತೊಂದರೆಗಳು ಉತ್ಕಟಾವಸ್ಥೆಗೆ ಬಂದಿವೆ. ಬ್ರಹ್ಮಸಾಕ್ಷಾತ್ಕಾರದಿಂದ ಶಾಂತಿ ಸೌರಭವನ್ನೂ ಸಮದರ್ಶಿ ತ್ವವನ್ನೂ ಅನುಸಂಧಾನಮಾಡಿ ಧನ್ಯರಾಗಬೇಕೆಂಬುದಾಗಿ ಬೋಧಿಸುವ



ಆಳಿದ ಮಹಾಸ್ವಾಮಿಯವರು ಮೋಟಾರು ಬಂಡಿಯಿಂದ
ಇಳಿಯುತ್ತಿರುವುದು



ಶ್ರೀ ಚಾಮುಂಡೇಶ್ವರೀ ದೇವಿಯವರ ಸನ್ನಿಧಿಯಲ್ಲಿ

ಗೀರ್ವಾಣ ವಿದ್ಯೆಯಿಂದಲೇ ಅವುಗಳೆಲ್ಲವೂ ಪರಿಹಾರವಾಗಿ ಜನತೆಗೆ ನಿತ್ಯಸುಖವು ಲಭಿಸಬೇಕು" ಎಂಬ ನುಡಿಗಳು ಸೆಳೆಮಿಂಚುಗಳಂತಿವೆ.

ಆಳಿದ ಮಹಾಸ್ವಾಮಿಯವರು ಪ್ರಪಂಚದ ಸಮಸ್ತ ಶ್ರೇಷ್ಠ ಮತಗಳ ಸಾರವನ್ನೂ ಗ್ರಹಿಸಿ, ವೇದಾಂತ ತತ್ತ್ವಗಳನ್ನು ಕರತಲಾಮಲಕ ಮಾಡಿಕೊಂಡು, ಅನುಷ್ಠಾನ ಪರ್ಯವಸಾಯಿ

**ಧರ್ಮಾಭಿಮಾನ**

ಯಾದ ಜ್ಞಾನವನ್ನು ಸ್ವಾಧೀನಪಡಿಸಿಕೊಂಡಿದ್ದ ಸನಾತನ ಧರ್ಮಾವಲಂಬಿಗಳಾಗಿದ್ದರು. ಮಹಾ ಪ್ರಭುಗಳವರು ತಮ್ಮ ಭಾಷಣದಲ್ಲಿ ಅಪ್ಪಣೆ ಕೊಡಿಸಿರುವಂತೆ "ಸನಾತನ ಧರ್ಮವು ನಮಗೆ ಆರ್ಷೇಯವಾಗಿ ನಮ್ಮ ಹಿರಿಯರಿಂದ ಅನುಗ್ರಹಿಸ ಲ್ಪಟ್ಟಿರುವ ಅನರ್ಘ್ಯ ಭಂಡಾರವಾಗಿದೆ."

ಒಬ್ಬನೇ ಆದ ಈಶ್ವರನಿಗೆ ಸಗುಣೋಪಾಸನೆಯ ಘಟ್ಟದಲ್ಲಿ ಉಪಾಸಕರ ಅಧಿಕಾರಭೇದ ಮತಭೇದಗಳಿಗೆ ತಕ್ಕಂತೆ ವಿವಿಧ ನಾಮರೂಪ ಗಳು ಕಲ್ಪಿತವಾಗಿ ಆರಾಧನೆಯು ನಡೆಯುವುದೂ ಸರಿ; ವ್ಯಾವಹಾರಿಕ ದೃಷ್ಟಿಯಿಂದ ಆ ರೀತಿ ನಡೆಯಲೇಬೇಕು. ಅದ್ವೈತ ಮತ ಪ್ರತಿಷ್ಠಾಪನಾ ಚಾರ್ಯರಾದ ಶ್ರೀ ಶಂಕರಾಚಾರ್ಯರು ಸಹ ವ್ಯಾವಹಾರಿಕದೃಷ್ಟಿ ಯಿಂದ ಜೀವೇಶ್ವರ ಭೇದಪ್ರಪತ್ತಿಗೂ ಯಥೇಷ್ಟವಾಗಿ ಅವಕಾಶವನ್ನು ಕಲ್ಪಿಸಿ, ಭಕ್ತಿಗೆ ಸಾಧ್ಯವಾಗದಿರುವುದಾವುದೂ ಇಲ್ಲವೆಂದು ನಿರೂಪಿಸಿ ದ್ದಾರೆ. ಈಶ್ವರನನ್ನು ಯಾವ ನಾಮರೂಪಗಳಿಂದ ಆರಾಧಿಸಿದರೂ ಆ ಆರಾಧನೆಯೆಲ್ಲ ಪರಾತ್ಪರವಸ್ತುವಾದ ಒಬ್ಬ ಭಗವಂತನಿಗೇ ಸಲ್ಲುವು ದೆಂಬುದು ಸನಾತನ ಧರ್ಮದ ಪರಮತತ್ತ್ವಗಳಲ್ಲೊಂದು.

ಆಳಿದ ಮಹಾಸ್ವಾಮಿಯವರು ಶ್ರೀನಗರದಲ್ಲಿ ಶ್ರೀಕೃಷ್ಣ ಜನ್ಮಾ ಷ್ಟಮಿಯ ಶುಭ ದಿನ ಸಮರ್ಪಿತವಾದ ವಿಜ್ಞಾಪನಾ ಪತ್ರಿಕೆಗೆ ಪ್ರತ್ಯುತ್ತರ ವಾಗಿ ದಯಪಾಲಿಸಿದ ಭಾಷಣದಲ್ಲಿರುವ ನುಡಿಗಳಿವು: "....ಇದು ಪರಮ ಪವಿತ್ರವಾದ ಮತ್ತು ಮಂಗಳಕರವಾದ ಮಹೋತ್ಸವದ ದಿನ. ಶ್ರೀ ಕೃಷ್ಣಪರಮಾತ್ಮನು ಲೋಕೋದ್ಧಾರಕ್ಕಾಗಿ ಜನ್ಮಗ್ರಹಣ ಮಾಡಿ ದುದನ್ನು ಸೂಚಿಸುವ ಕೃಷ್ಣಾಷ್ಟಮಿಯಲ್ಲವೇ ಇದು! ಆತನ ಜನ್ಮ ವೃತ್ತಾಂತವೂ, ಆತನ ಲೀಲಾವಿಭೂತಿಯೂ, ಆತನ ಕಲ್ಯಾಣಗುಣಗಳೂ ಇಂದು ನಮ್ಮ ಸ್ಮೃತಿಪಥಕ್ಕೆ ಬಂದು, ನಮ್ಮ ಮನಸ್ಸು ಭಕ್ತಿಪಾರವಶ್ಯ ದಿಂದ ಆತನ ಅನಂತ ಗುಣಗಳ ಧ್ಯಾನದಲ್ಲೇ ಮಗ್ನವಾಗುವುದು ಸಹಜ ವಾಗಿಯೇ ಇದೆ. ಆ ಪರಮಾತ್ಮನ ಅಖಂಡವೈಭವವುಳ್ಳ ಪರಿಪೂರ್ಣತೆ ಯನ್ನು ಪಡೆಯುವುದು ನಮಗೆ ಅಸಾಧ್ಯವಾಗಿರಬಹುದು; ಅಥವಾ

ಅಂತಹ ಸಿದ್ಧಿಯನ್ನು ಪಡೆಯುವೆವೆಂದು ಸ್ವಪ್ನದಲ್ಲಿ ಯೋಚಿಸುವುದು ಕೂಡ ಅಧಿಕಪ್ರಸಂಗತನವೆನಿಸಬಹುದು. ಆದಾಗ್ಗೂ ಆ ಮಹಾನುಭಾವನು ಸಾಧಿಸಿದ ಮಹತ್ತರ ಕಾರ್ಯಗಳ ಮೇಲುಪಙ್ತಿಯನ್ನನುಸರಿಸುವುದು; ಗೀತಾಚಾರ್ಯನಾದ ಆ ಪರಮಪುರುಷನು ಅನುಗ್ರಹಿಸಿರುವ ಭಗವದ್ಗೀತೋಕ್ತ ತತ್ತ್ವಾರ್ಥಗಳನ್ನರಿತುಕೊಳ್ಳುವುದು; ಆ ಪರಮಾತ್ಮನನ್ನೇ ಆದರ್ಶವಾಗಿಟ್ಟುಕೊಂಡು ಕಾರ್ಯಕ್ಷೇತ್ರದಲ್ಲಿ ಯಥಾಶಕ್ತಿಯಾಗಿ ಪ್ರವರ್ತಿಸುವುದು; ಮತ್ತು ಜ್ಞಾನಯೋಗದಿಂದ ಬ್ರಹ್ಮಸಾಕ್ಷಾತ್ಕಾರವನ್ನು ಪಡೆಯುವುದಕ್ಕೆ ಅತ್ಯವಶ್ಯವಾಗಿ ಬೇಕಾದ ಆತ್ಮಪಾರಿಶುದ್ಧ್ಯವನ್ನು ಹೊಂದುವುದು; ಈ ಭಾಗದಲ್ಲಿ ನಾವು ಯಥಾಶಕ್ತಿಯಾಗಿ ಪ್ರಯತ್ನಗಳನ್ನಾದರೂ ನಡೆಯಿಸಿ ಚರಿತಾರ್ಥರಾಗಬಹುದಾಗಿದೆ.'' ಮಹಾಪ್ರಭುಗಳವರು ತಮ್ಮ ಧ್ಯೇಯವಾಗಿಟ್ಟುಕೊಂಡಿದ್ದ ಅಮೋಘಭಾವನೆಗಳನ್ನು ಈ ವಾಣಿಗಳು ಬಹಳ ಚೆನ್ನಾಗಿ ವ್ಯಕ್ತಗೊಳಿಸುತ್ತವೆ.

ಆಳಿದ ಮಹಾಸ್ವಾಮಿಯವರಿಗೆ ಜ್ಞಾನಯೋಗದಲ್ಲಿ ಆಸಕ್ತಿಯಿದ್ದರೂ ಅನನ್ಯಸುಲಭವಾದ ಕರ್ಮಾನುಷ್ಠಾನವನ್ನೂ ಇಟ್ಟುಕೊಂಡು ಇತರರಿಗೆ ಆದರ್ಶಪ್ರಾಯರಾಗಿದ್ದರು. ಶೃಂಗೇರಿಯ ಗುರುಗಳಿಂದ ಉಪದೇಶ ಪಡೆದು ಶ್ರೀವಿದ್ಯೋಪಾಸನೆಗೆ ಪ್ರಾರಂಭಿಸಿದಾಗ ತರುಣವಯಸ್ಕರಾಗಿದ್ದ ಪ್ರಭುಗಳವರು ಒಂದು ಮಂಡಲ ಕಾಲ ಬೆಳಗ್ಗೆ ಆರು ಘಂಟೆಯಿಂದ ರಾತ್ರಿಯವರೆಗೂ ನಿರಾಹಾರದಿಂದಿದ್ದು ಜಪ ಮಾಡಿ ಕನ್ಯಾಪೂಜೆ ಮಾಡಿ ರಾತ್ರಿಯ ವೇಳೆ ಮಾತ್ರ ಭೋಜನ ಮಾಡುತ್ತಿದ್ದರು. ಒಂದು ಸಲ ಶೃಂಗೇರಿಗೆ ದಯಮಾಡಿದ್ದಾಗ ಪರಿವಾರದವರಿಗೆಲ್ಲ ಭೋಜನಕ್ಕೆ ಅನುಜ್ಞೆ ಕೊಟ್ಟು ತಾವು ಬೆಳಗ್ಗೆ ಆರು ಘಂಟೆಯಿಂದ ರಾತ್ರಿ ಒಂಬತ್ತು ಘಂಟೆಯವರೆಗೂ ಜಪಮಾಡಿ, ಅನಂತರ ಒಂದೆರಡು ಹಣ್ಣುಗಳನ್ನು ತಿಂದು ನಿದ್ರಿಸುತ್ತಿದ್ದರು. ಚಾಮುಂಡೀ ಬೆಟ್ಟದಲ್ಲಿ ಜಪಕಾಲದಲ್ಲಿ ಚಿತ್ತೈಕಾಗ್ರತೆಯಿಂದ ಬೇಸಗೆಯ ಉರಿಬಿಸಿಲಿನಲ್ಲಿ ಕಾಯ್ದ ಬಂಡೆಯಮೇಲೆ ಕುಳಿತು ಮೈಮರೆತು ಅವರು ಶ್ರೀ ರಾಜರಾಜೇಶ್ವರೀ ದೇವಿಯ ಧ್ಯಾನಮಗ್ನರಾಗಿದ್ದ ಅಸಂಖ್ಯಾತ ನಿದರ್ಶನಗಳುಂಟು. ಜ್ವರ ಬಂದು ಹಿಂಸೆಯಾಗಿದ್ದಾಗ ಕೂಡ ಸ್ನಾನ ಸಂಧ್ಯಾವಂದನಾದಿ ನಿತ್ಯ ಕರ್ಮಗಳನ್ನು ಅವರು ಬಿಟ್ಟವರಲ್ಲ. ಜ್ವರದಿಂದ ಪೀಡಿತರಾಗಿ ಆ ರೀತಿ ಸ್ನಾನ ಸಂಧ್ಯಾವಂದನಾದಿ ಕರ್ಮಗಳನ್ನು ಪೂರೈಸಿ ಪಾರಾಯಣ ಮಾಡುತ್ತ ಕುಳಿತಿದ್ದ ಒಂದು ದಿನ ಧರ್ಮಾಧಿಕಾರಿಗಳವರು ಶೃಂಗೇರಿಯಿಂದ ಬಂದಿದ್ದ ಪ್ರಸಾದವನ್ನು ತಂದಿದ್ದರು. ಅದನ್ನು

**ಕರ್ಮಶ್ರದ್ಧೆ**



ಶ್ರೀ ಚಾಮುಂಡೇಶ್ವರೀ ರಥೋತ್ಸವ ಕಾಲದಲ್ಲಿ

(ಶ್ರೀಮನ್ಮಹಾರಾಜರವರ ಅಸಿಸ್ಟೆಂಟ್ ಸೆಕ್ರೆಟರಿಯವರಾದ ರಾಜಸೇವಾಸಕ್ತ ಶ್ರೀಮಾನ್ ಎಂ. ರಾಮರಾಯರವರೂ, ಡೆಪ್ಯುಟಿ ಕಮಿಷನರವರಾದ ಶ್ರೀಮಾನ್ ಕೆ. ಸುಬ್ಬರಾಯರವರೂ ಮತ್ತು ಆಗ್ಗೆ ಮೈಸೂರು ಡಿಸ್ಟ್ರಿಕ್ಟುಬೋರ್ಡು ಪ್ರೆಸಿಡೆಂಟರವರಾಗಿದ್ದ ಶ್ರೀಮಾನ್ ಬಿ. ಎಸ್. ಪುಟ್ಟಸ್ವಾಮಿಯವರೂ ಆಳಿದ ಮಹಾಸ್ವಾಮಿಯವರ ಆಗಮನವನ್ನು ನಿರೀಕ್ಷಿಸುತ್ತಿರುವುದು)



ಶ್ರೀ ಚಾಮುಂಡೇಶ್ವರೀ ರಥೋತ್ಸವ ಕಾಲದಲ್ಲಿ

(ಆಳಿದ ಮಹಾಸ್ವಾಮಿಯವರು ಈಗಿನ ಮಹಾಪ್ರಭುಗಳವರೊಡನೆ ದಯಮಾಡುತ್ತಿರುವುದು)

ಸ್ವೀಕರಿಸಲು ಅವರು ಭಕ್ತಿಯಿಂದ ಧಿಗ್ಗನೆ ಎದ್ದು ನಿಂತಾಗ, ತಕ್ಕಷ್ಟು ತ್ರಾಣವಿಲ್ಲದಕಾರಣ ವ್ಯೆ ತೂರಿಕೊಂಡುಹೋಗಿ ಕೆಳಕ್ಕೆ ಬೀಳುವುದ ರಲ್ಲಿದ್ದರು. ಶ್ರಾದ್ಧಕಾಲದಲ್ಲಿ ನಿಮಂತ್ರಿತರ ಪಾದಪ್ರಕ್ಷಾಳನವನ್ನು ಅರಮನೆಯ ಪೂರ್ವಪದ್ಧತಿಯಂತೆ ಋತ್ವಿಕ್ಕುಗಳ ಕೈಯಿಂದ ಮಾಡಿಸದೆ, ತಾವೇ ನೆರವೇರಿಸುತ್ತಿದ್ದರು. ಉಪಾಕರ್ಮದ ದಿನ ಸಪ್ತರ್ಷಿಗಳ ಪೂಜೆ ಮುಂತಾದ ಸಮಸ್ತ ಕರ್ಮಗಳನ್ನೂ ಅವರು ತಾವೇ ಸ್ವಂತವಾಗಿ ನೆರವೇರಿ ಸುತ್ತಿದ್ದರು. ದೇವತಾರ್ಚನೆ ಮುಂತಾದ ಸಮಸ್ತ ಕರ್ಮಗಳನ್ನೂ ತಾವೇ ಮಂತ್ರಗಳನ್ನು ಹೇಳಿಕೊಂಡು ನೆರವೇರಿಸುತ್ತಿದ್ದರು. ಉಜ್ಜ್ವಲ ಭಕ್ತಿಯಿಂದ ಕೂಡಿ ಶ್ರೀ ಚಾಮುಂಡೇಶ್ವರೀ ರಥವನ್ನು ಇತರರೊಡನೆ ತಾವೂ ಎಳೆಯುತ್ತಿದ್ದರು. ಚಾಮುಂಡೇಶ್ವರೀ ದೇವಿಯವರ ತೆಪ್ಪೋತ್ಸವ, ಅಂಧಕಾಸುರ ವಧೆ ಮುಂತಾದ ಉತ್ಸವಗಳು ಚಿತ್ತಾಕರ್ಷಕವಾಗಿದ್ದು ಮಹಾಜನರಿಗೆ ಸಂತೋಷವುಂಟಾಗುವಂತೆ ಅವರು ಪ್ರತಿ ವರ್ಷವೂ ವಿಧವಿಧದ ಮೇಲ್ಪಾಟುಗಳನ್ನು ಮಾಡಿಸುತ್ತಿದ್ದರು. ಅವರು ಅನೇಕ ದೇವಾಲಯಗಳಿಗೆ ರತ್ನಖಚಿತವಾದ ಆಭರಣಗಳು, ಚಿನ್ನದ ಕೊಳಗಗಳು, ನಾಗಾಭರಣಗಳು ಮುಂತಾದುವುಗಳನ್ನು ಕೊಟ್ಟಿದ್ದಾರೆ. ಅವುಗಳನ್ನು ಕೊಡುವಲ್ಲಿ ಸಹ, ಅವುಗಳು ಅತ್ಯಂತ ಅಂದವಾಗಿ ಕಾಣುವವರೆಗೂ ಮತ್ತೆ ಮತ್ತೆ ಸರಿಮಾಡಿಸಿ ಶ್ರದ್ಧೆ ತೋರಿಸಿ, ತೃಪ್ತಿಕರವಾಗಿ ತೋರಿದಮೇಲೆ ಮಾತ್ರವೇ ಸಮರ್ಪಿಸಿದ್ದಾರೆ.

ಅನೇಕ ವರ್ಷಗಳ ಕಾಲ ಸಂತತವಾಗಿ ನಡೆದ ಸಾಧನಾನುಷ್ಠಾನಗಳ ಪರಿಣಾಮವಾಗಿ, ಆಳಿದ ಮಹಾಸ್ವಾಮಿಯವರಲ್ಲಿ ಅಹಂಕಾರ ಮಮಕಾರ ಗಳ ಲವಲೇಶವೂ ಇಲ್ಲದೆ ಸರ್ವಸಮತಾಭಾವವೂ ಅಚಲಭಕ್ತಿಯೂ ಭಕ್ತಿನಮ್ರತೆಯ ಮನೋಧರ್ಮವೂ ನೆಲಸಿದ್ದುವು. ಬಲಿಪಾಡ್ಯಮಿಯ ದಿನ ರಾತ್ರಿ ಬಲೀಂದ್ರ ವಿಗ್ರಹವನ್ನು ಭದ್ರಾಸನಕ್ಕೆ ಬಿಜಯಮಾಡಿಸಿ ಬಲೀಂದ್ರನ ದರ್ಬಾರಿನಲ್ಲಿ ಅವರು ಕೈ ಮುಗಿದು ತಲೆ ಬಾಗಿ ಮುಜರೆ ಮಾಡಿದ ಬಳಿಕ, ರಾಜಬಂಧುಗಳೆಲ್ಲರೂ ಮತ್ತು ಇತರ ಅಧಿಕಾರಿಗಳೂ ಬಲೀಂದ್ರ ವಿಗ್ರಹಕ್ಕೆ ಮುಜರೆ ಮಾಡುತ್ತಿದ್ದರು. ಅಂದು, ಆಳಿದ ಮಹಾ ಸ್ವಾಮಿಯವರಿಗೆ ಮುಜರೆ ಮುಂತಾದ ಮರ್ಯಾದೆಗಳಾವುವೂ ನಡೆಯ ಕೂಡದೆಂದು ಅವರೇ ಅಪ್ಪಣೆ ಮಾಡಿದ್ದರು.

ಚಾಮುಂಡೀಬೆಟ್ಟಕ್ಕೆ ಮಾಡಿಸಿರುವ ಮಾರ್ಗದಲ್ಲಿ ಹೋಗಿ ಲಲಿತಾದ್ರಿ ಯನ್ನು ಸೇರಿದಾಗ ಮೊಟ್ಟಮೊದಲು ಕಣ್ಣಿಗೆ ಬೀಳುವುದು, "ಯತ್ರೈವ ಯತ್ರೈವ ಮನೋಮದೀಯಂ। ತತ್ರೈವ ತತ್ರೈವ ತವ ಸ್ವರೂಪಮ್ ॥

ಯತ್ರೈವ ಯತ್ರೈವ ಶಿರೋಮದೀಯಂ। ತತ್ರೈವ ತತ್ರೈವ ಪದದ್ವಯಂ ತೇ॥" ಎಂಬ ಶ್ಲೋಕರತ್ನ. ಅಲ್ಲಲ್ಲಿ ಸುತ್ತಮುತ್ತಲೂ ಬಂಡೆಗಳಮೇಲೆ ಕೆತ್ತಿಸಿರುವ ಲಲಿತಾ ಸ್ತೋತ್ರದ ಇತರ ಶ್ಲೋಕಗಳು. ಶ್ರೀ ಚಾಮುಂಡೇಶ್ವರೀ ದೇವಾಲಯವನ್ನು ಪ್ರವೇಶಿಸಿದರೆ, ಗರ್ಭಗುಡಿಯ ಗೋಡೆಯಮೇಲೆ, ಭಕ್ತಿಭಾವಪರಿಪೂರಿತಲೋಚನರಾಗಿರುವ ಮಹಾಪ್ರಭುಗಳ ಚಿತ್ರಪಟ. ಅದರಲ್ಲಿ ಭಕ್ತಿಸುಧಾಪೂರ್ಣವಾದ ಶ್ಲೋಕರೂಪದ* ಬಿನ್ನಪ. ಅನನ್ಯ ಶರಣಭಾವನೆಯ ಭಕ್ತಿಯಿಂದ ಚಿತ್ತವು ದೇವಿಯ ಪದಪದ್ಮಗಳಲ್ಲಿ ನೆಲಸುವಂತೆ ಕೃಪೆಮಾಡಬೇಕೆಂಬ ದೇವೀ ಪ್ರಾರ್ಥನೆಯೇ ಆ ಶ್ಲೋಕ.

**ಯಾತ್ರೆಗಳು**

ಆಳಿದ ಮಹಾಸ್ವಾಮಿಯವರು ಆಸೇತು ಹಿಮಾಚಲ ಪರ್ಯಂತವಾಗಿರುವ ಸಮಸ್ತ ಪುಣ್ಯಕ್ಷೇತ್ರಗಳಿಗೂ ಅನೇಕ ಸಾರಿ ಯಾತ್ರಾರ್ಥವಾಗಿ ದಯಮಾಡಿದ್ದರು. ಹಾಗೆ ಯಾತ್ರಾರ್ಥವಾಗಿ ದಯಮಾಡಿದಾಗ್ಗೆ ಶಾಸ್ತ್ರೋಕ್ತವಾದ ಕ್ಷೇತ್ರವಿಧಿಗಳನ್ನೆಲ್ಲ ಲೇಶಮಾತ್ರವೂ ಲೋಪವಿಲ್ಲದಂತೆ ಸಾಂಗವಾಗಿ ನೆರವೇರಿಸುತ್ತಿದ್ದುದು ಮಹಾಸ್ವಾಮಿಯವರ ವಾಡಿಕೆ. ತಣ್ಣೀರು ಸ್ನಾನ, ಉಪವಾಸ, ಜಪ, ವಿಶೇಷ ಪೂಜೆಗಳು ಮುಂತಾದುವುಗಳೆಲ್ಲ ಯಥಾವಿಧಿಯಾಗಿ ನಡೆಯುತ್ತಿದ್ದುವು. ಮಹಾಪ್ರಭುಗಳವರ ದೈವಭಕ್ತಿಯನ್ನೂ ಕರ್ಮಶ್ರದ್ಧೆಯನ್ನೂ ಕಂಡು ಸಮಸ್ತರೂ ವಿಸ್ಮಿತರಾಗುತ್ತಿದ್ದರು. ಮೇಲಾಗಿ, ಭಾರತೀಯ ಸಂಸ್ಥಾನಾಧೀಶರುಗಳಲ್ಲಿ ಮತ್ತಾರೂ ಮಾಡದಿರುವ ಕೈಲಾಸಪರ್ವತ ಮಾನಸ ಸರೋವರಗಳ ಯಾತ್ರೆಯನ್ನು ಮಾಡಿದರು. ಕೆಲವು ಯಾತ್ರೆಗಳ ವಿಚಾರವನ್ನು ಮುಂದೆ ಅತಿ ಸಂಕ್ಷೇಪವಾಗಿ ಸೂಚಿಸಲಾಗುವುದು. ಮಹಾಪ್ರಭುಗಳವರು ನಾನಾ ಆಹ್ವಾನಗಳನ್ನೂ ಅಂಗೀಕರಿಸಿ ಅನೇಕ ಸಂಸ್ಥಾನಗಳಿಗೆ ಹೋಗಿ ಆತಿಥ್ಯಹೊಂದಿ ದಯಮಾಡಿದ್ದರು; ತಾವೂ ಅನೇಕ ಸಂಸ್ಥಾನಗಳ ಅಧಿಪತಿಗಳನ್ನು ಆದರದಿಂದ ಬರಮಾಡಿಕೊಂಡು ಸತ್ಕರಿಸುತ್ತಿದ್ದರು. ಮಹಾಪ್ರಭುಗಳವರ ಉತ್ತರ ಭಾರತ ಸಂಚಾರಗಳು ಅನೇಕ ಸಾರಿ ನಡೆದಿವೆ.

ಮಹಾಪ್ರಭುಗಳವರು ಯಾತ್ರಾರ್ಥವಾಗಿ ದಯಮಾಡಿದ ಪುಣ್ಯಕ್ಷೇತ್ರಗಳಲ್ಲೆಲ್ಲ ರಾಜಕುಟುಂಬದವರ ಶ್ರೇಯಸ್ಸಿಗಾಗಿ ಒಂದು ದಿನವೂ

---

* "ವಿಜ್ಞಪ್ತಿರವಧೇಹಿ ಮೇ ಸುಮಹತಾ ಯತ್ನೇನ ತೇ ಸನ್ನಿಧಿಂ
ಪ್ರಾಪ್ತಂ ಮಾಮಿಹ ಕಾಂದಿಶೀಕಮಧುನಾ ಮಾತರ್ನ ದೂರೀ ಕುರು।
ಚಿತ್ತಂ ತ್ವತ್ಪದಭಾವನೇ ವ್ಯಭಿಚರೇದ್ದೃಗ್ವಾಕ್ಚ ಮೇ ಜಾತು ಚೇ
ತ್ತತ್ಸಾಮ್ಯೇ ಸ್ವಗುಣೈರ್ಬಧಾನ ನ ಯಥಾ ಭೂಯೋ ವಿನಿರ್ಗಚ್ಛತಿ॥"




ಲಲಿತಾದ್ರಿಯಲ್ಲಿ

(ಮೊಟ್ಟಮೊದಲು ಕಣ್ಣಿಗೆ ಬೀಳುವ ಶ್ಲೋಕರತ್ನ)



ಲಲಿತಾದ್ರಿಯಲ್ಲಿ

(ಲಲಿತಾ ಸ್ತೋತ್ರವನ್ನು ಕೆತ್ತಿಸಿರುವ ಬಂಡೆಗಳಲ್ಲೊಂದು)

ಪ್ರಜೆಗಳ ಶ್ರೇಯಸ್ಸಿಗಾಗಿ ಒಂದು ದಿನವೂ ವಿಶೇಷ ಪೂಜೆಗಳನ್ನು ಮಾಡಿಸುತ್ತಿದ್ದರು. ತಮ್ಮ ಶ್ರೇಯಸ್ಸಿಗಾಗಿಯೂ ರಾಜಕುಟುಂಬದವರ ಶ್ರೇಯಸ್ಸಿಗಾಗಿಯೂ ಮಾಡಿಸುತ್ತಿದ್ದ ಪೂಜೆಗಿಂತಲೂ ಪ್ರಜೆಗಳ ಶ್ರೇಯಸ್ಸಿಗಾಗಿ ಮಾಡಿಸುತ್ತಿದ್ದ ಪೂಜೆಯಲ್ಲಿ ತಮಗೆ ಹೆಚ್ಚಿನ ಆದರವೆಂದು ಮಹಾಪ್ರಭುಗಳವರು ಕಂಠೋಕ್ತವಾಗಿ ಹೇಳುತ್ತಿದ್ದರು. ಒಂದುಸಲವಂತೂ, ಅವರು, "ನಮಗಾಗಿ ಮತ್ತು ನಮ್ಮ ಕುಟುಂಬದವರ ಶ್ರೇಯಸ್ಸಿಗಾಗಿ ನಡೆಯುವ ಪೂಜೆಯೇನಂತೆ, ಹೇಗೆ ನಡೆದರೂ ಸಾಕು. ಇರುವುದೇ ಪ್ರಜೆಗಳ ಪರವಾದ ಮಹಾಪೂಜೆ. ಅದೇ ಮುಖ್ಯ. ಅದೆಷ್ಟು ಚೆನ್ನಾಗಿ ನಡೆದರೂ ಸಾಲದು. ಆ ಮಹಾಪೂಜೆ ಆದಷ್ಟು ವಿಜೃಂಭಣೆಯಿಂದಲೂ ವಿತರಣೆಯಿಂದಲೂ ನಡೆಯಬೇಕು" ಎಂದು ಹೇಳಿದರು. ಪ್ರತಿಯೊಂದು ಕ್ಷೇತ್ರದಲ್ಲಿ ಸಹ, ಅವೆರಡರಲ್ಲಿ ಪ್ರಜೆಗಳ ಶ್ರೇಯಸ್ಸಿಗಾಗಿ ಮಾಡಿಸುತ್ತಿದ್ದುದೇ ಮಹಾಪೂಜೆ. ರಾಜಕುಟುಂಬದವರ ಶ್ರೇಯಸ್ಸಿಗಾಗಿ ನಡೆಯುತ್ತಿದ್ದ ಪೂಜೆಯನ್ನು ಅದರಷ್ಟು ವೈಭವ ವಿಜೃಂಭಣೆಗಳಿಂದ ಮಾಡಿಸುತ್ತಿರಲಿಲ್ಲ. ಪ್ರಜೆಗಳ ಶ್ರೇಯಸ್ಸಿಗಾಗಿ ಮಾಡಿಸುತ್ತಿದ್ದ ಮಹಾಪೂಜೆಯ ದಿನ ನಡೆಯುತ್ತಿದ್ದ ಮಹಾಭಿಷೇಕಗಳು ವಿಶೇಷ ಹೋಮಗಳು ಸಹಸ್ರನಾಮಾರ್ಚನೆಗಳು ಭೂರಿದಾನಗಳು ಮುಂತಾದ ಕಲಾಪಗಳೂ ಪಾರಾಯಣಾದಿಗಳೂ ಬಹಳ ಅಧಿಕವಾಗಿರುತ್ತಿದ್ದುವು. ಅವುಗಳೆಲ್ಲ ಪೂರೈಸುವವರೆಗೂ — ಕೆಲವುವೇಳೆ ಬೆಳಗಿನಿಂದ ರಾತ್ರಿ ಎಂಟು ಘಂಟೆಯವರೆಗೂ — ಮಹಾಪ್ರಭುಗಳವರು ನಿರಾಹಾರದಿಂದ ಮಡಿಯಲ್ಲಿದ್ದು ಪ್ರಜೆಗಳ ಶ್ರೇಯಸ್ಸಿಗಾಗಿ ಪ್ರೀತಿವಾತ್ಸಲ್ಯಗಳಿಂದ ಜಪಮಾಡುತ್ತಿದ್ದರು. ಅಷ್ಟೇ ಅಲ್ಲ. ಪ್ರತಿಯೊಂದು ಕ್ಷೇತ್ರದಲ್ಲಿ ಸಹ ಒಂದು ದಿನವನ್ನು ಮೀಸಲಾಗಿಟ್ಟು, ಬೆಳಗಿನಿಂದ ರಾತ್ರಿಯವರೆಗೂ ಪ್ರಜೆಗಳ ಶ್ರೇಯಸ್ಸಿಗಾಗಿ ಭಕ್ತಿಯಿಂದ ಜಪಮಾಡುತ್ತಿದ್ದರು. ಮಹಾಸ್ವಾಮಿಯವರ ಪ್ರಜಾವಾತ್ಸಲ್ಯವನ್ನು ಕಂಡು, ಕ್ಷೇತ್ರವಾಸಿಗಳಾದ ವೈದಿಕಮಹಾಶಯರೆಲ್ಲ ಬೆರಗಾಗಿ "ಪ್ರಜಾವತ್ಸಲರಾದ ಇಂತಹ ರಾಜರ್ಷಿಗಳು ಮತ್ತೊಬ್ಬರಿಲ್ಲ. ಇವರನ್ನು ದರ್ಶನಮಾಡಿದ ನಾವು ಧನ್ಯರು" ಎಂದು ಕೊಂಡಾಡುತ್ತಿದ್ದರು.

ಆಳಿದ ಮಹಾಸ್ವಾಮಿಯವರು ೧೯೧೭ನೆಯ ಇಸವಿಯಲ್ಲಿ ರಾಮೇಶ್ವರ ಯಾತ್ರೆಮಾಡಿದರು. ಮಹಾಮಾತೃಶ್ರೀ ವಾಣೀವಿಲಾಸ ಸನ್ನಿಧಾನದವರು, ಶ್ರೀಮದ್ಯುವರಾಜ ಶ್ರೀಕಂಠೀರವ ನರಸಿಂಹರಾಜ ಒಡೆಯರ್ ಬಹದ್ದೂರರವರು, ಶ್ರೀ ಮಹಾರಾಣಿ ಶ್ರೀ ಲಕ್ಷ್ಮೀವಿಲಾಸ

ಸನ್ನಿಧಾನದವರು ಮುಂತಾದವರೊಡನೆ ೧೯೧೭ನೆಯ ಇಸವಿ ಫೆಬ್ರವರಿ ತಿಂಗಳು ೧೬ನೆಯ ತಾರೀಖಿನ ದಿನ ಬೆಳಗ್ಗೆ ರಾಮನಾಡಿಗೆ ದಯಮಾಡಲು

**ರಾಮೇಶ್ವರ ಯಾತ್ರೆ**

ರಾಮನಾಡು ರಾಜರಾದ ರಾಜಾ ಮುತ್ತು ರಾಮಲಿಂಗ ಸೇತುಪತಿಯವರು ತಮ್ಮ ಸಕಲ ರಾಜ ಮರ್ಯಾದೆಗಳೊಡನೆ ಅವರನ್ನು ಎದುರುಗೊಂಡು ಗೌರವಿಸಿ ಸತ್ಕರಿಸಿದರು. ಶ್ರೀ ಶೃಂಗೇರಿ ಜಗದ್ಗುರುಗಳಿಂದ ಪ್ರತಿಷ್ಠಿತವಾಗಿರುವ ಶ್ರೀ ರಾಜರಾಜೇಶ್ವರೀ ದೇವಿಯವರ ದೇವಾಲಯಗಳೇ ಮುಂತಾದುವುಗಳಿಗೆ ಅವರು ಕುಟುಂಬ ಪರಿವಾರ ಸಮೇತರಾಗಿ ಚಿತ್ತೈಸಿ, ಅಲ್ಲಿಂದ ನವಪಾಷಾಣಕ್ಕೆ ಮಾರನೆಯ ದಿನ ದಯಮಾಡಿದರು. ಅಲ್ಲಿ ಹಿರಣ್ಯಶ್ರಾದ್ಧಾದಿಗಳನ್ನು ನೆರವೇರಿಸಿ ಅದೇ ಸಾಯಂಕಾಲ (ಶನಿವಾರದ ದಿನ) ರಾಮೇಶ್ವರವನ್ನು ಸೇರಿದರು. ಸೋಮವಾರ ಧನುಸ್ಕೋಟಿಗೆ ಹೊರಟು, ಅಲ್ಲಿ ಪೂಜಿಸಬೇಕಾಗಿದ್ದ ಚಿನ್ನದ ಧನುಸ್ಸು ಮುಂತಾದುವುಗಳಿಗಾಗಿಯೂ, ಕೃಚ್ಛ್ರಾದಿಗಳಿಗಾಗಿಯೂ ಸಾವಿರಾರು ರೂಪಾಯಿಗಳನ್ನು ವಿನಿಯೋಗಿಸಿ ಮಂಗಳವಾರದ ದಿನ ಅವರು ಮತ್ತೆ ರಾಮೇಶ್ವರಕ್ಕೆ ದಯಮಾಡಿದರು. ಅಂದು ಮಹಾಶಿವರಾತ್ರಿಯಾದಕಾರಣ, ಶ್ರೀ ರಾಮನಾಥಸ್ವಾಮಿಯವರಿಗೆ ಗಂಗಾಭಿಷೇಕ ಮಾಡಿಸಿ, ಕಲಾಪತ್ತಿನ ಶಾಲುಜೋಡಿ, ಕಿಂಕಾಪಿನ ದುಪ್ಪಟ್ಟ, ಕಲಾಪತ್ತಿನ ಮುಗುಟ, ಒಂದು ಜೊತೆ ಪಂಚೆ— ಇವುಗಳನ್ನು ಸಮರ್ಪಿಸಿ ಅಷ್ಟೋತ್ತರ ಪೂಜೆ ಮಾಡಿಸಿದರು. ಪರ್ವತವರ್ಧಿನೀ ಅಮ್ಮನವರಿಗೆ ಭಾರಿ ಜರತಾರಿಯ ಸೀರೆ, ಕುಪ್ಪಸದ ಕಣಗಳನ್ನೂ, ಒಂದು ಮುತ್ತಿನ ಕಂಠಿಯನ್ನೂ ಸಮರ್ಪಿಸಿ ಅಷ್ಟೋತ್ತರ ಪೂಜೆ ಮಾಡಿಸಿದರು. ಮಂಟಪದಲ್ಲಿ ಕಾದಿದ್ದ ಸೇತುಪತಿಯವರನ್ನು ಕಂಡು ಹರ್ಷಿಸಿ ಸಂಭಾಷಿಸಿ ಮರ್ಯಾದೆಗಳೊಡನೆ ಪಾದಚಾರಿಗಳಾಗಿ ಅರಮನೆಗೆ ದಯಮಾಡಿದರು. ಆಳಿದ ಮಹಾಸ್ವಾಮಿಯವರು ಗುರುವಾರದ ದಿನ ರಾಮೇಶ್ವರದಲ್ಲಿ ನಾಗಪ್ರತಿಷ್ಠೆ ಮಾಡಿ ಭೂರಿದಕ್ಷಿಣೆ ಸಂತರ್ಪಣೆಗಳನ್ನು ವಿಜೃಂಭಣೆಯಿಂದ ಮಾಡಿಸಿ, ಸ್ಥಳಪುರೋಹಿತರೇ ಮುಂತಾದ ಬ್ರಾಹ್ಮಣರಿಗೆ ಸಂಭಾವನೆಗಳನ್ನೂ ಖಿಲ್ಲತ್ತುಗಳನ್ನೂ ದಯಪಾಲಿಸಿದರು. ಮರುದಿನ ಗಂಧಮಾದನ ಪರ್ವತಕ್ಕೆ ದಯಮಾಡಿ, ಶನಿವಾರದ ದಿನ (೨೪–೨–೧೯೧೭) ದರ್ಭಶಯನಕ್ಕೆ ಚಿತ್ತೈಸಿ, ಅಲ್ಲಿ ಹಿರಣ್ಯಶ್ರಾದ್ಧಾದಿಗಳನ್ನು ನೆರವೇರಿಸಿ, ರಾಮನಾಡಿಗೆ ಹಿಂತಿರುಗಿ ಶ್ರೀ ಸೇತುಪತಿಯವರ ಅರಮನೆಗೆ ಬಂದರು. ಅಲ್ಲಿ ಹಾರತುರಾಯಿಗಳನ್ನೂ, ತಾಂಬೂಲಾದಿಗಳನ್ನೂ ಸ್ವೀಕರಿಸಿ, ಶ್ರೀ ರಾಜರಾಜೇಶ್ವರೀ ಅಮ್ಮನವರಿಗೆ

ಕಲಾಪತ್ತಿನ ಸೀರೆ ಮುಂತಾದುವುಗಳನ್ನು ಕಳುಹಿಸಿಕೊಟ್ಟು, ಅದೇ ದಿನ ರಾತ್ರಿ ಅಲ್ಲಿಂದ ಪ್ರಯಾಣ ಮಾಡಿ, ಮಧುರೆ ತಿರುಚನಾಪಳ್ಳಿ ಮುಂತಾದ ಸ್ಥಳಗಳನ್ನೆಲ್ಲ ನೋಡಿಕೊಂಡು ಮೈಸೂರು ಸಂಸ್ಥಾನಕ್ಕೆ ಹಿಂತಿರುಗಿದರು. ಆಳಿದ ಮಹಾಸ್ವಾಮಿಯವರು ಸಮಸ್ತ ಯಾತ್ರೆಗಳ ಕಾಲದಲ್ಲಿಯೂ ಮುಕ್ತಹಸ್ತರಾಗಿ ದಾನಧರ್ಮಾದಿಗಳನ್ನು ನೆರವೇರಿಸಿದರು.

ಆಳಿದ ಮಹಾಸ್ವಾಮಿಯವರು ಯಾತ್ರಾ ಕಾಲಗಳಲ್ಲಿ ಎಷ್ಟು ಶ್ರದ್ಧೆಯಿಂದ ವರ್ತಿಸುತ್ತಿದ್ದರೆಂಬುದಕ್ಕೆ ಇಲ್ಲಿ ಒಂದು ನಿದರ್ಶನವನ್ನು ಸೂಚಿಸಬಹುದು: ರಾಮನಾಡಿನಿಂದ ದರ್ಭಶಯನಕ್ಕೆ ಹದಿಮೂರು ಮೈಲಿಗಳ ದೂರ ಪಾದಚಾರಿಗಳಾಗಿ ಕೆಸರಿನ ದಾರಿಯಲ್ಲಿ ನಡೆದುಬಂದು ಅಲ್ಲಿ ಹಿರಣ್ಯ ಶ್ರಾದ್ಧಮಾಡಿ ಪಾದಚಾರಿಗಳಾಗಿಯೇ ಹಿಂದಿರುಗಲು ಸಿದ್ಧರಾಗಿ, ಧರ್ಮಾಧಿಕಾರಿಗಳನ್ನು ಕುರಿತು, "ಶಾಸ್ತ್ರಿಗಳೇ! ನೀವು ದಣಿದಿದ್ದೀರಿ. ಬಂಡಿಯಲ್ಲಿ ದಯಮಾಡಿ" ಎಂದರು. ಆಗ ಧರ್ಮಾಧಿಕಾರಿಗಳವರು, "ಮಹಾಸ್ವಾಮಿಯವರು ಹದಿಮೂರು ಮೈಲಿ ನಡೆದುಬಂದು, ಈಗ ಮತ್ತೆ ಹದಿಮೂರು ಮೈಲಿಗಳ ದೂರ ನಡೆಯಲು ಸಿದ್ಧರಾಗಿದ್ದೂ ನನಗೆ ಈ ರೀತಿ ಅಪ್ಪಣೆ ಮಾಡಿದರೆ ನನ್ನ ಗತಿಯೇನು?" ಎಂದರು. ಉಭಯತ್ರರೂ ನಕ್ಕು ಪಾದಚಾರಿಗಳಾಗಿಯೇ ರಾಮನಾಡಿಗೆ ಹಿಂತಿರುಗಿದರು.

ಆಳಿದ ಮಹಾಸ್ವಾಮಿಯವರಾದ ಶ್ರೀಮನ್ಮಹಾರಾಜರವರು ೧೯೧೮ನೆಯ ಇಸವಿ ಜುಲೈ ೩ನೆಯ ತಾರೀಖಿನ ದಿನ ಮೈಸೂರು ನಗರದಿಂದ ಹೊರಟು ೯ನೆಯ ತಾರೀಖು ರಾತ್ರಿ ಎಂಟು ಘಂಟೆಗೆ ಕಾಶ್ಮೀರ ಸಂಸ್ಥಾನದ ರಾಜಧಾನಿಯಾದ ಶ್ರೀನಗರವನ್ನು ಸೇರಿ, ಅಲ್ಲಿಯ ಮಹಾರಾಜರ ಛಷ್ಮಷಾಹಿ ಅರಮನೆಯಲ್ಲಿ ಒಂದು ವಾರವನ್ನು ಕಳೆದರು.

**ಕಾಶ್ಮೀರ ಪ್ರವಾಸ; ಅಮರನಾಥ ಯಾತ್ರೆ**

ಕಾಶ್ಮೀರ ಸಂಸ್ಥಾನದ ರೇಷ್ಮೆ ಕಾರ್ಖಾನೆಯವರು ರೋಗರಹಿತವಾದ ರೇಷ್ಮೆ ಬಿತ್ತನೆ ಮೊಟ್ಟೆಗಳನ್ನು ರೈತರಿಗೆ ಒದಗಿಸುವ ಏರ್ಪಾಡು ಮಾಡಿದ್ದುದನ್ನು ಕಂಡು ಹರ್ಷಿಸಿ, ಮೈಸೂರು ಸಂಸ್ಥಾನದಲ್ಲಿಯೂ ಅದೇ ರೀತಿಯ ಏರ್ಪಾಡು ಮಾಡಿ, ರೇಷ್ಮೆ ಕೈಗಾರಿಕೆಗೆ ಆಳಿದ ಮಹಾಸ್ವಾಮಿಯವರು ಉತ್ತೇಜನಕೊಟ್ಟರು.

ಕಾಶ್ಮೀರ ಸಂಸ್ಥಾನವು ಬಹಳ ಸುಂದರವಾದ ಸಂಸ್ಥಾನ. ಹಿಮವತ್ಪರ್ವತವು ಅಲ್ಲಿಗೆ ಸಮೀಪವಾಗಿದೆ. ವಿಧವಿಧವಾದ ಫಲಪುಷ್ಪಗಳ ಆಗರವಾಗಿ, ಮೊಗಲ ಚಕ್ರವರ್ತಿಗಳ ಕಾಲದ ಉದ್ಯಾನಗಳಿಂದ ಶೋಭಿಸುತ್ತ, ರಮಣೀಯವಾದ ಗಿರಿ ದುರ್ಗಗಳಿಂದಲೂ, ನದಿಗಳಿಂದಲೂ

ತುಂಬಿರುವ ಆ ಸಂಸ್ಥಾನವು ಪ್ರಕೃತಿಮಾತೆಯ ವಿಲಾಸ ಭೂಮಿಯಂತಿದೆ. ಕಾಶ್ಮೀರವನ್ನು ಭೂಲೋಕದ ಸ್ವರ್ಗವೆಂದು ಜಹಾಂಗೀರ್ ಚಕ್ರವರ್ತಿಯು ವರ್ಣಿಸಿದ್ದನು. ತೆಳುವಾದ ಸಿಪ್ಪೆಯ ಬಾದಾಮಿ, ಸೇಬು, ಪೇರುಹಣ್ಣು, ಅಕ್ರೋಟ್ ಮುಂತಾದುವುಗಳೆಲ್ಲ ಅಲ್ಲಿ ಸಮೃದ್ಧವಾಗಿ ಬೆಳೆಯುತ್ತವೆ. ಅಲ್ಲಿಯ ಅಂಜೂರದ ಹಣ್ಣು ಕಿತ್ತಲೆಯ ಹಣ್ಣಿನ ಗಾತ್ರವೂ, ಉಪ್ಪು ನೇರಳೆಯ ಮರಗಳು ಅರಳಿಯ ಮರಗಳ ಎತ್ತರವೂ ಇರುತ್ತವೆ. ಬಾಳೆ, ಹುಣಸೆ ಮುಂತಾದುವು ಅಲ್ಲಿ ಬೆಳೆಯುವುದಿಲ್ಲ; ನಿಂಬೆಯ ಹಣ್ಣುಗಳು ಮಾತ್ರ ಬೆಳೆಯುತ್ತವೆ.

ಶ್ರೀನಗರವು ದೋಣಿಗಳ ನಗರ. ನದಿಯು ಊರಿನ ಮಧ್ಯದಲ್ಲಿ ಹರಿಯುತ್ತಿರುವುದರಿಂದ, ಮನೆಯಿಂದ ಮನೆಗೆ ಹೋಗುವುದು ಕೂಡ ದೋಣಿಗಳಲ್ಲೇ. ಶ್ರೀನಗರದಲ್ಲಿ ಮಿತಿಮೀರಿ ಚಳಿಯಾದುದರಿಂದ ಮಾಗಿಯಕಾಲದ ವಾಸವು ಬಹಳ ಕಷ್ಟ. ಕಾಶ್ಮೀರ ಸಂಸ್ಥಾನದ ಮಹಾರಾಜರು ವರ್ಷದಲ್ಲಿ ಆರು ತಿಂಗಳುಗಳ ಕಾಲ ಮಾತ್ರವೇ ಶ್ರೀನಗರದಲ್ಲಿ ವಾಸವಾಗಿದ್ದು ಉಳಿದ ಆರು ತಿಂಗಳುಗಳನ್ನುಜಮ್ಮುವಿನಲ್ಲಿ ಕಳೆಯುತ್ತಾರೆ. ಪ್ರಜೆಗಳಲ್ಲಿ ಧನಿಕರಾದವರು ಲಾಹೋರಿಗೂ ಬರುತ್ತಾರೆ. ಬಹಳ ಬಡವರಾದವರು ಮಾತ್ರ ಮತ್ತೆಲ್ಲಿಗೂ ಹೋಗಲಾರದೆ ಶ್ರೀನಗರದಲ್ಲೇ ಇರುತ್ತಾರೆ.

ಆಳಿದ ಮಹಾಸ್ವಾಮಿಯವರ ಆಗಮನದಿಂದ ಹರ್ಷಿತರಾದ ಕಾಶ್ಮೀರ ಸಂಸ್ಥಾನದ ಮಹಾರಾಜರವರು ಪರಮಾದರದಿಂದ ಅವರಿಗೆ ಆತಿಥ್ಯ ಮಾಡಿ, ಮೊಗಲ ಚಕ್ರವರ್ತಿಗಳ ಕಾಲದ ಉದ್ಯಾನಗಳೇ ಮುಂತಾದುವುಗಳನ್ನು ತೋರಿಸಿದರು. ಮಹಾಪ್ರಭುಗಳವರು ೧೯೧೮ನೆಯ ಇಸವಿ ಆಗಸ್ಟ್ ತಿಂಗಳು ೧೧ನೆಯ ತಾರೀಖಿನ ದಿನ ಶ್ರೀನಗರದಿಂದ ಅಮರನಾಥೇಶ್ವರದರ್ಶನೋತ್ಸುಕರಾಗಿ ಸಮ್ಮುಖದ ಅಧಿಕಾರಿಗಳೇ ಮುಂತಾದವರೊಡನೆ ಅಮರನಾಥ ಕ್ಷೇತ್ರಕ್ಕೆ ಯಾತ್ರಾರ್ಥವಾಗಿ ದಯಮಾಡಿದರು. ಅವರು ಪ್ರಯಾಣ ಹೊರಟ ದಿನ ಶ್ರಾವಣ ಶುದ್ಧ ಪಂಚಮಿ; ಪೂರ್ಣಿಮೆಯ ದಿನ ಅಮರನಾಥೇಶ್ವರ ದರ್ಶನ. ಅಮರನಾಥ ಕ್ಷೇತ್ರವು ಹಿಮಾಲಯಾ ಪರ್ವತ ಶ್ರೇಣಿಯಲ್ಲಿ ೧೫,೦೦೦ ಅಡಿಗಳ ಎತ್ತರದಲ್ಲಿದ್ದು ವಾಯುವಿನ ಸಾಂದ್ರತೆಯು ಬಹಳ ಕಡಮೆಯಾಗಿರುವುದರಿಂದ ಅಲ್ಲಿಗೆ ಹೋದವರಲ್ಲಿ ಅನೇಕರಿಗೆ ಪ್ರಜ್ಞೆ ತಪ್ಪುವುದು. ಯಾತ್ರೆಯು ಬಹಳ ಅಪಾಯಕರವೆಂದೂ, ಕೆಲವು ಕಣಿವೆಗಳಲ್ಲಿಯೂ ಸೇತುವೆಗಳ ಮೇಲೂ ಮಂಜು ಮುಸುಗಿದ್ದ ಕಾರಣ ತೊಂದರೆಯಾಗುವುದಲ್ಲದೆ, ಮಳೆಯೇನಾದರೂ

ಬಿದ್ದರೆ ಬೆಟ್ಟಗಳಿಂದ ಬಂಡೆಗಳು ಉರುಳಿ ಪ್ರಾಣಕ್ಕೇ ಸಂಚಕಾರ ಬರುವ ಸಂಭವವುಂಟೆಂದೂ, ಅಮರನಾಥ ಕ್ಷೇತ್ರದ ಯಾತ್ರೆಗೆ ಹೋಗದಿರುವುದೇ ಮೇಲೆಂದೂ ಕಾಶ್ಮೀರದ ಮಹಾರಾಜರು ಸಲಹೆ ಹೇಳಿದರು. ಮಹಾ ಪ್ರಭುಗಳವರು ನಕ್ಕು, "ಭಗವತ್ಕೃಪೆಯಿದ್ದರೆ ಅಪಾಯವೆಲ್ಲಾ ಮಾಯ ವಾಗುವುದು" ಎಂದು ಉತ್ತರ ಹೇಳಿ, ಅವರನ್ನು ಬೀಳ್ಕೊಂಡು ಪರಿವಾರ ಸಮೇತರಾಗಿ ಯಾತ್ರೆಗೆ ಹೊರಟರು. ಪಂಚಮಿಯಿಂದ ಪೂರ್ಣಿಮಾ ದಿನದವರೆಗೂ ಮಹಾಪ್ರಭುಗಳವರು ಪ್ರತಿದಿನವೂ ಪ್ರಾತಃಕಾಲ ಐದು ಘಂಟೆಗೆ ಸ್ನಾನಮಾಡಿ, ಏಳು ಘಂಟೆಯ ವೇಳೆಗೆ ಸಂಧ್ಯಾವಂದನಾದಿ ಗಳನ್ನು ತೀರಿಸಿಕೊಂಡು ಪ್ರಯಾಣ ಹೊರಡುತ್ತಿದ್ದರು. ಆಳಿದ ಮಹಾ ಸ್ವಾಮಿಯವರು ತಮ್ಮ ಪರಿವಾರದವರೆಲ್ಲರೂ ಕುದುರೆಗಳಮೇಲೆ ಪ್ರಯಾಣ ಮಾಡಲು ಅನುಮತಿಯನ್ನು ಕೊಟ್ಟು, ತಾವು ಮಾತ್ರ ಮಜಲಿನಿಂದ ಮಜಲಿಗೆ ಕಾಲುನಡಿಗೆಯಿಂದಲೇ ದಯಮಾಡಿದರು. ನದಿಗಳನ್ನು ದಾಟ ಬೇಕಾದಾಗ ಮಾತ್ರ ಒಂದೊಂದು ವೇಳೆ ನಿರ್ವಾಹವಿಲ್ಲದೆ ಅವರು ಕುದುರೆಯ ಮೇಲೆ ಪ್ರಯಾಣ ಮಾಡುತ್ತಿದ್ದರು.

ಮಾರ್ಗ ಮಧ್ಯದಲ್ಲಿ ಅವರೂ, ಅವರ ಪರಿವಾರದವರೂ ಕುಂಕುಮ ಕೇಸರಿಯ ವ್ಯವಸಾಯದ ಭೂಮಿಯನ್ನು ನೋಡಿಕೊಂಡು ತೆರಳಿದರು. ಕುಂಕುಮಕೇಸರಿಯು ಬೆಳೆಯುವುದು, ಭರತಖಂಡದಲ್ಲೆಲ್ಲ ಕಾಶ್ಮೀರ ಸಂಸ್ಥಾನದಲ್ಲಿ ಮಾತ್ರವೇ. ಅಲ್ಲಿ ಕುಂಕುಮಕೇಸರಿಯು ಬೆಳೆಯುವ ಪ್ರದೇಶವಿರುವುದು ಅಮರನಾಥ ಕ್ಷೇತ್ರಕ್ಕೆ ಹೋಗುವ ಮಾರ್ಗದಲ್ಲೊಂದೇ ಕಡೆ. ಕೇಸರಿಯ ಗಿಡದ ಗೆಡ್ಡೆಯು ಬೆಳ್ಳುಳ್ಳಿಯ ಗೆಡ್ಡೆಯಂತೆಯೂ, ಅದರ ಎಲೆಯು ಬೆಳ್ಳುಳ್ಳಿಯ ಗರಿಯ ಹಾಗೂ ಇರುವುವು. ಒಂದು ಗಿಡಕ್ಕೆ ಹತ್ತು ಅಥವಾ ಹನ್ನೆರಡು ಹೂಗಳು ಬಿಡುವುವು. ಕುಂಕುಮಕೇಸರಿಯು ಸಿದ್ಧವಾಗುವುದು ಆ ಹೂಗಳಿಂದಲೇ. ಮೈಸೂರು ಸಂಸ್ಥಾನದಲ್ಲಿ ಶ್ರೀಗಂಧದ ಮರದಮೇಲೆ ಸರ್ಕಾರದವರಿಗೆ ಸರ್ವಾಧಿಕಾರವಿರುವಂತೆ ಕಾಶ್ಮೀರ ಸಂಸ್ಥಾನದಲ್ಲಿ ಅಲ್ಲಿಯ ಸರ್ಕಾರದವರಿಗೆ ಕುಂಕುಮಕೇಸರಿಯ ಬೆಳೆಯಮೇಲೆ ಸರ್ವಾಧಿಕಾರ.

ಆಳಿದ ಮಹಾಸ್ವಾಮಿಯವರು ಶಂಕರಗಿರಿಯೆಂಬ ಬೆಟ್ಟದಮೇಲೆ ಶ್ರೀ ಶಂಕರಾಚಾರ್ಯರವರು ಪ್ರತಿಷ್ಠಿಸಿದುದಾಗಿ ಪ್ರತೀತಿಯಿರುವ ಶಂಕರೇಶ್ವರ ಸ್ವಾಮಿಯವರ ದೇವಾಲಯಕ್ಕೆ ದಯಮಾಡಿ, ಆ ದೇವ ಸ್ಥಾನದ ಮೇಲೆ ವಿದ್ಯುಚ್ಛಕ್ತಿಯ ದೊಡ್ಡ ದೀಪವನ್ನಿಡಿಸಿ, ಅದಕ್ಕೆ ಕಾಶ್ಮೀರ ಸಂಸ್ಥಾನದ ಮಹಾರಾಜರವರ ನಾಮಾಂಕಿತದ ಮೇಲೆ "ಪ್ರತಾಪಸಿಂಗ್

ಹೀರಾ" ಎಂದು ಹೆಸರನ್ನಿಟ್ಟರು. ಮತ್ತೊಂದು ಬೆಟ್ಟದ ಮೇಲಿರುವ ಶ್ರೀಶಾರಿಕಾ ಭಗವತೀ ಅಮ್ಮನವರಿಗೆ, ಮಹಾಪ್ರಭುಗಳವರು ದೇಶ ಕ್ಷೇಮಾರ್ಥವಾಗಿ ಮಹಾಪೂಜೆಯನ್ನು ಮಾಡಿಸಿ ರಾಜಕುಟುಂಬದ ಕ್ಷೇಮಾರ್ಥವಾಗಿ ನಿತ್ಯಗಟ್ಟಲೆಯ ಸಾಮಾನ್ಯ ಪೂಜೆಯನ್ನು ಮಾತ್ರವೇ ಮಾಡಿಸಿದರು.

ಶ್ರಾವಣ ಶುದ್ಧ ಪೂರ್ಣಿಮೆಯ ದಿನ ಅಮರನಾಥ ಕ್ಷೇತ್ರಕ್ಕೆ ಸೇರಬೇಕಾದರೆ, ಪಂಚಮಿಯ ದಿನದಿಂದ ಹತ್ತು ಮಜಲುಗಳ ಪ್ರಯಾಣ. ಅರ್ಚಕರು, ವರ್ತಕರು, ಮುಂತಾದವರೆಲ್ಲರೂ ಸಹ ಆಗಲೇ ಹೊರಡುತ್ತಾರೆ; ಯಾತ್ರಿಕರೂ ಅವರ ಜೊತೆಯಲ್ಲೇ ಹೊರಡುತ್ತಾರೆ. ಆಳಿದ ಮಹಾಸ್ವಾಮಿಗಳವರು ಪಾದಚಾರಿಗಳಾಗಿಯೇ ಪ್ರಯಾಣ ಮಾಡುತ್ತ, ಮಾರ್ಗ ಮಧ್ಯದಲ್ಲಿ ಅಲ್ಲಲ್ಲಿ ಪ್ರೇಕ್ಷಣೀಯವಾದ ಸ್ಥಳಗಳನ್ನೆಲ್ಲ ಪರಾಂಬರಿಸಿದರು. ಒಮ್ಮೆ ಮೂವತ್ತು ಲಕ್ಷ ಜನಸಂಖ್ಯೆಯುಳ್ಳದಾಗಿ ವೈಭವಯುಕ್ತವಾಗಿದ್ದ ಅವಂತೀಪುರದ ದೇವಾಲಯದ ಭಗ್ನಾವಶೇಷ; ಮಾರ್ತಾಂಡ ದೇವಾಲಯದ ಭಗ್ನಾವಶೇಷ; ಚಂದ್ರವನ; ಶೇಷನಾಗ; ಪಂಚತಾರಿಣಿ; ಮುಂತಾದುವುಗಳನ್ನೆಲ್ಲ ನೋಡಿಕೊಂಡು ಅಮರನಾಥ ಕ್ಷೇತ್ರಕ್ಕೆ ಪೂರ್ಣಿಮೆಯ ದಿನ ತಲಪಿದರು. ಮಾರ್ಗಮಧ್ಯದಲ್ಲಿ ಮಹಾಪ್ರಭುಗಳವರು ಚಳಿಯಿಂದ ನಡುಗುತ್ತಿದ್ದ ಅನೇಕ ಯಾತ್ರಿಕರಿಗೆ ಶಾಖವಾದ ಉಡುಪುಗಳನ್ನು ಕೊಡಿಸಿದ್ದರು. ವೃದ್ಧರಾದ ಸಾಧುಗಳನೇಕರಿಗೆ, ದಂಡಿಯಲ್ಲಿ ಕುಳಿತು ಯಾತ್ರೆಗೆ ಹೋಗಿಬರಲು ಒಬ್ಬೊಬ್ಬರಿಗೂ ೨೪೦ ರೂಪಾಯಿಗಳಂತೆ ಮಹಾಪ್ರಭುಗಳವರು ಅಪ್ರಾರ್ಥಿತವಾಗಿ ಧನ ಸಹಾಯ ಮಾಡಿದ್ದರು.

ಅಮರನಾಥೇಶ್ವರನಿಗೆ ರಸಲಿಂಗವೆಂದೂ ಹೆಸರು. ಆ ರಸಲಿಂಗವಿರುವುದು ಒಂದು ಚಿಕ್ಕ ಗುಹೆಯಲ್ಲಿ. ಅದರೊಳಗೆ ಮೇಲಿನಿಂದ ನೀರಿನ ಹನಿಗಳು ಬಿದ್ದು ಬಿದ್ದು, ಘನೀಭೂತವಾಗಿ ಲಿಂಗಾಕಾರವಾಗಿರುತ್ತವೆ. ಸುತ್ತಮುತ್ತಲೂ ಎಲ್ಲಿ ನೋಡಿದರೂ ಮಂಜು ಹೊರತು ಘನೀಭೂತವಾದ ಹಿಮವೇ ಇಲ್ಲದಿದ್ದೂ ಆ ಗುಹೆಯೊಳಗೆ ಮಾತ್ರ ಘನೀಭೂತವಾದ ರಸಲಿಂಗವಿರುವುದು ಅತ್ಯಾಶ್ಚರ್ಯಕರವಾದ ದೃಶ್ಯವೆಂದು* ಮಹಾಸ್ವಾಮಿಗಳವರ

* "Under the rock, in the interior of the cave, are two frozen springs of clear ice resembling lingams in shape and it is these that are worshipped by the Pilgrims. It is certainly a curious phenomenon — the existence of solid ice in this open cave - as there is no real ice anywhere in the neighbourhood, nothing but thawing snow." — R H. Campbell, C.I.E., I.C.S. (Retired).

ಸಮ್ಮುಖದ ಅಧಿಕಾರಿಗಳಲೊಬ್ಬರಾಗಿದ್ದ—ಪ್ರೈವೇಟ್ ಸೆಕ್ರೆಟರಿಯುವ ರಾಗಿದ್ದ—ಶ್ರೀಮಾನ್ ಆರ್. ಎಚ್. ಕ್ಯಾಂಬೆಲ್‌ರವರು ಅಭಿಪ್ರಾಯ ಪಟ್ಟಿದ್ದರು. ಅಮರನಾಥ ಗುಹೆಯ ಸಮೀಪದಲ್ಲಿ ಜಲಪಾತದಂತೆ ಬೆಟ್ಟ ದಿಂದ ನೀರು ಧುಮ್ಮಿಕ್ಕುತ್ತದೆ. ಅದಕ್ಕೆ ಅಮರಗಂಗಾ ಎಂದು ಹೆಸರು. ಅಮರಗಂಗೆಯಲ್ಲಿ ಮಿಂದು ಅಮರನಾಥೇಶ್ವರ ದರ್ಶನ ಮಾಡಿದವರಿಗೆ ಯಾತ್ರಾಫಲ. ಆದರೆ, ಅದರಲ್ಲಿ ಸ್ನಾನ ಮಾಡಿದರೆ ಮೈಯೇ ಕೊರೈಸಿ ಹೋಗಿ ಸ್ವಾಧೀನ ತಪ್ಪಿಹೋಗುವ ಮಟ್ಟಗೆ ನೀರಿನ ಶೈತ್ಯವೂ ಕೊರೆತವೂ ಇರುತ್ತವೆ. ಅಲ್ಲಿ ಸ್ನಾನ ಮಾಡುವವರೇ ತೀರ ವಿರಳ. ಯಾತ್ರಿಕರಲ್ಲಿ ಬಹಳ ಮಂದಿಗಳು ಅಮರಗಂಗಾ ಜಲವನ್ನು ತಲೆಗೆ ಪ್ರೋಕ್ಷಿಸಿಕೊಳ್ಳು ವಷ್ಟರಿಂದಲೇ ತೃಪ್ತಿಗೊಳ್ಳುವರು. ಇತರರನೇಕರು ಮೈಯಲ್ಲಿ ಶಾಖ ಹುಟ್ಟಿ ಚಳಿಯನ್ನು ತಡೆಯುವ ಶಕ್ತಿ ಬರಲೆಂಬ ಉದ್ದೇಶದಿಂದ ಬ್ರಾಂದಿ ಮುಂತಾದ ಮಾದಕದ್ರವ ಸೇವನೆ ಮಾಡುವುದೂ ಉಂಟಂತೆ! ಅದೊಂದೂ ಇಲ್ಲದೆ ಶಾಸ್ತ್ರವಿಧಿಗಳಿಗನುಸಾರವಾಗಿ ಯಾತ್ರೆ ಮಾಡಿಕೊಂಡು ಹೋಗ ತಕ್ಕವರ ಸಂಖ್ಯೆಯು ತೀರ ಕಡಮೆ. ಅಂದು ಅಮರಗಂಗೆಯ ಹಿಮಜಲ ದಲ್ಲಿ ಸ್ನಾನ ಮಾಡಿದವರು ಆಳಿದ ಮಹಾಸ್ವಾಮಿಯವರೊಬ್ಬರು; ವೇದಮೂರ್ತಿ ಬ್ರಹ್ಮಶ್ರೀ ಪಂಡಿತರತ್ನಂ ಕಾನಕಾನಹಳ್ಳಿ ನಾರಾಯಣ ಶಾಸ್ತ್ರಿಗಳೊಬ್ಬರು; ಉಳಿದವರೆಲ್ಲರೂ ಅಮರಗಂಗಾ ಜಲವನ್ನು ತಲೆಗೆ ಪ್ರೋಕ್ಷಿಸಿಕೊಳ್ಳುವಷ್ಟರಿಂದಲೇ ತೃಪ್ತಿಹೊಂದಿದರು. ಮಹಾಪ್ರಭು ಗಳವರು ಅಲ್ಲಿಗೆ ಬಹಳ ಪ್ರಯಾಸದಿಂದ ಹಾಲನ್ನೂ ಕಾಶಿಯ ಒಣ ಬಿಲ್ವ ಪತ್ರೆಯನ್ನೂ ತರಿಸಿದ್ದರು. ಶಾಸ್ತ್ರಿಗಳು ಅಮರನಾಥೇಶ್ವರನಿಗೆ ಆ ಹಾಲಿ ನಿಂದ ಏಕಾದಶವಾರ ರುದ್ರಾಭಿಷೇಕಮಾಡಿ, ಆ ಬಿಲ್ವಪತ್ರೆಯಿಂದ ಸಹಸ್ರನಾಮಾರ್ಚನೆ ಮಾಡಿದರು. ಮಹಾಪ್ರಭುಗಳವರು ಅಮರಗಂಗಾ ಸ್ನಾನಮಾಡಿ ಆಹ್ನಿಕವನ್ನಾಚರಿಸಿ, ಪಂಚೆ ಮತ್ತು ಧೋತ್ರವನ್ನೇ ಧರಿಸಿ— ಆ ಚಳಿಯಲ್ಲಿ ಕೂಡ—ಅಮರನಾಥೇಶ್ವರ ಸನ್ನಿಧಿಯಲ್ಲಿ ಒಂದೂವರೆ ಘಂಟೆಯ ಹೊತ್ತು ಶಿವಪಂಚಾಕ್ಷರೀ ಜಪವನ್ನೂ ರಾಜರಾಜೇಶ್ವರೀ ಜಪವನ್ನೂ ಮಾಡಿದರು. ಬಹು ದೂರವಾದ ನಾನಾ ಪ್ರದೇಶಗಳಿಂದ ಬಂದಿದ್ದ ಅಸಂಖ್ಯಾತ ಮಂದಿ ಯಾತ್ರಿಕರಾದ ಜನಗಳೆಲ್ಲರೂ ಸಹ ಶಾಖ ವಾದ ("ಫ್ಲಾನ್ಯೆಲ್" ಮುಂತಾದುವುಗಳ) ಉಡುಪುಗಳನ್ನು ಧರಿಸಿ, ನೆಲದಮೇಲೆ ಹೆಜ್ಜೆಗಳನ್ನಿಡಲು ಕೊರೆತದ ದೆಸೆಯಿಂದ ಭಯಪಟ್ಟು "ಘಾಸ್ ಕಾ ಜ್ಯೂತ" ಎಂಬ ಹುಲ್ಲಿನ ಪಾದರಕ್ಷೆಗಳನ್ನು ಮೆಟ್ಟಿಕೊಂಡೇ ಅಮರನಾಥ ಗುಹೆಯ ಮುಂದೆ ನಿಂತು "ಹರ ಹರ ಓಂ, ಹರ ಹರ ಓಂ,

ಅಮರನಾಥಜೀಕೀ ಜೈ, ಜೈ'' ಎಂದು ಕೂಗುತ್ತ, ಗುಹೆಯೊಳಗೆ ಚಳಿ ಗಾಳಿಗಳಿಗೆ ಮೈಯೊಡ್ಡಿ ಬಾಹ್ಯಸ್ಮರಣೆಯೇ ಇಲ್ಲದೆ ಭಕ್ತಿಪಾರವಶ್ಯದಿಂದ ಮೈಮರೆತು ಜಪಮಾಡುತ್ತಿದ್ದ ರಾಜರ್ಷಿ ಶ್ರೇಷ್ಠರನ್ನು ಕಂಡು ಆಶ್ಚರ್ಯ ಪಡುತ್ತ, ತಮ್ಮ ಕಣ್ಣುಗಳನ್ನು ತಾವೇ ನಂಬಲಾರದೆ ಹೋದರು. ಮಹಾಪ್ರಭುಗಳವರು ನಿಜವಾಗಿಯೂ ದೇವಾಂಶ ಪುರುಷರೇ ಸರಿಯೆಂದು ಕೊಂಡಾಡಿದರು; ಕೈಮುಗಿದು ಅಡ್ಡಬಿದ್ದರು; ಮಹಾಸ್ವಾಮಿಯವರ ದರ್ಶನದಿಂದ ಧನ್ಯರಾದುದಾಗಿ ಹೇಳಿಕೊಂಡು ಹರ್ಷಿಸಿದರು.

ಮಹಾಪ್ರಭುಗಳವರು ಅಮರಗಂಗೆಯಲ್ಲಿ ಸ್ನಾನಮಾಡಿದ್ದಕಾರಣ ಎಲ್ಲಿ ದೇಹಾಲಸ್ಯವಾದೀತೋ — ಎಂದು ಶಂಕಿಸಿ ಆಗ್ಗೆ ಸಮ್ಮುಖದ ದೊಡ್ಡ ಅಧಿಕಾರಿಯವರಾಗಿದ್ದ ಅಮೀನ್-ಉಲ್-ಮುಲ್ಕ್ ಸರ್ ಮಿರ್ಜಾ ಎಂ. ಇಸ್ಮಾಯಿಲ್‌ರವರು, ಶಾಸ್ತ್ರಿಗಳೊಡನೆ, “ಈ ರೀತಿ ಇಂಥ ಶೈತ್ಯ ಪ್ರಬಲವಾದ ನೀರಿನಲ್ಲಿ ಸ್ನಾನ ಮಾಡಿಸಬಹುದೆ? ಮಹಾಸ್ವಾಮಿಯವರಿಗೆ ದೇಹಾಲಸ್ಯವಾದರೆ ಗತಿಯೇನು?'' ಎಂದು ತಿಳಿಸಿದರಂತೆ. ಆ ವಿಚಾರವು ಮಹಾಪ್ರಭುಗಳವರ ಸನ್ನಿಧಿಯಲ್ಲಿ ಅರಿಕೆಯಾದಾಗ, “ಇಲ್ಲಿಗೆ ಬಂದಿರು ವುದು ಭಗವತ್ಸೇವೆಗಾಗಿ. ಆರೋಗ್ಯವು ಆತನ ಅಧೀನ. ಇಷ್ಟು ದೂರ ಬಂದು ಕ್ಷೇತ್ರವಿಧಿಯಂತೆ ನಡೆಯದೆ ಹಿಂದಕ್ಕೆ ಹೋಗಿ ಫಲವೇನು? ತೇನ ವಿನಾ ತೃಣಮಪಿ ನ ಚಲತಿ. ದೈವ ಸಂಕಲ್ಪವಿದ್ದಂತೆ ಎಲ್ಲಾ ನಡೆಯು ತ್ತದೆ. ಅದಕ್ಕೇತಕ್ಕೆ ಯೋಚನೆ?'' ಎಂದು ಹೇಳಿ ನಕ್ಕರು. ಮಹಾಪ್ರಭು ಗಳವರು ಪ್ರತಿಯೊಂದು ತೀರ್ಥದಲ್ಲಿಯೂ ತಪ್ಪದೆ ಯಥಾವಿಧಿಯಾಗಿ ಸ್ನಾನ ಮಾಡಿ ಕೊನೆಗೆ ಅಮರಗಂಗೆಯಲ್ಲಿ ಮಿಂದುದನ್ನು ಕಂಡು ಕಾಶ್ಮೀರದ ಪಂಡಿತಶ್ರೇಷ್ಠರು ವಿಸ್ಮಿತರಾಗಿ “ಹಿಮವತ್ಪರ್ವತದ ಚಳಿಯ ನಡುಕದಲ್ಲಿ ಹಿಮಜಲಪ್ರವಾಹದಲ್ಲಿ ಸ್ನಾನಮಾಡಿ ಹೀಗೆ ಜಪವನ್ನೂ ಉಪವಾಸವನ್ನೂ ಮಾಡಲು ಧೈರ್ಯ ಮಾಡಿದ ಮತ್ತಾವ ಮಹಾರಾಜರನ್ನೂ ನಾವು ಎಂದೂ ಕಂಡುದಿಲ್ಲ'' ಎಂದರು. ಮಹಾಪ್ರಭುಗಳವರು ಎರಡು ಸಾರಿ ಆ ರೀತಿ “ಧೈರ್ಯಮಾಡಿ'' ವರ್ತಿಸಿ ಸ್ನಾನಮಾಡಿದರು. ಆ ಯಾತ್ರೆಯ ದಿನ ಸಾವಿರಾರು ಮಂದಿ ಬೈರಾಗಿಗಳೇ ಮುಂತಾದ ಯಾತ್ರಿಕರಿಗೆಲ್ಲ ಸಂತರ್ಪಣೆ ಮಾಡಿಸಿ, ಧಾವಳಿಗಳನ್ನು ದಾನಮಾಡಿ, ಪ್ರತಿಯೊಬ್ಬರಿಗೂ ಭೂರಿದಕ್ಷಿಣೆ ಕೊಟ್ಟು, ಮಹಾಪ್ರಭುಗಳವರು ಯಾತ್ರಿಕರನ್ನೆಲ್ಲ ಸಂತೋಷಪಡಿಸಿದರು.

ಆಳಿದ ಮಹಾಸ್ವಾಮಿಯವರು ಹದಿನಾರು ಸಾರಿ ಕಾಶೀಯಾತ್ರೆ ಮಾಡಿದ್ದರು. ೧೯೧೯ನೆಯ ಇಸವಿಗೆ ಮುಂಚೆ ಮಹಾಪ್ರಭು ಗಳವರು ಪ್ರಯಾಗದಲ್ಲಾಗಲಿ ಅಥವಾ ಕಾಶಿಯಲ್ಲಾಗಲಿ ಗಂಗಾಸ್ನಾನ

ಮಾಡುತ್ತಿದ್ದುದು ಸರಸ್ವತೀದೋಣಿಯಲ್ಲಿ. ಆ ದೋಣಿಯು ಚೌಕ ವಾಗಿದ್ದು ಬಹು ಮಂದಿ ಕುಳಿತುಕೊಳ್ಳಲನುಕೂಲಿಸುವಂತೆ ವಿಶಾಲವಾಗಿರುತ್ತದೆ. ಅದರ ಮಧ್ಯದಲ್ಲಿ ನೀರು ಸಿಕ್ಕುವ ಹಾಗೆ ತೊಟ್ಟಿಲನ್ನಿಟ್ಟಿರುತ್ತಾರೆ. ಮಹಾಪ್ರಭುಗಳವರು ಆ ತೊಟ್ಟಿಲಿನೊಳಕ್ಕಿಳಿದು ನದೀ ನೀರನ್ನು ತಂಬಿಗೆಯಲ್ಲಿ ತುಂಬಿಕೊಂಡು ಸ್ನಾನಮಾಡುತ್ತಿದ್ದುದು ವಾಡಿಕೆ. ಆ ರೀತಿ ಪ್ರಯಾಗದಲ್ಲಿ ಸ್ನಾನವಾದಮೇಲೆ ಮಹಾಸ್ವಾಮಿಯವರು, "ಶಾಸ್ತ್ರಿಗಳೇ! ಇಲ್ಲಿಯ ಕ್ಷೇತ್ರಪುರೋಹಿತರಾದ ಫಂಡಾಗಳು ಸರಸ್ವತೀ ದೋಣಿಯಲ್ಲಿ ಗಂಗಾಸ್ನಾನ ಮಾಡಿಸಿದುದು ಸರಿಯಾಗಿ ನಡೆಯಿತೆ?" ಎಂದು ಕೇಳಿದರು. ಶಾಸ್ತ್ರಿಗಳು, "ಮಹಾಸ್ವಾಮಿ, ಎಂದಿನಂತೆ ನಡೆಯಿತು. ಸರಿಯಾಗಿ ನಡೆಯಿತೆಂದೇ ಹೇಳಬೇಕು" ಎಂದು ಉತ್ತರ ಹೇಳಲು ಅವರು, "ಅದೇನು, ಅನುಮಾನ? ಸ್ಪಷ್ಟವಾಗಿ ಹೇಳಿ" ಎಂದು ಕೇಳಿದರು. ಶಾಸ್ತ್ರಿಗಳು, "ಇಂದೂ ಎಂದಿನ ವಾಡಿಕೆಯಂತೆ ಸರಸ್ವತೀ ದೋಣಿಯಲ್ಲಿ ಭಾಗ್ಯವಂತರ ಸ್ನಾನ ನಡೆಯಿತು. ಆದರೆ ಬಡವರಾದ ನಮ್ಮಂಥವರು ಮಾಡುವ ಸ್ನಾನದ ಬಗೆ ಹೀಗಲ್ಲ. ಅದೇ ಬೇರೆ" ಎಂದರು. ಮಹಾಸ್ವಾಮಿಯವರು ನಗುತ್ತ, "ಭಗವಂತನೊಬ್ಬನೇ ಭಾಗ್ಯವಂತ. ಉಳಿದವರಲ್ಲಿ ಬಡವರು ಯಾರು? ಭಾಗ್ಯವಂತರು ಯಾರು? ಅದಿರಲಿ. ಬಡವರ ಸ್ನಾನವೆಂದಿರಲ್ಲಾ. ಅದರ ಬಗೆ ಹೇಗೆ? ಹೇಳಿ" ಎಂದರು. ಶಾಸ್ತ್ರಿಗಳು, "ನಾವು ಸಂಗಮಕ್ಕೆ ಮೂರು ಮೈಲಿಗಳೂ ನದೀ ತೀರದಲ್ಲಿ ನಡೆದುಹೋಗಿ ನದಿಯಲ್ಲೇ ಮುವ್ವತ್ತಾರು ಸಲ ಮುಳುಗುಹಾಕಿ ಸ್ನಾನ ಮಾಡುತ್ತೇವೆ" ಎಂದು ಉತ್ತರ ಹೇಳಿದರು. ಒಡನೆಯೇ ಮಹಾಪ್ರಭುಗಳವರು, "ನಾಳೆ ನಾವೂ ಬಡವರು. ಬಡವರಂತೆಯೇ ಸ್ನಾನ ಮಾಡುತ್ತೇವೆ" ಎಂದರು. ಮಾರನೆಯ ದಿನ ಅವರು ಪಾದಚಾರಿಗಳಾಗಿಯೇ ನದೀ ತೀರಕ್ಕೆ ದಯಮಾಡಿ, ಸ್ನಾನಘಟ್ಟದಲ್ಲಿ ನದಿಯೊಳಕ್ಕಿಳಿದು, ಶಾಸ್ತ್ರೀಯವಾಗಿ ಸಂಕಲ್ಪಮಾಡಿಸಿ, ಮೂವತ್ತಾರು ಮುಳುಗುಗಳನ್ನು ಹಾಕಿ ಸ್ನಾನ ಮಾಡಿ ಜಪಮಾಡಿದರು. ಆ ದಿನ ಮಧ್ಯಾಹ್ನ, "ಶಾಸ್ತ್ರಿಗಳೇ! ಈ ದಿನದಂತೆ ಎಂದೂ ಸ್ನಾನವೇ ಆಗಿರಲಿಲ್ಲ. ಇದೇ ನಿಜವಾದ ನದೀ ಸ್ನಾನ" ಎಂದು ಹೇಳಿದರು. ಆಮೇಲೆ ಹಿಂದೂ ವಿಶ್ವವಿದ್ಯಾನಿಲಯದ ಮೊದಲನೆಯ ಘಟಿಕೋತ್ಸವದಲ್ಲಿ (ಕಾನ್ವೊಕೇಷನ್) ೧೯೧೯ನೆಯ ಇಸವಿ ಜನವರಿ ತಿಂಗಳು ೧೭ನೆಯ ತಾರೀಖಿನಲ್ಲಿ ಅಧ್ಯಕ್ಷತೆ ವಹಿಸಲು ಕಾಶೀನಗರಕ್ಕೆ ಹೋಗಿದ್ದಾಗ ಸಹ, ಮಹಾಪ್ರಭು

ಕಾಶೀಯಾತ್ರೆ

ಗಳವರು ವೇದಮೂರ್ತಿ ಬ್ರಹ್ಮಶ್ರೀ ಕಾನಕಾನಹಳ್ಳಿ ನಾರಾಯಣಶಾಸ್ತ್ರಿ ಗಳೊಡನೆ, "ಶಾಸ್ತ್ರಿಗಳೇ! ಇಲ್ಲಿಯೂ ಬಡವರ ಸ್ನಾನಕ್ಕೆ ಅವಕಾಶ ವುಂಟಷ್ಟೆ? ಇನ್ನುಮೇಲೆಲ್ಲಾ ಅದೇ ನಡೆಯಲಿ" ಎಂದು ಹೇಳಿ ನಕ್ಕರು. ಮಾರನೆಯ ದಿನ ಹನುಮಾನ್ ಘಾಟಿನಲ್ಲಿ ಗಂಗಾಸ್ನಾನಮಾಡಿ, ಬೆಳಗ್ಗೆ ಆರು ಘಂಟೆಯಿಂದ ಸಾಯಂಕಾಲ ಆರು ಘಂಟೆಯವರೆಗೂ ಉಪವಾಸ ವಿದ್ದು ಜಪಮಾಡಿ, ವಿಶ್ವೇಶ್ವರ ದರ್ಶನವಾದ ಮೇಲೆ ಭೋಜನಮಾಡಿದರು.

ಮತ್ತೊಂದು ಸಲ ಕಾಶೀಯಾತ್ರೆಗೆ ಹೋಗಿದ್ದಾಗ, ಹದಿನಾಲ್ಕು ದಿನಗಳು "ಬಡವರ ಸ್ನಾನ" ಮಾಡಿ, ಬೆಳಗಿನಿಂದ ಪ್ರದೋಷಕಾಲದ ವರೆಗೂ ಜಪಮಾಡುತ್ತಿದ್ದು, ಅನಂತರ ವಿಶ್ವೇಶ್ವರ ದೇವಾಲಯಕ್ಕೆ ಹೋಗಿ ದೇವರ ದರ್ಶನಮಾಡಿದ ಮೇಲೆ ಬಿಡಾರಕ್ಕೆ ಹಿಂತಿರುಗಿ ಅನಂತರ ಊಟಮಾಡುತ್ತಿದ್ದರು. ಒಂದು ದಿನ ವಿಶ್ವೇಶ್ವರ ದೇವಾಲಯಕ್ಕೆ ಹೋಗುತ್ತಿದ್ದಾಗ ದಾರಿಯಲ್ಲಿ ಮಲಗಿದ್ದ ಒಂದು ಹಸುವನ್ನು ಓಡಿಸಲು ಮುಂದೆ ಹೋಗಲನುವಾದ ಚೋಪದಾರನನ್ನು ತಡೆದು, "ಅದಕ್ಕೇಕೆ, ನಮ್ಮಿಂದ ಹಿಂಸೆ? ಬಳಸಿಕೊಂಡು ಹೋದರೆ ಕಾಲೆಷ್ಟು ಸವೆದು ಹೋದೀತು? ಬಳಸಿಕೊಂಡು ದೂರವಾಗಿಯೇ ಹೋಗೋಣ" ಎಂದರು.

ಒಂದು ದಿನ, ಹನುಮಾನ್ ಘಾಟಿನ ಸ್ನಾನಘಟ್ಟದ ಕಲ್ಲುಮಂಟಪ ದಲ್ಲಿ ಕುಳಿತು ಸಂಧ್ಯಾಕಾಲದವರೆಗೂ ಜಪಮಾಡಿ ಮಹಾಪ್ರಭುಗಳವರು ಮೇಲಕ್ಕೆದ್ದಾಗ ತಲೆತಾಕಿತು. ಆ ಸ್ಥಳವು ಕಾಶೀ ಮಹಾರಾಜರಿಗೆ ಸೇರಿದ್ದ ಕಾರಣ, ಅವರು ಸಮ್ಮತಿಸುವುದಾದರೆ ಆ ಮಂಟಪವನ್ನು ಉತ್ತಮಪಡಿಸುವುದಾಗಿ ಮಹಾಪ್ರಭುಗಳವರು ಅವರಿಗೆ ಪತ್ರಬರೆಯಿ ಸಿದರು. ಕಾಶೀ ಮಹಾರಾಜರು ಆ ಮಂಟಪವನ್ನೂ ಅದರ ಸುತ್ತ ಮುತ್ತಲಿನ ಪ್ರದೇಶವನ್ನೂ ಬಿಟ್ಟುಕೊಟ್ಟಿರುವುದಾಗಿ ಉತ್ತರಕೊಟ್ಟರು. ಜಯಪುರಘಾಟ್, ಸಿಂಧ್ಯಘಾಟ್, ಕಾಶ್ಮೀರಘಾಟ್, ಕಪೂರ್ಥಲಘಾಟ್, ಎಂದು ಮುಂತಾಗಿ ಇತರ ಸಂಸ್ಥಾನಗಳ ಸ್ನಾನಘಟ್ಟಗಳಿದ್ದು ಮೈಸೂರು ಸಂಸ್ಥಾನದ ಹೆಸರಿನ ಸ್ನಾನಘಟ್ಟವಿಲ್ಲದಿದ್ದ ಕೊರತೆಯು ನಿವಾರಣೆಯಾಗಲು ಅವಕಾಶವುಂಟಾಯಿತೆಂದು ಮಹಾಪ್ರಭುಗಳವರಿಗೆ ಹರ್ಷವುಂಟಾಯಿತು. ಅಲ್ಲದೆ, ಅದುವರೆಗೆ ಗಂಗಾತೀರಕ್ಕೆ ದೂರವಾಗಿ ಮೂಲೆತಾಕಿನಲ್ಲಿದ್ದ ಮೈಸೂರು ಮಹಾರಾಜರ ಛತ್ರವು ಗಂಗಾತೀರದಲ್ಲಿ ನಿರ್ಮಿತವಾಗಲು ಅವಕಾಶವುಂಟಾಯಿತೆಂದೂ ಅವರಿಗೆ ಆನಂದವುಂಟಾಯಿತು. ಮಹಾ ಪ್ರಭುಗಳವರು ಕಾಶೀ ಮಹಾರಾಜರವರಲ್ಲಿಗೆ ಚಿತ್ತೈಸಿ ತಮ್ಮ ಹರ್ಷಾತಿ ಶಯವನ್ನೂ ಕೃತಜ್ಞತೆಯನ್ನೂ ಸೂಚಿಸಿ ಹಿಂತಿರುಗಿದರು. ಅನಂತರ

ಆ ಪ್ರದೇಶದ ಕ್ರಯದ ವಿಚಾರವನ್ನು ಪ್ರಸ್ತಾವಿಸಿದ್ದ ಪತ್ರವು ಹೋದಾಗ ಕಾಶೀ ಮಹಾರಾಜರವರು ತಾವು ಉಚಿತವಾಗಿ ಅದನ್ನು ಬಿಟ್ಟುಕೊಟ್ಟರು ವುದಾಗಿಯೂ, ಮೈಸೂರು ಸಂಸ್ಥಾನದ ಮಹಾರಾಜರಂತಹ ಮಹಾನು ಭಾವರಿಗೆ ಅದನ್ನು ಕೊಡಲು ಅವಕಾಶ ಲಭಿಸಿದುದೇ ತಮ್ಮದೊಂದು ಪುಣ್ಯವೆಂದೂ ಉತ್ತರವನ್ನು ಕಳುಹಿಸಿದರು. ಮಹಾಪ್ರಭುಗಳವರು ಅದಕ್ಕಾಗಿ ಹರ್ಷಿಸಿದರಾದರೂ, "ನಮ್ಮ ದೇಶದ ಭೂಮಿಯಾಗಿದ್ದರೆ ನಿರಾಂತಕವಾಗಿ ತೆಗೆದುಕೊಳ್ಳುತ್ತಿದ್ದೆವು. ಆದರೆ ನಾವು ಕ್ಷತ್ರಿಯರು. ನಮ್ಮದಲ್ಲದ ಪ್ರದೇಶವನ್ನು ಉಚಿತವಾಗಿ ಸ್ವೀಕರಿಸಲಾರೆವು" ಎಂದು ಮುಂತಾಗಿ ಮತ್ತೆ ಪತ್ರವನ್ನು ಕಳುಹಿಸಿದರು. ಮಹಾರಾಜರು ಗಳಿರ್ವರಿಗೂ ಆರು ತಿಂಗಳುಗಳ ಕಾಲ ಪತ್ರವ್ಯವಹಾರ ನಡೆಯಿತು. ಕೊನೆಗೆ, ಆಳಿದ ಮಹಾಸ್ವಾಮಿಯವರಿಂದ ಮೂವತ್ತು ಸಾವಿರ ರೂಪಾಯಿ ಗಳನ್ನು ಕಾಶೀ ಮಹಾರಾಜರವರು ಸ್ವೀಕರಿಸಬೇಕಾಯಿತು. ಮೈಸೂರು ಸಂಸ್ಥಾನದ ಮಹಾರಾಜರ ಚತ್ರವೂ, ಸ್ನಾನಘಟ್ಟವೂ ಈಗ ಶೋಭಿಸು ತ್ತಿರುವುದು ಹಾಗೆ ಕ್ರಯಕ್ಕೆ ಪಡೆದ ಪ್ರದೇಶದಲ್ಲೇ.

ಒಂದು ಸಲ, ಕಾಶೀ ವಿಶ್ವೇಶ್ವರ ಸ್ವಾಮಿಯವರಿಗೆ ಸಂಸ್ಥಾನದ ಪ್ರಜೆಗಳ ಕ್ಷೇಮಾರ್ಥವಾಗಿ ಮಹಾಪೂಜೆ ಮಾಡಿಸಿದ ದಿನ ಮಹಾಪ್ರಭು ಗಳವರ ಪರಿವಾರದ ಹರಿಕಾರರು ಮುಂತಾದವರು ಕ್ಷೇತ್ರವಿಧಿಗನುಸಾರ ವಾಗಿ ಇಪ್ಪತ್ತೊಂದು ಹರಿವಾಣಗಳಲ್ಲಿ ಫಲಪುಷ್ಪಗಳು, ಶಾಲುಗಳು, ಪೀತಾಂಬರಗಳು ಮುಂತಾದುವುಗಳನ್ನು ಹಿಡಿದು ದೂರದಲ್ಲಿ ನಿಂತಿದ್ದರು. ಆಳಿದ ಮಹಾಸ್ವಾಮಿಯವರು ದೇವಸ್ಥಾನಕ್ಕೆ ಬರುವುದರಲ್ಲಿದ್ದ ಕಾರಣ, ಇತರರನ್ನು ಒಳಕ್ಕೆ ಬಿಡಲಿಲ್ಲ; ಸುಮಾರು ಮೂರು ನಾಲ್ಕು ಸಾವಿರ ಜನರು ಹೊರಗೆ ನಿಲ್ಲಬೇಕಾಯಿತು. ಮಹಾಪ್ರಭುಗಳವರು ಅದನ್ನು ಕಂಡು ಮನನೊಂದು, "ನಾವು ದೇವಾಲಯಕ್ಕೆ ಬಂದು ನಮ್ಮ ಕಡೆಯ ಪೂಜೆ ನಡೆಯುವುದಕ್ಕಾಗಿ ಇಷ್ಟು ಜನರೂ ಹೊರಗೆ ನಿಲ್ಲಬೇಕೆ? ಇಷ್ಟು ಜನ ಭಕ್ತರ ಪೂಜೆ ನಿಲ್ಲಿಸಿ ನಾವು ಪೂಜೆಮಾಡಿಸಬೇಕೆ? ಮೊದಲು ಅವರೆಲ್ಲರ ಪೂಜೆಯೂ ವಿಶ್ವೇಶ್ವರಸ್ವಾಮಿಯವರಿಗೆ ಸಲ್ಲಲಿ. ಅನಂತರವೇ ನಮ್ಮ ಮಹಾಪೂಜೆ ನಡೆಯಲಿ" ಎಂದರು. ಭಕ್ತಾದಿಗಳೂ, ಸಮ್ಮುಖದ ಅಧಿಕಾರಿಗಳೂ, ಪರಿಜನರೂ ವಿಸ್ಮಿತರಾದರು.

೧೯೩೬ನೆಯ ಇಸವಿಯಲ್ಲಿ, ಆಳಿದ ಮಹಾಸ್ವಾಮಿಯವರು ಮಹಾಮಾತೃಶ್ರೀ ವಾಣೀವಿಲಾಸ ಸನ್ನಿಧಾನದವರಿಗೆ ಅರವತ್ತು ವರ್ಷ ವಯಸ್ಸಾದ ನಿಮಿತ್ತದ ಶಾಂತ್ಯುತ್ಸವವನ್ನು ಕಾಶೀ ನಗರದಲ್ಲಿ ವಿಶೇಷ ವಿಜೃಂಭಣೆಯಿಂದ ನೆರವೇರಿಸಿದರು.

ಆಳಿದ ಮಹಾಸ್ವಾಮಿಯವರು ೧೯೩೫ನೆಯ ಇಸವಿಯಲ್ಲಿ ಬದರೀ ಯಾತ್ರೆಗಾಗಿ ಹೊರಟರು. ಬದರೀನಾಥ ಕೇದಾರನಾಥ ಕ್ಷೇತ್ರಗಳು ಸನಾತನ ಧರ್ಮಾವಲಂಬಿಗಳಿಗೆ ಪರಮ ಪವಿತ್ರ

**ಬದರೀಯಾತ್ರೆ**

ವಾದ ಯಾತ್ರಾಸ್ಥಳಗಳಲ್ಲೆರಡು. ಬದರೀನಾಥ ಕ್ಷೇತ್ರವು ಹಿಮವತ್ಪರ್ವತ ಶ್ರೇಣಿಗೆ ಸೇರಿದಂತೆ ಹನ್ನೆರಡು ಸಾವಿರ ಅಡಿಗಳ ಎತ್ತರದಲ್ಲಿ ಮನೋಹರವಾದ ಸನ್ನಿವೇಶ ದಲ್ಲಿದೆ. ಯುರೋಪಿಯನ್ ದೊಡ್ಡಮನುಷ್ಯರೊಬ್ಬರು ಅದರ ವಿಚಾರ ವನ್ನು ಪ್ರಸ್ತಾವಿಸಿ, "ದೇವಾಲಯಗಳು ಪ್ರಯೋಜನವಿಲ್ಲದ ಕಲ್ಲುಗಳ ರಾಶಿಗಳೇ ಆಗಿರಲಿ, ಅಥವಾ ಈ ದೇವರುಗಳೆಲ್ಲ ಅನಾಗರಿಕ ದಶೆಯಲ್ಲಿ ದ್ದಾಗಿನ ಮಾನವನ ಊಹಾಕಲ್ಪನೆಯ ಕುರುಹುಗಳೆಂದೇ ಬೇಕಾದರೂ ಭಾವಿಸಲಿ, ಹಿಮವತ್ಪರ್ವತದಲ್ಲಿ ಒಂದು ಘಳಿಗೆಯನ್ನು ಕಳೆಯುವುದೇ ಚಿರಸ್ಮರಣೀಯವಾದೊಂದು ಸುಯೋಗ"* ಎಂದು ಹೇಳಿದ್ದಾರೆ. ಬದರೀಕ್ಷೇತ್ರದ ಮಹಿಮೆಯಲ್ಲಿ ನಂಬಿಕೆಯಿಲ್ಲದವರ ಭಾವನೆಯು ಕೂಡ ಹಾಗಿರುವಲ್ಲಿ ಯಾತ್ರಾರ್ಥಿಗಳಾದ ಆಸ್ತಿಕರ ಮನಸ್ಸಿನ ಆನಂದವು ಮತ್ತೂ ಅಧಿಕವಾಗಿರುತ್ತದೆ. ವಸಿಷ್ಠಮಹರ್ಷಿಗಳು ತಪಸ್ಸುಮಾಡಿ ಯೋಗವಾಸಿಷ್ಠವೆಂಬ ಪೂಜ್ಯ ಗ್ರಂಥವನ್ನು ಕರುಣಿಸಿದ ಸ್ಥಳವೆಂದೂ, ಅಗಸ್ತ್ಯ ಮಹರ್ಷಿಗಳು ತಪಸ್ಸುಮಾಡಿದ ಸ್ಥಳವೆಂದೂ, ವ್ಯಾಸ ಮಹರ್ಷಿ ಗಳು ಮಹಾಭಾರತವನ್ನು ರಚಿಸಿದ ಸ್ಥಳವೆಂದೂ, ಪ್ರಸಿದ್ಧವಾದ ಪ್ರದೇಶ ದಲ್ಲಿ ಶ್ರೀ ಶಂಕರಾಚಾರ್ಯರು ಕಟ್ಟಿಸಿದ ಬದರೀನಾರಾಯಣ ದೇವಾಲಯ ದಲ್ಲಿ— ನರನಾರಾಯಣ ಸನ್ನಿಧಿಯಲ್ಲಿ— ನಿಂತ ಯಾತ್ರಿಕರು ಆ ಮಹಾ ಮಹಿಮರಿದ್ದ ಸ್ಥಳದಲ್ಲಿ ತಾವು ನಿಂತಿರುವುದೇ ಒಂದು ಪೂರ್ವಪುಣ್ಯವೆಂದು ಭಾವಿಸದಿರಲಾರರು. ಬದರೀನಾರಾಯಣ ದೇವಾಲಯಕ್ಕೆ ತಿಬೆಟ್ಟಿನ ಕೆಲವು ಬೌದ್ಧವಿಹಾರಗಳಿಂದ ಇಂದಿಗೂ ಕಾಣಿಕೆಗಳು ಸಲ್ಲುತ್ತಿವೆ. ಬ್ರಹ್ಮಕಪಾಲವಿರುವುದೂ ಬದರೀಕ್ಷೇತ್ರದಲ್ಲಿ. ಬ್ರಹ್ಮಕಪಾಲ ಶ್ರಾದ್ಧ ಮಾಡಿದವರಿಗೆ ಮಾತೃರುಣವೂ ಪಿತೃರುಣವೂ ತೀರುವುದೆಂದೂ ಅವರು ಆ ಬಳಿಕ ಪ್ರತಿ ಸಾಂವತ್ಸರಿಕ ಶ್ರಾದ್ಧಮಾಡಬೇಕಾಗಿಲ್ಲವೆಂದೂ ಹಿಂದುಗಳ ನಂಬಿಕೆ.

ಬದರೀಕ್ಷೇತ್ರಕ್ಕೆ ಯಾತ್ರೆ ಹೊರಟಾಗ್ಗೆ, ಆಳಿದ ಮಹಾಸ್ವಾಮಿ ಯವರ ಕಷ್ಟ ಸಹನವನ್ನು ವರ್ಣಿಸಲಳವಲ್ಲ. ಆಲ್ಮೊರಾದಿಂದ ರಾಣಿ

* "Whether temples are useless collections of mere stones, or whether gods are figments of primitive man's imagination, to live in the Himalayas for a while is itself a memorable blessing."

ಕೇತ್ ನೈನಿತಾಲ್ ಮಾರ್ಗವಾಗಿ ಮಹಾಪ್ರಭುಗಳವರು ಬದರೀಕ್ಷೇತ್ರದ ವರೆಗೂ ಪಾದಚಾರಿಗಳಾಗಿ ಪ್ರಯಾಣಮಾಡಿ ಯಾತ್ರಾವಿಧಿಗನುಸಾರ ವಾಗಿ ವರ್ತಿಸಿದರು. ಮಾರ್ಗಮಧ್ಯದ ಕೆಲವು ಪ್ರದೇಶಗಳಲ್ಲಿ ಒಂದು ಕಡೆ ಬೆಟ್ಟವಾದರೆ ಮತ್ತೊಂದು ಕಡೆಗೆ ಕಡಿದಾದ ಕಮರಿಯ ಕೆಳಗೆ ಜಲರಾಶಿ ಯಿಂದ ಭೋರ್ಗರೆಯುತ್ತಿರುವ ನದಿ; ಪಾರ್ಶ್ವಕ್ಕೆ ನೋಡಿದರೇ ತಲೆ ತಿರುಗುವಷ್ಟು ಮೇಲಿರುವ—ಕಾಲು ಜಾರಿದರೆ ನದಿಗೆ ಉರುಳು ವಂತಿರುವ—ತೀರ ಕಿರಿದಾದ ಕಾಲುದಾರಿ. ಅಲ್ಲಲ್ಲಿ ಅಡ್ಡ ಹಾಯ್ದು ಕೊಂಡು ತಲೆಗೆ ತಗಲುವಂತಿರುವ ಕಲ್ಲುಗಳು. ಸಾಮಾನುಗಳು ಆಡುಗಳ ಮೇಲೆ ಅಥವಾ ಜನರ ತಲೆ ಹೊರೆಗಳಮೇಲೆ ಸಾಗಬೇಕು. ಹಗಲಿನಲ್ಲಿ ಪ್ರಯಾಣವು ಬಹಳ ಆಯಾಸಕರವಾದುದರಿಂದ ರಾತ್ರಿ ಹನ್ನೊಂದು ಘಂಟೆಯಮೇಲೆ ಪ್ರಯಾಣ ಹೊರಟು ಪ್ರಾತಃಕಾಲ ಏಳುಘಂಟೆಯ ವೇಳೆಗೆ ಮಜಲು ಮುಟ್ಟಬೇಕು. ಕೆಲಕೆಲವು ಪ್ರದೇಶಗಳಲ್ಲಿ ಕಾಲು ದಾರಿಯು ಒಂದು ಮೈಲಿಯಷ್ಟು ಕೆಳಕ್ಕಿಳಿದು ಒಂದು ಮೈಲಿಯಷ್ಟು ಮೇಲಕ್ಕೇರುತ್ತದೆ. ಈ ರೀತಿ ಅತ್ಯಂತ ಕ್ಲೇಶಕರವಾದ ಬದರೀ ಪ್ರಯಾಣವನ್ನು ಮಹಾಸ್ವಾಮಿಯವರು ಸಾಧಿಸಿದರು. ಕುದುರೆಯ ಮೇಲೆ ಕುಳಿತು ಅಥವಾ ದಂಡಿಯಲ್ಲಿ ಕುಳಿತು ಪ್ರಯಾಣ ಮಾಡ ಬಹುದಾಗಿದ್ದ ಪ್ರದೇಶಗಳಲ್ಲಿ ಕೂಡ ಮಹಾಪ್ರಭುಗಳವರು ಕಾಲುನಡಿಗೆ ಯಿಂದಲೇ ಪ್ರಯಾಣಮಾಡಿದರು. ಹೀಗೆ ಹದಿಮೂರು ಮಜಲುಗಳ ಪ್ರಯಾಣಮಾಡಿ ಅವರು ಪರಿವಾರ ಸಮೇತರಾಗಿ ಬದರೀಕ್ಷೇತ್ರವನ್ನು ಸೇರಿದರು.

ಬದರೀಕ್ಷೇತ್ರದಲ್ಲಿ ಪ್ರವಹಿಸುವ ಅಲಕನಂದಾ ನದಿಯಲ್ಲಿ ಸ್ನಾನ ಮಾಡುವುದೇ ಸಾಧ್ಯವಿಲ್ಲದ ಮಟ್ಟಿಗೆ ಶೀತೋದಕವಾದರೆ, ಸಮೀಪ ದಲ್ಲಿರುವ ತಪ್ತಕುಂಡದಲ್ಲಿ ಕುದಿಯುವ ನೀರು ಭೂಮಿಯೊಳಗಿನಿಂದ ಉಕ್ಕಿಬಂದು ಕೊರೆಯುವ ತಣ್ಣೀರಿನೊಡನೆ ಸೇರಿ ಸ್ನಾನಕ್ಕೆ ಹಿತವಾಗಿರು ತ್ತದೆ. ಯಾತ್ರಿಕರೆಲ್ಲರೂ ಅಲ್ಲಿ ಸ್ನಾನಮಾಡಿ ಬದರೀನಾರಾಯಣ ಸ್ವಾಮಿಯವರ ದರ್ಶನಕ್ಕೆ ತೆರಳುತ್ತಾರೆ. ಶ್ರೀ ಶಂಕರಾಚಾರ್ಯರೇ ಪುರಾಣಗಳ ಆಧಾರದಮೇಲೆ ಹುಡುಕಿ ನರನಾರಾಯಣ ಪರ್ವತಗಳ ಮಧ್ಯದಲ್ಲಿ ಕ್ಷೇತ್ರವನ್ನು ಕಂಡುಹಿಡಿದು ಅಲ್ಲಿ ದೇವಾಲಯವನ್ನು ಕಟ್ಟಿಸಿ ವಿಗ್ರಹ ಪ್ರತಿಷ್ಠೆಮಾಡಿಸಿದರೆಂದು ಐತಿಹ್ಯವಿದೆ. ಅಲ್ಲಿಯ ಅರ್ಚಕರು ಇಂದಿಗೂ ಶ್ರೀ ಶಂಕರಾಚಾರ್ಯರ ಸ್ವಜನರಾದ ನಂಬೂದ್ರಿ ಬ್ರಾಹ್ಮಣರ ಸಂತತಿಯವರೇ. ಅಲ್ಲಿಯ ನಂಬೂದ್ರಿ ಅರ್ಚಕರಿಗೆ ರಾವಲ್ ಎಂದು

ಹೆಸರು. ಅವರನ್ನು ಆರಿಸುವವರು ತಿರುವಾಂಕೂರು ಮಹಾರಾಜರು; ಅಧಿಕಾರಕ್ಕೆ ನಿಯೋಜಿಸುವವರು ಟಿಹ್ರಿ ಸಂಸ್ಥಾನದ ಮಹಾರಾಜರು.

ಆಳಿದ ಮಹಾಸ್ವಾಮಿಯವರು ಬದರೀನಾಥ ಕ್ಷೇತ್ರದಲ್ಲಿ ಐದು ದಿನಗಳಿದ್ದು ಸೇವೆಗಳನ್ನು ಸಲ್ಲಿಸಿದರು. ಅಲ್ಲಿಯ ಚಳಿಯನ್ನು ವರ್ಣಿಸಲಸಾಧ್ಯ. ಕೆಲವು ಕಡೆಗಳಲ್ಲಿ ನದಿಯ ನೀರು ಹೆಪ್ಪುಗಟ್ಟಿ ಜನರು ನಡೆದುಹೋಗಬಹುದಾದ ಮಟ್ಟಿಗೆ ಘನೀಭೂತವಾಗಿರುವುದು. ಆಳಿದ ಮಹಾಸ್ವಾಮಿಯವರು ನಲವತ್ತು ಮೈಲಿಗಳ ದೂರದಿಂದ ತುಲಸಿಯನ್ನು ತರಿಸಿ, ಬದರೀನಾರಾಯಣ ಸ್ವಾಮಿಯವರಿಗೆ ಭಕ್ತಿಯಿಂದ ಸಹಸ್ರನಾಮಾರ್ಚನೆಮಾಡಿಸಿ, ಮಹಾದಾನ ಮಾಡಿ, ಪ್ರಜೆಗಳ ಕ್ಷೇಮಾರ್ಥವಾಗಿ ಮಹಾಪೂಜೆ ಮಾಡಿಸಿದರು. ಕಷ್ಟಸಹಿಷ್ಣುತೆಯಿಂದ ೧೭೦ ಮೈಲಿಗಳ ದೂರ ನಡೆದು ಹೀಗೆ ಯಾತ್ರೆ ಮಾಡಿದ ಮಹಾರಾಜರೇ ಭರತಖಂಡದಲ್ಲಿ ಮತ್ತೊಬ್ಬರಿಲ್ಲದ ಕಾರಣ, ಅಲ್ಲಿಯ ಜನರು ವಿಸ್ಮಿತರಾಗಿ ಮಹಾಪ್ರಭುಗಳವರಲ್ಲಿ ಭಕ್ತಿಪರವಶರಾದರು; ಸಾವಿರಾರು ಮಂದಿ ಕಾಲುಮುಟ್ಟಿ ಅವರಿಗೆ ನಮಸ್ಕಾರಮಾಡಿದರು; ಅದಕ್ಕೆ ಒಂದೂವರೆ ಘಂಟೆಯ ಕಾಲ ಹಿಡಿಯಿತು. ವೃದ್ಧೆಯರು ಕೆಲವರು ದೇವರಿಗೆ ನಮಸ್ಕರಿಸುವಂತೆ ಅವರಿಗೆ ನಮಸ್ಕರಿಸಿ ಆನಂದಾಧಿಕ್ಯದಿಂದ ಕಂಬನಿದುಂಬಿದರು. ಎಲ್ಲಿ ನೋಡಿದರೂ, "ಇಂಥಾ ಮಹಾರಾಜರು ಈ ಪ್ರಪಂಚದಲ್ಲಿ ಮತ್ತೊಬ್ಬರಿಲ್ಲ"ವೆಂದು ಜನರು ತಮ್ಮ ತಮ್ಮ ಭಾಷೆಗಳಲ್ಲಿ ಕೊಂಡಾಡುತ್ತಿದ್ದ ಮಾತುಗಳೇ. ಅವುಗಳನ್ನು ನೆನೆದು ಮೈಸೂರು ಸಂಸ್ಥಾನದವರು ಎಷ್ಟು ಹೆಮ್ಮೆಪಟ್ಟರೂ ಸಾಲದು.

ಆಳಿದ ಮಹಾಸ್ವಾಮಿಯವರು ಬದರೀನಾರಾಯಣ ಕ್ಷೇತ್ರಕ್ಕೆ ಪ್ರಯಾಣಮಾಡುತ್ತಿದ್ದಾಗ, ನಂದ ಪ್ರಯಾಗವೆಂಬ ಸ್ಥಳದಲ್ಲಿ ವಾಸವಾಗಿದ್ದ ಬ್ರಾಹ್ಮಣ ವರ್ತಕನೊಬ್ಬನು ದೊಡ್ಡದೊಂದು ಚಪ್ಪರಹಾಕಿಸಿದ್ದು, ಅವರಿಗೆ ಫಲಪುಷ್ಪಗಳನ್ನು ಸಮರ್ಪಿಸಿ ದಂಡಪ್ರಣಾಮ ಮಾಡಿ ಮಹಾಪ್ರಭುಗಳ ಪಾದಗಳನ್ನು ಹಿಡಿದು ಆನಂದಬಾಷ್ಪದ ಕಾಣಿಕೆಯನ್ನರ್ಪಿಸಿದನು; ಮಹಾಸ್ವಾಮಿಯವರು ತನ್ನ ಮನೆಯಲ್ಲಿದ್ದು ಕೃಪೆಮಾಡಬೇಕೆಂದು ಬೇಡಿದನು. ಅವರು ಸುಸಜ್ಜಿತವಾಗಿದ್ದ ತಮ್ಮ ಬಿಡಾರವನ್ನೂ ಬಿಟ್ಟು ಅದಕ್ಕೆ ಸಮ್ಮತಿಸಿದುದನ್ನು ಕಂಡು ಆನಂದಾಧಿಕ್ಯದಿಂದ ಆತನಿಗೆ ಕಂಬನಿಯ ಕೋಡಿ ಹರಿಯಿತು. ಮಾರನೆಯ ದಿನ ಆತನು ಮಹಾಪ್ರಭುಗಳ ಸಮ್ಮುಖದ ಅಧಿಕಾರಿಗಳೊಡನೆ ತನ್ನ ಭಾವನೆಯಲ್ಲಿ ಇತರ ಮಹಾರಾಜರುಗಳಿಗೂ, ಮಹಾಪ್ರಭುಗಳಿಗೂ ಇದ್ದ ಅಜಗಜಾಂತರವಾದ

ವ್ಯತ್ಯಾಸಗಳನ್ನು ತಿಳಿಸಿ, "ನಾವಿಷ್ಣುಃ ಪೃಥ್ವೀಪತಿಃ" ಎಂಬುದರ ಆಶಯವನ್ನು ತಾನು ಮನಗಂಡುದು ಅವರ ಸಾತ್ವಿಕತೆಯನ್ನು ಕಂಡು ಹರ್ಷಿಸಿದಮೇಲೆ ಮಾತ್ರವೇ — ಎಂದು ಹೇಳಿದನು.

ಆಳಿದ ಮಹಾಸ್ವಾಮಿಯವರಿಗೆ ಮಾರ್ಗದುದ್ದಕ್ಕೂ ಮಹಾಜನ ರಿಂದಲೂ ವಿದ್ಯಾರ್ಥಿಗಳಿಂದಲೂ ಅಲ್ಲಲ್ಲಿ ಪರಮಾದರದ ಸ್ವಾಗತಗಳು ಲಭಿಸಿದುವು. ದಾರಿ ತೋರಿಸುತ್ತಿದ್ದ ಆಳು ಕೂಡ ಕುದುರೆಯಮೇಲೆ ಕುಳಿತು ಹೋಗುತ್ತಿರುವಲ್ಲಿ ಮಹಾಪ್ರಭುಗಳವರು ಮಾತ್ರ ಪಾದಚಾರಿ ಗಳಾಗಿ ದಯಮಾಡುತ್ತಿದ್ದುದನ್ನು ನೋಡಿ ಆ ಬಗೆಯ ಧರ್ಮಶ್ರದ್ಧೆ ಯನ್ನು ಕಂಡು ಬೆರಗಾದ ಜನರು, "ನಾಲ್ಕು ಕೋಟಿ ವರಮಾನವುಳ್ಳ ಸಂಸ್ಥಾನದ ಪ್ರಭುಗಳು ನಡೆದುಹೋಗುತ್ತಾರೆ. ಆಳು ಮಾತ್ರ ಯಾವಾಗಲೂ ಕುದುರೆಯಮೇಲೆ" ("ಚಾರ್ ಕೊರೋಡ್ ರಿಯಾಸತ್ಕಾ ರಾಜಾ ಹೋಕರ್ಕೇ ಚಲ್‌ಕರ್ ಜಾನಾ. ಯೇ ಕಬ್ಬೀ ಸವಾರ್") ಎಂದೂ, "ಇಂತಹ ಮಹಾತ್ಮರಾದ ಮಹಾರಾಜರ ಸೇವೆ ಮಾಡುವ ಜನರೇ ಧನ್ಯರು" ("ಧನ್ಯಹೋ ಐಸಾ ಮಹಾತ್ಮಾ ಮಹಾರಾಜಾಕೇ ಸೇವಾ ಕರ್ತೇ") ಎಂದೂ ಕೊಂಡಾಡಿದರು.

ಬದರೀನಾಥ ಕ್ಷೇತ್ರದಿಂದ ಮರುಪ್ರಯಾಣ ಬಳೆಯುತ್ತಿದ್ದಾಗ ನಡೆದ ಒಂದು ಘಟನೆಯಿಂದ ಮಹಾಪ್ರಭುಗಳ ಪ್ರಜಾವಾತ್ಸಲ್ಯವೆಂತಹ ದೆಂಬುದು ವ್ಯಕ್ತವಾಗುತ್ತದೆ. ಮಾರ್ಗಮಧ್ಯದಲ್ಲಿದ್ದ ಒಂದು ಪಟ್ಟಣ ದಲ್ಲಿ ಪುರಪ್ರಮುಖರು ಅವರನ್ನು ಪ್ರೀತ್ಯಾದರಗಳಿಂದ ಎದುರುಗೊಂಡು ಗೌರವ ತೋರಿ ತಮ್ಮ ಊರಿನ ಸಂಸ್ಕೃತ ಪಾಠಶಾಲೆಯ ಮೂಲಧನಕ್ಕೆ ಸಂಸ್ಕೃತ ಭಾಷಾಭಿಮಾನಿಗಳಾದ ರಾಜರ್ಷಿಗಳಿಂದಲೇ ಅತ್ಯಧಿಕ ಸಹಾಯ ವಾಗಬೇಕೆಂದು ಪ್ರಾರ್ಥಿಸಿದರು. ಆಗ ಮಹಾಪ್ರಭುಗಳವರು ಅವರಿಂದ ಲಭಿಸಿದ ಆದರದ ಸ್ವಾಗತಕ್ಕಾಗಿ ಅವರನ್ನು ವಂದಿಸಿ, ಪ್ರಾಚೀನ ಭಾಷೆ ಯಾದ ಸಂಸ್ಕೃತ ಭಾಷೆಯಲ್ಲಿ ಅವರಿಗಿದ್ದ ಆಸಕ್ತಿಗಾಗಿ ತಮ್ಮ ಸಂತೋಷ ವನ್ನು ಸೂಚಿಸಿ, "ಭಗವಂತನು ಅರವತ್ತು ಲಕ್ಷ ಮಂದಿ ಪ್ರಜೆಗಳ ಯೋಗಕ್ಷೇಮ ಸಾಧನೆಯ ಕರ್ತವ್ಯವನ್ನು ನಮಗೆ ವಹಿಸಿ ಅನುಗ್ರಹಿ ಸಿದ್ದಾನೆ. ನಮ್ಮ ಸ್ವಂತವಾಗಿ ನಮಗೇನೂ ಇಲ್ಲ. ನಮ್ಮ ಪ್ರಜೆಗಳು ನಮ್ಮ ಮೇಲಿನ ಕೇವಲ ಪ್ರೀತಿಯಿಂದ ನಮಗೆ ಸ್ವಲ್ಪ ಹಣವನ್ನು ಕೊಡು ತ್ತಿದ್ದಾರೆ. ಆ ಹಣವನ್ನು ನಾವು ಅವರಿಗೇ ವಿವಿಧ ರೂಪಗಳಲ್ಲಿ ಹಿಂತಿರುಗಿ ಕೊಡುತ್ತಿದ್ದೇವೆ. ಅವರ ಆವಶ್ಯಕತೆಗಳಿಗೇ ಮೊದಲು ಗಮನ ಕೊಡ ಬೇಕಾದುದು ನಮ್ಮ ಅಗತ್ಯ ಕರ್ತವ್ಯ. ಆದಾಗ್ಯೂ ನಿಮ್ಮ ಸಂಸ್ಕೃತ

ಪಾಠಶಾಲೆಯ ಮೂಲನಿಧಿಗಾಗಿ ನಮ್ಮ ಅಲ್ಪಕಾಣಿಕೆಯಾಗಿ ೨,೫೦೦ ರೂಪಾಯಿಗಳನ್ನು ಸ್ವೀಕರಿಸಬೇಕೆಂದು ಬಿನ್ನಹ'' ಎಂದು ಅವರ ಪ್ರಾರ್ಥನೆಗೆ ಪ್ರತ್ಯುತ್ತರವನ್ನು ದಯಪಾಲಿಸಿದರು. ಪುರಪ್ರಮುಖರೆಲ್ಲರೂ ಮಹಾಸ್ವಾಮಿಯವರ ಉದಾರ ಹೃದಯವನ್ನೂ ಪ್ರಜಾವಾತ್ಸಲ್ಯವನ್ನೂ ವಿಧವಿಧವಾಗಿ ಶ್ಲಾಘಿಸಿ ಹರ್ಷಿಸಿದರು.

೧೯೩೭ನೆಯ ಇಸವಿಯಲ್ಲಿ ಮಹಾಪ್ರಭುಗಳವರು ಪಂಜಾಬಿನಲ್ಲಿರುವ ಜ್ವಾಲಾಮುಖೀ ಕ್ಷೇತ್ರಯಾತ್ರೆಗೆ ತೆರಳಿದರು. ಅಲ್ಲಿರುವ

**ಜ್ವಾಲಾಮುಖೀ ಕ್ಷೇತ್ರಯಾತ್ರೆ**

ಜ್ವಾಲಾ ದೇವಾಲಯವು ಒಂದು ಬಂಡೆಯ ಸುತ್ತಲೂ ನಿರ್ಮಿತವಾಗಿದೆ. ಆ ಬಂಡೆಯ ಬಿರುಕುಗಳಿಂದ ಅಗ್ನಿಜ್ವಾಲೆಗಳು ಸಂತತವಾಗಿ ಬೆಳಗುತ್ತ ಹಾಯ್ದು ಬರುತ್ತಿರುತ್ತವೆ. ಅದು ಜ್ವಾಲಾಜಿಯ ದೇವಾಲಯವೆಂದು ಪ್ರಸಿದ್ಧವಾಗಿದೆ. ಭರತಖಂಡದ ಮತ್ತಾವ ಮಹಾರಾಜರೂ ಮಾಡದ ರೀತಿಯಲ್ಲಿ ಪ್ರಾಣಾಪಾಯಕ್ಕೂ ಸಿದ್ಧರಾಗಿ ಅಮರನಾಥ ಬದರೀನಾಥ ಕ್ಷೇತ್ರಯಾತ್ರೆ ಮಾಡಿದ್ದ ರಾಜರ್ಷಿಗಳಾದ ಮಹಾಪ್ರಭುಗಳ ಆಗಮನ ವಾರ್ತೆಯನ್ನು ಕೇಳಿ, ಜ್ವಾಲಾಮುಖೀ ಕ್ಷೇತ್ರದ ಸುತ್ತಮುತ್ತಲಿನ ಹದಿನೈದು ಇಪ್ಪತ್ತು ಮೈಲಿಗಳ ದೂರದ ಗ್ರಾಮಗಳಿಂದಲೂ ಪಟ್ಟಣಗಳಿಂದಲೂ ಅನೇಕ ಸಹಸ್ರಮಂದಿಗಳು ಮಹಾಸ್ವಾಮಿಯವರ ದರ್ಶನಾಕಾಂಕ್ಷಿಗಳಾಗಿ ಬಂದಿದ್ದರು. ಮಹಾಪ್ರಭುಗಳವರ ಸಾತ್ವಿಕಮೂರ್ತಿಯನ್ನು ಕಂಡು ದಂಡಪ್ರಣಾಮ ಮಾಡಿದರು. ತಮ್ಮ ತಮ್ಮ ಊರುಗಳನ್ನೂ ಕೂಡ ಮರೆತಂತೆ ತೋರುತ್ತಿದ್ದ ಅವರೆಲ್ಲರನ್ನೂ ಮಹಾಪ್ರಭುಗಳವರು ಮಿಷ್ಟಾನ್ನ ಭೋಜನದಿಂದ ತೃಪ್ತಿಪಡಿಸಿದರು.

ಆಳಿದ ಮಹಾಸ್ವಾಮಿಯವರು ಬಹಳ ಕಷ್ಟಸಾಧ್ಯವಾದ ಕೇದಾರನಾಥ ಕ್ಷೇತ್ರಯಾತ್ರೆಯನ್ನು ೧೯೪೦ನೆಯ ಇಸವಿಯಲ್ಲಿ ನೆರವೇರಿಸಿದರು.

**ಕೇದಾರನಾಥ ಕ್ಷೇತ್ರಯಾತ್ರೆ**

ಕೇದಾರನಾಥ ಕ್ಷೇತ್ರದ ಬಳಿಯಲ್ಲಿ ಹಿಮಾಲಯದ ಶಿಖರಗಳು ಇಪ್ಪತ್ತಮೂರು ಸಾವಿರ ಅಡಿಗಳಷ್ಟು ಎತ್ತರವಾಗಿವೆ. ಶ್ರೀ ಶಂಕರಾಚಾರ್ಯರು ಗುಹಾ ಪ್ರವೇಶಮಾಡಿ ಪರಂಧಾಮವನ್ನೈದಿದುದು ಕೇದಾರನಾಥ ಕ್ಷೇತ್ರದ ಬಳಿಯಲ್ಲಿ. ವೀರಶೈವರ ಪಂಚ ಪೀಠಗಳಲ್ಲೊಂದಿರುವುದು ಕೇದಾರನಾಥ ಕ್ಷೇತ್ರದಲ್ಲಿ. ಆ ಮಠದ ಶ್ರೀಗಳವರಿಗೂ ರಾವಲ್ ಎಂದೇ ಹೆಸರು.



ಕೇದಾರನಾಥ ಯಾತ್ರೆಯ ಕಾಲದಲ್ಲಿ

ಕೇದಾರನಾಥ ಕ್ಷೇತ್ರಕ್ಕೆ ಯಾತ್ರಾರ್ಥವಾಗಿ ಅನೇಕ ಮಂದಿ ಸಾಧುಗಳೂ ಸಂನ್ಯಾಸಿಗಳೂ ಭಕ್ತಿಯಿಂದ ಹೋಗಿ ಬರುತ್ತಾರೆ. ಆದರೆ ಅಲ್ಲಿ ಒಂದು ದಿನಕ್ಕಿಂತಲೂ ಹೆಚ್ಚು ಕಾಲ ನಿಲ್ಲತಕ್ಕವರ ಸಂಖ್ಯೆಯು ತೀರ ಅಲ್ಪ. ಆಳಿದ ಮಹಾಸ್ವಾಮಿಯವರು ಅಲ್ಲಿ ಐದು ದಿನಗಳ ಕಾಲ ಬಿಡಾರ ಮಾಡಿದ್ದರು.

ಆಳಿದ ಮಹಾಸ್ವಾಮಿಯವರು ನೆರವೇರಿಸಿದ ಯಾತ್ರೆಗಳಲ್ಲೆಲ್ಲ ಕೈಲಾಸ ಶಿಖರ ದರ್ಶನ ಮಾಡಿ ಬಂದ ಯಾತ್ರೆಯೇ ಅತ್ಯಂತ ಶ್ರೇಷ್ಠ ವಾದುದೂ ಅತ್ಯಂತ ಕಷ್ಟವಾದುದೂ ಎನ್ನಲು ಸಂದೇಹವೇ ಇಲ್ಲ. ಏಕೆಂದರೆ, ಅಲ್ಲಿಯ ಚಳಿ ಯಾಗಲಿ, ಅಲ್ಲಿಗೆ ಹೋಗುವ ಮಾರ್ಗದಲ್ಲಿ ಆಗಾಗ ಬಂಡೆಗಳ ಗಾತ್ರದ ಹಿಮಖಂಡಗಳುರುಳುವುದ ರಿಂದುಂಟಾಗುವ ಮರಣದ ಸಂಭವವಾಗಲಿ, ರೋಗಗಳು ಬಂದು ಪ್ರಾಣಾ ಪಾಯವುಂಟಾಗುವ ಸ್ಥಿತಿಯಾಗಲಿ ಅಲ್ಲಿಗೆ ಹೋಗಿ ಬಂದವರಿಗೆ ಮಾತ್ರವೇ ಹೊರತು ಇತರರಿಗೆ ಗೊತ್ತಾಗುವಂತಿಲ್ಲವೆಂದು ಅನೇಕ ಮಂದಿ ಮಹಾ ಶಯರುಗಳು ಹೇಳಿದ್ದಾರೆ. ಆದರೆ ಆ ಪ್ರತಿಕೂಲಗಳ ಜೊತೆಗೆ, ಮತ್ತೆ ಲ್ಲಿಯೂ ಕಾಣಲಾಗದ ಪ್ರಕೃತಿ ಸೌಂದರ್ಯವನ್ನು ಕಂಡು ಆನಂದಿಸ ಬಹುದಾದ ಅನುಕೂಲವೂ ಹಿಮವತ್ಪರ್ವತದಲ್ಲುಂಟೆಂದೂ ಹಲವು ಮಂದಿ ಪುಣ್ಯಾತ್ಮರು ಹೇಳಿದ್ದಾರೆ. ಕೈಲಾಸ ಶಿಖರವು ಹಿಮವತ್ಪರ್ವತದ ಪರಮ ಸುಂದರವಾದ ಶಿಖರಗಳಲ್ಲೊಂದು. ಅದು ಪರಮಪವಿತ್ರವಾದ ಯಾತ್ರಾಸ್ಥಾನವೂ ಆಗಿದೆ.

**ಕೈಲಾಸ ಶಿಖರ ಯಾತ್ರೆ**

ಸನಾತನ ಧರ್ಮಾವಲಂಬಿಗಳು ಹಿಮವತ್ಪರ್ವತವನ್ನು ದೇವ ಭೂಮಿಯೆಂದು ಕರೆದಿರುವುದೂ, ಕಾಲಿದಾಸ ಮಹಾಕವಿಯು ಅದನ್ನು "ದೇವತಾತ್ಮಾ" ಎಂದು ಕರೆದಿರುವುದೂ ಹಾಗಿರಲಿ. ಕೆಲವು ಮಂದಿ ಪಾಶ್ಚಾತ್ಯರು ಕೂಡ— ಅವರಿಗೆ ಹಿಮವತ್ಪರ್ವತದಲ್ಲಿ ಪವಿತ್ರಭಾವನೆ ಯುಂಟಾಗಲು ಕಾರಣವಿಲ್ಲದಿದ್ದೂ— ಹಿಮವತ್ಪರ್ವತವನ್ನು ಕಂಡು ಬೆರಗಾಗಿ ಅಲ್ಲಿ ದೇವತಾ ಸಾನ್ನಿಧ್ಯವಿದ್ದಂತೆ ತೋರುವುದೆಂದು ಮುಕ್ತಕಂಠ ದಿಂದ ಹೇಳಿದ್ದಾರೆ. ಅಲ್ಲಿಯ ದೇವದಾರು ವೃಕ್ಷಗಳ ಜೊತೆಗೆ ತಾವೂ ಒಂದು ವೃಕ್ಷವಾಗಿ ಅವುಗಳ ರಸವೇ ತಮ್ಮ ಮೈಯಲ್ಲಿ ಹರಿಯುತ್ತಿದ್ದಂತೆ ಪ್ರಕೃತಿಯಲ್ಲಿ ತಲ್ಲೀನತೆಹೊಂದಿ, ವಿಶ್ವಾತ್ಮನ ವಿಲಾಸ ಭೂಮಿಕೆಯೊಂದೇ ಸರ್ವವ್ಯಾಪಿಯೆಂಬ ಅನುಭವವನ್ನು ಪಡೆದುದಾಗಿ ಅವರಲ್ಲೊಬ್ಬರು ಬರೆದಿದ್ದಾರೆ. ಸುಪ್ರಸಿದ್ಧ ಸಸ್ಯವಿಜ್ಞಾನಶಾಸ್ತ್ರಜ್ಞರಾಗಿದ್ದ ಡಾಕ್ಟರ್

ಕಾಶ್ಯಪ್ ಎಂಬವರು ಒಮ್ಮೆ ಹೇಳಿದಂತೆ, ನಾಸ್ತಿಕರನ್ನು ಕೂಡ ಆಸ್ತಿಕರನ್ನಾಗಿ ಪರಿಣಾಮಗೊಳಿಸುವ ಪವಿತ್ರತಮವಾದ ಸಂಮೋಹನ ಶಕ್ತಿಯು ಹಿಮವತ್ಪರ್ವತಕ್ಕುಂಟು. ಸೂರ್ಯಾಸ್ತ ಕಾಲದಲ್ಲಿ ಅಲ್ಲಿಯ ಆಕಾಶದಲ್ಲಿಯೂ ಮತ್ತು ಅಲ್ಲಿಯ ಶಿಖರಗಳಮೇಲೂ ಕಾಣಬಹುದಾದ ವಿವಿಧ ವರ್ಣಗಳ ವೈಖರಿಯನ್ನಂತೂ ಭರತಖಂಡದಲ್ಲಿ ಮತ್ತೆಲ್ಲಿ ಕಾಣುವುದೂ ಸಾಧ್ಯವಿಲ್ಲ. ಕೈಲಾಸ ಶಿಖರವನ್ನು ತಿಬೆಟ್ಟಿನವರು ಹಿಮಗಿರಿಯ ರತ್ನವೆಂದು ವರ್ಣಿಸಿದ್ದಾರೆ.

ಮಹಾಪ್ರಭುಗಳವರು ಕೈಲಾಸ ಯಾತ್ರಾರ್ಥವಾಗಿ— ಶ್ರೀಮಾನ್ ಸಿದ್ದಿಕ್-ಉಲ್-ಮುಲ್ಕ್ ಸಡೆಗ್ ಸಡ್ ಷಾ ಅವರು, ರಾಜಸೇನಾಭೂಷಣ ಲೆಫ್ಟಿನೆಂಟ್ ಕರ್ನಲ್ ಎ. ವಿ. ಸುಬ್ರಹ್ಮಣ್ಯರಾಜ ಅರಸಿನವರು, ರಾಜಸೇನಾತಿಲಕ ಲೆಫ್ಟಿನೆಂಟ್ ಕರ್ನಲ್ ಎಸ್. ಗೋಪಾಲರಾಯರು, ಕ್ಯಾಪ್ಟನ್ ನಬೀಖಾನ್‌ರವರು, ಲೆಫ್ಟಿನೆಂಟ್ ನಂಜರಾಜ ಬಹದ್ದೂರರವರು, ಡಾಕ್ಟರ್ ಎನ್. ರಂಗಾಚಾರ್ಯರವರು, ಶ್ರೀಮಾನ್ ಸಿ. ವಿ. ಸುಬ್ರಹ್ಮಣ್ಯರಾಜ ಅರಸಿನವರು, ಶ್ರೀಮಾನ್ ಎ. ವೆಂಕಟಸುಬ್ಬಯ್ಯನವರು, ಶ್ರೀಮಾನ್ ಸಿ. ಕೃಷ್ಣಪ್ಪನವರು, ಮುಂತಾದ ಮಹಾಶಯರುಗಳೊಡನೆ— ೧೯೩೧ನೆಯ ಇಸವಿ ಜೂನ್ ತಿಂಗಳು ೧೮ನೆಯ ತಾರೀಖಿನ ದಿನ ಮೈಸೂರು ನಗರದಿಂದ ಪ್ರಯಾಣ ಮಾಡಿ, ೨೦ನೆಯ ತಾರೀಖಿನ ದಿನ ಮುಂಬಯಿ ನಗರವನ್ನು ಸೇರಿ, ೨೪ನೆಯ ತಾರೀಖಿನ ದಿನ ಆಲ್ಮೊರಾಕ್ಕೆ ಸೇರಿದರು. ಸಂಯುಕ್ತ ಪ್ರಾಂತದ ಸರ್ಕಾರದವರು ಆಳಿದ ಮಹಾಸ್ವಾಮಿಯವರಿಗೆ ಯಾತ್ರೆಯ ಸಂಬಂಧದಲ್ಲಿ ಸೌಕರ್ಯವನ್ನು ಕಲ್ಪಿಸುವುದಕ್ಕಾಗಿ ಆಲ್ಮೊರಾ ತಹಸೀಲದಾರರಾಗಿದ್ದ ಶ್ರೀಮಾನ್ ಪ್ರತಾಪಸಿಂಗರವರನ್ನು ನೇಮಿಸಿದ್ದರು.

ಆಳಿದ ಮಹಾಸ್ವಾಮಿಯವರು ೧೯೩೧ನೆಯ ಇಸವಿ ಜೂನ್ ೨೭ನೆಯ ತಾರೀಖಿನ ದಿನ ಬೆಳಗ್ಗೆ ಐದೂವರೆ ಘಂಟೆಗೆ ಕೈಲಾಸ ಶಿಖರ ಯಾತ್ರೆಗಾಗಿ ಆಲ್ಮೊರಾದಿಂದ ಪ್ರಯಾಣ ಮಾಡಿದರು. ಎರಡು ಮಜಲುಗಳ ಪ್ರಯಾಣವು ನಡೆದಮೇಲೆ, ಅವರೆಲ್ಲರೂ ಗನಾಯಿ ಗ್ರಾಮವನ್ನು ತಲಪಿದರು. ಅಲ್ಲಿಯ ರೈತರೂ, ನೆರೆಹೊರೆಯ ಗ್ರಾಮಗಳವರೂ ಗುಂಪುಗೂಡಿ ತಾಳಮೇಳಗಳೊಡನೆ ಬಂದು ಮಹಾಪ್ರಭುಗಳವರಿಗೆ ಮಣಿದು ಭಕ್ತಿಗೌರವಗಳನ್ನು ತೋರಿದರು ; "ಮೈಸೂರ್ ಮಹಾರಾಜಾಕು ಜೈ. ಕೈಲಾಸ್ ಯಾತ್ರಾ ಕು ಜೈ" ಎಂದು ಜಯಘೋಷಮಾಡಿದರು. ಜೂನ್ ೩೦ನೆಯ ತಾರೀಖು ಗನಾಯಿ ಗ್ರಾಮದಿಂದ ಹೊರಟು



ಕೈಲಾಸ ಶಿಖರ ಯಾತ್ರೆಯ ಕಾಲದಲ್ಲಿ
(ಆಳಿದ ಮಹಾಸ್ವಾಮಿಯವರು ಕೆಲವು ಪ್ರದೇಶಗಳಲ್ಲಿ ಮಾತ್ರ
ಕುದುರೆಯಮೇಲೆ ಕುಳಿತು ಚಿತ್ತೈಸಿದರು)



ಆಳಿದ ಮಹಾಸ್ವಾಮಿಯವರು ಮಾನಸ ಸರೋವರದಲ್ಲಿ
ಸ್ನಾನ ಮಾಡುತ್ತಿರುವುದು

ಹತ್ತು ಮಜಲುಗಳ ಪ್ರಯಾಣಮಾಡಿ ಜೂಲೈ ೧೦ನೆಯ ತಾರೀಖಿನ ದಿನ ಮಹಾಪ್ರಭುಗಳವರು ಪರಿವಾರ ಸಮೇತರಾಗಿ ಮಾಲ್ಪಾಕ್ಕೆ ತಲಪಿದರು. ಅಲ್ಲಿಗೆ ಸೇರುವುದಕ್ಕೆ ಮುಂಚೆ ಕಾಳೀ ನದಿಯನ್ನು ದಾಟದ ಬಗೆಯನ್ನು ಚಿತ್ರದಲ್ಲಿ ನೋಡಿದರೇ ಎದೆಯು ಝುಲ್ಲೆನ್ನುತ್ತದೆ. ಮಾಲ್ಪಾದಿಂದ ಬೂಡಿ, ಗಾರ್ಬ್ಯಯಾಂಗ್, ಕಾಲಾಪಾನಿ, ಸಿಯಾಂಗ್ಬಂ, ಮುಂತಾದ ಸ್ಥಳಗಳ ಮಾರ್ಗವಾಗಿ ಏಳು ಮಜಲುಗಳ ಪ್ರಯಾಣವು ಬಳೆದು ಜೂಲೈ ೧೭ನೆಯ ತಾರೀಖಿನ ದಿನ ಅವರೆಲ್ಲರೂ ತಾಕ್ಲಕೋಟ್ ಗ್ರಾಮವನ್ನು ತಲಪಿದರು. ಅಲ್ಲಿ ದೊಡ್ಡದೊಂದು ಸ್ವಾಗತ ಕೂಟ ನಡೆಯಿತು. ಇಪ್ಪತ್ತು ಮೈಲಿಗಳ ದೂರದಿಂದ ಬಂದಿದ್ದ ಹಣ್ಣು ಮುದುಕನೊಬ್ಬನು ಫಲಪುಷ್ಪ ಗಳನ್ನು ಸಮರ್ಪಿಸಿ ಮಹಾಪ್ರಭುಗಳವರಿಗೆ ನಮಸ್ಕಾರಮಾಡಿ, "ಇಲ್ಲಿ ಯವರೇ ಕೈಲಾಸ ಯಾತ್ರೆಗೆ ಹೋಗಿ ಬರುವುದಿಲ್ಲ. ಹೀಗಿದ್ದೂ ಪ್ರಭು ಗಳು ರಾಮೇಶ್ವರದಿಂದ ಕೈಲಾಸ ಯಾತ್ರೆಗೆ ದಯಮಾಡಿದ್ದೀರಂತೆ. ತಾವು ಮಹಾನುಭಾವರಾದ ಮಹಾರಾಜರು" ಎಂದನು. ತಾಕ್ಲಕೋಟ್ ಗ್ರಾಮವು ಬಹಳ ದೊಡ್ಡ ಊರು. ತಿಬೆಟ್ಟಿನ ಕಮಿಷನರವರೂ, ಡಿಸ್ಟ್ರಿಕ್ಟ್ ಮ್ಯಾಜಿಸ್ಟ್ರೇಟರೂ ಇರುವುದೂ ಅಲ್ಲೇ. ಅವರ ಆ ಹುದ್ದೆಗೆ ಜಂಗ್ಪಾನ್ ಎಂದು ಹೆಸರು. ಅವರು ಮಹಾಪ್ರಭುಗಳವರ ದರ್ಶನಕ್ಕಾಗಿ ತಮ್ಮ ಪುತ್ರಿಯೊಡನೆ ದಯಮಾಡಿ, ದ್ವಿಭಾಷಿಯ ಮೂಲಕ ಮಾತನಾಡಿ ತಿಬೆಟ್ಟಿನ ರತ್ನಕಂಬಳಿಗಳನ್ನು ಕಾಣಿಕೆಯಾಗಿ ಸಮರ್ಪಿಸಿದರು. ಮಹಾ ಪ್ರಭುಗಳವರು ಅವರಿಗೆ ಅವರು ಎಂದೂ ನೋಡಿಲ್ಲದಿದ್ದ ಗ್ರಾಮೊ ಫೋನ್ ಯಂತ್ರವನ್ನೂ, ಕೆಲವು "ರಿಕಾರ್ಡು"ಗಳನ್ನೂ ಪಾರಿತೋಷಿಕ ವಾಗಿ ಕೊಟ್ಟುದಲ್ಲದೆ, ಬೌದ್ಧಗುರುಗಳಾದ ಲಾಮಾ ಅವರಿಗೆ ಖಿಲ್ಲತ್ತುಗಳ ನ್ನೊಪ್ಪಿಸಿದರು. ಜೂಲೈ ೨೦ನೆಯ ತಾರೀಖಿನ ದಿನ ಮುಂದಕ್ಕೆ ಪ್ರಯಾಣವು ಬಳೆಯಿತು. ಜೂಲೈ ೨೨ನೆಯ ತಾರೀಖಿನ ದಿನ ಅವರು ಸಮುದ್ರದ ಮಟ್ಟದಿಂದ ಹದಿನಾರು ಸಾವಿರ ಅಡಿಗಳ ಎತ್ತರವಿರುವ ಗುರ್ಲಾ ಕಣಿವೆಯ ಮಾರ್ಗವಾಗಿ ಮಾನಸ ಸರೋವರದ ಬಳಿಯ ಬಿಡಾರಕ್ಕೆ ಸೇರಿದರು.

ಮಾನಸ ಸರೋವರವು ಪುರಾಣಪ್ರಸಿದ್ಧವಾದ ಸರೋವರ. ಹಿಂದುಗಳೂ ಬೌದ್ಧರೂ ಅದನ್ನು ಪವಿತ್ರವೆಂದು ಭಾವಿಸಿದ್ದಾರೆ. ಹಿಮಾ ವೃತವಾಗಿ ಶುಭ್ರವಾಗಿರುವ ಪರ್ವತಗಳ ನಡುವೆ, ಬೆಳ್ಳಿಯ ಮಧ್ಯದ ಪಚ್ಚೆಯಂತೆ ಶೋಭಿಸುವ ಮಾನಸ ಸರೋವರದ ಸೊಗಸನ್ನೂ, ಸೂರ್ಯಾಸ್ತಸಮಯದಲ್ಲಿ ಮತ್ತೆಲ್ಲಿಯೂ ಕಾಣಲಾಗದ ವರ್ಣವೈಖರಿಯು

ಅಲ್ಲಿ ಬೆಳಗುವುದನ್ನೂ ಕಂಡವರೆಲ್ಲರೂ ಮುಗ್ಧರಾಗಿದ್ದಾರೆ. ಅದರಲ್ಲಿರುವ ಮೀನುಗಳು ಸತ್ತು ಒಣಗುವಾಗಲೂ, ಒಣಗಿದಮೇಲೂ ದುರ್ವಾಸನೆಯಿಂದ ಕೂಡಿಲ್ಲದಿರುವುದೊಂದು ಆಶ್ಚರ್ಯಕರವಾದ ಸಂಗತಿ.

ದೂರದಿಂದ ನೋಡಿದರೆ ಹಸುರಾಗಿ ಕಂಡರೂ ಸ್ಫಟಿಕದಂತೆ ಸ್ವಚ್ಛವಾಗಿ ನಿರ್ಮಲವಾಗಿರುವ ಮಾನಸಸರೋವರದ ಜಲದಲ್ಲಿ, ಆಳಿದ ಮಹಾಸ್ವಾಮಿಯವರಾದ ರಾಜರ್ಷಿವರ್ಯರು ಸ್ನಾನಮಾಡಿದರು. ಅವರೂ ಮತ್ತು ಅವರೊಡನೆ ಹೋಗಿದ್ದವರಲ್ಲಿ ಹಿಂದುಗಳೂ ತಮ್ಮ ತಮ್ಮ ಪಿತೃಗಳಿಗೆ ತರ್ಪಣವನ್ನಿತ್ತರು. ಮಾನಸ ಸರೋವರದಲ್ಲಿರುವುದು ಹಿಮಜಲ. ಒಮ್ಮೆ ಅದರಲ್ಲಿ ಸ್ನಾನಮಾಡಿದರೆ ದೇಹವು ಸ್ವಾಧೀನಕ್ಕೆ ಬಂದು ನಡುಕವು ನಿಲ್ಲಲು ಅರ್ಧಘಂಟೆಯಾಗಬೇಕೆಂದು ಡಾಕ್ಟರ್ ಎನ್. ರಂಗಾಚಾರ್ಯರ ತಮ್ಮ ಗ್ರಂಥದಲ್ಲಿ ಬರೆದಿದ್ದಾರೆ.

ಆಳಿದ ಮಹಾಸ್ವಾಮಿಯವರು ಸಪರಿವಾರರಾಗಿ ಜೂಲೈ ೨೩ನೆಯ ತಾರೀಖು ಮಾನಸಸರೋವರದ ಪಶ್ಚಿಮ ತೀರದಲ್ಲಿದ್ದ ಡೇರೆಗಳ ಬಿಡಾರದಿಂದ ಉತ್ತರಾಭಿಮುಖವಾಗಿ ಹೊರಟು ಅಲ್ಲಿಗೆ ಸುಮಾರು ಆರು ಮೈಲಿಗಳ ದೂರದಲ್ಲಿ ಅತಿ ಕಡಿದಾದ ಬೆಟ್ಟದಮೇಲೆ ಕಂಡ ಜಿಯೂಗೊಂಪವೆಂಬ ಬೌದ್ಧ ವಿಹಾರಕ್ಕೂ ಭೇಟಿಯಿತ್ತು ಮುಂದೆ ಪ್ರಯಾಣ ಮಾಡಿದರು. ಮಾನಸಸರೋವರದ ಪಕ್ಷಿಗಳ ಅಂದವನ್ನು ನೋಡಿ ಆನಂದಿಸಿ, ಒಟ್ಟು ಹನ್ನೊಂದು ಮೈಲಿಗಳ ದೂರ ನಡೆದು ಸಿಂಧು ಬ್ರಹ್ಮಪುತ್ರ ನದಿಗಳ ಉಗಮಸ್ಥಾನಗಳನ್ನು ಕಂಡು, ಬಿಡಾರದಲ್ಲಿ ಆ ದಿನವನ್ನು ಕಳೆದು, ಮಾರನೆಯ ಉಷಃಕಾಲ ಪ್ರಯಾಣವನ್ನು ಮುಂದುವರಿಸಿ, ಕೈಲಾಸಪರ್ವತದ ಪದತಲದ ಬರ್ಖಾ ಮೈದಾನವೆಂಬ ಸಾನು ಪ್ರದೇಶವನ್ನು ಸೇರಿದರು. ಮಾರ್ಗಮಧ್ಯದಲ್ಲಿ ಜಿಯೂಗೊಂಪದ ಬಳಿಯ ಬಿಸಿನೀರಿನ ಬುಗ್ಗೆಯನ್ನೂ, ಅದಕ್ಕೆ ಹಿಂದೆ ಚಿನ್ನದ ಅದುರು ಯಥೇಷ್ಟವಾಗಿರುವಂತೆ ನಂಬಿಕೆಯಿರುವ ಹಲವು ಮೈಲಿಗಳ ದೂರದ ಭೂಪ್ರದೇಶವನ್ನೂ ನೋಡಿಕೊಂಡು ಮುಂದೆತೆರಳಿದರು. ದಾರಿಯಲ್ಲಿ ಮೊಲಗಳು ಓಡಾಡುತ್ತಿದ್ದುದನ್ನೂ, ಕೈಲಾಸಶಿಖರವನ್ನು ಸಮೀಪಿಸಿದಂತೆಲ್ಲ ಅಲ್ಲಲ್ಲಿ ಸೇವಂತಿಕೆಯನ್ನು ಹೋಲುವ (ನೀಲಿಯ ದಳಗಳುಳ್ಳ) ಹೂಗಳಿಂದ ಶೋಭಿಸುತ್ತಿದ್ದ ಹೂಗಿಡಗಳನ್ನೂ ಕಂಡರು. ಬರ್ಖಾ ಮೈದಾನದ ಸಾನುಪ್ರದೇಶದಲ್ಲಿ ನಿಂತು ಕೈಲಾಸಶಿಖರದ ದರ್ಶನ ಪಡೆದರು.

ಬರ್ಖಾ ಮೈದಾನವು ತಿಬೆಟ್ಟಿಗೆ ಸೇರಿದ ಪ್ರದೇಶ. ಅಲ್ಲಿ ಎರಡೇ ಎರಡು ಮನೆಗಳುಂಟು. ಅವುಗಳಲ್ಲೊಂದು ಜಂಗ್ಪಾನ್ ಅವರ

ಕೈಕೆಳಗಿನ ಅಧಿಕಾರಿಯುದು. ಆ ಅಧಿಕಾರಿಯು ಮಹಾಪ್ರಭುಗಳವರನ್ನು ಭಕ್ತಿಯಿಂದ ತನ್ನ ಮನೆಗೆ ಕರೆದೊಯ್ದನು. ತನ್ನ ಮನೆಯಲ್ಲಿದ್ದ ತಂತಿಯ ವಾದ್ಯವನ್ನು ಶ್ರುತಿಮಾಡಿ ತಿಬೆಟ್ ಸಂಗೀತ ಕ್ರಮದ ಗೀತೆಗಳೆರಡನ್ನು ನುಡಿಸಿ ಹಾಡಿದನು. ಆಳಿದ ಮಹಾಸ್ವಾಮಿಯವರು ಸಮೀಪದಲ್ಲಿದ್ದ ತಿಬೆಟ್ ಕುರುಬನ ವಾಸಸ್ಥಳವನ್ನೂ ನೋಡಿದರು. ಅದು ಭೂಮಟ್ಟದ ಕೆಳಗೆ— ಸೊಂಟದ ಮಟ್ಟದಷ್ಟು ಕೆಳಗೆ ಹತ್ತು ಅಡಿಗಳ ಚೌಕವಾಗಿ ಒಂದು ಗುಂಡಿಯಂತಿದ್ದ ಮನೆ. ಅಲ್ಲಿ ಒಂದು ಕಡೆಗೆ ಒಲೆ; ಮತ್ತೊಂದು ಮೂಲೆಯಲ್ಲಿ ಬುದ್ಧನ ಪುಟ್ಟ ಪ್ರತಿಮೆ; ಅದರ ಮುಂದೆ ದೀಪ ಮುಂತಾದ ಸಾಮಗ್ರಿಗಳು.

ಆಳಿದ ಮಹಾಸ್ವಾಮಿಯವರು ತಮ್ಮ ಜೊತೆಯವರೊಡನೆ ಜೂಲೈ ೨೫ನೆಯ ತಾರೀಖು ಬೆಳಗಿನ ಐದು ಘಂಟೆಗೆ ಹೊರಟು ದಾರ್ಚಿನ್ನಿಗೆ ದಯಮಾಡಿದರು. ದಾರ್ಚಿನ್ ಇರುವುದು ಕೈಲಾಸ ಪರ್ವತದ ಬುಡದಲ್ಲಿ. ಯಾತ್ರಿಕರು ಕೈಲಾಸ ಪ್ರದಕ್ಷಿಣೆಗೆ ಪ್ರಾರಂಭಿಸುವುದು ಅಲ್ಲಿಂದಲೇ. ಅಲ್ಲಿಂದ ಮಾರನೆಯ ದಿನ ಪ್ರಾತಃಕಾಲ ಐದೂವರೆ ಘಂಟೆಗೆ ಹೊರಟು, ಒಂದು ದಿಣ್ಣೆಯ ಪಾರ್ಶ್ವದಲ್ಲಿ ಬಲಕ್ಕೆ ಸುಮಾರು ಎರಡು ಮೈಲಿಗಳ ದೂರ ನಡೆದು, ಆ ಬಳಿಕ ಒಂದು ನದಿಯು ಪ್ರವಹಿಸುತ್ತಿದ್ದ ಸ್ಥಳವನ್ನು ಸೇರಿ, ಬಲಕ್ಕೆ ತಿರುಗಿ, ನದಿಯ ಅಂಚಿನಲ್ಲಿ ಐದಾರು ಮೈಲಿಗಳ ದೂರ ಹೋಗಿ, ಕೈಲಾಸಪರ್ವತದ ದಕ್ಷಿಣ ಮುಖವನ್ನೂ ಪಶ್ಚಿಮ ಮುಖವನ್ನೂ ದರ್ಶನಮಾಡಿದರು. ಕೈಲಾಸವು ಹಿಮವತ್ಪರ್ವತದ ಒಂದು ಶಿಖರವಾಗಿದ್ದರೂ ಅದೇ ಒಂದು ದೊಡ್ಡ ಬೆಟ್ಟದಂತಿದೆ. ಆ ದಿನ ಒಟ್ಟು ಹನ್ನೊಂದು ಮೈಲಿಗಳನ್ನು ನಡೆದು ಬಿಡಾರಕ್ಕೆ ಸೇರುವ ವೇಳೆಗೆ ಪ್ರಾತಃಕಾಲ ಹನ್ನೊಂದು ಘಂಟೆಯ ವೇಳೆಯಾಯಿತು. ಕೈಲಾಸ ಶಿಖರದ ಬುಡದಲ್ಲಿರುವ ಡಿಡಿಪೂವಿನ ಬಳಿಯಲ್ಲಿ ಬಿಡಾರವು ಸಿದ್ಧವಾಗಿದ್ದಿತು. ಕೈಲಾಸ ಶಿಖರವನ್ನು ಚೆನ್ನಾಗಿ ನೋಡಿ ಹರ್ಷಿಸಲು ಅವರೆಲ್ಲರೂ ಬಿಡಾರದಿಂದ ದೂರ ಹೋಗಿ ಅದಕ್ಕಭಿಮುಖವಾಗಿ ಹೋಗಿ ನಿಂತು ನೋಡಿದರು. ಬಿಡಾರಕ್ಕೆ ಹಿಂತಿರುಗಲು ಕಾಲವು ಮೀರಿ ರಾತ್ರಿಯಾಗುವವರೆಗೂ ಅವರಲ್ಲೊಬ್ಬರಿಗೂ ಅಲ್ಲಿಂದ ಕದಲಲು ಮನಸ್ಸಾಗದೆ ಹೋಯಿತು. ಕೈಲಾಸಪರ್ವತವನ್ನು ಸಮೀಪದಲ್ಲಿ ದರ್ಶನಮಾಡಿದ ಆನಂದಭರದಲ್ಲಿ ಅದುವರೆಗಿನ ಶ್ರಮವೆಲ್ಲ ಮರೆತುಹೋಯಿತು. "ಕೈಲಾಸಪರ್ವತಕ್ಕೆ ತನ್ನ ಬಳಿಗೆ ಬಂದವರನ್ನೆಲ್ಲ ಧ್ಯಾನಮಗ್ನರನ್ನಾಗಿ ಮಾಡುವ ಅನಿರ್ವಚನೀಯವಾದ ಶಕ್ತಿಯಿದೆ. ಅಲ್ಲಿ ನಿಂತ ಮಾನವನು ಸುತ್ತಮುತ್ತಲಿನ ಪ್ರದೇಶದಲ್ಲಿ ತಾನೂ ಲೀನತೆಹೊಂದಿ,

ವಿಶ್ವವು ನಿರ್ಜೀವವಾದ ಯಂತ್ರವಲ್ಲವೆಂದೂ, ದಯಾಮಯನಾದ ವಿಶ್ವೇಶ್ವರನ ದೇಹವೋ ಎಂಬಂತಿದೆಯೆಂದೂ, ತಾನು ಅದರಲ್ಲೊಂದು ಪರಮಾಣುವಿಗಿಂತ ಅತಿ ಸಣ್ಣವನೆಂದೂ ಮನಗಾಣುತ್ತಾನೆ. ನಾಸ್ತಿಕನಿಗೆ ಕೂಡ, ಅವನು ಕೈಲಾಸಪರ್ವತದ ಸಮೀಪದಲ್ಲಿ ನಿಂತು ಸಮಾಲೋಚನೆ ಮಾಡಿದರೆ, ವಿಶ್ವವೆಲ್ಲ ವಿಶ್ವಾತ್ಮನ ತೇಜಸ್ಸಿನಿಂದ ಸಚೇತನವಾಗಿರುವಂತೆ ತೋರುತ್ತದೆ. ಅಲ್ಲಿ ನಿಂತವನು ಬಾಹ್ಯಸ್ಮರಣೆಯೇ ಇಲ್ಲದೆ ಆನಂದಾನುಭವ ಮಾಡುತ್ತಾನೆ'' ಎಂದು ಒಬ್ಬರು ಮಹಾಶಯರು ಹೇಳಿದ್ದಾರೆ.

ಬರ್ಖಾ ಪ್ರದೇಶಕ್ಕೆ ಪ್ರಯಾಣಮಾಡುತ್ತಿದ್ದಾಗಲೇ ಮಹಾಪ್ರಭುಗಳೂ ಅವರ ಪರಿವಾರದವರೂ ಕೈಲಾಸ ಶೈಲದ ಬುಡದಿಂದ ಕುಂಭಿಯವರೆಗೂ ಸಮಾನಾಂತರಗಳ ಎರಡು ಸೋಪಾನಮಾರ್ಗಗಳು ಏರ್ಪಟ್ಟಿದ್ದಂತೆ ಹಿಮಾವೃತವಾದ ಕಲ್ಲುಗಳು ಹಾಯ್ದುಕೊಂಡಿರುವುದನ್ನು ಕಂಡರು. ಆ ಬಗೆಯ ನೈಸರ್ಗಿಕ ಸೃಷ್ಟಿವೈಖರಿಯನ್ನು ಕಂಡು ಆನಂದಿಸಿದ ಕಾಲಿದಾಸ ಮಹಾಕವಿಯೂ ಅದನ್ನೇ ಮನಸ್ಸಿನಲ್ಲಿಟ್ಟುಕೊಂಡಿದ್ದು ಮೇಘಸಂದೇಶ ಕಾವ್ಯದಲ್ಲಿ ಅದರ ಪ್ರಸ್ತಾವ ಮಾಡಿರಬೇಕು ; '' ಪರಮೇಶ್ವರನು ತನ್ನ ಕೈಯಿನ ನಾಗವಲಯವನ್ನು ತೆಗೆದು ಹಾಕಿ ಗೌರೀದೇವಿಯ ಕೈಯನ್ನು ಹಿಡಿದು ನಡೆಯಿಸಿಕೊಂಡು ತಮ್ಮ ಕ್ರೀಡಾಶೈಲವಾದ ಕೈಲಾಸ ಶಿಖರವನ್ನು ಆರೋಹಣಮಾಡುತ್ತಿದ್ದರೆ (ಎಲೈ ಮೇಘವೆ!) ನೀನು ಮುಂದೆ ಮುಂದೆ ಹೋಗಿ ನಿನ್ನೊಡಲಿನ ಜಲರಾಶಿಯನ್ನೆಲ್ಲ ಘನರೂಪಕ್ಕೆ ತಂದು ಅವರ ಆರೋಹಣಕ್ಕಾಗಿ ಭಕ್ತಿಯಿಂದ ಸೋಪಾನತ್ವವನ್ನು ಪಡೆ''* ಎಂಬ ಶ್ಲೋಕಕ್ಕೆ ಅದರಿಂದಲೇ ಸ್ಫೂರ್ತಿದೊರೆತಿರಬೇಕು. ಕೈಲಾಸ ಶಿಖರವು ಗೌರೀಶಂಕರರ ಕ್ರೀಡಾಶೈಲವೆಂದು ನಮ್ಮ ಪೂರ್ವಿಕರು ನಂಬಿದ್ದರೆ, ಬೌದ್ಧರು ಪರಿನಿರ್ವಾಣಹೊಂದಿದ ಬುದ್ಧರುಗಳೆಲ್ಲರೂ ಕೈಲಾಸ ಶಿಖರಾಗ್ರದಲ್ಲಿ ನೆಲಸಿದ್ದಾರೆಂದು ಇಂದಿಗೂ ನಂಬಿದ್ದಾರೆ. ಉಭಯತ್ರರಿಗೂ ಕೈಲಾಸ ಶಿಖರವು ಪರಮಪಾವನವಾದ ಯಾತ್ರಾಸ್ಥಳ.

ಆಳಿದ ಮಹಾಸ್ವಾಮಿಯವರೇ ಹಿಮವತ್ಪರ್ವತದ ವಿಚಾರವನ್ನು ಕುರಿತು '' ಪ್ರಕೃತಿ ಮಾತೆಯು ಈ ಪ್ರದೇಶವನ್ನು ರಮಣೀಯವಾದ ಸೌಂದರ್ಯಸಾಧನಗಳಿಂದ ಸಿಂಗರಿಸಿರುವಳೋ ಎಂಬಂತಿದೆ. ಹಿಮಾವೃತವಾಗಿ ಶೋಭಿಸುವ ಗಗನವ್ಯಾಪಿಗಳೆನಿಸಿರುವ ಪರ್ವತ ಶಿಖರಗಳು,

---

* '' ಹಿತ್ವಾ ತಸ್ಮಿನ್ ಭುಜಗ ವಲಯಂ ಶಂಭುನಾ ದತ್ತಹಸ್ತಾ  
ಕ್ರೀಡಾಶೈಲೇ ಯದಿ ಚ ವಿಚರೇತ್ಪಾದಚಾರೇಣ ಗೌರೀ ।  
ಭಂಗೀ ಭಕ್ತ್ಯಾ ವಿರಚಿತವಪುಃ ಸ್ತಂಭಿತಾಂತರ್ಜಲೌಘಃ  
ಸೋಪಾನತ್ವಂ ಕುರು ಮಣಿತಟಾರೋಹಣಾಯಾಗ್ರಯಾಯೀ ॥ ''

ಸೂರ್ಯನ ಕಿರಣಗಳಿಂದ ದೇದೀಪ್ಯಮಾನವಾಗಿ ತೊಳಗುವ ಕಂದರ ಪ್ರದೇಶಗಳು, ಮಹೋನ್ನತವಾಗಿ ಬೆಳೆದು ಮನೋಹರತೆವೆತ್ತು ರಾಜಿಸುತ್ತಿರುವ ದೇವದಾರು ವೃಕ್ಷಗಳು, ಧವಳವರ್ಣದಿಂದ ಕೂಡಿ ಥಳಥಳಿಸುವ ನಿರ್ಮಲ ವಾರಿ ತರಂಗಗಳಿಂದ ಕಂಗೊಳಿಸುತ್ತ ಅವುಗಳ ಪಾರ್ಶ್ವಗಳನ್ನಾವರಿಸಿ ಮಂದಗಮನದಿಂದ ಪ್ರವಹಿಸುತ್ತಿರುವ ಸರಿತ್ಸಮೂಹಗಳು; ಇವುಗಳಿಂದ ಕೂಡಿ ರಂಗಮಂಟಪವೋ — ಎಂಬಂತೆ ರಾರಾಜಿಸುತ್ತಿರುವ ಈ ಪ್ರದೇಶದ ಅಪ್ರತಿಮ ಮನೋಹರವಾದ ಅನಿರ್ವಚನೀಯ ಸೌಂದರ್ಯವು ವರ್ಣನಾತೀತವಾದುದೇ ಸರಿ. ಯಾವನೊಬ್ಬ ಕವಿಶ್ರೇಷ್ಠನೇ ಆಗಲಿ, ಪ್ರಾಪಂಚಿಕ ವ್ಯವಹಾರಗಳ ಸಂಪರ್ಕವೇ ಇಲ್ಲದೆ ಶಾಂತಚಿತ್ತತೆಯಿಂದ ಕುಳಿತು ಪ್ರಾಕೃತಿಕ ಸೌಂದರ್ಯವೇ ಮುಂತಾದ ವಿಷಯಗಳನ್ನು ಕುರಿತು ತಲ್ಲೀನತೆಯಿಂದ ಚಿಂತನೆಮಾಡುವುದಕ್ಕೆ ಆದರ್ಶಭೂತವಾದ ಸೊಬಗಿನ ಸಿರಿಬೀಡಿನಂತಿರುವ ಪ್ರದೇಶವೆಂದರೆ ಇದೇ ಸರಿ. ಅದರಲ್ಲಿ ಮುಖ್ಯವಾಗಿ, ಯಾತ್ರಾರ್ಥಿಯಾಗಿ ಬಂದ ಪ್ರವಾಸಿಯ ವಿಷಯದಲ್ಲಂತೂ ಆತನು ಪ್ರವೃತ್ತಿಮಾರ್ಗದ ಮೋಹಪಾಶ ವಿನಿರ್ಮುಕ್ತನಾಗಿ ಲೇಶಮಾತ್ರವೂ ಚಿತ್ತಕ್ಷೋಭೆಗೆ ಗುರಿಯಾಗದೆ ಪ್ರಶಾಂತ ಮನಸ್ಸಿನಿಂದ ಕೂಡಿ ಭಗವದ್ಧ್ಯಾನ ಪರವಶನಾಗಲು ತಪೋವನಪ್ರಾಯವಾಗಿ ಆದರ್ಶತೆಯಿಂದ ಕೂಡಿರುವ ಭವ್ಯ ಪ್ರದೇಶವೆಂದರೆ ಇದೇ ಸರಿ" ಎಂದು ಒಂದು ಭಾಷಣದಲ್ಲಿ ವರ್ಣಿಸಿದ್ದಾರೆ.

ಕೈಲಾಸ ಶಿಖರವನ್ನು ನೋಡಿ ಬಂದವರಲ್ಲೊಬ್ಬರಾದ ಶ್ರೀ ಪ್ರಣವಾನಂದಸ್ವಾಮಿಗಳು, "ನಾನು ವಿರಕ್ತನಾಗಿ ಸಂಸಾರ ತ್ಯಾಗಮಾಡಿ ಹದಿಮೂರು ವರ್ಷಗಳಾದುವು. ಅಂದಿನಿಂದ ಎಂದೂ ದುಃಖಪಡದಿದ್ದವನಾದ ನಾನು ಕಳೆದ ವರ್ಷ ಕೈಲಾಸ ಶಿಖರವನ್ನು ಬಿಟ್ಟು ತೆರಳಿದಾಗ ಗಾಢವಾದ ಶೋಕಕ್ಕೂ ನಿರುತ್ಸಾಹಕ್ಕೂ ಗುರಿಯಾದೆನು....ಅಲ್ಲಿಗೆ ಹೋದಾಗ ಅಲ್ಲಿಯ ಹಿಮದ ಕೊರೆತವನ್ನೂ, ಆಹಾರದ ಅಭಾವವನ್ನೂ, ಸೌದೆಯು ದೊರೆಯದ ಕಷ್ಟವನ್ನೂ ಅನುಭವ ಮಾಡಿದೆನು. ಅಲ್ಪ ಸ್ವಲ್ಪ ಸೌಕರ್ಯಗಳು ಕೂಡ ದೊರೆಯದೆ ಕಷ್ಟಪಟ್ಟೆನು. ಕೈಲಾಸಗಿರಿಯನ್ನು ಕಂಡಾಗಿನ ಆನಂದಾನುಭವದಲ್ಲಿ ಅವೆಲ್ಲ ನನ್ನ ಮನಸ್ಸಿನಿಂದ ದೂರಸರಿದುವು; ಅವುಗಳ ಕಡೆಗೇ ನನ್ನ ಗಮನವು ಹೋಗಲಿಲ್ಲ. ಅದ್ಭುತವಾದ ಕೈಲಾಸವನ್ನು ಅಗಲಿಹೋಗುವ ದುಃಖವು ಮಾತ್ರ ನನ್ನ ಅಂತರಾತ್ಮವನ್ನು ಆವರಿಸಿತು. ಕೈಲಾಸ ಶಿಖರವು ಅತ್ಯಂತ ಚಿತ್ತಾಕರ್ಷಕವಾದುದು. ಅದರ ಸೌಂದರ್ಯವನ್ನು ಧರಿಸಿ

ಚಿತ್ತವೇ ಕುಸಿಯುವಂತಿದೆ"* ಎಂದು ಮುಂತಾಗಿ ಹೇಳಿದ್ದಾರೆ; ಅಷ್ಟೇ ಅಲ್ಲ; ಅವರು, "ಕೈಲಾಸ ಶಿಖರವನ್ನಾವರಿಸಿರುವ ಹಿಮವು ಒಪ್ಪವಿಟ್ಟ ಬೆಳ್ಳಿಯಂತೆ ಧಳಧಳಿಸುತ್ತದೆ. ಆದುದರಿಂದಲೇ ಹಿಂದುಗಳಾದ ನಾವು ಅದನ್ನು 'ರಜತಗಿರಿ' ಎಂದು ಕರೆಯುತ್ತೇವೆ. ಶುಭ್ರವಾದ ಅದರ ಕುಂಭಿಯಮೇಲೆ ಪರಶಿವನು ಯೋಗಸಮಾಧಿಯಲ್ಲಿ ನೆಲಸಿರುವನೆಂದು ನಮ್ಮ ಪುರಾಣಗಳು ಸಾರುತ್ತಿವೆ. ಬುದ್ಧನು ಅಲ್ಲಿದ್ದಾನೆಂದು ತಿಬೆಟ್ಟಿನವರು ನಂಬಿದ್ದಾರೆ. ಪರಮೇಶ್ವರನು ಒಂದು ದೇಹವನ್ನು ಧರಿಸಿ ಅಲ್ಲಿ ನೆಲಸಿದ್ದಾನೆಂದು ನಾನೇನೂ ನಂಬಿಲ್ಲ. ಪರಶಿವನ ಚೈತನ್ಯವೂ ತೇಜಸ್ಸೂ ಅಲ್ಲಿ ನೆಲಸಿವೆಯೆಂದು ನಾನು ನಂಬಿದ್ದೇನೆ. ಅಲ್ಲಿ ನಮ್ಮ ಮನಸ್ಸಿನ ಮೇಲುಂಟಾಗುವ ಪಾರಮಾರ್ಥಿಕ ಪರಿಣಾಮವು ಅಸಾಧಾರಣವಾದುದು. ಪರಮಾತ್ಮನ ಸಾನ್ನಿಧ್ಯವೇ ಇರುವಂತೆ ತೋರಿ ಆನಂದಾನುಭವವಾಗುವಂತೆ— ಸೂಜಿಕಲ್ಲಿನ ಸುತ್ತಲೂ ಅಗೋಚರವಾಗಿ ನೆಲಸಿರುವ ಶಕ್ತಿಯಂತೆ— ಅಗೋಚರ ಶಕ್ತಿಯೊಂದು ಕೈಲಾಸ ಶೈಲದ ಸುತ್ತಲೂ ತುಂಬಿದೆ. ಆದುದರಿಂದಲೇ ಅದರ ಬಳಿಗೆ ಹೋದವರು ತಾವಾಗಿಯೇ ಧ್ಯಾನಾಸಕ್ತರಾಗಿ ಮೈಮರೆಯುವಂತೆ ಮಾಡುವ ಮಹಿಮೆಯು ಅಲ್ಲಿ ನೆಲಸಿದೆ. ನನ್ನ ಅನುಭವದಲ್ಲಿ ಮತ್ತೆಲ್ಲಿಯೂ ಹಾಗಿಲ್ಲ"* ಎಂದು ಕೂಡ ಹೇಳಿದ್ದಾರೆ.

ಆಳಿದ ಮಹಾಸ್ವಾಮಿಯವರು ಕೈಲಾಸ ಶೈಲದ ಬಳಿಯಿಂದ ಬಿಡಾರಕ್ಕೆ ಹಿಂತಿರುಗುವವೇಳೆಗೆ ರಾತ್ರಿಯಾಯಿತು. ದಾರಿಯಲ್ಲಿ ಅವರು ಅನೇಕ ಬ್ರಹ್ಮಕಮಲಗಳನ್ನು ಕಂಡರು; ಮಾದರಿಗಾಗಿ ಕೆಲವನ್ನು ಸಮ್ಮುಖದ ಪರಿವಾರದವರು ಸಂಗ್ರಹಿಸಿ ತಂದರು. ಬ್ರಹ್ಮಕಮಲದ ಬಣ್ಣವು ಬೂದು ಬಣ್ಣ ಬೆರೆತಿರುವ ನಸುಗೆಂಪು. ಒಣಗಿಹೋದಮೇಲೆ ಕೂಡ ಅದರ ದಳಗಳು ಬಹಳ ಕೋಮಲವಾಗಿ ಮೃದುವಾಗಿರುತ್ತವೆ.

ಕೈಲಾಸ ಶಿಖರದ ಪ್ರದಕ್ಷಿಣೆಯ ಎರಡನೆಯ ಮಜಲಿನ ಪ್ರಯಾಣವು ಜೂಲೈ ೨೭ನೆಯ ತಾರೀಖು ಪ್ರಾತಃಕಾಲ ಐದೂವರೆ ಘಂಟೆಗೆ ಡಿಡಿಫೂವಿನಿಂದ ಪ್ರಾರಂಭವಾಯಿತು. ಅಲ್ಲಿಂದ ಹನ್ನೆರಡು ಮೈಲಿಗಳ ದೂರದಲ್ಲಿದ್ದ ಜಂಡಿಫುವಿಗೆ ಸೇರಲು ಮತ್ತಾವ ಮಜಲಿನ ಪ್ರಯಾಣದಲ್ಲಿಯೂ ಆಗದಿದ್ದ ಮಟ್ಟಿಗೆ ಬಹಳ ಪ್ರಯಾಸವಾಯಿತು. ಅತ್ಯಂತ ಕಡಿದಾದ ಪ್ರದೇಶದ ಮಾರ್ಗವಾಗಿ ಮೇಲಕ್ಕೇರಿ ಸಮುದ್ರದ

* ಶ್ರೀಮಾನ್ ಪಾಲ್ ಬ್ರಂಟನ್‌ರವರು ರಚಿಸಿರುವ ಗ್ರಂಥದಲ್ಲಿ ಉದಾಹರಿಸಿರುವುದರ ಆಧಾರದಿಂದ ಬರೆದುದು.



ಆಳಿದ ಮಹಾಸ್ವಾಮಿಯವರು
(ಮಾನಸ ಸರೋವರದಲ್ಲಿ ಆಚಮನ ಮಾಡುತ್ತಿರುವುದು)



ಕೈಲಾಸ ಶಿಖರ

ಮಟ್ಟಕ್ಕಿಂತ ೧೮,೬೦೦ ಅಡಿಗಳ ಎತ್ತರದಲ್ಲಿದ್ದ ಗೌರೀಕುಂಡವೆಂಬ ದಿಣ್ಣೆಯನ್ನು ಸೇರುವುದರಲ್ಲಿ ಬಹಳ ಆಯಾಸವಾಯಿತು. ಅಲ್ಲಿ ಗೌರೀ ಕುಂಡವೆಂಬ ಸರೋವರವಿದ್ದು ಅದರ ನೀರಿನ ಮೇಲ್ಭಾಗವೆಲ್ಲ ಘನೀ ಭೂತವಾಗಿ ಹಿಮವಾಗಿದ್ದಿತು. ಅಲ್ಲಿಂದ ಮುಂದೆ ಕೆಸರಿನಿಂದ ತುಂಬಿದ್ದ ಜಾರಿಕೆಯ ದಾರಿಯಲ್ಲಿ ಪ್ರಯಾಣ ಮಾರನೆಯ ದಿನ (೨೮-೬-೧೯೩೧) ಜಿಂಡಿಫುವಿನಿಂದ ಮತ್ತೆ ದಾರ್ಚೆನ್ನಿಗೆ ಪ್ರಯಾಣವು ಬಳೆಯಿತು. ಅಲ್ಲಿಗೆ ಒಟ್ಟು ಇಪ್ಪತ್ತೊಂದು ಮೈಲಿಗಳ ದೂರದ ಕೈಲಾಸ ಪ್ರದಕ್ಷಿಣೆಯ ಅಪಾಯಕರವಾದ ಪ್ರಯಾಣವು ಪೂರೈಸಿತು. ಆ ದಿನ ಬರ್ಖಾಕ್ಕೆ ತಲಪಿ, ವ್ಯಾಸಪೂರ್ಣಿಮೆಯಾದ ಮಾರನೆಯ ದಿನದಿಂದ ಮರುಪ್ರಯಾಣವು ಪ್ರಾರಂಭವಾಯಿತು. ಆ ಪುಣ್ಯದಿನ ಮತ್ತೆ ಮಾನಸ ಸರೋವರದಲ್ಲಿ ಮಿಂದು, ಅಂದಿನ ರಾತ್ರಿ ಆ ಸರೋವರದ ಜಲರಾಶಿಯಿಂದ ಮೇಲಕ್ಕೆದ್ದಂತೆ ತೋರುತ್ತಿದ್ದ ಪೂರ್ಣಚಂದ್ರ ಮಂಡಲದ ರಮಣೀಯ ದೃಶ್ಯವನ್ನೂ ಬೆಳದಿಂಗಳಿನಿಂದ ಸರೋವರವೆಲ್ಲ ಬೆಳಗಿದ ಸೊಬಗನ್ನೂ ಕಂಡು, ಕೊರೆಯುವ ಚಳಿಯನ್ನೂ ಮರೆತು, ಸಮಸ್ತರೂ ಆನಂದಿಸಿದರು. ಮಾನಸ ಸರೋವರ ತೀರದಿಂದ ಮುಂದಿನ ಮಜಲಿನ ಪ್ರಯಾಣವು ಜುಲೈ ೩ನೆಯ ತಾರೀಖಿನ ದಿನ ನಡೆದು ರಕ್ಸಾಸ್ಟಲ್ ಅಥವಾ ರಾಕ್ಷಸ ಸರೋವರ ವನ್ನು ಸೇರುವ ವೇಳೆಗೆ ಪೂರೈಸಿತು. ಅದೂ ಸುಂದರವಾದ ಸರೋವರ ವಾದರೂ, ಅಂದು ಅನುಭವಿಸಿದಷ್ಟು ಚಳಿಯ ಕೊರೆತವು— ಉಡುಪು ಗಳನ್ನೂ ಭೇದಿಸಿಕೊಂಡು ಮೂಳೆಗಳನ್ನೇ ಕೊರೆದುಕೊಂಡು ಮೈಯನ್ನು ನಡುಗಿಸುತ್ತಿದ್ದಂತೆ ತೋರುತ್ತಿದ್ದ ಚಳಿಯ ಕೊರೆತವು— ಮತ್ತೆಂದೂ ಕಂಡುಬಂದಿರಲಿಲ್ಲ. ಅಲ್ಲಿಂದ ಮುಂದಿನ ಮಜಲುಗಳ ಪ್ರಯಾಣವು ನಡೆದು ಕೊನೆಗೆ ಅವರೆಲ್ಲರೂ ಆಗಸ್ಟು ೧ನೆಯ ತಾರೀಖಿನ ದಿನ ತಾಕ್ಲಕೋಟ್ ಸೇರಿದರು. ಮಾರನೆಯ ದಿನ ಅವರೆಲ್ಲರೂ ಖೋಜರ್ ನಾಥದಲ್ಲಿದ್ದ ಬೌದ್ಧ ವಿಹಾರಕ್ಕೆ ದಯಮಾಡಿದರು. ಅದರ ಗೋಡೆಗಳ ಮೇಲೆಲ್ಲ ಬುದ್ಧನ ಚಿತ್ರಗಳೂ, ಹೂಗಳೂ, ಕಾಡುಮೃಗಗಳೂ ಅಂದವಾಗಿ ಚಿತ್ರಿತವಾಗಿದ್ದುವು. ಒಂದು ಕಡೆ ಜೇಡಿಯ ಮಣ್ಣಿನಲ್ಲಿ ಮಾಡಿ ಬಣ್ಣ ಹಾಕಿದ್ದ ಎಂಟು ಅಡಿಗಳ ಎರಡು ರಾಕ್ಷಸ ಮೂರ್ತಿಗಳನ್ನು ಇಟ್ಟಿದ್ದರು. ಅಲ್ಲಿಂದ ಮುಂದೆ ಇಪ್ಪತ್ತು ಅಡಿಗಳ ಅಗಲವಾಗಿ ಐವತ್ತು ಅಡಿಗಳ ಉದ್ದವಾಗಿದ್ದ ಪ್ರಶಸ್ತಮಂದಿರದಲ್ಲಿ ಪೂಜಾ ಸಾಮಗ್ರಿಗಳಿಂದ ಆವೃತ ವಾಗಿ ಬುದ್ಧವಿಗ್ರಹವು ಶೋಭಿಸುತ್ತಿದ್ದಿತು. ಅದರ ಹಿಂದೆ ಸ್ವಲ್ಪ ದೂರದಲ್ಲಿ ಐದು ಅಡಿಗಳ ಎತ್ತರದ ಜಗಲಿಯಮೇಲೆ ಪ್ರಭಾವಲಯದಿಂದ

ಕೂಡಿದ ಏಳೆಂಟು ಅಡಿಗಳ ಎತ್ತರದ ಸೀತಾರಾಮರ ಮತ್ತು ಲಕ್ಷ್ಮಣನ ಮಿಶ್ರಲೋಹದ ಎರಕದ ವಿಗ್ರಹಗಳನ್ನಿಟ್ಟಿದ್ದರು. ಆ ಸುಂದರವಾದ ವಿಗ್ರಹಗಳ ಮುಂದೆ ಚಿನ್ನದ ಮತ್ತು ಬೆಳ್ಳಿಯ ಬೋಗುಣಿಗಳಲ್ಲಿ ಹಗಲಿರುಳೂ ಉರಿಯುವ ನಂದಾದೀಪಗಳು. ಆ ವಿಗ್ರಹಗಳು ಯಾವ ಕಾಲದವುಗಳೆಂಬ ಪ್ರಶ್ನೆಗೆ ಬೌದ್ಧ ಮತದವರಾದ ಲಾಮಾ ಗುರುಗಳು ಅವು ಮನುಷ್ಯ ನಿರ್ಮಿತಗಳೇ ಅಲ್ಲವೆಂದು ಉತ್ತರ ಹೇಳಿದರು. ಎಡಪಾರ್ಶ್ವದ ಕೋಣೆಯಲ್ಲಿ ಋಷಿಗಳ ವಿಗ್ರಹಗಳೂ, ಬಲಪಾರ್ಶ್ವದ ಕೋಣೆಯಲ್ಲಿ ಸಪ್ತರ್ಷಿಗಳ ವಿಗ್ರಹಗಳೂ, ಮಹಡಿಯಮೇಲೆ ತಿಬೆಟ್ ಲಿಪಿಯ ಬೌದ್ಧ ಗ್ರಂಥಗಳ ದೊಡ್ಡ ಪುಸ್ತಕ ಭಂಡಾರವೂ, ಲಕ್ಷ್ಮೀದೇವಿಯ ಮತ್ತು ಕಾಳೀದೇವಿಯ ವಿಗ್ರಹಗಳೂ, ಇದ್ದುವು. ಆ ಕಟ್ಟಡವು ಹಿಂದೆ ಶ್ರೀರಾಮ ದೇವಾಲಯವಾಗಿದ್ದು ಆ ಬಳಿಕ ಬೌದ್ಧ ವಿಹಾರವಾಗಿ ಮಾರ್ಪಟ್ಟಿರಬೇಕೆಂದು ಡಾಕ್ಟರ್ ಎನ್. ರಂಗಾಚಾರ್ಯರವರು ಅಭಿಪ್ರಾಯಪಟ್ಟಿದ್ದಾರೆ.

ಅಳಿದ ಮಹಾಸ್ವಾಮಿಯವರು ಆ ವಿಹಾರದಲ್ಲಿದ್ದ ಲಾಮಾ ಗುರುಗಳಿಗೆ ಕೆಂಪು ಮತ್ತು ನೀಲಿ ಬನಾತಿನ ಎರಡು ಥಾನುಗಳನ್ನೂ ಹಣವನ್ನೂ ಒಪ್ಪಿಸಿದರು. ಅಂದು ರಾತ್ರಿ ಅವರೂ ಅವರ ಪರಿವಾರದವರೂ ಖೋಜರ್‌ನಾಥದಲ್ಲಿದ್ದು ಮತ್ತೆ ತಾಕ್ಲಕೋಟ್ ಮಾರ್ಗವಾಗಿ ಕಾಲಾಪಾನಿಗೆ ಹೋಗಿ ಸೇರಿದರು. ಅಲ್ಲಿಂದ ಗರ್ಬಯಾಂಗ್, ಮಾಲ್ಪ, ಗಾಲಗಾರ್, ತಿತ್ಲಾ, ಖೇಲಾ, ಧಾರ್ಚುಲ, ಆಸ್ಕೋಟ್, ಸಾಂದೇವ್, ಥಾಲ್, ಬೇರಿನಾಗ್ ಮುಂತಾದ ಸ್ಥಳಗಳ ಮಾರ್ಗವಾಗಿ ಸರಯೂ ಮತ್ತು ಗೋಮತಿನದಿಗಳ ಸಂಗಮಸ್ಥಾನವಾದ ಬಾಗೇಶ್ವರಕ್ಕೆ ಅವರೆಲ್ಲರೂ ದಯಮಾಡಿದರು. ಮಾಲ್ಪಾದಿಂದ ಹೊರಟುಬಂದ ಮಜಲಿನಲ್ಲಿ ಕಲ್ಲುಗಳು ಉರುಳಿ ಬಂದು ಕೆಲವರಿಗೆ ತಗಲಿ ಗಾಯಗಳಾದುವು. ತಿತ್ಲಾಕ್ಕೆ ಬರುವಾಗ್ಗೆ ಬಂಡೆಯೊಂದು ಉರುಳಿ ಬಂದು ಮಹಾಪ್ರಭುಗಳವರ ಸಮ್ಮುಖದ ಅಧಿಕಾರಿಯವರೊಬ್ಬರ ಮುಂದೆ ರಭಸದಿಂದ ಉರುಳಿಕೊಂಡು ಹೋಯಿತು.

ಮಾರ್ಗದುದ್ದಕ್ಕೂ ಮಹಾಪ್ರಭುಗಳಿಗೆ ಜನರು ಅಲ್ಲಲ್ಲಿ ಸ್ವಾಗತವನ್ನಿತ್ತರು. ಬೊಗಸೆ ಬೊಗಸೆಗಳಲ್ಲಿ ಹೂಗಳನ್ನೆರಚಿ ಫಲಗಳನ್ನು ಸಮರ್ಪಿಸಿದರು. ಬಾಗೇಶ್ವರದಲ್ಲಿ ಬಹು ಜನರು ಸೇರಿ ಬೀದಿಗಳನ್ನಲಂಕರಿಸಿ, ಹಿಂದಿಯಲ್ಲಿ ವಿಜ್ಞಾಪನಾ ಪತ್ರಿಕೆಗಳನ್ನು ಸಮರ್ಪಿಸಿದರು. ಮಹಾಪ್ರಭುಗಳವರು ಬಾಗೇಶ್ವರದಿಂದ ಹೊರಟು ನಾಲ್ಕು ಮಜಲುಗಳಲ್ಲಿ

ಪ್ರಯಾಣಮಾಡಿ ಆಗಸ್ಟು ತಿಂಗಳು ೨೪ನೆಯ ತಾರೀಖಿನ ದಿನ ಆಲ್ಮೋರಾಕ್ಕೆ ಹಿಂತಿರುಗಿದರು. ಅಲ್ಲಿ ಎರಡು ದಿನಗಳು ಬಿಡಾರಮಾಡಿದ್ದು, ಅನೇಕ ಮಂದಿ ಪುರಪ್ರಮುಖರಿಗೂ ಅಧಿಕಾರಿಗಳಿಗೂ ಭೇಟಿಯನ್ನಿತ್ತು ಖಿಲ್ಲತ್ತು ಗಳನ್ನೂ ಪಾರಿತೋಷಿಕಗಳನ್ನೂ ಕೊಟ್ಟರು. ಚಪ್ರಾಸಿಗಳು ಕುದುರೆ ಆಳುಗಳು ಮುಂತಾದವರಿಗೂ ಸಹ ಪಾರಿತೋಷಿಕಗಳು ಲಭಿಸಿದುವು.

೧೯೩೨ನೆಯ ಇಸವಿ ಆಗಸ್ಟು ೨೭ನೆಯ ತಾರೀಖಿನ ದಿನ ಬೆಳಗ್ಗೆ ಮಹಾಸ್ವಾಮಿಯವರು ಆಲ್ಮೋರಾದಿಂದ ಹೊರಟು ಮಾರನೆಯ ದಿನ ಹರಿದ್ವಾರವನ್ನು ಸೇರಿ, ದೆಹಲಿಯ ಮಾರ್ಗವಾಗಿ ಪ್ರಯಾಣಮಾಡಿ ೩೦ ನೆಯ ತಾರೀಖು ಮುಂಬಯಿ ನಗರವನ್ನು ಸೇರಿದರು. ಅಲ್ಲಿಂದ ಸೆಪ್ಟೆಂಬರು ತಿಂಗಳು ೪ನೆಯ ತಾರೀಖಿನ ದಿನ ಪ್ರಯಾಣಮಾಡಿ ಪುಣೆಗೆ ಸೇರಿ, ಸ್ಪೆಷಲ್ ರೈಲಿನಲ್ಲಿ ಅರಸೀಕೆರೆ ಮತ್ತು ಹಾಸನದ ಮಾರ್ಗವಾಗಿ ಪ್ರಯಾಣಮಾಡಿ ಸೆಪ್ಟೆಂಬರು ೭ನೆಯ ತಾರೀಖು ಬೆಳಗ್ಗೆ ಮೈಸೂರು ನಗರಕ್ಕೆ ಮಹಾಪ್ರಭು ಗಳವರು ಹಿಂತಿರುಗಿದರು. ಅವರು ಹೆಜ್ಜೆಹೆಜ್ಜೆಗೂ ಅಪಾಯಗಳಿಂದ ತುಂಬಿದ್ದ ಕೈಲಾಸ ಯಾತ್ರೆಯನ್ನು ಪೂರೈಸಿ ಸುರಕ್ಷಿತವಾಗಿ ಮೈಸೂರಿಗೆ ಹಿಂತಿರುಗಿದುದಕ್ಕಾಗಿ ಮಹಾಮಾತೃಶ್ರೀಯವರೇ ಮುಂತಾದ ರಾಜ ಕುಟುಂಬದವರಿಗುಂಟಾದ ಆನಂದಕ್ಕೆ ಪಾರವೇ ಇರಲಿಲ್ಲ. ಮಹಾಪ್ರಭು ಗಳವರು ಕ್ಷೇಮವಾಗಿ ಮೈಸೂರಿಗೆ ತಲಪಿದುದಕ್ಕಾಗಿ ಸಂತೋಷ ಭರಿತರಾದ ಪ್ರಜೆಗಳು ಅವರ ದರ್ಶನೋತ್ಸುಕರಾಗಿ ತಂಡೋಪತಂಡವಾಗಿ ಆ ಸಲದ ನವರಾತ್ರಿ ಉತ್ಸವ ಕಾಲದಲ್ಲಿ ಮೈಸೂರು ನಗರಕ್ಕೆ ಬಂದು ತುಂಬಿದರು. ಹಿಂದೆ ಮತ್ತಾವಾಗಲೂ ಮೈಸೂರು ನಗರದಲ್ಲಿ ಅಷ್ಟು ಜನ ಸಂದಣಿ ಸೇರಿರಲಿಲ್ಲ. ನವರಾತ್ರಿ ಪಾಡ್ಯಮಿಯ ದಿನ ರಾತ್ರಿ ದರ್ಬಾರು ನಡೆದಾಗ ಅರಮನೆಯ ಮುಂದೆ ಕಿಕ್ಕಿರಿದು ತುಂಬಿದ್ದ ಅಭೂತಪೂರ್ವ ವಾದ ಪ್ರಜಾ ಸಮೂಹವನ್ನು ನೋಡಿ ರಾಜಭಕ್ತ ಶ್ರೇಷ್ಠರಾದ ದೊಡ್ಡ ಅಧಿಕಾರಿಯವರೊಬ್ಬರು ಆನಂದಬಾಷ್ಪವನ್ನು ಸುರಿಸುತ್ತ, "ನೋಡಲಿ, ನಮ್ಮ ಪ್ರಭುಗಳನ್ನು ನೋಡಿ ಸಂತೋಷಿಸಲಿ; ಇಂಥ ಪ್ರಭುದರ್ಶನ ನಮಗೆ ಹೊರತು ಮತ್ತಾರಿಗೆ ಲಭಿಸೀತು!" ಎಂದರು. ಮಹಾಪ್ರಭು ಗಳವರ ಕೈಲಾಸಯಾತ್ರೆಯ ಚಲಚ್ಚಿತ್ರ ಪ್ರದರ್ಶನವು ಏರ್ಪಟ್ಟ ದಿನ ಮಹಾಮಾತೃಶ್ರೀಯವರು ಅದನ್ನು ನೋಡಿ ಆನಂದಿಸಿ ಮಾತೃಹೃದಯದ ಆತಂಕದಿಂದ, "ದೃಷ್ಟಿ ತಾಕುವಂತಿದೆ. ಅಯ್ಯಾಜಿಯವರು ಎಷ್ಟು ಕಷ್ಟವನ್ನು ಸಹಿಸಿ ಎಷ್ಟು ಆಸ್ಥೆಯಿಂದ ಯಾತ್ರೆಮಾಡಿದ್ದಾರೆ!" ಎಂದರು. ಬಕ್ಷಿಯವರು ಕೈಲಾಸ ಯಾತ್ರೆಯ ಪ್ರಸಾದವನ್ನು ತೆಗೆದುಕೊಂಡು

ಮಹಾಪ್ರಭುಗಳವರ ಆಜ್ಞೆಯಂತೆ ಶೃಂಗೇರಿಗೆ ಹೋಗಿ ಸಮರ್ಪಿಸಿದ ಮೇಲೆ ಶ್ರೀ ಶ್ರೀಗಳವರು ಯಾತ್ರಾ ಚಿತ್ರವಾದ ಆ ಚಲಚ್ಚಿತ್ರವನ್ನು ನೋಡುವುದು ತಮ್ಮ ಆಶ್ರಮಧರ್ಮಕ್ಕೆ ವಿರುದ್ಧವಲ್ಲವೆಂದು ಹೇಳಿದರು. ಅವರು ಪರದೇಶೀಯರಾದ ಅಸಂಖ್ಯಾತ ಮಂದಿಗಳಿಂದ ಮಹಾಸ್ವಾಮಿಯವರಲ್ಲಿ ಭಕ್ತಿ ವಿಶ್ವಾಸ ಪ್ರದರ್ಶನ ನಡೆದ ಆ ಚಿತ್ರದ ಭಾಗವನ್ನು ಕಂಡು ಹರ್ಷಿಸಿ, "ಇದೀಗ ಸಾತ್ವಿಕ ಪ್ರಭುಶಕ್ತಿ! ಇದೀಗ ರಾಜಲಕ್ಷಣ!" ಎಂದರು.

**ಅನ್ಯಮತ ಸಹಿಷ್ಣುತೆ**

ಆಳಿದ ಮಹಾಸ್ವಾಮಿಯವರಿಗೆ ಸ್ವಂತ ಮತದಲ್ಲಿ ಅಸಾಧಾರಣ ಶ್ರದ್ಧೆಯಿದ್ದಿತು. ಆದರೆ ಅವರಿಗಿದ್ದ ಅನ್ಯಮತ ಸಹಿಷ್ಣುತೆಯೂ ಅಪಾರವಾದುದು. ಕೈಲಾಸಯಾತ್ರೆಯ ಕಾಲದಲ್ಲಿ ಮಾರ್ಗ ಮಧ್ಯದಲ್ಲಿಲ್ಲದೆ ದೂರ ದೂರವಾಗಿದ್ದ ಬೌದ್ಧ ವಿಹಾರಗಳಿಗೆ ಕೂಡ ದಯಮಾಡಿ ಅವರು ಖಿಲ್ಲತ್ತುಗಳನ್ನೂ ಕಾಣಿಕೆಗಳನ್ನೂ ಒಪ್ಪಿಸಿದರು. ತಮ್ಮ ಪರಿವಾರದವರಿಗೂ ಸಮ್ಮುಖದ ಅಧಿಕಾರಿಗಳಿಗೂ ಕೂಡ ಅದೇ ರೀತಿ ಅನ್ಯಮತ ಸಹಿಷ್ಣುತೆಯುಂಟಾಗಲೆಂಬ ಉದ್ದೇಶದಿಂದ, ಬದರೀನಾಥ ಕೇದಾರನಾಥ ಮುಂತಾದ ಕ್ಷೇತ್ರಗಳಿಗೆ ಮುಸಲ್ಮಾನರನ್ನೂ ಕ್ರೈಸ್ತರನ್ನೂ ಸಹ ಅವರು ಕರೆದುಕೊಂಡು ಹೋಗಿದ್ದರು.

ಆಳಿದ ಮಹಾಸ್ವಾಮಿಯವರು ಸಕಲ ಮತಗಳ ಸಾರವನ್ನೂ ಗ್ರಹಿಸಬೇಕೆಂಬ ಉದ್ದೇಶದಿಂದ ಕೂಡಿ ನಾನಾ ಮತಗಳಿಗೆ ಸೇರಿದ ವಿದ್ವಾಂಸರಿಂದಲೂ ಆಗಾಗ ತಮ್ಮ ಸನ್ನಿಧಿಯಲ್ಲಿ ಉಪನ್ಯಾಸಗಳನ್ನು ಮಾಡಿಸುತ್ತಿದ್ದರು. ಪ್ರತಿಯೊಂದು ಮತ ಸಿದ್ಧಾಂತವನ್ನೂ ಆ ಮತದ ಅನುಯಾಯಿಗಳಾದ ವಿದ್ವಾಂಸರಿಂದಲೇ ಹೇಳಿಸಿ ಕೇಳುವುದರಲ್ಲಿ ಔಚಿತ್ಯವೆಂಬುದನ್ನು ಅವರು ಚೆನ್ನಾಗಿ ಬಲ್ಲವರಾಗಿದ್ದರು. ಆದರೆ, ಆ ಬಗೆಯ ಉಪನ್ಯಾಸ ಕಾಲದಲ್ಲಿ ಉಪನ್ಯಾಸಕರು ಅನ್ಯಮತಗಳನ್ನು ಅನ್ಯಾಯವಾಗಿ ಟೀಕಿಸಿ ಸ್ವಮತ ಪ್ರತಿಪಾದನೆಗೆ ಅವಶ್ಯವಾದಷ್ಟಕ್ಕಿಂತ ಅಧಿಕ ಪ್ರಸಂಗಕ್ಕೆ ಪ್ರಾರಂಭಿಸಿದರೆ ಮಹಾಪ್ರಭುಗಳವರು ಜುಗುಪ್ಸೆಪಡುತ್ತಿದ್ದರು. ಒಂದು ಸಲ, ಒಬ್ಬರು ಪಂಡಿತರು ತಮ್ಮ ಮತ ಸಿದ್ಧಾಂತದಮೇಲಿನ ಉಪನ್ಯಾಸದ ಮಧ್ಯದಲ್ಲಿ ಮತ್ತೊಂದು ಮತ ಸಿದ್ಧಾಂತದಮೇಲೆ ಉಗ್ರವಾಗಿ ಆಕ್ಷೇಪಗಳನ್ನೆತ್ತಿ ಕಟುವಾಗಿ ಟೀಕಿಸಲು ಪ್ರಾರಂಭಿಸಿದರು. ಆಗ ಮಹಾಪ್ರಭುಗಳವರು ಅವರನ್ನು ಕುರಿತು, "ಈ ಮತ ಸಿದ್ಧಾಂತವನ್ನು ಕುರಿತು ಮಾತನಾಡಲು ಬೇರೆ ಕೆಲವು ವಿದ್ವಾಂಸರಿದ್ದಾರೆ. ಇದರ ವಿಚಾರವನ್ನು

ಅವರಿಗೆ ಬಿಟ್ಟುಬಿಡಿ. ನೀವು ಪ್ರತಿಪಾದಿಸಲುಪಕ್ರಮಿಸಿದ್ದ ಮತ ಸಿದ್ಧಾಂತದ ವಿಚಾರವಾಗಿ ಮಾತ್ರವೇ ಪ್ರಸ್ತಾವಿಸಿ ನಮಗೆ ನಾನಾ ಅಂಶ ಗಳನ್ನೂ ದಯವಿಟ್ಟು ತಿಳಿಸಿ" ಎಂದು ಹೇಳಿದರು. ಪ್ರತಿಯೊಂದು ಮತ ಸಿದ್ಧಾಂತದಲ್ಲಿ ಸಹ ಸಾರವುಂಟೆಂಬುದು ಮಹಾಸ್ವಾಮಿಯವರ ಮನೋಗತವೆಂಬುದಕ್ಕೆ ಇದಕ್ಕಿಂತ ಉತ್ತಮವಾದ ಮತ್ತಾವ ನಿದರ್ಶನವೂ ಅವಶ್ಯವಿಲ್ಲ. ಹೊರದೇಶಗಳ ದಾರ್ಶನಿಕರ ಗ್ರಂಥಗಳಲ್ಲಿ ಸಹ ಮಹಾ ಪ್ರಭುಗಳವರಿಗೆ ಪರಮಾದರ. ಅವುಗಳನ್ನು ಅವರು ಸಂತತವಾಗಿ ವ್ಯಾಸಂಗಮಾಡುತ್ತಿದ್ದರು. ಆಸ್ಥಾನ ವಿದ್ವಾಂಸರುಗಳಿಗೂ ಅವುಗಳಲ್ಲಿ ಪ್ರತಿಪಾದಿತವಾಗಿರುವ ತತ್ತ್ವಗಳ ಪರಿಚಯವಾಗುವಂತೆ ಅವಕಾಶವನ್ನು ಕಲ್ಪಿಸಿ ಹೃದಯ ವೈಶಾಲ್ಯವನ್ನು ಹೆಚ್ಚಿಸುತ್ತಿದ್ದುದಲ್ಲದೆ, ಅವುಗಳಿಂದ ಹುಟ್ಟಿದ ಸಮಸ್ಯೆಗಳನ್ನು ಭಾರತೀಯ ದರ್ಶನಗಳ ಸಹಾಯದಿಂದ ಬಗೆ ಹರಿಸುವುದು ಎಷ್ಟುಮಟ್ಟಿಗೆ ಸಾಧ್ಯವೆಂಬುದನ್ನು ವಿಚಾರಮಾಡುತ್ತಿದ್ದರು.

ಆಳಿದ ಮಹಾಸ್ವಾಮಿಯವರು ಸಮಸ್ತ ಮತಗಳ ಸಿದ್ಧಾಂತ ಗಳನ್ನೂ, ಷಡ್ದರ್ಶನಗಳನ್ನೂ ಶ್ರದ್ಧೆಯಿಂದ ವ್ಯಾಸಂಗಮಾಡಿ ನಿಷ್ಕೃಷ್ಟ ಜ್ಞಾನವನ್ನು ಗಳಿಸಿದ್ದರು. ಮೈಸೂರು ಸಂಸ್ಥಾನದಲ್ಲಿ ಮಾತ್ರವೇ ಅಲ್ಲದೆ ಹೊರಗಿನ ಪ್ರಾಂತಗಳ ದೇವಾಲಯಗಳೇ ಮುಂತಾದುವುಗಳಿಗೆ ಧನ ಸಹಾಯ ಮಾಡಿದಂತೆಯೇ ಮಸೀತಿಗಳು, ಚರ್ಚುಗಳು ಮುಂತಾದು ವುಗಳಿಗೂ ಧನ ಸಹಾಯಮಾಡುತ್ತಿದ್ದರು. ಹಿಂದುಗಳಿಗೆ ದೇವಾಲಯ ಗಳನ್ನು ಕಟ್ಟಿಸಿಕೊಟ್ಟಿದ್ದಂತೆಯೇ "ಬಾಡಿ ಗಾರ್ಡ್" ಸಿಬ್ಬಂದಿಯವರ ಮಸೀತಿ ಮುಂತಾದುವುಗಳನ್ನೂ ಅನ್ಯಮತೀಯರಿಗಾಗಿ ಕಟ್ಟಿಸಿಕೊಟ್ಟಿ ದ್ದರು. ಅರ್ಚಶಿಷ್ಟ ಫಿಲೋಮಿನಾ ಚರ್ಚು ಮುಂತಾದುವುಗಳಿಗೂ ಬಹಳವಾಗಿ ಸಹಾಯಮಾಡುತ್ತಿದ್ದರು. ಮಹಾಪ್ರಭುಗಳವರು ಭಾಷಣ ವೊಂದರಲ್ಲಿ, "ಮತ ಸಿದ್ಧಾಂತ ವಿಚಾರಗಳಲ್ಲಿಯೂ ಭಗವದಾರಾಧನ ವಿಷಯದಲ್ಲಿಯೂ ನಾನಾ ಮತಗಳಿಗೂ ಪರಸ್ಪರವಾಗಿ ಭೇದಗಳೇನೋ ಉಂಟು. ಆದರೂ ಯಾರು ಯಾವ ನಾಮರೂಪಗಳನ್ನಾಶ್ರಯಿಸಿ ಆರಾಧಿಸಿದರೂ ಎಲ್ಲರ ಸೇವೆಯನ್ನೂ ಸ್ವೀಕರಿಸುವ ಜಗನ್ನಿಯಾಮಕನಾದ ಆ ಸರ್ವೇಶ್ವರನೇನೋ ಒಬ್ಬನೇ. ನಾವು ಯಾವ ಸಾಧನಾ ಮಾರ್ಗವನ್ನು ಸರಿಯಾಗಿ ಅವಲಂಬಿಸಿದರೂ ಪರಿಣಾಮದಲ್ಲಿ ಒಂದೇ ವಿಧವಾದ ನಿತ್ಯ ತತ್ತ್ವಗಳನ್ನೂ ಭಾವ ಶುದ್ಧಿಯನ್ನೂ ಕಾಣಲು ಸಾಧ್ಯವಿದೆ. ಏನಿದ್ದರೂ ಕೆಲವು ಮಾರ್ಗಗಳನ್ನನುಸರಿಸಿದರೆ ಶೀಘ್ರವಾಗಿ ಈ ಸತ್ಫಲವು ಲಭಿಸ ಬಹುದು. ಉಳಿದವುಗಳನ್ನನುಸರಿಸಿದರೆ ಕಾರ್ಯಸಿದ್ಧಿಯಾಗಲು ಸ್ವಲ್ಪ

ಕಾಲವಿಳಂಬವಾಗಬಹುದು. ಇದೊಂದು ವ್ಯತ್ಯಾಸವನ್ನು ಬಿಟ್ಟರೆ, ಎಲ್ಲ ಮಾರ್ಗಗಳಿಂದ ದೊರೆಯುವ ಸಾಕ್ಷಾತ್ಕಾರವೂ ಒಂದೇ''— ಎಂದು ನುಡಿದಿದ್ದಾರೆ. ಮಹಾಪ್ರಭುಗಳವರು ಭಾಷಣದಲ್ಲಿ ಹೇಳಿದುದನ್ನು ಅನುಷ್ಠಾನದಲ್ಲಿಟ್ಟುಕೊಂಡಿದ್ದರು. ಅಜ್ಮೀರಕ್ಕೆ ಹೋಗಿದ್ದಾಗ ಮಹಿಮಾನ್ವಿತರಾದ ಖಾಜಾ ಕಮಾಲುದ್ದೀನ್ ಚಿಷ್ಟಿಯವರ ಸಮಾಧಿಯ ಬಳಿಗೆ ದಯಮಾಡಿ ಭಕ್ತಿತೋರಿದರು. ಜಿನಬಿಂಬ ಪ್ರತಿಷ್ಠಾಪನಾ ಮಹೋತ್ಸವದ ಸಂಬಂಧದಲ್ಲಿ ಮೈಸೂರು ನಗರದ ಜೈನ ದೇವಾಲಯಕ್ಕೆ ಹೋಗಿದ್ದರು. ಈಚೆಗೆ ಶ್ರವಣಬೆಳಗೊಳದಲ್ಲಿ ನಡೆದ ಮಸ್ತಕಾಭಿಷೇಕ ಕಾಲದಲ್ಲಿಯೂ, ಹಿಂದಿನ ಸಲದ ಮಸ್ತಕಾಭಿಷೇಕ ಕಾಲದಲ್ಲಿಯೂ ಗೋಮಟೇಶ್ವರ ವಿಗ್ರಹಕ್ಕೆ ಭಕ್ತಿಯಿಂದ ನಮಸ್ಕಾರ ಮಾಡಿದುದನ್ನೂ ಈ ಸಂಬಂಧದಲ್ಲಿ ಸೂಚಿಸಬಹುದಾಗಿದೆ. ದಿವಾನ್‌ರವರು ೧೯೪೦ನೆಯ ಇಸವಿ ಜನವರಿ ತಿಂಗಳು ೪ನೆಯ ತಾರೀಖಿನ ದಿನದ ತಮ್ಮ ಭಾಷಣದಲ್ಲಿ ಹೇಳಿರುವಂತೆ, "ರಾಜರ್ಷಿಗಳೆಂಬ ಅನ್ವರ್ಥ ನಾಮಧೇಯವನ್ನು ಪಡೆದಿರುವ ಪ್ರಜಾವತ್ಸಲರೂ ಪರಮಸಾತ್ವಿಕರೂ ಆದ ನಮ್ಮ ಪ್ರಭುಗಳವರು ಸಂತತವಾಗಿ ಶ್ರಮಿಸಿ ಆರ್ಜಿಸಿರುವ ಕೀರ್ತಿಯು ನಿಷ್ಕಳಂಕವಾದ ಧವಳ ಕೀರ್ತಿ.'' ಭರತಖಂಡದ ದೊಡ್ಡ ಸಂಸ್ಥಾನಗಳಲ್ಲೊಂದರ ಪ್ರಭುಗಳವರ ಪುತ್ರಿಯವರೂ ಸಂಸ್ಥಾನಾಧೀಶರೊಬ್ಬರ ಪತ್ನಿಯವರೂ ಆದವರೊಬ್ಬರು, "ಭರತಖಂಡದಲ್ಲಾಗಲಿ ಅಥವಾ ಇತರ ಕಡೆಯಲ್ಲಾಗಲಿ ದೇಶದ ಎಲ್ಲೆಯೊಳಗೆ ಪ್ರವೇಶಮಾಡಿದೊಡನೆಯೇ ಪ್ರಭುಗಳ ಪಾರಮಾರ್ಥಿಕತೆಯ ತೇಜಸ್ಸಿನ ಪರಿಣಾಮದಿಂದ ಮನಸ್ಸು ಚಕಿತವಾಗುವುದು ಮೈಸೂರು ಸಂಸ್ಥಾನದಲ್ಲಿ ಮಾತ್ರವೇ'' ಎಂದು ಶ್ಲಾಘಿಸಿದರು.

## ಹದಿಮೂರನೆಯ ಅಧ್ಯಾಯ

### ಈಚಿನ ಸಂಗತಿಗಳು

" ಯಥಾ ಕಾಷ್ಠಂ ಚ ಕಾಷ್ಠಂ ಚ ಸಮೇಯಾತಾಂ ಮಹೋದಧೌ ।
ಸಮೇತ್ಯ ಚ ವ್ಯಪೇಯಾತಾಂ ತದ್ವದ್ಭೂತ ಸಮಾಗಮಃ ॥ "
" ಯತೋಽಭ್ಯುದಯ ನಿಃಶ್ರೇಯಸ ಸಿದ್ಧಿಃ ಸ ಧರ್ಮಃ । "

**ಮಾತೃ ವಿಯೋಗ**

೧೯೩೨ ಮತ್ತು ೧೯೩೩ನೆಯ ಇಸವಿಗಳಲ್ಲಿ ಮಹಾಮಾತೃಶ್ರೀಯವರಿಗೆ ದೇಹಾಲಸ್ಯವುಂಟಾದ ಕಾರಣ, ಮಹಾಪ್ರಭುಗಳವರು ಮೈಸೂರು ಸಂಸ್ಥಾನದ ಹೊರಗಿನ ಪ್ರಯಾಣಗಳನ್ನೇ ಕೈಕೊಳ್ಳದೆ, ಭಕ್ತಿಯಿಂದ ಮಾತೃಸೇವೆ ಮಾಡಿ ನೋಡಿಕೊಂಡರು. ಅವರ ಮಾತೃಭಕ್ತಿಯು ಮಹತ್ತಮವಾದುದು. ರಾಮೇಶ್ವರ ಯಾತ್ರೆ ಮುಂತಾದ ಕಾಲಗಳಲ್ಲಿ ಅವರು ಮಹಾಮಾತೃಶ್ರೀಯವರನ್ನು ಮೇನಾದಲ್ಲಿ ಕುಳ್ಳಿರಿಸಿ ತಾವು ಮೇನಾದ ಪಾರ್ಶ್ವದಲ್ಲಿ ಭಕ್ತಿಯಿಂದ ನಡೆದುಹೋಗುತ್ತಿದ್ದುದು; ಸಿಂಹಾಸನಾರೋಹಣಕ್ಕೆ ದಯಮಾಡುತ್ತಿದ್ದುದೇ ಮುಂತಾದ ಕಾಲಗಳಲ್ಲಿ ಮಹಾಮಾತೃಶ್ರೀಯವರ ಪಾದಗಳಿಗೆರಗಿ ಅನುಜ್ಞೆ ಪಡೆಯುತ್ತಿದ್ದುದು; ಅರಮನೆಯ ಅಧಿಕಾರಿ ವರ್ಗದವರಲ್ಲಿ ರಜವನ್ನು ಪಡೆದಿದ್ದವರು ಮರಳಿ ಬಂದು ವರದಿ ಮಾಡಿಕೊಂಡಾಗ ಮಹಾಮಾತೃಶ್ರೀಯವರ ಸನ್ನಿಧಿಯಲ್ಲಿ ಅರಿಕೆ ಮಾಡಿಸಬೇಕೆಂದು ಸೂಚಿಸಿ, "ಹುಜೂರು ಸನ್ನಿಧಾನದಲ್ಲಿ ಮೊದಲು ಅರಿಕೆಮಾಡಿಸಿ ಆಮೇಲೆ ನಮ್ಮಲ್ಲಿಗೆ ಬಂದು ತಿಳಿಸಿ" ಎಂದು ಆಜ್ಞಾಪಿಸುತ್ತಿದ್ದುದು; ಅರಮನೆಯ ಸಂಬಂಧದ ಸಮಸ್ತ ಕಾರ್ಯಕಲಾಪಗಳೂ ಮಹಾಮಾತೃಶ್ರೀಯವರ ಅನುಜ್ಞೆಗಳಿಗನುಸಾರವಾಗಿ ಇತ್ಯರ್ಥಪಟ್ಟು ಆಡಳಿತ ನಡೆಯಬೇಕೆಂದು ಗೊತ್ತುಮಾಡಿದ್ದುದು; ಮುಂತಾದ ಅನೇಕ ನಿದರ್ಶನಗಳಿಂದ ಅದು ವ್ಯಕ್ತವಾಗುತ್ತದೆ. ಆಳಿದ ಮಹಾಸ್ವಾಮಿಯವರ ಪ್ರೀತಿ ಭಕ್ತಿಗಳಿಂದ ಸುಪ್ರೀತರಾಗಿದ್ದ ಮಹಾಮಾತೃಶ್ರೀಯವರು, "ಹಿಂದೆ ಶ್ರೀರಾಮರು ಪಿತೃವಾಕ್ಯಪರಿಪಾಲನಮಾಡಿ ಆದರ್ಶಪುತ್ರರಾಗಿದ್ದರೆ, ನಮ್ಮ ಅಯ್ಯಾಜಿಯವರು ಈಗ ಮಾತೃವಾಕ್ಯ ಪರಿಪಾಲನ ಮಾಡಿ ಆದರ್ಶಪುತ್ರರಾಗಿದ್ದಾರೆ" ಎಂದು ಅಪ್ಪಣೆ ಕೊಡಿಸಿದರಂತೆ.

ಮಹಾಮಾತೃಶ್ರೀಯವರು ದೇಹಾಲಸ್ಯದಿಂದ ಕ್ಲೇಶಪಟ್ಟ

ಕಾಲದಲ್ಲಿ, ಮಹಾಪ್ರಭುಗಳವರು ಆಹಾರ ನಿದ್ರೆಗಳನ್ನೂ ದೇಹಶ್ರಮ ವನ್ನೂ ಪರಿಗಣಿಸದೆ ಆತಂಕದಿಂದಲೂ ವಿಷಾದದಿಂದಲೂ ಮಾತೃಸೇವೆ ಮಾಡಿದರು; ಅನ್ಯಾದೃಶವಾದ ಆಸಕ್ತಿಯಿಂದ ಸಮಸ್ತ ಸೌಕರ್ಯ ಗಳನ್ನೂ ಕಲ್ಪಿಸಿ ಚಿಕಿತ್ಸೆಮಾಡಿಸಿದರು; ದಾನಧರ್ಮಗಳನ್ನು ಮಾಡಿಸಿದರು; ಮಹಾಮಾತೃಶ್ರೀಯವರಿಗೆ ಸಂಚಾರ ಸಾಮರ್ಥ್ಯ ತಪ್ಪಿ ತೊಂದರೆ ಯಾದಾಗ ಅವರು ರಬ್ಬರ್ ಪಟ್ಟಿ ಹಾಕಿದ ಚಕ್ರಗಳುಳ್ಳ ಚಿಕ್ಕ ಬಂಡಿಯಲ್ಲಿ ಅರಮನೆಯೊಳಗೆ ಸ್ನಾನಮಂದಿರ, ದೇವಮಂದಿರ ಮುಂತಾದುವುಗಳಿಗೆಲ್ಲ ಧಾರಾಳ[illegible] ಹೋಗಿ ಬರುವಂತೆ ಅಮೃತ ಶಿಲಾದಿಗಳಿಂದ ರಚಿತವಾದ ಹೊಸಿಲುಗಳನ್ನೆಲ್ಲ ಕೀಳಿಸಿದರು. ಅಷ್ಟೇ ಅಲ್ಲ. ಮಧ್ಯಾಹ್ನ ಹನ್ನೆರಡು ಘಂಟೆಗೆ ಅರಮನೆಯ ಬಳಿಯಲ್ಲಿ ಫಿರಂಗಿಯ ಶಬ್ದವಾದರೆ ಅವರಿಗೆಲ್ಲಿ ತೊಂದರೆಯಾದೀತೋ — ಎಂದು ಶಂಕಿಸಿ ಅರಮನೆಗೆ ಬಹಳ ದೂರವಾದ ಸ್ಥಳದಲ್ಲಿ ಮಧ್ಯಾಹ್ನ ಸೂಚಕವಾದ ಆ ಫಿರಂಗಿಯನ್ನು ಹೊಡೆಯುವಂತೆ ಆಜ್ಞೆಮಾಡಿದರು, ಮಹಾಪ್ರಭುಗಳವರು. ಅವರು ಆ ರೀತಿ ಆತಂಕ ವಿಷಾದ ಗಳಿಂದ ತಮ್ಮನ್ನು ನೋಡಿಕೊಂಡ ಬಗೆಯನ್ನು ಕಂಡು ಮಹಾಮಾತೃ ಶ್ರೀಯವರಿಗೆ ಅನಿರ್ವಚನೀಯವಾದ ಬಗೆಬಗೆಯ ಭಾವಗಳುಂಟಾಗಿ, "ಎಂದು ಬೇಕಾದರೂ ಸಾವು ಬರಲಿ — ಅಂತ ಮನಸ್ಸು ಸಿದ್ಧವಾಗಿದೆ. ಆದರೆ ಅಯ್ಯಾಜಿಯವರು ಎಷ್ಟು ದುಃಖಪಡುತ್ತಾರೋ — ಅಂತ ಮನಸ್ಸಿಗೆ ಆತಂಕ. ಅವರಿಗೆ ಆ ದುಃಖದ ದಿನ ಆದಷ್ಟು ತಡವಾಗಿ ಬರುವುದ ಕ್ಕೋಸ್ಕರವಾಗಿ ಇನ್ನೂ ಬದುಕಿರಬೇಕೆಂದು ಆಶೆ" ಎಂದರು.

ಮಹಾಮಾತೃಶ್ರೀಯವರ ವ್ಯಾಧಿಯು ಉತ್ಕಟವಾಗಿಪರಿಣಮಿಸಿತು. ಉತ್ತರಾಯಣದ ಏಕಾದಶೀ ಶನಿವಾರದ ದಿನ (೧೯೩೪ನೆಯ ಇಸವಿ ಜೂಲೈ ತಿಂಗಳು ೭ನೆಯ ತಾರೀಖಿನ ದಿನ) ಸಮರಾತ್ರಿಯಲ್ಲಿ ಅವರು ದಿವಂಗತರಾದರು. ಆಳಿದ ಮಹಾಸ್ವಾಮಿಯವರೂ, ಶ್ರೀಮದ್ಯುವರಾಜ ಶ್ರೀ ಕಂಠೀರವ ನರಸಿಂಹರಾಜ ಒಡೆಯರವರೂ, ರಾಜಕುಟುಂಬದ ಇತರರೂ ವಿಯೋಗ ದುಃಖದಿಂದ ಪರಿತಪಿಸಿದರು. ಆಳಿದ ಮಹಾಸ್ವಾಮಿ ಯವರ ಸಹಪಾಠಿಗಳಲ್ಲೊಬ್ಬರಾದ ಮಹಾಶಯರೊಬ್ಬರು, "ನಾನು ಆ ದಿನ ದುಃಖಪಟ್ಟಷ್ಟು ಮಟ್ಟಿಗೆ ನಮ್ಮ ತಾಯಿಯವರು ಮೃತಪಟ್ಟ ದಿನವೂ ದುಃಖಪಟ್ಟಿರಲಿಲ್ಲ. ನಾನು ಬಾಲ್ಯದಲ್ಲಿ ಶ್ರೀಮನ್ಮಹಾರಾಜ ರವರೊಡನೆ ವ್ಯಾಸಂಗಮಾಡುತ್ತಿದ್ದಾಗ ಅವರು ನಮ್ಮ ತಾಯಿಯಂತೆಯೇ ಪ್ರೀತಿ ವಿಶ್ವಾಸ ತೋರಿಸುತ್ತಿದ್ದರು. ಅವರ ಸದ್ಗುಣಗಳನ್ನು ಸ್ಮರಿಸಿ ಕೊಂಡು ಈಗಲೂ ದುಃಖಿಸುತ್ತೇನೆ" ಎಂದರು.

ಮೈಸೂರು ಬೆಂಗಳೂರು ನಗರಗಳಲ್ಲಿಯೂ ಸಂಸ್ಥಾನದಲ್ಲಿ ಇತರ ನಾನಾ ಕಡೆಗಳಲ್ಲಿಯೂ ಸಂತಾಪ ಸೂಚಕ ಸಭೆಗಳು ನಡೆದುವು. ಆಳಿದ ಮಹಾಸ್ವಾಮಿಯವರು ಮಹಾಮಾತೃಶ್ರೀಯವರ ಉತ್ತರಕ್ರಿಯೆಗಳನ್ನು ಶಾಸ್ತ್ರೋಕ್ತವಾಗಿ ಬಹಳ ಭಕ್ತಿಯಿಂದ—ರಾಜಮನೆತನಗಳ ಪದ್ಧತಿಯನ್ನು ಗಮನಿಸದೆ ಸಾಮಾನ್ಯರಂತೆಯೇ— ನೆರವೇರಿಸಿದರು. ಸ್ಮಶಾನಕ್ಕೆ ಬಂದಿದ್ದವರಿಗೆಲ್ಲ ಸ್ನಾನಕ್ಕೆ ಬಿಸಿನೀರು ಸಿದ್ಧವಾಗಿದ್ದೂ ಕೂಡ ಮಹಾಪ್ರಭುಗಳು ಮಾತ್ರ ವಿಧಿಗನುಸಾರವಾಗಿ ತಣ್ಣೀರಿನಲ್ಲೇ ಸ್ನಾನಮಾಡಿ ಕರ್ಮಾಂತರಗಳನ್ನು ಮಾಡಿದರು. ಅಪರ ಕರ್ಮಗಳಲ್ಲಿ ಕೆಲವನ್ನು ಮಹಾರಾಜರಾದ ಪ್ರಭುಗಳವರಿಂದ ಮಾಡಿಸುವ ಬಗೆ ಹೇಗೆಂದು ಪುರೋಹಿತರಿಗುಂಟಾದ ಸಂದೇಹವನ್ನು ಗಮನಿಸಿ, "ಮಹಾರಾಜ ಪದವಿಗೂ ಇದಕ್ಕೂ ಸಂಬಂಧವಿಲ್ಲ. ಇದು ಪುತ್ರನು ಮಾತೃಸೇವೆಮಾಡಿ ಕೃತಾರ್ಥನಾಗುವ ವಿಷಯ. ಸಮಸ್ತ ವಿಧಿಗಳೂ ಸಾಂಗವಾಗಿ ನಡೆಯಲಿ" ಎಂದರು.

**ಆಳಿದ ಮಹಾಸ್ವಾಮಿಯವರ ಯೂರೋಪು ಖಂಡದ ಪ್ರಯಾಣ**

ಆಳಿದ ಮಹಾಸ್ವಾಮಿಯವರಿಗೆ ಕೊಂಚಕಾಲ ದೇಹಾಲಸ್ಯವುಂಟಾಗಿ ಮೈಸೂರು ಸಂಸ್ಥಾನದ ಪ್ರಜೆಗಳೆಲ್ಲರೂ (೧೯೩೬ನೆಯ ಇಸವಿಯಲ್ಲಿ) ಕಳವಳಕ್ಕೊಳಗಾದರು. ಶ್ರೀ ಚಾಮುಂಡೇಶ್ವರೀ ದೇವಿಯವರ ಕೃಪೆಯಿಂದ, ಬೆಟ್ಟದಂತೆ ಬಂದಿದ್ದುದು ಮಂಜಿನಂತೆ ಪರಿಹಾರವಾಯಿತು. ಆದರೆ ಅಷ್ಟರಲ್ಲಿ ಮಹಾಪ್ರಭುಗಳವರ ಸೋದರಿಯವರಾದ ರಾಜಕುಮಾರಿ ಶ್ರೀ ಚೆಲುವಾಜಮ್ಮಣ್ಣಿಯವರ ವಿಯೋಗ ದುಃಖವೂ ಒದಗಿ ಆರೋಗ್ಯಕ್ಕೆ ಸ್ವಲ್ಪ ಹಾನಿ ತಟ್ಟಿತು. ಪೂರ್ಣಾರೋಗ್ಯಲಾಭವುಂಟಾಗಲು ಯೂರೋಪು ಖಂಡಕ್ಕೆ ಹೋಗಿ ಬರಬೇಕೆಂಬ ವೈದ್ಯರ ಸಲಹೆಯನ್ನಂಗೀಕರಿಸಿ ಅವರು ೧೯೩೬ನೆಯ ಇಸವಿ ಜೂನ್ ತಿಂಗಳಿನಲ್ಲಿ ಪ್ರಯಾಣ ಬೆಳೆಯಬೇಕೆಂದು ನಿಷ್ಕರ್ಷೆಮಾಡಿದರು. ಆ ಶುಭ ವಾರ್ತೆಯು ಪ್ರಪಂಚದ ನಾನಾ ದೇಶಗಳಿಗೂ ಹರಡಿ, ಮಹಾಪ್ರಭುಗಳಿಗೆ ಅಭಿನಂದನವನ್ನು ಸೂಚಿಸುವ ನೂರಾರು ತಂತಿ ವರ್ತಮಾನಗಳು ಪ್ರಪಂಚದ ನಾನಾ ದೇಶಗಳಿಂದಲೂ ಬಂದುವು. ಆರೋಗ್ಯಲಾಭದ ಉದ್ದೇಶದ ಜೊತೆಗೆ, ಮೈಸೂರು ಸಂಸ್ಥಾನದ ಅಭ್ಯುದಯಸಾಧನೆಗೆ ಸಹಾಯವಾಗುವ ಅನೇಕ ವಿಷಯಗಳನ್ನು ಸಂಗ್ರಹಿಸುವ ಅಭಿಲಾಷೆಯೂ ಸಹ ಮಹಾಸ್ವಾಮಿಯವರಿಗಿದ್ದಿತು. ಅವರೊಡನೆ ಶ್ರೀಮದ್ಯುವರಾಜ ಶ್ರೀ ಕಂಠೀರವ ನರಸಿಂಹರಾಜ ಒಡೆಯರವರೂ ಯೂರೋಪಿಗೆ ದಯಮಾಡಲನುವಾದರು.

**ಪರಿವಾರ.**—ಆಳಿದ ಮಹಾಸ್ವಾಮಿಯವರೊಡನೆ ದಿವಾನ್‌ರವರಾದ ಅಮೀನ್-ಉಲ್-ಮುಲ್ಕ್ ಸರ್ ಮಿರ್ಜಾ ಎಂ. ಇಸ್ಮಾಯಿಲ್‌ರವರೂ, ರಾಜಕುಮಾರ ಕ್ಯಾಪ್ಟನ್ ಸಿ. ದೇಶರಾಜ ಅರಸಿನವರೂ, ಸಿದ್ದಿಕ್-ಉಲ್ ಮುಲ್ಕ್ ಶ್ರೀಮಾನ್ ಸಡೆಗ್ ಸಡ್. ಷಾ ಅವರೂ, ರಾಜಸೇನಾಭೂಷಣ ಲೆಫ್ಟಿನೆಂಟ್ ಕರ್ನಲ್ ಎ. ವಿ. ಸುಬ್ರಹ್ಮಣ್ಯರಾಜ ಅರಸಿನವರೂ, ರಾಜಸೇನಾತಿಲಕ ಲೆಫ್ಟಿನೆಂಟ್ ಕರ್ನಲ್ ಎಸ್. ಗೋಪಾಲರಾಯರೂ, ಲೆಫ್ಟಿನೆಂಟ್ ಕರ್ನಲ್ ಬಿ. ಪಿ. ಕೃಷ್ಣರಾಜ ಅರಸಿನವರೂ, ಡಾಕ್ಟರ್ ರಾಬಿನ್‌ಸನ್ ಅವರೂ, ಡಾಕ್ಟರ್ ಟಿ. ಬಾಲಕೃಷ್ಣ ಮುದಲಿಯಾರರವರೂ, ಮೇಜರ್ ಎಂ. ನಬೀಖಾನ್‌ರವರೂ, ಶ್ರೀಮಾನ್ ವಿ. ಸುಬ್ರಹ್ಮಣ್ಯ ಐಯರವರೂ, ಶ್ರೀಮಾನ್ ಡಿ. ಎಸ್. ಲಕ್ಷ್ಮೀಕಾಂತರಾಜ ಅರಸಿನವರೂ, ಶ್ರೀಮಾನ್ ಡಿ. ಎನ್. ನೀಲಕಂಠರಾಯರವರೂ, ಶ್ರೀಮಾನ್ ಸಿ. ವಿ. ಸುಬ್ರಹ್ಮಣ್ಯರಾಜ ಅರಸಿನವರೂ, ಶ್ರೀಮಾನ್ ಎ. ವೆಂಕಟ ಸುಬ್ಬಯ್ಯನವರೂ, ಶ್ರೀಮಾನ್ ಎ. ಸಿ. ರಾಜೇ ಅರಸಿನವರೂ, ಶ್ರೀಮಾನ್ ಜಿ. ಕೃಷ್ಣೇ ಅರಸಿನವರೂ, ವೇ|| ಋತ್ವಿಕ ರಾಮಾಶಾಸ್ತ್ರಿಗಳವರೂ ಮತ್ತು ವೇ|| ನಂಜುಂಡಶಾಸ್ತ್ರಿಗಳವರೂ ಹೊರಡುವಂತೆ ಗೊತ್ತಾಯಿತು. ಹತ್ತಾರು ಮಂದಿ ಅಡಿಗೆಯವರೂ, ಊಳಿಗದವರೂ, ಅನೇಕ ಸೇವಕರೂ ಹೊರಡಬೇಕೆಂದು ಆಜ್ಞೆಯಾಯಿತು. ಆಳಿದ ಮಹಾಸ್ವಾಮಿಯವರು ೧೯೩೬ನೆಯ ಇಸವಿ ಜೂನ್ ೨೧ನೆಯ ತಾರೀಖಿನ ಶುಭದಿನ ಪ್ರಾತಃಕಾಲ ಮೈಸೂರಿನಿಂದ ಬೆಂಗಳೂರಿಗೆ ದಯಮಾಡಿ, ೨೩ನೆಯ ತಾರೀಖು ರಾತ್ರಿ ಬೆಂಗಳೂರಿನಿಂದ ರೈಲಿನಲ್ಲಿ ಪ್ರಯಾಣಮಾಡಿ ಮುಂಬಯಿ ನಗರಕ್ಕೆ ಸೇರಿದರು. ಶ್ರೀಮಾನ್ ಕೆ. ನರಸಿಂಹ ಐಯಂಗಾರ್ಯರವರೂ ಯೂರೋಪಿಗೆ ಹೊರಡಬೇಕೆಂದು ಪುಣೆಯಲ್ಲಿ ಮಹಾಪ್ರಭುಗಳವರ ಆಜ್ಞೆಯಾಯಿತು. ಶ್ರೀಮದ್ಯುವರಾಜ ಶ್ರೀಕಂಠೀರವ ನರಸಿಂಹರಾಜ ಒಡೆಯರವರು ಸಪರಿವಾರರಾಗಿ ೧೯೩೬ನೆಯ ಇಸವಿ ಜೂನ್ ೨೬ನೆಯ ತಾರೀಖಿನ ದಿನ ಮುಂಬಯಿ ನಗರಕ್ಕೆ ದಯಮಾಡಿದರು. ಆಳಿದ ಮಹಾಸ್ವಾಮಿಯವರೂ, ಶ್ರೀಮದ್ಯುವರಾಜ ಶ್ರೀ ಕಂಠೀರವ ನರಸಿಂಹರಾಜ ಒಡೆಯರವರೂ, ದಿವಾನ್‌ರವರಾದ ಅಮೀನ್-ಉಲ್-ಮುಲ್ಕ್ ಸರ್ ಮಿರ್ಜಾ ಎಂ. ಇಸ್ಮಾಯಿಲ್‌ರವರೇ ಮುಂತಾದವರೂ ಅದೇ ದಿನ ರಾತ್ರಿ ಮುಂಬಯಿ ನಗರದಲ್ಲಿ "ರಾನ್ಪುರ" ಎಂಬ ಹೆಸರಿನ ಜಹಜನ್ನು ಹತ್ತಿ ಸಮುದ್ರಯಾನ ಮಾಡಿದರು.

**ಜನಗಳ ಭಕ್ತಿ ವಿಶ್ವಾಸಗಳು.**— ಆ ದಿನ ಮುಂಬಯಿ ನಗರದಲ್ಲಿ

ರಾಜಕಾರ್ಯಪ್ರಸಕ್ತ ದಿವಾನ್ ಬಹದ್ದೂರ್ ಶ್ರೀಮಾನ್ ಕೆ. ರಾಮಸ್ವಾಮಿ ಯವರು, ಶ್ರೀಮಾನ್ ಎನ್. ಎನ್. ಐಯಂಗಾರ್ಯರವರು, ಶ್ರೀಮಾನ್ ಸಿ. ಸೀತಾರಾಮಯ್ಯನವರು ಮುಂತಾದವರನೇಕರು ಮಹಾಸ್ವಾಮಿ ಯವರುಗಳಿಬ್ಬರಿಗೂ ಮತ್ತು ಉಳಿದವರಿಗೂ ಸುಖಪ್ರಯಾಣವನ್ನು ಬಯಸಿದರು. ಮೈಸೂರು ಸಂಸ್ಥಾನದವರಲ್ಲದ ಬಹು ಮಂದಿಗಳೂ ಸಹ ಮಹಾಸ್ವಾಮಿಯವರುಗಳಿಬ್ಬರಿಗೂ ಭಕ್ತಿ ವಿಶ್ವಾಸಗಳಿಂದ ಅವರಂತೆಯೇ ಸುಖಪ್ರಯಾಣವನ್ನು ಬಯಸಿದರು. ಸರ್ ಕವಾಸ್ಜಿ ಜಹಾಂಗೀರ್ ಏಡನ್ ವಾಲಾ ಎಂಬವರು ಏಡನ್ನಿನಿಂದ ಜಹಜಿಗೇ "ಮಾರ್ಕೊನಿ ಗ್ರಾಮ್" ವಾರ್ತೆಯನ್ನು ಕಳುಹಿಸಿ, ಮಹಾಸ್ವಾಮಿ ಯವರು ಏಡನ್ನಿಗೆ ತಲಪಿದಾಗ ತಮ್ಮ ಸ್ಟೀಂ ಲಾಂಚನ್ನೂ ಮೋಟಾರು ಬಂಡಿಗಳನ್ನೂ ಉಪಯೋಗಿಸುವ ಕೃಪೆಮಾಡಿ ಅವುಗಳಲ್ಲಿ ಕುಳಿತು ಅಲ್ಲಿಯ ನಾನಾ ದೃಶ್ಯಗಳನ್ನೂ ಪರಾಂಬರಿಸಬೇಕೆಂದು ಪ್ರಾರ್ಥಿಸಿದರು. ಮಹಾಪ್ರಭುಗಳವರು ತಮ್ಮ ಸಂತೋಷವನ್ನು ಸೂಚಿಸಿ ಅವರಿಗೆ ಪ್ರತ್ಯುತ್ತರವನ್ನು ಕಳುಹಿಸಿದರು; ೧೯೩೬ನೆಯ ಇಸವಿ ಜೂಲೈ ತಿಂಗಳು ೨ನೆಯ ತಾರೀಖು ಅಪರಾಹ್ನ ನಾಲ್ಕೂವರೆ ಘಂಟೆಗೆ ಏಡನ್ನಿಗೆ ಸೇರಿದಾಗ ಅವರ ಪ್ರಾರ್ಥನೆಯನ್ನು ಸಲ್ಲಿಸಿ ಅಲ್ಲಿ ನೋಡತಕ್ಕ ಸ್ಥಳಗಳನ್ನೆಲ್ಲ ನೋಡಿ ರಾತ್ರಿ ಏಳೂವರೆ ಘಂಟೆಗೆ ಜಹಜಿಗೆ ಹಿಂತಿರುಗಿದರು. ರಾತ್ರಿ ಒಂಬತ್ತೂವರೆ ಘಂಟೆಗೆ ಜಹಜು ಮುಂದಕ್ಕೆ ಪ್ರಯಾಣಮಾಡಿತು. ಜಹಜಿನಲ್ಲಿದ್ದ ಪ್ರಯಾಣಿಕರೆಲ್ಲರೂ ಮಹಾಸ್ವಾಮಿಯವರುಗಳಿಬ್ಬರ ಸರಳತೆಯನ್ನೂ ವಿನಯ ಶೀಲತೆಯನ್ನೂ ಕಂಡು ಬೆರಗಾದರು. ಜೂಲೈ ತಿಂಗಳು ೫ನೆಯ ತಾರೀಖಿನ ದಿನ ಶ್ರೀಮದ್ಯುವರಾಜ ಶ್ರೀ ಕಂಠೀರವ ನರಸಿಂಹರಾಜ ಒಡೆಯರವರು ತಮ್ಮ ಸಹೋದರರೇ ಮುಂತಾದವ ರೆಲ್ಲರನ್ನೂ ಜಹಜಿನ ನಾನಾ ಭಾಗಗಳಿಗೂ ಕರೆದೊಯ್ದು ಅವುಗಳ ವಿಷಯಗಳನ್ನೆಲ್ಲ ವಿವರಿಸಿ ಹೇಳಿ ಸಂತೋಷಪಡಿಸಿದರು. ಜಹಜಿನಲ್ಲಿ ಪ್ರತಿ ದಿನವೂ ಕ್ಲುಪ್ತಕಾಲಗಳಲ್ಲಿ ಮಹಾಸ್ವಾಮಿಯವರುಗಳಿಗೆ ಶ್ರೀಮಾನ್ ವಿ. ಸುಬ್ರಹ್ಮಣ್ಯ ಐಯರವರು ಧಾರ್ಮಿಕ ಗ್ರಂಥ ಶ್ರವಣಮಾಡಿಸಿ ತತ್ತ್ವ ಜಿಜ್ಞಾಸೆಮಾಡುತ್ತಿದ್ದರು.

**ಲಂಡನ್ನಿಗೆ ಸೇರಿದುದು.**—ಸಮುದ್ರಪ್ರಯಾಣವು ಕ್ರಮ ಕ್ರಮವಾಗಿ ಮುಂದುವರಿಯಿತು. ಜಹಜಿನಲ್ಲಿ ಸ್ನಾನದ ಕೋಣೆ, ಶ್ರೀ ಚಾಮುಂಡೇಶ್ವರೀ ದೇವಿಯವರ ಸುವರ್ಣ ವಿಗ್ರಹಾರ್ಚನೆಗೆ ಅನುಕೂಲವಾಗಿದ್ದ ದೇವರ ಕೋಣೆ, ಭೋಜನದ ಕೋಣೆ ಮುಂತಾದುವುಗಳೆಲ್ಲ ಸಂಪ್ರದಾಯ

ಪ್ರಿಯರಾಗಿದ್ದ ಮಹಾಪ್ರಭುಗಳವರ ಅಭಿರುಚಿಗೆ ತಕ್ಕಂತೆ ಪರಿಷ್ಕಾರ ವಾಗಿದ್ದುವು. ಪಾನಕ್ಕೆ ಗಂಗಾಜಲವು ನೂರಾರು ಬಿಂದಿಗೆಗಳಲ್ಲಿ ಸಿದ್ಧವಾಗಿದ್ದಿತು; ಮಹಾಪ್ರಭುಗಳೇ ಮೊದಲಾಗಿ ಸಮಸ್ತರೂ ಪಾನಕ್ಕೆ ಗಂಗಾಜಲವನ್ನುಪಯೋಗಿಸುತ್ತಿದ್ದರು. ಕೆಂಪು ಸಮುದ್ರ ಮುಂತಾದು ವುಗಳ ಮಾರ್ಗವಾಗಿ ಜಹಜು ಮುಂದೆ ಸಾಗಿತು. ೧೯೩೬ನೆಯ ಇಸವಿ ಜೂಲೈ ೬ನೆಯ ತಾರೀಖಿನ ದಿನ ಬೆಳಗಿನ ಜಾಮದಲ್ಲಿ ಶ್ರೀಮದ್ಯುವರಾಜ ಶ್ರೀ ಕಂಠೀರವ ನರಸಿಂಹರಾಜ ಒಡೆಯರವರು ಸೂಯೆಸ್ ಕಾಲುವೆಯ ಬಳಿಯಲ್ಲಿ ಬೆಳದಿಂಗಳು ಬಿದ್ದು ಸಮುದ್ರವು ಬೆಳಗುತ್ತಿದ್ದ ವರ್ಣ ವೈಖರಿಯ ಮನಮೋಹಕ ದೃಶ್ಯವನ್ನೂ, ಅರುಣೋದಯ ಕಾಲದವರೆಗೂ ಅದು ಮಾರ್ಪಡುತ್ತಿದ್ದ ಬಗೆಯನ್ನೂ ವಿವರಿಸಿ ಮತ್ತೆಲ್ಲಿಯೂ ಕಾಣಲಾಗದ ಆ ನೋಟದಿಂದ ಸಮಸ್ತರೂ ಉಲ್ಲಾಸಗೊಳ್ಳುವಂತೆ ಮಾಡಿದರು. ಜೂಲೈ ತಿಂಗಳು ೧೦ನೆಯ ತಾರೀಖು ರಾತ್ರಿ ೧೦ ಘಂಟೆಗೆ "ರಾನ್ಪುರ" ಜಹಜು ಫ್ರಾನ್ಸಿನ ಮಾರ್ಸೇಲ್ಸ್ ನಗರಕ್ಕೆ ಸೇರಿತು. ಮಾರನೆಯ ದಿನ ಪ್ರಾತಃಕಾಲ ಅವರೆಲ್ಲರೂ ಆ ನಗರದ ದೊಡ್ಡ ಹೋಟಲಿಗೆ ದಯಮಾಡಿದರು. ಆ ಮೊದಲೇ ಅಲ್ಲಿಗೆ ಹೋಗಿದ್ದ ಅಡಿಗೆಯವರು ಅಡಿಗೆಯನ್ನು ಸಿದ್ಧಗೊಳಿಸಿದ್ದರು. ಮಾರನೆಯ ದಿನ ಶ್ರೀಮದ್ಯುವರಾಜರವರು ಆ ನಗರದಲ್ಲಿದ್ದ ಕ್ರಿಸ್ತಶಕ ಹನ್ನೆರಡನೆಯ ಶತಮಾನದ ಚರ್ಚುಗಳೇ ಮುಂತಾದು ವುಗಳನ್ನೂ ನಾನಾ ಸುಂದರ ದೃಶ್ಯಗಳನ್ನೂ ತೋರಿಸಿದರು. ಅನಂತರ ಬೆಳಗ್ಗೆ ಹನ್ನೊಂದೂವರೆ ಘಂಟೆಗೆ ರೈಲನ್ನು ಹತ್ತಿ ಅಲ್ಲಿಂದ ೭೦೦ ಮೈಲಿಗಳ ದೂರ ಪ್ರಯಾಣಮಾಡಿ ಪ್ಯಾರಿಸ್ ನಗರಕ್ಕೆ ರಾತ್ರಿ ಹತ್ತುಘಂಟೆ ಐವತ್ತೈದು ನಿಮಿಷಗಳಿಗೆ ಎಲ್ಲರೂ ಸೇರಿದರು; ಪ್ಯಾರಿಸ್ ನಗರವು ಯಾವುದೋ ಲೋಕದ ನಗರವೋ — ಎಂಬಷ್ಟು ಸುಂದರವಾಗಿದ್ದುದನ್ನು ಕಂಡು ಹರ್ಷಿಸಿದರು. ಮಹಾಪ್ರಭುಗಳವರೂ ಇತರರೂ ಜೂಲೈ ತಿಂಗಳು ೧೫ನೆಯ ತಾರೀಖಿನ ವರೆಗೂ ಪ್ಯಾರಿಸ್ ನಗರದಲ್ಲಿದ್ದರು. ಅಲ್ಲಿಯ ಸೊಗಸಿನ ದೃಶ್ಯಗಳನ್ನೂ, ವಾರ್ಸೇಲ್ಸ್ ಅರಮನೆಯನ್ನೂ, ಮನೋಹರವಾದ ಚಿತ್ರಗಳಿರುವ ಚಿತ್ರ ಶಾಲೆಯನ್ನೂ, ನೋಡಿದರು. ಪ್ಯಾರಿಸ್ಸಿನಿಂದ ಹೊರಟು ೧೬ನೆಯ ತಾರೀಖಿನ ದಿನ ಸಾಯಂಕಾಲ ಆರು ಘಂಟೆ ಐವತ್ತೈದು ನಿಮಿಷಗಳಿಗೆ ಲಂಡನ್ನಿನ ವಿಕ್ಟೋರಿಯಾ ನಿಲ್ದಾಣವನ್ನು ಸೇರಿದರು. ಅಲ್ಲಿ ಅವರಿಗೆ ಅತ್ಯಂತ ಆದರದ ಸ್ವಾಗತವು ದೊರೆಯಿತು. ಲಾರ್ಡ್ ಗಾಷನ್‌ರವರೂ, ಲೇಡಿ ಗಾಷನ್‌ರವರೂ, ಮೇಜರ್ ಜನರಲ್ ಸರ್ ಫ್ರೆಡರಿಕ್ ಸೈಕ್ಸ್ ರವರೂ, ಸರ್ ಹರ್ಕೋಟ್ ಬಟ್ಲರವರೂ, ಸರ್ ಸ್ಟ್ಯೂಯರ್ಟ್




ಲಂಡನ್ನಿನ ರೈಲ್ವೇ ನಿಲ್ದಾಣದಲ್ಲಿ ಸ್ವಾಗತ



ಆಳಿದ ಮಹಾಸ್ವಾಮಿಯವರು ಲಂಡನ್ ನಗರದಲ್ಲಿ ವಿಮಾನವನ್ನೇರಿದಾಗ್ಗೆ

(ಶ್ರೀಮಾನ್ ಡಿ. ಎನ್. ನೀಲಕಂತರಾಯರವರು, ಶ್ರೀಮಾನ್ ಡಿ. ಎಸ್. ಲಕ್ಷ್ಮೀ
ಕಾಂತರಾಜ ಅರಸಿನವರು, ರಾಜಸೇನಾಭೂಷಣ ಎ. ವಿ. ಸುಬ್ರಹ್ಮಣ್ಯರಾಜ ಅರಸಿನವರು,
ಮೇಜರ್ ಎಂ. ನಬೀಖಾನ್‌ರವರು, ಆಳಿದ ಮಹಾಸ್ವಾಮಿಯವರು, ಅಮೀನ್-ಉಲ್-
ಮುಲ್ಕ್ ಸರ್‌ಮಿರ್ಜಾ ಎಂ. ಇಸ್ಮಾಯಿಲ್, ಕೆ.ಸಿ.ಐ.ಇ., ಓ.ಬಿ.ಇ. ಅವರು, ರಾಜ
ಕುಮಾರ ಕ್ಯಾಪ್ಟನ್ ಸಿ. ದೇಶರಾಜ ಅರಸಿನವರು, ಲೆಫ್ಟಿನೆಂಟ್ ಕರ್ನಲ್ ಬಿ. ಪಿ. ಕೃಷ್ಣೇ
ಅರಸಿನವರು, ರಾಜಸೇನಾತಿಲಕ ಲೆಫ್ಟಿನೆಂಟ್ ಕರ್ನಲ್ ಎಸ್. ಗೋಪಾಲರಾಯರು, ಸಿದ್ದಿಕ್-
ಉಲ್-ಮುಲ್ಕ್ ಸಡೆಗ್ ಸ್ಥಡ್. ಷಾರವರು ಮತ್ತು ಡಾಕ್ಟರ್ ಟಿ. ಬಾಲಕೃಷ್ಣ
ಮುದಲಿಯಾರರವರು)

ಫ್ರೇಜರವರೂ, ಶ್ರೀಮಾನ್ ನೈ ಅವರೂ, ಸರ್ ಎ. ಆರ್. ಬ್ಯಾನರ್ಜಿಯವರೂ, ಇಂಡಿಯಾ ಸ್ಟೇಟ್ ಸೆಕ್ರೆಟರಿಯವರ ಪರವಾಗಿ ಕರ್ನಲ್ ನೀಲ್ ಅವರೂ, ಸರ್ ವಿಲಿಯಂ ಬಾರ್ಟನ್‌ರವರೂ, ರಾಜಾ ಜಗನ್ನಾಥ ರಾಯರವರೂ, ಶ್ರೀಮಾನ್ ಭಂಡಾರ್ಕರ್ ಅವರೂ, ಇತರ ಅಸಂಖ್ಯಾತ ಮಹಿಳೆಯರೂ, ಮಹಾಶಯರೂ ದಯಮಾಡಿದ್ದರು. ಪರಿಚಯವಿಲ್ಲದವರೂ ಕೂಡ, ಮಹಾಪ್ರಭುಗಳ ಖ್ಯಾತಿಯನ್ನು ಕೇಳಿಯೂ ಪತ್ರಿಕೆಗಳಲ್ಲಿ ಪ್ರಕಟವಾಗಿದ್ದುದನ್ನು ಓದಿಯೂ ಇದ್ದುದರಿಂದ ತಮ್ಮ ಗೌರವವನ್ನು ತೋರಿಸಲು ತುರಾಯಿಗಳನ್ನು ಸಮರ್ಪಿಸಿದರು. ಪರಿಚಯಸ್ಥರಾಗಿದ್ದವರಂತೂ ದೊಡ್ಡ ದೊಡ್ಡ ಹಾರಗಳನ್ನೂ ತುರಾಯಿಗಳನ್ನೂ ಸಮರ್ಪಿಸಿದರು. ಭಾರತೀಯ ವಿದ್ಯಾರ್ಥಿಗಳೇ ಸುಮಾರು ನೂರೈವತ್ತು ಮಂದಿಗಳಿಗಿಂತಲೂ ಹೆಚ್ಚಾಗಿ ಸೇರಿದ್ದರು. ಮಹಾಪ್ರಭುಗಳವರು ಆ ಜನಸಂದಣಿಯಲ್ಲಿ ಮೋಟಾರು ಬಂಡಿಯ ಬಳಿಗೆ ಹೋಗಲು ಸುಮಾರು ಅರ್ಧ ಘಂಟೆಯ ಕಾಲವು ಹಿಡಿಯಿತು. ಮಹಾಪ್ರಭುಗಳು ಡಾರ್ಚೆಸ್ಟರ್ ಹೋಟಲಿಗೆ ದಯಮಾಡಿದರು. ಅಲ್ಲಿ ಪ್ರಭುಗಳವರ ಮತ್ತು ಅವರ ಸೋದರರ ಉಪಯೋಗಕ್ಕಾಗಿಯೂ, ದಿವಾನ್‌ರವರೇ ಮುಂತಾದವರು ಕೆಲವರ ಉಪಯೋಗಕ್ಕಾಗಿಯೂ ಹಲವು ಕೊಟಡಿಗಳು ಮೀಸಲಾಗಿದ್ದುವು. ಉಳಿದವರು "ಕೆನ್ಸಿಂಗ್ಟನ್ ಮ್ಯಾನ್ಷನ್" ಕಟ್ಟಡದಲ್ಲಿ ಬಿಡಾರ ಮಾಡಿದರು.

**ಲಂಡನ್ನಿನ ಜನರ ಪರಮಾಶ್ಚರ್ಯ.**— ಆಳಿದ ಮಹಾಸ್ವಾಮಿಯವರು ಯೂರೋಪು ಖಂಡಕ್ಕೆ ದಯಮಾಡಿಸುವರೆಂಬ ವಾರ್ತೆಯು ತಿಳಿದೊಡನೆಯೇ ಲಂಡನ್ನಿನ ಸಮಸ್ತ ವರ್ತಮಾನ ಪತ್ರಿಕೆಗಳಲ್ಲಿಯೂ ಆ ಸಂಬಂಧವಾಗಿ ಆಶ್ಚರ್ಯ ಸಂತೋಷಗಳೇ ಪ್ರಕಟವಾಗುತ್ತಿದ್ದುವು. ಮಾದರಿ ಸಂಸ್ಥಾನದ ಮಹಾಪ್ರಭುಗಳವರು ದಯಮಾಡುವವರಾಗಿದ್ದರೆಂದು ಪತ್ರಿಕೆಗಳೆಲ್ಲ ಶ್ಲಾಘಿಸುತ್ತಿದ್ದುವು. ಅವರು ವಿಕ್ಟೋರಿಯಾ ರೈಲ್ವೇ ನಿಲ್ದಾಣಕ್ಕೆ ಸೇರಿದ ದಿನ ಅದು ಅಭೂತಪೂರ್ವವೆನಿಸಿ ಶೋಭಿಸುತ್ತಿದ್ದಿತು. ಲಂಡನ್ನಿನ ವೃತ್ತಪತ್ರಿಕೆಯೊಂದರಲ್ಲಿ, "ಕಾಂತಿಯಿಲ್ಲದೆಯೂ ಕಳೆಯಿಲ್ಲದೆಯೂ ಇದ್ದ ನಿತ್ಯದ ವಿಕ್ಟೋರಿಯಾ ರೈಲ್ವೇ ನಿಲ್ದಾಣದ ಎಂಟನೆಯ ಪ್ಲ್ಯಾಟ್‌ಫಾರಂ ಪ್ರದೇಶವು ನಿನ್ನೆಯ ರಾತ್ರಿ ಅರ್ಧ ಘಂಟೆಯಕಾಲ ಕಾಮನಬಿಲ್ಲು ಕಂಗೊಳಿಸಿ ವಿಶ್ರಾಂತವಾಗುವ ಪ್ರದೇಶದಂತೆ ಬೆಳಗಿ ಕಳಕಳಿಸಿತು. ಪ್ರಪಂಚದಲ್ಲೇ ಅತ್ಯಧಿಕ ಧನಾಢ್ಯತೆಯುಳ್ಳ ಪ್ರಭುಗಳಲ್ಲೊಬ್ಬರಾದ ಮೈಸೂರು ಸಂಸ್ಥಾನದ ಶ್ರೀಮನ್ಮಹಾರಾಜರವರ

ಸವಾರಿಯು ಇಂಗ್ಲೆಂಡಿಗೆ ಚಿತ್ತೈಸುವುದಾಗಿದ್ದ ಡೋವರ್ ರೈಲಿನ ಆಗಮನವನ್ನು ನಿರೀಕ್ಷಿಸುತ್ತ ಪೂರ್ವ ದೇಶೀಯರೂ ಪಾಶ್ಚಾತ್ಯರೂ ಬಹುಮಂದಿ ಸೇರಿ ಕಾದಿದ್ದರು. ಭಾರತೀಯ ಮಹಿಳೆಯರ ಮೂಗುಗಳ ಮತ್ತು ಕಿವಿಗಳ ಆಭರಣಗಳ ವಜ್ರಗಳು ಫಳಗುಟ್ಟುತ್ತಿದ್ದುವು. ಮಹಿಳೆಯರ ಕೆಂಪು, ಹಸುರು, ಬಂಗಾರ ಬಣ್ಣಗಳ ರೇಷ್ಮೆಯ ಸೀರೆಗಳು ಚಕಚಕಿಸುತ್ತ ಕಣ್ಣುಗಳನ್ನು ಕೋರೈಸುತ್ತಿದ್ದುವು. ಭಾರತೀಯ ಸಂಪ್ರದಾಯದಂತೆ ಬಹು ಮಂದಿಗಳು ತಂದಿದ್ದ ಪುಷ್ಪಮಾಲಿಕೆಗಳ ನರುಗಂಪು ಆ ಪ್ರದೇಶವನ್ನೆಲ್ಲ ವ್ಯಾಪಿಸಿ ಹೂವಾಡಿಗರ ಪಣ್ಯಶಾಲೆಯಂತೆ ತೋರುತ್ತಿದ್ದಿತು" ಎಂದು ಪ್ರಕಟವಾಗಿದ್ದಿತು.* ಮಹಾಪ್ರಭುಗಳವರು ಕಿವಿಗಳಲ್ಲಿ ತೊಳಗುತ್ತಿದ್ದ ವಜ್ರದ ಕಡಕುಗಳು ಮತ್ತು ಅಚ್ಚಕಪ್ಪಿನ ನಿಲುವಂಗಿಯಮೇಲೆ ಹೊಳೆಯುತ್ತಿದ್ದ ಬಂಗಾರದ ಗಡಿಯಾರದ ಸರಪಣಿಯ ಹೊರತು ಮತ್ತಾವ ಅಲಂಕಾರವೂ ಇಲ್ಲದೆ ಸಾಮಾನ್ಯವಾದ ಉಡುಪನ್ನು ಧರಿಸಿ ದಯಮಾಡಿದ್ದುದೇ ಜನರಿಗೊಂದು ಆಶ್ಚರ್ಯ. ಡಾರ್ಚೆಸ್ಟರ್ ಹೋಟಲಿನಲ್ಲಿ ಶ್ರೀ ಚಾಮುಂಡೇಶ್ವರೀ ದೇವಿಯವರ ಸುವರ್ಣ ವಿಗ್ರಹವನ್ನಿಟ್ಟು ದೇವತಾರ್ಚನೆ ಮಾಡಲು ಪ್ರತ್ಯೇಕವಾಗಿ ಒಂದು ಕೊಟಡಿಯೇ ಮೀಸಲಾಗಿದ್ದಿತು. ಇಷ್ಟು ಸ್ವಧರ್ಮ ಸಂಪ್ರದಾಯ ಪ್ರೇಮಿಗಳಾಗಿದ್ದ ಮಹಾಸ್ವಾಮಿಯವರು ಮುಸಲ್ಮಾನ್ ಪಂಗಡದವರನ್ನು ದಿವಾನ್‌ರಾಗಿಯೂ, ಭಾರತೀಯ ಕ್ರೈಸ್ತರನ್ನು ಹುಜೂರು ಸೆಕ್ರೆಟರಿಯ ವರಾಗಿಯೂ ಮತ್ತು ಬ್ರಿಟಿಷ್ ಜನಾಂಗಕ್ಕೆ ಸೇರಿದ ಕ್ರೈಸ್ತಮತೀಯ ರನ್ನು ಪ್ರೈವೇಟ್ ಸೆಕ್ರೆಟರಿಯವರನ್ನಾಗಿಯೂ ನೇಮಿಸಿಕೊಂಡು ಅನ್ಯ ಮತ ಸಹಿಷ್ಣುತೆಯನ್ನು ಪ್ರದರ್ಶಿಸಿದ್ದ ಅಂಶದಿಂದ ಲಂಡನ್ನಿನ ಜನರಿಗೆ ಪರಮಾಶ್ಚರ್ಯ. ಮಹಾಪ್ರಭುಗಳವರು ಪಾಶ್ಚಾತ್ಯ ಕ್ರಮದ ವಿದ್ಯಾಭ್ಯಾಸ ಮಾಡಿ ಪಾಶ್ಚಾತ್ಯ ಸಂಸ್ಕೃತಿಯಲ್ಲಿ ಅಭಿಮಾನಯುತರಾಗಿದ್ದೂ ಮಾಂಸಾ ಹಾರ ಮಾಡದೆ ಸ್ವದೇಶದಿಂದಲೇ ಅಡಿಗೆಯವರನ್ನೂ ಸಂಗಡ ಕರೆದು

---

* "No. 8 Platform of grey prosy Victoria Station last night looked for half an hour like a place where the rainbow ends.

East and West met and mingled—waiting for the Dover Train to bring the Maharaja of Mysore, one of the richest princes in the world on his first visit to England

In the crowds diamonds flashed from nose and ear; red and gold and green gleamed silken saris. The platform was scented like a florist's with perfume from garlands brought in accordance with the Indian custom of welcome."—*Daily Sketch*, Friday, July 17, 1936.

ಕೊಂಡುಹೋಗಿ ಲಂಡನ್ ನಗರದಲ್ಲಿ ಆಚಾರ ವ್ಯವಹಾರಗಳನ್ನು ಅನುಷ್ಠಾನಮಾಡಿದುದು; ಲಂಡನ್ ನಗರದಲ್ಲಿದ್ದ ತಮ್ಮ ಮಿತ್ರರಿಗೆ ಸತ್ಕಾರ ಕೂಟವನ್ನೇರ್ಪಡಿಸಿ ಅತ್ಯುತ್ತಮವಾದ ಬಗೆಬಗೆಯ ದ್ರಾಕ್ಷಾ ಮದ್ಯಗಳ ಸ್ವೀಕಾರಕ್ಕೆ ಅವರೆಲ್ಲರಿಗೂ ಅವಕಾಶವನ್ನು ಕಲ್ಪಿಸಿಯೂ ತಾವು ಮಾತ್ರ ಗಂಗೋದಕವನ್ನು ಪಾನಮಾಡಿದುದು; ಭರತಖಂಡದ ದೊಡ್ಡ ಸಂಸ್ಥಾನಗಳಲ್ಲೊಂದರ ಪ್ರಭುಗಳಾಗಿದ್ದೂ ಅವರು ಅಸಾಧಾರಣ ವಿನಯಶೀಲರೂ ಸರಳ ಸ್ವಭಾವದವರೂ ಆಗಿದ್ದುದು; ಅವರು ಹಲವು ದಿನಗಳಕಾಲ ಬೆಳಗಿನಿಂದ ಸಂಜೆಯವರೆಗೂ ಮತ್ತೆಲ್ಲಿಗೂ ಹೋಗದೆ ಡಾರ್ಚೆಸ್ಟರ್ ಹೋಟಲಿನಲ್ಲಿ ಭೇಟಿ ಕೊಡಬೇಕಾಗಿ ಬಂದಷ್ಟು ಅಸಂಖ್ಯಾತ ಮಂದಿಗಳು — ದೊಡ್ಡ ದೊಡ್ಡ ವಂಶಗಳವರು ಮತ್ತು ಸುಪ್ರಸಿದ್ಧರಾದ ಇತರ ಮಹಾಶಯರುಗಳು — ಅವರಿಗೆ ಮಿತ್ರರಾಗಿದ್ದುದು; ಇವುಗಳೂ ಸಹ ಲಂಡನ್ನಿನ ಜನರನ್ನು ಆಶ್ಚರ್ಯಗೊಳಿಸಿದುವು. ಲಂಡನ್ನಿನ ಜನರಿಗೆ ಪರಮಾಶ್ಚರ್ಯವನ್ನುಂಟುಮಾಡಿದ ಮತ್ತೊಂದು ವಿಚಾರವೆಂದರೆ, ಮಹಾ ಪ್ರಭುಗಳವರು ಧನಿಕರಲ್ಲಿ ಧನಿಕರಾಗಿದ್ದೂ ಇಂಗ್ಲಿಷರಲ್ಲಿ ಬಡವರಾದವರ ಮನೆಗಳಿಗೆ ದಯಮಾಡಿ ಅವರ ಸ್ಥಿತಿಗೂ ಮೈಸೂರು ಸಂಸ್ಥಾನದ ಬಡವರ ಸ್ಥಿತಿಗೂ ಪರಸ್ಪರ ತಾರತಮ್ಯಗಳೇನೆಂಬುದನ್ನು ಪ್ರತ್ಯಕ್ಷವಾಗಿ ಪರಾಂಬರಿಸಲು ದೊರೆತ ಅವಕಾಶಗಳನ್ನೆಲ್ಲ ಉಪಯೋಗಿಸಿಕೊಂಡುದು. ಲಂಡನ್ನಿನ ಒಂದು ಪತ್ರಿಕೆಯು ಆ ವಿಚಾರವನ್ನೂ, ಮಹಾಪ್ರಭುಗಳವರು ಇಂಗ್ಲೆಂಡಿನ ವ್ಯವಸಾಯ ಕ್ಷೇತ್ರಗಳನ್ನೂ ವ್ಯವಸಾಯಗಾರರ ಮನೆಗಳನ್ನೂ ಪರಿಶೀಲಿಸಿ ಅಲ್ಲಿಯ ನಿದರ್ಶನಗಳಿಂದ ಸ್ವದೇಶದ ಸ್ಥಿತಿಯನ್ನು ಉತ್ತಮಪಡಿಸುವ ಯೋಚನೆ ಮಾಡಿದ್ದುದನ್ನೂ ಶ್ಲಾಘಿಸಿತು.* ಲಂಡನ್ ನಗರದಲ್ಲಿ ಎಲ್ಲಿ ನೋಡಿದರೂ ಮಹಾಪ್ರಭುಗಳವರ ಶ್ಲಾಘನೆಯೇ; ಲಂಡನ್ ನಗರದ ವರ್ತಮಾನ ಪತ್ರಿಕೆಗಳಲ್ಲೆಲ್ಲ ಮಹಾಪ್ರಭುಗಳವರ ಗುಣಗಾನವೇ. ಒಂದು ಪತ್ರಿಕೆಯಲ್ಲಿ "ಶ್ರೀಮನ್ಮಹಾರಾಜರವರೊಡನೆ ಮಾತನಾಡಿದವರಿಗೆ, ಮಹಾಸ್ವಾಮಿಯವರು ಯಾವ ದೇಶದಲ್ಲಾಗಲಿ ಅಥವಾ ಯಾವ ಕಾಲದಲ್ಲಾಗಲಿ ಇದ್ದವರಲ್ಲಿ ಅತ್ಯಂತ ಶ್ರೇಷ್ಠ

---

*"The Maharajah's main purpose was to discover how the poor Englishman lives in comparison with the poor of his own State. He took every opportunity during his stay here of seeing this for himself For instance, in the Isle of Wight, which he also visited, he toured the farms and entered labourers' homes. Several aspects revealed by his visit will be considered in relation to improvements in his own country.

—*Evening Standard*, August 19, 1936.

ವರ್ಗದವರಾದ ವಿನಯಶೀಲರಲ್ಲೊಬ್ಬರೆಂಬುದು ಮನವರಿಕೆಯಾಗುತ್ತದೆ" ಎಂದು* ಪ್ರಕಟವಾಗಿದ್ದಿತು.

**ನಮ್ಮವರ ಆಶ್ಚರ್ಯ.—** ಆಳಿದ ಮಹಾಸ್ವಾಮಿಯವರ ಜೊತೆಯಲ್ಲಿ ದಯಮಾಡಿದ್ದವರು ಲಂಡನ್ ನಗರದಲ್ಲಿಯ ಅದ್ಭುತವಾದ ಕಟ್ಟಡಗಳೇ ಮುಂತಾದುವುಗಳನ್ನು ನೋಡಿ ಆಶ್ಚರ್ಯಭರಿತರಾದರು. ಅಲ್ಲದೆ, ಆ ನಗರದಲ್ಲಿ ಒಟ್ಟು ಮೈಸೂರು ಸಂಸ್ಥಾನದಲ್ಲಿರುವುದಕ್ಕಿಂತಲೂ ಹೆಚ್ಚು ಜನಸಂಖ್ಯೆಯಿರುವುದು; ಭೂಮಿಯ ಒಳಭಾಗದಲ್ಲೆಲ್ಲ "ಟ್ಯೂಬ್ ರೈಲ್ವೆ" ಏರ್ಪಟ್ಟಿರುವುದು; ಅಲ್ಲಿಯ ಶಿಸ್ತಿನ ಜೀವನಕ್ರಮ; ಅಂಗಡಿಗಳಲ್ಲೆಲ್ಲ ಕೊಸರಾಟವಿಲ್ಲದೆ ಬೆಲೆಗಳು ನಿರ್ಣಯವಾಗಿರುವುದು; ಪೋಲೀಸಿನವನು ನಿಂತಿರಲಿ, ಬಿಡಲಿ, ಜನಗಳು ಅಲ್ಲಿಯ ರಾಜಮಾರ್ಗಗಳಲ್ಲಿ ಸಂಚರಿಸುವಾಗ ಸಂಚಾರದ ನಿಬಂಧನೆಗಳನ್ನು ಅನುಸರಿಸುವುದು; "ವಿಂಡ್ಸರ್ ಕ್ಯಾಸಲ್" ಎಂಬ ಅರಮನೆಯಲ್ಲಿ, ಟಿಪ್ಪೂಸುಲ್ತಾನರ ವ್ಯಾಘ್ರಾಸನದ ಶ್ವೇತಛತ್ರದಮೇಲಿದ್ದ (ಸುವರ್ಣರಚಿತವಾಗಿ ರತ್ನಖಚಿತವಾಗಿದ್ದ) ಹ್ಯೂಮಾಪಕ್ಷಿ, ವ್ಯಾಘ್ರಾಸನದ ವ್ಯಾಘ್ರದ ತಲೆಗಳು, ಟಿಪ್ಪೂ ಸುಲ್ತಾನರವರ ಕತ್ತಿ ಮತ್ತು ಕುದುರೆ ಸವಾರಿಯ ಸಾಮಾನುಗಳು, ಮುಂತಾದುವು ಪ್ರದರ್ಶಿತವಾಗಿರುವುದು; ಮತ್ತು ಅಲ್ಲಿ ಮುಮ್ಮಡಿ ಜಾರ್ಜ್ ದೊರೆಗಳ ಕಾಲದಿಂದ ಹಿಡಿದು ಈಗಿನವರೆಗಿನ ವಿಧವಿಧಗಳ ೩೯೧ ಗಡಿಯಾರಗಳಿರುವುದು; ಮತ್ತು ಟ್ಯೂಡರ್ ಮನೆತನದ ಎಂಟನೆಯ ಹೆನ್ರಿ ದೊರೆಯ ಕಾಲದ "ಹ್ಯಾಂಪ್ಟನ್‌ಕೋರ್ಟ್" ಕಟ್ಟಡದಲ್ಲಿ ಇನ್ನೂರೈವತ್ತು ವರ್ಷಗಳ ಹಿಂದಿನದಾದ ಚಪ್ಪರದ್ರಾಕ್ಷಿ ಗಿಡವು ಇಂದಿಗೂ ಫಲವನ್ನು ಕೊಡುತ್ತಿರುವುದು; ಲಂಡನ್ ನಗರದಲ್ಲಿರುವ ಮೋಟಾರು ಬಸ್ಸುಗಳು ಒಂದೊಂದೂ ಸಾವಿರದ ಎಂಟನೂರು ಪೌಂಡುಗಳಷ್ಟು (ಎಂದರೆ ಸುಮಾರು ಇಪ್ಪತ್ತೇಳು ಸಾವಿರ ರೂಪಾಯಿಗಳಷ್ಟು) ಬೆಲೆಬಾಳತಕ್ಕವುಗಳಾಗಿ ನಾನಾ ಸೌಕರ್ಯಗಳಿಂದ ಸುಸಜ್ಜಿತವಾಗಿರುವುದು; ಮುಂತಾದುವುಗಳನ್ನು ಕಂಡು ಅವರುಗಳು ಆಶ್ಚರ್ಯಪಟ್ಟರು.

**ಜರ್ಮನಿ ಪ್ರಯಾಣದ ವರೆಗೆ ನಡೆದ ಸಂಗತಿಗಳಲ್ಲಿ ಕೆಲವು.—** ಆಳಿದ ಮಹಾಸ್ವಾಮಿಯವರು "ಬಕಿಂಘಾಂ" ಅರಮನೆಯಲ್ಲಿ, ೧೯೩೬ನೆಯ ಇಸವಿ ಜೂಲೈ ತಿಂಗಳು ೨೨ನೆಯ ತಾರೀಖು ಗುರುವಾರ,

* "Talking to him makes one realise that he is one of the gentlest spirits in any country or of any generation."

—*The Star*, Friday, July 17, 1936.

ಆಗ ಚಕ್ರವರ್ತಿ ಸಾರ್ವಭೌಮರವರಾಗಿದ್ದ ಎಂಟನೆಯ ಎಡ್ವರ್ಡ್‌ರವ ರನ್ನೂ, ೨೭ನೆಯ ತಾರೀಖು ಮಂಗಳವಾರ ಮೇರಿ ಚಕ್ರವರ್ತಿನಿಯವರನ್ನೂ ಸಂದರ್ಶಿಸಿದರು. ಲಂಡನ್ನಿಗೆ ದಯಮಾಡಿ ಸುಮಾರು ಮೂರು ವಾರ ಗಳಾದ ಬಳಿಕ, ಮಹಾಪ್ರಭುಗಳವರು ತಮ್ಮ ಮಿತ್ರರೆಲ್ಲರಿಗೂ ಒಂದು ಔತಣ ಕೂಟವನ್ನೇರ್ಪಡಿಸಿ ಅತಿಥಿಗಳನ್ನು ಆದರದಿಂದ ಸತ್ಕರಿ ಸಿದರು. ೧೯೩೬ನೆಯ ಇಸವಿ ಆಗಸ್ಟ್ ತಿಂಗಳು ೩ನೆಯ ತಾರೀಖಿನ ದಿನ ಡಾರ್ಚೆಸ್ಟರ್ ಹೋಟಲಿನಿಂದ "ಓಕ್ಲಿ ಕೋರ್ಟ್" ಕಟ್ಟಡಕ್ಕೆ ದಯಮಾಡಿ, ಥೇಮ್ಸ್ ನದೀ ತೀರದಲ್ಲಿದ್ದ ಆ ಕಟ್ಟಡದಲ್ಲಿ ಶಾಸ್ತ್ರವಿಧಿಗನುಸಾರವಾಗಿ ಉಪಾಕರ್ಮವನ್ನು ನೆರವೇರಿಸಿದರು. ಇಂಗ್ಲೆಂಡಿನಲ್ಲಿ ಅದುವರೆಗೆ ಮತ್ತಾರೂ ಉಪಾಕರ್ಮವನ್ನು ನಡೆಯಿಸಿರಲಿಲ್ಲವೆಂದು ತೋರುವುದು. ಮಹಾಪ್ರಭುಗಳ ಕರ್ಮಶ್ರದ್ಧೆಯನ್ನು ಕಂಡು ಸಮಸ್ತರೂ ಆಶ್ಚರ್ಯ ಚಕಿತರಾದರು. ಅವರು ಇಂಗ್ಲೆಂಡಿನಲ್ಲಿಯೂ ಮತ್ತು ಸ್ಕಾಟ್ಲೆಂಡಿನಲ್ಲಿಯೂ ನೋಡತಕ್ಕ ಸ್ಥಳಗಳನ್ನೆಲ್ಲ ನೋಡಿಕೊಂಡು ಬರಲು ಸ್ಪೆಷಲ್ ರೈಲಿನಲ್ಲಿ ಹೊರಟರು. ಆ ರೈಲು ೧೯೩೬ನೆಯ ಇಸವಿ ಆಗಸ್ಟ್ ೯ನೆಯ ತಾರೀಖು ಬೆಳಗ್ಗೆ ಎಂಟು ಘಂಟೆಗೆ ಪೋರ್ಟ್ಸ್‌ಮತ್ ಸ್ಟೇಷನ್ನಿನಿಂದ ಹೊರಟು ಮಧ್ಯಾಹ್ನದ ವೇಳೆಗೆ ಟೋರ್ಕ್ವೇ ನಗರವನ್ನು ಸೇರಿತು. ಅಲ್ಲಿಂದ ಕೆಸ್ವಿಕ್ ನಿಲ್ದಾಣಕ್ಕೆ ಹೋಯಿತು. ಅನಂತರ ಮಹಾಪ್ರಭುಗಳವರು ಪರಿವಾರ ಸಮೇತರಾಗಿ ಮೋಟಾರು ಬಸ್ಸಿನಲ್ಲಿ ಹೊರಟು ಅಲ್ಸ್‌ವಾಟರ್, ಬ್ರದರ್ಸ್‌ ವಾಟರ್, ವಿಂಡರ್‌ಮಿಯರ್ ಮುಂತಾದ ಸರೋವರಗಳ ಅನಿರ್ವಚನೀಯ ಸೌಂದರ್ಯವನ್ನು ಕಂಡು ಹರ್ಷಿಸಿದರು. ಅಲ್ಲದೆ, ವಿಂಡರ್‌ಮಿಯರ್ ಸರೋವರ ತೀರದಲ್ಲಿ ಇಂಗ್ಲೆಂಡಿನ ಶ್ರೇಷ್ಠಕವಿಗಳಲ್ಲೊಬ್ಬನಾದ ವರ್ಡ್ಸ್‌ವರ್ತ್ ಕವಿಯು ಜೀವಂತನಾಗಿದ್ದಾಗ್ಗೆ ಕುಳಿತು ಬರೆಯುತ್ತಿದ್ದ ಬಂಡೆಯನ್ನು ನೋಡಿದರು. ಮುಂದೆ ಓಬನ್, ಇನ್ವರ್ನೆಸ್ ಮುಂತಾದ ಸ್ಥಳಗಳ ಸೌಂದರ್ಯವನ್ನು ಕಂಡು ಹರ್ಷಿಸಿ ೧೯೩೬ನೆಯ ಇಸವಿ ಆಗಸ್ಟ್ ತಿಂಗಳು ೧೫ನೆಯ ತಾರೀಖಿನ ದಿನ ಸ್ಕಾಟ್ಲೆಂಡಿನ ದೊಡ್ಡ ಪಟ್ಟಣವಾದ ಎಡಿನ್‌ಬರ್ಗ್ ನಗರಕ್ಕೆ ದಯಮಾಡಿದರು. ಸ್ಪೆಷಲ್ ರೈಲನ್ನು ಒದಗಿಸಿದ್ದ ರೈಲ್ವೇ ಕಂಪನಿಯವರು ಆಗ್ಗೆ ಅನೇಕ ವರ್ಷಗಳಿಗೆ ಮುಂಚಿತವಾಗಿಯೇ "ಮೈಸೂರ್" ಎಂಬ ಹೆಸರನ್ನಿಟ್ಟಿದ್ದ ಎಂಜಿನ್ನನ್ನು ಸ್ಪೆಷಲ್ ರೈಲಿಗೆ ಜೋಡಿಸಿದ್ದರು. ಆ ಎಂಜಿನ್ನನ್ನು ಕಂಡಾಗ ಮಹಾಪ್ರಭುಗಳವರು ಹರ್ಷಿಸಿ ಅದರ ಮೇಲೆ ಹೂಗಳನ್ನೆರಚಿದರು. ಎಡಿನ್‌ಬರ್ಗ್ ನಗರದ ರೈಲ್ವೇ ನಿಲ್ದಾಣದಲ್ಲಿ ಬಹಳ ಜನರು ಗುಂಪುಗೂಡಿ ಮಹಾಸ್ವಾಮಿಯವರನ್ನು

ಸ್ವಾಗತಿಸಿದರು. ಕರ್ನಲ್ ಲಾಕ್‌ರವರೂ, ಅವರ ಪತ್ನಿಯವರೂ, ಮಹಾಸ್ವಾಮಿಯವರಿಗೆ ಪುಷ್ಪಮಾಲಿಕೆಗಳನ್ನೂ ತಾವು ಬೆಳೆದಿದ್ದ ಕಾಯಿ ಪಲ್ಯಗಳನ್ನು ತುಂಬಿದ್ದ ಒಂದು ದೊಡ್ಡ ಬುಟ್ಟಿಯನ್ನೂ ಸಮರ್ಪಿಸಿದರು. ಎಡಿನ್‌ಬರ್ಗ್ ನಗರದಲ್ಲಿ ಪರಿವಾರ ಸಮೇತರಾಗಿ ಮೋಟಾರು ಬಸ್ಸಿನಲ್ಲಿ ಕುಳಿತು ನೋಡತಕ್ಕ ಸ್ಥಳಗಳನ್ನೆಲ್ಲ ನೋಡಿ ಅನಂತರ ಅಲ್ಲಿಗೆ ಎಂಟು ಮೈಲಿಗಳ ದೂರದಲ್ಲಿ ಫರ್ತ್ ಆಫ್ ಫೋರ್ತ್‌ಮೇಲೆ ಮೂವತ್ತು ಲಕ್ಷ ಪೌಂಡುಗಳ (ಎಂದರೆ, ಸುಮಾರು ನಾಲ್ಕೂವರೆ ಕೋಟಿ ರೂಪಾಯಿಗಳ) ವೆಚ್ಚದಿಂದ ನಿರ್ಮಿತವಾಗಿರುವ ದೊಡ್ಡ ಸೇತುವನ್ನು ಕಂಡು ಹರ್ಷಿಸಿದರು. ಆ ಸೇತುವಿನಮೇಲೆ ಸಂಚರಿಸುವ ರೈಲುಗಳು ಮಕ್ಕಳ ಆಟದ ರೈಲುಗಳಂತೆ ಕಾಣುವ ಮಟ್ಟಿಗೆ ಅದು ಎತ್ತರವಾಗಿದೆಯಂತೆ. ಮಹಾಪ್ರಭುಗಳವರು ಎಡಿನ್‌ಬರ್ಗ್ ನಗರದ ಪ್ರಾಣಿಶಾಲೆಗೆ ೧೯೧೪ನೆಯ ಇಸವಿಯಲ್ಲಿ ಉಚಿತ ವಾಗಿ ಕೊಟ್ಟಿದ್ದ "ಸುಂದರ" ಎಂಬ ಆನೆಯ ಮರಿಯೂ, ಆ ತರುವಾಯ ಕೊಟ್ಟಿದ್ದ ಚಿರತೆಯ ಮರಿಗಳೂ ಬೆಳೆವಣಿಗೆ ಹೊಂದಿದ್ದುದನ್ನು ಪ್ರಾಣಿ ಶಾಲಾಧಿಕಾರಿಗಳು ಅವರಲ್ಲಿ ಶ್ರುತಪಡಿಸಿ ಮತ್ತೊಮ್ಮೆ ಕೃತಜ್ಞತೆಯನ್ನು ಸೂಚಿಸಿದರು. ಆಳಿದ ಮಹಾಸ್ವಾಮಿಯವರು ಎಡಿನ್‌ಬರ್ಗ್ ಕ್ಯಾಸಲ್ ಎಂಬ ಪ್ರಾಚೀನ ಕಾಲದ ಅರಮನೆಗೆ ದಯಮಾಡಿ ಅಲ್ಲಿ ಮುನ್ನೂರೈವತ್ತು ವರ್ಷಗಳ ಹಿಂದೆ ಮೇರಿ ರಾಣಿಯು ತನ್ನ ಮಗನಾದ ಜೇಮ್ಸ್ ದೊರೆ ಯನ್ನು ಆಡಿಸುತ್ತಿದ್ದಾಗಿನ ಸನ್ನಿವೇಶವನ್ನು ಆ ಕಾಲದಲ್ಲಿದ್ದಂತೆಯೇ ಕಾಪಾಡಿರುವ ಬಗೆಯನ್ನೂ, ಜನರಲ್ ಬೇರ್ಡ್‌ರವರ ಮತ್ತು ಟಿಪ್ಪೂ ಸುಲ್ತಾನರ ಭಾವಚಿತ್ರಗಳು, ಟಿಪ್ಪೂಸುಲ್ತಾನರು ಧರಿಸಿದ್ದ ಕಿಂಕಾಪಿನ ಅಂಗರೇಖು ಮತ್ತು ಅವರು ತೋಳಿಗೆ ಕಟ್ಟಿಕೊಂಡಿದ್ದ ತಾಯಿತ ಮುಂತಾದುವುಗಳನ್ನೂ ನೋಡಿದರು. ಸ್ಪೆಷಲ್ ರೈಲಿನಲ್ಲಿ ೧೯೩೬ನೆಯ ಇಸವಿ ಆಗಸ್ಟ್ ತಿಂಗಳು ೧೬ನೆಯ ತಾರೀಖು ಸಾಯಂಕಾಲ ಲಂಡನ್ ನಗರಕ್ಕೆ ಹಿಂತಿರುಗಿದರು. ಪೋರ್ಟ್ಸ್‌ಮತ್ ಮತ್ತು ಟಾರ್ಕ್ವೇ ನಗರಗಳ ಹಿತವಾದ ವಾಯುಗುಣ, ಕೆಸ್ವಿಕ್ ಬಳಿಯ ಸರೋವರಗಳೇ ಮುಂತಾದುವು ಗಳ ಮನೋಹರವಾದ ಪ್ರಾಕೃತಿಕಸೌಂದರ್ಯ, ಎಡಿನ್‌ಬರ್ಗ್ ಮುಂತಾದ ನಗರಗಳ ಉದ್ಯಾನಗಳಲ್ಲಿ ಕುಸುಮಿತವಾದ ತರುಲತಾ ಗುಲ್ಮಗಳು ಬೀರು ತ್ತಿದ್ದ ವಿವಿಧ ವರ್ಣಗಳ ಸೊಬಗು— ಇವುಗಳನ್ನೆಲ್ಲ ಪರಾಂಬರಿಸಿ ಆನಂದಿ ಸಿದರು. ವಿಮಾನದಲ್ಲಿ ಹಾಲೆಂಡಿನ ಮಾರ್ಗವಾಗಿ ಜರ್ಮನಿಗೆ ಹೋಗುವ ಯೋಚನೆ ಆ ಬಳಿಕ ನಡೆಯಿತು. ಪರಿವಾರದವರಲ್ಲಿ ಧೈರ್ಯದಿಂದ ಅದಕ್ಕೆ ಸಮ್ಮತಿಸಿದವರೊಡನೆ ಆಳಿದ ಮಹಾಸ್ವಾಮಿಯವರು ಆಗಸ್ಟ್

೧೯ನೆಯ ತಾರೀಖಿನ ದಿನ ಮಧ್ಯಾಹ್ನ ಹನ್ನೆರಡು ಘಂಟೆಗೆ ಕ್ರಾಯ್ಡನ್ ವಿಮಾನ ನಿಲ್ದಾಣಕ್ಕೆ ಬಂದು ಡಚ್ ವಿಮಾನವನ್ನೇರಿ ಪ್ರಯಾಣಮಾಡಿದರು. ಉಳಿದವರು ರೈಲಿನಲ್ಲಿ ಪ್ರಯಾಣಮಾಡಿ, ಆ ಬಳಿಕ ಹಡಗನ್ನು ಹತ್ತಿದರು. ವಿಮಾನವು ಸಮುದ್ರದ ಮಟ್ಟದಿಂದ ಆರು ಸಾವಿರ ಅಡಿಗಳ ಎತ್ತರದವರೆಗೂ ಆಗಾಗ ಮೇಲಕ್ಕೇರಿ, ಘಂಟೆಗೆ ಇನ್ನೂರು ಮೈಲಿಗಳ ವೇಗದಲ್ಲಿ ಹಾರಿ, ರಾಟರ್ಡಾಂ ನಗರದ ಮಾರ್ಗವಾಗಿ ಹಾಲೆಂಡಿನ ಆಮ್ಸ್ಟರ್ಡಾಂ ನಗರವನ್ನು ಸೇರಿತು. ಅಲ್ಲಿ ಒಂದು ಘಂಟೆಯ ಕಾಲಾವಕಾಶದಲ್ಲಿ ಮಹಾಪ್ರಭುಗಳು ಪ್ರೇಕ್ಷಣೀಯವಾದ ಸ್ಥಳಗಳನ್ನು ನೋಡಿ, ಜರ್ಮನಿಯ ವಿಮಾನವನ್ನೇರಿ, ಜರ್ಮನಿಯ ಬರ್ಲಿನ್ ನಗರವನ್ನು ಸೇರಿದರು. ಅಲ್ಲಿ ವಿದೇಶೀಯ ಕಚೇರಿಯ ಪ್ರತಿನಿಧಿಗಳೂ ಇತರ ಬಹು ಮಂದಿಗಳೂ ಅವರ ಸಂದರ್ಶನಕ್ಕಾಗಿ ಕಾದಿದ್ದು ಆದರಪುರಸ್ಸರವಾಗಿ ಸ್ವಾಗತವನ್ನು ಬಯಸಿದರು. ಆಳಿದ ಮಹಾಸ್ವಾಮಿಯವರು. ಬರ್ಲಿನ್ ನಗರದ ಪ್ರಸಿದ್ಧವಾದ ಆಡ್ಲನ್ ಹೋಟಲಿನಲ್ಲಿ ಬಿಡಾರ ಮಾಡಿದರು. ಮಾರನೆಯ ದಿನ ಸಮ್ಮುಖದ ಅಧಿಕಾರಿಗಳೂ ಪರಿವಾರದವರೂ ಬರ್ಲಿನ್ ನಗರದ ಪ್ರೇಕ್ಷಣೀಯ ಸ್ಥಳಗಳನ್ನು ನೋಡಿಕೊಂಡು ಬರಲು ಹೊರಟಾಗ ಅವರಲ್ಲಿ ರುಮಾಲನ್ನು ಧರಿಸಿದ್ದವರೊಬ್ಬರನ್ನು ಕಂಡ ಕೆಲವು ಮಂದಿ ಬಾಲಕಿಯರು ಅವರೇ ಶ್ರೀಮನ್ಮಹಾರಾಜರವರೆಂದು ಭಾವಿಸಿ, ತಮ್ಮೊಡನೆ ದಯಮಾಡಿ ಭಾವಚಿತ್ರವನ್ನು ತೆಗೆಸಿಕೊಳ್ಳಬೇಕೆಂದು ಬೇಡಿದರು.

**ಜರ್ಮನಿಯಲ್ಲಿ ನಡೆದ ಮುಖ್ಯ ಸಂಗತಿಗಳು.**— ಆಳಿದ ಮಹಾಸ್ವಾಮಿಯವರೂ ಅವರ ಪರಿವಾರದವರೇ ಮುಂತಾದವರೂ ಬರ್ಲಿನ್ ನಗರದಲ್ಲಿ ಕೈಸರ್ ಚಕ್ರವರ್ತಿಯವರಿದ್ದಾಗಿನ ಅರಮನೆ, ಒಟ್ಟು ನಾಲ್ಕು ಸಾವಿರ ಪ್ರಾಣಿಗಳನ್ನೊಳಗೊಂಡ ಪ್ರಾಣಿಶಾಲೆ, ಬಾಲಕ ಬಾಲಕಿಯರು ಅದ್ಭುತ ರೀತಿಯಲ್ಲಿ ವ್ಯಾಯಾಮವನ್ನೂ ನರ್ತನವನ್ನೂ ಮಾಡಲು ಮತ್ತು ಚಿಂಪಾಂಜಿಗಳು ಮನುಷ್ಯರಂತೆಯೇ ನರ್ತನಮಾಡಲು ಉಪಯೋಗಿಸುವ "ವಿಂಟರ್ಗಾರ್ಟನ್ ಥಿಯೇಟರ್", ಒಲಿಂಪಿಕ್ ಆಟಪಾಟಗಳು ನಡೆಯುವ ಬಯಲಿನಲ್ಲಿ ಕೋಟ್ಯಂತರ ದ್ರವ್ಯವನ್ನು ವ್ಯಯಮಾಡಿ ಒಂದು ಲಕ್ಷ ಮಂದಿ ಪ್ರೇಕ್ಷಕರು ಕುಳಿತುಕೊಳ್ಳಲನುಕೂಲಿಸುವಂತೆ ಕಟ್ಟಿಸಿರುವ ಪ್ರೇಕ್ಷಕಶಾಲೆ, ಮುಂತಾದುವುಗಳನ್ನೆಲ್ಲ ನೋಡಿ ಹರ್ಷಿಸಿದರು. ಆಗಸ್ಟ್ ೨೪ನೆಯ ತಾರೀಖಿನ ದಿನ ಡ್ರೆಸ್ಡನ್ ನಗರಕ್ಕೆ ಪ್ರಯಾಣಮಾಡಿ ಅಲ್ಲಿದ್ದ ಪ್ರಾಚೀನ ಕಾಲದ ಅರಮನೆಯಲ್ಲಿರುವ ಚಿತ್ರಶಾಲೆಯನ್ನು ನೋಡಿದರು.

ಮೇರಿಯವರು ಶಿಶುವಾದ ಯೇಸುಕ್ರಿಸ್ತರನ್ನು ಎತ್ತಿಕೊಂಡಿದ್ದ— ಆರು ಅಡಿಗಳಿಗಿಂತಲೂ ಎತ್ತರವಾಗಿದ್ದ— ಮನಮೋಹಕವಾದ ಚಿತ್ರಪಟವನ್ನು ನೋಡಿ ಹರ್ಷಿಸಿದರು. ಅಲ್ಲಿಂದ ಬುಡಾಪೆಸ್ಟ್ ನಗರವನ್ನು ಸೇರಿದರು. ಹಂಗರಿ ಸರ್ಕಾರದ ಪ್ರತಿನಿಧಿಗಳು ಮಹಾಪ್ರಭುಗಳವರನ್ನು ಕಂಡು ಗೌರವವನ್ನು ಸಲ್ಲಿಸಿದುದಲ್ಲದೆ, ಹಂಗರಿಯ ಪ್ರೆಸಿಡೆಂಟರವರು ತಮ್ಮ ರೈಲುಬಂಡಿಯನ್ನು ಮಹಾಪ್ರಭುಗಳವರ ಸಂಚಾರಕ್ಕಾಗಿ ಬಿಟ್ಟುಕೊಟ್ಟು ತಮ್ಮ ವಿಶ್ವಾಸ ಗೌರವಗಳನ್ನು ತೋರಿಸಿದರು.

ಯಥಾಕಾಲದಲ್ಲಿ ಬುಡಾಪೆಸ್ಟ್ ನಗರದಿಂದ ವಿಯೆನ್ನಾ ನಗರಕ್ಕೆ ಮಹಾಸ್ವಾಮಿಯವರ ಸವಾರಿ ಚಿತ್ತೈಸಿತು. ವಿಯೆನ್ನಾ ನಗರದ ಬ್ರಿಸ್ಟಲ್ ಹೋಟಲಿನ ಬಳಿಗೆ ಸೇರುವ ವೇಳೆಗೆ ಮಹಾಪ್ರಭುಗಳವರ ದರ್ಶನ ಲಾಭಕ್ಕಾಗಿ ಅಸಂಖ್ಯಾತ ಮಂದಿ ಕಿಕ್ಕಿರಿದು ತುಂಬಿದರು. ಆ ಗುಂಪಿನಲ್ಲಿ ಡಾಕ್ಟರ್ ಮಾಂಟೇರೋ ಅವರೂ ಮತ್ತು ಮೈಸೂರು ನಗರದಲ್ಲಿರುವ ಅರಮನೆಯ ಅಶ್ವಶಾಲೆಗೆ (ಅದಕ್ಕೆ ಹಿಂದೆ) ಮಹಾಪ್ರಭುಗಳವರು ಕರೆಯಿಸಿದ್ದ ಅಶ್ವಶಿಕ್ಷಣ ಪರಿಣತರಾದ ಶ್ರೀಮಾನ್ ಸುರೂಸ್ತರವರೂ ಅವರ ಧರ್ಮಪತ್ನಿಯವರೂ ಇದ್ದರು. ಮಹಾಪ್ರಭುಗಳವರಿಗೆ ಹಾರತುರಾಯಿಗಳು ಸಮರ್ಪಿತವಾದುವು. ಶ್ರೀಮಾನ್ ಸುರೂಸ್ತರವರು ವಿಯೆನ್ನಾ ನಗರದ ಸುಪ್ರಸಿದ್ಧವಾದ ಅಶ್ವಶಿಕ್ಷಣ ಶಾಲೆಯ ಮುಖ್ಯಾಧಿಕಾರಿಗಳು. ಆ ಅಶ್ವಶಿಕ್ಷಣ ಶಾಲೆಯಲ್ಲಿ ಶಿಕ್ಷಣ ಹೊಂದಿದ ಪ್ರತಿಯೊಂದು ಕುದುರೆಗೂ ಕನಿಷ್ಠಪಕ್ಷ ೧೦,೦೦೦ ರೂಪಾಯಿಗಳ ಬೆಲೆ. ಆ ಶಿಕ್ಷಣಶಾಲೆಯ ಕಟ್ಟಡವು ಹಿಂದಿನ ಕಾಲದ ಅರಮನೆಯ ಒಂದು ಭಾಗ. ಅದರ ಚಂದ್ರಶಾಲೆಯ ಎರಡು ಸಾಲುಗಳಲ್ಲಿ ಹಲವು ಸಾವಿರ ಮಂದಿಗಳು ಕುಳಿತುಕೊಳ್ಳಬಹುದಾದ ಮಟ್ಟಿಗೆ ಸ್ಥಳಾವಕಾಶವಿದೆ. ಮಳೆಗಾಲದಲ್ಲಿ ಸಹ, ಕುದುರೆಗಳಿಗೆ ಒಳಗೇ ಶಿಕ್ಷಣ ಕೊಡಬಹುದಾದಷ್ಟು ವಿಶಾಲವಾದ ನಡುಮನೆಯೊಂದು ಆ ಕಟ್ಟಡದಲ್ಲಿದೆ.

ಮಹಾಪ್ರಭುಗಳವರು ಜರ್ಮನಿಯಲ್ಲಿದ್ದಾಗ ಅವರನ್ನು ಶ್ಲಾಘಿಸಿ, ದೊಡ್ಡವರೂ ಚಿಕ್ಕವರೂ ಅವರ ದರ್ಶನಭಾಗ್ಯಕ್ಕಾಗಿ ಗುಂಪುಗೂಡಿ ಬರುವಂತೆ ಮಾಡಿದ ಘಟನೆಯೊಂದು ನಡೆಯಿತು. ೧೯೧೪ನೆಯ ಇಸವಿಯಿಂದ ೧೯೧೮ನೆಯ ಇಸವಿಯವರೆಗೆ ನಡೆದ ಯೂರೋಪಿನ ಘೋರ ಯುದ್ಧದಲ್ಲಿ, ಲೆಫ್ಟಿನೆಂಟ್ ಕರ್ನಲ್ ಬಿ. ಪಿ. ಕೃಷ್ಣೇ ಅರಸಿನವರ ಕೈಕೆಳಗೆ ಮೈಸೂರು ಸಂಸ್ಥಾನದ ಸೈನ್ಯದವರು ಪ್ಯಾಲೆಸ್ಟೈನಿನಲ್ಲಿ ಪರಾಕ್ರಮದಿಂದ ಯುದ್ಧ ಮಾಡಿ ಜರ್ಮನಿಯ ಸೈನ್ಯದವರನ್ನು ಹಿಮ್ಮೆಟ್ಟಿಸಿ ಓಡಿಸಿದರು. ಅವರು

ಹಿಂದೆ ಬಿಟ್ಟು ಪಲಾಯನ ಮಾಡಿದ್ದ ವಸ್ತುಗಳಲ್ಲಿ ರಾಬರ್ಟ್ ಸ್ಟಾಪ್‌ಮನ್ ಎಂಬಾತನು ಬರೆದಿಟ್ಟುಕೊಂಡಿದ್ದ ಚಿತ್ರಗಳು ಲೆಫ್ಟಿನೆಂಟ್ ಕರ್ನಲ್ ಬಿ. ಪಿ. ಕೃಷ್ಣೇ ಅರಸಿನವರಿಗೆ ಸಿಕ್ಕಿದುವು. ಅವರು ಮೈಸೂರು ನಗರಕ್ಕೆ ಹಿಂತಿರುಗಿದ ಮೇಲೆ ಅವುಗಳನ್ನು ಮಹಾಪ್ರಭುಗಳವರಿಗೆ ಒಪ್ಪಿಸಿದರು. ಮಹಾಪ್ರಭುಗಳವರು ಕಲಾವಿದನಿಗೆ ತನ್ನ ಕಲಾಕೃತಿಗಳು ಎಷ್ಟು ಮಹತ್ವವುಳ್ಳವುಗಳೆಂಬುದನ್ನು ಮನಗಂಡು, ರಾಬರ್ಟ್ ಸ್ಟಾಪ್‌ಮನ್ ಎಂಬವರು ಎಲ್ಲಿದ್ದರೆಂಬುದನ್ನು ಗೊತ್ತುಮಾಡಿ ಅವರಿಗೆ ಅವುಗಳನ್ನು ತಲಪಿಸಬೇಕೆಂದು ಅಲ್ಲಿಯ ಸೈನ್ಯಾಧಿಕಾರಿಗಳಿಗೆ ಒಪ್ಪಿಸಿದರು. ಆ ವಿಚಾರವಾಗಿ ಮಹಾಪ್ರಭುಗಳವರ ಕಲಾಪ್ರೇಮವನ್ನೂ, ಸುಸಂಸ್ಕೃತ ಸ್ವಭಾವವನ್ನೂ, ಉಪಕಾರ ಬುದ್ಧಿಯನ್ನೂ, ಜರ್ಮನಿಯ ವರ್ತಮಾನ ಪತ್ರಿಕೆಗಳೂ, ಲಂಡನ್ನಿನ "ಡೈಲಿ ಹೆರಾಲ್ಡ್" ಪತ್ರಿಕೆಯೇ ಮುಂತಾದ ಪತ್ರಿಕೆಗಳೂ ಮನವಾರೆ ಶ್ಲಾಘಿಸಿದುವು. ಮಹಾಪ್ರಭುಗಳವರು ಚಿತ್ತೈಸಿದೆಡೆಗಳಲ್ಲೆಲ್ಲ ಆ ಕಾರಣದಿಂದ ಮತ್ತೂ ಅಧಿಕವಾದ ಆದರ ಸನ್ಮಾನಗಳ ಸ್ವಾಗತವು ಲಭಿಸಿತು. ಮಹಾಪ್ರಭುಗಳವರು ಸ್ವದೇಶಕ್ಕೆ ಹಿಂದಿರುಗಿದ ಸ್ವಲ್ಪ ಕಾಲದಮೇಲೆ ಆ ಚಿತ್ರಗಳು ಕಲಾವಿದರಿಗೆ ತಲಪಿ ಅವರ ಕೃತಜ್ಞತಾ ಪೂರ್ವಕವಾದ ವಂದನೆಗಳು ಸಮರ್ಪಿತವಾದುವು; ಅಲ್ಲದೆ ಅವರು ಕೆಲವು ಚಿತ್ರಗಳನ್ನು ಕಾಣಿಕೆಯಾಗಿ ಕಳುಹಿಸಿಕೊಟ್ಟರು.

**ಸ್ವಿಟ್ಜರ್ಲೆಂಡಿನ ಮಾರ್ಗವಾಗಿ ಮರುಪ್ರಯಾಣ.**—ಮಹಾಪ್ರಭುಗಳವರು ಮತ್ತೆ ವಿಯೆನ್ನಾ ನಗರಕ್ಕೆ ಹೋಗಿ ಅಲ್ಲಿಂದ ಸ್ವಿಟ್ಜರ್ಲೆಂಡಿನಲ್ಲಿರುವ ಲ್ಯೂಸರ್ನ್ ನಗರವನ್ನು ೧೯೩೬ನೆಯ ಇಸವಿ ಸೆಪ್ಟೆಂಬರು ೫ನೆಯ ತಾರೀಖಿನ ದಿನ ತಲಪಿದರು. ಸ್ವಿಟ್ಜರ್ಲೆಂಡ್ ದೇಶವು ಬೆಟ್ಟಗುಡ್ಡಗಳಿಂದಲೂ ನದೀ ಸರೋವರಗಳಿಂದಲೂ ಕೂಡಿ ಪ್ರಕೃತಿ ಸೌಂದರ್ಯದ ಸಿರಿಬೀಡಿನಂತಿರುವ ಚಿಕ್ಕ ದೇಶ. ಅಲ್ಲಿರುವ ಆಲ್ಪ್ಸ್ ಪರ್ವತದ ಸೌಂದರ್ಯವು ವರ್ಣನಾತೀತವಾದುದು. ಸ್ವಿಟ್ಜರ್ಲೆಂಡಿನವರು ದೊಡ್ಡ ದೊಡ್ಡ ಪರ್ವತಗಳನ್ನೇ ಕೊರೆದು, ಸುರಂಗಮಾರ್ಗಗಳನ್ನು ಮಾಡಿ ರೈಲುಗಳ ಸಂಚಾರಕ್ಕೆ ಏರ್ಪಾಡು ಮಾಡಿದ್ದಾರೆ. ಬೆಟ್ಟಗಳ ಮೇಲಕ್ಕೆಲ್ಲ ರೈಲುಗಳು ಹೋಗಿ ಬರುತ್ತವೆ. ಆ ದೇಶದವರು ಕೈಗಾರಿಕೆಗಳನ್ನೂ ವ್ಯವಸಾಯವನ್ನೂ ಅಭಿವೃದ್ಧಿಗೊಳಿಸಿದ್ದಾರೆ. ಜಲಪಾತಗಳನ್ನೆಲ್ಲ ಉಪಯೋಗಿಸಿಕೊಂಡು, ವಿದ್ಯುಚ್ಛಕ್ತಿಯನ್ನು ಉತ್ಪತ್ತಿಮಾಡಿ, ಕಲ್ಲಿದ್ದಲು ಹೆಚ್ಚಾಗಿ ದೊರೆಯದಿದ್ದೂ ವಿದ್ಯುಚ್ಛಕ್ತಿಯ ಸಹಾಯದಿಂದಲೇ ಭಾರಿ ಭಾರಿ ಕೈಗಾರಿಕೆಗಳನ್ನು ನಡೆಯಿಸುತ್ತಿದ್ದಾರೆ. ಅಲ್ಲಿಯ ರೈಲುಗಳು

ಕೂಡ ವಿದ್ಯುಚ್ಛಕ್ತಿಯ ಸಹಾಯದಿಂದ ಸಂಚರಿಸುತ್ತವೆ. ಒಟ್ಟು ದೇಶವೇ ಒಂದು ಉದ್ಯಾನದಂತಿದೆ. ಸಂಚಾರ ಮಾರ್ಗಗಳಿಗೆಲ್ಲ ಕೀಲೆಣ್ಣೆ ದಮ್ಮಸು ನಡೆದು, ಅವುಗಳ ಪಾರ್ಶ್ವಗಳಲ್ಲಿ ಪಿಯರ್ಸ್ ಹಣ್ಣಿನ ಮರಗಳೂ ಸೇಬಿನ ಗಿಡಗಳೂ ಸಾಲುಗಟ್ಟಿ ಶೋಭಿಸುತ್ತ ಫಲಭರದಿಂದ ಜಗ್ಗುತ್ತಿವೆ. ಅವುಗಳಲ್ಲಿ ಬಂಡಿ ಬಂಡಿ ಹಣ್ಣುಗಳು ಒದಗುವ ಮಟ್ಟಿಗೆ ಭೂಮಿಯು ಫಲವತ್ತಾಗಿದೆ. ಸ್ವಿಟ್ಜರ್ಲೆಂಡಿಗೆ ಎಷ್ಟು ಮಂದಿ ಬಂದು ಹೋಗುವ ರೆಂಬುದಕ್ಕೆ, ಐವತ್ತು ಮನೆಗಳಿರುವ ಒಂದು ಗ್ರಾಮದಲ್ಲಿ ಇಪ್ಪತ್ತೈದು ಹೋಟಲುಗಳಿರುವುದೇ ಒಂದು ನಿದರ್ಶನ. ಮಹಾಪ್ರಭುಗಳವರು ಸ್ವಿಟ್ಜರ್ಲೆಂಡಿನಲ್ಲಿ ಲ್ಯೂಸರ್ನ್ ನಗರವನ್ನೂ, ಲ್ಯೂಸರ್ನ್ ಸರೋವರ ಮುಂತಾದುವುಗಳನ್ನೂ, ಝ್ಯೂರಿಚ್ ಮತ್ತು ಬರ್ನ್ ನಗರಗಳನ್ನೂ ನೋಡಿ ಕೊಂಡು, (ಅನಂತರ ಮತ್ತೆ ಲ್ಯೂಸರ್ನ್ ನಗರಕ್ಕೆ ಬಂದು) ಇಟಲಿಗೆ ಸೇರಿದ ಮಿಲಾನ್ ನಗರಕ್ಕೆ ಪ್ರಯಾಣಮಾಡಿದರು. ಅಲ್ಲಿಂದ ಜಿನೋವಾ ನಗರಕ್ಕೂ ನೈಸ್ ನಗರಕ್ಕೂ ಹೋಗಿ, ಕೊನೆಗೆ ೧೯೩೬ನೆಯ ಇಸವಿ ಸೆಪ್ಟೆಂಬರು ತಿಂಗಳು ೧೭ನೆಯ ತಾರೀಖಿನ ದಿನ ಮಾರ್ಸೇಲ್ಸ್ ನಗರಕ್ಕೆ ಸೇರಿದರು. ಮಾರನೆಯ ದಿನ ವರಸಿದ್ಧಿವಿನಾಯಕ ವ್ರತವನ್ನು ನೆರವೇರಿಸಿ, "ಎಸ್. ಎಸ್. ಸ್ಟ್ರಾತ್ಮೋರ್" ಎಂಬ ಜಹಜಿನಲ್ಲಿ ಅಲ್ಲಿಂದ ಭರತಖಂಡ ವನ್ನು ಕುರಿತು ಪ್ರಯಾಣಮಾಡಿ ೧೯೩೬ನೆಯ ಇಸವಿ ಸೆಪ್ಟೆಂಬರು ತಿಂಗಳು ೨೯ನೆಯ ತಾರೀಖಿನ ದಿನ ಮುಂಬಯಿ ನಗರಕ್ಕೆ ಬಂದರು. ಶ್ರೀಮದ್ಯುವ ರಾಜ ಕುಮಾರರವರಾದ ಶ್ರೀ ಜಯಚಾಮರಾಜ ಒಡೆಯರ್ ಬಹದ್ದೂರ ರವರು (ಆಳುವ ಮಹಾಸ್ವಾಮಿಯವರಾದ ಈಗಿನ ಶ್ರೀಮನ್ಮಹಾರಾಜ ರವರು), ಸರ್ ಎಂ. ವಿಶ್ವೇಶ್ವರಯ್ಯನವರು, ರಾಜಮಂತ್ರಪ್ರವೀಣ ಎಸ್. ಪಿ. ರಾಜಗೋಪಾಲಾಚಾರ್ಯರವರು, ರಾಜಕಾರ್ಯಪ್ರಸಕ್ತ ದಿವಾನ್ ಬಹದ್ದೂರ್ ಕೆ. ರಾಮಸ್ವಾಮಿಯವರು, ಮುಂತಾದವರನೇಕರು ಸ್ವಾಗತವನ್ನು ಬಯಸಿ ಪುಷ್ಪಮಾಲಿಕೆಗಳನ್ನೂ ತುರಾಯಿಗಳನ್ನೂ ಸಮರ್ಪಿಸಿದರು. ಶ್ರೀ ಚಾಮುಂಡೇಶ್ವರೀ ದೇವಿಯವರ ಕೃಪೆಯಿಂದ ಮಹಾಪ್ರಭುಗಳವರು ಸುರಕ್ಷಿತರಾಗಿ ೧೯೩೬ನೆಯ ಇಸವಿ ಅಕ್ಟೋಬರು ತಿಂಗಳು ೨ನೆಯ ತಾರೀಖಿನ ದಿನ ಬೆಂಗಳೂರು ನಗರವನ್ನು ಸೇರಿ ರಾಜಧಾನಿಗೆ ದಯಮಾಡಿದರು. ಸಂಸ್ಥಾನದ ಪ್ರಜೆಗಳೆಲ್ಲರೂ ಆನಂದ ಭರಿತರಾಗಿ ಮಹಾಪ್ರಭುಗಳವರ ಶ್ರೇಯಃಪ್ರಾರ್ಥನೆ ಮಾಡಿದರು.

೧೯೩೬ನೆಯ ಇಸವಿ ಅಕ್ಟೋಬರು ತಿಂಗಳು ೨೬ನೆಯ ತಾರೀಖಿನ ದಿನ ಮೈಸೂರು ಪ್ರಜಾಪ್ರತಿನಿಧಿ ಸಭೆಯಲ್ಲಿ ಮಾಡಿದ ಭಾಷಣದಲ್ಲಿ

ದಿವಾನ್‌ರವರು, ಮಹಾಪ್ರಭುಗಳವರ ಯೂರೋಪುಖಂಡದ ಪ್ರಯಾಣದ ವಿಚಾರವನ್ನು ಪ್ರಸ್ತಾವಿಸಿ, “ಸ್ವಹಿತವನ್ನೂ ಸಂಸ್ಥಾನದ ಹಿತವನ್ನೂ ಮಹಾಸ್ವಾಮಿಯವರು ಮನಸ್ಸಿನಲ್ಲಿಟ್ಟುಕೊಂಡು ತಮ್ಮ ಕರ್ತವ್ಯಸಾಧನೆಗಾಗಿ ಯೂರೋಪಿನ ಪ್ರಯಾಣವನ್ನು ಕೈಕೊಂಡರು........... ಮಹಾಸ್ವಾಮಿಯವರು ಪರಾಂಬರಿಸಿಕೊಂಡು ಬಂದಿರುವ ಹೊಸ ಹೊಸ ಸಂಗತಿಗಳು ಮತ್ತು ಅವರು ಪಡೆದಿರುವ ಹೊಸ ಹೊಸ ಅನುಭವಗಳು ಮುಂದೆ ಸಂಸ್ಥಾನದ ಅಭ್ಯುದಯವನ್ನು ಹೆಚ್ಚಿಸುವುದರಲ್ಲಿ ಪರಿಣಾಮ ಹೊಂದುತ್ತವೆ” ಎಂದು ಹೇಳಿದರು. ಅದೇ ರೀತಿಯಲ್ಲಿ ಅಭ್ಯುದಯ ಸಾಧನೆಯ ಸಲ್ಲಕ್ಷಣಗಳು ಅಲ್ಪಾವಧಿಯಲ್ಲೇ ತಲೆದೋರಿದುವು. ಸಂಚಾರ ಸೌಕರ್ಯ ಕಲ್ಪನೆ, ಉದ್ಯಾನ ರಚನೆ, ಹೊಸ ಹೊಸ ಕೈಗಾರಿಕೆಗಳ ವ್ಯವಸ್ಥೆ ಮುಂತಾದ ರೂಪಗಳಲ್ಲಿ ಪರಿಸ್ಫುಟಹೊಂದಿ ಮುಂದುವರಿದುವು. ಉಬ್ಬು ಚಿತ್ರಗಳ ಕೆತ್ತನೆ ಕೆಲಸ ಮುಂತಾದುವುಗಳಿಗಾಗಿ ಅರಮನೆಯ ಕಟ್ಟಡದ ಕೆಲಸಕ್ಕೆ ಬೇಕಾಗಿದ್ದ ವಿಶೇಷ ವಿಧದ ತಾಮ್ರದ ತಗಡುಗಳೇ ಮೊದಲಾದ ಸಾಮಾನುಗಳನ್ನು ಜರ್ಮನಿಯಿಂದಲೇ ತರಿಸಬೇಕಾಗಿದ್ದಿತು. ಆಳಿದ ಮಹಾಸ್ವಾಮಿಯವರು ಯೂರೋಪಿನಿಂದ ಹಿಂತಿರುಗಿದಮೇಲೆ ಅವುಗಳನ್ನು ಮೈಸೂರಿನಲ್ಲೇ ರಚಿಸುವ ವ್ಯವಸ್ಥೆಯನ್ನು ಸುಲಭ ವೆಚ್ಚದಲ್ಲಿ ಏರ್ಪಡಿಸಿದರು.

**ದಾರ್ಶನಿಕರ ಸಮ್ಮೇಳನ**

ಪ್ರಪಂಚದ ನಾನಾ ದೇಶಗಳ ತತ್ತ್ವಶಾಸ್ತ್ರಜ್ಞರ ಸಮ್ಮೇಳನವು (“ಫಿಲಸಾಫಿಕಲ್ ಕಾಂಗ್ರೆಸ್”) ೧೯೩೭ನೆಯ ಇಸವಿ ಆಗಸ್ಟ್ ತಿಂಗಳು ೬ನೆಯ ತಾರೀಖು ಶುಕ್ರವಾರದ ದಿನ ಪ್ರಾರಂಭವಾಯಿತು. ಆಳಿದ ಮಹಾಸ್ವಾಮಿಯವರು ಶ್ರೀಮಾನ್ ವಿ. ಸುಬ್ರಹ್ಮಣ್ಯ ಐಯರವರನ್ನೂ, ಶ್ರೀಮಾನ್ ಪಾಲ್ ಬ್ರಂಟನ್ ಅವರನ್ನೂ ಆ ಸಮ್ಮೇಳನಕ್ಕೆ ಕಳುಹಿಸಿ ಕೃಪೆಮಾಡಿದರು. ಮಹಾಪ್ರಭುಗಳವರಿಂದ ಒಂದು ಸಂದೇಶವೂ ಹೋಗಿದ್ದಿತು. ಸಮಸ್ತ ಜನರೂ ಸುಖವಾಗಿ ಬಾಳಲೆಂಬುದೇ (“ಸರ್ವೇ ಜನಾಸ್ಸುಖಿನೋ ಭವನ್ತು”) ಭಾರತೀಯ ದರ್ಶನಗಳ ಗುರಿಯೆಂದೂ ಸಹ ಆ ಸಂದೇಶದಲ್ಲಿ ಸೂಚಿತವಾಗಿದ್ದಿತು. ಅದರಿಂದ ಆ ಸಮ್ಮೇಳನದ ಸಾವಿರ ಮಂದಿಗಳಿಗೂ ಉಂಟಾದ ಸಂತೋಷವು ಅಷ್ಟಿಷ್ಟಲ್ಲ. ಮಹಾಪ್ರಭುಗಳವರಲ್ಲಿ ಆ ಸಮ್ಮೇಳನದ ಕೃತಜ್ಞತೆಯನ್ನೂ ಪುನಃ ಪೂರ್ವಕವಾದ ವಂದನೆಗಳನ್ನೂ ಅರಿಕೆ ಮಾಡಿಕೊಳ್ಳಬೇಕೆಂದು ಸರ್ವಾನುಮತದಿಂದ ನಿರ್ಣಯವು ನಡೆಯಿತು. ಇಂಗ್ಲಿಷ್ ಭಾಷೆಯು ಮತ್ತು

ಫ್ರೆಂಚ್ ಭಾಷೆಯ ಮುಖ್ಯ ಪತ್ರಿಕೆಗಳಲ್ಲೆಲ್ಲ ಆ ಸಂದೇಶವೂ ಅದರ ವಿಷಯವಾದ ಶ್ಲಾಘನೆಯೂ ಪ್ರಕಟವಾಗಿದ್ದುವು.

ಈಗಿನ ನಮ್ಮ ಮಹಾಪ್ರಭುಗಳವರಾದ ಶ್ರೀ ಜಯಚಾಮರಾಜ ಒಡೆಯರ್ ಬಹದ್ದೂರರವರ ಬುದ್ಧಿವಿಕಾಸಕ್ಕೂ, ಹೃದಯ ವೈಶಾಲ್ಯಕ್ಕೂ

**ಈಗಿನ ಮಹಾಪ್ರಭುಗಳ ಜಪಾನ್ ದೇಶ ಸಂಚಾರ**

ಸಹಾಯವಾಗುವಂತೆ, ೧೯೩೭ನೆಯ ಇಸವಿ ಏಪ್ರಿಲ್ ತಿಂಗಳಿನಲ್ಲಿ, ಆಳಿದ ಮಹಾಸ್ವಾಮಿಯವರೂ ಶ್ರೀಮದ್ಯುವರಾಜರವರೂ ಅವರನ್ನು ಜಪಾನ್ ದೇಶಕ್ಕೆ ಕಳುಹಿಸುವ ಏರ್ಪಾಡನ್ನು ಮಾಡಿದರು. ಅವರೊಡನೆ ಶಸ್ತ್ರವೈದ್ಯಪ್ರವೀಣ ಡಾಕ್ಟರ್ ಎಸ್. ಸುಬ್ಬರಾಯರವರೂ, ಶ್ರೀಮಾನ್ ಎ. ವೆಂಕಟಸುಬ್ಬಯ್ಯನವರೂ ಮತ್ತು ಇತರ ಕೆಲವರೂ ಹೊರಟರು. ಆಳುವ ಮಹಾಸ್ವಾಮಿಯವರು ಎಸ್. ಎಸ್. ಎಲ್. ಸಿ. ಪರೀಕ್ಷೆಯಲ್ಲಿ ತೇರ್ಗಡೆ ಹೊಂದುವವರೆಗೂ "ರಾಯಲ್ ಸ್ಕೂಲ್" ಎಂಬ ಪಾಠಶಾಲೆಯಲ್ಲಿ ಕೆಲವು ಮಂದಿ ಸಹಪಾಠಿಗಳೊಡನೆ ವ್ಯಾಸಂಗ ಮಾಡುತ್ತಿದ್ದರು. ಅನಂತರ ಮೈಸೂರು ನಗರದ ಇಂಟರ್‌ಮೀಡಿಯೆಟ್ ಕಾಲೇಜಿನಲ್ಲಿ ಇತರ ವಿದ್ಯಾರ್ಥಿಗಳೊಡನೆ ವ್ಯಾಸಂಗ ಮಾಡಿ ಇಂಟರ್‌ಮೀಡಿಯೆಟ್ ಪರೀಕ್ಷೆಯಲ್ಲಿ ತೇರ್ಗಡೆಹೊಂದಿ ಜಪಾನ್ ದೇಶಕ್ಕೆ ಹೊರಡುವ ವೇಳೆಗೆ ಮೈಸೂರಿನಲ್ಲಿರುವ ಮಹಾರಾಜಾ ಕಾಲೇಜಿನಲ್ಲಿ ಬಿ.ಎ. ಪರೀಕ್ಷೆಗೆ ವ್ಯಾಸಂಗ ಮಾಡುತ್ತಿದ್ದರು. ಅವರು ಷಾಂಘೈ ರೇವಿನಿಂದ ಚೀಣಾ ದೇಶಕ್ಕೂ ಹೋಗಿ ಬರಬೇಕೆಂದಿದ್ದರು. ಆದರೆ ಅಲ್ಲಿಯ ರಾಜಕೀಯ ಪರಿಸ್ಥಿತಿಯಿಂದ ಅದಕ್ಕೆ ಅವಕಾಶವಿಲ್ಲದೆ ಹೋಯಿತು. ಆದಕಾರಣ, ಅವರು ಜಪಾನ್ ದೇಶಕ್ಕೇ ದಯಮಾಡಿದರು. ಅವರು ಚಿತ್ತೈಸಿದೆಡೆಗಳಲ್ಲೆಲ್ಲ ಬಹಳ ಮೇಧಾವಿಗಳೆಂದೂ, ವಯಸ್ಸಿಗೆ ಮೀರಿದ್ದಷ್ಟು ಪ್ರತಿಭಾಸಮನ್ವಿತರೆಂದೂ ಶ್ಲಾಘನೆಯನ್ನು ಪಡೆದರು. ಅವರಿಗೆ ಸಂಗೀತದಲ್ಲಿ ಮತ್ತು ಸಾಹಿತ್ಯದಲ್ಲಿ ಅತ್ಯಧಿಕವಾದ ಪ್ರೇಮ. ಜಪಾನ್ ದೇಶದಲ್ಲಿ ಪ್ರೇಕ್ಷಣೀಯವಾದ ಸ್ಥಳಗಳನ್ನೆಲ್ಲ ನೋಡಿಕೊಂಡು, ವಿಚಿತ್ರ ವಸ್ತು ಪ್ರದರ್ಶನ ಶಾಲೆಗಳನ್ನೆಲ್ಲ ಪರಾಂಬರಿಸಿ ಜೂಲೈ ತಿಂಗಳಿನಲ್ಲಿ ಅವರು ಮೈಸೂರು ಸಂಸ್ಥಾನಕ್ಕೆ ಹಿಂತಿರುಗಿದರು. ೧೯೩೮ನೆಯ ಇಸವಿಯ ಬಿ.ಎ. ಪರೀಕ್ಷೆಯಲ್ಲಿ ಉತ್ತಮ ತರಗತಿಯಲ್ಲಿ ತೇರ್ಗಡೆ ಹೊಂದಿದರು.

ಮೈಸೂರು ಸಂಸ್ಥಾನದಲ್ಲಿ ಮತ್ತೆ ರಾಜಕೀಯ ಸುಧಾರಣೆಗಳನ್ನು ದಯಪಾಲಿಸಬೇಕೆಂಬ ಘನವಾದ ಉದ್ದೇಶದಿಂದ, ಆಳಿದ

ಮಹಾಸ್ವಾಮಿಯವರು ರಾಜಸಭಾಭೂಷಣ ದಿವಾನ್ ಬಹದ್ದೂರ್ ಶ್ರೀಮಾನ್ ಕೆ. ಆರ್. ಶ್ರೀನಿವಾಸ ಐಯಂಗಾರ್ಯರವರ ಅಧ್ಯಕ್ಷತೆಯಲ್ಲಿ ಒಂದು ಸಮಿತಿಯು ನೇಮಕವಾಗುವಂತೆ ಆಜ್ಞಾಪಿಸಿದರು. ರಾಜಕೀಯಸುಧಾರಣೆಗಳ ಸಂಬಂಧವಾಗಿ ಸಲಹೆ ಹೇಳಲು ನೇಮಕವಾಗಿದ್ದ ಆ ಸಮಿತಿಯವರು ೧೯೩೮ನೆಯ ಇಸವಿ ಏಪ್ರಿಲ್ ತಿಂಗಳು ೧ನೆಯ ತಾರೀಖಿನದಿನ ಕಾರ್ಯಾರಂಭಮಾಡಿದರು.

**ರಾಜಕೀಯ ಸುಧಾರಣಾ ಸಮಿತಿ**

ಆಳಿದ ಮಹಾಸ್ವಾಮಿಯವರು ಸಮಿತಿಯವರಿಗೆ ಒಂದು ಸಂದೇಶವನ್ನು ಅನುಗ್ರಹಿಸಿದರು. ಅದರಲ್ಲಿ, "ನಮ್ಮ ಪ್ರಜೆಗಳಲ್ಲಿ ಸಮಸ್ತ ಪಂಗಡಗಳವರ ಅಭ್ಯುದಯವನ್ನೂ, ಸುಖಸಂತೋಷಗಳನ್ನೂ ಸಾಧಿಸುವುದೇ ನಮಗಿರುವ ಏಕಮಾತ್ರ ಧ್ಯೇಯ. ಅಖಿಲ ಭರತಖಂಡದ ಅಭ್ಯುದಯಕ್ಕೆ ಸಾಧಕವಾಗುವಂತೆ ಮೈಸೂರು ಸಂಸ್ಥಾನದಿಂದ ಶ್ರೇಷ್ಠ ರೀತಿಯಲ್ಲಿ ಕಾರ್ಯಗಳು ನೆರವೇರಲೆಂಬುದೇ ನಿರಂತರವೂ ನಮಗಿರುವ ಹಾರೈಕೆ . ....ನೀವುಗಳು ರೂಪಿಸಿ ಸಲಹೆ ಮಾಡುವ ಮುಂದಿನ ಅಭಿವೃದ್ಧಿ ವಿಧಾನದ ವ್ಯವಸ್ಥೆಯು ಪ್ರಗತಿಸಾಧನಾ ವಿಷಯಕವಾದ ಪಾಶ್ಚಿಮಾತ್ಯ ಭಾವನೆಗಳಿಗೂ, ಸತ್ಯಧರ್ಮಗಳ ಭಾರತೀಯ ಸತ್ಸಂಪ್ರದಾಯಗಳಿಗೂ ಅನುಗುಣವಾದ ಸಾಮರಸ್ಯದಿಂದೊಡಗೂಡಿ ಶೋಭಿಸುವಂತೆ ಭಗವಂತನು ಅನುಗ್ರಹಿಸಲೆಂಬುದೇ ನಮ್ಮ ಪ್ರಾರ್ಥನೆ" ಎಂಬ ವಾಕ್ಯಗಳಿದ್ದುವು.

ಆಳುವ ಮಹಾಸ್ವಾಮಿಯವರಾದ ಶ್ರೀ ಜಯ ಚಾಮರಾಜೇಂದ್ರ ಒಡೆಯರ್ ಬಹದ್ದೂರರವರ ಉಪನಯನ ಮಹೋತ್ಸವವು ೧೯೩೧ನೆಯ ಇಸವಿಯಲ್ಲಿ ನಡೆಯಿತು. ಆ ತರುವಾಯ ಏಳು ವರ್ಷಗಳಮೇಲೆ ೧೯೩೮ನೆಯ ಇಸವಿ ಮೇ ತಿಂಗಳು ೧೫ನೆಯ ತಾರೀಖಿನ ದಿನ, ಅವರಿಗೂ ಮತ್ತು ಚರಖಾರಿ ಸಂಸ್ಥಾನದ ಮಹಾರಾಜರವರಾದ ಮಹಾರಾಜಾಧಿರಾಜ ಶಿಫಾದಾರ್-ಉಲ್-ಮುಲ್ಕ್ ಅರಿಮರ್ದನ ಸಿಂಗ್ ಜುದೇವ ಬಹದ್ದೂರರವರ ಸಹೋದರಿಯವರಾದ ಶ್ರೀಮತಿ ಸೌಭಾಗ್ಯವತಿ ಸತ್ಯಪ್ರೇಮಕುಮಾರಿ ದೇವಿಯವರಿಗೂ ವಿವಾಹ ಮಹೋತ್ಸವವು ಸಮಸ್ತ ರಾಜವೈಭವದೊಡನೆ ಮೈಸೂರು ಅರಮನೆಯ ಕಲ್ಯಾಣಮಂಟಪದಲ್ಲಿ ನಡೆಯಿತು. ಆಳುವ ಮಹಾಸ್ವಾಮಿಯವರ ಮಾತಾಪಿತೃಗಳು ಅದನ್ನು ನೆರವೇರಿಸಿದರು. ಆಳಿದ ಮಹಾಸ್ವಾಮಿಯವರು ವಿವಾಹ ಮಂಟಪದ ಸಮೀಪದಲ್ಲಿ ಭದ್ರಾಸನದಲ್ಲಿ

**ಆಳುವ ಮಹಾಸ್ವಾಮಿಯವರ ವಿವಾಹಮಹೋತ್ಸವ**

ಮಾಡಿಸಿದ್ದರು. ವಿವಾಹ ಮಹೋತ್ಸವಕ್ಕೆ ಬಿಕನೀರು ಸಂಸ್ಥಾನದ ಮಹಾರಾಜರವರೂ, ಹೈದರಾಬಾದು ಸಂಸ್ಥಾನದ ನಿಜಾಮರವರ ಪುತ್ರರವರೂ, ಜಿಗಣಿ ಸಂಸ್ಥಾನದ ರಾಜರವರೂ, ಮದರಾಸು ಮುಂತಾದ ಪ್ರಾಂತಗಳಿಂದಲೂ ಮತ್ತು ಮೈಸೂರು ಸಂಸ್ಥಾನದ ನಾನಾ ಪ್ರದೇಶ ಗಳಿಂದಲೂ ಆಹ್ವಾನಿತರಾಗಿದ್ದ ಅತಿಥಿಗಳೂ, ಇತರ ಸಂಸ್ಥಾನಗಳ ಪ್ರತಿನಿಧಿಗಳೂ ಅಸಂಖ್ಯಾತಮಂದಿಗಳು ದಯಮಾಡಿದ್ದರು. ವಿವಾಹ ಮಹೋತ್ಸವವು ನೆರವೇರಿದ ತರುವಾಯ ಐದನೆಯ ದಿನ ರಾತ್ರಿ ನೂತನ ವಧೂವರರು ರಾಜವೈಭವದಿಂದ ಆನೆಯ ಮೇಲೆ ಚಿನ್ನದ ಅಂಬಾರಿಯಲ್ಲಿ ಮೆರೆವಣಿಗೆ ಹೊರಟ ಸೊಬಗಿನ ದೃಶ್ಯವನ್ನು ಕಂಡು ಮೈಸೂರಿನ ನಿವಾಸಿ ಗಳೆಲ್ಲ ಆನಂದಿಸಿದರು.

**ಪ್ರತಿ ವರ್ಷವೂ ನಡೆಯುವ ಎರಡು ಮಹೋತ್ಸವಗಳು**

ಮೈಸೂರು ನಗರದಲ್ಲಿ ಪ್ರತಿ ವರ್ಷವೂ ನಡೆಯುತ್ತಬಂದಿರುವ ಶ್ರೀಮನ್ಮಹಾರಾಜರವರ ವರ್ಧಂತ್ಯುತ್ಸವವೂ ಮತ್ತು ಆಶ್ವಯುಜ ಶುದ್ಧ ಪಾಡ್ಯಮಿಯಿಂದ ನಡೆಯುವ ಶರನ್ನವರಾತ್ರಿಯ ಉತ್ಸವವೂ ಮತ್ತು ವಿಜಯದಶಮಿ ಉತ್ಸವವೂ ಭಾರತೀಯ ಸಂಪ್ರದಾಯಗಳಿಗೇ ಭೂಷಣ ಪ್ರಾಯವಾದ ಮಹೋತ್ಸವಗಳು. ಆಗಿನ ವೈಭವ ವಿಜೃಂಭಣೆಗಳನ್ನು ವರ್ಣಿಸಲಳವಲ್ಲ. ಈ ಮಹೋತ್ಸವಗಳನ್ನು ನೋಡಿ ಹರ್ಷಿಸಲು ದೇಶ ವಿದೇಶಗಳಿಂದ ಅಸಂಖ್ಯಾತ ಮಂದಿ ಮೈಸೂರು ನಗರಕ್ಕೆ ಬರುತ್ತಿದ್ದರು. ಆಳಿದ ಮಹಾ ಸ್ವಾಮಿಯವರು ಈ ಮಹೋತ್ಸವಗಳ ಸೊಬಗನ್ನು ವರ್ಷದಿಂದ ವರ್ಷಕ್ಕೆ ಉತ್ತಮಪಡಿಸಿದ್ದರು.

**ಆಳಿದ ಮಹಾಸ್ವಾಮಿಯವರ ವರ್ಧಂತ್ಯುತ್ಸವ.**— ಜ್ಯೇಷ್ಠ ಶುದ್ಧ ಏಕಾದಶಿ, ಆಳಿದ ಮಹಾಸ್ವಾಮಿಯವರ ವರ್ಧಂತ್ಯುತ್ಸವದ ದಿನ. ಆ ದಿನ ಪ್ರಾತಃಕಾಲ ಅವರು ಮಂಗಳಸ್ನಾನ ಮಾಡಿ ಸಂಧ್ಯಾ ವಂದನೆ ದೇವತಾರ್ಚನೆ ಮುಂತಾದ ನಿತ್ಯಕರ್ಮಗಳನ್ನು ಪೂರೈಸಿಕೊಂಡು ಆಯುಷ್ಯ ಹೋಮಾದಿಗಳನ್ನು ನೆರವೇರಿಸಿ, ಧೋತ್ರವನ್ನೂ ಕಿಂಕಾಪಿನ ಅಂಗರೇಖನ್ನೂ ಧರಿಸಿ ದಿವ್ಯಾಭರಣ ಭೂಷಿತರಾಗಿ ದರ್ಬಾರಿಗೆ ದಯ ಮಾಡುತ್ತಿದ್ದರು. ಆ ವೇಳೆಗೆ ಆಹ್ವಾನಿತರಾದ ಅನೇಕ ಮಂದಿ ಅತಿಥಿ ಗಳೂ, ಅಧಿಕಾರಿಗಳೂ, ಖಾಸಗಿ ದೊಡ್ಡಮನುಷ್ಯರೂ ಕಿಕ್ಕಿರಿದು ತುಂಬಿರುತ್ತಿದ್ದರು. ಒತ್ತಟ್ಟು ದೇವದಾಸಿಯರಿಂದ ಭರತ ನಾಟ್ಯವು ನಡೆಯುತ್ತಿದ್ದಿತು. ರಾಜಗುರುಗಳಾದ ಶ್ರೀ ಬ್ರಹ್ಮತಂತ್ರ ಶ್ರೀ ಪರಕಾಲ

ಮಠದ ಶ್ರೀ ಶ್ರೀಗಳವರು ಅರಮನೆಗೆ ದಯಮಾಡಿ ದರ್ಬಾರುಮಂದಿರ ದಲ್ಲಿ ಚಿನ್ನದ ಚೌಕಿಯ ಮೇಲೆ ಮಂಡಿಸಿರುತ್ತಿದ್ದರು. ಮಹಾಪ್ರಭು ಗಳವರು ದಿವಂಗತರಾದ ಶ್ರೀಮದ್ಯುವರಾಜರೊಡನೆಯೂ, ಈಗಿನ ಶ್ರೀಮನ್ಮಹಾರಾಜರವರಾದ ಶ್ರೀ ಜಯ ಚಾಮರಾಜೇಂದ್ರ ಒಡೆಯರವ ರೊಡನೆಯೂ ದಯಮಾಡಿ, ವಿಧ್ಯುಕ್ತವಾದ ರೀತಿಯಲ್ಲಿ ಶ್ರೀ ಶ್ರೀಗಳವರಿಗೆ ಪಾದಪೂಜೆಮಾಡಿ ದಂಡಪ್ರಣಾಮ ಮಾಡುತ್ತಿದ್ದರು. ಆ ಬಗೆಯ ಭಕ್ತಿ ಪ್ರದರ್ಶನವನ್ನು ಕಂಡು, ಈಚೆಗೆ ಮೈಸೂರು ಸಂಸ್ಥಾನಕ್ಕೆ ಅರಮನೆಯ ಅತಿಥಿಗಳಾಗಿ ದಯಮಾಡಿಸಿದ್ದ ಸಂಸ್ಥಾನಾಧೀಶರೊಬ್ಬರು ಆಶ್ಚರ್ಯ ಭರಿತರಾದರು. ಶ್ರೀ ಶ್ರೀಗಳವರು ಆಳಿದ ಮಹಾಪ್ರಭುಗಳವರಿಗೂ, ದಿವಂಗತರಾದ ಶ್ರೀಮದ್ಯುವರಾಜರವರಿಗೂ ಮತ್ತು ಈಗಿನ ಶ್ರೀಮನ್ಮಹಾ ರಾಜರವರಾದ ಶ್ರೀ ಜಯ ಚಾಮರಾಜೇಂದ್ರ ಒಡೆಯರವರಿಗೂ ತೀರ್ಥ ವನ್ನು ಕೊಟ್ಟು ಅನಂತರ ಹಾರತುರಾಯಿಗಳನ್ನೂ ಜರತಾರಿಶಾಲು ಜೋಡಿಗಳನ್ನೂ ಫಲಮಂತ್ರಾಕ್ಷತೆಗಳನ್ನೂ ಆಶೀರ್ವಾದಪೂರ್ವಕವಾಗಿ ಕೊಟ್ಟು ತೆರಳಿದ ಬಳಿಕ, ಆಳಿದ ಮಹಾಸ್ವಾಮಿಯವರು ಭದ್ರಾಸನದಲ್ಲಿ ಮಂಡಿಸುತ್ತಿದ್ದರು. ಅವರ ವರ್ಷ ಸಂಖ್ಯಾಕವಾಗಿ ಅರಮನೆ ಬತೇರಿ ಯಿಂದ ಕುಶಾಲು ತೋಪುಗಳು ಹಾರುತ್ತಿದ್ದುವು. ಸಂಗೀತ ವಿದ್ವಾಂಸರು ಗಳು ಗಾಯನ ಮಾಡುತ್ತಿದ್ದರು. ಅತಿಥಿಗಳೆಲ್ಲರೂ ಮುಜರೆ ಮಾಡು ತ್ತಿದ್ದರು. ಆಳಿದ ಮಹಾಸ್ವಾಮಿಯವರಿಗೆ ಗಂಧ ಪುಷ್ಪ ತಾಂಬೂಲಗಳು ಸಮರ್ಪಿತವಾಗುತ್ತಿದ್ದುವು. ವೈದಿಕರು ಫಲಮಂತ್ರಾಕ್ಷತೆಗಳನ್ನೊಪ್ಪಿಸಿ ಆಶೀರ್ವದಿಸುತ್ತಿದ್ದರು. ದರ್ಬಾರಿನಲ್ಲಿ ಸೇರಿದ್ದವರೆಲ್ಲರಿಗೂ ಪುಷ್ಪಮಾಲಿಕೆ ಗಳೂ ತಾಂಬೂಲವೂ ಆದ ಬಳಿಕ ಮಹಾಪ್ರಭುಗಳವರು ದರ್ಬಾರನ್ನು ಮುಕ್ತಾಯಗೊಳಿಸಿ ಅಂತಃಪುರಕ್ಕೆ ತೆರಳುತ್ತಿದ್ದರು. ಅವರು ದರ್ಬಾರು ಮಂದಿರದಿಂದ ತೆರಳಿದ ಬಳಿಕ ಅತಿಥಿಗಳೆಲ್ಲರೂ ಹೊರಟುಹೋಗುತ್ತಿದ್ದರು. ಸಾಯಂಕಾಲ, ಮಹಾಪ್ರಭುಗಳವರು ತಮ್ಮ ಸೋದರರೊಡನೆಯೂ ಮತ್ತು ಈಗಿನ ಶ್ರೀಮನ್ಮಹಾರಾಜರವರೊಡನೆಯೂ ಅಶ್ವಾರೋಹಿಗಳಾಗಿ ಮೆರವಣಿಗೆ ಹೊರಡುತ್ತಿದ್ದರು. ಸೈನಿಕರೂ, ಅಧಿಕಾರಿಗಳೂ, ಖಾಸಗಿ ದೊಡ್ಡಮನುಷ್ಯರೂ, ವಾದ್ಯಗಾರರೂ ಮೆರವಣಿಗೆಯ ಹಿಂದೆ ಮತ್ತು ಮುಂದೆ ತೆರಳುತ್ತಿದ್ದರು. ಆಗಿನ ವೈಭವದ ದೃಶ್ಯದ ಸೊಬಗು ಅಷ್ಟಿಷ್ಟಲ್ಲ. ಅರಮನೆಯ ಬತೇರಿಯಿಂದ ಇಪ್ಪತ್ತೊಂದು ಕುಶಾಲು ತೋಪುಗಳು ಹಾರುತ್ತಿದ್ದುವು. ಮೆರವಣಿಗೆಯು "ಗೌರ್ನ್ಮೆಂಟ್ ಹೌಸ್" ಬಳಿಗೆ ಹೋದ ಬಳಿಕ ಅವರು ಮೂವರೂ ಬೇರೆ ಉಡುಪನ್ನು ಧರಿಸಿ

ಉಪಾಹಾರವನ್ನೊಪ್ಪಿಸಿಕೊಳ್ಳುತ್ತಿದ್ದರು. ಮೆರೆವಣಿಗೆಯ ಜೊತೆಯಲ್ಲಿ ಬಂದಿದ್ದವರಿಗೆಲ್ಲ ಅರಮನೆಯಿಂದ ಬಂದಿದ್ದ ಉಪಾಹಾರ ವಿನಿಯೋಗವಾದ ನಂತರ, ಆಳಿದ ಮಹಾಸ್ವಾಮಿಯವರು ಶ್ರೀಮದ್ಯುವರಾಜರೊಡನೆಯೂ ಈಗಿನ ಮಹಾಪ್ರಭುಗಳವರೊಡನೆಯೂ ವಿದ್ಯುಚ್ಛಕ್ತಿಯ ಬೆಳುದೀವಿಗೆಗಳ ಮತ್ತು ವಿವಿಧ ವರ್ಣಗಳ ಹಗಲುಬತ್ತಿಗಳ ಬೆಳಕುಗಳ ಪ್ರಭೆಯಿಂದ ವಿರಾಜಿತರಾಗಿ ವಾದ್ಯಘೋಷಗಳೂ, ಭಕ್ತಿವಿಶ್ವಾಸಗಳಿಂದ ಚಪ್ಪಾಳೆ ಹೊಡೆಯುತ್ತಿದ್ದ ಪ್ರಜೆಗಳ ಕೋಲಾಹಲ ಧ್ವನಿಯೂ ಗಗನವನ್ನು ತುಂಬಿ ಪ್ರತಿಧ್ವನಿತವಾಗುತ್ತಿರುವಲ್ಲಿ, ವಿದ್ಯುಚ್ಛಕ್ತಿಯಿಂದ ನಡೆಯುತ್ತಿದ್ದ ಮೋಟಾರು ಬಂಡಿಯಲ್ಲಿ ಅರಮನೆಗೆ ದಯಮಾಡುತ್ತಿದ್ದರು. ಮತ್ತೆ ಇಪ್ಪತ್ತೊಂದು ಕುಶಾಲು ತೋಪುಗಳಾಗುತ್ತಿದ್ದುವು. ಮಾರನೆಯ ದಿನ ಬೆಳಗ್ಗೆ ಹನ್ನೊಂದು ಘಂಟೆಗೆ ಅರಮನೆಯಲ್ಲಿ ಬಂಧುಗಳೊಡನೆಯೂ ಸ್ವಜನರೊಡನೆಯೂ ಆಳಿದ ಮಹಾಸ್ವಾಮಿಯವರು ಔತಣದ ಭೋಜನ ಮಾಡುತ್ತಿದ್ದರು.

ಇನ್ನು ಮುಂದೆ, ಈಗಿನ ಶ್ರೀಮನ್ಮಹಾರಾಜರವರಾದ ಶ್ರೀ ಜಯ ಚಾಮರಾಜೇಂದ್ರ ಒಡೆಯರ್ ಬಹದ್ದೂರರವರ ವರ್ಧಂತ್ಯುತ್ಸವವೂ ಅದೇರೀತಿಯಲ್ಲಿ ನಡೆಯುವುದಾಗಿದೆ.

**ನವರಾತ್ರಿ ಮಹೋತ್ಸವ.**— ಈ ಮಹೋತ್ಸವವು ಪ್ರತಿ ವರ್ಷವೂ ಆಶ್ವಯುಜ ಶುದ್ಧ ಪಾಡ್ಯಮಿಯ ದಿನ ಪ್ರಾರಂಭವಾಗಿ ವಿಜಯದಶಮಿಯ ವರೆಗೂ ಹತ್ತು ದಿನಗಳು ಬಹಳ ವೈಭವದಿಂದ ಮೈಸೂರು ನಗರದಲ್ಲಿ ನಡೆಯುತ್ತ ಬಂದಿದೆ. ಆಳಿದ ಮಹಾಸ್ವಾಮಿಯವರು ನವರಾತ್ರಿ ಪಾಡ್ಯಮಿಯ ದಿನ ಬೆಳಗ್ಗೆ ಮಂಗಳಸ್ನಾನ ಮಾಡಿ, ದೀಕ್ಷಾದುಕೂಲ ಗಳನ್ನು ಧರಿಸಿ ಪ್ರಾತರಾಹ್ನಿಕವನ್ನು ಪೂರೈಸಿದ ಬಳಿಕ ಶ್ರೀ ಸಿದ್ಧಿವಿನಾಯಕ ಸ್ವಾಮಿಯವರನ್ನೂ ಶ್ರೀ ಚಾಮುಂಡೇಶ್ವರೀ ಅಮ್ಮನವರನ್ನೂ ಪೂಜಿಸಿ ಅನಂತರ ಕಂಕಣಧಾರಣ ಮಾಡಿಕೊಳ್ಳುತ್ತಿದ್ದರು. ಮಂಗಳ ವಾದ್ಯಗಳು ಭೋರ್ಗರೆಯುತ್ತಿರುವಲ್ಲಿ, ಮಹಾಪ್ರಭುಗಳವರು ದಿವಂಗತರಾದ ಶ್ರೀಮದ್ಯುವರಾಜರವರೊಡನೆಯೂ, ಈಗಿನ ಶ್ರೀಮನ್ಮಹಾರಾಜರವರಾದ ಶ್ರೀ ಜಯ ಚಾಮರಾಜೇಂದ್ರ ಒಡೆಯರವರೊಡನೆಯೂ ಸುಮಾರು ಹತ್ತು ಘಂಟೆಯ ವೇಳೆಗೆ ದರ್ಬಾರು ಮಂದಿರಕ್ಕೆ ಅಂಗರಕ್ಷಕರಾದ ಸರ್ದಾರರ ಹಸ್ತಲಾಘವವನ್ನು ಸ್ವೀಕರಿಸುತ್ತ— ದಯಮಾಡುತ್ತಿದ್ದರು. ಅವರ ಹಿಂದೆ, ರಾಜಮನೆತನದವರೊಬ್ಬರು ಪಟ್ಟದ ಕತ್ತಿಯನ್ನು ತರುತ್ತಿದ್ದರು. ದರ್ಬಾರು ಮಂದಿರದಲ್ಲಿ (ಸೆಜ್ಜೆಯಲ್ಲಿ) ರಾಜಕುಮಾರ ಶ್ರೀ ದೇಶರಾಜ



ನವರಾತ್ರಿಯಲ್ಲಿ ಪಟ್ಟದ ಹಸುವಿನ ಪೂಜೆ



ನವರಾತ್ರಿಯಲ್ಲಿ ಪಟ್ಟದ ಕುದುರೆಯ ಪೂಜೆ

ಅರಸಿನವರೂ, ಆಳಿದ ಮಹಾಸ್ವಾಮಿಯವರ ಭಾವಮೈದುನರೂ, ದಿವಾನ್‌ರವರೇ ಮುಂತಾದ ಅಧಿಕಾರಿಗಳೂ, ಅರಮನೆಯ ಅಧಿಕಾರಿಗಳೂ, ಅರಸು ಪಂಗಡದ ದೊಡ್ಡಮನುಷ್ಯರುಗಳೂ, ಪ್ರಜಾಪ್ರಮುಖರೂ, ಪುರೋಹಿತರೂ, ಧರ್ಮಾಧಿಕಾರಿಗಳೂ, ಇತರ ವೈದಿಕ ವಿದ್ವನ್ಮಣಿಗಳೂ, ಕಿಕ್ಕಿರಿದು ನಿಂತಿರುತ್ತಿದ್ದರು. ಆಳಿದ ಮಹಾಸ್ವಾಮಿಯವರು ಕಲಶ ಪೂಜೆಯನ್ನೂ ನವಗ್ರಹ ಪೂಜೆಯನ್ನೂ ಮಾಡಿ ಅನಂತರ ಕಾಳಿಕಾ ಪುರಾಣೋಕ್ತ ರೀತಿಯಲ್ಲಿ ಸಿಂಹಾಸನ ಪೂಜೆ ಮಾಡುತ್ತಿದ್ದರು. ಸಿಂಹಾಸನಕ್ಕೆ ಮಂಗಳಾರತಿಯಾದನಂತರ, ಸಿಂಹಾಸನ ಪ್ರದಕ್ಷಿಣೆ ಮಾಡಿ, ಶಿರಬಾಗಿ ವಂದಿಸಿದ ಬಳಿಕ, ಅಂಗರಕ್ಷಕರು ಹಸ್ತಲಾಘವ ಕೊಡುತ್ತಿರುವಲ್ಲಿ ಸಿಂಹಾಸನಾರೋಹಣ ಮಾಡುತ್ತಿದ್ದರು. ಆಗ ಮಂಗಳ ವಾದ್ಯಗಳು ಭೋರ್ಗರೆಯುತ್ತಿದ್ದುವು. ಅರಮನೆಯ ಮುಂದೆ ಸೇರಿರುತ್ತಿದ್ದ ಪ್ರಜೆಗಳೂ, ಸೈನಿಕರೂ ಆನಂದ ಕೋಲಾಹಲಮಾಡುತ್ತಿದ್ದರು. ಮಹಾಪ್ರಭುಗಳವರು ಸಿಂಹಾಸನದಮೇಲೆ ಮಂಡಿಸುವುದಕ್ಕೆ ಮೊದಲು ಅದನ್ನು ಸ್ವೀಕರಿಸಿ ಪ್ರತಿವಂದನೆ ಮಾಡುತ್ತಿದ್ದರು. ಸಿಂಹಾಸನದಮೇಲೆ ಮಂಡಿಸಿದ ಬಳಿಕ ಪಟ್ಟದ ಕತ್ತಿಯನ್ನು ಅವರ ಪಾರ್ಶ್ವದಲ್ಲಿಡುತ್ತಿದ್ದರು. ದೇವಸ್ಥಾನಗಳಿಂದಲೂ ಮಠಗಳಿಂದಲೂ ಬಂದಿರುತ್ತಿದ್ದ ಮರ್ಯಾದೆಗಳನ್ನು ಅವರು ಸ್ವೀಕರಿಸಿದ ಬಳಿಕ, ವೈದಿಕರು ವೇದ ಮಂತ್ರಘೋಷದಿಂದ ತೀರ್ಥೋದಕ ಪ್ರೋಕ್ಷಣೆಮಾಡಿ ಆಶೀರ್ವಾದ ಪೂರ್ವಕವಾಗಿ ಫಲಮಂತ್ರಾಕ್ಷತೆಗಳನ್ನು ಸಮರ್ಪಿಸುತ್ತಿದ್ದರು. ಅರಮನೆಯ ಸರ್ದಾರರುಗಳೂ, ರಾಜಕುಮಾರರೂ, ದಿವಾನ್‌ರವರೂ, ಖಾಸಾ ಭಾವಮೈದುನರೂ, ಇತರರೂ ನಜರು ಮುಜರೆಗಳನ್ನು ಸಲ್ಲಿಸಿದ ಬಳಿಕ ಕ್ಲುಪ್ತ ವಿಧಾನದಲ್ಲಿ ಸಾಲು ಸಾಲಾಗಿ ಕುಳಿತುಕೊಳ್ಳುತ್ತಿದ್ದರು. ಸಮಸ್ತರಿಗೂ ಪುಷ್ಪಹಾರ ತಾಂಬೂಲಗಳು ವಿನಿಯೋಗವಾಗುತ್ತಿದ್ದುವು. ಪಟ್ಟದಾನೆಯೂ, ಪಟ್ಟದ ಕುದುರೆಯೂ, ಶಂಖ ಚಕ್ರ ಶರಭ ಸಾಳ್ವ ಗಂಡಭೇರುಂಡಾದಿ ಬಿರುದು ಬಾವಲಿಗಳ ಧ್ವಜ ಪತಾಕೆಗಳ ಮತ್ತು ವಾದ್ಯಗಳ ಸಮೇತ ಮೆರೆವಣಿಗೆ ಬರುತ್ತಿದ್ದುವು. ಆಗ ಸಮಸ್ತರೂ ಎದ್ದು ನಿಲ್ಲುತ್ತಿದ್ದರು. ಆನೆ ಬಾಗಿಲಿನ ಬಳಿಯಲ್ಲಿ— ಸಜ್ಜೆಯ ಕೆಳಗೆ ನೆಲದಮೇಲೆ— ಪಟ್ಟದ ಆನೆಯು ಪುಷ್ಪಗಳನ್ನೆರಚಿ, ಸೊಂಡಿಲನ್ನೆತ್ತಿ ಬೃಂಹಿತಧ್ವನಿಗೈದು ವಂದನೆಮಾಡುತ್ತಿದ್ದಿತು. ಅದರ ಹಿಂದೆ ನಾದಸ್ವರವು ನುಡಿಯುತ್ತಿರುವಲ್ಲಿ ಪಟ್ಟದ ಕುದುರೆಯು ತಾಲಗತಿಯಲ್ಲಿ ಹೆಜ್ಜೆಗಳನ್ನಿಡುತ್ತ ಮುಂದೆ ಬಂದು ಮೊಳಕಾಲನ್ನೂರಿ ವಂದನೆ ಮಾಡುತ್ತಿದ್ದಿತು. ಅನಂತರ ಸಂಗೀತವಾಗುತ್ತಿದ್ದಿತು. ವಾದ್ಯ

ಗಳವರು "ಕಾಯೌ ಶ್ರೀ ಗೌರೀ" ಎಂಬ ರಾಷ್ಟ್ರಗೀತೆಯನ್ನು ನುಡಿಸು ತ್ತಿರುವಲ್ಲಿ ಮಹಾಪ್ರಭುಗಳು ಅಂಗರಕ್ಷಕರ ಹಸ್ತಲಾಘವವನ್ನು ಸ್ವೀಕರಿಸಿ ಸಿಂಹಾಸನದಿಂದಿಳಿದು ಅಂತಃಪುರಕ್ಕೆ ದಯಮಾಡಿದ ಬಳಿಕ ಸಮಸ್ತರೂ ದರ್ಬಾರು ಮಂದಿರದಿಂದ ತೆರಳುತ್ತಿದ್ದರು. ಮಹಾನವಮಿಯವರೆಗೂ ಪ್ರತಿದಿನವೂ ಸಾಯಂಕಾಲ ಅದೇ ರೀತಿ ದರ್ಬಾರು ನಡೆಯುತ್ತಿದ್ದಿತು. ಮಹಾಪ್ರಭುಗಳವರು ಸಿಂಹಾಸನಾರೋಹಣ ಮಾಡಿದೊಡನೆಯೇ ಅರಮನೆಯ ಹೊರಮೈಯ ಮೇಲಿರುವ ಅಸಂಖ್ಯಾತ ವಿದ್ಯುದ್ದೀಪಗಳೂ, ಅರಮನೆಯ ಮುಂದಿರುವ ವಿವಿಧ ವರ್ಣಗಳ ವಿದ್ಯುದ್ದೀಪ ತೋರಣಗಳೂ ತೊಳಗಲಾರಂಭವಾಗುತ್ತಿದ್ದುವು. ಅರಮನೆಯ ಮುಂದೆ ನಡೆಯುತ್ತಿದ್ದ ಮಲ್ಲಕಾಳಗಗಳು, ಕತ್ತಿವರಸೆಗಳು, ಪಂಜುಗಳ ಸಾಧನೆ, ಅಂಗ ಸಾಧನಾ ಸಾಹಸ ಪ್ರದರ್ಶನ, ವಿಧ ವಿಧದ ಕುಣಿತಗಳು, ಅಶ್ವಾರೋಹಿಗಳ ಅದ್ಭುತ ಸಾಹಸಗಳು, ಮುಂತಾದುವು ಪ್ರೇಕ್ಷಕರನ್ನು ವಿಸ್ಮಿತರನ್ನಾಗಿ ಮಾಡಿ ಬೆರಗುಗೊಳಿಸುತ್ತಿದ್ದುವು. ಮರಗಾಲುಗಳನ್ನು ಕಟ್ಟಿಕೊಂಡಿದ್ದವರ ಮೆಲುನಡೆಯೂ, ಅವರುಗಳ ಪಾರ್ಶ್ವವರ್ತಿಯಾಗಿ ನಡೆದುಬರುತ್ತಿದ್ದ ಕುಬ್ಜನ ನಡಿಗೆಯೂ, ವಿಧ ವಿಧದ ಮುಖವಾಡಗಳನ್ನು ಕಟ್ಟಿಕೊಂಡಿದ್ದವರ ಕುಣಿತ ಮುಂತಾದುವುಗಳೂ, ಪ್ರೇಕ್ಷಕರನ್ನು ವಿನೋದಪರವಶರನ್ನಾಗಿ ಮಾಡುತ್ತಿದ್ದುವು. ನಾದಸ್ವರ, ಬ್ಯಾಂಡು, ಗಾಯನ, ತೂರ್ಯವಾದನ, ಮುಂತಾದುವುಗಳು ಶ್ರುತಿಮಧುರವಾಗಿದ್ದು ಜನರನ್ನು ಆನಂದಗೊಳಿಸು ತ್ತಿದ್ದುವು. ಸರಸ್ವತೀ ಆವಾಹನದ ದಿನ ಮಧ್ಯಾಹ್ನ ಸರಸ್ವತೀ ಪೂಜೆಯನ್ನೂ ದುರ್ಗಾಷ್ಟಮಿಯ ದಿನ ದುರ್ಗಾ ಪೂಜೆಯನ್ನೂ, ಮಹಾನವಮಿಯ ದಿನ ಮಧ್ಯಾಹ್ನ ಪಟ್ಟದ ಕುದುರೆ, ಪಟ್ಟದ ಆನೆ, ಮುಂತಾದುವುಗಳ ಪೂಜೆ ಯನ್ನೂ ಆಳಿದ ಮಹಾಸ್ವಾಮಿಯವರು ನೆರವೇರಿಸುತ್ತಿದ್ದರು. ಮಹಾ ನವಮಿಯ ದಿನ ಸಾಯಂಕಾಲ ಯೂರೋಪಿಯನ್ ಅತಿಥಿಗಳಿಗಾಗಿ ದರ್ಬಾರು ನಡೆಯುತ್ತಿದ್ದಿತು. ಅಂದು ಬ್ರಿಟಿಷ್ ರೆಸಿಡೆಂಟರು ಸಮಸ್ತ ಮರ್ಯಾದೆಗಳೊಡನೆ ಅರಮನೆಗೆ ದಯಮಾಡುವರು. ದಿವಾನ್‌ರವರೇ ಮೊದಲಾದ ಅಧಿಕಾರಿಗಳು ಅವರನ್ನು ಸ್ವಾಗತಿಸಿ ಅರಮನೆಯೊಳಕ್ಕೆ ಕರೆದುಕೊಂಡುಬಂದ ಬಳಿಕ ಆಳಿದ ಮಹಾಸ್ವಾಮಿಯವರು ಒಂದು ಕಡೆಯಿಂದಲೂ ಬ್ರಿಟಿಷ್ ರೆಸಿಡೆಂಟರವರು ಒಂದು ಕಡೆಯಿಂದಲೂ ಏಕ ಕಾಲದಲ್ಲಿ ದರ್ಬಾರು ಮಂದಿರಕ್ಕೆ ದಯಮಾಡುತ್ತಿದ್ದರು. ಮಹಾಪ್ರಭು ಗಳವರು ಸಿಂಹಾಸನಾರೋಹಣ ಮಾಡಿ ಮಂಡಿಸಿದ ಬಳಿಕ ಸಮಸ್ತ ಅತಿಥಿಗಳೂ ಕುರ್ಚಿಗಳಮೇಲೆ ಕುಳಿತುಕೊಳ್ಳುತ್ತಿದ್ದರು. ಸಿಂಹಾಸನದ



ನವರಾತ್ರಿಯ ಕಾಲದಲ್ಲಿ ಪಟ್ಟದ ಆನೆಯ ಪೂಜೆ



ಮೆರವಣಿಗೆ ಹೊರಡುವಾಗ್ಗೆ

ಬಲಭಾಗದ ಉತ್ತಮಾಸನಗಳಲ್ಲಿ ದಿವಂಗತರಾದ ಶ್ರೀಮದ್ಯುವರಾಜ ರವರೂ, ಈಗಿನ ಶ್ರೀಮನ್ಮಹಾರಾಜರವರೂ ಬ್ರಿಟಿಷ್ ರೆಸಿಡೆಂಟರವರೂ ಮಂಡಿಸುತ್ತಿದ್ದರು. ದಿವಾನರವರು ಅತ್ತರನ್ನೂ ಪುಷ್ಪಮಾಲಿಕೆಯನ್ನೂ ಸಮರ್ಪಿಸಿದ ನಂತರ ಬ್ರಿಟಿಷ್ ರೆಸಿಡೆಂಟರವರು ತೆರಳುತ್ತಿದ್ದರು. ಅವರು ಬಂದಾಗಲೂ ಹೊರಟಾಗಲೂ ಅರಮನೆಯ ಬತೇರಿಯಿಂದ ಹದಿಮೂರು ಕುಶಾಲು ತೋಪುಗಳಾಗುತ್ತಿದ್ದುವು. ಮಹಾಪ್ರಭುಗಳಿಗೆ ಯೂರೋಪಿಯನ್ ದೊಡ್ಡಮನುಷ್ಯರುಗಳೂ ಮತ್ತು ಯೂರೋಪಿಯನ್ ಮಹಿಳೆಯರೂ ಸಿಂಹಾಸನದ ಮುಂದೆ ಬಂದು ಮುಜರೆ ಮಾಡುತ್ತಿದ್ದರು. ಯೂರೋಪಿಯನ್ ಮಹಿಳೆಯರಿಗೆ ತುರಾಯಿಗಳು ವಿನಿಯೋಗವಾಗುತ್ತಿದ್ದುವು. ಭಾರತೀಯ ಅತಿಥಿಗಳಿಗೆ ಎಂದಿನಂತೆ ಪುಷ್ಪಹಾರ ತಾಂಬೂಲಗಳಾಗುವುವು. ಪ್ರತಿ ದಿನವೂ ಮಹಾಸ್ವಾಮಿಯವರು ಸಿಂಹಾಸನಾವರೋಹಣ ಮಾಡುವುದಕ್ಕೆ ಮುಂಚಿತವಾಗಿ ರತ್ನಖಚಿತವಾದ ಸುವರ್ಣದ ಹರಿವಾಣದಲ್ಲಿ ಪುಷ್ಪಮಾಲಿಕೆಯೂ, ರತ್ನಖಚಿತವಾದ ಗಂಧದ ಬಟ್ಟಲಿನಿಂದ ಗಂಧವೂ, ರತ್ನಖಚಿತವಾದ ಪಾನ್‌ದಾನ್ ಮತ್ತು ಪನ್ನೀರುದಾನಿಗಳಿಂದ ತಾಂಬೂಲವೂ ಪನ್ನೀರೂ ಸಮರ್ಪಿತವಾಗುತ್ತಿದ್ದುವು. ಅಲ್ಲದೆ, ಮಹಾಪ್ರಭುಗಳವರು ಸಿಂಹಾಸನದಮೇಲೆ ಮಂಡಿಸಿದ್ದಾಗ್ಗೆ ಪ್ರತಿ ದಿನವೂ ದಿವಾನ್‌ರವರು ತಮ್ಮ ಮುಜರೆಯಾದ ಬಳಿಕ ಸ್ವಲ್ಪ ಹೊತ್ತಿನಮೇಲೆ ಸಿಂಹಾಸನದ ಮುಂದಕ್ಕೆ ತೆರಳಿ ಮಹಾಪ್ರಭುಗಳಿಗೆ ವಂದನೆಯನ್ನರ್ಪಿಸಿ, ತಮಗೆ ಅನುಗ್ರಹವಾದ ಪುಷ್ಪಮಾಲಿಕೆಯನ್ನು ಪಡೆದು ಮತ್ತೆ ವಂದಿಸಿ ತಮ್ಮ ಸ್ಥಾನಕ್ಕೆ ತೆರಳುತ್ತಿದ್ದುದು ವಾಡಿಕೆ. ದರ್ಬಾರು ಪ್ರಾರಂಭವಾದೊಡನೆಯೇ ಒಂದುಸಲವೂ, ದರ್ಬಾರು ಮುಕ್ತಾಯವಾಗುವುದಕ್ಕೆ ಸ್ವಲ್ಪ ಮುಂಚಿತವಾಗಿ ಮತ್ತೊಂದುಸಲವೂ ಸಮಸ್ತರೂ ತಂಡ ತಂಡಗಳಲ್ಲಿ ಮಹಾಪ್ರಭುಗಳವರಿಗೆ ಕೈಮುಗಿದು ಶಿರಬಾಗಿ ವಂದಿಸಿ ಮುಜರೆ ಮಾಡುತ್ತಿದ್ದರು. ಸಿಂಹಾಸನದಮೇಲೆ ಮಂಡಿಸಿದ್ದ ಮಹಾಪ್ರಭುಗಳವರು ಆ ರೀತಿ ಮುಜರೆ ಮಾಡಿದ ಪ್ರತಿಯೊಂದು ತಂಡದವರಿಗೂ ಕೈಮುಗಿದು ಪ್ರತಿವಂದನೆ ಮಾಡುತ್ತಿದ್ದರು. ವಿಜಯದಶಮಿಯ ದಿನ ಬೆಳಗ್ಗೆ ಕೆಲವು ಉತ್ಸವ ಕಾರ್ಯಗಳೂ, ವಜ್ರಮುಷ್ಟಿಯ ಕಾಳಗ ಮುಂತಾದುವೂ ನಡೆಯುತ್ತಿದ್ದುವು. ಸಾಯಂಕಾಲ ಮಹಾಪ್ರಭುಗಳವರು ದಿವಂಗತರಾದ ಶ್ರೀಮದ್ಯುವರಾಜರವರೊಡನೆಯೂ ಶ್ರೀ ಜಯ ಚಾಮರಾಜ ಒಡೆಯರ್ ಬಹದ್ದೂರರವರೊಡನೆಯೂ ದಿವ್ಯ ವಸ್ತ್ರಾಭರಣಭೂಷಿತರಾಗಿ ಆನೆಯ ಮೇಲೆ ಚಿನ್ನದ ಅಂಬಾರಿಯಲ್ಲಿ ಕುಳಿತು, ಬನ್ನಿಯನ್ನು ಪೂಜಿಸಲು

ಬನ್ನಿಮಂಟಪಕ್ಕೆ ಸುಮಾರು ನಾಲ್ಕು ಘಂಟೆಯ ವೇಳೆಗೆ ಅಥವಾ ಮುಹೂರ್ತದ ವೇಳೆಯು ಇನ್ನೂ ತಡವಾಗಿ ಸಂಭವಿಸಿದರೆ ಆ ಹೊತ್ತಿಗೆ ಅರಮನೆಯಿಂದ ಮೆರೆವಣಿಗೆ ಹೊರಡುತ್ತಿದ್ದರು; ಬನ್ನಿಮಂಟಪದಲ್ಲಿ ವಿಧ್ಯುಕ್ತವಾದ ಕರ್ಮಗಳನ್ನು ನೆರವೇರಿಸಿ, ಫಲಾಹಾರ ಸೇವನೆಮಾಡಿ, ಅಲ್ಲಿಗೆ ಬಂದಿದ್ದ ಸಮಸ್ತರಿಗೂ ಅರಮನೆಯ ಉಪಾಹಾರ ಸಾಮಗ್ರಿಗಳು ವಿನಿಯೋಗವಾದ ಬಳಿಕ, ಸೈನ್ಯಪರಿಶೀಲನಮಾಡಿ ಮರ್ಯಾದೆಗಳನ್ನೊಪ್ಪಿಸಿ ಕೊಂಡು, ವಿದ್ಯುದ್ದೀಪಮಾಲೆಗಳ ಸೊಬಗಿನಿಂದ ಮೆರೆವಣಿಗೆಯಾಗಿ ಅರಮನೆಗೆ ದಯಮಾಡುತ್ತಿದ್ದರು. ಮೆರವಣಿಗೆಯು ವರ್ಧಂತ್ಯುತ್ಸವದ ಕಾಲದ ಮೆರೆವಣಿಗೆಗಿಂತಲೂ ಅಧಿಕತರವಾದ ವಿಜೃಂಭಣೆಯಿಂದ ನಡೆಯುತ್ತಿದ್ದಿತು. ಮೈಸೂರು ಸಂಸ್ಥಾನದ ನಾನಾ ಪ್ರದೇಶಗಳಿಂದಲೂ, ಭರತಖಂಡದ ಇತರ ಪ್ರದೇಶಗಳಿಂದಲೂ ಲಕ್ಷಾಂತರ ಮಂದಿಗಳು ನವರಾತ್ರಿಯ ಕಾಲದಲ್ಲಿ ಮೈಸೂರು ನಗರಕ್ಕೆ ಬಂದು, ನೋಟವನ್ನು ನೋಡಿ ಹರ್ಷಿಸುತ್ತಿದ್ದರು.

೧೯೪೦ನೆಯ ಇಸವಿಯ ನವರಾತ್ರಿ ಮಹೋತ್ಸವವನ್ನು ಆಳುವ ಮಹಾಸ್ವಾಮಿಯವರಾದ ಶ್ರೀ ಜಯ ಚಾಮರಾಜೇಂದ್ರ ಒಡೆಯರ್ ಬಹದ್ದೂರರವರು ಯಥಾಪ್ರಕಾರ ವೈಭವ ವಿಜೃಂಭಣೆಗಳಿಂದ ನಡೆಯಿಸಿದರು.

ಮೈಸೂರು ಸಂಸ್ಥಾನದ ರತ್ನಸಿಂಹಾಸನವು ವಿಜಯನಗರದ ಸಮ್ರಾಟರ ಪ್ರತಿನಿಧಿಯಾಗಿ ಶ್ರೀರಂಗ ಪಟ್ಟಣದಲ್ಲಿದ್ದ ಶ್ರೀರಂಗರಾಯನಿಗೆ ಸೇರಿ, ಆತನಿಂದ ರಾಜಒಡೆಯರವರ ಸ್ವಾಧೀನಕ್ಕೆ ಬಂದು ಮೈಸೂರು ಅರಮನೆಯಲ್ಲಿ ನೆಲಸಿತೆಂದು ಪ್ರತೀತಿಯಿದೆ. ರಾಜ ಒಡೆಯರವರ ಕಾಲದಿಂದಲೂ ನವರಾತ್ರಿ ಉತ್ಸವವು ನಡೆಯುತ್ತ ಬಂದು, ವರ್ಷ ವರ್ಷವೂ ಅದರ ವಿಜೃಂಭಣೆಯು ವೃದ್ಧಿಹೊಂದುತ್ತ ಬಂದಿದೆ. ವಿಜಯ ದಶಮಿಯ ಮಾರನೆಯ ದಿನ ಮಹಾಜನರಲ್ಲಾರು ಬೇಕಾದರೂ ಅರಮನೆಯ ಸಜ್ಜೆಗೆ ಹೋಗಿ, ಮೈಸೂರು ಸಂಸ್ಥಾನದ ಹೆಮ್ಮೆಗಳಲ್ಲೊಂದಾದ ರತ್ನಸಿಂಹಾಸನವನ್ನು ನೋಡಿ ಹರ್ಷಿಸಬಹುದು. ಸುವರ್ಣ ರಚಿತವಾದ ಆ ಸಿಂಹಾಸನದಲ್ಲಿ ಖಚಿತವಾಗಿರುವ ಕೆಂಪು, ಪಚ್ಚೆ, ಮುಂತಾದ ರತ್ನಗಳೂ, ಮೌಕ್ತಿಕ ಮಯವಾಗಿರುವ ಕಿಂಕಾಪಿನ ದಿಂಬುಗಳೂ, ಸಿಂಹಾಸನದ ಹಿಂಭಾಗದಿಂದ ಮೇಲಕ್ಕೆದ್ದು ಮನೋಹರವಾಗಿಬಾಗಿರುವ ಸುವರ್ಣದಂಡದ ಕೊನೆಯ ಮೇಲ್ಭಾಗದಲ್ಲಿ ಶೋಭಿಸುತ್ತಿರುವ

**ರತ್ನಸಿಂಹಾಸನ**



ನವರಾತ್ರಿಯ ಮೆರೆವಣಿಗೆ
(ಆಳಿದ ಮಹಾಸ್ವಾಮಿಯವರೂ ದಿವಂಗತರಾದ ಶ್ರೀಮದ್ಯುವರಾಜರವರೂ
ಚಿನ್ನದ ಅಂಬಾರಿಯಲ್ಲಿ ಮಂಡಿಸಿದ್ದಾರೆ)

ಶ್ವೇತಛತ್ರವೂ, ಅದರ ಮೇಲ್ಭಾಗದಲ್ಲಿರುವ ಸುವರ್ಣರಚಿತವಾಗಿ ರತ್ನ ಖಚಿತವಾಗಿರುವ ಪಕ್ಷಿ ರತ್ನವೂ, ಮೇಲ್ಭಾಗದಿಂದ ತೂಗಾಡುತ್ತಿರುವ ಮುತ್ತಿನ ಲಡಿಗಳೂ, ಚಿತ್ತಾಕರ್ಷಕವಾಗಿವೆ. ನವರಾತ್ರಿಯ ಪಾಡ್ಯಮಿಯ ದಿನ ಈಚೆಗೆ ತೆಗೆದಿದ್ದು ಆ ಬಳಿಕ ವಿಜಯದಶಮಿಯ ದಿನ ಮಹಾಜನರು ಬಂದು ನೋಡಿಕೊಂಡು ಹೋದಮೇಲೆ ಸಿಂಹಾಸನಕ್ಕೆ ಪೂಜೆಮಾಡಿ ಸಿಂಹಾಸನದ ಕೊಟಡಿಯಲ್ಲಿಟ್ಟು ಬೀಗಮುದ್ರೆ ಮಾಡುತ್ತಾರೆ. ಆ ಬಳಿಕ ಮುಂದಿನ ನವರಾತ್ರಿಯ ಪಾಡ್ಯಮಿಯವರೆಗೂ ಮತ್ತೆ ಅದನ್ನು ಹೊರಕ್ಕೆ ತೆಗೆಯುವುದಿಲ್ಲ. ಆದರೆ, ನೂತನ ಪ್ರಭುಗಳ ಪಟ್ಟಾಭಿಷೇಕಕಾಲದಲ್ಲಿ ಅದನ್ನು ಹೊರಕ್ಕೆ ತೆಗೆಯುತ್ತಾರೆ. ಆದಕಾರಣ, ೧೯೪೦ನೆಯ ಇಸವಿ ಸೆಪ್ಟೆಂಬರು ತಿಂಗಳು ೮ನೆಯ ತಾರೀಖಿನ ದಿನ ನಡೆದ ಪಟ್ಟಾಭಿಷೇಕ ಮಹೋತ್ಸವ ಕಾಲದಲ್ಲಿ ಅದನ್ನು ಹೊರಕ್ಕೆ ತೆಗೆದಿದ್ದರು.

ಸಿಂಹಾಸನದ ಶ್ವೇತಛತ್ರದ ಸುವರ್ಣದಂಡದ ಮೇಲೆ ಅಂದವಾಗಿ ಕಾಣುವ ಪುಟ್ಟ ಪುಟ್ಟ ಸ್ಫುಟವಾದ ಅಕ್ಷರಗಳಲ್ಲಿ ಕೆಲವು ಸುಂದರವಾದ ಶ್ಲೋಕಗಳನ್ನು ಕೊರೆದಿದ್ದಾರೆ. "ದೇವಿಯರ ರೂಪದ ಶಕ್ತಿ ಸಮನ್ವಿತರಾದ ಬ್ರಹ್ಮವಿಷ್ಣು ಮಹೇಶ್ವರರು ರತ್ನಸಿಂಹಾಸನಾರೂಢನಾದ ನಿನ್ನನ್ನು ಹಗಲಿರುಳೂ ಸಂರಕ್ಷಿಸಲಿ! ವಾಣಿಯು ವಾಗ್ವೈಖರಿಯನ್ನೂ, ಲಕ್ಷ್ಮಿಯು ಶಾಶ್ವತ ಸಂಪತ್ತನ್ನೂ, ಸರ್ವಮಂಗಳೆಯು ಮಂಗಳಗಳನ್ನೂ ಸರ್ವದಾ ನಿನಗೀಯಲಿ!......ಲೋಕಚಕ್ಷುವಾದ ಸೂರ್ಯನು ನಿನ್ನ ಪ್ರತಾಪವನ್ನು ಹೆಚ್ಚಿಸಲಿ! ಚಂದ್ರನು ನಿನ್ನ ನಿರ್ಮಲ ಕೀರ್ತಿಯನ್ನೂ, ಅಂಗಾರಕನು ಸನ್ಮಂಗಳಗಳನ್ನೂ ವೃದ್ಧಿಗೊಳಿಸಲಿ! ಬುಧನು ಸೌಮ್ಯತೆಯನ್ನೂ, ಬೃಹಸ್ಪತಿಯು ಪ್ರಾಜ್ಞತೆಯನ್ನೂ, ಶುಕ್ರನು ಸುನೀತಿಯನ್ನೂ, ಶನಿಯು ಅತ್ಯಂತ ಶ್ರೇಷ್ಠತಮವಾದ ಸುಖವನ್ನೂ ಕೊಡಲಿ! ರಾಹುವು ಬಾಹುಬಲವನ್ನೂ, ಕೇತುವು ಕುಲೋನ್ನತಿಯನ್ನೂ ನಿನಗೀಯಲಿ! ಸನಕ್ಷತ್ರವಾದ ಸರ್ವಗ್ರಹಗಳೂ ನಿನ್ನಲ್ಲಿ ಸುಪ್ರಸನ್ನರಾಗಿರಲಿ! ದುರ್ಗಾದೇವಿಯೂ, ಗಣೇಶನೂ, ಭಯಂಕರನಾದ ಕ್ಷೇತ್ರಪಾಲನೂ, ಪ್ರಸನ್ನಾತ್ಮನಾದ ವಾಸ್ತೋಷ್ಪತಿಯೂ ನಿನ್ನನ್ನು ಕಾಪಾಡಲಿ!......ರಾಜ್ಯಶಾಸನ ಮಾಡುವ ನಿನಗೆ ಮಹೇಂದ್ರನು ಸಂಪದ್ವೃದ್ಧಿಯನ್ನೂ, ಸಿಂಹಾಸನಾರೂಢನಾದ ನಿನಗೆ ಅಗ್ನಿಯು ತೇಜಸ್ವಿತೆಯನ್ನೂ, ಯಮಧರ್ಮನು ಧರ್ಮಾಚರಣೆಯಲ್ಲಿ ಸ್ಥಿರಮನಸ್ಸನ್ನೂ ಕೊಡಲಿ! ನೈರುತ್ಯಾಧಿಪನು ದುಷ್ಟಗ್ರಹ ಭಯವನ್ನು ನಾಶಗೊಳಿಸಲಿ! ವರುಣನು ನಿನಗೆ ಪ್ರಸನ್ನ ಚಿತ್ತವನ್ನೂ, ಶುಚಿತ್ವವನ್ನೂ ಕೊಡಲಿ! ವಾಯುವು ಆರೋಗ್ಯವನ್ನೂ

ಬಲ ಸಂಪತ್ತಿಯನ್ನೂ ಕೊಡಲಿ! ತ್ಯಾಗಮಾಡಿಯೂ ವೃದ್ಧಿಯಾಗುತ್ತ ಅಕ್ಷಯವಾಗಿರುವ ಸಂಪತ್ತನ್ನು ಕುಬೇರನು ನಿನಗೀಯಲಿ! ದೇವ ದೇವ ನಾದ ಮಹೇಶ್ವರನು ದೀರ್ಘಾಯುಷ್ಯವನ್ನು ಕೊಡಲಿ! ದಿಲೀಪನೂ, ಸಗರನೂ, ಶ್ರೀರಾಮನೂ, ಹರಿಶ್ಚಂದ್ರನೂ, ನಳನೂ, ಅನುಸರಿಸಿದ ಧರ್ಮವನ್ನು ಪರಿಪಾಲಿಸು" ಎಂಬುದು ಅವುಗಳಲ್ಲಿ ಕೆಲವು ಶ್ಲೋಕಗಳ* ತಾತ್ಪರ್ಯ.

ಹೊರಗೆ ನೋಡುವುದಕ್ಕೇನೊ ಶರನ್ನವರಾತ್ರಿಯ ಉತ್ಸವವು ವೈಭವ ವಿಜೃಂಭಣೆಗಳ ನೆಲೆಯಾಗಿ ಶ್ರೀಮನ್ಮಹಾರಾಜರವರಿಗೆ ಸುಖಕರ

---

*" ಬ್ರಹ್ಮಾವಿಷ್ಣುರ್ಮಹೇಶಶ್ಚ ಸ್ವಸ್ವ ಶಕ್ತಿ ಸಮನ್ವಿತಾಃ ।
ರತ್ನಸಿಂಹಾಸನಾರೂಢಂ ರಕ್ಷನ್ತು ತ್ವಾಮಹರ್ನಿಶಮ್ ॥
ವಾಣೀ ವಾಗ್ವೈಖರೀಂ ದದ್ಯಾಲ್ಲಕ್ಷ್ಮೀಸ್ಸಂಪದಮೂರ್ಜಿತಾಂ ।
ಮಂಗಲಾನಿ ಸದಾ ದದ್ಯಾದ್ಭವತೇ ಸರ್ವ ಮಂಗಲಾ ॥
. . . . . . . . . . . . . . . . . . . . . . . . . . . . . . .
ಪ್ರತಾಪಂ ತವ ಪುಷ್ಣಾತು ಲೋಕ ಚಕ್ಷುರ್ಗಭಸ್ತಿಮಾನ್ ।
ನಿರ್ಮಲಾಂ ಚಂದ್ರಮಾಃ ಕೀರ್ತಿಂ ಮಂಗಲಾನಿ ಮಹೀಸುತಃ ॥
ಸೌಮ್ಯತಾಮಿಂದುಜೋ ದದ್ಯಾತ್ಪ್ರಾಜ್ಞತ್ವಂ ಸುರದೇಶಿಕಃ ।
ಸುನೀತಿಂ ಕವಿರಾಡ್ದದ್ಯಾತ್ಸುಖಂ ಶನಿರನುತ್ತಮಮ್ ॥
ರಾಹುರ್ಬಾಹುಬಲಂ ದದ್ಯಾತ್ಕೇತುಸ್ತವ ಕುಲೋನ್ನತಿಂ ।
ಸರ್ವೇ ಗ್ರಹಾಸ್ಸನಕ್ಷತ್ರಾಃ ಸುಪ್ರಸನ್ನಾ ಭವನ್ತು ತೇ ॥
ದುರ್ಗಾದೇವೀ ಗಣೇಶಶ್ಚ ಕ್ಷೇತ್ರಪಾಲೋ ಭಯಂಕರಃ ।
ವಾಸ್ತೋಷ್ಪತಿಃ ಪ್ರಸನ್ನಾತ್ಮಾ ಸರ್ವೇ ರಕ್ಷನ್ತು ಸರ್ವತಃ ॥
. . . . . . . . . . . . . . . . . . . . . . . . . . . . . . .
ಐರಾವತಂ ಸಮಾಸ್ಥಾಯ ವಜ್ರಹಸ್ತಃ ಪುರಂದರಃ ।
ತನೋತು ಸಂಪದಾಂ ವೃದ್ಧಿಂ ತವ ರಾಜ್ಯಂ ಪ್ರಶಾಸತಃ ॥
ಮೇಷಾರೂಢಸ್ಸಪ್ತ ಹಸ್ತಸ್ಸ್ರುಕ್ಸ್ರುವಾದ್ಯಾಯುಧೋಽನಲಃ ।
ತೇಜಸ್ವಿತಾಂ ಪ್ರದದ್ಯಾತ್ತೇ ಸಿಂಹಪೀಠಾಧಿರೋಹಿಣಃ ॥
ದಂಡಾದಿಕಾಯುಧೋಪೇತೋ ಮಹಿಷೋಪರಿ ಸಂಸ್ಥಿತಃ ।
ಧರ್ಮರಾಜಃ ಪ್ರಸನ್ನಸ್ತೇ ದದ್ಯಾದ್ಧರ್ಮೇ ಮತಿಂ ಸ್ಥಿರಾಮ್ ॥
ನರಾರೂಢೋ ಗದಾಪಾಣಿರ್ಯಾತುಧಾನ ಗಣೇಶ್ವರಃ ।
ದುಷ್ಟಗ್ರಹ ಭಯಂ ಛಿಂದ್ಯಾತ್ತವ ಪೃಥ್ವೀ ಪ್ರಶಾಸತಃ ॥
ಪ್ರಚೇತಾ ನಕ್ರಮಾರೂಢಃ ಪಾಶಾದ್ಯಾಯುಧ ಸಂಯುತಃ ।
ದದ್ಯಾತ್ಪ್ರಸನ್ನ ಚಿತ್ತತ್ವಂ ಶುಚಿತ್ವಂ ಸದಾ ತವ ॥
ಬಿಭ್ರಚ್ಛೂರ್ಪಂ ಮೃಗಾರೂಢಃ ಪ್ರಾಣಾನಾಮೀಶ್ವರೋ ಮರುತ್ ।
ಆರೋಗ್ಯಂ ಬಲ ಸಂಪತ್ತಿಂ ದದ್ಯಾತ್ತವ ನಿರಂತರಮ್ ॥
ಅಶ್ವಾರೂಢಃ ಖಡ್ಗಹಸ್ತೋ ರಾಜ ರಾಜೋ ಮಹಾಯಶಾಃ ।
ದದ್ಯಾದ್ಧನರ್ಧಿಮಕ್ಷಯ್ಯಾಂ ತ್ಯಾಗೇ ಸತ್ಯಪಿ ಭೂರಿಶಃ ॥
ತುಂಗಂ ಪುಂಗವಮಾರೂಢಃ ಶೂಲಾದ್ಯಾಯುಧಜಾಲಭೃತ್ ॥
ದೇವ ದೇವೋ ಮಹೇಶಾನೋ ದದ್ಯಾದಾಯುಷ್ಯಮೂರ್ಜಿತಮ್ ॥
ದಿಲೀಪಸ್ಸಗರೋ ರಾಮೋ ಹರಿಶ್ಚಂದ್ರೋ ನಳಸ್ತಥಾ ।
ಯಂ ಧರ್ಮಮನ್ವವರ್ತಂತ ತಂ ಧರ್ಮಮನುಪಾಲಯ ॥
. . . . . . . . . . . . . . . . . . . . . . . . . . . . . . . ."

ವಾಗಿರುವ ದೃಶ್ಯದಂತೆ ತೋರಿದರೂ, ವಾಸ್ತವವಾಗಿ ನೋಡಿದರೆ ಮಹಾಪ್ರಭುಗಳವರು ಪ್ರಜಾವಾತ್ಸಲ್ಯದ ಮತ್ತು ಕರ್ಮಶ್ರದ್ಧೆಯ ದೆಸೆಯಿಂದ ಅತ್ಯಧಿಕವಾದ ಶ್ರಮಸಹಿಷ್ಣುತೆಯನ್ನು ಪ್ರದರ್ಶಿಸುತ್ತಿದ್ದರು: ನವರಾತ್ರಿಯ ಉತ್ಸವ ಕಾಲದಲ್ಲಿ ಅವರು ಉಷಃಕಾಲಕ್ಕೇ ನಿದ್ರೆಯಿಂದೆದ್ದು ಸ್ನಾನಮಾಡಿ, ಪ್ರಾತರಾಹ್ನಿಕ ದೇವತಾರ್ಚನೆಗಳನ್ನು ಪೂರೈಸಿ, ನಿತ್ಯದಾನವನ್ನಿತ್ತು, ಅನಂತರ ಗೋಪೂಜೆ ಮಾಡುತ್ತಿದ್ದರು. ಮಹಾಮಾತೃಶ್ರೀಯವರು ಜೀವಿಸಿದ್ದವರೆಗೂ ಗೋಪೂಜೆಯಾದ ಬಳಿಕ ಮಾತೃಪೂಜೆಯು ನೆರವೇರುತ್ತಿದ್ದಿತು. ಮಹಾಮಾತೃಶ್ರೀಯವರ ಪಾದೋದಕವನ್ನು ಆಳಿದ ಮಹಾಸ್ವಾಮಿಯವರು ತಲೆಗೆ ಪ್ರೋಕ್ಷಿಸಿಕೊಳ್ಳುತ್ತಿದ್ದರು; ಅನಂತರ ಅಪರಾಹ್ನ ಮೂರು ಘಂಟೆಯ ವರೆಗೂ ಉಪವಾಸವಿದ್ದು ಪರಮೇಶ್ವರ ಪ್ರೀತ್ಯರ್ಥವಾಗಿಯೂ, ಪ್ರಜೆಗಳ ಶ್ರೇಯಸ್ಸಿಗಾಗಿಯೂ ಜಪವನ್ನು ನೆರವೇರಿಸುತ್ತಿದ್ದರು. ಜಪವು ಪೂರೈಸಿದ ಬಳಿಕ ಮಹಾಪ್ರಭುಗಳವರು ಒಂದು ಬಟ್ಟಲಿನಷ್ಟು ಪಾಯಸವನ್ನು ಸೇವಿಸುತ್ತಿದ್ದರು. ರಾತ್ರಿಯವರೆಗೂ ಅದು ಹೊರತು ಅವರಿಗೆ ಮತ್ತಾವ ಆಹಾರವೂ ಇರುತ್ತಿರಲಿಲ್ಲ. ಈ ಮಧ್ಯದಲ್ಲಿ ಕನ್ನಡಿ ತೊಟ್ಟಿಯಲ್ಲಿ ಶ್ರೀ ಚಾಮುಂಡೇಶ್ವರೀ ದೇವಿಯವರ ವಿಗ್ರಹವನ್ನು ಮುಹೂರ್ತಮಾಡಿಸಿ ಅಲ್ಲಿ ಪ್ರತಿನಿತ್ಯವೂ ಬೆಳಗ್ಗೆ ಎಂಟು ಘಂಟೆಯಿಂದ ಹನ್ನೊಂದು ಘಂಟೆಯ ವರೆಗೂ ಚತುರ್ವೇದಪಾರಾಯಣ, ದೇವೀ ಭಾಗವತ ಪಾರಾಯಣ, ಭಾಗವತ ಪಾರಾಯಣ, ಶ್ರೀಮದ್ರಾಮಾಯಣ ಪಾರಾಯಣ, ಮಹಾಭಾರತ ಪಾರಾಯಣ, ನವಗ್ರಹ ಜಪ, ಮುಂತಾದುವೆಲ್ಲ ನಡೆಯುತ್ತಿದ್ದುವು.

**ಪ್ರಜಾವಾತ್ಸಲ್ಯ ಕರ್ಮ ಶ್ರದ್ಧೆಗಳ ಕಾರಣದಿಂದ ಶ್ರಮ ಸಹಿಷ್ಣುತೆ**

ಮೇಲೆ ಹೇಳಿದಂತೆ, ಮಹಾಪ್ರಭುಗಳವರು ಪಾಯಸ ಸೇವನೆ ಮಾಡಿದ ಬಳಿಕ ಸೆಜ್ಜೆಯಲ್ಲಿ ನಡೆದಿರುತ್ತಿದ್ದ ದರ್ಬಾರು ಏರ್ಪಾಡುಗಳನ್ನು ಪರಾಂಬರಿಸಿ, ಅನಂತರ ಕರಿಕಲ್ಲು ತೊಟ್ಟಿಗೆ ಹೋಗಿ ರಾಜ್ಯಾಡಳಿತ ಸಂಬಂಧವಾದ ಕಾಗದ ಪತ್ರಗಳನ್ನು ಸಾಯಂಕಾಲ ಐದೂವರೆ ಘಂಟೆಯ ವರೆಗೂ ಪರಿಶೀಲಿಸುತ್ತಿದ್ದು ನಾನಾ ಆಜ್ಞೆಗಳನ್ನು ದಯಪಾಲಿಸುತ್ತಿದ್ದರು. ಆ ಬಳಿಕ ದರ್ಬಾರಿಗೆ ದಯಮಾಡಿಸುವುದಕ್ಕಾಗಿ ದಿವ್ಯವಸ್ತ್ರಾಭರಣಗಳನ್ನು ಧರಿಸಿ ಸಿದ್ಧವಾಗುತ್ತಿದ್ದರು. ದರ್ಬಾರು ಮುಗಿದ ಮೇಲೆ "ಅರ್ತ್ಯೈಕ್ಷತೆಯ ತೊಟ್ಟಿ"ಯಾದ ಅಂಬಾವಿಲಾಸಕ್ಕೆ ದಯಮಾಡಿ ಮಣೆಯ ಮೇಲೆ ನಿಂತುಕೊಳ್ಳುತ್ತಿದ್ದರು. ಅರಸು ಪಂಗಡದ ಮಹಿಳೆಯರೆಲ್ಲರೂ

ಹೂಗಳನ್ನೆರಚಿ ನಮಸ್ಕಾರ ಮಾಡಿದಮೇಲೆ ಬಂಗಾರದ ತಟ್ಟೆಯಲ್ಲಿ ಮಹಾಪ್ರಭುಗಳವರ ಪಾದಪ್ರಕ್ಷಾಳನವೂ ಮುತ್ತಿನಾರತಿಯೂ ನಡೆಯುತ್ತಿದ್ದುವು. ಅನಂತರ, ಅವರು ಸ್ನಾನಮಾಡಿ ಸಾಯಂ ಸಂಧ್ಯಾವಂದನೆ, ಶಿವಪೂಜೆ ಮತ್ತು ರಾಜರಾಜೇಶ್ವರೀ ಜಪ— ಇವುಗಳನ್ನು ನೆರವೇರಿಸಿದ ಬಳಿಕ, ಕನ್ನಡಿ ತೊಟ್ಟಿಗೆ ಹೋಗಿ ಅಲ್ಲಿ ಶ್ರೀ ಚಾಮುಂಡೇಶ್ವರೀ ದೇವಿಯವರಿಗೆ ಸಹಸ್ರನಾಮಾರ್ಚನೆಯಾಗಿ ಪೂಜಾವಿಧಿಗಳು ಪೂರೈಸಿ ಮಂಗಳಾರತಿಯಾಗುವವರೆಗೂ ನಿಂತಿರುತ್ತಿದ್ದರು. ದುರ್ಗಾಷ್ಟಮಿಯ ದಿನ ಕಾರ್ಯಕಲಾಪಗಳೂ ಪೂಜಾದಿಗಳೂ ಇನ್ನೂ ಅಧಿಕತರವಾಗಿದ್ದುದರಿಂದ, ಆ ದಿನ ಅವರ ನಿಯಮವೂ ಆಯಾಸವೂ ಇನ್ನೂ ಹೆಚ್ಚು. ಹೀಗೆ, ನವರಾತ್ರಿಯ ಹಬ್ಬದಲ್ಲಿ ಪ್ರತಿದಿನವೂ ಮಹಾಪ್ರಭುಗಳವರಿಗೆ ಉಷಃಕಾಲದಿಂದ ಹಿಡಿದು ರಾತ್ರಿ ಹನ್ನೊಂದು ಘಂಟೆಯವರೆಗೂ ಅವಿಚ್ಛಿನ್ನನಾಗಿ ಕಾರ್ಯಕಲಾಪಗಳಿರುತ್ತಿದ್ದುವು. ಅವರು ಅವಿಶ್ರಾಂತರಾಗಿ ಶ್ರಮಿಸಿ ಅವುಗಳನ್ನು ನೆರವೇರಿಸಿ, ರಾತ್ರಿಯಲ್ಲಿ ಮಾತ್ರ ಅತ್ಯಂತ ಮಿತವಾಗಿ ಕ್ಷೀರಾನ್ನ ಭೋಜನ ಮಾಡುತ್ತಿದ್ದರು. ವಿಜಯದಶಮಿಯಾದ ಮಾರನೆಯ ದಿನ ಏಕಾದಶೀ ಪ್ರಯುಕ್ತ ನಿರಾಹಾರ. ದ್ವಾದಶಿಯ ದಿನ ಪ್ರಾತಃಕಾಲ ಸ್ನಾನ ಸಂಧ್ಯಾವಂದನಾದಿ ಕರ್ಮಗಳನ್ನೆಲ್ಲ ಸಾಂಗವಾಗಿ ನೆರವೇರಿಸಿ ಜಪ ಮಾಡಿ ಪೂರೈಸಿದ ತರುವಾಯ ರಾಜರ್ಷಿಶ್ರೇಷ್ಠರಾದ ಮಹಾಪ್ರಭುಗಳವರು ಬಂಧು ಮಿತ್ರರೊಡನೆ ಔತಣದ ಭೋಜನ ಮಾಡುತ್ತಿದ್ದರು. ಅರಮನೆಯ ಅಂಬಾವಿಲಾಸದ ತೊಟ್ಟಿಯಲ್ಲಿ ನಡೆಯುತ್ತಿದ್ದ ಆ ಭೋಜನದ ಕಾಲದಲ್ಲಿ ಶ್ಲೋಕಗಳನ್ನು ಹೇಳಿದ ಅರಸು ಪಂಗಡದ ಮಹಾಶಯರಿಗೆಲ್ಲ ಶಾಲು ಜೋಡಿಗಳನ್ನು ಮಹಾಪ್ರಭುಗಳು ಕರುಣಿಸುತ್ತಿದ್ದರು.

**ಏಕಾದಶೀ ದ್ವಾದಶೀ ದಿನಗಳ ದರ್ಬಾರುಗಳು**

ವಿಜಯದಶಮಿಯ ಮಾರನೆಯ ದಿನ ಅರಮನೆಯ ಕಲ್ಯಾಣ ಮಂಟಪದಲ್ಲಿ ದರ್ಬಾರು ಬೆಳೆಯುತ್ತಿದ್ದಿತು. ಅಂದು ಮಹಾಪ್ರಭುಗಳವರು ಭದ್ರಾಸನದಲ್ಲಿ ಮಂಡಿಸಿ ನಜರು ಮುಜರೆಗಳು ನಡೆದ ಬಳಿಕ, ತಮ್ಮ ಅನುಗ್ರಹಕ್ಕೆ ಪಾತ್ರರಾದ ಸರ್ಕಾರಿ ಉದ್ಯೋಗಸ್ಥರಿಗೂ ಖಾಸಗಿ ಮಹಾಶಯರುಗಳಿಗೂ ಖಿಲ್ಲತ್ತುಗಳ ಸಮೇತವಾಗಿ ಬಿರುದುಗಳನ್ನು ಅನುಗ್ರಹಿಸುತ್ತಿದ್ದರು. ಅದರ ಮಾರನೆಯ ದಿವಸ ನಡೆಯುತ್ತಿದ್ದ ದರ್ಬಾರಿನಲ್ಲಿ ಸಾರ್ವಜನಿಕ ಸೇವಾಕರ್ತರಿಗೆ ಸುವರ್ಣಪದಕಗಳ ಮತ್ತು ಖಿಲ್ಲತ್ತುಗಳ ಬಹುಮಾನವೂ, ಸಂಸ್ಕೃತ ಮಹಾಪಾಠಶಾಲೆಯಲ್ಲಿ ವ್ಯಾಸಂಗಮಾಡಿ ತೇರ್ಗಡೆಹೊಂದಿದ್ದ

ವಿದ್ಯಾರ್ಥಿಗಳಿಗೆ ವಿದ್ವತ್ಸಂಭಾವನೆಗಳಾಗಿ ಪಾರಿತೋಷಿಕಗಳೂ ಲಭಿಸುತ್ತಿದ್ದುವು.

ಈಗಿನ ವೈಸ್ರಾಯಿಯವರಾದ ಲಾರ್ಡ್ ಲಿನ್‌ಲಿತ್ಗೋರವರು ತಮ್ಮ ಪತ್ನೀ ಪುತ್ರಿಯರೊಡನೆ ೧೯೩೯ನೆಯ ಇಸವಿ ಜನವರಿ ತಿಂಗಳು ೧೩ನೆಯ ತಾರೀಖಿನ ದಿನ ಬೆಳಗ್ಗೆ ಬೆಂಗಳೂರು ನಗರಕ್ಕೆ ದಯಮಾಡಿ, ಅದೇ ದಿನ ಮೈಸೂರು ನಗರಕ್ಕೆ ತೆರಳಿದರು. ಈ ಮಧ್ಯದಲ್ಲಿ ಶ್ರೀಮದ್ಯುವರಾಜರವರು ಮದರಾಸು ನಗರದಲ್ಲಿ "ನ್ಯುಮೋನಿಯಾ" ರೋಗದಿಂದ ನರಳುತ್ತಿದ್ದ ವಾರ್ತೆಯು ಬಂದು ವಿಶೇಷ ಕಳವಳಕ್ಕಾಸ್ಪದವಾಯಿತು. ಆಳಿದ ಮಹಾಸ್ವಾಮಿಯವರು, ಶ್ರೀಮದ್ಯುವರಾಣಿಯವರೇ ಮುಂತಾದವರೊಡನೆ ಮದರಾಸಿಗೆ ತೆರಳಿ, ಅವರಿಗೆ ಗುಣಮುಖವಾದುದನ್ನು ಕಂಡು ಸಮಾಧಾನ ಹೊಂದಿ, ಜನವರಿ ೧೦ನೆಯ ತಾರೀಖು ಬೆಂಗಳೂರಿಗೆ ಬಂದು, ಅಲ್ಲಿಂದ ಮೈಸೂರು ನಗರಕ್ಕೆ ಹಿಂತಿರುಗಿದರು. ಬೆಂಗಳೂರು ಮೈಸೂರು ನಗರಗಳಲ್ಲಿ ವೈಸ್ರಾಯಿಯವರಿಗೆ ಅತ್ಯಂತ ಆದರದ ಸ್ವಾಗತವು ಲಭಿಸಿತು; ಬೆಂಗಳೂರು ಮೈಸೂರು ನಗರ ಸಭೆಗಳವರು ವಿಜ್ಞಾಪನಾ ಪತ್ರಿಕೆಗಳನ್ನು ಸಮರ್ಪಿಸಿದರು. ಮೈಸೂರು ನಗರವು ಇತರ ನಗರಗಳಿಗೆ ಮಾದರಿಯೆಂದು ವೈಸ್ರಾಯಿಯವರು ಕೊಂಡಾಡಿದರು; ಅಲ್ಲದೆ ಲಲಿತಮಹಲಿನಲ್ಲಿ ಮಹಾಪ್ರಭುಗಳವರು ಏರ್ಪಡಿಸಿದ್ದ ಔತಣಕೂಟದ ಸಂಬಂಧವಾಗಿ ಮಾಡಿದ ಭಾಷಣದಲ್ಲಿ, ಮಹಾಸ್ವಾಮಿಯವರ ಕೀರ್ತಿಯು ಪ್ರಪಂಚ ವ್ಯಾಪಿಯಾಗಿದ್ದ ಅಂಶವನ್ನೂ ಮಹಾಪ್ರಭುಗಳವರ ವಿಚಕ್ಷಣೆಯ ರಾಜ್ಯಭಾರದಲ್ಲಿ ಮಾದರಿ ಸಂಸ್ಥಾನವಾಗಿದ್ದ ಮೈಸೂರು ಸಂಸ್ಥಾನವು ಸರ್ವತೋಮುಖವಾಗಿ ಅಭಿವೃದ್ಧಿ ಹೊಂದುತ್ತಿದ್ದ ಅಂಶವನ್ನೂ ಕುರಿತು ಶ್ಲಾಘಿಸಿದರು.

**ವೈಸ್ರಾಯಿಯವರ ಆಗಮನ**

ಕಾರಾಪುರದಲ್ಲಿ ಖೆಡ್ಡಾ ಕಾರ್ಯಕಲಾಪಗಳು ಅತ್ಯಂತ ಸಮರ್ಪಕವಾಗಿ ನಡೆದಿದ್ದುವು. ವೈಸ್ರಾಯಿ ದಂಪತಿಗಳೂ, ಅವರ ಪರಿವಾರದವರೂ, ಮಹಾಪ್ರಭುಗಳವರೂ, ಬಿಕನೀರು ಸಂಸ್ಥಾನದ ಶ್ರೀಮನ್ಮಹಾರಾಜರವರೂ, ಮದರಾಸು ಗವರ್ನರವರೇ ಮುಂತಾದ ಇತರ ಅತಿಥಿಗಳೂ, ದಿವಾನ್‌ರವರೇ ಮುಂತಾದ ಅಧಿಕಾರಿಗಳೂ, ಕಪಿನೀ ನದೀ ತೀರದ ಪ್ರಶಸ್ತ ಪ್ರದೇಶದಲ್ಲಿ ಸುಖಾಸನಗಳಲ್ಲಿ ಕುಳಿತು, ನದಿಯ ಎದುರು ಪಾರ್ಶ್ವದಿಂದ ಕಾಡಾನೆಗಳನ್ನು ಎರಡು ಸಾವಿರ ಷಿಕಾರಿಗಳೂ ಅಧಿಕಾರಿಗಳೂ ಅಟ್ಟಿಸಿಕೊಂಡು ಬಂದು ಅವು ನದೀ ಮಾರ್ಗವಾಗಿ ಸಾಗುವಂತೆ

ಮಾಡಿದ ಸಾಹಸ ಕೃತ್ಯವನ್ನು ಕಂಡು ಹರ್ಷಿಸಿದರು. ದೊಡ್ಡ ದೊಡ್ಡ ಆನೆಗಳೂ ಮರಿಯಾನೆಗಳೂ ಹಿಂಡಿನ ಸಲಗವನ್ನು ಹಿಂಬಾಲಿಸುತ್ತ ಜಲ ಕ್ರೀಡೆಯ ಲೀಲೆಯಾಡುತ್ತ ಮುಂದುವರಿದ ರಮಣೀಯ ದೃಶ್ಯವನ್ನು ನೋಡಿ ಹಿಗ್ಗದವರೇ ಇರಲಿಲ್ಲ. ಆನೆಗಳನ್ನಟ್ಟಿಕೊಂಡು ಹೋಗುತ್ತಿದ್ದ ವರು ಪ್ರಾಣಾಪಾಯಕ್ಕೂ ಸಿದ್ಧರಾಗಿ ಅಸೀಮ ಧೈರ್ಯದಿಂದ ವರ್ತಿಸು ತ್ತಿದ್ದ ಕೌಶಲ್ಯವನ್ನು ಕಂಡು ಎಲ್ಲರೂ ಆಶ್ಚರ್ಯ ಚಕಿತರಾದರು. ಮಹಾ ಪ್ರಭುಗಳವರು ಸುಪ್ರೀತರಾಗಿ ಅತಿಥಿಗಳೊಡನೆಯೂ, ಖೆಡ್ಡಾ ಕಾರ್ಯ ಕಲಾಪಗಳನ್ನು ಯಶಸ್ವಿಯಾಗಿ ನೆರವೇರಿಸಿದ ಅಧಿಕಾರಿಗಳೊಡನೆಯೂ, ಭಾವಚಿತ್ರವನ್ನು ತೆಗೆಸಿಕೊಂಡು ಸಾಹಸದಿಂದ ಕೆಲಸಮಾಡಿದವರಿಗೆ ಪಾರಿತೋಷಿಕಗಳನ್ನನುಗ್ರಹಿಸಿದರು. ವೈಸ್ರಾಯಿಯವರು ಎರಡು ಕಾಡು ಕೋಣಗಳನ್ನು ಬೇಟೆ ಮಾಡಿದರು. ಅವರು ತಮ್ಮ ಪ್ರವಾಸವು ಬಹಳ ಹಿತವಾಗಿಯೂ ಹರ್ಷದಾಯಕವಾಗಿಯೂ ಇದ್ದುದಕ್ಕಾಗಿ, ಆಳಿದ ಮಹಾ ಸ್ವಾಮಿಯವರಿಗೆ ತಮ್ಮ ಕೃತಜ್ಞತೆಯನ್ನು ಸೂಚಿಸಿ ಮೈಸೂರು ಸಂಸ್ಥಾನ ದಿಂದ ತೆರಳಿದರು.

ಜೋಗದ ಬಳಿಯಲ್ಲಿ ಶರಾವತೀ ನದಿಯು ೯೦೦ ಅಡಿಗಳ ಎತ್ತರ ದಿಂದ ಧುಮ್ಮಿಕ್ಕುವ ಜಲಪಾತವು (ಗೇರುಸೊಪ್ಪೆ ಜಲಪಾತವು) ಭರತ ಖಂಡದ ಭವ್ಯತಮವಾದ ಸುಂದರ ದೃಶ್ಯಗಳ ಲ್ಲೊಂದಾಗಿದೆ. ಅದರ ಬಳಿಯಲ್ಲಿ ವಿದ್ಯುಚ್ಛಕ್ತಿ ಯನ್ನುತ್ಪತ್ತಿಮಾಡುವ ವ್ಯವಸ್ಥೆಯು ನಡೆದರೆ, ಮೈಸೂರು ಸಂಸ್ಥಾನದ ಮತ್ತು ಮುಂಬಯಿ ಪ್ರಾಂತದ ಅಭ್ಯುದಯ ಸಾಧನೆಗೆ ಮತ್ತಷ್ಟು ಸಹಾಯವಾಗುತ್ತದೆಂಬ ವಿಷಯವನ್ನು ಗ್ರಹಿಸಿ ಒಂದೂವರೆ ಕೋಟಿ ರೂಪಾಯಿಗಳ ವೆಚ್ಚದಲ್ಲಿ ಕಾರ್ಯಕ್ರಮವನ್ನು ಕೈಕೊಳ್ಳಬಹುದೆಂದು ಮಹಾಪ್ರಭುಗಳವರು ಅಪ್ಪಣೆ ಕೊಡಿಸಿದರು. ಆ ಸಂಬಂಧದ ಕಾರ್ಯಾರಂಭ ಸೂಚಕವಾದ ಶಿಲಾ ಸ್ಥಾಪನೆಯ ಮಹೋತ್ಸವವನ್ನು ೧೯೩೯ನೆಯ ಇಸವಿ ಫೆಬ್ರವರಿ ತಿಂಗಳು ೫ನೆಯ ತಾರೀಖು ಭಾನುವಾರದ ದಿನ ಅವರು ತಮ್ಮ ಅಮೃತಹಸ್ತದಿಂದ ನೆರವೇರಿಸಿದರು.

**ಶರಾವತಿಯ ಜಲಪಾತದ ಬಳಿ ವಿದ್ಯುಚ್ಛಕ್ತಿ ಉತ್ಪತ್ತಿಯ ವ್ಯವಸ್ಥೆ**

ಶ್ರೀಮದ್ಯುವರಾಜ ಶ್ರೀಕಂಠೀರವ ನರಸಿಂಹರಾಜ ಒಡೆಯರವರು ತಮ್ಮ ಪುತ್ರ ಪುತ್ರಿಯರನ್ನೂ, ಶ್ರೀಮದ್ಯುವರಾಣಿಯವರನ್ನೂ, ತಮ್ಮ ಸೊಸೆಯವರನ್ನೂ, ಅನೇಕ ಮಂದಿ ಅಧಿಕಾರಿಗಳನ್ನೂ, ಪ್ರಖ್ಯಾತರಾದ

ಭಾರತೀಯ ಸಂಗೀತ ಕೋವಿದರನ್ನೂ, ಊಳಿಗದವರನ್ನೂ ಕರೆದುಕೊಂಡು ೧೯೩೯ನೆಯ ಇಸವಿ ಜೂಲೈ ತಿಂಗಳು ೧೩ನೆಯ ತಾರೀಖಿನ ದಿನ

**ಶ್ರೀಮದ್ಯುವರಾಜರವರೇ ಮುಂತಾದವರ ಯೂರೋಪು ಸಂಚಾರ**

ಮುಂಬಯಿ ನಗರದಿಂದ ಯೂರೋಪು ಖಂಡಕ್ಕೆ ಪ್ರಯಾಣಮಾಡಿದರು. ಅವರೆಲ್ಲರೂ ರೋಂ ನಗರದಲ್ಲಿ ಕ್ರೈಸ್ತರ ಪೋಪ್ ಗುರುಗಳನ್ನು ಸಂದರ್ಶಿಸಿದಾಗ ಪೋಪ್ ಗುರುಗಳು ಆಳಿದ ಮಹಾಸ್ವಾಮಿಯವರಲ್ಲಿ ಮತ್ತು ಶ್ರೀಮದ್ಯುವರಾಜರವರಲ್ಲಿ ತಮಗಿದ್ದ ಪ್ರೀತಿ ವಿಶ್ವಾಸಗಳೆಷ್ಟೆಂಬುದನ್ನು ವ್ಯಕ್ತಗೊಳಿಸಿದರು. ಭಾರತೀಯ ಸಂಗೀತವನ್ನು ಕೇಳಿ ಅವರು ಅತಿಶಯವಾಗಿ ಹರ್ಷಿಸಿದರು. ಶ್ರೀಮದ್ಯುವರಾಜರವರು ತಮ್ಮೊಡನೆ ಕರೆದುಕೊಂಡು ಹೋಗಿದ್ದ ಸಂಗೀತ ಕೋವಿದರಿಂದ ತಾವು ದಯಮಾಡಿದ ನಾನಾ ನಗರಗಳಲ್ಲಿಯೂ ಕಚೇರಿ ಮಾಡಿಸಿ ಭಾರತೀಯ ಸಂಗೀತದಲ್ಲಿ ಅಲ್ಲಿಯವರಿಗೆ ಆದರಾಸಕ್ತಿಗಳು ಹೆಚ್ಚುವಂತೆ ಮಾಡಿದರು. ಅಲ್ಲದೆ "ರೇಡಿಯೋ" ಮೂಲಕ ಯೂರೋಪು ಖಂಡದವರಿಗೆಲ್ಲ ಭಾರತೀಯ ಸಂಗೀತ ಶ್ರವಣ ಮಾಡಿಸಿ ಕೀರ್ತಿಭಾಜನರಾದರು. ಶ್ರೀಮದ್ಯುವರಾಜರವರೊಬ್ಬರು ಹೊರತು ಉಳಿದವರೆಲ್ಲರೂ ನವರಾತ್ರಿ ಪಾಡ್ಯಮಿಯ ದಿನ ಮೈಸೂರು ನಗರಕ್ಕೆ ಹಿಂತಿರುಗಿದರು. ಯೂರೋಪಿನ ಘೋರ ಯುದ್ಧದ ಭಯಂಕರ ಸನ್ನಿವೇಶದಲ್ಲಿ ಅವರೆಲ್ಲರೂ ಸುರಕ್ಷಿತವಾಗಿ ವಿಮಾನ ಪ್ರಯಾಣ ಮಾಡಿ ಮೈಸೂರಿಗೆ ಕ್ಷೇಮವಾಗಿ ಬಂದುದರಿಂದ ಮಹಾಪ್ರಭುಗಳವರಿಗೆ ಅಪರಿಮಿತವಾದ ಸಂತೋಷವುಂಟಾಯಿತು.

ರಾಜಕೀಯ ಸುಧಾರಣಾ ಸಮಿತಿಯವರು ೧೯೩೯ನೆಯ ಇಸವಿ ಆಗಸ್ಟ್ ೨೪ನೆಯ ತಾರೀಖಿನ ದಿನ ಸರ್ಕಾರದವರಿಗೆ ಸಮರ್ಪಿಸಿದ ವರದಿ

**ರಾಜಕೀಯ ಸುಧಾರಣೆಗಳು**

ಯನ್ನು ಪರಿಶೀಲಿಸಿದ ನಂತರ, ಆಳಿದ ಮಹಾಸ್ವಾಮಿಯವರು ೧೯೩೯ನೆಯ ಇಸವಿ ನವೆಂಬರು ತಿಂಗಳು ೬ನೆಯ ತಾರೀಖಿನ ದಿನ ರಾಜಶಾಸನ ಪತ್ರಿಕೆಯನ್ನು ಹೊರಡಿಸಿ ರಾಜಕೀಯ ಸುಧಾರಣೆಗಳನ್ನನುಗ್ರಹಿಸಿದರು. ಅವರ ಆಜ್ಞೆಗನುಸಾರವಾಗಿ ಸರ್ಕಾರದವರು ರಾಜಕೀಯ ಸುಧಾರಣಾ ಸಮಿತಿಯವರ ವರದಿಯ ಮೇಲೆ ಅದೇ ದಿನ ತಮ್ಮ ನಿರೂಪವನ್ನು ಪ್ರಕಟಿಸಿದರು. ಸರ್ಕಾರದವರೊಡನೆ ಸಂಸ್ಥಾನದ ಆಡಳಿತ ನಿರ್ವಹಣದಲ್ಲಿ ಪ್ರಜಾಪ್ರತಿನಿಧಿಗಳು ಮತ್ತಷ್ಟು ಅಧಿಕವಾಗಿ ಭಾಗಿಗಳಾಗುವಂತೆ ಅವಕಾಶವನ್ನು ಕಲ್ಪಿಸುವುದೇ ಈ ಸುಧಾರಣೆಗಳ ಆಶಯ.

ಈ ರಾಜಕೀಯ ಸುಧಾರಣೆಗಳ ಪ್ರಕಾರ, ಪ್ರಜಾಪ್ರತಿನಿಧಿ ಸಭೆಯೂ, ನ್ಯಾಯವಿಧಾಯಕ ಸಭೆಯೂ, ಈಗಿರುವಂತೆ ಎರಡು ಬೇರೆ ಬೇರೆ ಆಕ್ಟುಗಳ ಮೇರೆಗೆ ಕೆಲಸ ನಡೆಯಿಸುವುದಕ್ಕೆ ಪ್ರತಿಯಾಗಿ ಹೆಚ್ಚು ಅಧಿಕಾರಗಳನ್ನು ಪಡೆದು ಹೆಚ್ಚು ಸಾಮರಸ್ಯದಿಂದ ಒಂದೇ ಆಕ್ಟಿನ ಮೇರೆಗೆ ತಮ್ಮ ಕಾರ್ಯಗಳನ್ನು ನಿರ್ವಹಿಸುತ್ತವೆ. ಉಭಯ ಸಭೆಗಳ ಸದಸ್ಯರಿಗೂ ಭಾಷಣ ಸ್ವಾತಂತ್ರ್ಯವಿರುವಂತೆಯೂ, ನಿರ್ದಿಷ್ಟವಾದ ಕೆಲವು ಸನ್ನಿವೇಶಗಳಲ್ಲಿ ಅವರ ದಸ್ತಗಿರಿ ನಡೆಯಕೂಡದ ವಿನಾಯಿತಿಯಿರುವಂತೆಯೂ, ಮತ್ತು ಒಂದೊಂದು ಸಲಕ್ಕೆ ಈಗಿರುವ ಮೂರೇ ವರ್ಷಗಳ ಸದಸ್ಯತ್ವದ ಅವಧಿಯನ್ನು ಇನ್ನುಮುಂದೆ ನಾಲ್ಕು ವರ್ಷಗಳಿಗೆ ಅಧಿಕಗೊಳಿಸುವಂತೆಯೂ ವ್ಯವಸ್ಥೆಯಾಗಿದೆ. ಪ್ರಜಾಪ್ರತಿನಿಧಿ ಸಭೆಯು ಮಂತ್ರಾಲೋಚನೆ ಹೇಳುವ ಮತ್ತು ಅಭಿಪ್ರಾಯ ತಿಳಿಸುವ ಅದರ ಸ್ವಭಾವಕ್ಕೆ ಯಾವುದೊಂದು ಕುಂದಕವೂ ಇಲ್ಲದಂತೆ, ಅದರ ಅಧಿಕಾರಗಳನ್ನು ಹೆಚ್ಚಿಸಲಾಗಿದೆ. ಅಲ್ಪಸಂಖ್ಯಾತ ಪಂಗಡಗಳಿಗೂ, ಸ್ತ್ರೀಯರಿಗೂ, ಸಂಪದಭಿವೃದ್ಧಿ ಸಾಧಕಗಳಾದ ಇತರ ವಿಶೇಷೋದ್ದೇಶ ಪಂಗಡಗಳಿಗೂ ಹೆಚ್ಚಿನ ಪ್ರಾತಿನಿಧ್ಯವುಂಟಾಗಲನುಕೂಲಿಸುವಂತೆ ಪ್ರಜಾಪ್ರತಿನಿಧಿಸಭೆಯ ಸದಸ್ಯರ ಸಂಖ್ಯೆಯನ್ನು ೨೭೫ ರಿಂದ ೩೧೦ ಕ್ಕೂ, ನ್ಯಾಯವಿಧಾಯಕ ಸಭೆಯ ಸದಸ್ಯರ ಸಂಖ್ಯೆಯನ್ನು ೫೦ ರಿಂದ ೬೮ ಕ್ಕೂ ಹೆಚ್ಚಿಸಲಾಗಿದೆ. ನ್ಯಾಯವಿಧಾಯಕ ಸಭೆಯ ೬೮ ಮಂದಿ ಸದಸ್ಯರಲ್ಲಿ ೪೪ ಮಂದಿ ಸದಸ್ಯರು ಚುನಾಯಿತ ಸದಸ್ಯರೇ ಆಗಿರುವಂತೆ ವ್ಯವಸ್ಥೆಯಾಗಿದೆ. ನ್ಯಾಯವಿಧಾಯಕ ಸಭೆಯು, ರಾಜಕೀಯ ಸುಧಾರಣೆಗಳ ಮೇರೆಗೆ ಪುನರ್ವ್ಯವಸ್ಥಿತವಾದ ಬಳಿಕ ನಾಲ್ಕು ವರ್ಷಗಳ ಕಾಲದ ಪ್ರಥಮಾವಧಿಯಲ್ಲಿ ಶ್ರೀಮನ್ಮಹಾರಾಜರವರು ನೇಮಕ ಮಾಡಿದವರು ಅದರ ಅಧ್ಯಕ್ಷರಾಗಿರುವರು. ಅನಂತರ ಆ ಸಭೆಯಿಂದ ಚುನಾಯಿತರಾದವರೇ ಅಧ್ಯಕ್ಷರಾಗಿರುವರು. ಎಂದರೆ, ಈಗಿನಂತೆ ದಿವಾನ್‌ರವರು ಅಧ್ಯಕ್ಷರಾಗಿರದೆ ಸರ್ಕಾರಿ ಉದ್ಯೋಗಸ್ಥರಲ್ಲದವರೇ ಅದರ ಅಧ್ಯಕ್ಷರಾಗಿರುವರು. ನ್ಯಾಯವಿಧಾಯಕ ಸಭೆಗೆ ಸರ್ಕಾರಿ ಉದ್ಯೋಗಸ್ಥರಲ್ಲದವರೊಬ್ಬರು ಉಪಾಧ್ಯಕ್ಷರಾಗಿದ್ದು ಅವರನ್ನು ಸದಸ್ಯರೇ ಚುನಾಯಿಸುವ ವ್ಯವಸ್ಥೆ ನಡೆಯುವುದು. ಕಾನೂನು ರಚನೆ, ಆಯವ್ಯಯಗಳ ಅಂದಾಜು ಪತ್ರವಾದ "ಬಡ್ಜೆಟ್" ಪರಿಶೀಲನೆ, ಮುಂತಾದ ವಿಚಾರಗಳಲ್ಲಿ ಪ್ರಜಾಪ್ರತಿನಿಧಿ ಸಭೆಗೂ ನ್ಯಾಯವಿಧಾಯಕ ಸಭೆಗೂ ಈಗಿರುವ ಅಧಿಕಾರಗಳ ವ್ಯಾಪ್ತಿಯನ್ನು ಹೆಚ್ಚಿಸುವ ಏರ್ಪಾಡು ನಡೆಯುವುದು. ಪ್ರಜಾಪ್ರತಿನಿಧಿ ಸಭೆಯ ಸದಸ್ಯರುಗಳು

ಸಭೆಯ ಅಧಿವೇಶನಗಳಿಗೆ ಕಳುಹಿಸಬಹುದಾದ ಅರಿಕೆಗಳು, ಪ್ರಶ್ನೆಗಳು ಮತ್ತು ನಿರ್ಣಯಗಳು ಇದುವರೆಗಿನಂತೆ ಪರಿಮಿತ ಸಂಖ್ಯೆಯಲ್ಲಿರಬೇಕಾದ ನಿರ್ಬಂಧವಿರುವುದಿಲ್ಲ. ಪ್ರಜಾಪ್ರತಿನಿಧಿ ಸಭೆಯ ಅಧಿವೇಶನಗಳು ನಡೆಯುವ ದಿನಗಳನ್ನೂ ಹೆಚ್ಚಿಸಲಾಗುವುದು. ಪ್ರಜಾಪ್ರತಿನಿಧಿ ಸಭೆಗೂ ನ್ಯಾಯವಿಧಾಯಕ ಸಭೆಗೂ ಸದಸ್ಯರುಗಳನ್ನು ಚುನಾಯಿಸಲು ಅಭಿಮತ ಕೊಡುವ ಅಧಿಕಾರ ಬರಬೇಕಾದರೆ, ಇರಬೇಕಾದ ಸ್ವತ್ತಿನ ಸಂಬಂಧವಾದ ಅರ್ಹತೆಗಳನ್ನೂ ವಿದ್ಯಾಭ್ಯಾಸ ಸಂಬಂಧವಾದ ಅರ್ಹತೆಗಳನ್ನೂ ಮತ್ತಷ್ಟು ತಗ್ಗಿಸುವ ಏರ್ಪಾಡಾಗಿದೆ. ಅಲ್ಪಸಂಖ್ಯಾತ ಪಂಗಡಗಳಿಗೂ ಮತ್ತು ಕೆಲವು ವಿಶೇಷೋದ್ದೇಶ ಪಂಗಡಗಳಿಗೂ ಅಧಿಕತರವಾದ ಅನುಕೂಲಗಳುಂಟಾಗುವಂತೆ ಚುನಾವಣೆಯ ವಿಧಾನಗಳು ಸಮಾಚೀನ ರೀತಿಯಲ್ಲಿ ಮಾರ್ಪಾಟಾಗಿವೆ. ಇನ್ನುಮುಂದೆ, ಮಂತ್ರಾಲೋಚನಾ ಸಭೆಯಲ್ಲಿ (" ಎಗ್ಜಿಕ್ಯುಟಿವ್ ಕೌನ್ಸಿಲ್ ") ದಿವಾನ್‌ರವರೊಡನೆ ನಾಲ್ವರಿಗೆ ಕಡಮೆಯಿಲ್ಲದಷ್ಟು ಮಂದಿ ಸಚಿವರುಗಳಿರಬೇಕೆಂದೂ, ಆ ನಾಲ್ವರು ಸಚಿವರುಗಳಲ್ಲಿ ಇಬ್ಬರಿಗೆ ಕಡಮೆಯಿಲ್ಲದಷ್ಟು ಮಂದಿಗಳನ್ನು ಪ್ರಜಾಪ್ರತಿನಿಧಿ ಸಭೆಯ ಮತ್ತು ನ್ಯಾಯವಿಧಾಯಕ ಸಭೆಯ ಚುನಾಯಿತ ಸದಸ್ಯರುಗಳಲ್ಲಿ ಶ್ರೀಮನ್ಮಹಾರಾಜರವರು ಆರಿಸಿ ನೇಮಕ ಮಾಡಬೇಕೆಂದೂ ಏರ್ಪಾಡಾಗಿದೆ. ಹಾಗೆ ನೇಮಕವಾದ ಸಚಿವರುಗಳಿಗೆ ಸರ್ಕಾರದ ಯಾವ ಶಾಖೆಯ ಆಡಳಿತ ನಿರ್ವಹಣದ ವಿಷಯವನ್ನಾದರೂ ನೋಡಿಕೊಳ್ಳುವ ಅಧಿಕಾರವನ್ನು ವಹಿಸುವುದಕ್ಕೆ ಅವಕಾಶವಿದೆ.

**ಚಿತ್ರದುರ್ಗ ಡಿಸ್ಟ್ರಿಕ್ಟ್ ನಲ್ಲಿ ಸಂಚಾರ**

ಆಳಿದ ಮಹಾಸ್ವಾಮಿಯವರು ೧೯೪೦ನೆಯ ಇಸವಿ ಜನವರಿ ತಿಂಗಳು ೩ನೆಯ ತಾರೀಖಿನ ದಿನ ಚಿತ್ರದುರ್ಗ ಡಿಸ್ಟ್ರಿಕ್ಟಿಗೆ ದಯಮಾಡಬೇಕಾಗಿದ್ದಿತು. ಆದರೆ ಅವರ ಸೋದರಸೊಸೆಯವರಾದ ಶ್ರೀಮತಿ ದೊಡ್ಡಮ್ಮಣ್ಣಿಯವರು ರೋಗಗ್ರಸ್ತರಾಗಿದ್ದ ಕಾರಣ ಪ್ರಯಾಣವು ಆಗ ನೆರವೇರದೆಹೋಯಿತು. ಶ್ರೀಮತಿ ದೊಡ್ಡಮ್ಮಣ್ಣಿಯವರ ಅಕಾಲ ಮರಣದ ದುಃಖವು ಅವರಿಗೆ ಒದಗಿತು.

ಆಳಿದ ಮಹಾಸ್ವಾಮಿಯವರು ಈಗಿನ ಮಹಾಪ್ರಭುಗಳವರೊಡನೆಯೂ ದಿವಾನ್‌ರವರೇ ಮುಂತಾದವರೊಡನೆಯೂ ಫೆಬ್ರವರಿ ೨೨ನೆಯ ತಾರೀಖು ದಾವಣಗೆರೆಗೆ ಹೋಗಿ, ಪೌರ ಸಭೆಯವರ ವಿಜ್ಞಾಪನಾ ಪತ್ರಿಕೆಯನ್ನು ಸ್ವೀಕರಿಸಿ ಅದಕ್ಕೆ ಪ್ರತ್ಯುತ್ತರವಾಗಿ ಅಮೋಘವಾದೊಂದು

ಭಾಷಣವನ್ನು ದಯಪಾಲಿಸಿದರು. ದಾವಣಗೆರೆಯಲ್ಲಿ ಅವರ ದರ್ಶನೋತ್ಸುಕರಾಗಿ ಕೊಲ್ಲಾಪುರ, ಸಾಂಗಲಿ, ರಾಣಿಬೆನ್ನೂರು, ಹುಬ್ಬಳ್ಳಿ, ಕಾರವಾರ, ಮುಂತಾದ ದೂರದ ಪಟ್ಟಣಗಳಿಂದ ಕೂಡ ಬಂದಿದ್ದ ಬಹುಮಂದಿಗಳೂ ಸೇರಿ ಲಕ್ಷಾಂತರ ಜನರು ಕಿಕ್ಕಿರಿದು ತುಂಬಿದ್ದರು. ಮಹಾಪ್ರಭುಗಳವರು ೨೩ನೆಯ ತಾರೀಖು ಚಿತ್ರದುರ್ಗಕ್ಕೆ ದಯಮಾಡಿ ಪೌರಸಭೆಯವರ ವಿಜ್ಞಾಪನಾ ಪತ್ರಿಕೆಗೆ ಪ್ರತ್ಯುತ್ತರವಾಗಿ ಸ್ಫೂರ್ತಿದಾಯಕವಾದ ಭಾಷಣವನ್ನು ಮಾಡಿ ಆ ದಿನ ಸಾಯಂಕಾಲ ವಿದ್ಯುದ್ದೀಪೋತ್ಸವವನ್ನು ನೆರವೇರಿಸಿದರು. ಮಾರನೆಯ ದಿನ ಕೆಲ್ಲೋಡಿನ ಬಳಿಯ ಶ್ರೀಕೃಷ್ಣರಾಜೇಂದ್ರ ಸೇತುವಿನ ಮೇಲೆ ಸಂಚಾರ ಸಮಾರಂಭಣ ಮಹೋತ್ಸವವನ್ನು ನೆರವೇರಿಸಿದರು.

**ಶ್ರವಣಬೆಳಗೊಳಕ್ಕೆ ದಯಮಾಡಿದುದು**

ಆಳಿದ ಮಹಾಸ್ವಾಮಿಯವರು ೧೯೪೦ನೆಯ ಇಸವಿ ಫೆಬ್ರವರಿ ತಿಂಗಳು ೨೬ನೆಯ ತಾರೀಖಿನ ದಿನ ಶ್ರವಣಬೆಳಗೊಳದಲ್ಲಿ ಶ್ರೀ ಗೋಮಟೇಶ್ವರ ಸ್ವಾಮಿಯವರಿಗೆ ನಡೆದ ಮಹಾಮಸ್ತಕಾಭಿಷೇಕ ಕಾಲದಲ್ಲಿ ಈಗಿನ ಮಹಾಪ್ರಭುಗಳವರೊಡನೆ ಅಲ್ಲಿಗೆ ದಯಮಾಡಿದ್ದರು. ಅದೇ ದಿನ ಜೈನ ಸಮ್ಮೇಳನವನ್ನು ಸಮಾರಂಭಣಗೊಳಿಸಿ ದಯ ಪಾಲಿಸಿದ ಭಾಷಣದಲ್ಲಿ ಅವರು ತಮಗಿದ್ದ ಜೈನಧರ್ಮ ಪ್ರೇಮವನ್ನು ಮನೋಜ್ಞವಾಗಿ ಸೂಚಿಸಿದರು.

**ಭ್ರಾತೃವಿಯೋಗ**

ದೇಹಾರೋಗ್ಯವನ್ನು ಉತ್ತಮಪಡಿಸಿಕೊಳ್ಳಲು ಯೂರೋಪು ಖಂಡಕ್ಕೆ ದಯಮಾಡಿದ್ದ ಶ್ರೀಮದ್ಯುವರಾಜ ಶ್ರೀಕಂಠೀರವ ನರಸಿಂಹರಾಜ ಒಡೆಯರವರು ಮುಂಬಯಿ ನಗರಕ್ಕೆ ಹಿಂತಿರುಗಿದ ಮೇಲೆ ೧೯೪೦ನೆಯ ಇಸವಿ ಮಾರ್ಚಿ ತಿಂಗಳು ೯ನೆಯ ತಾರೀಖು ಶನಿವಾರದ ದಿನ ನ್ಯುಮೋನಿಯಾ ಜ್ವರಪೀಡಿತರಾಗಿ ೧೧ನೆಯ ತಾರೀಖು ಸೋಮವಾರದ ದಿನ ಬೆಳಗಿನಜಾವ ಎರಡೂವರೆ ಘಂಟೆಗೆ ದಿವಂಗತರಾದರು. ಆ ದಾರುಣ ವಾರ್ತೆಯಿಂದ ಮೈಸೂರು ಸಂಸ್ಥಾನವೇ ಗೋಳಿಟ್ಟಿತು. ಆಳಿದ ಮಹಾಸ್ವಾಮಿಯವರೂ ರಾಜಕುಟುಂಬದವರೂ ಅವರ ವಿಯೋಗ ದುಃಖದಿಂದ ಸಂತಪ್ತರಾದರು. ಸಂಸ್ಥಾನದಲ್ಲೆಲ್ಲ ನಾನಾಸ್ಥಳಗಳಲ್ಲಿ ಸಂತಾಪಸೂಚಕ ಸಭೆಗಳು ನಡೆದುವು. ಪ್ರಜೆಗಳು ತಮ್ಮ ಸಂತಾಪವನ್ನೂ ಸಹಾನುಭೂತಿಯನ್ನೂ ಆಳಿದ ಮಹಾ ಸ್ವಾಮಿಯವರಿಗೆ ಶ್ರುತಪಡಿಸಿದರು. ದಿವಂಗತರಾದ ಶ್ರೀಮದ್ಯುವರಾಜ ಶ್ರೀಕಂಠೀರವ ನರಸಿಂಹರಾಜ ಒಡೆಯರವರ ಕಳೇಬರಕ್ಕೆ ಮುಂಬಯಿ

ನಗರದಲ್ಲಿ ದಹನ ಸಂಸ್ಕಾರವಾದ ಬಳಿಕ, ಅಸ್ತಿಗಳೇ ಮುಂತಾದುವು ಗಳನ್ನು ಮೈಸೂರು ನಗರದಲ್ಲಿ ಸಮಸ್ತ ಮರ್ಯಾದೆಗಳೊಡನೆ ಮೆರೆವಣಿಗೆ ಯಲ್ಲಿ ಮಧುವನಕ್ಕೆ ಸಾಗಿಸಿಕೊಂಡುಹೋದ ಬಳಿಕ ಈಗಿನ ಮಹಾಪ್ರಭು ಗಳವರು ವಿಧ್ಯುಕ್ತ ರೀತಿಯಲ್ಲಿ ಉತ್ತರಕ್ರಿಯೆಗಳನ್ನು ನೆರವೇರಿಸಿದರು.

ಆಳಿದ ಮಹಾಸ್ವಾಮಿಯವರು ೧೯೪೦ನೆಯ ಇಸವಿ ಮಾರ್ಚಿ ತಿಂಗಳು ೨೮ನೆಯ ತಾರೀಖಿನ ದಿನ ಶ್ರೀಮದ್ಯುವರಾಜಕುಮಾರ ಶ್ರೀ ಜಯ ಚಾಮರಾಜ ಒಡೆಯರ್ ಬಹದ್ದೂರರವರಿಗೆ ಯುವ ರಾಜ ಪದವಿಯನ್ನಿತ್ತ ಸಂತೋಷ ವಾರ್ತೆಯು ಸರ್ಕಾರಿ ಗೆಜೆಟ್ಟಿನ ವಿಶೇಷ ಪತ್ರಿಕೆಯಲ್ಲಿ ಪ್ರಕಟ ವಾಯಿತು. ಸಂಸ್ಥಾನದಲ್ಲಿ ಎಲ್ಲೆಲ್ಲಿಯೂ ಪ್ರಜೆಗಳು ಸಂತೋಷ ಸೂಚಕ ಸಭೆಗಳನ್ನು ನಡೆಯಿಸಿ ರಾಜಭಕ್ತಿಪೂರ್ವಕವಾದ ಅಭಿನಂದನಾತಿಶಯಗಳನ್ನು ಆಗಿನ ಶ್ರೀಮದ್ಯುವರಾಜರವರಿಗೆ (ಎಂದರೆ, ಈಗಿನ ಶ್ರೀಮನ್ಮಹಾರಾಜರವರಿಗೆ) ಶ್ರುತಪಡಿಸಿದರು.

**ಯುವರಾಜ ಪದವೀ ಪ್ರದಾನ**

ಆಳಿದ ಮಹಾಸ್ವಾಮಿಯವರು ಈಗಿನ ಮಹಾಪ್ರಭುಗಳವರಾದ ಶ್ರೀ ಜಯ ಚಾಮರಾಜ ಒಡೆಯರವರೊಡನೆ ಕನ್ನಡ ಸಾಹಿತ್ಯ ಪರಿಷತ್ತಿನ ರಜತ ಮಹೋತ್ಸವವನ್ನು ಸಮಾರಂಭಣಗೊಳಿಸು ವುದಕ್ಕಾಗಿ ಬೆಂಗಳೂರಿನ ನಗರ ಭವನಕ್ಕೆ ೧೯೪೦ನೆಯ ಇಸವಿ ಜೂನ್ ತಿಂಗಳು ೨೦ನೆಯ ತಾರೀಖು ಭಾನುವಾರ ಬೆಳಗ್ಗೆ ೯ ಘಂಟೆಗೆ ದಯ ಮಾಡಿದರು. ಮೋಟಾರು ಬಂಡಿಯು ಬಂದು ನಿಂತೊಡನೆಯೇ ಅವರಿಬ್ಬರಿಗೂ ಹಾರ ತುರಾಯಿಗಳು ಸಮರ್ಪಿತ ವಾದುವು. ಮಾರ್ಗದುದ್ದಕ್ಕೂ ಉಭಯ ಪಾರ್ಶ್ವಗಳಲ್ಲಿಯೂ ತುಂಬಿದ್ದ ಪ್ರಜೆಗಳೂ, ನಗರ ಭವನದಲ್ಲಿ ಸೇರಿದ್ದ ಸರ್ಕಾರದ ಮತ್ತು ಅರಮನೆಯ ಭಾರಿ ಭಾರಿ ಅಧಿಕಾರಿಗಳೂ, ಕನ್ನಡದ ಅಭಿಮಾನಿಗಳಾದ ಇತರ ಮಹಾ ಶಯರುಗಳೂ, ಕರ್ಣಾಟಕದ ಇತರ ನಾನಾ ಭಾಗಗಳಿಂದಲೂ ಬಂದು ತುಂಬಿದ್ದ ಸಾಹಿತಿಗಳೂ, ಪರಿಷತ್ತಿನ ಸದಸ್ಯ ಸದಸ್ಯೆಯರೂ, ಆಹ್ವಾನಿತ ರಾಗಿದ್ದ ಇತರ ಅನೇಕ ಮಂದಿ ಮಹಿಳೆಯರೂ ಮತ್ತು ಮಹಾಶಯರು ಗಳೂ, ಆಸ್ಥಾನ ವಿದ್ವಾಂಸರುಗಳಲ್ಲಿ ಅನೇಕರೂ, ಆಳಿದ ಮಹಾಸ್ವಾಮಿ ಯವರ ಮತ್ತು ಆಗಿನ ಶ್ರೀಮದ್ಯುವರಾಜರವರ ದರ್ಶನದಿಂದ ಸಂತಸ ಗೊಂಡರು. ಮಹಾಪ್ರಭುಗಳವರ ಗುಣಗಾನರೂಪದ ಪದ್ಯಗಳ ಗಾಯನ ವಾದ ಬಳಿಕ ವಿಜ್ಞಾಪನಾ ಪತ್ರಿಕೆಯು ಅಂದವಾದ ರಜತ ಕರಂಡದಲ್ಲಿ

**ಕನ್ನಡ ಸಾಹಿತ್ಯ ಪರಿಷತ್ತಿನ ರಜತ ಮಹೋತ್ಸವ**

ಅವರಿಗೆ ಪರಿಷತ್ತಿನ ಉಪಾಧ್ಯಕ್ಷರವರಾದ ರಾಜಸೇವಾಸಕ್ತ ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯನವರಿಂದ ಸಮರ್ಪಿತವಾಯಿತು. ಅನಂತರ ಹಾರ ತುರಾಯಿಗಳೂ ಸಮರ್ಪಿತವಾದುವು. ಸಭಿಕರೆಲ್ಲರೂ ಎದ್ದು ನಿಂತಿರುವಲ್ಲಿ ಮಹಾಪ್ರಭುಗಳವರು ರಜತ ಮಹೋತ್ಸವದ ಕಾರ್ಯಕಲಾಪಗಳನ್ನು ಸಮಾರಂಭಣಗೊಳಿಸಿ ಸ್ಫೂರ್ತಿದಾಯಕವಾದ ಭಾಷಣವನ್ನು ದಯಪಾಲಿಸಿದರು. ಅವರಿಗೆ ಕನ್ನಡದಮೇಲಿದ್ದ ಪ್ರೀತಿ ಮಮತೆಗಳು ಅದರಲ್ಲಿ ತುಂಬಿ ತುಳುಕುತ್ತಿದ್ದುವು. ಮಹಾಪ್ರಭುಗಳವರಿಗೆ ಕನ್ನಡದಲ್ಲಿ ಎಷ್ಟು ಅಭಿಮಾನವಿದ್ದಿತೆಂಬುದಕ್ಕೂ ಕನ್ನಡದ ಉತ್ಸವಗಳಿಗೆ ದೊಡ್ಡವರೆಲ್ಲರೂ ಬಂದು ಸೇರಬೇಕೆಂಬ ಅಭಿಲಾಷೆಯಿದ್ದುದಕ್ಕೂ ಇದೇ ಸಂದರ್ಭದಲ್ಲಿ ಒಂದು ನಿದರ್ಶನವನ್ನೂ ಸೂಚಿಸಬಹುದಾಗಿದೆ. ಸುಸಂಸ್ಕೃತರಾದ ಮಹಾಶಯರೊಬ್ಬರು ಪರಿಷತ್ತಿನ ರಜತ ಮಹೋತ್ಸವವು ನಡೆದಾಗ ಸಭೆಗೆ ದಯಮಾಡಿರಲಿಲ್ಲ. ಆಕಸ್ಮಿಕವಾಗಿ ಒದಗಿದ ಅನಿವಾರ್ಯವು ಅದಕ್ಕೆ ಕಾರಣ. ಮಹಾಪ್ರಭುಗಳವರು ಅಂದು ಅವರು ಸಭೆಯಲ್ಲಿಲ್ಲದೆ ಹೋಗಿದ್ದುದನ್ನು ಗಮನಿಸಿ, ಆ ಬಳಿಕ ಅವರ ದೇಹಾರೋಗ್ಯ ಸರಿಯಾಗಿರಲಿಲ್ಲವೇ ಎಂಬುದನ್ನು ವಿಚಾರಿಸಿ ತಿಳಿದುಕೊಂಡು ಅವರು ಮುಂದೆ ತಮ್ಮ ದರ್ಶನಕ್ಕೆ ಬಂದಾಗ, "ನೀವು ಕನ್ನಡದ ಅಭಿಮಾನಿಗಳು. ದೇಹಸ್ಥಿತಿ ಸರಿಯಾಗಿಲ್ಲದ ಕಾರಣ ಉತ್ಸವಕ್ಕೆ ಬಂದಿರಲಿಲ್ಲವೆಂದು ತೋರಿತು" ಎಂದರಂತೆ.

ಮಹಾಪ್ರಭುಗಳವರೂ, ಪರಿಷತ್ತಿನ ಅಧ್ಯಕ್ಷರಾಗಿದ್ದ ದಿವಂಗತರಾದ ಶ್ರೀಮದ್ಯುವರಾಜ ಶ್ರೀ ಕಂಠೀರವ ನರಸಿಂಹರಾಜ ಒಡೆಯರ್ ಬಹದ್ದೂರರವರೂ, ದಿವಂಗತರಾದ ರಾಜಸೇವಾಧುರೀಣ ಸರ್ದಾರ್ ಸರ್ ಎಂ. ಕಾಂತರಾಜ ಅರಸಿನವರೂ, ದಯಪಾಲಿಸಿದ ಧನ ಸಹಾಯದ ಫಲವೇ ಕನ್ನಡ ಸಾಹಿತ್ಯ ಪರಿಷನ್ಮಂದಿರದ ಕಟ್ಟಡ. ಆಳಿದ ಮಹಾಸ್ವಾಮಿಯವರ ಭಾಷಣಗಳಲ್ಲಿ ಬಹು ಭಾಗದವುಗಳು ಕನ್ನಡದಲ್ಲಿ ಮಾಡಿದ ಭಾಷಣಗಳು. ಅವರು ಪರಿಷತ್ತಿನ ಮಹಾಪೋಷಕರಾಗಿಯೂ, ಅವರ ಸೋದರರು ಪರಿಷತ್ತಿನ ಅಧ್ಯಕ್ಷರಾಗಿಯೂ ಇದ್ದುದರ ಜೊತೆಗೆ ಅನೇಕ ರೀತಿಗಳಲ್ಲಿ ಕನ್ನಡಕ್ಕೆ ಪ್ರೋತ್ಸಾಹ ಕೊಡುತ್ತಿದ್ದರು. ಅವರೀರ್ವರ ಉತ್ತಮವಾದ ಆದರ್ಶವನ್ನೇ ಅನುಸರಿಸಿ ಈಗಿನ ಶ್ರೀಮನ್ಮಹಾರಾಜರವರಾದ ಶ್ರೀ ಜಯ ಚಾಮರಾಜ ಒಡೆಯರ್ ಬಹದ್ದೂರರವರು ಕನ್ನಡದಲ್ಲಿ ಮಮತೆ ತೋರುತ್ತ, ಪರಿಷತ್ತಿನ ಅಧ್ಯಕ್ಷರಾಗಿದ್ದುಕೊಂಡು ಅನುಗ್ರಹಿಸಿ ಈಚೆಗೆ ಮಹಾಪೋಷಕರಾಗಿರಲು ಸಮ್ಮತಿಸಿ ಕೃಪೆತೋರಿದ್ದಾರೆ.

ಕನ್ನಡಿಗರ ಹೆಮ್ಮೆಯಾದ ವಿಜಯನಗರ ಸಾಮ್ರಾಜ್ಯದ ಶ್ರೇಷ್ಠ ಸಂಪ್ರದಾಯಗಳನ್ನೆಲ್ಲ ಸುರಕ್ಷಿತವಾಗಿ ಕಾಪಾಡಿ ಕರ್ಣಾಟಕ ರತ್ನ ಸಿಂಹಾಸನಾರೂಢರಾಗಿದ್ದ ಮಹಾಪ್ರಭುಗಳವರು ಕನ್ನಡದ ಮೇಲಿನ ಅಭಿಮಾನದಿಂದ ನುಡಿದ "ಸಿರಿಗನ್ನಡಂ ಗೆಲ್ಗೆ" ಎಂಬ ಮಾತುಗಳೇ ಸಾರ್ವಜನಿಕ ಸಭೆಯಲ್ಲಿ ಅವರು ಆಡಿದ ಕಡೆಯ ಮಾತುಗಳು.

ಆಳಿದ ಮಹಾಸ್ವಾಮಿಯವರು ಮತ್ತೆ ಬೆಂಗಳೂರು ನಗರಕ್ಕೆ ಬಂದ ಬಳಿಕ ಎರಡು ಮೂರು ದಿನಗಳು ಕಳೆದುವು. ೧೯೪೦ನೆಯ ಇಸವಿ ಜೂಲೈ

**ದಿವಂಗತರಾದುದು**

ತಿಂಗಳು ೨೧ನೆಯ ತಾರೀಖು ಭಾನುವಾರದ ದಿನ ಅವರು ಕುದುರೆ ಸವಾರಿ ಹೊರಟರು. ಬಾಲ್ಯದಿಂದಲೂ ಅವರಿಗೆ ಕುದುರೆ ಸವಾರಿಯಲ್ಲಿ ಅತ್ಯಾದರ. ಅಂದು ಮೋಡವಾಗಿ ತಂಗಾಳಿ ಬೀಸುತ್ತ ವಾಯುಗುಣವು ಬಹಳ ಹಿತವಾಗಿದ್ದುದರಿಂದ ಮಹಾಪ್ರಭುಗಳವರು ಔತ್ಸುಕ್ಯದಿಂದ ಕುದುರೆ ಸವಾರಿ ಮಾಡಿ ಬಂದರು. ಕುದುರೆಯಿಂದಿಳಿದೊಡನೆಯೇ ಎದೆ ನೋವಿನಿಂದ ಸಂಕಟಪಟ್ಟರು. ವೈದ್ಯರು ಬಂದು ಪರೀಕ್ಷಿಸಿ, ಘೋರವಾದ ಹೃದ್ರೋಗವೆಂದು ನಿರ್ಧರಿಸಿದರು. ಆ ಬಳಿಕ ಕೆಲವು ದಿನಗಳಲ್ಲಿ ರೋಗವು ಗುಣವಾಗುವ ಲಕ್ಷಣಗಳು ತೋರಿಬಂದುವು. ಆಗಸ್ಟ್ ತಿಂಗಳು ೧ನೆಯ ತಾರೀಖು ಗುರುವಾರದ ದಿನ ರಾಜಕೋಟೆಯಿಂದ ಹಿಂತಿರುಗಿದ್ದ ಶ್ರೀ ಮಹಾರಾಣಿ ಲಕ್ಷ್ಮೀವಿಲಾಸ ಸನ್ನಿಧಾನದವರು ಶುಕ್ರವಾರದ ದಿನ ಬೆಳಗ್ಗೆ ಮಹಾಪ್ರಭುಗಳವರ ದೇಹಸ್ಥಿತಿ ಅನುಕೂಲವಾಗಿದ್ದುದನ್ನು ಕಂಡು ಹರ್ಷಿಸಿದರು. ಆದಿಶಕ್ತಿ ಚಾಮುಂಡೇಶ್ವರೀ ದೇವಿಯವರಿಗೆ ಶುಕ್ರವಾರದ ಸೇವೆ ಸಲ್ಲಿಸಲು ಅವರು ಅದೇ ದಿನ ಮೈಸೂರಿಗೆ ದಯಮಾಡಿದರು. ಆ ದಿನ ರಾತ್ರಿ ಮಹಾಪ್ರಭುಗಳವರು ಸುಖವಾಗಿ ನಿದ್ರಿಸಿದರು. ಮಾರನೆಯ ದಿನ ಬೆಳಗ್ಗೆ ರೋಗವು ಹಿಮ್ಮೆಟ್ಟಿದಂತಿದ್ದ ಲಕ್ಷಣಗಳನ್ನು ಕಂಡು ವೈದ್ಯರು ಹರ್ಷಿಸಿದರು. ಮಹಾಪ್ರಭುಗಳವರು ಮೈಸೂರು ನಗರದಲ್ಲಿ ನಡೆಯಬೇಕಾಗಿದ್ದ ಕೆಲವು ಕಾಮಗಾರಿಗಳ ಸಂಬಂಧದಲ್ಲಿ ನಕ್ಷೆಗಳನ್ನು ತರಿಸಿ ನೋಡಿ ಅನುಜ್ಞೆಗಳನ್ನು ದಯಪಾಲಿಸಿದರು. ಆದರೆ ಮಧ್ಯಾಹ್ನ ಭೋಜನವಾದ ಬಳಿಕ ಸ್ವಲ್ಪ ಹೊತ್ತಿಗೆ ಹೃದಯ ಬಾಧೆಯು ಮರುಕಳಿಸಿತು. ಒಂದೆರಡು ಘಂಟೆಗಳಲ್ಲಿ ವೈದ್ಯರಿಗೆ ಕೂಡ ಆತಂಕಜನಕವಾದ ಸ್ಥಿತಿಯುಂಟಾಯಿತು. ಶ್ರೀಮದ್ಯುವರಾಜ ಶ್ರೀ ಜಯಚಾಮರಾಜ ಒಡೆಯರ್ ಬಹದ್ದೂರರವರೂ, ಬ್ರಿಟಿಷ್ ರೆಸಿಡೆಂಟರವರೂ, ದಿವಾನ್‌ರವರು, ಹುಜೂರು ಸೆಕ್ರೆಟೆರಿಯವರು

ಮುಂತಾದ ಅಧಿಕಾರಿಗಳೂ, ಮಹಾಪ್ರಭುಗಳವರ ಸನ್ನಿಧಿಯಲ್ಲಿದ್ದರು. ವೈದ್ಯರು ತಮ್ಮ ಕೌಶಲ್ಯವನ್ನೆಲ್ಲ ಪ್ರಯೋಗಿಸಿ ಚಿಕಿತ್ಸೆ ಮಾಡುತ್ತಿದ್ದರು. ಮೈಸೂರು ನಗರದಿಂದ ದಯಮಾಡಿದ ಶ್ರೀ ಮಹಾರಾಣಿಯವರೇ ಮುಂತಾದ ರಾಜಕುಟುಂಬದ ಮಹಿಳೆಯರ ದುಃಖವನ್ನು ವರ್ಣಿಸಲಳವಲ್ಲ. ಮಹಾರಾಣಿ ಶ್ರೀ ಲಕ್ಷ್ಮೀವಿಲಾಸ ಸನ್ನಿಧಾನದವರು ಮೈಸೂರು ನಗರದಿಂದ ಬಂದು ತಮ್ಮ ಪತಿದೇವರ ಅಂತಃಪುರಕ್ಕೆ ಕಾಲಿಟ್ಟೊಡನೆಯೇ ಅಲ್ಲಿಯ ದಾರುಣ ಸನ್ನಿವೇಶವನ್ನು ಕಂಡು ದುಃಖಾವೇಗದಿಂದ ಮೂರ್ಛೆಹೊಂದಿದರು.

ಆಳಿದ ಮಹಾಸ್ವಾಮಿಯವರು ೧೯೪೦ನೆಯ ಇಸವಿ ಆಗಸ್ಟ್ ತಿಂಗಳು ೩ನೆಯ ತಾರೀಖು ಶನಿವಾರದ ದಿನ ರಾತ್ರಿ ೯ ಘಂಟೆ ೫ ನಿಮಿಷಗಳಿಗೆ ರಾಜಕುಟುಂಬದವರನ್ನೂ, ಬಂಧುಮಿತ್ರರನ್ನೂ, ಪ್ರಜೆಗಳನ್ನೂ ದುಃಖದಲ್ಲಿ ಮುಳುಗಿಸಿ ಕಾಲವಶರಾದರು. ದುಃಖಪರವಶರಾದ ದಿವಾನ್‌ರವರು "ನಾವು ಅತ್ಯಂತ ಅನರ್ಘ್ಯವಾದ ರತ್ನವನ್ನು ಕಳೆದುಕೊಂಡೆವು" ಎಂದು ಗೋಳಾಡಿದರು. ಅಸಂಖ್ಯಾತ ಮಂದಿ ಸರ್ಕಾರಿ ಅಧಿಕಾರಿಗಳೂ, ಶ್ರೀಮಾನ್ ಪೂರ್ಣರಾಘವೇಂದ್ರರಾಯರವರೇ ಮುಂತಾದ ಇತರ ದೊಡ್ಡಮನುಷ್ಯರೂ ಬೆಂಗಳೂರು ಅರಮನೆಗೆ ಹೋಗಿ ಮಹಾಪ್ರಭುಗಳವರ ಕಳೇಬರದ ದರ್ಶನಮಾಡಿ ದುಃಖದ ಕಾಣಿಕೆಯನ್ನು ಸಮರ್ಪಿಸಿದರು. ಅರಮನೆಯ ಅಧಿಕಾರಿಗಳು ಮಹಾಪ್ರಭುಗಳವರ ಕಳೇಬರವನ್ನು ಮೈಸೂರು ಧ್ವಜವು ಮೇಲೆ ಹಾರಾಡುತ್ತಿದ್ದ ಮೋಟಾರು ವ್ಯಾನ್ ಬಂಡಿಯಲ್ಲಿ ಬೆಂಗಳೂರಿನಿಂದ ಮೈಸೂರಿಗೆ ತೆಗೆದುಕೊಂಡು ಹೋದರು. ಅದರ ಹಿಂದೆ ೧೦–೧೫ ಮೋಟಾರು ಬಂಡಿಗಳಲ್ಲಿ ಅರಮನೆಯವರೂ ದಿವಾನ್‌ರವರೇ ಮುಂತಾದ ಅಧಿಕಾರಿಗಳೂ ತೆರಳಿದರು. ಮಾರನೆಯ ದಿನ ಬೆಳಗ್ಗೆ ಮಹಾಪ್ರಭುಗಳವರ ಮರಣ ವಾರ್ತೆಯು ಬರಸಿಡಿಲಿನಂತೆ ಸಂಸ್ಥಾನದಲ್ಲೆಲ್ಲ ಹರಡಿತು. ಪ್ರಜೆಗಳೆಲ್ಲರೂ ತಂದೆಯನ್ನು ಕಳೆದುಕೊಂಡ ಮಕ್ಕಳಂತೆ ದುಃಖಿಸಿದರು. ಆರೇ ತಿಂಗಳುಗಳ ಅವಧಿಯಲ್ಲಿ ಶ್ರೀಮದ್ಯುವರಾಜರವರೂ ಶ್ರೀಮನ್ಮಹಾರಾಜರವರೂ ಕಾಲವಶರಾದುದರಿಂದ ಪ್ರಜೆಗಳಿಗೆ ಉಂಟಾದ ದುಃಖವನ್ನೂ, ಅವರಿಬ್ಬರ ಸದ್ಗುಣ ಸೌಜನ್ಯಗಳ ಮತ್ತು ಕೃಪಾವಾತ್ಸಲ್ಯಗಳ ಪ್ರತ್ಯಕ್ಷಾನುಭವವನ್ನು ಪಡೆದಿದ್ದವರ ಸಂತಾಪವನ್ನೂ ಶೋಕವನ್ನೂ ವರ್ಣಿಸಲಳವಲ್ಲ.

ಮಹಾಪ್ರಭುಗಳವರ ಕಳೇಬರವನ್ನು ಸಾಮಾನ್ಯವಾಗಿ ಅವರು ಧರಿಸುತ್ತಿದ್ದ ಉಡುಪಿನಿಂದ ಅಲಂಕರಿಸಿ ಪ್ರಜೆಗಳು ಅಂತ್ಯದರ್ಶನ

ಪಡೆಯುವುದಕ್ಕಾಗಿ ಅರಮನೆಯ ಕಲ್ಯಾಣಮಂಟಪದಲ್ಲಿ ಇಟ್ಟಿದ್ದರು. ಮಹಾಪ್ರಭುಗಳವರ ಬಂಧುವರ್ಗದವರೂ, ಅರಸು ಪಂಗಡದ ಮಹಾಶಯರುಗಳೂ, ಪ್ರಭುಸೇವೆ ಮಾಡಿದ್ದ

**ಸ್ಮಶಾನ ಯಾತ್ರೆ**

ಅನೇಕರೂ ಕಣ್ಣೀರನ್ನು ಸುರಿಸುತ್ತ ಕಳೇಬರಕ್ಕೆ ಅಡ್ಡಬಿದ್ದು ಗೋಳಾಡಿದರು. ಪ್ರಾತಃಕಾಲ ಎಂಟೂವರೆ ಘಂಟೆಗೆ ಶ್ರೀಮಹಾರಾಣಿಯವರೇ ಮುಂತಾದವರು ಮಹಾಪ್ರಭುಗಳವರ ಅಂತ್ಯದರ್ಶನಕ್ಕಾಗಿ ಬಂದ ಕಾರಣ, ಕಲ್ಯಾಣ ಮಂಟಪದಲ್ಲಿ ತೆರೆಗಳ ಆವರಣವು ಕಲ್ಪಿತವಾಯಿತು. ಅಲ್ಲಿಗೆ ಬಂದು ರೋದಿಸುತ್ತಿದ್ದ ಮಹಿಳೆಯರ ದುಃಖಾಲಾಪವನ್ನು ಕೇಳಿದವರೆಲ್ಲರೂ ತಾವೂ ದುಃಖಾರ್ತರಾಗಿ "ಮೈಸೂರಿಗೆ ಈ ದುರವಸ್ಥೆ ಬರಬೇಕೇ" ಎಂದುಕೊಂಡು ಕಣ್ಣೀರು ಬಿಡುತ್ತಿದ್ದರು. ಅರಮನೆಯೊಳಗಿನಿಂದ ಕೇಳುತ್ತಿದ್ದ ರೋದನ ಧ್ವನಿಯು ಅರಮನೆಯ ಮುಂಭಾಗದಲ್ಲಿ ಕಣ್ಣೀರು ಸುರಿಸುತ್ತಿದ್ದ ಅಸಂಖ್ಯಾತ ಮಂದಿಗಳ ಹೃದಯವನ್ನು ಮತ್ತಷ್ಟು ಕಲಕಿತು. ಮಹಾಪ್ರಭುಗಳವರ ದರ್ಬಾರನ್ನು ನೋಡಲು ಅದೇ ಪ್ರಜೆಗಳು ಬಂದು ಸೇರುತ್ತಿದ್ದ ಅದೇ ಸ್ಥಳ. ಆದರೆ ಇನ್ನು ಅವರ ದರ್ಬಾರನ್ನು ನೋಡುವ ಭಾಗ್ಯವಿಲ್ಲ. ಸಿಂಹಾಸನದ ಮೇಲೆ ನಿಂತು ದರ್ಶನವನ್ನೀಯುತ್ತಿದ್ದ ದಿವ್ಯ ವಸ್ತ್ರಾಭರಣ ಭೂಷಿತರಾದ ಆ ಪ್ರಭು ಗಳವರನ್ನು ನೋಡುವ ಆನಂದವಿನ್ನಿಲ್ಲ.

ಸುಮಾರು ಎಂಟೂ ಮುಕ್ಕಾಲು ಘಂಟಯ ವೇಳೆಗೆ ದಿವಾನ್‌ರವರು ಅಲ್ಲಿಗೆ ಬಂದರು. ಬಿಕ್ಕಿ ಬಿಕ್ಕಿ ಅಳುತ್ತಿದ್ದ ಅವರನ್ನು ಅನೇಕರು ಸಂತೈಸಿದರು. ರಾಜಸಭಾಭೂಷಣ ಶ್ರೀಮಾನ್ ತಂಬೂಚೆಟ್ಟಿಯವರೂ, ರಾಜಸೇವಾಸಕ್ತ ಶ್ರೀಮಾನ್ ಎಂ. ರಾಮರಾಯರೂ, ಸಿದ್ದಿಕ್-ಉಲ್-ಮುಲ್ಕ್ ಶ್ರೀಮಾನ್ ಸಹೆಗ್ ಸಡ್. ಷಾರವರೂ, ರಾಜಸೇನಾಭೂಷಣ ಶ್ರೀಮಾನ್ ಎ. ವಿ. ಸುಬ್ರಹ್ಮಣ್ಯರಾಜ ಅರಸಿನವರೂ, ಶ್ರೀಮಾನ್ ಡಿ. ಶ್ರೀಕಂಠ ಲಕ್ಷ್ಮೀಕಾಂತರಾಜ ಅರಸಿನವರೂ, ಶ್ರೀಮಾನ್ ಎಂ. ಪಿ. ಸುಬ್ರಹ್ಮಣ್ಯರಾಜ ಅರಸಿನವರೂ, ಶ್ರೀಮಾನ್ ಸಿ. ವಿ. ಸುಬ್ರಹ್ಮಣ್ಯರಾಜ ಅರಸಿನವರೂ, ಕಣ್ಣೀರು ಬಿಡುತ್ತ ಮಹಾಪ್ರಭುಗಳವರ ಅಂತ್ಯ ಸಂಸ್ಕಾರ ಗಳ ಏರ್ಪಾಡುಗಳಿಗೆ ಅನುಜ್ಞೆ ಕೊಡುತ್ತಿದ್ದರು.

ಒಂಬತ್ತು ಘಂಟೆಗೆ ಮಹಾಪ್ರಭುಗಳವರ ಕಳೇಬರವನ್ನು ಹೊರಕ್ಕೆ ತಂದು ಅರಮನೆಯ ಆನೆಬಾಗಿಲಿನ ಬಳಿಯಲ್ಲಿದ್ದ ಹೂವಿನ ಪಲ್ಲಕ್ಕಿಯಲ್ಲಿ ಮಲಗಿಸಿದರು. ಕೆಂಪು ವರ್ಣದ ಜರತಾರಿ ರುಮಾಲಿನಿಂದಲೂ, ಹಸಿರು

ವರ್ಣದ ಪೋಷಾಕಿನಿಂದಲೂ, ವಜ್ರದ ಉಂಗುರಗಳಿಂದಲೂ ಅಲಂಕೃತರಾಗಿ ಕಿಂಕಾಪಿನಮೇಲೆ ಹೂವಿನ ಪಲ್ಲಕ್ಕಿಯಲ್ಲಿ ಮಲಗಿದ್ದ ಆ ಕಳೇಬರವನ್ನು ನೋಡಿದರೆ, ಮಹಾಪ್ರಭುಗಳವರು ನಿದ್ರಿಸುತ್ತಿದ್ದಂತೆ ತೋರುತ್ತಿದ್ದಿತೇ ಹೊರತು, ಮರಣದ ಛಾಯೆಯೇ ಇರಲಿಲ್ಲ. ರಾಷ್ಟ್ರಗೀತೆಯನ್ನು ವಾದ್ಯಗಳು ನುಡಿಯುತ್ತಿರುವಲ್ಲಿ, ಹೂವಿನ ಪಲ್ಲಕ್ಕಿಯನ್ನೆತ್ತಿದರು. ಎಲ್ಲರೂ ಬಿಕ್ಕಿ ಬಿಕ್ಕಿ ಅತ್ತರು. ಅರಮನೆಯ ಉಪ್ಪರಿಗೆಯಲ್ಲಿದ್ದ ಸ್ತ್ರೀಯರ ರೋದನ ಧ್ವನಿಯು ಜನರ ಮನಸ್ಸನ್ನು ಮತ್ತಷ್ಟು ತಲ್ಲಣಗೊಳಿಸಿತು. ಮೃತದೇಹದ ಮೇಲೆ ವೀಳೆಯ ದೆಲೆಗಳನ್ನೂ ಹಣವನ್ನೂ ಜನರು ಎರಚಿದರು. ಛತ್ರ ಚಾಮರಗಳೂ, ಬಿರುದು ಬಾವಲಿಗಳೂ, ಶೋಕ ಗೀತವನ್ನು ನುಡಿಯುತ್ತಿದ್ದ ವಾದ್ಯಗಳೂ, ಸೈನ್ಯವೂ ಮುಂದೆ ನಡೆದುವು. ಆಗ್ಗೆ ಶ್ರೀಮದ್ಯುವರಾಜರಾಗಿದ್ದ ಶ್ರೀ ಜಯ ಚಾಮರಾಜ ಒಡೆಯರ್ ಬಹದ್ದೂರರವರು ಮಂತ್ರಾಗ್ನಿಯನ್ನು ಹಿಡಿದುಕೊಂಡು ಹೂವಿನ ಪಲ್ಲಕ್ಕಿಯ ಮುಂದೆ ಹೊರಟರು. ಶೋಕ ವಿಹ್ವಲರಾಗಿದ್ದ ಅವರನ್ನು ಶ್ರೀಮಾನ್ ಎಂ. ಪಿ. ಸುಬ್ರಹ್ಮಣ್ಯರಾಜ ಅರಸಿನವರು ಆಗಾಗ ಹಿಡಿದುಕೊಳ್ಳುತ್ತಿದ್ದರು. ಅವರೀರ್ವರ ಜೊತೆಯಲ್ಲಿ ರಾಜಕುಮಾರ ಶ್ರೀಮಾನ್ ದೇಶರಾಜ ಅರಸಿನವರೂ, ಶ್ರೀಮಾನ್ ಕೆ. ಬಸವರಾಜ ಅರಸಿನವರೂ, ಶ್ರೀಮಾನ್ ಡಿ. ಶ್ರೀಕಂಠ ಲಕ್ಷ್ಮೀಕಾಂತ ರಾಜ ಅರಸಿನವರೂ, ಶ್ರೀಮಾನ್ ಡಿ. ದೇವರಾಜ ಅರಸಿನವರೂ, ಶ್ರೀಮಾನ್ ಡಿ. ಮದನಗೋಪಾಲರಾಜ ಅರಸಿನವರೂ, ರಾಜಸೇನಾ ಭೂಷಣ ಲೆಫ್ಟಿನೆಂಟ್ ಕರ್ನಲ್ ಶ್ರೀಮಾನ್ ಎ. ವಿ. ಸುಬ್ರಹ್ಮಣ್ಯರಾಜ ಅರಸಿನವರೂ ಮತ್ತು ಇತರ ರಾಜಬಂಧುಗಳೂ ನಾನಾ ಅಧಿಕಾರಿಗಳೂ, ಇತರ ಮಹಾಶಯರುಗಳೂ ಹೊರಟರು. ಸುಮಾರು ಒಂದುಮೈಲಿಯಷ್ಟು ಉದ್ದವಿದ್ದ ಆ ಮೆರೆವಣಿಗೆಯು ವರಾಹ ಬಾಗಿಲಿನ ಮಾರ್ಗವಾಗಿ ದೊಡ್ಡಕೆರೆಯ ಏರಿಯಮೇಲೆ ಹೊರಟಿತು. ಪ್ರಜೆಗಳು ದಾರಿಯುದ್ದಕ್ಕೂ ಉಭಯ ಪಾರ್ಶ್ವಗಳಲ್ಲಿಯೂ ಕಿಕ್ಕಿರಿದು ತುಂಬಿದ್ದರು. ಹಳ್ಳಿಗರನೇಕರು ಬಂದು ತುಂಬಿ "ಹೋದ್ರಿಯಾ ನನ್ನೊಡೆಯಾ" ಎಂದು ಮುಂತಾಗಿ ಹಲುಬಿ ಗೋಳಾಡುತ್ತಿದ್ದರು. ಕೆಲವರು, "ನಿಮಗೆ ಬದಲು ನಾವು ಹೋಗಬಾರದಾಗಿತ್ತೇ!" ಎಂದು ಹೇಳಿಕೊಂಡು ಅಳುತ್ತಿದ್ದರು. ದುಃಖಾರ್ತರೊಬ್ಬರು ಆಗ್ಗೆ ಶ್ರೀಮದ್ಯುವರಾಜರವರಾಗಿದ್ದ ಈಗಿನ ಶ್ರೀಮನ್ಮಹಾರಾಜರವರಾದ ಶ್ರೀ ಜಯಚಾಮರಾಜೇಂದ್ರ ಒಡೆಯರವರ ಕಾಲಿಗೆ ಬಿದ್ದು ರೋದಿಸಿದರು. ಎಲ್ಲಿ ನೋಡಿದರೂ ಕಣ್ಣೀರಿನ ಕೋಡಿ.

ಮಧುವನಕ್ಕೆ ಸೇರಿದಮೇಲೆ ಹೂವಿನ ಪಲ್ಲಕ್ಕಿಯು ಕೆಳಕ್ಕಿಳಿಯಿತು. ಬ್ರಿಟಿಷ್ ರೆಸಿಡೆಂಟರವರೂ, ದಿವಾನ್‌ರವರೂ, ಮುಖ್ಯ ನ್ಯಾಯಾಧೀಶರವರೂ, ಸಚಿವರುಗಳೂ, ಇತರರು ಕೆಲವರೂ ಅಡ್ಡಬಿದ್ದು ಮಹಾಪ್ರಭುಗಳವರಿಗೆ ತಮ್ಮ ಅಂತಿಮ ಗೌರವವನ್ನು ಸಲ್ಲಿಸಿದರು. ಮಹಾಮಾತೃಶ್ರೀ ಶ್ರೀ ವಾಣೀವಿಲಾಸ ಸನ್ನಿಧಾನದವರ ಸ್ಮಾರಕ ಬೃಂದಾವನದ ಬಳಿಯಲ್ಲಿ ಶ್ರೀಗಂಧದ ಚಿತೆಯು ಸಿದ್ಧವಾಯಿತು. ಶಾಸ್ತ್ರೋಕ್ತ ವಿಧಿಗಳಿಗನುಸಾರವಾಗಿ ಚಿತಾರೋಹಣ ಮುಂತಾದ ಕರ್ಮಗಳು ನಡೆದುವು. ಆಗ್ಗೆ ಚಿತೆಯ ಸುತ್ತಲೂ ತೆರೆಯ ಆವರಣವನ್ನು ಕಲ್ಪಿಸಿದ್ದರು. ಆಗಿನ ಶ್ರೀಮದ್ಯುವರಾಜರವರಾಗಿದ್ದ ಈಗಿನ ಶ್ರೀಮನ್ಮಹಾರಾಜರವರು ಸಂಸ್ಕಾರ ವಿಧಿಗಳನ್ನೆಲ್ಲ ನೆರವೇರಿಸಿ ಶವದಮೇಲೆ ಅಕ್ಕಿ ಹಾಕಿದರು. ಆ ಬಳಿಕ ತೆರೆಯ ಆವರಣವನ್ನು ಆಳುಗಳು ತೆಗೆದುಹಾಕಿದರು. ಸರ್ ಮಿರ್ಜಾ ಎಂ. ಇಸ್ಮಾಯಿಲ್‌ರವರೂ, ರಾಜಸಭಾಭೂಷಣ ಶ್ರೀಮಾನ್ ಟಿ. ತಂಬೂಚೆಟ್ಟಿಯವರೂ, ರಾಜಮಂತ್ರಪ್ರವೀಣ ಶ್ರೀಮಾನ್ ಎನ್. ಮಾಧವರಾಯರವರೂ, ರಾಜಮಂತ್ರಪ್ರವೀಣ ಶ್ರೀಮಾನ್ ಕೆ. ವಿ. ಅನಂತರಾಮನ್‌ರವರೂ, ಸರ್ ಡಾರ್ಸಿ ರೈಲಿಯವರೂ ಕಂಬನಿದುಂಬಿ ಅಕ್ಕಿಯನ್ನು ಹಾಕಿದರು. ಬ್ರಿಟಿಷ್ ರೆಸಿಡೆಂಟರವರೂ ಸಹ ಹಿಂದುಗಳಂತೆ ಕೈಮುಗಿದು ನಮಸ್ಕರಿಸಿದರು. ಅನಂತರ ಅನೇಕರು ಅಳುತ್ತಾ ಚಿತೆಯ ಬಳಿಗೆ ಹೋಗಿ ಅಕ್ಕಿ ಹಾಕಿದರು. ಅರಮನೆಯ ಸೈನಿಕರು ತಮ್ಮ ಬಂದೂಕಗಳಿಂದ ಮೂರುಸಲ "ಸುರೂಟು"ಗಳನ್ನು ಹೊಡೆದು ಗೌರವ ತೋರಿಸಿದ ಬಳಿಕ ನಾದಸ್ವರದವರು ಶೋಕಗೀತಗಳನ್ನು ನುಡಿಸುತ್ತಿರುವಲ್ಲಿ ಮಧ್ಯಾಹ್ನ ಹನ್ನೆರಡೂ ಕಾಲು ಘಂಟೆಗೆ ಚಿತೆಗೆ ಅಗ್ನಿಯನ್ನು ಹೊತ್ತಿಸಿದರು. ರಾಜರ್ಷಿ ಶ್ರೇಷ್ಠರಾದ ಮಹಾಪ್ರಭುಗಳವರ ಕಳೇಬರಕ್ಕೆ ಅಗ್ನಿಜ್ವಾಲೆಯು ವ್ಯಾಪಿಸಿದುದನ್ನು ಕಂಡು ಶ್ರೀಮದ್ಯುವರಾಜರವರೇ ಮುಂತಾದ ಸಮಸ್ತರೂ ಗೋಳಿಟ್ಟರು. ತೊಂಬತ್ತುವರ್ಷ ವಯಸ್ಸಿನ ಜೀರ್ಣ ವೃದ್ಧರೊಬ್ಬರು ಗೋಳಾಡುತ್ತ, ಸರ್ ಮಿರ್ಜಾ ಎಂ. ಇಸ್ಮಾಯಿಲ್‌ರವರು ರೋದಿಸುತ್ತ ಹೇಳಿದ ಸಮಾಧಾನವಚನಗಳನ್ನು ಕೇಳಿ.ಮತ್ತಷ್ಟು ಹೆಚ್ಚಾಗಿ ಗೋಳಾಡಿದುದು ಹೃದಯವನ್ನೇ ಕಲಕಿ ಸಂಕಟಪಡಿಸುತ್ತಿದ್ದ ನೋಟ. ಮಹಾಪ್ರಭುಗಳವರು ಪ್ರಜೆಗಳೆಲ್ಲರ ಪ್ರೀತಿಯನ್ನೂ ಗಳಿಸಿ ಮಹೋನ್ನತರಾಗಿ ಬಾಳಿದರು. ಅಸಂಖ್ಯಾತ ಮಂದಿಗಳ ಬಾಷ್ಪಾಂಜಲಿಯ ಕಾಣಿಕೆಯನ್ನು ಸ್ವೀಕರಿಸಿ ಆ ರಾಜರ್ಷಿಗಳ ಪವಿತ್ರಾತ್ಮವು ಅನಂತ ಮಹಿಮನಾದ ಸರ್ವೇಶ್ವರನ ಆನಂದಧಾಮವನ್ನು ಸೇರಿತು.

ಈ ಮಧ್ಯದಲ್ಲಿ ಸರ್ಕಾರದ ಆಜ್ಞೆಯಂತೆ ಬೆಂಗಳೂರು ಮೈಸೂರು ನಗರಗಳಲ್ಲಿ ಮಹಾಪ್ರಭುಗಳವರ ಗೌರವಾರ್ಥವಾಗಿ ನಿಮಿಷಕ್ಕೊಂದರಂತೆ ಅವರ ವಯಸ್ಸಿನ ಸಂಖ್ಯೆಯಷ್ಟು ತೋಪುಗಳಾದುವು. ಹನ್ನೆರಡನೆಯ ದಿನದ ಕರ್ಮಗಳು ಮುಗಿಯುವವರೆಗೂ ಸಂಸ್ಥಾನದ ನಾನಾ ಸರ್ಕಾರಿ ಕಚೇರಿಗಳೇ ಮುಂತಾದ ಸಾರ್ವಜನಿಕ ಕಟ್ಟಡಗಳಮೇಲೆಲ್ಲ ಧ್ವಜಗಳು ಧ್ವಜಸ್ತಂಭಗಳ ಮಧ್ಯಭಾಗದಲ್ಲಿ ಹಾರಾಡಬೇಕೆಂದೂ, ಮಹಾಪ್ರಭುಗಳ ಗೌರವಾರ್ಥವಾಗಿ ಆ ಸಂಸ್ಥೆಗಳೆಲ್ಲ ಹದಿಮೂರು ದಿನಗಳ ಕಾಲ ಮುಚ್ಚಲ್ಪಡತಕ್ಕದೆಂದೂ ಗೆಜೆಟ್ಟಿನ ವಿಶೇಷ ಪತ್ರಿಕೆಯ ಮೂಲಕ ಸರ್ಕಾರದ ಅಪ್ಪಣೆಯಾಯಿತು. ಆಳುವ ಮಹಾಸ್ವಾಮಿಯವರಾದ ಶ್ರೀಮನ್ಮಹಾರಾಜ ಶ್ರೀ ಜಯ ಚಾಮರಾಜೇಂದ್ರ ಒಡೆಯರ್ ಬಹದ್ದೂರರವರು ವಿಧ್ಯುಕ್ತ ರೀತಿಯಲ್ಲಿ ಉತ್ತರಕ್ರಿಯೆಗಳನ್ನು ನೆರವೇರಿಸಿ ಹನ್ನೆರಡನೆಯ ದಿನ ಸಂಸ್ಥಾನದಲ್ಲೆಲ್ಲ ಅನ್ನದಾನ ವಸ್ತ್ರದಾನಗಳು ನಡೆಯಲು ಅರಮನೆಯಿಂದ ೭೫,೦೦೦ ರೂಪಾಯಿಗಳನ್ನು ದಯಪಾಲಿಸಿದರು. ವರ್ತಕರೇ ಮುಂತಾದವರೂ ಬಡವರಿಗೆ ಅನ್ನದಾನಮಾಡಿ ಪ್ರಭುಭಕ್ತಿಯನ್ನು ತೋರಿಸಿದರು. ಬೆಂಗಳೂರು ನಗರದಲ್ಲಿ ದಿವಂಗತರ ದೊಡ್ಡದಾದ ಚಿತ್ರಪಟವೊಂದು ಅಂದವಾದ ರಥದಲ್ಲಿ ಮೆರೆವಣಿಗೆಯಾಯಿತು.

**ಶೋಕ ಸಂತಾಪ ಸೂಚನೆಗಳು**

ಆಳಿದ ಮಹಾಸ್ವಾಮಿಯವರ ನಿಧನದಿಂದ ಒಟ್ಟು ಮೈಸೂರು ಸಂಸ್ಥಾನವೇ ಶೋಕದಲ್ಲಿ ಮುಳುಗಿತು. ಒಟ್ಟು ಭರತಖಂಡವೇ ಸಂತಾಪದಿಂದ ಸಂಕಟಪಟ್ಟಿತು. ಪ್ರಪಂಚದ ಅನೇಕ ದೇಶಗಳು ಮರುಗಿದುವು. ಆಳುವ ಮಹಾಸ್ವಾಮಿಯವರಿಗೂ ದಿವಾನ್ ರವರಿಗೂ ಯೂರೋಪು, ಅಮೆರಿಕ, ಆಫ್ರಿಕ, ಆಸ್ಟ್ರೇಲಿಯಾ ಖಂಡಗಳಿಂದಲೂ ಸಹ, ಸಂತಾಪ ಸಹಾನುಭೂತಿ ಸೂಚಕವಾದ ತಂತಿಯ ಸಮಾಚಾರಗಳು ಬಂದುವು. ಚಕ್ರವರ್ತಿ ಸಾರ್ವಭೌಮರಾದ ಆರನೆಯ ಜಾರ್ಜ್ ಪ್ರಭುಗಳವರು ತಮ್ಮ ಸಂತಾಪ ಸಹಾನುಭೂತಿಗಳನ್ನು ಸೂಚಿಸಿ ತಂತಿಯ ವಾರ್ತೆಯನ್ನು ಕಳುಹಿಸಿದರು. ವೈಸ್ರಾಯಿಯವರೇ ಮುಂತಾದವರೂ, ಅಸಂಖ್ಯಾತ ಮಂದಿ ಮಹಾಶಯರೂ, ಅನೇಕ ಸಂಸ್ಥಾನಾಧೀಶರುಗಳೂ, ಮಹಿಳೆಯರೂ, ಅನೇಕ ಸಂಸ್ಥೆಗಳವರೂ, ಶ್ರೀ ಮಹಾರಾಣಿಯವರಾದ ಮಹಾಮಾತೃಶ್ರೀ ಶ್ರೀ ಲಕ್ಷ್ಮೀವಿಲಾಸ ಸನ್ನಿಧಾನದವರಿಗೂ, ಆಳುವ ಮಹಾಸ್ವಾಮಿಯವರಿಗೂ, ಶ್ರೀ ಯುವರಾಣಿಯವರಾದ

ಮಾತೃಶ್ರೀ ಕೆಂಪುಚಲುವಾಜಮ್ಮಣ್ಣಿಯವರಿಗೂ, ಶ್ರೀ ಮಹಾರಾಣಿಯವರೇ ಮುಂತಾದ ರಾಜಕುಟುಂಬದವರಿಗೂ, ದಿವಾನ್‌ರವರಿಗೂ ತಮ್ಮ ಸಂತಾಪವನ್ನು ಸೂಚಿಸಿದರು. ಮಹಾತ್ಮಾ ಗಾಂಧಿಯವರು ರಾಜನೀತಿ ಚತುರರಾದ ಶ್ರೇಷ್ಠ ಪ್ರಭುಗಳವರು ಅಸ್ತರಾದರೆಂದರು. ಶ್ರೀಮಾನ್ ಪಂಡಿತ ಮದನಮೋಹನ ಮಾಳವೀಯರವರು ಕಂಬನಿಯನ್ನು ಸುರಿಸಿ ಮಹಾಪ್ರಭುಗಳವರನ್ನು ಕೊಂಡಾಡಿದರು. ಲಂಡನ್ ನಗರದಲ್ಲಿ ನಡೆದ ಸಂತಾಪ ಸೂಚಕ ಸಭೆಯಲ್ಲಿ (ಹಿಂದೆ ಭರತಖಂಡದ ವೈಸ್ರಾಯಿಯವರಾಗಿದ್ದ) ಲಾರ್ಡ್ ವಿಲ್ಲಿಂಗ್ಡನ್‌ರವರು ಪ್ರಭುಗಳವರ ಗುಣಗಾನ ಮಾಡಿದರು. ರೈಟ್ ಆನರಬಲ್ ವಿ. ಎಸ್. ಶ್ರೀನಿವಾಸ ಶಾಸ್ತ್ರಿಗಳವರು ಆಗಸ್ಟ್ ತಿಂಗಳು ನಾಲ್ಕನೆಯ ತಾರೀಖಿನ ದಿನ ಮಾಡಿದ "ರೇಡಿಯೋ" ಭಾಷಣದಲ್ಲಿ, "ಮೈಸೂರು ಸಂಸ್ಥಾನದ ಶ್ರೀಮನ್ಮಹಾರಾಜರವರ ನಿಧನದಿಂದ ಮೈಸೂರು ಸಂಸ್ಥಾನಕ್ಕೆ ಮಾತ್ರವಲ್ಲ, ರಾಜಮಂಡಲಕ್ಕೆ ಮಾತ್ರವಲ್ಲ, ಒಟ್ಟು ಭರತಖಂಡಕ್ಕೇ ಅಪರಿಹಾರ್ಯವಾದ ನಷ್ಟವುಂಟಾಗಿದೆ. ನೇರವಾದ ನಿಲವಿನ ಮೈಕಟ್ಟು, ಜರತಾರಿಯ ರುಮಾಲಿಗೂ ಭೂಷಣಪ್ರಾಯವಾಗಿದ್ದು ಅದರ ಸೊಬಗನ್ನೇರಿಸಿ ಶೋಭಿಸುತ್ತಿದ್ದ ಸುಂದರವಾದ ಮುಖ ಮಂಡಲ, ಇವುಗಳಿಂದ ಕೂಡಿ ಅವರು ವಾಸ್ತವವಾಗಿ ತಾವಿದ್ದುದಕ್ಕಿಂತಲೂ ಎತ್ತರವಾಗಿ ಕಾಣುತ್ತಿದ್ದರು. ಅವರು ರಾಜತ್ವಕ್ಕೆ ಸಹಜವಾಗಿ ಮಿತಭಾಷಿಗಳಾಗಿದ್ದರಾದರೂ ಮಹಾರಾಜ ಪದವಿಯ ಠೀವಿಯ ಜಿಡಗಿನ ಲವಲೇಶದ ಸೂಚನೆಯೂ ಅವರ ವರ್ತನೆಯಿಂದ ತೋರಿಬರುತ್ತಿರಲಿಲ್ಲ........ಸಂಗೀತದ ಮತ್ತು ಇತರ ಲಲಿತ ಕಲೆಗಳ ಶ್ರೇಷ್ಠ ವಿಮರ್ಶಕರವರು, ಉದಾರಿಗಳಾದ ಪೋಷಕರವರು. ಅವರಿಂದ ಪ್ರೋತ್ಸಾಹ ಪಡೆದು ಹೆಮ್ಮೆಪಡದ ಕಲಾಕೋವಿದರಾರೂ ಭರತಖಂಡದಲ್ಲಿಲ್ಲ; ಅಲ್ಲದೆ, ಭಾರತೀಯ ಕಲಾಕೋವಿದರಾರಿಗೂ ಅವರ ಮೆಚ್ಚುಗಳೂ ಅವರ ಸಂಭಾವನೆಗಳೂ ಲಭಿಸದೆಹೋಗಿಲ್ಲ........ಅಧಿಕಾರಿಗಳ ಸೌಶೀಲ್ಯದಲ್ಲಿಯೂ ಗ್ರಾಮಾಭಿವೃದ್ಧಿ ಕಾರ್ಯಗಳಲ್ಲಿಯೂ ಮತ್ತು ಕೈಗಾರಿಕೆಗಳ ಅಭಿವೃದ್ಧಿಯಲ್ಲಿಯೂ ಬ್ರಿಟಿಷ್ ಆಡಳಿತಕ್ಕೆ ಸರಿದೂಗುವ ಸಲ್ಲಕ್ಷಣದಲ್ಲಿ ಭಾರತೀಯ ಸಂಸ್ಥಾನಗಳಲ್ಲೆಲ್ಲ ಮೈಸೂರು ಸಂಸ್ಥಾನಕ್ಕೇ ಪ್ರಥಮ ಸ್ಥಾನ" ಎಂದು ಮುಂತಾಗಿ ಶ್ಲಾಘಿಸಿದರು. ಡಾಕ್ಟರ್ ಕಸಿನ್ಸ್‌ರವರು, "ಆಳಿದ ಮಹಾಸ್ವಾಮಿಯವರ ಕೃಪಾವರ್ಷವು ಜಾತಿಪಂಗಡಗಳ ಭೇದವನ್ನಾಗಲಿ ಅಥವಾ ಸಾಮಾಜಿಕ ಪರಿಮಿತಿಯನ್ನಾಗಲಿ ಅರಿತಿರಲಿಲ್ಲ. ಒಟ್ಟು ಪ್ರಪಂಚವೇ ಅವರ ಬಂಧುವರ್ಗ. ಅವರ ಪ್ರಜೆಗಳೇ ವಾಸ್ತವವಾಗಿ

ಅವರ ಕುಟುಂಬ. ಅವರ ನಿಧನದಿಂದ ಪ್ರಜೆಗಳು ಪಿತೃವಿಹೀನರಾದರು" ಎಂದು ಮುಂತಾಗಿ ಕೊಂಡಾಡಿದರು. ಬ್ರಿಟಿಷ್ ರೆಸಿಡೆಂಟರವರು ಬೆಂಗಳೂರು ದಂಡಿನಲ್ಲಿ ನಡೆದ ಸಂತಾಪ ಸೂಚಕ ಸಭೆಯಲ್ಲಿ ಮಾಡಿದ ಭಾಷಣದಲ್ಲಿ, "ಮಹಾಸ್ವಾಮಿಯವರ ಮರಣದಿಂದ ಮೈಸೂರು ಸಂಸ್ಥಾನಕ್ಕೆ ಪ್ರೀತಿಪಾತ್ರರಾದ ಪ್ರಭುಗಳ ವಿಯೋಗವುಂಟಾಯಿತು. ಸಂಸ್ಥಾನದ ಪ್ರಜೆಗಳ ಕ್ಷೇಮಸಾಧನೆ ಸೌಖ್ಯಸಾಧನೆಗಳೇ ಅವರ ಜೀವನದ ಏಕಮಾತ್ರಧ್ಯೇಯ. ಅವರ ಶ್ರೇಷ್ಠವಾದ ಮೇಲ್ಪಂಕ್ತಿಯು ನಮ್ಮೆಲ್ಲರಿಗೂ ಅನೇಕ ತಲೆಮಾರುಗಳವರೆಗೆ ಸ್ಫೂರ್ತಿಯನ್ನೊದಗಿಸುತ್ತದೆ" ಎಂದು ಹೇಳಿದರು. ಮೈಸೂರು ನಗರದ ಸಂತಾಪ ಸೂಚಕ ಸಭೆಯಲ್ಲಿ ಅಧ್ಯಕ್ಷತೆವಹಿಸಿದ್ದ ರೆವರೆಂಡ್ ಜಿ. ಡಬ್ಲ್ಯು ಸಾಡೆಯವರು, "ನಮ್ಮ ಶೋಕಭರದಲ್ಲಿ, ಒಟ್ಟಿನಮೇಲೆ ನೋಡಿದರೆ ನಮ್ಮ ಪ್ರೀತಿಪಾತ್ರರಾದ ಶ್ರೀಮನ್ಮಹಾರಾಜರವರಿಗೆ ಸಮಾನರಾದ ಮಹಾಪುರುಷರೇ ಇನ್ನು ಹುಟ್ಟುವುದಿಲ್ಲವೆಂದು ತೋರುತ್ತಿದೆ" ಎಂದರು. ಬೆಂಗಳೂರು ನಗರದ ಸಂತಾಪ ಸೂಚಕ ಸಭೆಯಲ್ಲಿ ಅಧ್ಯಕ್ಷತೆ ವಹಿಸಿದ್ದ ರಾಜಧರ್ಮಪ್ರವೀಣ ದಿವಾನ್ ಬಹದ್ದೂರ್ ಕೆ. ಎಸ್. ಚಂದ್ರಶೇಖರ ಐಯರವರು, "ಆಳಿದ ಮಹಾಸ್ವಾಮಿಯವರಾದ ಶ್ರೀಮನ್ಮಹಾರಾಜ ಶ್ರೀ ಕೃಷ್ಣರಾಜೇಂದ್ರ ಒಡೆಯರ್ ಬಹದ್ದೂರರವರು ಮಹಾಪುರುಷರಾಗಿದ್ದರು. ಪ್ರಾಚೀನ ಕಾಲದ ಪ್ರಮಾಣಗಳಿಂದಲೇ ಆಗಲಿ ಅಥವಾ ನವೀನ ಕಾಲದ ಪ್ರಮಾಣ ಗಳಿಂದಲೇ ಆಗಲಿ ಹೇಗೆ ಒರೆಹಿಡಿದು ನೋಡಿದರೂ ಸಹ ಅತ್ಯುತ್ತಮ ವಾದ ರಾಜಲಕ್ಷಣಗಳಿಂದ ಕೂಡಿ ಅವರು ನಿಜವಾದ ಪ್ರಜಾಸೇವಕ ರಾಗಿದ್ದರು" ಎಂದರು.

ಮೈಸೂರು ಸಂಸ್ಥಾನದಲ್ಲಿ ಮಾತ್ರವೇ ಅಲ್ಲದೆ, ಮದರಾಸು, ಮುಂಬಯಿ, ಕಾಶಿ, ಲಂಡನ್ ಮುಂತಾದ ಅನೇಕ ನಗರಗಳಲ್ಲಿ ಸಂತಾಪ ಸೂಚಕ ಸಭೆಗಳು ನಡೆದುವು. ಮುಂಬಯಿ ನಗರದಲ್ಲಿ ನಡೆದ ಸಂತಾಪ ಸೂಚಕ ಸಭೆಯಲ್ಲಿ ಅಧ್ಯಕ್ಷತೆ ವಹಿಸಿದ್ದ ಸರ್ ಎಂ. ವಿಶ್ವೇಶ್ವರಯ್ಯನವರು, "ಮಹಾಸ್ವಾಮಿಯವರ ಆಳ್ವಿಕೆಯಲ್ಲಿ ನಡೆದ ಕಾರ್ಯಸಿದ್ಧಿಗಳು ಸುವರ್ಣಾಕ್ಷರಗಳಲ್ಲಿ ಬರೆದಿಡಲು ಅರ್ಹವಾಗಿವೆ. ...... ಅವರು ತಮ್ಮ ಪ್ರಜೆಗಳಲ್ಲಿ ಧನಿಕರು, ದರಿದ್ರರು, ಪಂಡಿತರು, ಪಾಮರರು ಮುಂತಾಗಿ ಸಮಸ್ತ ವರ್ಗಗಳ ಮತ್ತು ಸಮಸ್ತ ಜಾತಿ ಪಂಗಡಗಳವರೆಲ್ಲರ ಪ್ರೀತಿ ವಿಶ್ವಾಸಗಳಿಗೂ ಪಾತ್ರರಾಗಿದ್ದರೆಂದರೆ ಖಂಡಿತ ಅತಿಶಯೋಕ್ತಿಯಲ್ಲ. ರಾಜಕೀಯ ವಿಚಾರಗಳಲ್ಲಿಯೂ ಸಾಮಾಜಿಕ ಪದ್ಧತಿಗಳಲ್ಲಿಯೂ ಮತ್ತು

ಮತಾನುಷ್ಠಾನಗಳಲ್ಲಿಯೂ ಅವರು ಕಾಲಕ್ಕೆ ತಕ್ಕಂತೆ ಮುಂದುವರಿಯು ತ್ತಿದ್ದರು. . . . . ಆಳಿದ ಮಹಾಸ್ವಾಮಿಯವರು ತೀರ ಮಿತ ಭಾಷಿ ಗಳಾಗಿದ್ದರು. ಅವರು ಬರೆಯುವಾಗಲೂ ಮಾತನಾಡುವಾಗಲೂ ತೂಕ ಮಾಡಿ ಅತ್ಯಂತ ಜಾಗರೂಕತೆಯಿಂದ ಮಾತುಗಳನ್ನುಪಯೋಗಿಸು ತ್ತಿದ್ದರು. ಅವರು ಎಂದೂ ಆತುರಪಟ್ಟವರಲ್ಲ; ಎಂದೂ ಕಠಿನವಾಗಿ ಅಥವಾ ಒರಟಾಗಿ ಯಾರೊಡನೆಯೂ ಮಾತನಾಡಿದವರಲ್ಲ; ಎಂದೂ ಕೋಪಮಾಡಿಕೊಂಡವರಲ್ಲ. ಚರ್ಚಾಸ್ಪದವಾದ ವಿಷಯಗಳಲ್ಲಿ ಕೂಡ ಅವರು ತಾಳ್ಮೆಯಿಂದಲೂ ಘನತೆಯಿಂದಲೂ— ಆದರೆ ದರ್ಪದ ಬಿಕ್ಕಟ್ಟಿ ನಿಂದಲೂ— ಕೂಡಿ ವ್ಯವಹರಿಸುತ್ತಿದ್ದರು" ಎಂದು ಮುಂತಾಗಿ ಕೊಂಡಾಡಿದರು. ಆಳಿದ ಮಹಾಸ್ವಾಮಿಯವರ ಆತ್ಮಕ್ಕೆ ಶಾಂತಿಯು ನ್ನೀಯುವಂತೆ ಭಗವಂತನಿಗೆ ಪ್ರಾರ್ಥನೆಯನ್ನು ಸಲ್ಲಿಸುವುದಕ್ಕಾಗಿ ಲಂಡನ್ ನಗರದಲ್ಲಿ ಸಭೆ ಸೇರಿದ್ದ ಕ್ರೈಸ್ತ ಗೋಷ್ಠಿಯಲ್ಲಿ ಲಾರ್ಡ್ ಸ್ಯಾಮ್ಯುಯೆಲ್‌ರವರು ಅವರ ವಿಷಯವಾಗಿ ಮಾತನಾಡಿ ಅವರನ್ನು ಅಶೋಕ ಚಕ್ರವರ್ತಿಗೆ ಹೋಲಿಸಿ ಕೊಂಡಾಡಿದರು.

ಒಟ್ಟು ಪ್ರಪಂಚದಲ್ಲೇ ಪ್ರಸಿದ್ಧರಾದ ಮಹಾವ್ಯಕ್ತಿಗಳು ಮಹಾ ಪ್ರಭುಗಳವರನ್ನು ಶ್ಲಾಘಿಸಿ ಸಂತಾಪವನ್ನು ಸೂಚಿಸಿದಂತೆಯೇ ಪ್ರಪಂಚ ದಲ್ಲೇ ಪ್ರಸಿದ್ಧವಾದ ನೂರಾರು ಪತ್ರಿಕೆಗಳು ಅವರನ್ನು ಕೊಂಡಾಡಿ ಅವರ ಮರಣಕ್ಕಾಗಿ ಸಂತಾಪವನ್ನು ಸೂಚಿಸಿದುವು; ಅವರ ನಿಧನದಿಂದ ಒಟ್ಟು ಭರತಖಂಡಕ್ಕೇ ನಷ್ಟವಾಯಿತೆಂದು ವಿಷಾದಿಸಿದುವು. ಮುಂಬಯಿ ನಗರದ "ಕಾಮರ್ಸ್" ಪತ್ರಿಕೆಯು, "ಆಳಿದ ಮಹಾಸ್ವಾಮಿಯವರು ಅವಿಶ್ರಾಂತರಾಗಿ ಮೂವತ್ತೆಂಟು ವರ್ಷಗಳ ಕಾಲ ಉತ್ಸಾಹ ಶ್ರದ್ಧೆಗಳಿಂದ ಶ್ರಮಿಸಿದುದರ ಫಲವಾಗಿ ಸರ್ವ ವಿಧಗಳಲ್ಲಿಯೂ ಮೈಸೂರು ಸಂಸ್ಥಾನವು ಅಭಿವೃದ್ಧಿಹೊಂದಿ, ಮಾದರಿ ಸಂಸ್ಥಾನವೆಂಬ ಶ್ರೇಷ್ಠವಾದ ಹೆಸರನ್ನು ಪಡೆದು, ಇತರ ಸಂಸ್ಥಾನಗಳಿಗೆ ಮಾತ್ರವೇ ಅಲ್ಲದೆ ಅನೇಕ ವಿಚಾರಗಳಲ್ಲಿ ಬ್ರಿಟಿಷ್ ಇಂಡಿಯಾ ಪ್ರಾಂತಗಳಿಗೆ ಕೂಡ ಮಾದರಿಯಾಯಿತು" ಎಂದು ಕೊಂಡಾಡಿತು. ಲಕ್ನೋ ನಗರದ "ನ್ಯಾಷನಲ್ ಹೆರಾಲ್ಡ್" ಪತ್ರಿಕೆಯು, "ದುರ್ಗುಣಗಳಿಲ್ಲದ ಮಟ್ಟಿಗಿರುವ ಮಹಾರಾಜರುಗಳೇ ವಿರಳ. ಸುಸಂಸ್ಕೃತರಾಗಿ ರಾಜರ್ಷಿಗಳಾಗಿರುವ ಸುಚರಿತರಾದ ಮಹಾ ರಾಜರು ಇನ್ನೂ ವಿರಳ; ಮೈಸೂರು ಸಂಸ್ಥಾನದ ಶ್ರೀಮನ್ಮಹಾರಾಜರವ ರಾಗಿದ್ದ ಶ್ರೀ ಕೃಷ್ಣರಾಜ ಒಡೆಯರವರು ಅಂತಹವರಾಗಿದ್ದರು" ಎಂದು ಪ್ರಕಟಿಸಿತು. ಕಲ್ಕತ್ತೆಯ "ಸ್ಟೇಟ್ಸ್‌ಮನ್" ಪತ್ರಿಕೆಯು "ಒಟ್ಟು

ಮೈಸೂರು ಸಂಸ್ಥಾನವೇ ಅವರ ಭವ್ಯಸ್ಮಾರಕ. ಅವರ ಸಂಸ್ಥಾನದ ಸರ್ಕಾರವು ಅತ್ಯುತ್ತಮವಾದ ಸರ್ಕಾರದ ಮಾದರಿಯಾಗಿದೆ'' ಎಂದು ಶ್ಲಾಘಿಸಿತು. ಆಳಿದ ಮಹಾಸ್ವಾಮಿಯವರು ನವೀನ ಮೈಸೂರು ಸಂಸ್ಥಾನದ ನಿರ್ಮಾಪಕರು ಮಾತ್ರವೇ ಅಲ್ಲವೆಂದೂ, ಅವರು ನವೀನ ಭರತಖಂಡದ ನಿರ್ಮಾಪಕರೆಂದೂ ಕರಾಚಿಯ ''ಸಿಂದ್ ಅಬ್ಸರ್ವರ್'' ಪತ್ರಿಕೆಯು ಕೊಂಡಾಡಿತು. ಸರಳ ಜೀವಿಗಳಾಗಿದ್ದ ಮಹಾಪ್ರಭುಗಳವರು ಸುಸಂಸ್ಕೃತರಾಗಿ ಭಾರತೀಯ ಸಂಸ್ಕೃತಿಯ ಮತ್ತು ಪಾಶ್ಚಾತ್ಯ ಸಂಸ್ಕೃತಿಯ ಸಾರವೇ ಮೂರ್ತೀಭವಿಸಿದಂತಿದ್ದರೆಂದು ''ಅಮೃತ ಬಜಾರ್'' ಪತ್ರಿಕೆಯು ಶ್ಲಾಘಿಸಿತು. ''ಮದ್ರಾಸ್ ಮೇಲ್'', ''ಹಿಂದು'' ಮುಂತಾದ ಪತ್ರಿಕೆಗಳೆಲ್ಲ ಮಹಾಪ್ರಭುಗಳವರ ವ್ಯಕ್ತಿತ್ವವನ್ನೂ, ಪ್ರಜಾವಾತ್ಸಲ್ಯವನ್ನೂ, ರಾಜ್ಯಭಾರ ಕೌಶಲ್ಯವನ್ನೂ, ವಿವೇಕ ವೈರಾಗ್ಯಗಳನ್ನೂ ಹೊಗಳಿದುವು. ಲಂಡನ್ ನಗರದ ''ಟೈಮ್ಸ್'' ಪತ್ರಿಕೆಯು, ''ಆಳಿದ ಮಹಾಸ್ವಾಮಿಯವರ ಮರಣದಿಂದ ಭರತಖಂಡವು ಅಸಾಧಾರಣ ಸಾಮರ್ಥ್ಯವುಳ್ಳ ಪ್ರಭುಗಳವರನ್ನೂ, ಬ್ರಿಟಿಷ್ ಸಾಮ್ರಾಜ್ಯವು ಸನ್ಮಿತ್ರರೊಬ್ಬರನ್ನೂ ಅಕಾಲದಲ್ಲಿ ಕಳೆದುಕೊಂಡಂತಾಯಿತು. ಅವರೂ ಅವರ ತಂದೆಯವರೂ ರಾಜಕೀಯ ಸುಧಾರಣೆಗಳನ್ನು ಕರುಣಿಸಿದುದರಿಂದಲೂ, ವಿದ್ಯಾಭಿವೃದ್ಧಿಗೆ ಸಹಾಯ ಮಾಡಿದುದರಿಂದಲೂ, ವಿಜ್ಞಾನದ ಆಧುನಿಕ ಸಂಶೋಧನಗಳ ಫಲಿತಾಂಶಗಳನ್ನೆಲ್ಲ ಭೂವ್ಯವಸಾಯಕ್ಕೂ, ಕೈಗಾರಿಕೆಗಳಿಗೂ ಅನ್ವಯಿಸಿ ಅಭ್ಯುದಯ ಸಾಧನೆ ಮಾಡಿದುದರಿಂದಲೂ, ಇತರ ಸಂಸ್ಥಾನಾಧೀಶರುಗಳಿಗೆ ಮಾತ್ರವಲ್ಲದೆ ಅನೇಕ ವಿಚಾರಗಳಲ್ಲಿ ಬ್ರಿಟಿಷ್ ಇಂಡಿಯಾಕ್ಕೆ ಸಹ ಮಾದರಿಯನ್ನೊದಗಿಸಿದರು'' ಎಂದು ಕೊಂಡಾಡಿತು.

ತಿರುವಾಂಕೂರು, ಬರೋಡ, ಭಾವನಗರ, ಕೊಲ್ಹಾಪುರ, ಬಿಕನೀರು, ಕಪೂರ್ತಲ, ಸಾಂಗಲಿ ಮುಂತಾದ ಅನೇಕ ಸಂಸ್ಥಾನಗಳವರು ಸಾರ್ವಜನಿಕ ಸಂಸ್ಥೆಗಳನ್ನು ಕೆಲವು ದಿನಗಳು ಮುಚ್ಚುವುದರ ಮೂಲಕವೂ ಸಂತಾಪ ಸಭೆಗಳನ್ನೇರ್ಪಡಿಸುವ ಮೂಲಕವೂ ಮಹಾಪ್ರಭುಗಳವರಲ್ಲಿ ಗೌರವ ತೋರಿದರು.

೧೯೪೦ನೆಯ ಇಸವಿ ಅಕ್ಟೋಬರು ತಿಂಗಳಿನಲ್ಲಿ ನಡೆದ ಪ್ರಜಾಪ್ರತಿನಿಧಿ ಸಭೆಯ ದಸರಾ ಅಧಿವೇಶನದ ಮೊದಲನೆಯ ದಿನ ಸದಸ್ಯರು ಮಹಾಪ್ರಭುಗಳವರು ಕಾಲವಶರಾದುದಕ್ಕಾಗಿ ಸಂತಾಪ ಸೂಚಕ ನಿರ್ಣಯವನ್ನು ಮಾಡಿದರು. ಮಹಾಪ್ರಭುಗಳವರ ಗೌರವಾರ್ಥವಾಗಿ ಅಂದಿನ ಸಭಾ ಕಾರ್ಯವನ್ನು ಅಲ್ಲಿಗೇ ನಿಲ್ಲಿಸಲಾಯಿತು.

ಯೂರೋಪು ಖಂಡದಲ್ಲಿ ನಡೆಯುತ್ತಿರುವ ಘೋರ ಯುದ್ಧದ ಸಂಬಂಧವಾಗಿ ಬ್ರಿಟಿಷರಿಗೆ ಆಳಿದ ಮಹಾಸ್ವಾಮಿಯವರು ವಿಶೇಷವಾಗಿ ಸಹಾಯ ಮಾಡಿದರು. ಆಳುವ ಮಹಾಸ್ವಾಮಿ

**ಯುದ್ಧಕ್ಕೆ ಸಹಾಯ**

ಯವರೂ ಬಹಳವಾಗಿ ಆಸಕ್ತಿ ವಹಿಸಿ ಸಹಾಯ ಮಾಡುತ್ತಿದ್ದಾರೆ. ಸರ್ಕಾರದಿಂದಲೂ, ಪ್ರಜೆಗಳಿಂದಲೂ ಸಹ ವಿಶೇಷ ಸಹಾಯವಾಗಿದೆ. ಒಟ್ಟು ಹತ್ತು ಲಕ್ಷ ರೂಪಾಯಿಗಳಿಗಿಂತ ಹೆಚ್ಚಾಗಿ ಸಹಾಯವಾಗಿದೆ. ಮೈಸೂರು ಸಂಸ್ಥಾನದಿಂದ ವಿಮಾನಪಡೆಗೆ ಆದ ದ್ರವ್ಯ ಸಹಾಯವನ್ನು ಶ್ಲಾಘಿಸಿ, ಬ್ರಿಟಿಷ್ ವಿಮಾನದಳದ ಸಚಿವರಾದ ಲಾರ್ಡ್ ಬೀವರ್‌ಬ್ರುಕ್‌ರವರು ಅದಕ್ಕಿಂತ ಶ್ರೇಷ್ಠ ರೀತಿಯಲ್ಲಿ ಮತ್ತಾರೂ ಸಹಾಯ ಮಾಡಿಲ್ಲವೆಂದೂ, ಮೈಸೂರು ಸಂಸ್ಥಾನದವರ ದಾನಕ್ಕಾಗಿ ಬ್ರಿಟಿಷರು ಮೆಚ್ಚಿಕೆಯಿಂದಲೂ ಕೃತಜ್ಞತೆಯಿಂದಲೂ ವಂದನೆಗಳನ್ನರ್ಪಿಸುವರೆಂದೂ ತಂತಿಯ ಸಮಾಚಾರವನ್ನು ಕಳುಹಿಸಿದರು. ಯುದ್ಧ ಸಂಬಂಧವಾಗಿ ಬ್ರಿಟಿಷರಿಗೆ ಸಹಾಯ ಮಾಡಲು ಮೈಸೂರು ಸಂಸ್ಥಾನದಲ್ಲಿ ಯುದ್ಧ ಸಮಿತಿಯೂ, ಉಪಸಮಿತಿಗಳೂ ಏರ್ಪಟ್ಟಿವೆ; ವಿಶೇಷ ಹುರುಪಿನಿಂದ ನಾನಾ ಕಾರ್ಯಕಲಾಪಗಳೂ ನೆರವೇರುತ್ತಿವೆ. ಆಳುವ ಮಹಾಸ್ವಾಮಿಯವರಾದ ಶ್ರೀಮನ್ಮಹಾರಾಜರವರು ಯುದ್ಧಸಂಬಂಧವಾಗಿ ಈಚೆಗೆ ಒಟ್ಟು ಆರು ಲಕ್ಷ ರೂಪಾಯಿಗಳನ್ನು ದಯಪಾಲಿಸಿ ಉದಾರವಾಗಿ ಸಹಾಯಮಾಡಿ ಬ್ರಿಟಿಷರ ಕೃತಜ್ಞತೆಗೆ ಪಾತ್ರರಾಗಿದ್ದಾರೆ. ಲಾರ್ಡ್ ಬೀವರ್‌ಬ್ರುಕ್‌ರವರೂ ವೈಸ್ರಾಯಿಯವರೂ ಮಹಾಸ್ವಾಮಿಯವರ ಉಪಕಾರವನ್ನು ಶ್ಲಾಘಿಸಿದ್ದಾರೆ.

# ಹದಿನಾಲ್ಕನೆಯ ಅಧ್ಯಾಯ

## ಸದ್ಗುಣ ಪ್ರಶಂಸೆ

"**ಕಾಲಸ್ಯ ಕಾರಣಂ ರಾಜಾ ಕಾಲೋ ವಾ ರಾಜಕಾರಣಂ ।**
**ಇತಿ ತೇ ಸಂಶಯೋ ಮಾ ಭೂದ್ರಾಜಾ ಕಾಲಸ್ಯ ಕಾರಣಮ್ ॥**"
"**ಭೀಮಕಾಂತೈರ್ನೃಪಗುಣೈಸ್ಸ ಬಭೂವೋಪಜೀವಿನಾಂ ।**
**ಅಧೃಷ್ಯಶ್ಚಾಭಿಗಮ್ಯಶ್ಚ ಯಾದೋರತ್ನೈರಿವಾರ್ಣವಃ ॥**
**ಜ್ಞಾನೇ ಮೌನಂ ಕ್ಷಮಾ ಶಕ್ತೌ ತ್ಯಾಗೇ ಶ್ಲಾಘಾ ವಿಪರ್ಯಯಃ ।**
**ಗುಣಾ ಗುಣಾನುಬಂಧಿತ್ವಾತ್ತಸ್ಯ ಸಪ್ರಸವಾ ಇವ ॥**"

ಆಳಿದ ಮಹಾಸ್ವಾಮಿಯವರಲ್ಲಿ ನೆಲಸಿದ್ದ ಅನೇಕ ಸದ್ಗುಣಗಳು ಸಂದರ್ಭೋಚಿತವಾಗಿ ಈ ಮೊದಲೇ ಸೂಚಿತವಾಗಿವೆ. ಅವರ ಇಳಿವಯಸ್ಸಿನಲ್ಲಿ ಅವು ಎಷ್ಟು ಮಟ್ಟಿಗೆ ಪರಿಣತವಾಗಿ ಪರಿಪುಷ್ಟವಾಗಿದ್ದುವೆಂಬುದನ್ನು ನಿದರ್ಶನಪೂರ್ವಕವಾಗಿ ಸೂಚಿಸುವುದೂ ಮತ್ತು ಮಹಾಪ್ರಭುಗಳವರಲ್ಲಿ ನೆಲಸಿದ್ದ ಅಮೋಘ ಸದ್ಗುಣಗಳಲ್ಲಿ ಮತ್ತೆ ಕೆಲವನ್ನು ಕುರಿತು ಪ್ರಸ್ತಾವಿಸುವುದೂ, ಈ ಅಧ್ಯಾಯದ ಉದ್ದೇಶ.

**ಗುರುಜನರಲ್ಲಿ ಪ್ರೀತಿ ಭಕ್ತಿಗಳು**

ಗುರುಜನರಲ್ಲಿ ಪ್ರೀತಿ ಭಕ್ತಿಗಳನ್ನು ತೋರಿಸಬೇಕೆಂಬುದು ಭಾರತೀಯ ಸಂಸ್ಕೃತಿಯ ಶ್ರೇಷ್ಠವಾದ ಉಪದೇಶವಾಣಿ; ಮಾತಾಪಿತೃಗಳೂ ಆಚಾರ್ಯನೂ ದೇವತಾಸ್ವರೂಪಿಗಳೆಂಬುದು ಅದರ ಸಿದ್ಧಾಂತ. ("ಮಾತೃದೇವೋ ಭವ। ಪಿತೃದೇವೋ ಭವ। ಆಚಾರ್ಯದೇವೋ ಭವ।" ಎಂದು ವೇದವೂ ನಾರಿದೆ.) ಆಳಿದ ಮಹಾಸ್ವಾಮಿಯವರು ಅದನ್ನೆಲ್ಲ ಗ್ರಹಿಸಿ ಅನುಷ್ಠಾನದಲ್ಲಿಟ್ಟುಕೊಂಡಿದ್ದರು; ಇತರರಿಗೆ ಉತ್ತಮವಾದ ಮೇಲ್ಪಂಕ್ತಿಯನ್ನು ಹಾಕಿದರು. ಅವರು ತಮ್ಮ ಅಂತಃಪುರದಲ್ಲಿದ್ದ ಶ್ರೀ ಚಾಮುಂಡೇಶ್ವರಿಯವರ ಚಿತ್ರಪಟ, ತಮ್ಮ ಮಾತಾಪಿತೃಗಳ ಚಿತ್ರಪಟಗಳು, ಮತ್ತು ತಮಗೆ ಮಂತ್ರೋಪದೇಶ ಮಾಡಿದ ಶ್ರೀ ಶೃಂಗೇರಿ ಶ್ರೀ ಮಠದ ಮುಕ್ತರಾದ ಶ್ರೀ ಶ್ರೀಗಳವರ ಚಿತ್ರಪಟ— ಇವು ನಾಲ್ಕನ್ನೂ ಪುಷ್ಪಮಾಲಿಕೆಗಳಿಂದ ಅಲಂಕರಿಸಿ ಪ್ರತಿ ರಾತ್ರಿಯೂ ಭಕ್ತಿಯಿಂದ ನಮಸ್ಕರಿಸಿದಲ್ಲದೆ ಪವಳಿಸುತ್ತಿರಲಿಲ್ಲ. ವರ್ಧಂತ್ಯುತ್ಸವದ ದಿನ ಮಹಾಪ್ರಭುಗಳವರು ಶ್ರೀ ಪರಕಾಲ ಮಠದ ಶ್ರೀ ಶ್ರೀಗಳವರಿಗೆ ಪಾದಪೂಜೆ ಮಾಡಿ ದಂಡಪ್ರಣಾಮ ಮಾಡುತ್ತಿದ್ದ ಪರಿಪಾಟಿಯನ್ನು ಕಂಡು ಅನೇಕ ಮಂದಿ ರಾಜಮಹಾರಾಜರುಗಳೇ ಬೆರಗಾಗುತ್ತಿದ್ದ ವಿಚಾರವನ್ನು

ಹಿಂದೆಯೇ ಅರಿಕೆ ಮಾಡಲಾಗಿದೆ. ಪೂರ್ವಾಶ್ರಮದಲ್ಲಿ ವಿದ್ಯಾನಿಧಿ ಬ್ರಹ್ಮಶ್ರೀ ವಿರೂಪಾಕ್ಷ ಶಾಸ್ತ್ರಿಗಳೆಂದು ಪ್ರಖ್ಯಾತರಾಗಿದ್ದ— ಈಚೆಗೆ ಮುಕ್ತರಾದ— ಶ್ರೀಮದಭಿನವವಾಲುಕೇಶ್ವರ ಭಾರತೀ ಸ್ವಾಮಿಯವರಲ್ಲಿ ಮಹಾಸ್ವಾಮಿಯವರು ಪ್ರದರ್ಶಿಸಿದ ಭಕ್ತಿ ವಿಶ್ವಾಸಗಳು ಅತ್ಯಂತ ಶ್ರೇಷ್ಠ ವಾಗಿದ್ದು ಸುಪ್ರಸಿದ್ಧವಾಗಿವೆ. ಶ್ರೀ ರಾಮಕೃಷ್ಣ ಮಠಗಳ ಸ್ವಾಮಿಗಳಲ್ಲಿ ಸಹ ಮಹಾಪ್ರಭುಗಳವರಿಗೆ ಮಹತ್ತರವಾದ ಪ್ರೀತಿ ಗೌರವಗಳಿದ್ದುವು. ಅದೇ ರೀತಿ ಇತರ ಮಠಗಳ ಸ್ವಾಮಿಗಳಲ್ಲಿ ಮಹಾಪ್ರಭುಗಳವರಿಗೆ ಮಹತ್ತರ ಭಕ್ತಿ ಗೌರವಗಳಿದ್ದುವು. ಒಂದು ಸಲ, ಸಂನ್ಯಾಸಿಗಳವ ರೊಬ್ಬರು, "ನಾವು ಪ್ರೀತಿಯಿಂದ ಸಮರ್ಪಿಸಲು ರತ್ನಾದಿ ಸುವಸ್ತು ಗಳಾವುವೂ ನಮ್ಮಲ್ಲಿಲ್ಲ. ನಮ್ಮ ಭಾಗ್ಯವೆಂದರೆ ಶಿವಪೂಜೆಯೊಂದೇ. ಏಳು ವರ್ಷಗಳ ಶಿವಪೂಜಾ ಫಲವನ್ನು ರಾಜರ್ಷಿಗಳಿಗೆ ಸಮರ್ಪಿಸಿರುವೆವು" ಎಂದು ಹೇಳಿದಾಗ, ಮಾತಿಗೆ ಮೀರಿದ ಭಾವಗಳು ಹೃದಯದಿಂದ ಉಕ್ಕಿದುವು. ಮಹಾಪ್ರಭುಗಳವರು ಮೌನದಿಂದಿದ್ದು ಆನಂದ ಬಾಷ್ಪ ರೂಪದ ಪ್ರತ್ಯುತ್ತರವನ್ನಿತ್ತರು. ......ಮಠದ ಶ್ರೀ ಶ್ರೀಗಳವರು ಮಹಾಪ್ರಭುಗಳವರಿಗೆ ಆಶೀರ್ವಾದ ಪೂರ್ವಕವಾಗಿ ಅನುಗ್ರಹಿಸಿದ್ದ ಮುತ್ತಿನಕಂಠಿಯನ್ನು ಅವರು ದೇವತಾದರ್ಶನಕ್ಕಾಗಿ ದಯಮಾಡಿ ದಾಗಲೆಲ್ಲ ಧರಿಸುತ್ತಿದ್ದರು. ಅದರಲ್ಲಿದ್ದ ಎರಡು ಪಚ್ಚೆಗಳನ್ನು ತೆಗೆಯಿಸಿ ಇನ್ನೂ ಹೆಚ್ಚು ಬೆಲೆಬಾಳುತ್ತಿದ್ದ (ಅರಮನೆಯ ಆಭರಣಗಳ ಭಂಡಾರ ದಲ್ಲಿದ್ದ) ಮತ್ತರಡು ಪಚ್ಚೆಗಳನ್ನು ಹಾಕಿಸುವುದಾಗಿ ಅರಮನೆಯ ಅಧಿಕಾರಿಗಳವರೊಬ್ಬರು ಅರಿಕೆಮಾಡಿದರು. ಆಗ ಮಹಾಪ್ರಭುಗಳವರು, "ಖಂಡಿತ ಹಾಗೆ ಮಾಡಬೇಡಿ. ಗುರುಗಳು ಅಮೋಘವಾದ ಆಶೀರ್ವಾದ ದಿಂದ ದಯಪಾಲಿಸಿರುವ ಪವಿತ್ರವಾದ ಈ ಪಚ್ಚೆಗಳ ಬೆಲೆ ಇನ್ಯಾವ ಪಚ್ಚೆ ಗಳಿಗೆ ತಾನೆ ಬಂದೀತು?" ಎಂದರು. ಒಂದು ಸಲ, ತಮ್ಮ ವಿದ್ಯಾಗುರು ಗಳಿಗೇ ವಿದ್ಯಾದಾನಮಾಡಿದ್ದ ವೃದ್ಧರನ್ನು ಕಂಡು ನಮಸ್ಕಾರ ಮಾಡಿದ ಬಳಿಕ ಮಹಾಪ್ರಭುಗಳು, "ನಮ್ಮ ಗುರುಗಳ ಗುರುಗಳ ಸಂದರ್ಶನ ಭಾಗ್ಯವನ್ನು ಪಡೆದ ಈ ದಿನವೇ ಸುದಿನ. ಶಿಷ್ಯರ ಶಿಷ್ಯನಿಂದ ಕಾಣಿಕೆ ಯನ್ನು ಸ್ವೀಕರಿಸಿ ಧನ್ಯನನ್ನಾಗಿ ಮಾಡಬೇಕು. ಅಪ್ಪಣೆಯಾದುದನ್ನು ಒಪ್ಪಿಸಲು ತೀವ್ರಾಭಿಲಾಷೆ" ಎಂದರು. ಆ ಮಹನೀಯರು ಅದಕ್ಕೆ ಪ್ರತ್ಯುತ್ತರವಾಗಿ, 'ದೊಡ್ಡದೊಂದು ಉಪಕಾರವಾಗಬೇಕು, ನನಗೆ. ಅದಕ್ಕಾಗಿ ಕೇಳುತ್ತೇನೆ. ತಾವು ರಾಜರ್ಷಿಶ್ರೇಷ್ಠರು. ಶಿವಪೂಜೆಯಾದ ಮೇಲೆ ಪ್ರತಿದಿನವೂ ಪ್ರಜೆಗಳಿಗೆ ಶ್ರೇಯಸ್ಸಾಗುವಂತೆ ಅನುಗ್ರಹಿಸ

ಬೇಕೆಂಬ ಪ್ರಾರ್ಥನೆ ಮಾಡುವಾಗ, ನನ್ನದೂ 'ಸರ್ವೇಜನಾ ಸ್ಸುಖಿನೋ ಭವಂತು' ಎಂಬುದೇ ಪ್ರಾರ್ಥನೆಯೆಂಬುದನ್ನು ಸ್ಮರಿಸಿಕೊಂಡು, ನನ್ನದಾಗಿಯೂ ಒಂದು ಹಿಡಿ ಹೂವನ್ನು ಪೂಜೆ ಮಾಡಬೇಕು. ಆ ದೊಡ್ಡ ಉಪಕಾರ ನನಗೆ ಮಾಡಿಕೊಡಬೇಕು" ಎಂದು ಹೇಳಿದಾಗ ಮಹಾಪ್ರಭುಗಳವರು ಆನಂದಬಾಷ್ಪವನ್ನು ಸುರಿಸುತ್ತ ಸ್ವಲ್ಪ ಹೊತ್ತು ಮೌನವಾಗಿದ್ದರು.

ತಮ್ಮ ತೀರ್ಥರೂಪರವರ ವಿದ್ಯಾಗುರುಗಳಾಗಿದ್ದವರೊಬ್ಬರು ರೋಗಪೀಡಿತರಾಗಿದ್ದ ಕಾಲದಲ್ಲಿ ತಾವು ಮಹಾರಾಜರೆಂಬುದನ್ನೂ ಮರೆತು ಮಹಾಪ್ರಭುಗಳವರು ಸ್ವಹಸ್ತದಿಂದಲೇ ಔಷಧ ಸೇವನೆ ಮಾಡಿಸಿ ಸೇಬಿನ ಹಣ್ಣುಗಳನ್ನು ಹೆಚ್ಚಿ ಒಪ್ಪಿಸಿ ಉಪಚರಿಸಿದರು. ತಮ್ಮ ವಿದ್ಯಾಗುರುಗಳಾದ ವೃದ್ಧರೊಬ್ಬರು ರೋಗದಿಂದ ನರಳುತ್ತಿದ್ದಾಗ್ಗೆ ಅವರಿಗೆ ಸ್ವಗೃಹದಲ್ಲಿ ಸರಿಯಾಗಿ ಪೋಷಣೆ ದೊರೆಯಲು ಸೌಕರ್ಯವಿಲ್ಲದೆ ಹೋಗಿದ್ದುದನ್ನು ಕೇಳಿ, ಅರಮನೆಯ ವೈದ್ಯಶಾಲೆಯ ಮಹಡಿಯಮೇಲೆ ಅವರಿಗೆ ಸುಖಾವಾಸವನ್ನೇರ್ಪಡಿಸಿ ಅರಮನೆಯ ವೈದ್ಯರಿಂದ ಚಿಕಿತ್ಸೆ ಮಾಡಿಸಿ, ಅರಮನೆಯ ಪರಿಚಾರಕರಿಂದ ರಾಜೋಪಚಾರ ಮಾಡಿಸಿದರು. ಮಹಾಮಾತೃಶ್ರೀಯವರೇ ಮುಂತಾದ ಗುರುಹಿರಿಯರಲ್ಲಿ ಅನನ್ಯಸಾಧಾರಣವಾದ ಭಕ್ತಿಯಿಂದ ವರ್ತಿಸುತ್ತಿದ್ದುದಲ್ಲದೆ, ತಮ್ಮ ತೀರ್ಥರೂಪರಾದ ಶ್ರೀ ಚಾಮರಾಜೇಂದ್ರ ಒಡೆಯರವರಿಗೆ ಆಪ್ತರಾಗಿದ್ದವರ ವಿಷಯದಲ್ಲಿ ಅತ್ಯಂತ ಪ್ರೀತಿಗೌರವಗಳನ್ನು ತೋರಿಸುತ್ತಿದ್ದರು. ತಮ್ಮ ಜೊತೆಯಲ್ಲಿದ್ದ ವೃದ್ಧರು ಬೆಟ್ಟಗಳನ್ನು ಹತ್ತಲಾರದೆ ಹೋದಾಗ ಅವರನ್ನು ತಾವಸ್ಜಾನ್ ಕುರ್ಚಿಗಳಲ್ಲಿ ಎತ್ತಿಕೊಂಡು ಹೋಗುವ ಏರ್ಪಾಡು ಮಾಡಿ ತಾವು ಪಾರ್ಶ್ವದಲ್ಲಿ ನಡೆದು ಹೋಗುತ್ತಿದ್ದರು.

ಆಳಿದ ಮಹಾಸ್ವಾಮಿಯವರು ಹಿಂದಿನಿಂದ ಅರಮನೆಯ ಸೇವೆ ಮಾಡಿದವರ ವಿಷಯದಲ್ಲಿ ಅತ್ಯಂತ ದಾಕ್ಷಿಣ್ಯಪರರಾಗಿ ವರ್ತಿಸುತ್ತಿದ್ದರು.

**ಸೇವಕರಲ್ಲಿ ದಾಕ್ಷಿಣ್ಯ**

ಅವರು ಈಗ್ಗೆ ಸುಮಾರು ಮೂವತ್ತು ವರ್ಷಗಳ ಹಿಂದೆ ಉತ್ತರ ಭಾರತಕ್ಕೆ ಸಂಚಾರಾರ್ಥವಾಗಿ ಹೋಗಿದ್ದಾಗ, ಶ್ರೀ ಚಾಮರಾಜೇಂದ್ರ ಒಡೆಯರವರ ಕಾಲದಿಂದಲೂ ಅರಮನೆಯಲ್ಲಿ ಕೆಲಸಮಾಡಿದ್ದ "ದುಸ್ತಿನ ಬೊಕ್ಕಸ" ದವರೊಬ್ಬರು ತಮ್ಮ ಸಂಗಡಿಗರೊಡನೆ ಮಹಾಪ್ರಭುಗಳವರ ವಿಚಾರವನ್ನೆತ್ತಿ ಏಕವಚನ ಪ್ರಯೋಗಮಾಡಿ ಕೊಂಡಾಡುತ್ತಿದ್ದರು. ಆಗ ಅಕಸ್ಮಾತ್ತಾಗಿ ಮಹಾಪ್ರಭುಗಳವರು ಅಲ್ಲಿಗೆ ಬಂದಕಾರಣ, ಅದನ್ನಾಲಿಸಿ

ದುದನ್ನು ಕಂಡು ಅವರು ಬಹಳ ನಾಚಿಕೊಂಡರು. ಮಹಾಪ್ರಭುಗಳು ನಕ್ಕು ಸುಮ್ಮನಾದುದಲ್ಲದೆ ಅವರಲ್ಲಿ ಅಂದು ಹೆಚ್ಚಿನ ಆದರವನ್ನು ತೋರಿಸಿ ಅವರ ನಾಚಿಕೆಯೂ ಪಶ್ಚಾತ್ತಾಪವೂ ಕಡಮೆಯಾಗುವಂತೆ ಮಾಡಿದರು. ಶ್ರೀ ಚಾಮರಾಜೇಂದ್ರ ಒಡೆಯರವರ ಕಾಲದಿಂದಲೂ ಸೇವೆಯನ್ನು ಸಮರ್ಪಿಸಿದ್ದವರೊಬ್ಬರ ವಿಷಯದಲ್ಲಿ ಆಳಿದ ಮಹಾಸ್ವಾಮಿಯವರು ಸುಪ್ರೀತರಾಗಿ "ಏನು ಬೇಕು?" ಎಂದು ಕೇಳಿದಾಗ ಅವರು "ಶಾಶ್ವತ ವಾಗಿ ಅನ್ನ ಅಪ್ಪಣೆಯಾಗಬೇಕ್, ಮಹಾಸ್ವಾಮಿ" ಎಂದರು. ಮಹಾ ಪ್ರಭುಗಳವರು ಆ ಬಳಿಕ ಹದಿನಾಲ್ಕು ಎಕರೆಗಳ ವಿಸ್ತೀರ್ಣದ ಗದ್ದೆಯನ್ನು ಕೊಂಡು ಅವರಿಗೆ ವಹಿಸಿಕೊಟ್ಟರು. ಆಪ್ತರಾದವರು ರೋಗಗ್ರಸ್ತರಾದಾಗ ಅನೇಕ ಸಂದರ್ಭಗಳಲ್ಲಿ ಚಿಕಿತ್ಸೆಗಾಗಿ ಮಹಾಪ್ರಭುಗಳವರು ಸಹಸ್ರ ಗಟ್ಟಲೆಯಾಗಿ ಧನವ್ಯಯ ಮಾಡಿರುವ ಸಂದರ್ಭಗಳೂ ಉಂಟು.

**ಆಶ್ರಿತಾಭಿಮಾನ**

ಅರಮನೆಯಲ್ಲಿ ಕೆಲಸಮಾಡಿದವರೇ ಮುಂತಾದ ಆಶ್ರಿತರಲ್ಲಿ ಶ್ರೇಷ್ಠರಿಂದ ಹಿಡಿದು ಸಾಮಾನ್ಯರವರೆಗೂ ಅಸಾಧಾರಣ ರೀತಿಯಲ್ಲಿ ಮಮತೆಯನ್ನಿಟ್ಟು, ವಿವಿಧ ರೀತಿಗಳಲ್ಲಿ ಉಪಕಾರ ಮಾಡುತ್ತ ಆಳಿದ ಮಹಾಸ್ವಾಮಿಯವರು ಅವರು ಗಳನ್ನು, ಪರಮ ವಾತ್ಸಲ್ಯದಿಂದ ನೋಡಿಕೊಳ್ಳು ತ್ತಿದ್ದರು. ಅವರುಗಳು ಅರಮನೆಯ ಕೆಲಸಗಳ ಸಂಬಂಧವಾಗಿ ಹಗಲಿ ನಲ್ಲಾಗಲಿ, ರಾತ್ರಿಯಲ್ಲಾಗಲಿ, ಯಾವಾಗ ಅವಶ್ಯವಾದರೂ ತಮ್ಮಲ್ಲಿಗೆ ಬಂದು ಅನುಜ್ಞೆಗಳನ್ನು ಪಡೆಯುವ ಅವಕಾಶವನ್ನು ಕಲ್ಪಿ ಸಿದ್ದರು. ತಮ್ಮ ಆಶ್ರಿತರನೇಕರಿಗೆ ಮನೆಗಳನ್ನು ಕಟ್ಟಿಸಿಕೊಡುವುದು, ಸಾಲ ಬಿಡುಗಡೆ ಮಾಡುವುದು, ಕಷ್ಟಕಾಲದಲ್ಲಿ ಧನಸಹಾಯ ಮಾಡು ವುದು, ಖಿಲ್ಲತ್ತು ಕೊಡುವುದು ಮುಂತಾದುವುಗಳಿಗಾಗಿ ಮುಕ್ತಹಸ್ತದಿಂದ ಧನವ್ಯಯ ಮಾಡುತ್ತಿದ್ದರು. ಉತ್ತಮರೀತಿಯಲ್ಲಿ ಗ್ರಂಥರಚನೆ ಮಾಡಿದ ಪಂಡಿತ ಶ್ರೇಷ್ಠರೊಬ್ಬರಿಗೆ ಮಹಾಪ್ರಭುಗಳವರು ಹನಸೋಗೆಯ ಬಳಿಯಲ್ಲಿ ಐವತ್ತು ಎಕರೆಗಳಷ್ಟು ವಿಸ್ತೀರ್ಣದ ಗದ್ದೆಗಳನ್ನು ಕೊಡಿಸಿ ಪ್ರೋತ್ಸಾಹ ವನ್ನಿತ್ತರು. ಮಹಾಪ್ರಭುಗಳವರು ಸಂಚಾರಾರ್ಥವಾಗಿ ಅಥವಾ ಮೃಗಯಾ ವಿನೋದಕ್ಕಾಗಿ ದಯಮಾಡಿದಾಗ್ಗೆ ಪರಿವಾರದವರೆಲ್ಲರಿಗೂ ತಾವು ಸೇವಿಸುವ ಆಹಾರಗಳೇ ಆಗಬೇಕೆಂಬುದು ಅವರ ಕಟ್ಟಾಜ್ಞೆ. ಒಂದು ಸಲ ಹಾಸನದಲ್ಲಿ ಬೆಣ್ಣೆಯು ತಕ್ಕಷ್ಟು ಒದಗದೆಹೋಗಿ ಮಹಾ ಪ್ರಭುಗಳವರಿಗೆ ಮಾತ್ರ ಆಗತಾನೆ ಬೆಣ್ಣೆಯನ್ನು ಕಾಯಿಸಿದ ತುಪ್ಪವನ್ನು ಎಂದಿನಂತೆ ಬಡಿಸಿ, ಅಂಗಡಿಯಿಂದ ತರಿಸಿದ್ದ ತುಪ್ಪವನ್ನು ಉಳಿದವರಿಗೆ

ಬಡಿಸಿದಾಗ ಅವರು ತಮಗೂ ಅದೇ ತುಪ್ಪವನ್ನೇ ಬಡಿಸಬೇಕಾಗಿದ್ದಿತೆಂದು ಹೇಳಿದರು. ಈ ಬಗೆಯ ಸರ್ವಸಮಭಾವವುಳ್ಳ ಉದಾರಚರಿತರಾದ ಪ್ರಭುಗಳು ಅಖಂಡ ಭರತಖಂಡದಲ್ಲಿ ಮತ್ತಾವ ಸಂಸ್ಥಾನಗಳಲ್ಲಾದರೂ ಮತ್ತೊಬ್ಬರಿದ್ದಾರೆಯೇ ಎಂಬುದು ಸಂದೇಹಾಸ್ಪದವಾಗಿದೆ. ಅರಮನೆಯ ಆಶ್ರಿತರಾದ ವಿದ್ವಾಂಸರುಗಳ ಮತ್ತು ಮಹಾವಿದ್ವಾಂಸರುಗಳ ಮನೆ ಗಳಲ್ಲಾಗಲಿ, ಅರಸುಜನಾಂಗದ ಮಹಾಶಯರುಗಳ ಮನೆಗಳಲ್ಲಾಗಲಿ, ಮತ್ತು ಅರಮನೆಯ ಅಧಿಕಾರಿಗಳ ಮನೆಗಳಲ್ಲಾಗಲಿ, ಉಪನಯನ ವಿವಾಹಾದಿಗಳು ನಡೆದಾಗ್ಗೆ ವಾಹನ ನಾದಸ್ವರಾದಿಗಳಿಂದ ಕೂಡಿದ "ಅರಮನೆ ಮರ್ಯಾದೆ"ಯನ್ನು ಕಳುಹಿಸುವುದು, ಖಿಲ್ಲತ್ತುಗಳನ್ನೂ ಪಾರಿತೋಷಿಕಗಳನ್ನೂ ಕಳುಹಿಸುವುದು, ಧನಸಹಾಯ ಮಾಡುವುದು, ಮುಂತಾದ ರೀತಿಗಳಲ್ಲಿ ಮಹಾಪ್ರಭುಗಳವರು ಸಹಾಯ ಮಾಡುತ್ತಿದ್ದರು. ಅರಮನೆಯ ಅಧಿಕಾರಿಯವರೊಬ್ಬರ ಮಗಳಿಗೆ ವಿವಾಹವಾದಾಗ್ಗೆ, ಲಗ್ನಕಾಲಕ್ಕೆ ಸರಿಯಾಗಿ ಮಹಾಪ್ರಭುಗಳವರು ಬಹಳ ಬೆಲೆಬಾಳುವ ಉಡುಗೊರೆಗಳ ಖಿಲ್ಲತ್ತನ್ನೂ ಆಭರಣಗಳನ್ನೂ ಕಳುಹಿಸಿದುದಲ್ಲದೆ, ಶ್ರೀ ಚಾಮುಂಡೇಶ್ವರೀ ಅಮ್ಮನವರ ಪ್ರಸಾದವಾದ ಪುಷ್ಪಮಾಲಿಕೆ ಯನ್ನೂ ಕುಂಕುಮವನ್ನೂ ಕಳುಹಿಸಿದರು. ಅವರು ಕಳೆದ ಸಲ (೧೯೩೯ನೆಯ ಇಸವಿಯಲ್ಲಿ) ಮುಂಬಯಿ ನಗರಕ್ಕೆ ಹೋಗಿದ್ದಾಗ ಆಶ್ರಿತ ವರ್ಗಕ್ಕೆ ಸೇರಿದ್ದ ಅಧಿಕಾರಿಗಳಿಬ್ಬರ ವೃದ್ಧಮಾತೃಶ್ರೀಯವರುಗಳಿಗಾಗಿ ಬಿಳಿಯ ಬಣ್ಣದ ಕಾಶ್ಮೀರದ ಶಾಲುಗಳನ್ನು ಕೊಂಡುತಂದು ಕಳುಹಿಸಿ ಕೊಟ್ಟರು. ಆಶ್ರಿತರನೇಕರಿಗೆ ಅವರಿಂದ ನಡೆಯುತ್ತಿದ್ದ ಹೆಚ್ಚಿನ ಸೇವೆ ಗಳಿಗೆಲ್ಲ ತಕ್ಕ ಪ್ರೋತ್ಸಾಹವನ್ನಿತ್ತು ಕೃಪೆಮಾಡುತ್ತಿದ್ದರು. ತಮ್ಮ ಕೆಲಸ ವನ್ನು ಶ್ರದ್ಧೆಯಿಂದ ನೆರವೇರಿಸಿದವರಿಗೂ, ಅಡಿಗೆಯನ್ನು ಚೆನ್ನಾಗಿ ಮಾಡಿದವರಿಗೂ, ಆಗಾಗ ಉದಾರವಾಗಿ ಪಾರಿತೋಷಿಕಗಳನ್ನು ಕರುಣಿಸು ತ್ತಿದ್ದರು. ಬಹಳ ಚೆನ್ನಾಗಿ ಮುತ್ತುಗಳಂತೆ ಅಕ್ಷರಗಳನ್ನು ಬರೆಯು ತ್ತಿದ್ದವರೊಬ್ಬರು ಅರಮನೆಯ ಕೆಲಸದಲ್ಲಿದ್ದರು. ಮಹಾಪ್ರಭುಗಳವರು ಅವರಿಂದ ಶ್ಲೋಕಗಳನ್ನು ಬರೆಯಿಸಿಟ್ಟುಕೊಂಡು ಆಗಾಗ ಪಾರಿತೋಷಿಕ ಗಳನ್ನು ಕೊಡುತ್ತಿದ್ದರು. ತಮ್ಮ ಆಶ್ರಿತರಲ್ಲಿ ಯಾರು ರೋಗಗ್ರಸ್ತ ರಾದರೂ ದೊಡ್ಡವರು ಚಿಕ್ಕವರೆನ್ನದೆ ಕರುಣೆ ತೋರುತ್ತಿದ್ದರು. ಅರಮನೆಯ ಬಿಡದಿಯ ದಫೇದಾರರೊಬ್ಬರು ಕಾಯಿಲೆಯಾಗಿ ಆಸ್ಪತ್ರೆ ಯಲ್ಲಿದ್ದು ಚಿಕಿತ್ಸೆಹೊಂದುತ್ತಿದ್ದಾಗ ಮಹಾಪ್ರಭುಗಳವರು ಅಲ್ಲಿಗೆ ದಯಮಾಡಿ, ರೋಗಿಗೆ ಧೈರ್ಯಹೇಳಿ, ಹಣವನ್ನು ಕೊಟ್ಟು ಅರಮನೆಗೆ

ತೆರಳಿದರು. ಬೆಂಗಳೂರು ಅರಮನೆಯಲ್ಲಿ ಸಣ್ಣ ಚಾಕರನೊಬ್ಬನು ರೋಗ ಪೀಡಿತನಾಗಿದ್ದನು. ಮಹಾಪ್ರಭುಗಳವರು, ಅವನು ಎಂದಿನಂತೆ ಕೆಲಸಕ್ಕೆ ಬಾರದಿದ್ದುದನ್ನು ಗಮನಿಸಿ ಅವನಿಗೆ ಕಾಯಿಲೆಯಾಗಿದ್ದುದನ್ನು ಪತ್ತೆ ಮಾಡಿ, ಅವನು ಮಲಗಿದ್ದ ಸ್ಥಳಕ್ಕೆ ದಯಮಾಡಿ, ಅವನಿಗೆ ಸರಿಯಾಗಿ ಚಿಕಿತ್ಸೆಯೂ ಉಪಚಾರವೂ ನಡೆಯುವಂತೆ ಆಜ್ಞಾಪಿಸಿದರು. ಅರಮನೆಯ ಸಣ್ಣ ಅಧಿಕಾರಿಗಳ ಮತ್ತು ಇತರ ಕೆಲಸಗಾರರ ಮನೆಗಳಲ್ಲಿ ಉಪನಯನ ಗಳೂ ವಿವಾಹಗಳೂ ನಡೆವರೆ ಮೂರು ತಿಂಗಳುಗಳ ಸಂಬಳಗಳನ್ನು ಸಾಲ ವಾಗಿ ಕೊಟ್ಟು ಸುಲಭ ಕಂತುಗಳಲ್ಲಿ ಹಿಂವಕ್ಕೆ ಬರಮಾಡಿಕೊಳ್ಳುವ ಸೌಕರ್ಯವನ್ನು ಮಹಾಪ್ರಭುಗಳವರು ಕಲ್ಪಿಸಿದ್ದರು. ಅರಮನೆಯ ಸೇವೆಯಲ್ಲಿದ್ದ ಅಧಿಕಾರಿಗಳಲ್ಲಾರಾದರೂ ಮೃತಪಟ್ಟರೆ, ಅವರ ಮಕ್ಕಳ ವಿದ್ಯಾಭ್ಯಾಸಕ್ಕಾಗಿ ತಿಂಗಳು ತಿಂಗಳೂ ಹಣ ಸಲ್ಲುವ ಸೌಕರ್ಯವನ್ನೂ ಮಹಾಪ್ರಭುಗಳವರು ಏರ್ಪಡಿಸಿದ್ದರು.

ಒಂದು ದಿನ ಮಹಾಪ್ರಭುಗಳವರು ವಸಂತ ಮಹಲಿನ ಕಡೆಗೆ ಮೋಟಾರು ಬಂಡಿಯಲ್ಲಿ ಹೋಗುತ್ತಿದ್ದಾಗ ಎದುರಿಗೆ ಬೈಸಿಕಲಿನಮೇಲೆ ಬರುತ್ತಿದ್ದ ಅಧಿಕಾರಿಯವರೊಬ್ಬರು ಭಯಗ್ರಸ್ತರಾಗಿ ಬೈಸಿಕಲಿನಿಂದ ಇಳಿದು ನಡುಗುತ್ತ ಕೈಮುಗಿದರು. ಮಹಾಪ್ರಭುಗಳವರು ಮೋಟಾರು ಬಂಡಿಯನ್ನು ನಿಲ್ಲಿಸಿ, "ಇನ್ನುಮೇಲೆ ಬೈಸಿಕಲಿನಿಂದ ಇಳಿದು ಕೈಮುಗಿಯ ಬೇಕಾಗಿಲ್ಲ. ನೀವು ಬಿದ್ದುಬಿಟ್ಟರೆ ಅದರ ಪಾಪಕ್ಕೆ ನಾವು ಹೊಣೆಯಾಗ ಬೇಕಾಗುತ್ತದೆ" ಎಂದು ಅಪ್ಪಣೆ ಕೊಡಿಸಿದರು. ಮಹಾಪ್ರಭುಗಳವರ ಆಶ್ರಿತಾಭಿಮಾನವು ಅತ್ಯಂತ ಶ್ರೇಷ್ಠತರಗತಿಯದು; ಅವರು ತಾವೇ ಕೃಪೆತೋರಿದ್ದ ಸಂದರ್ಭಗಳಲ್ಲಿ ಕೂಡ ಅವರು ತಮಗೇ ಉಪಕಾರ ವಾಗಿದ್ದಂತೆ ಭಾವಿಸುತ್ತಿದ್ದರು. ಕೈಲಾಸ ಶಿಖರದ ಯಾತ್ರೆಮಾಡಿ ಕೊಂಡು ಹಿಂತಿರುಗಿದಾಗ ತಮ್ಮೊಡನೆ ಕರೆದುಕೊಂಡುಹೋಗಿದ್ದ ಸಮ್ಮುಖದ ಅಧಿಕಾರಿಯವರೊಬ್ಬರ ವೃದ್ಧಮಾತೆಯವರೊಡನೆ, "ನಿಮ್ಮ ಮಕ್ಕಳನ್ನು ಈ ಅಪಾಯದ ಪ್ರಯಾಣಕ್ಕೆ ಕಳುಹಿಸಿಕೊಟ್ಟಿರಿ. ಇದು ನಿಜವಾಗಿಯೂ ದೊಡ್ಡ ಉಪಕಾರ. ದೊಡ್ಡ ಸ್ವಾರ್ಥತ್ಯಾಗ" ಎಂದು ತಿಳಿಸಿದರು. ಅಧಿಕಾರಿಗಳಲ್ಲಾರಾದರೂ ಚೆನ್ನಾಗಿ ಕೆಲಸಮಾಡಿದರೆ ಮಹಾಪ್ರಭುಗಳವರು ತಮ್ಮ ಸಂತೋಷವನ್ನು ಒಡನೆಯೇ ಅವರಿಗೆ ಸಮ್ಮುಖದ ಅಧಿಕಾರಿಗಳ ಮೂಲಕ ತಿಳಿಸಿಬಿಡುತ್ತಿದ್ದರು. ೧೯೩೦ನೆಯ ಇಸವಿಯಲ್ಲಿ ನಡೆದ ದಸರಾ ಮೆರವಣಿಗೆಯ ಕಾಲದಲ್ಲಿ ಏರ್ಪಾಡುಗಳು ಬಹಳ ಚೆನ್ನಾಗಿದ್ದುದನ್ನು ಗಮನಿಸಿ "ದಳವಾಯಿ ದೇವರಾಜ ಅರಸಿನವರ

ಕಾಲದಿಂದೀಚೆಗೆ, ಅವರು ಮಾಡಿಸುತ್ತಿದ್ದಷ್ಟು ವಿಚಕ್ಷಣೆಯಿಂದ ಏರ್ಪಾಡು ನಡೆದಿರುವುದು ಇದೇ ಸಲ. ಇನ್ನುಮುಂದೆ ಹೀಗೆಯೇ ನಡೆಯಲಿ. ನಮ್ಮ ಸಂತೋಷವನ್ನು ಈಗಲೇ ತಿಳಿಸಿ'' ಎಂದು ಅಪ್ಪಣೆ ಮಾಡಿದರು. ಸಂಬಂಧಪಟ್ಟ ಆ ಅಧಿಕಾರಿಯವರಿಗೆ ರಾತ್ರಿ ಹತ್ತೂವರೆ ಘಂಟೆಯ ವೇಳೆಯಲ್ಲಿ ಆ ಮೆಚ್ಚಿಕೆಯ ಸುದ್ದಿಯು ಮುಟ್ಟಿತು. ದರ್ಬಾರು ನಡೆದಾಗ ಆಭರಣಗಳಿಂದ ಬಿದ್ದುಹೋದ ಕೆಂಪು ವಜ್ರಗಳನ್ನು ತಂದೊಪ್ಪಿಸಿದವರಿಗೆ ಪಾರಿತೋಷಿಕಗಳನ್ನು ಕೊಟ್ಟು ಮಹಾಪ್ರಭುಗಳವರು ''ಅವರ ಪ್ರಾಮಾಣಿಕತೆಗೆ ಇದೇನೂ ಪ್ರತಿಫಲವಲ್ಲ'' ಎಂದು ಹೇಳಿ ಮೆಚ್ಚಿಕೆಯನ್ನು ಸೂಚಿಸಿದ್ದರು.

ಮಹಾಪ್ರಭುಗಳವರು ತಮ್ಮ ಸಮ್ಮುಖದ ಊಳಿಗದವರಲ್ಲಿ ವಾತ್ಸಲ್ಯಪೂರಿತವಾದ ದಯೆಯನ್ನು ತೋರಿಸುತ್ತಿದ್ದರು. ಈಗ್ಗೆ ಸುಮಾರು ನಲವತ್ತು ವರ್ಷಗಳ ಹಿಂದೆ ಮೋಟಾರು ಬಂಡಿಗಳು ಇನ್ನೂ ಬಳಕೆಗೆ ಬಂದಿಲ್ಲದಿದ್ದಾಗ ಒಂದು ಸಲ ಅವರು ಉದಕಮಂಡಲದಿಂದ ನಾಲ್ಕು ಕುದುರೆಗಳನ್ನು ಕಟ್ಟಿದ್ದ ರಥದಲ್ಲಿ ಸಾರಥ್ಯವನ್ನು ವಹಿಸಿ, ದರ್ಬಾರ್ ಸರ್ಜನ್‌ರವರಾಗಿದ್ದ ಕರ್ನಲ್ ಸ್ಮಿತ್ ಮುಂತಾದವರೊಡನೆ ಮೈಸೂರಿಗೆ ಬರುತ್ತಿದ್ದರು. ದಾರಿಯಲ್ಲಿ ಊಳಿಗದವನೊಬ್ಬನು ಆಯತಪ್ಪಿ ರಥದಿಂದ ಕೆಳಕ್ಕುರುಳಿದಾಗ, ಮೊಟ್ಟಮೊದಲು ರಥದಿಂದ ಧುಮ್ಮಿಕ್ಕಿ ಅವನಿಗೆ ಪ್ರಥಮ ಚಿಕಿತ್ಸೆ ಮಾಡತೊಡಗಿದವರು, ಆಳಿದ ಮಹಾಸ್ವಾಮಿಯವರೇ. ಕರ್ನಲ್ ಸ್ಮಿತ್‌ರವರು ಕೂಡಲೆ ಮಹಾಸ್ವಾಮಿಯವರಿಗೆ ನೆರವಾಗಿ, ಆ ಬಗೆಯ ಆಶ್ರಿತವಾತ್ಸಲ್ಯವು ಅಸಾಧಾರಣವಾದುದೆಂದು ಶ್ಲಾಘಿಸಿದರು. ಈಚೆಗೊಂದು ಸಲ, ಬೆಂಗಳೂರಿನಿಂದ ಮೈಸೂರಿಗೆ ಮೋಟಾರು ಬಂಡಿಯಲ್ಲಿ ಹೋಗುತ್ತಿದ್ದಾಗ ಮರದಿಂದ ಬಿದ್ದು ಮೂಳೆ ಮುರಿದುಕೊಂಡಿದ್ದವನೊಬ್ಬನನ್ನು ಕಂಡು ಅವನಿಗೆ ತಾವೇ ಪ್ರಥಮ ಚಿಕಿತ್ಸೆ ಮಾಡಿ ಅವನನ್ನು ಮೈಸೂರಿಗೆ ಕರೆದುಕೊಂಡುಹೋಗಿ ಚಿಕಿತ್ಸೆ ಮಾಡಿಸಿದರು. ಅಪರಿಚಿತರ ವಿಷಯದಲ್ಲೇ ಹಾಗೆ ವರ್ತಿಸುತ್ತಿದ್ದ ಮಹಾಪ್ರಭುಗಳವರು ಆಶ್ರಿತರಲ್ಲಿ ತೋರಿಸುತ್ತಿದ್ದ ದಯಾವಾತ್ಸಲ್ಯಗಳ ವಿಚಾರವನ್ನು ಕೇಳಬೇಕಾದುದೇನು?

ಸಂಚಾರಾರ್ಥವಾಗಿ ಪರಸ್ಥಳಗಳಿಗೆ ಹೋದಾಗ ತಮ್ಮ ಸೇವೆ ಮಾಡುತ್ತಿದ್ದವರೆಲ್ಲರೂ ಸೌಖ್ಯವಾಗಿರಬೇಕೆಂಬುದು ಮಹಾಪ್ರಭುಗಳವರಿಗಿದ್ದ ಅಭಿಲಾಷೆ. ರೈಲ್ವೇ ಸ್ಟೇಷನುಗಳಲ್ಲಿ ಅಂಜೂರ ಕಿತ್ತಲೆ ಮುಂತಾದ ಯಾವ ಉತ್ತಮ ಜಾತಿಯ ಹಣ್ಣುಗಳನ್ನೂ ಇತರ ಉತ್ತಮ ವಸ್ತುಗಳನ್ನೂ

ಕಂಡರೂ ತಮ್ಮ ಊಳಿಗದವರಿಗೆ ಅವುಗಳನ್ನು ಯಥೇಷ್ಟವಾಗಿ ಕೊಡಿಸುತ್ತಿದ್ದರು. ಊಳಿಗದವರು ತಮ್ಮ ಮನೆಗಳಲ್ಲಿ ಕೊಂಡು ತಿನ್ನ ಲಾಗದಷ್ಟು ಹೆಚ್ಚಿನ ಬೆಲೆಯ ಬಟಾಣಿ ಮುಂತಾದ ಸಾಮಗ್ರಿಗಳೂ, ಭಕ್ಷ್ಯಾದಿಗಳೂ ಪುಷ್ಕಳವಾಗಿ ಅವರಿಗೆ ದೊರೆಯುವಂತೆ ಮಾಡುತ್ತಿದ್ದರು. ಟ್ರಾವೆಲರ್ಸ್ ಬಂಗಲೆಗಳಲ್ಲಿ ಒಂದೇ ಕೊಟಡಿಯಲ್ಲಿ ಪೂಜೆ, ಶಯನ ಮುಂತಾದುವುಗಳಿಗೆ ಏರ್ಪಾಡು ಮಾಡಿಸಿಕೊಂಡು ಉಳಿದುವುಗಳನ್ನು ತಮ್ಮ ಜೊತೆಯವರ ಉಪಯೋಗಕ್ಕಾಗಿ ಬಿಟ್ಟುಕೊಡುತ್ತಿದ್ದರು. ಊಳಿಗ ದವರಾರೂ ಬಯಲಿನಲ್ಲಿ ಮಲಗಿ ಹಿಮಕ್ಕೆ ಸಿಕ್ಕಿ ಕಷ್ಟಪಡದಂತೆ ನೋಡಿ ಕೊಳ್ಳುತ್ತಿದ್ದುದಲ್ಲದೆ, ನೀಲಗಿರಿ ಮುಂತಾದ ಸ್ಥಳಗಳಿಗೆ ಹೋದಾಗ ಅವರಿಗೆ ಶಾಖವಾದ ಉಡುಪುಗಳನ್ನೂ ಹಾಸಿಗೆ ಹೊದಿಕೆಗಳನ್ನೂ ಕೊಡಿಸು ತ್ತಿದ್ದರು. ಅವರು ತಮ್ಮನ್ನು ಬಾಲ್ಯದಲ್ಲಿ ಆಡಿಸಿದ್ದವರಿಗೆ ವರ್ಧಂತ್ಯುತ್ಸವ ನವರಾತ್ರಿ ಉತ್ಸವ ಕಾಲಗಳಲ್ಲಿ ಬೆಲೆಬಾಳುವ ಉಡುಪುಗಳನ್ನೂ ಮಾಸಾಶನ ಗಳನ್ನೂ ಕೊಡಿಸುತ್ತಿದ್ದರು. ಬೇಟೆಗೆ ಹೋಗುತ್ತಿದ್ದಾಗ ಜೊತೆಯಲ್ಲಿದ್ದ ಕಾಡು ಕುರುಬರಿಂದ ಹಿಡಿದು ದೊಡ್ಡ ಅಧಿಕಾರಿಗಳ ವರೆಗೆ ಸಮಸ್ತರಿಗೂ ಒಂದೇ ಬಗೆಯ ಭಕ್ಷ್ಯಭೋಜ್ಯಗಳ ಮಿಷ್ಟಾನ್ನ ಭೋಜನ ಮಾಡಿಸು ತ್ತಿದ್ದರು. ಈಗಿನ ಶ್ರೀಮನ್ಮಹಾರಾಜರವರಾದ ಶ್ರೀ ಜಯ ಚಾಮರಾಜ ಒಡೆಯರ್ ಬಹದ್ದೂರರವರು ಬೇಟೆಗೆ ದಯಮಾಡಿದಾಗಲೆಲ್ಲ ಅವರೂ ಅದೇ ರೀತಿ ನಡೆಯಿಸಿ ಕೃಪೆಮಾಡುತ್ತಿದ್ದಾರೆ. ಬೆಂಗಳೂರು ಅರಮನೆಯ ಕೆಲಸಗಾರರಿಗೂ, ಮೈಸೂರು ಅರಮನೆಯ ಇಲಾಖೆಯ ಕೆಲಸಗಾರರಿಗೂ ಆಗಾಗ ಬಹಳ ರುಚಿಕರವಾದ ಉಪಾಹಾರಗಳನ್ನೂ ಭಕ್ಷ್ಯಗಳನ್ನೂ, ಆಳಿದ ಮಹಾಸ್ವಾಮಿಯವರು ಅವರಿಗೆ ತೃಪ್ತಿಯಾಗುವಂತೆ ಕೊಡಿಸುತ್ತಿದ್ದರು. ಅರಮನೆಯ ಕಾವಲುಗಾರರಿಗೆ ಪ್ರಾತಃಕಾಲದಲ್ಲಿ ಹಸಿವಡಗುವಂತೆ ಉಪಾಹಾರಗಳನ್ನುಕೊಡಿಸುತ್ತಿದ್ದರು. ಕೆಲಸಗಾರರು ಬಿಸಿಲಿನ ಝಳದಿಂದ ತಪ್ಪಿಸಿಕೊಳ್ಳಲನುಕೂಲಿಸುವಂತೆ ಅವರಿಗೆಲ್ಲ "ಹ್ಯಾಟುಗಳನ್ನು" ಒದಗಿಸು ತ್ತಿದ್ದರು.

ಈಚೆಗೊಂದು ಸಲ, ಉಪಾಹಾರವೂ ಕಾಫಿಯೂ ಅಂತಃಪುರದಲ್ಲಿ ಸಿದ್ಧವಾಗಿದ್ದರೂ ಆಳಿದ ಮಹಾಪ್ರಭುಗಳವರು ಆಲೋಚನಾಮಗ್ನ ರಾಗಿದ್ದು ಅವುಗಳನ್ನು ಸೇವಿಸದೆಯೇ ಮೋಟಾರು ಬಂಡಿಯ ಬಳಿಗೆ ದಯಮಾಡಿದರು. ಒಡನೆಯೇ ಹಿಂದಿರುಗಿ ಬಂದು ನೋಡುವ ವೇಳೆಗೆ ಊಳಿಗದವನೊಬ್ಬನು ಅವುಗಳನ್ನು ಸೇವಿಸುತ್ತಿದ್ದುದನ್ನು ಕಂಡರು. ಆತನು ಅವುಗಳನ್ನು ಸೇವಿಸಿ ಮುಗಿಸುವವರೆಗೂ ಮರೆಯಾಗಿ ನಿಂತಿದ್ದು

ಅನಂತರ ಅಂತಃಪುರಕ್ಕೆ ಪ್ರವೇಶಿಸಿ, "ಎಲ್ಲಾ ಮುಗಿಯಿತೇನು"? ಎಂದು ಕೇಳಿದರು. ಆತನು ಭಯದಿಂದ ನಡುಗಿ ದೈನ್ಯದಿಂದ "ತಪ್ಪಾಯ್ತು ಮಾಸ್ವಾಮಿ. ಬುಟ್ಟುಹೋಗಿರಬಹುದೆಂದುಕೊಂಡೆ. ಮಾಫ್ ಮಾಡಿ ಕಾಪಾಡಬೇಕು, ಮಾಸ್ವಾಮಿ" ಎಂದು ಬೇಡಿಕೊಂಡನು. ಅವರು "ಇನ್ನುಮೇಲೆ ಹೀಗೆ ಮಾಡಬೇಡ" ಎಂದು ಬುದ್ಧಿಹೇಳಿದರು. ಆದರೆ, ಮಾರನೆಯ ದಿನದಿಂದ ತಮ್ಮ ಖಾಸಾ ಊಳಿಗದವರಿಗೂ ತಮಗೆ ಕೊಡುವಂತೆಯೇ ಉಪಾಹಾರವೂ ಕಾಫಿಯೂ ಆಗಬೇಕೆಂದು ಅಪ್ಪಣೆ ಮಾಡಿದರು; ಅಲ್ಲದೆ, ತಮಗೆ ಸಮರ್ಪಿತವಾಗುತ್ತಿದ್ದಷ್ಟು ಒಳ್ಳೆಯ ಪದಾರ್ಥಗಳೇ ಅವರಿಗೂ ತಕ್ಕಷ್ಟು ಪ್ರಮಾಣದಲ್ಲಿ ದೊರೆಯುತ್ತಿದ್ದುವೋ ಇಲ್ಲವೋ — ಎಂಬುದನ್ನು ಸಹ ಅವರು ಆಗಾಗ ಪರೀಕ್ಷಿಸಿ ನೋಡುತ್ತಿದ್ದರು.

ಆಳಿದ ಮಹಾಸ್ವಾಮಿಯವರು ತಮ್ಮ ಊಳಿಗದವರನ್ನೂ ತಮ್ಮ ಸೇವೆಮಾಡುತ್ತಿದ್ದ ಅಧಿಕಾರಿ ವರ್ಗದವರನ್ನೂ ತಂದೆಯು ಮಕ್ಕಳನ್ನು ನೋಡಿಕೊಳ್ಳುವಂತೆ ಪ್ರೀತಿ ವಿಶ್ವಾಸಗಳಿಂದ ನೋಡಿಕೊಳ್ಳುತ್ತ ಮಮತೆಯಿಂದ ಸಲಹುತ್ತಿದ್ದರು. ಪ್ರಾತಃಕಾಲ ಬಹಳ ಮುಂಚಿತವಾಗಿ ಎಂದು ಪ್ರಯಾಣ ಹೊರಟಾಗಲೇ ಆಗಲಿ, ಮೋಟಾರು ಬಂಡಿಯನ್ನು ನಡೆಯಿಸುವಾತನ ಬಳಿಗೆ "ಥರ್ಮೋಸ್ ಫ್ಲ್ಯಾಸ್ಕ್" ಜಾಡಿಗಳಲ್ಲಿ ಉಪಾಹಾರವೂ ಕಾಫಿಯೂ ಸಿದ್ಧವಾಗಿ ಬಂದಿರುತ್ತಿದ್ದುವು. ಸಿಗರೇಟಿನ ಚಟವನ್ನು ಇಟ್ಟುಕೊಂಡಿರುವ ಸೇವಕರಿಗೇಕೆ ತೊಂದರೆಯಾಗಬೇಕೆಂದು ಭಾವಿಸಿ, ಮಹಾಪ್ರಭುಗಳವರು ಮಾರ್ಗಮಧ್ಯದಲ್ಲಿ ಮೋಟಾರು ಬಂಡಿಯನ್ನು ನಿಲ್ಲಿಸುವಂತೆ ಆಜ್ಞಾಪಿಸಿ ಮರೆಯಾಗಿ ದೂರ ಚಿತ್ತೈಸಿ ಸ್ವಲ್ಪಕಾಲ ಸಂಚರಿಸಿ ಮತ್ತೆ ಮೋಟಾರು ಬಂಡಿಗೆ ಬರುತ್ತಿದ್ದುದು ವಾಡಿಕೆ. ಅವರು ಖಾಸಾ ಊಳಿಗಕ್ಕಾಗಿ ನೇಮಕವಾಗಿದ್ದವರಿಗೆ ಕೂಡ ನಿದ್ರಾಭಂಗವಾಗಕೂಡದೆಂಬ ಉದ್ದೇಶದಿಂದ ಸ್ವಲ್ಪವೂ ಶಬ್ದವಾಗದಂತೆ ನಡೆದು ಬರುತ್ತಿದ್ದುದೂ ವಾಡಿಕೆ. ಒಂದು ಸಲ ಮಾಘ–ಮಕರ ಮಾಸದಲ್ಲಿ ಕಾಶೀಕ್ಷೇತ್ರಕ್ಕೆ ಹೋಗಿದ್ದಾಗ ಕಾಶೀಮಹಾರಾಜರು ಬಿಟ್ಟುಕೊಟ್ಟಿದ್ದ ನಂದೇಶ್ವರಕೋಠಿ ಅರಮನೆಯಲ್ಲಿ ಅವರು ಬಿಡಾರಮಾಡಿದ್ದರು. ಅವರು ಬೆಳಗಿನ ಜಾವ ನಾಲ್ಕು ಘಂಟೆಗೇ ನಿದ್ರೆಯಿಂದೆದ್ದು ಗಂಗಾಸ್ನಾನಕ್ಕೆ ದಯಮಾಡಿದರು. ವಾಡಿಕೆಯಂತೆ ಜೋಡುಗಳನ್ನು ಮೆಟ್ಟಿಕೊಂಡು ಮಹಡಿಯ ಮೆಟ್ಟಲುಗಳನ್ನಿಳಿದರೆ ಶಬ್ದವಾಗಿ ತಮ್ಮ ಊಳಿಗದವರಿಗೂ ಇತರರಿಗೂ ನಿದ್ರಾಭಂಗವಾದೀತೆಂದು ಭಾವಿಸಿ, ತಮ್ಮ ಜೋಡುಗಳನ್ನು

ಕೈಯಲ್ಲಿ ಹಿಡಿದು ಉಪ್ಪರಿಗೆಯಿಂದಿಳಿದ ಬಳಿಕ ಕಾಲುಗಳಿಗೆ ಮೆಟ್ಟಿ ಕೊಂಡು, ಅಲ್ಲಿಗೆ ಮೂರೂವರೆ ಮೈಲಿಗಳ ದೂರದಲ್ಲಿರತಕ್ಕ ಹನುಮಾನ್ ಘಾಟ್ ಸ್ನಾನಘಟ್ಟಕ್ಕೆ ಶಾಸ್ತ್ರಿಗಳೊಡನೆ ನಡೆದುಕೊಂಡೇ ಹೋದರು. ಪರಿವಾರದವರು ಅದನ್ನರಿಯದೆ, ತಾವು ನಿದ್ರೆಯಿಂದೆಚ್ಚತ್ತಾಗ ಅವರು ಇನ್ನೂ ನಿದ್ರಿಸುತ್ತಿದ್ದರೆಂದು ಶಂಕಿಸಿ ಪಿಸುಮಾತುಗಳನ್ನಾಡಿ ಚರ್ಚಿಸು ತ್ತಿರುವಲ್ಲಿ, ಸ್ನಾನ ಸಂಧ್ಯಾವಂದನಾದಿಗಳನ್ನು ತೀರಿಸಿಕೊಂಡು ಅವರು ಹಿಂತಿರುಗಿದರು. ಅದನ್ನು ಕಂಡು ಅವರೆಲ್ಲರೂ ಬೆಕ್ಕಸಬೆರಗಾದರು.

ನಮ್ಮುಖದ ಅಧಿಕಾರಿಗಳಲ್ಲಿ ಮಹಾಪ್ರಭುಗಳವರಿಗೆ ವಿಶೇಷ ಪ್ರೀತಿ ಮಮತೆಗಳಿದ್ದುದಕ್ಕೆ ಉತ್ತಮವಾದ ಮತ್ತೊಂದು ನಿದರ್ಶನವನ್ನೂ ಇಲ್ಲಿ ಸೂಚಿಸಬಹುದಾಗಿದೆ. ಕೇದಾರಕ್ಷೇತ್ರಕ್ಕೆ ಹೋಗಿದ್ದಾಗ ಪರಿವಾರದ ಅಧಿಕಾರಿಗಳಲ್ಲಿ ಬದರೀ ನಾರಾಯಣ ಕ್ಷೇತ್ರಕ್ಕೆ ಹೋಗಿಲ್ಲದಿದ್ದವರನ್ನು ಕುರಿತು, "ಇಷ್ಟು ದೂರ ಹೇಗೂ ಬಂದಿದ್ದೀರಿ. ಬದರೀ ನಾರಾಯಣ ಕ್ಷೇತ್ರ ಯಾತ್ರೆಗೂ ಹೋಗಿ ಬನ್ನಿ" ಎಂದು ಹೇಳಿ ಕಳುಹಿಸಿಕೊಟ್ಟರು. ಅವರು ಹಿಂತಿರುಗಿ ಬರುವವರೆಗೂ ಅತ್ಯಂತ ಚಳಿಯ ಕೊರೆತವಿದ್ದರೂ ಕೇದಾರನಾಥ ಕ್ಷೇತ್ರದಲ್ಲಿ ಹಲವು ದಿನಗಳು ಬಿಡಾರಮಾಡಿದರು. ಬದರೀ ನಾಥಯಾತ್ರೆಗೆ ಹೋಗಿದ್ದವರು ಸಕಾಲಕ್ಕೆ ಹಿಂತಿರುಗಿ ಬಾರದೆಹೋದ ಕಾರಣ ಮಹಾಪ್ರಭುಗಳವರು ಆತಂಕಪಡುತ್ತ ಅಪಾಯ ಸಂಭವಕ್ಕೂ ಅಳುಕದೆ ಅತ್ಯಂತ ಪ್ರಯಾಸದಿಂದ ಕಡಿದಾದ ಒಂದು ದೊಡ್ಡ ಬಂಡೆ ಯನ್ನೇರಿ "ಬೈನಾಕ್ಯುಲರ್" ದೂರ ದರ್ಶಕವನ್ನಿಟ್ಟುಕೊಂಡು ನೋಡಿ ನೋಡಿ ನಿರೀಕ್ಷಿಸಲಾರಂಭಿಸಿದರು.

ಈಗ್ಗೆ ಹದಿಮೂರು ವರ್ಷಗಳ ಹಿಂದೆ ಒಂದುಸಲ ಹುಲಿಯ ಬೇಟೆಯಲ್ಲಿ ಕಾಡುಕುರುಬನೊಬ್ಬನು ಅಪಾಯಕ್ಕೆ ಗುರಿಯಾಗಿ ಅವನ ಕುಟುಂಬಕ್ಕೆ ಸಂಪಾದನೆಯು ತಪ್ಪಿತು. ಅವನು ಸಾಲಮಾಡಿ ಲಬ್ಬೆ ಸಾಹುಕಾರರಲ್ಲಿ ತನ್ನ ಮಕ್ಕಳನ್ನು ಜೀತಕ್ಕಿಟ್ಟು ಹೊಣೆ ಮಾಡಿದ್ದನೆಂಬುದೇ ಮುಂತಾದ ವಿಷಯಗಳನ್ನೆಲ್ಲ ಮಹಾಪ್ರಭುಗಳವರು ವಿಚಾರಿಸಿ ತಿಳಿದು ಕೊಂಡರು. ಅವರು ಆ ಸಾಲಗಳನ್ನೂ ಸತ್ತಿನ ಮೇಲೆ ಅವನು ಮಾಡಿ ಕೊಂಡಿದ್ದ ಸಾಲಗಳನ್ನೂ ತೀರಿಸಿ, ಹೊಸ ಮನೆಯನ್ನು ಕಟ್ಟಿಸಿಕೊಟ್ಟು, ಎತ್ತುಗಳನ್ನೂ ಹಸುಗಳನ್ನೂ ಕೊಂಡುಕೊಟ್ಟು, ಫಲವತ್ತಾದ ಭೂಸ್ಥಿತಿ ಗಳನ್ನು ಕೊಡಿಸಿ, ನಗದು ಏಳನೂರೈವತ್ತು ರೂಪಾಯಿಗಳನ್ನೂ, ಮುಂದೆ ಬೆಳೆ ಬರುವವರೆಗೆ ಕುಟುಂಬಭರಣಕ್ಕೆ ಅವಶ್ಯವಾದಷ್ಟು ಧಾನ್ಯಗಳನ್ನೂ ದಯಪಾಲಿಸಿದರು; ಸುಖಜೀವನಕ್ಕೆ ಅವಕಾಶವನ್ನು ಕಲ್ಪಿಸಿ ಅನುಕೂಲ

ಮಾಡಿಕೊಟ್ಟರು. ಈಗ್ಗೆ ಹನ್ನೆರಡು ವರ್ಷಗಳ ಹಿಂದೆ ಮೈಸೂರು ನಗರದಲ್ಲಿ ಸಿಡುಬಿನ ವ್ಯಾಧಿಯು ಉಲ್ಬಣವಾಗಿ ಅದು ಮಹಾಪ್ರಭುಗಳವರಿಗೂ ಸಂಭವಿಸಿತು. ಆಗ ಅವರು ಸ್ವಂತ ಯೋಗಕ್ಷೇಮಕ್ಕಿಂತಲೂ ರಾಜಕುಟುಂಬದವರ, ಪರಿವಾರದವರ ಮತ್ತು ಊಳಿಗದವರ ಯೋಗಕ್ಷೇಮದಲ್ಲಿ ಹೆಚ್ಚಿನ ಆಸಕ್ತಿಯನ್ನು ವಹಿಸಿ ಅವರಲ್ಲಿ ಸಿಡುಬು ಏಳದಿದ್ದವರಾರೂ ತಮ್ಮ ಬಳಿಗೇ ಬಾರದೆ ದೂರದಲ್ಲಿರಬೇಕೆಂದೂ, ದೇವೀ ಹಾಕಿಸಿಕೊಳ್ಳಬೇಕೆಂದೂ, ಅಪ್ಪಣೆಮಾಡಿದರು. ಅಲ್ಲದೆ, ಸಿಡುಬಿನಿಂದ ಪ್ರಜೆಗಳಿಗೆ ಅಪಾಯವಾಗದಂತೆ ಸಾಧ್ಯವಾದ ಸಮಸ್ತ ಏರ್ಪಾಡುಗಳೂ ನಡೆಯಬೇಕೆಂದು ಆಜ್ಞಾಪಿಸಿ, ಸಹಿಸಲಶಕ್ಯವಾದ ಬಾಧೆಯಿಂದ ತಾವು ನರಳುತ್ತಿದ್ದಾಗಲೂ ಅವುಗಳ ವಿಷಯವನ್ನೂ ಪ್ರಜೆಗಳ ಯೋಗಕ್ಷೇಮವನ್ನೂ ವಿಚಾರಿಸಿ ತಿಳಿದುಕೊಳ್ಳುತ್ತ, ನಾನಾ ಅನುಜ್ಞೆಗಳನ್ನು ದಯಪಾಲಿಸುತ್ತಿದ್ದರು. ಈಚೆಗೆ ಕೆಲವು ವರ್ಷಗಳ ಹಿಂದೆ (ಎಂದರೆ, ಯೂರೋಪು ಖಂಡದ ಪ್ರವಾಸ ಹೋಗಿದ್ದ ಕಾಲಕ್ಕೆ ಸ್ವಲ್ಪ ಮುಂಚೆ) ಮಹಾಪ್ರಭುಗಳವರಿಗೆ ಪ್ರಬಲವಾದ ದೇಹಾಲಸ್ಯವುಂಟಾಗಿ ಕೊನೆಗೆ ರೋಗವು ಗುಣಮುಖವಾಯಿತು. ಅವರಿಗೆ ಮಾತನಾಡಲು ಚೈತನ್ಯ ಬಂದಾಗ, ಪರಿಜನರನ್ನು ಕುರಿತು, "ನಿಮಗೆಲ್ಲರಿಗೂ ಎಷ್ಟು ಕಷ್ಟವಾಯಿತೋ ಏನೊ! ಸಕಾಲದಲ್ಲಿ ಆಹಾರ ನಿದ್ರೆಗಳಿಗೂ ಅವಕಾಶವಿಲ್ಲದಂತೆ ನಮ್ಮಿಂದ ಬಹಳ ತೊಂದರೆಯಾಗಿರಬೇಕು" ಎಂದರು; ಅವೇ ಅವರು ಮೊಟ್ಟಮೊದಲು ಆಡಿದ ಮಾತುಗಳು.

ದಿವಾನ್‌ರವರಾದ ಸರ್ ಮಿರ್ಜಾ ಎಂ. ಇಸ್ಮಾಯಿಲ್‌ರವರು ತಮ್ಮದೊಂದು ಭಾಷಣದಲ್ಲಿ, "ಎಷ್ಟೇ ಶ್ರೇಷ್ಠ ವ್ಯಕ್ತಿಯಾಗಲಿ ಅವನ ಸೇವಕನಿಗೆ ಮಹನೀಯನಾಗಿ ಕಾಣನೆಂದು ಕಾರ್ಲೈಲ್ ಎಂಬಾತನು ಬರೆದಿದ್ದಾನೆ. ಆತನು ನಮ್ಮ ಪ್ರಭುಗಳವರಾದ ಶ್ರೀಕೃಷ್ಣರಾಜ ಒಡೆಯರವರನ್ನು ನೋಡಿರಲಿಲ್ಲ" ಎಂದು ಹೇಳಿದ್ದರು. ಮಹಾಪ್ರಭುಗಳವರಲ್ಲಿ ಪರಿಜನರಿಗಿದ್ದ ಭಕ್ತಿ ವಿಶ್ವಾಸಗಳು ಅಪರಿಮಿತವಾಗಿದ್ದುವು.

**ನಿಷ್ಪಕ್ಷಪಾತ**

ಮಹಾಪ್ರಭುಗಳವರು ಅರಸು ಪಂಗಡದ ವಿದ್ಯಾರ್ಥಿ ವಿದ್ಯಾರ್ಥಿನಿಯರಿಗೆ ವಿದ್ಯಾಭ್ಯಾಸಕ್ಕೂ ಭೋಜನವಸತಿಗಳಿಗೂ ಸೌಕರ್ಯಗಳನ್ನು ಕಲ್ಪಿಸಿದ್ದರಾದರೂ ನಿಷ್ಪಕ್ಷಪಾತ ದೃಷ್ಟಿಯುಳ್ಳವರಾಗಿದ್ದುದು ಮನೋಜ್ಞವಾಗಿದೆ: ಒಂದುಸಲ, ಇಂಜನಿಯರಿಂಗ್ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದ ಅರಸು ಪಂಗಡದ ಯುವಕರೊಬ್ಬರು ತಮಗೆ ಒಂದು

ಉದ್ಯೋಗವನ್ನು ದಯಪಾಲಿಸಬೇಕೆಂದು ಮಹಾಪ್ರಭುಗಳವರನ್ನು ಪ್ರಾರ್ಥಿಸಿದರು. ಅವರು, "ವಿದ್ಯಾಭ್ಯಾಸಕ್ಕೇನೊ ಸಂತೋಷದಿಂದ ಸಹಾಯಮಾಡಿದೆವು. ಉದ್ಯೋಗದ ವಿಷಯಕ್ಕೆ ಮಾತ್ರ ಸುವ್ಯವಸ್ಥಿತ ವಾದ ಸರ್ಕಾರವಿದೆ. ಅಧಿಕಾರಿಗಳಿದ್ದಾರೆ. ನೀವು ಅವರಲ್ಲಿ ಹೋಗಿ ಕೇಳಬೇಕು. ನಾವೇನೋ ನಿಮಗೆ ಉದ್ಯೋಗವನ್ನು ಕೊಡಬಹುದು. ಆದರೆ ನಿಮಗಿಂತ ಹೆಚ್ಚಿನ ಅರ್ಹತೆಯುಳ್ಳವರಿದ್ದರೆ, ಅವರಿಗೆ ಅನ್ಯಾಯ ಮಾಡಿದಂತಾಗುತ್ತದೆ. ಅಲ್ಲದೆ, ನಾವೇ ಇತರರಿಗೆ ವಹಿಸಿಕೊಟ್ಟಿರುವ ಅಧಿಕಾರವನ್ನು ನಾವು ಚಲಾಯಿಸಿದಂತಾಗುತ್ತದೆ" ಎಂದು ಉತ್ತರ ಹೇಳಿದರು. ಸರ್ಕಾರಿ ಉದ್ಯೋಗಸ್ಥರಾಗಿದ್ದ ಅರಸು ಸಂಗಡದವರು ಸರಿಯಾಗಿ ಕೆಲಸ ಮಾಡದೆಹೋಗಿ ಅವರು ಅರಸು ಜನಾಂಗದವರೆಂಬ ನಿಮಿತ್ತದಿಂದ ಹೆಚ್ಚಿನ ಅಪಖ್ಯಾತಿಯೆಲ್ಲಿ ಬಂದೀತೋ — ಎಂಬುದು ಮಹಾಪ್ರಭುಗಳವರಿಗಿದ್ದ ಆತಂಕ. ಒಂದುಸಲ, ಅರಸು ಸಂಗಡದ ವಿದ್ಯಾವಂತರೊಬ್ಬರು ಸರ್ಕಾರದ ದೊಡ್ಡ ಹುದ್ದೆಯೊಂದಕ್ಕೆ ನೇಮಕ ವಾದರು. ಅವರು ಮಹಾಪ್ರಭುಗಳವರ ಸಂದರ್ಶನವನ್ನು ಪಡೆದು ಕೃಪಾಶೀರ್ವಾದಗಳನ್ನು ಬೇಡಿದಾಗ "ನೀವು ಒಳ್ಳೆಯದನ್ನು ಮಾಡಿದರೂ ಕೆಟ್ಟದನ್ನು ಮಾಡಿದರೂ ಮಹಾರಾಜರ ಬಂಧುಗಳೆಂಬ ಮಾತು ಬರುತ್ತದೆ. ಸರ್ವದಾ ಇದನ್ನು ಮನಸ್ಸಿನಲ್ಲಿಟ್ಟುಕೊಂಡು ಉತ್ತಮರೀತಿ ಯಲ್ಲಿ ಕೆಲಸಮಾಡಿ. ಶ್ರೀ ಚಾಮುಂಡೇಶ್ವರೀದೇವಿ ಒಳ್ಳೆಯದನ್ನು ಮಾಡಲಿ!" ಎಂದು ಬುದ್ಧಿ ಹೇಳಿ ಹರಸಿದರು. ಆ ಮಹಾಶಯರು ಈಗ ಇನ್ನೂ ಭಾರಿ ಉದ್ಯೋಗಕ್ಕೇರಿ ವರ್ಧಿಷ್ಣುಗಳಾಗಿದ್ದಾರೆ.

ಆಳಿದ ಮಹಾಸ್ವಾಮಿಯವರು ತಮ್ಮ ಸಮಸ್ತ ಪ್ರಜೆಗಳಲ್ಲಿಯೂ ಪ್ರೀತಿವಿಶ್ವಾಸವುಳ್ಳವರಾಗಿ ಅಭಿಮಾನವನ್ನಿಟ್ಟಿದ್ದರು. ಅವರು ತಮ್ಮ ಪ್ರಜೆಗಳಿಗೆ ತಮ್ಮಿಂದ ಸಾಧ್ಯವಿದ್ದ ಸಮಸ್ತ ಸಹಾಯಗಳನ್ನೂ ಮಾಡುತ್ತಿದ್ದರು. ಜನರಿಗೆ ಅವರು ವಿವಿಧ ರೀತಿಗಳಲ್ಲಿ ಕೃಪೆತೋರುತ್ತಿದ್ದರು.

**ಜನಾಭಿಮಾನ**

ಒಂದುಸಲ, ಎದೆನೋವಿನಿಂದ ನರಳುತ್ತ ಹೊಲದ ಬಳಿಯಲ್ಲಿ ಹೊರಳಾಡು ತ್ತಿದ್ದ ರೈತನೊಬ್ಬನನ್ನು ತಮ್ಮ ಮೋಟಾರು ಬಂಡಿಯಲ್ಲಿ ಕುಳ್ಳಿರಿಸಿ ಕೊಂಡುಹೋಗಿ ಮೈಸೂರಿನಲ್ಲಿ ಅವನ ಚಿಕಿತ್ಸೆಗೆ ಏರ್ಪಾಡುಮಾಡಿಸಿದರು; ಅಲ್ಲದೆ, ಅವನ ಕುಟುಂಬದವರಿಗೆ ಆ ವಿಚಾರವನ್ನು ಅದೇ ದಿನವೇ ತಿಳಿಸಿ ಧೈರ್ಯಹುಟ್ಟಿಸುವ ಏರ್ಪಾಡನ್ನೂ ಮಾಡಿದರು. ಇನ್ನೊಂದುಸಲ, ಚಿಕ್ಕಬಳ್ಳಾಪುರದ ಮಾರ್ಗವಾಗಿ ಮಹಾಪ್ರಭುಗಳವರು ದಯಮಾಡು

ತ್ತಿದ್ದಾಗ, ಕುರುಡ ಹುಡುಗನೊಬ್ಬನನ್ನು ಕಂಡು, ಪೋಷಕರಿಲ್ಲದಿದ್ದ ಆತನಲ್ಲಿ ಮರುಕಗೊಂಡು, ಮೈಸೂರು ನಗರಕ್ಕೆ ಬರಮಾಡಿ, ಪೀಟಿಲು ನುಡಿಸುವುದನ್ನು ಪಾಠ ಹೇಳಿಸಿದರು. ಆತನ ಪೋಷಣೆಯ ಭಾರವನ್ನೆಲ್ಲ ತಾವೇ ವಹಿಸಿದರು. ಆಗಿನ ಬಾಲಕನೇ ಇಂದು ದೊಡ್ಡ ವಿದ್ವಾಂಸರಾಗಿ ಖ್ಯಾತಿಯನ್ನು ಗಳಿಸಿದ್ದಾರೆ. ಕನ್ನಡ ಲಾವಣಿಗಳನ್ನು ಹಾಡುತ್ತಿದ್ದ ಮುಸಲ್ಮಾನ್ ಮತದ ಕುರುಡನೊಬ್ಬನನ್ನು ಕಂಡು, ಅವನಲ್ಲಿ ಮರುಕ ತೋರಿ ಪ್ರತಿ ತಿಂಗಳೂ ಮಹಾಪ್ರಭುಗಳು ಅವನಿಗೆ ಹಣವನ್ನು ಕಳುಹಿಸು ತ್ತಿದ್ದರು. ಪ್ರತಿ ಸಲವೂ ಅವನನ್ನು ನವರಾತ್ರಿ ಹಬ್ಬಕ್ಕೆ ಬರಮಾಡಿ ಕೊಂಡು, ಲಾವಣಿಗಳನ್ನು ಹೇಳಿಸಿ ಕೇಳಿ, ಅವನಿಗೆ ಬಹುಮಾನವಾಗಿ ಹಣವನ್ನು ಕೊಟ್ಟು, ಅವನಿಗೆ ಸ್ವಲ್ಪವೂ ತೊಂದರೆಯಾಗದಂತೆ ನೋಡಿ ಕೊಂಡು ಹಿಂದಕ್ಕೆ ಕಳುಹಿಸುತ್ತಿದ್ದರು.

ಕೆಂಡಗಣ್ಣಸ್ವಾಮಿ ಗದ್ದುಗೆಯ ಬಳಿಯಲ್ಲಿರುವ ಒಂದು ಗ್ರಾಮ. ಅಲ್ಲೊಬ್ಬ ಲಂಬಾಣಿಗ ರಾಮನೆಂಬ ಬುದ್ಧಿಸ್ವಾಧೀನವಿಲ್ಲದ ಅರೆ ಹುಚ್ಚ ಮನುಷ್ಯ. ಅವನನ್ನು ಅಣ್ಣ ತಮ್ಮಂದಿರು ಮನೆಯಿಂದೋಡಿಸಿದ್ದರು. ಅವನಿಗಿದ್ದ ಅಕ್ಕನೂ ಅವನಿಂದ ತನ್ನ ಮಕ್ಕಳಿಗೆ ಅಪಾಯವಾದೀತೆಂದು ಭಾವಿಸಿ ಅವನನ್ನು ಮನೆಯಿಂದ ಓಡಿಸಿದ್ದಳು. ಒಂದು ದಿನ, ಸಮೀಪದ ಕಾಡಿಗೆ ದನಗಳನ್ನು ಹೊಡೆದುಕೊಂಡುಹೋಗಿದ್ದ ತುಂಟ ಹುಡುಗರು ಅವನನ್ನು ಪೀಡಿಸಿ ಕಲ್ಲು ಹೊಡೆಯುತ್ತಿದ್ದರು. ಆಗ ಅವನು, "ಬ್ಯಾಡಿ, ಬ್ಯಾಡಿ. ನಮ್ಮ ಧೊರೆಗಳಿಗೆ ಹೇಳಿ ಕೊರಡೇಲಿ ಹೊಡೆಸ್ತೇನಿ. ಧೊರೆ ಗಳೇ ಬನ್ನಿ ಬನ್ನೀ ನನ್ನೊಡೆಯಾ. ನನ್ಗೆ ಇವರ ಕಾಟಾ ತಪ್ಪಿಸೀ ನನ್ನೊಡೆಯಾ" ಎಂದು ಕೂಗುವ ವೇಳೆಗೂ, ಆ ಸುತ್ತಿನಲ್ಲಿ ಹುಲಿ ಬೇಟೆಯ ಏರ್ಪಾಡನ್ನು ನೋಡಲು ಬಂದಿದ್ದ ಮಹಾಪ್ರಭುಗಳವರು ಅಕಸ್ಮಾತ್ತಾಗಿ ಅಲ್ಲಿಗೆ ದಯಮಾಡುವ ವೇಳೆಗೂ ಸರಿಹೋಯಿತು. ಅವರು ವಿದ್ಯಮಾನಗಳನ್ನೆಲ್ಲ ವಿಚಾರಿಸಿ ಅವನಲ್ಲಿ ಕೃಪೆತೋರಿ, ಅವನನ್ನು ಮೈಸೂರಿಗೆ ಕರೆದುಕೊಂಡುಹೋಗಿ, ಅವನ ಪೋಷಣೆಗೆ ಉತ್ತಮವಾದ ಏರ್ಪಾಡನ್ನು ಮಾಡಿಸಿದರು.

ಒಂದುಸಲ, ಮಹಾಪ್ರಭುಗಳವರು ಮೋಟಾರು ಬಂಡಿಯಲ್ಲಿ ಹೋಗುತ್ತಿದ್ದಾಗ ಮಾರ್ಗ ಮಧ್ಯದಲ್ಲಿ ಶಾಖವೇರಿ ನೀರು ಕುದಿದು ಹೋಗಿ ಮೋಟಾರು ಬಂಡಿಯನ್ನು ನಿಲ್ಲಿಸಿ ನೀರನ್ನು ಹಾಕಬೇಕಾಯಿತು. ಅಲ್ಲಿದ್ದ ರೈತನೊಬ್ಬನು ಸುಮಾರು ಒಂದು ಮೈಲಿಯ ದೂರ ಹೋಗಿ ನೀರನ್ನು ತಂದುಕೊಟ್ಟನು. ಮಹಾಪ್ರಭುಗಳವರು ಅವನ ಶ್ರಮಕ್ಕಾಗಿ

ಉದಾರವಾಗಿ ಹಣವನ್ನು ಕೊಟ್ಟರು. ಅವನು ಮಹಾಪ್ರಭುಗಳವರನ್ನು ದಸರಾ ಮೆರೆವಣಿಗೆಯಲ್ಲಿ ನೋಡಿ ಬಂದಿದ್ದವನಾದ ಕಾರಣ, ಅವರನ್ನು ದೃಷ್ಟಿಸಿ ನೋಡಿದಾಗ ಗುರುತು ಹಿಡಿದು, "ಇವೊತ್ತು ನಮ್ಮ ಧೊರೇ ಸೇವೆ ಸಿಕ್ತು" ಎಂದು ಸಂತೋಷದಿಂದ ಹೇಳಿ ಕೈಮುಗಿದಾಗ ಕರುಣಾರ್ದ್ರ ಹೃದಯರಾಗಿದ್ದ ಅವರ ಕಣ್ಣುಗಳಿಂದ ನೀರು ಉರುಳಿತು.

ಪ್ರತಿದಿನವೂ ಮೈಸೂರು ನಗರದ ವೃದ್ಧರೊಬ್ಬರು ಕಾಲಕ್ಕೆ ಸರಿಯಾಗಿ ಸಂಚಾರಾರ್ಥವಾಗಿ ಹೋಗುತ್ತಿದ್ದರು. ಅದನ್ನು ಕಂಡ ಮಹಾಪ್ರಭುಗಳವರು ಅಪರಿಚಯಸ್ಥರಾದ ಆ ವೃದ್ಧರಿಗೆ ಸೊಗಸಾದ ಒಂದು ಕೋಲನ್ನು ಪಾರಿತೋಷಿಕವಾಗಿ ಕಳುಹಿಸಿದರು. ಬೆಳೆವಣಿಗೆ ಮುಟ್ಟುಬಿದ್ದು ಕೈಕಾಲುಗಳು ಸರಿಯಾಗಿಲ್ಲದಿದ್ದ ಒಬ್ಬರು ವಿದ್ಯಾವಂತರಿಗೆ ಅವರ ಸಂಚಾರಕ್ಕನುಕೂಲಿಸುವಂತಿದ್ದ ವಿಶೇಷ ವಿಧದ ಮೋಟಾರು ಬಂಡಿಯೊಂದನ್ನು ತರಿಸಿಕೊಟ್ಟುದಲ್ಲದೆ ಅವರಿಗೆ ಜೀವನವನ್ನೂ ಕಲ್ಪಿಸಿ ಕೊಟ್ಟರು. ಅರಮನೆಯ ಕೆಲಸಮಾಡುತ್ತಿದ್ದ ಅಧಿಕಾರಿಯವರೊಬ್ಬರಿಗೆ ಸಂಚಾರ ಸಾಮರ್ಥ್ಯ ತಪ್ಪಿಹೋದಾಗ ಕುಳಿತೆಡೆಯಲ್ಲೇ ಅವರು ಕೆಲಸ ಮಾಡಲು ಸಮಸ್ತ ಸೌಕರ್ಯಗಳನ್ನೂ ಕಲ್ಪಿಸಿ ಸಹಾಯಮಾಡಿದರು.

ನೀಲಗಿರಿಗೆ ಹೋಗುವ ಮಾರ್ಗದಲ್ಲಿ ಮಹಾಪ್ರಭುಗಳವರು ದಯಮಾಡಿದಾಗಲೆಲ್ಲ ಪ್ರತಿಯೊಂದು ಸಲವೂ ನಾಲುಮರಗಳಿಗೆ ಸುಣ್ಣ ಕೆಮ್ಮಣ್ಣುಗಳ ಪಟ್ಟಿಗಳನ್ನು ಹಾಕುತ್ತಿದ್ದುದು ವಾಡಿಕೆ. ಒಂದುಸಲ, ಪ್ರಯಾಣಕ್ಕೆ ಗೊತ್ತಾಗಿದ್ದುದಕ್ಕಿಂತ ಎರಡು ದಿನ ಮುಂಚಿತವಾಗಿಯೇ ಮಹಾಪ್ರಭುಗಳವರು ಪ್ರಯಾಣಮಾಡಿದರು. ದಾರಿಯಲ್ಲಿ ಹಣ್ಣು ಮುದುಕಿಯೊಬ್ಬಳು ಒಂದು ಮರಕ್ಕೆ ಸುಣ್ಣದ ಮತ್ತು ಕೆಮ್ಮಣ್ಣಿನ ಪಟ್ಟಿಗಳನ್ನು ಹಾಕುತ್ತಿದ್ದಳು. ಅವಳು ದಿಕ್ಕಿಲ್ಲದ ಅನಾಥೆ; ಕೂಲಿಯಿಂದ ಜೀವಿಸುತ್ತಿದ್ದವಳು; ಅವಳು ವಾಸವಾಗಿದ್ದ ಗ್ರಾಮದ ಪಟೇಲನು ಉಚಿತವಾಗಿ ಅವಳು ಮಾಡಬೇಕಾಗಿದ್ದ ಅವಳ ಸರದಿಯ ಕೆಲಸವನ್ನು ಅವಳು ಮಾಡಲೇಬೇಕೆಂದು ಅಪ್ಪಣೆಮಾಡಿದ್ದನು. ಮಹಾಪ್ರಭುಗಳವರು ಮೋಟಾರು ಬಂಡಿಯನ್ನು ನಿಲ್ಲಿಸಿ, ಕೆಳಕ್ಕಿಳಿದು ಅವಳೇಕೆ ಆ ಕೆಲಸವನ್ನು ಮಾಡುತ್ತಿದ್ದಳೆಂದು ಕೇಳಿದರು. ಅವಳು "ಯಾರೋ ಮಹಾರಾಜರಂತಪ್ಪ. ಈ ಕಡೇ ಹೋಗ್ತಾರಂತೆ. ನನ್ನೇಯಿಂದ ಹೊಟ್ಟೆಗಿಲ್ಲ. ಕೂಲೀ ಜೀವನ್ದೋಳು, ನಾನು. ಇದರಾಗೆ ಈ ಪಟ್ಟೇ ಬಳಿಯೋ ಸರದಿಯಂತೆ. ಪಟೇಲ ಪ್ರಾಣಾ ಹಿಂಡ್ತಾನೆ. ನಿಲ್ಲೋಕೇ ತ್ರಾಣಾ ಇಲ್ಲ. ದಿಕ್ಕಿಲ್ದೋಳು. ಮಹಾರಾಜ್ರು ಬಂದ್ರೇನು,

ಹೋದ್ರೇನು, ನನ್ನ ಜೀವಾ ಹೋಗ್ತಿರೋದು ಯಾರಿಗಪ್ಪಾ ಗೊತ್ತು?" ಎಂದಳು. ಕೃಪಾಳುಗಳಾದ ಮಹಾಪ್ರಭುಗಳವರು ಆಕೆಗೆ ಹಣ್ಣು ಗಳನ್ನೂ ಹಣವನ್ನೂ ಕೊಟ್ಟು ಆ ಕೆಲಸವನ್ನು ನಿಲ್ಲಿಸುವಂತೆ ಹೇಳಿ ಮುಂದಕ್ಕೆ ಹೊರಟರು. ಅಲ್ಲದೆ ಸಾಲು ಮರಗಳಿಗೆ ಇನ್ನೆಂದೂ ಸುಣ್ಣ ಕೆಮ್ಮಣ್ಣುಗಳ ಪಟ್ಟಿಗಳನ್ನು ಹಾಕಕೂಡದೆಂದು ಆಜ್ಞೆಮಾಡಿದರು.

ಒಂದುಸಲ, ಕೃಷ್ಣರಾಜಪೇಟೆಗೆ ಹೋಗಿದ್ದಾಗ, ಮಹಾಪ್ರಭು ಗಳವರ ಬಿಡಾರದ ಬಳಿಗೆ ದರ್ಶನಾಪೇಕ್ಷಿಗಳಾಗಿ ಸುತ್ತ ಮುತ್ತಲಿನ ಗ್ರಾಮಗಳ ಜನರು ಬಂದು ತುಂಬಿದರು. ಅಮಲ್ದಾರರವರು ಅವರನ್ನು ಮುಂದೆ ಬಿಡದೆ ತಡೆಯುವಂತೆ ತಮ್ಮ ಕೈಕೆಳಗಿನವರಿಗೆ ಅಪ್ಪಣೆಮಾಡಿ ದರು. ಮಹಾಪ್ರಭುಗಳವರು ಅಮಲ್ದಾರರನ್ನು ತಮ್ಮ ಬಳಿಗೆ ಕರೆದು, "ಪಾಪ, ದೂರದಿಂದ ಬಂದಿದ್ದಾರೆ. ಅವರನ್ನೇಕೆ ತಡೆಯಬೇಕು? ಹತ್ತಿರಕ್ಕೆ ಬರಲಿ" ಎಂದರು.

೧೯೨೯ನೆಯ ಇಸವಿಯಲ್ಲಿ ಮಾದೇಶ್ವರ ಬೆಟ್ಟಕ್ಕೆ ಮಹಾಪ್ರಭು ಗಳವರು ದಯಮಾಡಿದ್ದಾಗ ಹತ್ತು ಮೈಲಿಗಳ ದೂರದ ಹಳ್ಳಿಯಿಂದ "ಧೊರೆಗಳ್ಗೆ ಲಾವಣಿ ಕೇಳಿಸಬೇಕು" ಎಂದು ನಡೆದುಬಂದಿದ್ದ ಹಣ್ಣು ಮುದುಕನಲ್ಲಿ ಆದರತೋರಿ, ಲಾವಣಿಯನ್ನು ಕೇಳಿ, ಅವನಿಗೆ ಹಣವನ್ನು ಕೊಟ್ಟು ಅವನನ್ನು ಮೋಟಾರು ಬಂಡಿಯಲ್ಲಿ ಕುಳ್ಳಿರಿಸಿ, ಅವನ ಗ್ರಾಮಕ್ಕೆ ಕಳುಹಿಸಿಕೊಟ್ಟರು.

೧೯೧೩ನೆಯ ಇಸವಿಯಲ್ಲಿ, ಮಹಾಪ್ರಭುಗಳವರು ಒಂದು ಡಿಸ್ಟ್ರಿಕ್ಟಿನ ಸಂಚಾರಾರ್ಥವಾಗಿ ದಯಮಾಡಿದ್ದರು. ಅಲ್ಲಿ, ತೀರ ಬಡವರೂ ವಿದ್ಯಾವಂತರೂ ವೃದ್ಧರೂ ಆದ ವೈದಿಕರೊಬ್ಬರು ತಮ್ಮ ಪತ್ನಿಯವ ರೊಡನೆ ಬಂದು, "ಸಹಸ್ರ ಪೂರ್ಣಿಮಾ ಪೂರ್ಣಚಂದ್ರ ದರ್ಶನ ವಾಯಿತು. ಆದಕಾರಣ, ನಾವಿಬ್ಬರೂ ಶಾಂತಿಮಾಡಿಕೊಳ್ಳಬೇಕೆಂದಿ ದ್ದೇವೆ. ಮಹಾಸ್ವಾಮಿಯವರು ಇಲ್ಲಿಗೆ ಚಿತ್ತೈಸಿದ ಜ್ಞಾಪಕಾರ್ಥವಾಗಿ ಅದನ್ನು ನಡೆಯಿಸಿಕೊಡಬೇಕು. ನಮಗಂತೂ ಗತಿಯಿಲ್ಲ. ಕರ್ಮ ಲೋಪವಾಗುವಂತಿದೆ. ತಪ್ಪಿಸಿ ಕಾಪಾಡಬೇಕು" ಎಂದು ಹೇಳಿ ಕೊಂಡರು. ಮಹಾಪ್ರಭುಗಳವರು ಯೋಚಿಸಿ ನೋಡುವುದಾಗಿ ಉತ್ತರ ಹೇಳಿ, ಅವರ ಸ್ಥಿತಿಗತಿಗಳನ್ನೂ ಅವರು ಹೇಳಿದ್ದುದು ನಿಜವೇ— ಎಂಬುದನ್ನೂ ವಿಚಾರಿಸಿಕೊಂಡ ಬಳಿಕ, ಆ ವೃದ್ಧರಿಗೆ ೫೦೦ ರೂಪಾಯಿ ಗಳನ್ನೂ, ೨೦೦ ಸೇರು ಅಕ್ಕಿಯ ಖಾಸಾ ಲವಾಜಮೆಯನ್ನೂ, ಕಲಾಪತ್ತಿನ ಶಾಲುಜೋಡಿ ಕಲಾಪತ್ತಿನ ಧೋತ್ರಗಳ ಖಿಲ್ಲತ್ತನ್ನೂ,

ಅವರ ಪತ್ನಿಯವರಿಗೆ ಕಲಾಪತ್ತಿನ ಸೀರೆ ಕುಪ್ಪಸಗಳನ್ನೂ ಕಳುಹಿಸಿ ಕೊಟ್ಟರು. ಆ ವೃದ್ಧರು ಶಾಂತಿ ಕರ್ಮವನ್ನು ಸಾಂಗವಾಗಿ ನೆರವೇರಿಸಿ ದುದಲ್ಲದೆ, ಮಹಾಪ್ರಭುಗಳವರ ಚಿತ್ರಪಟವನ್ನು ವೇದಘೋಷದೊಡನೆ ಗ್ರಾಮದಲ್ಲಿ ಮೆರೆವಣಿಗೆ ಮಾಡಿಸಿದರು. ಊರಿನವರೆಲ್ಲರೂ ಸೇರಿ, ವಾದ್ಯಘೋಷದೊಡನೆ ಆ ವೃದ್ಧದಂಪತಿಗಳನ್ನು ಮೆರೆವಣಿಗೆ ಮಾಡಿಸಿದರು.

೧೯೩೪ನೆಯ ಇಸವಿ ಜೂಲೈ ತಿಂಗಳಿನಲ್ಲಿ ಮಹಾಪ್ರಭುಗಳವರು ಹಾಸನದಲ್ಲಿದ್ದಾಗ ಅದೇ ತಿಂಗಳು ೧೬ನೆಯ ತಾರೀಖಿನ ದಿನ ಬೆಳಗ್ಗೆ ಸಂಚಾರಾರ್ಥವಾಗಿ ಹೊರಟರು. ಕೆಲವು ಗಜಗಳ ದೂರ ಹೋದ ಕೂಡಲೆ, ಸಾತೇನ ಹಳ್ಳಿಯವಳೊಬ್ಬಳು ಕೈಮುಗಿದು ತನ್ನ ಕಷ್ಟಗಳನ್ನು ಹೇಳಿಕೊಂಡಳು. ಅದನ್ನು ಮಹಾಪ್ರಭುಗಳವರು ಸಾವಧಾನವಾಗಿ ಲಾಲಿಸಿ, ಸಂಬಂಧಪಟ್ಟ ಅಧಿಕಾರಿಗಳಿಗೆ ಆಜ್ಞೆಮಾಡಿ, ಅವಳಿಗೆ ಒಡನೆಯೇ ಸಹಾಯಮಾಡಿಸಿದರು. ಬಹು ಕಾಲದ ಅವಳ ಕಷ್ಟವು ಪರಿಹಾರ ವಾಯಿತು.

ಹೀಗೆ, ಮಹಾಪ್ರಭುಗಳವರು ತಮ್ಮ ಪ್ರಜೆಗಳಲ್ಲಿ ಸಮಸ್ತರನ್ನೂ ಪ್ರೀತಿಸುತ್ತಿದ್ದರು; ಅಪರಿಚಯಸ್ಥರಿಗೂ ಸಹಾಯಮಾಡುತ್ತಿದ್ದರು.

ಪ್ರಾಮಾಣಿಕತೆಯಿಂದಲೂ ಶ್ರದ್ಧೆಯಿಂದಲೂ ಕೆಲಸಮಾಡುತ್ತಿದ್ದ ವರಲ್ಲಿ ಪ್ರಭುಗಳವರಿಗೆ ಪರಮಾದರ. ಅವರು ಯಾವ ಅಪರಾಧವನ್ನೇ ಮಾಡಿದರೂ ಕ್ಷಮೆ ತೋರುತ್ತಿದ್ದರು. ಒಂದು ಸಂದರ್ಭದಲ್ಲಿ, ಸಮ್ಮುಖದ ದೊಡ್ಡ ಅಧಿಕಾರಿಯವ ರೊಬ್ಬರ ಮೇಲೆ ಅನ್ಯಾಯವಾಗಿ ಕೆಲವರು ದ್ವೇಷಾಸೂಯೆಗಳಿಂದ ಕೂಡಿದ್ದರು. ಅದರ ದೆಸೆಯಿಂದ ಯಾರ ಮನಸ್ಸು ಎಲ್ಲಿ ಕೆಟ್ಟುಹೋಗುವುದೋ, ತಮಗೆಲ್ಲಿ ವಿಪತ್ತು ಬರು ವುದೋ — ಎಂದು ಅವರು ಕಳವಳಪಡುತ್ತಿದ್ದರು. ಇಂಗಿತಜ್ಞರಾದ ಮಹಾಪ್ರಭುಗಳವರು, "ನಿಮ್ಮ ಮೇಲಿರುವ ಅಧಿಕಾರಿಗಳು ನಿಮ್ಮಲ್ಲಿ ಮೆಚ್ಚಿಕೆಯನ್ನಿಟ್ಟುಕೊಂಡಿದ್ದಾರೆ. ನಮ್ಮ ಮನಸ್ಸಿಗೆ ಸಂತೋಷ ವುಂಟಾಗಿದೆ. ಇನ್ನು ಆತಂಕವೇಕೆ?" ಎಂದರು. ಅದಕ್ಕೆ ಆ ಅಧಿಕಾರಿ ಯವರು, "ಪರಮಾನುಗ್ರಹವಾಯಿತು, ಮಹಾಸ್ವಾಮಿ. ಏನು ಅಪರಾಧ ಮಾಡಿದರೂ ಕ್ಷಮಿಸಿ ಕಾಪಾಡಬೇಕು" ಎಂದು ಪ್ರಾರ್ಥಿಸಿ ದರು. ಮಹಾಪ್ರಭುಗಳವರು, "ಈಗೇನೂ ನಿಮ್ಮಿಂದ ಅಪರಾಧವಾಗಿಲ್ಲ. ಇಷ್ಟರಮೇಲೆ ಮುಂದೆ ಅಪರಾಧವಾಯಿತೆನ್ನಿ. ಅದಕ್ಕೆ ಈಗಿನಿಂದಲೇ ಕ್ಷಮಾ ಪ್ರಾರ್ಥನೆಯೇಕೆ? ಮನುಷ್ಯರು ತಪ್ಪು ಮಾಡದೆ, ಮರಗಳು

**ಕ್ಷಮಾಗುಣ**

ತಪ್ಪುಮಾಡಿಯಾವೆ? ನೀವು ಯಾವ ಆತಂಕವನ್ನೂ ಇಟ್ಟುಕೊಳ್ಳದೆ ಕೆಲಸಮಾಡಿ'' ಎಂದು ಹೇಳಿ ನಕ್ಕರು.

ಈಗ್ಗೆ ಆರೇಳು ವರ್ಷಗಳ ಕೆಳಗೆ ಅರಮನೆ ಬಿಡದಿಯ ನೀರಿನವನೊಬ್ಬನು ಮಹಾಪ್ರಭುಗಳವರಿಗೆ ಪ್ರಿಯವಾಗಿದ್ದು ಮತ್ತೆಲ್ಲಿಯೂ ದೊರೆಯದಿದ್ದ ಮನೋಹರ ವರ್ಣದ ''ಬೇಸಿನ್'' ಒಂದನ್ನು ಎತ್ತಿ ಹಾಕಿದನು; ಅದು ಸ್ವಲ್ಪ ಸೀಳಿತು. ಯಾರಿಗೂ ಅದನ್ನು ಹೇಳದೆಯೇ ಸುಮ್ಮನಿದ್ದನು. ಗುರಿಕಾರರು ಕರೆಯಿಸಿ ಕೇಳಿದಾಗ ತಪ್ಪುಮಾಡಿದ್ದುದಾಗಿ ಅವನು ಒಪ್ಪಿಕೊಂಡನು. ಅವರು ಪ್ರಭು ಸನ್ನಿಧಿಗೆ ಹೋಗಿ, ''ಮಹಾಸ್ವಾಮಿ, ತಪ್ಪು ಒಪ್ಪಿಕೊಂಡ. ನಿಜಾ ಹೇಳಿದ್ದಾನೆ. ಭಯಪಟ್ಟು ನಡುಗುತ್ತಿದ್ದಾನೆ. ಮನ್ನಿಸಿ ಕಾಪಾಡಬೇಕು'' ಎಂದು ಅರಿಕೆ ಮಾಡಿದರು. ಮಹಾಪ್ರಭುಗಳವರು, ''ಅವನು ಅದನ್ನು ಎತ್ತಿ ಹಾಕಿದುದನ್ನು ಯಾರೂ ಕಾಣಲಿಲ್ಲ. ಹೀಗಿದ್ದೂ ನಿಜ ಹೇಳಿ ತಪ್ಪನ್ನು ಒಪ್ಪಿಕೊಂಡನೆ?'' ಎಂದು ಕೇಳಿದುದಕ್ಕೆ ಅವರು, ''ಒಪ್ಪಿಕೊಂಡ, ಮಹಾಸ್ವಾಮಿ. ಭಯಸ್ಥ'' ಎಂದರು. ಮತ್ತೊಬ್ಬರಮೇಲೆ ತಪ್ಪನ್ನು ಹೇರದೆ ಒಪ್ಪಿಕೊಂಡ ಆತನ ಪ್ರಾಮಾಣಿಕತೆಗಾಗಿ ಸುಪ್ರೀತರಾಗಿ ಮಹಾಪ್ರಭುಗಳವರು ಅವನಿಗೆ ''ಇನಾಂ'' ಕಳುಹಿಸಿಕೊಟ್ಟರು.

ನೀಲಗಿರಿ ಅರಮನೆಯಲ್ಲಿ ಶಾಖವನ್ನುಂಟುಮಾಡುವುದಕ್ಕಾಗಿ ವಿಶೇಷ ಬಗೆಯ ''ಬಲ್ಬು''ಗಳನ್ನು ತರಿಸಿ ಜೋಡಿಸಿದ್ದರು. ಅವುಗಳಲ್ಲಿ ಒಂದೊಂದಕ್ಕೂ ಬಹಳ ಬೆಲೆ. ಆದರೆ, ವಿದ್ಯುಚ್ಛಕ್ತಿಯ ಶಕ್ತಿಯನ್ನು (ಎಂದರೆ ''ವೋಲ್ಟೇಜ್'' ಶಕ್ತಿಯನ್ನು) ಕಡಮೆಮಾಡತಕ್ಕ ಯಂತ್ರ ಸಾಧನವು ಜೋಡಣೆಯಾದಮೇಲೆ ''ಸ್ವಿಚ್''ಹಾಕಬೇಕೆಂಬುದನ್ನರಿಯದೆ, ಊಳಿಗದವರೊಬ್ಬರು ''ಸ್ವಿಚ್'' ಹಾಕಿಬಿಟ್ಟರು. ''ಬಲ್ಬು''ಗಳೆಲ್ಲ ಕೆಟ್ಟು ಹೋದುವು. ಅವರು ಭಯದಿಂದ ನಡುಗುತ್ತ ನಿಂತಿದ್ದರು. ಮಹಾಪ್ರಭುಗಳವರು ದೇವತಾರ್ಚನೆಯನ್ನು ಮುಗಿಸಿ ದಯಮಾಡಿದಾಗ, ''ಏಕಯ್ಯ? ಹೀಗಿದ್ದೀಯೆ?'' ಎಂದರು. ಆಗ ಅವರು, ''ಮಹಾಸ್ವಾಮಿ, ಸ್ವಿಚ್ ಹಾಕಿದೆ. ಹೀಗಾಯಿತು. ತಿಳಿಯದೆ ತಪ್ಪುಮಾಡಿದೆ. ಮನ್ನಿಸಿ ಕಾಪಾಡಬೇಕು'' ಎಂದರು. ಮಹಾಪ್ರಭುಗಳವರು, ''ತಿಳಿದು ಕೆಲಸ ಮಾಡಬೇಕಯ್ಯ. ಹೋಗಲಿ. ಸುಮ್ಮನಿರು. ಇನ್ನು ಮುಂದೆ ಎಚ್ಚರಿಕೆಯಿಂದಿರು'' ಎಂದು ಹೇಳಿ ನಕ್ಕರು. ತಪ್ಪುಮಾಡಿದವರಿಗೆ ಅವರು ನಯವಾಗಿ ಬುದ್ಧಿ ಹೇಳುತ್ತಿದ್ದರೇ ಹೊರತು, ಬೈದು ಸಣ್ಣಮಾತುಗಳನ್ನಾಡುತ್ತಿರಲಿಲ್ಲ.

ಎಷ್ಟೇ ದೊಡ್ಡ ತಪ್ಪನ್ನು ಮಾಡಿದವರ ವಿಷಯದಲ್ಲಾಗಲಿ ಅವರು ಕ್ಷಮಾಪರರಾಗಿ ವರ್ತಿಸುತ್ತಿದ್ದರು. ಅಸಮಾಧಾನಕ್ಕೆ ಅವಕಾಶ ಕೊಟ್ಟ ತಪ್ಪಿತಸ್ಥರ ವಿಷಯದಲ್ಲಿ ಕೂಡ ಅಪ್ರಸನ್ನತೆಯನ್ನು ತೋರಿಸುತ್ತಿದ್ದು ದೆಷ್ಟೋ ಅಷ್ಟೆ. ಒಂದು ಸಲ, ಒಬ್ಬರು ಅಧಿಕಾರಿಯವರು ಬಹಳ ಅಸಮಾಧಾನವನ್ನುಂಟುಮಾಡಿದಾಗ, ಮೂರು ತಿಂಗಳುಗಳ ಕಾಲ ಅವರಿಗೆ ದರ್ಶನಾವಕಾಶವನ್ನು ತಪ್ಪಿಸಿದ್ದರು. ಕ್ಷಮಾಪ್ರಾರ್ಥನೆ ಮಾಡಿ ಅವರು ವಿಷಾದ ಸೂಚನೆ ಮಾಡಿದಮೇಲೆ, ಮಹಾಪ್ರಭುಗಳವರು ಎಂದಿ ನಂತೆ ಅವರಲ್ಲಿ ಕೃಪೆ ತೋರಲಾರಂಭಿಸಿದರು. ಆದರೆ, ಪ್ರಾಮಾಣಿಕತೆ ಯಿಂದ ಕೆಲಸ ಮಾಡುತ್ತಿದ್ದು ಪ್ರಮಾದವಶದಿಂದ ತಪ್ಪುಮಾಡಿದವರ ವಿಷಯದಲ್ಲಿ ಮಾತ್ರ, ಮಹಾಪ್ರಭುಗಳವರು ಸಂಪೂರ್ಣವಾಗಿ ಕ್ಷಮೆ ತೋರುತ್ತಿದ್ದರು. ಕೈಕೆಳಗಿನ ಅಧಿಕಾರಿಗಳಲ್ಲಾಗಲಿ, ಅಥವಾ ಮೈತ್ರಿ ಯನ್ನು ಬಳೆಯಿಸುತ್ತಿದ್ದ ಸ್ವದೇಶೀಯ ವಿದೇಶೀಯ ದೊಡ್ಡಮನುಷ್ಯ ರಲ್ಲಾಗಲಿ, ವಿಶ್ವಾಸವಿಡುವುದಕ್ಕೆ ಮುಂಚೆ ಚೆನ್ನಾಗಿ ಪರಿಶೀಲಿಸಿ ಪರೀಕ್ಷಿಸುತ್ತಿದ್ದರು. ಒಮ್ಮೆ ವಿಶ್ವಾಸವನ್ನಿಟ್ಟಮೇಲೆ, ಎಂತಹ ಸನ್ನಿ ವೇಶಗಳೇ ಬಂದರೂ ಅವರನ್ನು ಕೈಬಿಡುತ್ತಿರಲಿಲ್ಲ.

ಅಪರಾಧಿಗಳ ವಿಷಯದಲ್ಲಿ ಕೂಡ ಅವರು ಮುಖ ಮುರಿದು ಒಂದು ದಿನವೂ ಮಾತನಾಡಿದವರಲ್ಲ. ಹಲವು ಸಾರಿ ಎಚ್ಚರಿಕೆ ಹೇಳಿದರೂ ತಿಳಿವಳಿಕೆಯಿಂದ ತಿದ್ದಿಕೊಳ್ಳದೆ ಮತ್ತೆಮತ್ತೆ ತಪ್ಪು ಮಾಡುತ್ತಿದ್ದವರನ್ನು ಮಾತ್ರವೇ ಅವರು ಶಿಕ್ಷಿಸುತ್ತಿದ್ದರು. ಊಳಿಗದವರೊಬ್ಬರು ಎಷ್ಟು ಸಲ ಬುದ್ಧಿ ಹೇಳಿದರೂ ಕೇಳದೆ ತಪ್ಪು ಮಾಡುತ್ತಲೇ ಬಂದರು. ಕೊನೆಗೆ ನಿರ್ವಾಹವೇ ಇಲ್ಲದಂತಾಯಿತು. ಹಾಗಿದ್ದೂ, ಆತನಿಗೆ ಸಂಬಳದಲ್ಲಿ ಅರ್ಧ ಮೊತ್ತದ ವಿರಾಮವೇತನವನ್ನು (ಪೆನ್ಷನ್) ಪಡೆಯಲು ಹಕ್ಕು ಬರುವಷ್ಟು ಕಾಲ ಆತನು ಕೆಲಸ ಮಾಡಿಲ್ಲದಿದ್ದೂ, ಆತನಿಗೆ ದಯೆ ತೋರಿ ಆತನ ಸಂಬಳದಲ್ಲಿ ಅರ್ಧಭಾಗದ ವಿರಾಮವೇತನವೇ ಸಲ್ಲುವಂತೆ ಅವರು ಅಪ್ಪಣೆ ಮಾಡಿದರು. ಇಂತಹದು ನಡೆದುದು ಅದೊಂದೇ ಸಲ.

ಒಂದುಸಲ, ಮಹಾಪ್ರಭುಗಳವರು ಪಶ್ಚಿಮವಾಹಿನಿಯಲ್ಲಿ ಕಾವೇರೀ ಸ್ನಾನಮಾಡಿ, ಆಹ್ನಿಕ ಮಾಡಲು ಗೊತ್ತಾಗಿದ್ದ ಸ್ಥಳಕ್ಕೆ ಮಡಿಯಲ್ಲಿ ಹೋದಾಗ ಬಾಗಿಲಿನ ಹಿಂದೊಂದು ಸತ್ತ ಕಪ್ಪೆಯು ಬಿದ್ದಿದ್ದುದನ್ನು ಕಂಡರು. ಸಂಬಂಧಪಟ್ಟ ಕೆಲಸಗಾರರನ್ನು ದಂಡಿಸಬಹುದಾಗಿದ್ದ ಆ ಸನ್ನಿವೇಶದಲ್ಲಿ ಕೂಡ, ಮಹಾಪ್ರಭುಗಳವರು ಅವರನ್ನು ಕ್ಷಮಿಸಿ ಬುದ್ಧಿ ಹೇಳಿದರು. ಒಂದು ಸಲ ನೀಲಗಿರಿಯ ಅರಮನೆಯಲ್ಲಿ, ಸನ್ನಿಧಿಯ

ಊಳಿಗದವರೊಬ್ಬರು ಒಂದು ಕಡೆಯಿಂದ ಸರಕ್ಕನೆ ನುಗ್ಗಿದರು; ಮತ್ತೊಂದ್ದು ಕಡೆಯಿಂದ ಮಡಿಯುಟ್ಟು ದೇವತಾರ್ಚನೆಗೆ ದಯ ಮಾಡುತ್ತಿದ್ದ ಮಹಾಪ್ರಭುಗಳವರಿಗೆ ಆತನ ಮೈಸೋಂಕಿನಿಂದ ಮೈಲಿಗೆ ಯಾಯಿತು. ಆತನು ಭಯದಿಂದ ನಡುಗುತ್ತಿದ್ದುದನ್ನು ಕಂಡು, ಮಹಾ ಪ್ರಭುಗಳವರು, "ಹೆದರಬೇಡ. ಏನೋ ಕಾಣದೆ ಬಂದುಬಿಟ್ಟೆ. ಇನ್ನು ಮೇಲೆ ಎಚ್ಚರಿಕೆಯಿಂದಿದ್ದರಾಯಿತು" ಎಂದು ಹೇಳಿ ಮತ್ತೆ ಸ್ನಾನ ಮಾಡಲು ಹೊರಟರು. ಒಂದುಸಲ, ಶ್ರಾದ್ಧ ಮಾಡಿಸುತ್ತಿದ್ದವರು ಶ್ರೀ ಚಾಮರಾಜೇಂದ್ರ ಒಡೆಯರವರ ಹೆಸರನ್ನು ಸೇರಿಸುವುದಕ್ಕೆ ಪ್ರತಿಯಾಗಿ ತಮ್ಮ ತಂದೆಯವರ ಹೆಸರನ್ನು ಸೇರಿಸಿ ಮಂತ್ರವನ್ನು ಹೇಳಿದಾಗ ಮಹಾಪ್ರಭುಗಳವರು ಗಂಭೀರವಾಗಿ, "ಶ್ರಾದ್ಧ ಮಾಡು ತ್ತಿರುವವರು ನೀವೋ ನಾವೋ?" ಎಂದು ಕೇಳಿದರು.

ಒಂದು ದಿನ, ಚಾಮುಂಡೀ ಬೆಟ್ಟದಿಂದ ಮೋಟಾರು ಬಂಡಿಯಲ್ಲಿ ಕುಳಿತು ಕೆಳಕ್ಕಿಳಿದು ಬರುತ್ತಿದ್ದರು. ಸಂನ್ಯಾಸಿವೇಷದ ಕಪಟಿಯೊಬ್ಬನು ಮಾರ್ಗದಲ್ಲಿ ಅಡ್ಡವಾಗಿ ಮಲಗಿದ್ದುದರಿಂದ, ಇಳಿಜಾರಿನಲ್ಲಿ ವೇಗವಾಗಿ ಹೋಗುತ್ತಿದ್ದ ಮೋಟಾರು ಬಂಡಿಯನ್ನು ತಟಕ್ಕನೆ ನಿಲ್ಲಿಸಿ ಆತನ ಪ್ರಾಣ ರಕ್ಷಣೆ ಮಾಡುವುದು ಬಹಳ ಪ್ರಯಾಸವಾಯಿತು. ಮಹಾಪ್ರಭು ಗಳವರು ಮೋಟಾರು ಬಂಡಿಯಿಂದ ಕೆಳಕ್ಕಿಳಿದು ಬಂದು, ಅವನನ್ನು ಮೇಲಕ್ಕೆಬ್ಬಿಸಿ, ಆತನು ಹಾಗೆ ಮಾಡಿದುದಕ್ಕೆ ಕಾರಣವನ್ನು ಕೇಳಿದರು. ಅವನು ದ್ರವ್ಯಾಪೇಕ್ಷೆಯಿಂದ ಹಾಗೆ ಮಾಡಿದುದಾಗಿ ಕೇಳಿ, "ಆಶೆ ಯನ್ನು ಜಯಿಸಬೇಕಾದ ಸಂನ್ಯಾಸಾಶ್ರಮಕ್ಕೆ ಹೀಗೆ ಅಪಮಾನಮಾಡು ವುದೆ? ಹಣಕ್ಕೋಸ್ಕರ ಈ ರೀತಿ ಆತ್ಮಹತ್ಯ ಪ್ರಯತ್ನವೆ?" ಎಂದು ಮುಂತಾಗಿ ಪ್ರಶ್ನೆಮಾಡಿದರು. ಆ ಬಗೆಯಲ್ಲಿ ಆತನು ಕೀಳುತರದ ಉಪಾಯ ಮಾಡಿವನೆಂದು ತಿಳಿದುಬಂದಾಗಲೂ ಕೂಡ ಅಸಾಧಾರಣ ವಾದ ತಾಳ್ಮೆಯನ್ನೂ ಕ್ಷಮೆಯನ್ನೂ ಪ್ರದರ್ಶಿಸಿದರು; ಸ್ವಲ್ಪ ಹಣವನ್ನೂ ಕೊಟ್ಟು, ಮುಂದೆ ವಿವೇಕದಿಂದ ವರ್ತಿಸುವಂತೆ ಬುದ್ಧಿ ಹೇಳಿದರು.

ಮಹಾಪ್ರಭುಗಳವರು ಚಾಡಿಯ ಮಾತುಗಳನ್ನು ಕೇಳುತ್ತಲೂ ಇರಲಿಲ್ಲ. ಚಾಡಿಯ ಮಾತುಗಳನ್ನು ಹೇಳುವವರನ್ನು ಕಂಡರೆ ಅವರಿಗೆ ಸರಿಬೀಳುತ್ತಲೂ ಇರಲಿಲ್ಲ. ಆದರೆ, ದುರುದ್ದೇಶವಾವುದೂ ಇಲ್ಲದೆ ದೃಷ್ಟಿ ಭೇದದಿಂದ ಅಥವಾ ಮತಿ ಭೇದದಿಂದ ಭಿನ್ನಾಭಿಪ್ರಾಯವನ್ನು ಸೂಚಿಸಿ ಇತರರ ಮೇಲೆ ತಮ್ಮೆದುರಿಗೆ ಆಕ್ಷೇಪದ ನುಡಿಗಳನ್ನಾಡಿದವರ ವಿಷಯದಲ್ಲಿ ಅಸಮಾಧಾನಪಡದೆ ಮಹಾಪ್ರಭುಗಳವರು ತಾಳ್ಮೆಯಿಂದ

ಸವಿನುಡಿಗಳನ್ನಾಡಿ ಸಮಾಧಾನ ಹೇಳುತ್ತಿದ್ದರು. ಸುಸಂಸ್ಕೃತರೂ ದೇಶಾಭಿಮಾನಿಗಳೂ ಆದ ಸರ್ ಎಂ. ವಿಶ್ವೇಶ್ವರಯ್ಯನವರು ದಿವಾನ್ ಪದವಿಗೆ ಬಂದಾಗ ಅವರು ಪ್ರಜಾವರ್ಗದವರಿಗೆ ಸುಲಭರಾಗಿ ವರ್ತಿಸಲುಪಕ್ರಮಿಸಿದರು. ಅದನ್ನು ಕಂಡ—ಮಹಾಪ್ರಭುಗಳವರ ಕೃಪೆಗೆ ಪಾತ್ರರಾಗಿದ್ದ—ಡೆಪ್ಯುಟಿ ಕಮಿಷನರವರೊಬ್ಬರು, "ನಮ್ಮ ಬಂಗಲೇ ಬಳಿ ದರ್ಶನಕ್ಕಾಗಿ ಕಾದು ಬಿದ್ದಿರುವಂಥವರನ್ನೆಲ್ಲಾ ಮೇಲಿನವರು ತಮ್ಮ ಪಕ್ಕದಲ್ಲಿ ಕೂರಿಸಿಕೊಳ್ಳುವ ಸ್ಥಿತಿ ಬಂದಿದೆ. ಇನ್ನು ನಮ್ಮ ಮಾನವೆಲ್ಲಿ? ಮಹಾಪ್ರಭುಗಳವರ ಪ್ರತಿನಿಧಿಗಳೆಂದು ನಾವು ಅಧಿಕಾರ ಮಾಡಿ ಜನರಿಗೆ ಮುಖಾ ತೋರಿಸುವುದು ಹೇಗೆ?" ಎಂದು ಅರಿಕೆ ಮಾಡಿದರು. ಮಹಾಪ್ರಭುಗಳವರು ನಸುನಕ್ಕು, "ನಾವುಗಳೆಲ್ಲರೂ ಇರುವುದು ಪ್ರಜೆಗಳ ಆರಾಧನೆಗೆ ತಾನೆ? ಕಾಲವನ್ನು ತಿಳಿದು ತಕ್ಕಂತೆ ನಡೆದುಕೊಳ್ಳುವುದು ಉತ್ತಮವಲ್ಲವೆ?" ಎಂದು ಕೇಳಿದರು. ಸರ್ಕಾರದ ಹಣದ ಲೆಕ್ಕಗಳನ್ನು ಪರಿಶೀಲಿಸಿ ಆಯ ವ್ಯಯಗಳ ವ್ಯವಸ್ಥೆಗೆ ಉತ್ತಮವಾದ ಸಲಹೆಗಳನ್ನು ಕೊಡಲು, ಹಿಂದೆ ಶ್ರೀಮಾನ್ ದತ್ತ ಅವರನ್ನು ಸರ್ಕಾರದವರು ಕರೆಯಿಸಿದ್ದರು. ಅದು ಸರಿಬೀಳದೆ ಹೋದ ವೃದ್ಧರಾದ ಭಾರಿ ಅಧಿಕಾರಿಯವರೊಬ್ಬರು ಮಹಾಪ್ರಭುಗಳವರ ಸನ್ನಿಧಿಯಲ್ಲಿ, "ನಮ್ಮ ಮನೇ ಸಂಸಾರದ ಗುಟ್ಟು ರಟ್ಟಾಗಬಹುದೆ? ಹೊರಗಿನವರು ಬಂದು ನಮ್ಮ ಲೆಕ್ಕಗಳನ್ನೆಲ್ಲಾ ನೋಡಿ, ನೂರೆಂಟು ಟೀಕೆ ಮಾಡಿ ತಪ್ಪು ಕಂಡು ಹಿಡಿಯೋದಕ್ಕೆ ಅವಕಾಶ ಕೊಡುವುದು ಬಹಳ ಅನ್ಯಾಯ; ಅದು ಅವಮಾನ" ಎಂದು ಹೇಳಿಕೊಂಡರು. ಮಹಾಪ್ರಭುಗಳವರು ನಕ್ಕು, "ಪ್ರಜೆಗಳ ಕ್ಷೇಮಕ್ಕಾಗಿ ನಮ್ಮ ಸರ್ಕಾರದವರು ಹಣವನ್ನು ಸದ್ವಿನಿಯೋಗ ಮಾಡುತ್ತಿದ್ದಾರೆ. ಅದು ಹೊರಗಿನಿಂದ ಬಂದವರಿಂದಲೇ ಪ್ರಜೆಗಳಿಗೆ ತಿಳಿದರೆ ಮತ್ತೂ ಉತ್ತಮವಲ್ಲವೆ? ಅದರಲ್ಲಿ ತಪ್ಪೇನೂ ಕಾಣುವುದಿಲ್ಲವಲ್ಲಾ!" ಎಂದರು.

ಭಿನ್ನಾಭಿಪ್ರಾಯವನ್ನು ಸೂಚಿಸುತ್ತಿದ್ದಾಗ ಕೂಡ ಮಹಾಪ್ರಭುಗಳವರು ಬಹಳ ನಯವಾಗಿ ನಡೆದು, ಕೇಳಿದವರ ಮನಸ್ಸಿಗೆ ನೋವಾಗದಂತೆ ತಾಳ್ಮೆಯಿಂದ ವರ್ತಿಸುತ್ತಿದ್ದರು. ಕೈ ಕೆಳಗಿನ ಅಧಿಕಾರಿಗಳ ಕಾರ್ಯಕ್ಷೇತ್ರದಲ್ಲಿ ಪೂರ್ಣಾವಕಾಶವನ್ನು ಕೊಟ್ಟು ಅವರು ನಿರ್ಭಯವಾಗಿ ಕೆಲಸಮಾಡುವ ಸೌಕರ್ಯವನ್ನು ಕಲ್ಪಿಸಿದ್ದರಾದರೂ, ಅವರ ಅಭಿಪ್ರಾಯಗಳನ್ನು ಒಪ್ಪದೆ ಹೋದ ಸಂದರ್ಭಗಳಲ್ಲಿ ಬಹಳ ತಾಳ್ಮೆಯಿಂದ ಕೂಡಿ ಮಹಾಪ್ರಭುಗಳವರು ಅನುನಯದಿಂದ ನಡೆದುಕೊಳ್ಳುತ್ತಿದ್ದರು.

ಈಗ್ಗೆ ಅನೇಕ ವರ್ಷಗಳ ಹಿಂದೆ, ಬಹಳ ಜಟಿಲವಾಗಿದ್ದ ತೊಡಕಿನ ಸಂಗತಿಗಳಿಂದ ಕೂಡಿದ್ದ ಸಂದರ್ಭವೊಂದರಲ್ಲಿ ಆಗಿನ ದಿವಾನ್‌ರವರು ತಮ್ಮ ಸಲಹೆಗಳನ್ನು ಮಹಾಪ್ರಭುಗಳವರ ಅನುಮೋದನಕ್ಕೆ ಒಪ್ಪಿಸಿದ್ದರು. ಅವರು ಅವುಗಳನ್ನು ಸಾವಧಾನದಿಂದ ಓದಿ ನೋಡಿದರು. ಆ ಸಲಹೆಗಳು ಸಮರ್ಪಕವಾಗಿರಲಿಲ್ಲವೆಂದು ತೋರಿತು. ಮತ್ತೆ ಮತ್ತೆ ಎರಡು ಮೂರು ಸಲ ಓದಿನೋಡಿದರು. ಕೊನೆಗೆ, "ಇದೇಕೆ ಹೀಗೆ ಬರೆದು ಕಳುಹಿಸಿದ್ದಾರೆ? ಬಹಳ ಶ್ರಮಪಟ್ಟೇನೊ ವಿಚಾರಮಾಡಿದ್ದಾರೆ. ಆದರೆ ಸರಿಯಾದ ತೀರ್ಮಾನಕ್ಕೆ ಬಂದಿರುವಂತೆ ತೋರುವುದಿಲ್ಲ. ಆದರೆ ಅವರೇ ಬೇರೆ ಸಲಹೆಗಳನ್ನೇನಾದರೂ ಕಳುಹಿಸಿಯಾರೇನೊ ನೋಡೋಣ. ಒಂದೆರಡು ದಿನ ಹಾಗೆಯೇ ಇಟ್ಟಿರಿ. ಈಗಲೇ ತಟಕ್ಕನೆ ಹಿಂದಕ್ಕೆ ಕಳುಹಿಸಿದರೆ ನೊಂದುಕೊಂಡಾರು" ಎಂದು ಅಪ್ಪಣೆಮಾಡಿ, ಉಳಿದ ನಾನಾ ಸಂದರ್ಭಗಳ ಕಾಗದಪತ್ರಗಳನ್ನು ನೋಡಿ ಅನುಜ್ಞೆಗಳನ್ನು ಕೊಡಲು ಪ್ರಾರಂಭಿಸಿದರು. ಆ ಕೆಲಸ ನಡೆಯುತ್ತಿದ್ದಾಗಲೇ, ಹಿಂದಿನ ದಿನ ತಾವು ಕಳುಹಿಸಿಕೊಟ್ಟಿದ್ದ ಆ ಕಾಗದಗಳ ಕಟ್ಟನ್ನು ("ಫೈಲನ್ನು") ಹಿಂದಕ್ಕೆ ಕಳುಹಿಸಿಕೊಡಬೇಕೆಂದು ದಿವಾನ್‌ರವರಿಂದ ಸಮ್ಮುಖದ ಅಧಿಕಾರಿಯವರಿಗೆ ತಂತಿಯ ವರ್ತಮಾನವು ಬಂದಿತು. ತಾವು ದೀರ್ಘಾಲೋಚನೆಮಾಡಿ ಸರಿಯಾದ ಸಲಹೆಗಳನ್ನು ಕೊಡಲಿಲ್ಲವೆಂಬುದು ಅವರಿಗೇ ತೋರಿಬಂದಿದ್ದುದೇ ಅದಕ್ಕೆ ಕಾರಣ. ಸಮ್ಮುಖದ ಅಧಿಕಾರಿಯವರು ಆ ತಂತಿ ವರ್ತಮಾನದ ವಿಚಾರವನ್ನು ಅರಿಕೆ ಮಾಡಿದಾಗ ಮಹಾಪ್ರಭುಗಳವರು ನಕ್ಕು, "ಅವಶ್ಯವಾಗಿ ಹಿಂದಕ್ಕೆ ಕಳುಹಿಸಿಕೊಡಿ. ಅವರು ಆ ಕಾಗದ ಪತ್ರಗಳ ಕಟ್ಟನ್ನು ಹಿಂದಕ್ಕೆ ಕೇಳಿಯಾರೆಂದು ನಾವು ನಿರೀಕ್ಷಿಸಿಯೇ ಇದ್ದೆವು" ಎಂದರು.

ಮಹಾಪ್ರಭುಗಳವರನ್ನು ಬಾಲ್ಯದಿಂದಲೂ ಬಲ್ಲವರಾಗಿ ದೊಡ್ಡ ಹುದ್ದೆಗೂ ಏರಿ ಅಧಿಕಾರದಿಂದ ವಿಶ್ರಾಂತರಾಗಿರುವ ಮಾನ್ಯರೊಬ್ಬರು, "ಮಹಾಸ್ವಾಮಿಯವರು ಕೋಪಿಸಿಕೊಂಡು ಬಿರುನುಡಿಗಳನ್ನಾಡಿದುದನ್ನೇ ನಾನು ಒಂದು ಸಲವೂ ಕಂಡಿಲ್ಲ" ಎಂದು ತಿಳಿಸಿದರು. ಆಳಿದ ಮಹಾಸ್ವಾಮಿಯವರು ಮಹಾಪುರುಷರು. ಪ್ರಕೃತಿ ಸಹಜವಾಗಿಯೇ ಅವರಲ್ಲಿ ತಾಳ್ಮೆಯೂ ಶಾಂತಿಯೂ ನೆಲಸಿದ್ದುವು. ಆದಾಗ್ಗೂ, ಅವರು ಸ್ವಪ್ರಯತ್ನದ ಬಲದಿಂದಲೂ ಕೋಪವನ್ನು ದಮನಮಾಡುವುದನ್ನು ಅಭ್ಯಾಸ ಮಾಡಿ ವೃದ್ಧಿಪಡಿಸಿಕೊಂಡೂ ಇದ್ದರು. ಒಂದು ಸಂದರ್ಭದಲ್ಲಿ ಅವರು ಎಂದೆಂದಿಗೂ ಕೋಪಿಸಿಕೊಳ್ಳುವುದಿಲ್ಲವೆಂದು ಪ್ರತಿಜ್ಞೆ ಮಾಡಿ ಆ ಸ್ಥಿರ

ಂಕಲ್ಪವನ್ನು ಈಡೇರಿಸಿದ ಸನ್ನಿವೇಶವು ಅವರ ಮನೋಧರ್ಮವೆಂತಹು
ಂಬುದನ್ನು ಬಹು ಚೆನ್ನಾಗಿ ತೋರಿಸುತ್ತದೆ: ರಾಜ್ಯಭಾರ ಸೂತ್ರ
ಳನ್ನಂಗೀಕರಿಸಿದ ಮೇಲೆ ಒಂದು ದಿನ ಮಹಾಪ್ರಭುಗಳವರು ಮೈಸೂರು
ಗರದ ಹೊರ ಭಾಗದಲ್ಲಿ ಕುದುರೆಯನ್ನೇರಿ ಬರುತ್ತಿದ್ದರು. ಒಬ್ಬಾತನು
ದುರಿಗೆ ಬಂದು ಕೈ ಮುಗಿದು, ತನಗೆ ಯಾರೋ ಒಬ್ಬರು ಅಧಿಕಾರಿ
ಎವರಿಂದ ಅನ್ಯಾಯವಾಗಿದ್ದುದಾಗಿ ತಿಳಿಸಿದನು. ಮಹಾಪ್ರಭು
ಳವರು ಕುದುರೆಯನ್ನು ನಿಲ್ಲಿಸಿ, "ಸಂಗತಿಯೇನೆಂದು ಹೇಳಿದರೆ
ಚಾರಿಸುತ್ತೇವೆ" ಎಂದರು. ಆತನು, "ಹೇಳೋದೂ ಕೇಳೋದೂ
ಂದೂ ಇಲ್ಲ. ಇವೊತ್ತು ಈ ಕುದುರೇ ನನ್ನ ಮ್ಯಾಲೆ ಬಿಡಬೇಕು.
ಏನು ಸಾಯಬೇಕು. ಅಷ್ಟು ಕೇಳೋಕೇ ನಾನು ಬಂದಿರೋದು.
ಾಸ್ವಾಮಿಯೋರು ನನ್ನ ಮ್ಯಾಲೆ ಕುದುರೇ ಬಿಡಬೇಕು" ಎಂದು
ರಟು ಮಾತನಾಡಿದನು. ಅವರು ತಾಳ್ಮೆಯಿಂದ ಅವನ ಹೆಸರು ವಿಳಾಸ
ಳನ್ನು ಕೇಳಿ ತಿಳಿದುಕೊಂಡು, ಅವನಿಗಾಗಿದ್ದ ಅನ್ಯಾಯವೇನೆಂಬು
ನ್ನು ತಿಳಿಸಬೇಕೆಂದು ಆಜ್ಞೆ ಮಾಡಿದರು. ಅವನು ಅದನ್ನು ಅರಿಕೆ
ಾಡದೆ, ಮೊದಲಿನಂತೆಯೇ ಒರಟು ಮಾತನಾಡಿ "ನನಗೊಂದೂ ಬೇಡ.
ಕುದುರೇನ ನನ್ನ ಮೈಮ್ಯಾಲೆ ಬಿಡಬೇಕು" ಎಂದು ಹೇಳಿ, ಒಂದೆರಡು
ಜ್ಜೆಗಳು ದಡದಡನೆ ಮುಂದೆ ಹೋಗಿ ಕುದುರೆಯ ಕಡಿವಾಣವನ್ನು
ಡಿಯಲು ಕೈ ಚಾಚಿದನು. ಕುದುರೆಯು ಬೆದರಿದ ಕಾರಣ ಅದನ್ನು
ಂಕೆಯಲ್ಲಿಡುವುದು ಕಷ್ಟವಾಯಿತು. ಆದರೂ ಅವನು ಸುಮ್ಮನಿರದೆ
ಕುದುರೇ ನನ್ನ ಮ್ಯಾಲೆ ಬಿಡಬೇಕು" ಎಂದು ಅಡ್ಡಗಟ್ಟಿದನು.
ುಂದೆ ಹೋಗಲು ನಿರ್ವಾಹವಿಲ್ಲದೆ ಮಹಾಪ್ರಭುಗಳವರು ಅವನನ್ನು
ೂರಕ್ಕೆ ಹಿಮ್ಮೆಟ್ಟಿಸುವ ಉದ್ದೇಶದಿಂದ ತಮ್ಮ ಕೈಯಲ್ಲಿದ್ದ ಬೆತ್ತದಿಂದ
ವನಿಗೊಂದು ಏಟನ್ನು ಕೊಟ್ಟರು. ಅವನು ಅಪ್ರತಿಭನಾಗಿ ಕೊಂಚ
ರೆಯಾಗಲು ಕುದುರೆಯನ್ನೋಡಿಸಿಕೊಂಡು ಹೊರಟುಹೋದರು.
ಯಾಳುಗಳಾದ ಮಹಾಪ್ರಭುಗಳವರಿಗೆ ಅವನ ಅಗಡುತನವೂ ಒರ
ಾಟವೂ ಅಪರಾಧಗಳಾಗಿ ತೋರಲಿಲ್ಲ. ಎಲ್ಲರಿಗಿಂತ ಮೇಲಿನವರಾದ
ಮ್ಮಲ್ಲಿ ತನ್ನ ಕಷ್ಟಗಳನ್ನು ಹೇಳಿಕೊಳ್ಳಲು ಬಂದವನ ಅಭಿಲಾಷೆಯು
ರವೇರದೆ ಅವನ ಮನಸ್ಸೆಷ್ಟು ನೊಂದಿವೆಯೋ — ಎಂದು ವಿಷಾದ
ಾಯಿತು. ಮಹಾಮಾತೃಶ್ರೀಯವರು ಅವರು ವಿಷಾದಪೂರಿತರಾಗಿದ್ದು
ರ ಕಾರಣವನ್ನು ಕೇಳಿದಾಗಲೂ ಅದನ್ನೇ ಮತ್ತೆ ಮತ್ತೆ ತಿಳಿಸಿ ಒಂದು
ನವೆಲ್ಲ ವ್ಯಥೆಪಟ್ಟರು. ಇನ್ನು ಮುಂದೆ ಎಂತಹ ಸನ್ನಿವೇಶವೇ

ಒದಗಿದರೂ ಕೋಪಿಸಿಕೊಂಡು ದುಡುಕುವುದಿಲ್ಲವೆಂದು ಸಂಕಲ್ಪ ಮಾಡಿಕೊಂಡರು. ಅಲ್ಲದೆ, ಅವನನ್ನು ಮತ್ತೆ ಕರೆಯಿಸಿ, ಅವನ ಮಾತುಗಳನ್ನು ಸಾವಧಾನವಾಗಿ ಲಾಲಿಸಿ, ಅವನಿಗೆ ಹಣವನ್ನು ಕೊಟ್ಟು ಕಳುಹಿಸಿದುದಲ್ಲದೆ, ಯಥಾಕಾಲದಲ್ಲಿ ಅವನ ಕಷ್ಟವನ್ನೂ ಪರಿಹಾರಮಾಡಿದರು.

ಆಳಿದ ಮಹಾಸ್ವಾಮಿಯವರಿಗೆ ಮಕ್ಕಳಲ್ಲಿ ಬಹು ಪ್ರೀತಿ. ಆಳುವ ಮಹಾಸ್ವಾಮಿಯವರಾದ ಶ್ರೀ ಜಯಚಾಮರಾಜೇಂದ್ರ ಒಡೆಯರವರ ಮತ್ತು ಅವರ ಸೋದರಿಯರ ಬಾಲ್ಯದಲ್ಲಿ ಮಹಾ ಪ್ರಭುಗಳವರು ಅವರುಗಳಲ್ಲಿ ತೋರಿಸುತ್ತಿದ್ದ ಪ್ರೀತಿಮಮತೆಗಳು ಅಷ್ಟಿಷ್ಟಲ್ಲ; ಅವರ ಇಸಿದಾದ ಮುದ್ದುಮಾತುಗಳನ್ನು ಆಲಿಸಿ ಹಿಗ್ಗುವರು; ಅವರನ್ನು ಎತ್ತಿಕೊಂಡು ಆಡಿಸಿ ಹರ್ಷಿಸುವರು; ಅವರಿಗೆ ಬೇಕಾದ ವಸ್ತುಗಳನ್ನು ತರಿಸಿಕೊಟ್ಟು ಮುದ್ದಿಸಿ ಅವರನ್ನು ಸಂತೋಷಪಡಿಸಿ ಉಲ್ಲಾಸ ಪಡುವರು; ಬಾಲ್ಯವಯಸ್ಸಿನ ಅವರ ಚಪಲತೆಯನ್ನೂ ಚೇಷ್ಟೆಗಳನ್ನೂ ಕಂಡು ನಲಿಯುವರು.

**ಮಕ್ಕಳಲ್ಲಿ ಪ್ರೀತಿ**

ಮೃಗಯಾವಿನೋದಕ್ಕಾಗಿ ಕಾಡಿಗೆ ಹೋದಾಗಲೆಲ್ಲ ಕಾಡು ಕುರುಬರ ಮಕ್ಕಳಿಗೆ ಬಗೆಬಗೆಯ ಆಟದ ಸಾಮಾನುಗಳನ್ನೂ ಲಾಡು ಜಿಲೇಬಿ ಮುಂತಾದುವುಗಳನ್ನೂ ತಮ್ಮ ಕೈಯಿಂದಲೇ ಕೊಟ್ಟು, ಅವುಗಳ ಕೈಯಲ್ಲಿ ಮಾತನಾಡಿ, ಅವುಗಳ ಲಲ್ಲೆಯನ್ನು ಕೇಳಿ ಹರ್ಷಿಸುತ್ತಿದ್ದರು. ಮಕ್ಕಳು ತಮಗೆ ದೊರೆತ ಪೀಪಿಗಳನ್ನು ಊದಿದರೇ ಪ್ರಭುಗಳಿಗೊಂದು ಆನಂದ; ತಮ್ಮ ಮಹಾರಾಜ ಪದವಿಯನ್ನೂ ಮರೆತು ಅವರು ಆ ರೀತಿ ಮಕ್ಕಳನ್ನು ಪ್ರೀತಿಸುತ್ತಿದ್ದ ಬಗೆಯನ್ನು ಕಂಡು, ಆ ಮಕ್ಕಳ ತಾಯಿ ತಂದೆಗಳು ಅನೇಕಸಲ ಮಹಾಪ್ರಭುಗಳವರಿಗೆ ಅಡ್ಡಬಿದ್ದು ಆನಂದ ಬಾಷ್ಪವನ್ನು ಸುರಿಸಿದ್ದಾರೆ. ಒಂದುಸಲ ದಸರಾ ಮೆರವಣಿಗೆ ಹೊರಟಾಗ, ಮಕ್ಕಳನ್ನೆತ್ತಿಕೊಂಡು ಪ್ರಭುದರ್ಶನಕ್ಕಾಗಿ ಕಿಕ್ಕಿರಿದಿದ್ದ ಹೆಂಗಸರನ್ನೂ, ಮಕ್ಕಳ ಮುಖದಮೇಲೆ ಬಿಸಿಲು ಬಿದ್ದು ಅವುಗಳ ಮುಖಗಳು ಕೆಂಪೇರಿದ್ದುದನ್ನೂ ಅಂಬಾರಿಯ ಮೇಲಿನಿಂದಲೇ ಪರಿಶೀಲಿಸಿ ಮಹಾಪ್ರಭುಗಳವರು ಮನನೊಂದರು; "ಹೆಂಗಸರೂ ಮಕ್ಕಳೂ ಬಿಸಿಲಿನಲ್ಲಿದ್ದರೆ ನಾವು ಆನೆಯ ಮೇಲೆ ಹೋಗಲಾರೆವು" ಎಂದರು. ಮುಂದಿನ ಸಲದ ದಸರಾ ಮೆರವಣಿಗೆಯ ಕಾಲದಿಂದಲೇ ಬಿಸಿಲು ಮಳೆಗಳ ಬಾಧೆಯಿಲ್ಲದೆ ಹೆಂಗಸರು ಮಕ್ಕಳು ಸೇರಬಹುದಾದ ಸೌಕರ್ಯದ ಸೊಗಸಾದ ಏರ್ಪಾಡು ನಡೆಯಲು ಪ್ರಾರಂಭವಾಯಿತು.

ಮಕ್ಕಳೊಡನೆ ಮಾತನಾಡಲು ಮಹಾಪ್ರಭುಗಳವರಿಗೆ ಬಹಳ

ಇಷ್ಟ. ಅವರು ಮುಂದಾಗಿ ತಿಳಿಸದೆಯೂ, ತಾವು ಪ್ರಭುಗಳೆಂಬುದು ಗೊತ್ತಾಗದಂತೆಯೂ ಗ್ರಾಮಾಂತರ ಪಾಠಶಾಲೆಗಳಿಗೆ ಹೋಗಿ ಮಕ್ಕಳೊಡನೆ ಮಾತನಾಡಿ ಮಕ್ಕಳನ್ನು ನೋಡಿಕೊಂಡು ಬರುತ್ತಿದ್ದರು. ಹಾಗೆ ಮಾಡಿದ ಪ್ರತಿಯೊಂದು ಸಲವೂ ಬಾಲಕ ಬಾಲಕಿಯರಿಗೆ ಹಣ್ಣುಗಳೂ ಲಾಡುಗಳು ಮುಂತಾದುವೂ ಲಭಿಸಿದಾಗ, ಅವುಗಳನ್ನು ತಂದು ಕೊಟ್ಟವರಿಂದ ಹಿಂದೆ ತಮ್ಮ ಪಾಠಶಾಲೆಗೆ ಬಂದಿದ್ದವರು ಯಾರೆಂಬುದು ತಿಳಿಯುತ್ತಿದ್ದುದು ವಾಡಿಕೆ. ಒಂದು ದಿನ ಬೆಳಗ್ಗೆ ಮಹಾಪ್ರಭುಗಳವರು ಒಂದು ಪಾಠಶಾಲೆಗೆ ದಯಮಾಡಿದರು. ಉಪಾಧ್ಯಾಯರು ಇನ್ನೂ ಬಂದಿರಲಿಲ್ಲ. ಹುಡುಗರು ಗಲಭೆಮಾಡುತ್ತಿದ್ದರು. ಅಮಲ್ದಾರರೋ ಇನ್‌ಸ್ಪೆಕ್ಟರೋ ಬಂದರೆಂದು ಭಾವಿಸಿ ಅವರು ಸದ್ದುಮಾಡದೆ ಕುಳಿತರು. ಮಹಾಪ್ರಭುಗಳವರು ಅವರಿಗೆ ಅನೇಕ ಪ್ರಶ್ನೆಗಳನ್ನು ಹಾಕಿ, ಅವರ ಉತ್ತರಗಳಿಂದ ಹರ್ಷಿಸಿ, ಅವರಿಗೆ ಸಂತೋಷವಾಗುವಂತೆ ಮಾತನಾಡಿ, ಕೊನೆಗೆ "ನಾನು ಯಾರು ಗೊತ್ತೆ?" ಎಂದು ಕೇಳಿದರು. ಒಬ್ಬ ಹುಡುಗನು, "ಯಾರೋ ಗೊತ್ತಿಲ್ಲಾ, ಸಾರ್. ಇನ್‌ಸ್ಪೆಕ್ಟರೇ ಇರಬೇಕು. ಇನ್‌ಸ್ಪೆಕ್ಟರೇ ಪ್ರಶ್ನೇ ಕೇಳೋದು" ಎಂದುದನ್ನು ಕೇಳಿ ನಕ್ಕು, ಗೋಡೆಯ ಮೇಲಿದ್ದ ತಮ್ಮ ಭಾವಚಿತ್ರದ ಕಡೆಗೆ ಕೈ ತೋರಿಸಿ, "ಆ ಪಟ ನೋಡಿ. ಯಾರೆನ್ನುವುದು ಗೊತ್ತಾಯಿತೆ?" ಎಂದರು. ಹುಡುಗರು ಅಚ್ಚರಿಯಿಂದ ಕೂಡಿ, ಸರಕ್ಕನೆ ಎದ್ದು ನಿಂತು, "ನಮ್ಮ ಮಹಾರಾಜ್ರು. ನಮ್ಮ ಮಹಾರಾಜ್ರು" ಎಂದು ಹೇಳುವ ವೇಳೆಗೆ ಪ್ರಭುಗಳವರು ನಗುತ್ತ ಮುಂದೆ ದಯಮಾಡಿದ್ದರು. ೧೯೩೦ನೆಯ ಇಸವಿ ಜೂಲೈ ತಿಂಗಳು ೧೬ನೆಯ ತಾರೀಖಿನ ದಿನ, ಹಾಸನಕ್ಕೆ ಮೂರು ಮೈಲಿಗಳ ದೂರದಲ್ಲಿರುವ ಹನುಮಂತಪುರವೆಂಬ ಗ್ರಾಮದ ಪಾಠಶಾಲೆಗೆ ಹೋಗಿ ಅಲ್ಲಿಯ ಸ್ಥಿತಿಯನ್ನು ಪರಿಶೀಲಿಸಿ, ಉಪಾಧ್ಯಾಯರಿಂದ ಮಾದರಿ ಪಾಠವನ್ನು ಮಾಡಿಸಿ ಹರ್ಷಚಿತ್ತರಾಗಿ ಹಾಸನಕ್ಕೆ ಹಿಂತಿರುಗಿದರು. ಹೊಸ ಕಟ್ಟಡ ಮುಂತಾದುವುಗಳ ಪ್ರವೇಶ ಮಹೋತ್ಸವಗಳು ಮುಂತಾದುವುಗಳನ್ನು ನೆರವೇರಿಸಲು ದಯಮಾಡುತ್ತಿದ್ದ ಊರುಗಳಲ್ಲೆಲ್ಲ, ಮಕ್ಕಳಿಗೆ ಲಾಡುಗಳೇ ಮುಂತಾದುವುಗಳನ್ನು ಹಂಚಲು ಹಣವನ್ನು ಮಹಾಪ್ರಭುಗಳವರು ದಯಪಾಲಿಸುತ್ತಿದ್ದರು. ಕೆಮ್ಮನಗುಂಡಿಯ ಬಳಿಯಲ್ಲಿ, ಭದ್ರಾವತಿಯ ಕಾರ್ಖಾನೆಗೆ ಕಬ್ಬಿಣದ ಅದುರನ್ನು ಸಾಗಿಸುವ ಸಂಬಂಧದಲ್ಲಿ ಕೆಲಸಮಾಡುವ ಕೂಲಿಯವರ ಮಕ್ಕಳಿಗಾಗಿ ಜಾರುಗುಪ್ಪೆ ಮುಂತಾದುವುಗಳನ್ನು ಮಾಡಿಸಿಕೊಟ್ಟು ಅವರು ಆಟವಾಡುವುದನ್ನು

ನೋಡಿ ಹರ್ಷಿಸುತ್ತಿದ್ದರು. ಪ್ರಭುಗಳು ದಿವಂಗತರಾದುದಕ್ಕೆ ಮುಂಚೆ ಕೆಲವು ತಿಂಗಳುಗಳ ಹಿಂದೆ ಕೆಮ್ಮಣ್ಣುಗುಂಡಿಯಲ್ಲಿದ್ದಾಗ, ಕೂಲಿಯವರಿಗೂ ಮತ್ತು ಅವರ ಮಕ್ಕಳಿಗೂ ಸಂತರ್ಪಣೆ ಮಾಡಿಸಲು ಹಲವು ಸಾವಿರ ಲಾಡುಗಳನ್ನು ಮಾಡಿಸಿದರು; ಮಕ್ಕಳು ಲಾಡುಗಳನ್ನು ತಿಂದುದನ್ನು ನೋಡಿ ಹರ್ಷಿಸಿದರು. ಮಕ್ಕಳಿಗೆ ಜುಬ್ಬಗಳನ್ನು ಹಂಚಿಸಿದರು. ಆ ಮಕ್ಕಳ ಭಾವಚಿತ್ರವನ್ನು ತೆಗೆಯಿಸಿ ಅರಮನೆಯಲ್ಲಿಡಿಸಿದರು.

ಆಳಿದ ಮಹಾಸ್ವಾಮಿಯವರಿಗೆ ಪ್ರಾಣಿಗಳಲ್ಲಿ ಅಪಾರವಾದ ದಯೆಯಿದ್ದಿತು. ಮೈಸೂರು ನಗರದಲ್ಲಿರುವ ಪ್ರಾಣಿಶಾಲೆಯನ್ನು ಮಹಾಪ್ರಭುಗಳವರು ಅತ್ಯುತ್ತಮ ಸ್ಥಿತಿಗೆ ತಂದರು. ಪೂಜ್ಯಪಾದರಾದ ತಮ್ಮ ತೀರ್ಥರೂಪರ ಕಾಲದ ಆ ಪ್ರಾಣಿಶಾಲೆಯು ಭರತಖಂಡದಲ್ಲೇ ಉತ್ತಮವಾದವುಗಳಲ್ಲೊಂದಾಗಬೇಕೆಂದು ಉದ್ದೇಶಿಸಿ, ಅನೇಕ ಪ್ರಾಣಿಗಳನ್ನು ಸ್ವದೇಶ ವಿದೇಶಗಳಿಂದ ತರಿಸಿ, ಅಲ್ಲಿಡಿಸಿದರು. ಅಲ್ಲಿರುವ ವಿವಿಧ ಪ್ರಾಣಿಗಳೂ ಅವು ಸ್ವತಂತ್ರವಾಗಿದ್ದಾಗ ಯಾವ ಸನ್ನಿವೇಶಗಳಲ್ಲಿರುವುವೋ ಅವೇ ಸನ್ನಿವೇಶಗಳೇ ಸಾಧ್ಯವಾದಮಟ್ಟಿಗೂ ಇರುವಂತೆ ಏರ್ಪಡಿಸಿದರು. ಓಡಾಡಲು ಅವಕಾಶವಿಲ್ಲದಂತೆ ಬೋನುಗಳಲ್ಲಿ ಹುಲಿಗಳನ್ನು ಬಂಧನದಲ್ಲಿಟ್ಟಿರುವುದೇ ಸಾಮಾನ್ಯವಾಗಿ ಪ್ರಾಣಿಶಾಲೆಗಳಲ್ಲೆಲ್ಲ ವಾಡಿಕೆ. ಮಹಾಪ್ರಭುಗಳವರು ಅದನ್ನು ತಪ್ಪಿಸಿ, ಹುಲಿಗಳು ವಿಶಾಲವಾದ ಪ್ರದೇಶದಲ್ಲಿ ಓಡಾಡಿಕೊಂಡು ಉಲ್ಲಾಸದಿಂದಿರುವಂತೆ ಅನುಕೂಲವನ್ನು ಕಲ್ಪಿಸಿದ್ದಾರೆ. ಈ ರೀತಿಯ ವಿಶೇಷ ವಿಧದ ಏರ್ಪಾಡು ಆಸ್ಟ್ರೇಲಿಯಾ ಖಂಡದ ಸಿಡ್ನಿ ನಗರದಲ್ಲಿಯೂ, ಯೂರೋಪು ಖಂಡದ ಒಂದು ನಗರದಲ್ಲಿಯೂ ಹೊರತು ಮತ್ತೆಲ್ಲಿಯೂ ಇಲ್ಲ. ಅದಕ್ಕಾಗಿ ಅನೇಕ ಸಾವಿರ ರೂಪಾಯಿಗಳು ವೆಚ್ಚವಾಗಿವೆ. ಹುಲಿಗಳು ಸಾಹಸದಿಂದ ಮರಕ್ಕೆ ಹಾರುವಂತೆಯೂ, ಮರದ ಮೇಲೆ ಸುಖವಾಗಿ ಮಲಗಿರುವಂತೆಯೂ ಸೌಕರ್ಯವು ಕಲ್ಪಿತವಾಗಿದೆ.

**ಪ್ರಾಣಿದಯೆ**

ಮಹಾಪ್ರಭುಗಳವರು ಪ್ರಾಣಿಜೀವನ ವಿಚಾರದಲ್ಲಿ ಅನೇಕ ಗ್ರಂಥಗಳನ್ನು ವ್ಯಾಸಂಗ ಮಾಡಿ ಪ್ರಾಣಿಶಾಲೆಯ ಪ್ರಾಣಿಗಳಿಗೆ ಇಷ್ಟವಾದ ಆಹಾರಗಳನ್ನು ಕೊಡಿಸುತ್ತಿದ್ದರು. ಅಲ್ಲದೆ, ಕೆಲಸಗಾರರು ಬೇಸರವಿಲ್ಲದೆ ಪ್ರಾಣಿಗಳಿಗೆ ಅವುಗಳನ್ನೆಲ್ಲ ದೊರೆಯಿಸಿ ಸರಿಯಾಗಿ ನೋಡಿಕೊಳ್ಳುತ್ತಿದ್ದರೋ ಇಲ್ಲವೋ ಎಂಬುದನ್ನು ಸ್ವಂತವಾಗಿ ಪರಿಶೀಲಿಸುತ್ತಿದ್ದರು. ಕರಡಿಗಳಿಗೆ ಬೆಣ್ಣೆಯನ್ನು ತಿನ್ನಲು ಬಹಳ ಇಷ್ಟವಾದಕಾರಣ, ಅವುಗಳಿಗೆ ಬೆಣ್ಣೆಯನ್ನು ಕೊಡುವ ವ್ಯವಸ್ಥೆಯನ್ನು ಮಾಡಿದ್ದರು. ಆದರೆ ಅದಕ್ಕಾಗಿ

ನೇಮಕವಾಗಿದ್ದ ಆಳೇ ಕರಡಿಗಳಿಗೆ ತಿನ್ನಿಸಬೇಕೆಂದು ತನ್ನ ವಶಕ್ಕೆ ಬಂದ ಬೆಣ್ಣೆಯನ್ನೆಲ್ಲ ಮೆಲ್ಲುತ್ತಿದ್ದನು. ಮಹಾಪ್ರಭುಗಳವರು ಅವನ್ನು ಕಂಡು ಹಿಡಿದಾಗ ಅವನು, "ಮಾಸ್ವಾಮಿ, ಮಾಫ್ ಮಾಡಬೇಕು. ಈ ಹಾಳಾದೋನಿಗೆ ಬೆಣ್ಣೇಲಿ ಭಲೇ ಆಸೆ" ಎಂದುದನ್ನು ಕೇಳಿ ಅಂದಿನಿಂದ ಮೊದಲಿಗಿಂತ ಎರಡರಷ್ಟು ಬೆಣ್ಣೆಯು ಅವನ ವಶಕ್ಕೆ ಹೋಗುವಂತೆ ಆಜ್ಞೆಮಾಡಿದರು; "ಈಗ ಬೆಣ್ಣೆ ನಿನಗೂ ಸಿಕ್ಕುವಂತಾಗಿದೆ. ನೀನು ನಿನ್ನ ಪಾಲನ್ನು ತಿಂದು, ಕರಡಿಗಳ ಪಾಲಿನ ಬೆಣ್ಣೆಯನ್ನು ಅವಕ್ಕೇ ತಿನ್ನಿಸು. ನಿನ್ನ ಮೇಲೆ ದೂರು ಹೇಳಲಾರದ ಆ ಬಡ ಪ್ರಾಣಿಗಳಿಗೆ ಮೋಸ ಮಾಡಬೇಡ" ಎಂದು ಕಟ್ಟುಮಾಡಿದರು. ಅಶ್ವಶಾಲೆಯಲ್ಲಿದ್ದ ಕೆಲಸಗಾರನೊಬ್ಬನು ಕುದುರೆಗಳಿಗೆ ತಿನ್ನಿಸಲು ತನ್ನ ವಶಕ್ಕೆ ಬರುತ್ತಿದ್ದ ಬೆಂದ ಹುರುಳಿಯಲ್ಲಿ ಸ್ವಲ್ಪ ಭಾಗವನ್ನು ಪ್ರತಿದಿನವೂ ತನ್ನ ಮನೆಗೆ ತೆಗೆದುಕೊಂಡು ಹೋಗುತ್ತಿದ್ದನು. ಅದು ಹೊರಬಿದ್ದು ಮಹಾಪ್ರಭುಗಳವರಿಗೆ ತಿಳಿದಾಗ, "ಮಾಸ್ವಾಮಿ, ಮನೇಲಿ ತುಂಬಾ ಜನ. ಸಂಬಳಾ ಸಾಲ್ದು. ಇಲ್ಲಿಂದ ನಾಗಿಸೋ ಹುರುಳೀಲೇ ಮಕ್ಕಳಿಗೆ ಅರ್ಧಾ ಹೊಟ್ಟೇ ತುಂಬಬೇಕು. ಕಿತ್ತಾಡಿ ತಿಂತವೆ. ಬಡತನದಾಗೆ ಸಿಕ್ಕಿದ ಮನುಸ ಪಿಶಾಚೀ ಹಂಗೆ. ಮಾಫ್ ಮಾಡಬೇಕು, ಮಾಸ್ವಾಮಿ" ಎಂದು ಅರಿಕೆ ಮಾಡಿದನು. ಮಹಾಪ್ರಭುಗಳವರು ಅವನ ಯೋಗ್ಯತೆಗೆ ಮೀರಿದಷ್ಟು ಮಟ್ಟಿಗೆಸಂಬಳವನ್ನು ಹೆಚ್ಚಿಸಿ, ಅವನು ತೆಗೆದುಕೊಂಡುಹೋಗುತ್ತಿದ್ದಷ್ಟು ಹುರುಳಿಯನ್ನು ಪ್ರತಿದಿನವೂ ತೆಗೆದುಕೊಂಡುಹೋಗಬಹುದೆಂದು ಅಪ್ಪಣೆ ಮಾಡಿದರು.

ಪರಸ್ಪರವಾಗಿ ದ್ವೇಷವನ್ನು ತೋರುವ ಕಾಡುಮೃಗಗಳಲ್ಲಿ ಸ್ನೇಹ ಪ್ರವೃತ್ತಿಯನ್ನುಂಟುಮಾಡುವುದು ಸಾಧ್ಯವೇ — ಎಂಬ ಪ್ರಯೋಗ ಪರೀಕ್ಷೆಗಳನ್ನು ಕೂಡ ಮಹಾಪ್ರಭುಗಳವರು ನೆರವೇರಿಸುತ್ತಿದ್ದರು. ಚಿಂಪಾಂಜಿಗಳು ಪರಸ್ಪರವಾಗಿ ಸ್ನೇಹದಿಂದ ಟ್ರೈಸಿಕಲ್ ಸವಾರಿ ಮಾಡಿಕೊಂಡು ಬರುವಂತೆಯೂ, ಒಟ್ಟಿಗೆ ಸೇರಿ ಆಹಾರವನ್ನು ತೆಗೆದುಕೊಂಡು ತಮ್ಮ ತಮ್ಮಲ್ಲಿ ಹಂಚಿಕೊಳ್ಳುವಂತೆಯೂ, ಅವಕ್ಕೆ ಶಿಕ್ಷಣಕೊಡಿಸಿದ್ದರು. ಪರಸ್ಪರವಾಗಿ ಬದ್ಧದ್ವೇಷದಿಂದ ಕೂಡಿರುವ ಕಾಡುಮೃಗಗಳಾದ ಸಿಂಹವೂ ಹುಲಿಯೂ ಸ್ನೇಹದಿಂದ ಅನ್ಯೋನ್ಯವಾಗಿರುವಂತೆ ಮಾಡಿದ್ದರು. ಇವೆರಡೂ ಸಫಲ ರೀತಿಯಲ್ಲಿ ನೆರವೇರಿದ್ದ ಪ್ರಯೋಗಪರೀಕ್ಷೆಗಳು. ಪ್ರಾಣಿಶಾಲೆಯ ವೆಚ್ಚವನ್ನೆಲ್ಲ ಅವರು ಅರಮನೆಯ ಹಣದಿಂದ ವಹಿಸುತ್ತಿದ್ದರು.

ಆಳಿದ ಮಹಾಸ್ವಾಮಿಯವರಷ್ಟುಮಟ್ಟಿಗೆ ಪ್ರಾಣಿದಯೆಯನ್ನು

ತೋರಿಸುವವರು ಅತಿ ವಿರಳ. ಅರಮನೆಯ ಎತ್ತುಗಳಿಗೆ ಲಾಳವನ್ನು ಕಟ್ಟಿಸುವಾಗ, ಕಾಲುಗಳಿಗೆ ಹಗ್ಗವನ್ನು ಬಿಗಿದು ನೆಲದ ಮೇಲೆ ಉರುಳಿಸಿ ಹಿಂಸೆಪಡಿಸುತ್ತಿದ್ದುದನ್ನು ಅವರು ತಪ್ಪಿಸಿದರು. ವಿಶಾಲವಾದ ಮತ್ತು ಆಳವಾದ ಹಳ್ಳವನ್ನು ತೋಡಿಸಿ, ಅದನ್ನು ಮರಳಿನಿಂದ ಭರ್ತಿ ಮಾಡಿಸಿದರು. ಆ ಮರಳಿನಮೇಲೆ, "ಬೈಟ್, ಬೈಟ್" ಎಂದು ಹೇಳಿದೊಡನೆಯೇ ಎತ್ತುಗಳು ತಾವಾಗಿಯೇ ಮಲಗಿಕೊಳ್ಳುವುದನ್ನು ಅವಕ್ಕೆ ಕಲಿಸುವಂತೆ ಮಾಡಿದ್ದರು. ಹಾಗೆ ಮಲಗಿದ ಎತ್ತುಗಳ ತಲೆಯ ಕೆಳಕ್ಕೆ ದೊಡ್ಡ ದಿಂಬನ್ನಿಟ್ಟು ಅವಕ್ಕೆ ಹಿತವಾಗಿರುವಂತೆ ಮಾಡಿ ಲಾಳ ಕಟ್ಟುವಂತೆ ಏರ್ಪಡಿಸಿದ್ದರು. ಲಾಳ ಕಟ್ಟುವ ಈ ಹೊಸ ವಿಧಾನದಿಂದ ಎತ್ತುಗಳಿಗೆ ಮೊದಲಿನ ಹಿಂಸೆಯು ತಪ್ಪಿತು. ಬಂಡಿಗಳಿಗೆ ಹೆಚ್ಚು ಹೊರೆಯನ್ನು ಹೇರದಂತೆ ಮಹಾಪ್ರಭುಗಳವರ ಆಜ್ಞೆಯಾಯಿತು. ದನಗಳಿಗೆ ಬರೆ ಹಾಕಿ "ನಂಬರು" ಹಾಕುತ್ತಿದ್ದುದನ್ನು ಅವರು ತಪ್ಪಿಸಿ, ಎಂದಿಗೂ ಅಳಿಸಿಹೋಗದ ಬಣ್ಣದಲ್ಲಿ ನಂಬರುಗಳನ್ನು ಹಾಕಿಸುವ ಏರ್ಪಾಡನ್ನು ಮಾಡಿಸಿದರು. ಒಮ್ಮೆ, ಬಾಡಿಗೆಗೆ ಬಂಡಿಗಳನ್ನು ಹೊಡೆಯುವವರು ಒಂದೊಂದು ಬಂಡಿಗೂ ಎರಡೆರಡು ಕಲ್ಲು ಚಪ್ಪಡಿಗಳನ್ನು ಹೇರಿಕೊಂಡು ಬೆಟ್ಟದ ಮೇಲಕ್ಕೆ ಹೋಗುತ್ತಿದ್ದುದನ್ನು ಕಂಡಾಗ, ಅವರು ಒಂದೊಂದೇ ಚಪ್ಪಡಿಯನ್ನು ಹೇರಿಕೊಂಡು ಹೋಗಬೇಕೆಂದು ಅಪ್ಪಣೆಮಾಡಿದರು. ಅದರಿಂದ ಚಾಮುಂಡೀ ಬೆಟ್ಟದ ಮೇಲಕ್ಕೆ ಹೋಗಬೇಕಾಗಿ ಬಂದ ಮತ್ತೊಂದುಸಲದ ಹೆಚ್ಚಿಗೆ ಬಾಡಿಗೆಯನ್ನು ಮಹಾಸ್ವಾಮಿಯವರೇ ಕೊಟ್ಟರು. ಬೇಟೆಗೆ ಅಥವಾ ಕಾಡಿನಲ್ಲಿ ಸುತ್ತುವುದಕ್ಕೆ ಆನೆಯನ್ನು ಕಳುಹಿಸಿ ಆ ಬಳಿಕ ತಾವು ಹೋಗುವುದಾಗಿದ್ದಾಗ, "ಹೌದಾ" ಹೇರಿ ಕಳುಹಿಸದೆ ಅದನ್ನು ("ಹೌದಾ" ವನ್ನು) ಬಂಡಿಯಲ್ಲಿ ಪ್ರತ್ಯೇಕವಾಗಿ ತೆಗೆದುಕೊಂಡು ಹೋಗುವಂತೆ ಮಹಾಪ್ರಭುಗಳವರು ಅಪ್ಪಣೆ ಮಾಡಿದ್ದರು. ನಾಯಿಗಳಿಗಾಗಿ ಮೆತ್ತೆ ಹಾಕಿಸಿ ಮೃದುವಾಗಿರುವಂತೆ ಮೋಟಾರು ಬಂಡಿಯಲ್ಲಿ ಸ್ಥಳ ಮಾಡಿಸಿಕೊಟ್ಟಿದ್ದರು. ಬೆಟ್ಟದ ಮಾರ್ಗವಾಗಿ ಹೊರಟಾಗ ಅವರು ವೃದ್ಧರೂ ಅಶಕ್ತರೂ ಆದ ತಮ್ಮ ಜೊತೆಯವರನ್ನು ಕುದುರೆಗಳ ಮೇಲೆ ಕುಳ್ಳಿರಿಸಿ ತಾವು ಪಾರ್ಶ್ವದಲ್ಲಿ ನಡೆದು ಹೋಗುತ್ತಿದ್ದುದು ವಾಡಿಕೆ; ಆದರೆ, ಬೆಟ್ಟ ಹತ್ತುವಾಗ ಕಡಿದಾದ ಪ್ರದೇಶಗಳಲ್ಲಿ ಕುದುರೆಗಳಿಗೆ ಆಯಾಸವನ್ನು ತಪ್ಪಿಸುವುದಕ್ಕಾಗಿ ಕುದುರೆಗಳಿಂದ ಅವರುಗಳು ಕೆಳಕ್ಕಿಳಿಯಬೇಕೆಂದೂ, ಬೆಟ್ಟದಿಂದ ಇಳಿದು ಬರುವಾಗ (ಕುದುರೆಗಳು ಜಾರಿಯಾವೆಂಬ ಶಂಕೆಯಿಂದ) ಅವರಾರೂ

ಕುದುರೆಗಳ ಮೇಲೆ ಕುಳಿತುಕೊಳ್ಳಕೂಡದೆಂದೂ, ಕುದುರೆಗಳು ಹುಲ್ಲನ್ನು ತಿನ್ನಲಾರಂಭಿಸಿದರೆ ಅವು ಹುಲ್ಲನ್ನು ತಿಂದ ಮೇಲೆ ಮುಂದೆ ಹೋಗಬೇಕೆಂದೂ ಮಹಾಪ್ರಭುಗಳವರು ಅಪ್ಪಣೆ ಮಾಡಿದ್ದರು. ನೀಲಗಿರಿಯಲ್ಲಿದ್ದಾಗ ಒಂದು ಸಲ, ಒಂದು ನಾಯಿಮರಿಗೆ ಯಾರಿಂದಲೋ ಚಾವಟಿ ಪೆಟ್ಟುಗಳು ಬಿದ್ದಿದ್ದಕಾರಣ ಮೈಯೆಲ್ಲಾ ರಕ್ತವಾಗಿದ್ದಿತು. ಅದನ್ನು ಕಂಡ ಮಹಾಪ್ರಭುಗಳವರು ಅದನ್ನು ಎತ್ತಿಕೊಂಡುಹೋಗಿ ತಮ್ಮ ಕೈಯಿಂದಲೇ ಔಷಧವನ್ನು ಸವರಿ ಗಾಯಗಳನ್ನು ವಾಸಿಮಾಡಿದರು. ಅರಸು ಪಂಗಡದ ಕೆಲವು ಮಂದಿಗಳ ಮನೆಗಳಲ್ಲಿ ನವರಾತ್ರಿ ಹಬ್ಬದಲ್ಲಿ ಟಗರುಗಳ ಕಾಳಗ, ಕೋಣಗಳ ಕಾಳಗ, ಮುಂತಾದುವುಗಳನ್ನೇರ್ಪಡಿಸಿ ಪ್ರಾಣಿಹಿಂಸೆಯಾಗುತ್ತಿದ್ದ ಪದ್ಧತಿಯನ್ನು ಪ್ರಭುಗಳವರು ನಿಲ್ಲಿಸಿದರು. ಆಸ್ಟ್ರೇಲಿಯದಿಂದ ತರಿಸಿದ್ದ ಕುದುರೆಗಳನ್ನು ಪಳಗಿಸುವಾಗ್ಗೆ ಕಬ್ಬಿಣದ ಮುಳ್ಳು ಚಾವಟಿಯಿಂದ ಹೊಡೆದು ಘಾಸಿಪಡಿಸುತ್ತಿದ್ದುದನ್ನು ಅವರು ನಿಷೇಧಿಸಿ ಅವುಗಳನ್ನು ಪಳಗಿಸುವ ಉತ್ತಮ ವಿಧಾನವನ್ನು ಕಂಡುಹಿಡಿದರು. ನೋಟಕ್ಕೆ ಅಂದವಾಗಿಯೂ, ಕುದುರೆಯು ಎಳೆಯಲು ಹಗುರವಾಗಿಯೂ ಇರುವ "ಷಾಃ ಪಸಂದ್" ಬಂಡಿಗಳ ಮಾದರಿಯನ್ನು ಮಹಾಪ್ರಭುಗಳವರೇ ಕಂಡುಹಿಡಿದರು. ಆ ಸೊಗಸಾದ ನೂತನ ವಿಧದ ಬಂಡಿಗಳನ್ನು ಮಾಡಿಸಿ, ಜನರಿಗೆ ಅಸಲು ಕ್ರಯಕ್ಕೇ ಮಾರಿಸಿ, ಪ್ರಚಾರಕ್ಕೆ ತಂದರು. ಆ ಮಾರಾಟದಿಂದ ಬಂದ ಹಣವನ್ನೆಲ್ಲ ಬಡವರಿಗೆ ಮನೆಗಳನ್ನು ಕಟ್ಟಿಸಿಕೊಡಲು ಉಪಯೋಗಿಸಬೇಕೆಂದು ಅಪ್ಪಣೆ ಮಾಡಿದರು.

ಅರಮನೆಗೆ ಹೊಸ ಕುದುರೆಗಳನ್ನು ಕೊಂಡಾಗ ಅವುಗಳ ಬಾಯಿಗಳಿಗೆ ಹೊಂದುವ ಕಡಿವಾಣಗಳಾವುವೆಂಬುದನ್ನು ಪರೀಕ್ಷೆ ಮಾಡಿಸಿ ನೋಡುತ್ತಿದ್ದರು. ಕುದುರೆಯ ಬಾಯೊಳಗಿನ ಕಡಿವಾಣವು ಅದಕ್ಕೆ ಹಿಂಸೆಯಾಗದಂತೆ ಹೊಂದಿಕೊಂಡಿರಬೇಕೆಂಬುದು ಅವರ ಆಶಯ. ಒಂದು ಸಲ, ನೀಲಗಿರಿಯ ಯೂರೋಪಿಯನ್ ದೊಡ್ಡ ಮನುಷ್ಯರೊಬ್ಬರು ತಾವು ಆಶೆಯಿಂದ ಕೊಂಡಿದ್ದ ಸೊಗಸಾದ ಕುದುರೆಯು ಬಹಳ ತುಂಟ ಕುದುರೆಯೆಂದು ಭಾವಿಸಿ, ಅದನ್ನು ತೀರ ಅಗ್ಗದ ಬೆಲೆಗೆ ಮಾರಲು ಸಿದ್ಧವಾದರು. ನೆಪಮಾತ್ರದ ಬೆಲೆಗೂ ಅದನ್ನು ಕೊಳ್ಳುವವರಿಲ್ಲವಾದರು. ಕೊಳ್ಳುವವರಾರೂ ಇಲ್ಲದೆ ಹೋದರೆ ಅದನ್ನು ಗುಂಡಿನಿಂದ ಹೊಡೆಯಲು ಆ ದೊಡ್ಡ ಮನುಷ್ಯರು ನಿರ್ಧರಿಸಿದ್ದರೆಂಬ ಸುದ್ದಿಯನ್ನು ಕೇಳಿ ಕರುಣಾಳುಗಳಾದ ಮಹಾಪ್ರಭುಗಳವರು ಅದನ್ನು ಕೊಂಡುಕೊಂಡರು. ಆ ಬಳಿಕ ಅವರು

ಪರೀಕ್ಷಿಸಿ ನೋಡಿದುದರಲ್ಲಿ ಅದಕ್ಕೆ ಸರಿಯಾದ ಕಡಿವಾಣವನ್ನು ಹಾಕದೆ ಇದ್ದುದರಿಂದ ನೋವನ್ನು ತಾಳಲಾರದೆ ಹಾಗೆ ತುಂಟಾಟವಾಡಿ ಅದು ತೊಂದರೆ ಕೊಡುತ್ತಿದ್ದಿತೆಂದು ಗೊತ್ತಾಯಿತು. ಸರಿಯಾದ ಕಡಿವಾಣ ವನ್ನು ಹಾಕಿಸಿದ ಮೇಲೆ, ಅದು ಮಹಾಪ್ರಭುಗಳವರ ಮೆಚ್ಚಿನ ಕುದುರೆ ಗಳಲ್ಲೊಂದಾಗಿ ಪರಮ ಸಾಧುವೆನಿಸಿತು. ಒಂದು ಸಲ, ಒಬ್ಬ ಜಟಕಾ ಬಂಡಿಯವನು ಮೈಯೆಲ್ಲ ಪುಣ್ಣಾಗಿದ್ದ ಕುದುರೆಯನ್ನು ಬಂಡಿಗೆ ಕಟ್ಟಿ ಹೊಡೆಯುತ್ತಿದ್ದುದನ್ನೂ, ಅವನ ಬಡತನವನ್ನೂ ಕಂಡು ಅವರು ಮರುಕ ಗೊಂಡರು. ಅವನ ಕುದುರೆಗೆ ವ್ರಣಗಳೆಲ್ಲ ವಾಸಿಯಾಗುವವರೆಗೂ ಅರಮನೆಯ ಅಶ್ವಶಾಲೆಯಲ್ಲಿ ಚಿಕಿತ್ಸೆ ಮಾಡಿಸಿ, ಪುಷ್ಟಿಯಾಗಿ ಮೇವನ್ನು ಹಾಕಿಸಿ ಹಿಂಪಕ್ಕೆ ಕಳುಹಿಸಿದರು. ಅದುವರೆಗೂ ಅವನಿಗೂ ಅವನ ಕುಟುಂಬದವರಿಗೂ ಜೀವನಕ್ಕೆ ಅವಶ್ಯವಾಗಿದ್ದಷ್ಟು ಹಣವನ್ನೂ ಅವರೇ ಕೊಡುತ್ತಿದ್ದರು.

ಆಳಿದ ಮಹಾಸ್ವಾಮಿಯವರು ಕುದುರೆಗಳಲ್ಲಿ ವಿಶೇಷವಾಗಿ ದಯೆ ತೋರಿಸುತ್ತಿದ್ದುದರಿಂದ, ಅವರು ಅಶ್ವಶಾಲೆಗೆ ದಯಮಾಡಿದಾಗಲೆಲ್ಲ ಅಲ್ಲಿಯ ಕುದುರೆಗಳು ಕೆನೆಯುತ್ತಿದ್ದುವು. ಕುದುರೆಗಳು ಒಟ್ಟಿಗೆ ನಿಂತಿದ್ದಾಗ ಅವರು ಯಾವ ಕುದುರೆಯ ಹೆಸರನ್ನು ಕೂಗಿದರೆ ಆ ಕುದುರೆಯು ಆದರದಿಂದ ಅವರ ಬಳಿಗೆ ಓಡಿಬರುತ್ತಿದ್ದಿತು. ಪ್ರತಿದಿನವೂ ಅವರು ಕುದುರೆಗಳಿಗೆ ಕೆಂಪು ಮೂಲಂಗಿಗಳನ್ನೂ, ಮಸಾಲೆ ಸೊಪ್ಪನ್ನೂ ತಿನ್ನಿಸಿದಲ್ಲದೆ ಅಶ್ವಶಾಲೆಯಿಂದ ಹೊರಡುತ್ತಿರಲಿಲ್ಲ. ಕುದುರೆಗಳಿಗೆ ಲಾಳ ಕಟ್ಟುವುದರಲ್ಲಿ ಯೂರೋಪು ಖಂಡದಲ್ಲಿ ಅನುಸರಿಸುವ ಉತ್ತಮವಾದ ಮಾರ್ಗವನ್ನು ತಮ್ಮ ಪ್ರವಾಸಕಾಲದಲ್ಲಿ ಮಹಾಪ್ರಭುಗಳವರು ನೋಡಿ ಕೊಂಡು ಬಂದರು. ಅದುವರೆಗೂ ಇಲ್ಲಿ ಅನುಸರಿಸುತ್ತಿದ್ದ ಒರಟು ಪದ್ಧತಿಯನ್ನು ತಪ್ಪಿಸಿ ಅಲ್ಲಿಯ ವಿಧಾನವು ರೂಢಿಗೆ ಬರುವಂತೆ ಮಾಡಿ ದರು. ಮಹಾಪ್ರಭುಗಳವರಿಗೆ ನಾಯಿಗಳಲ್ಲಿ ಬಹಳ ಪ್ರೀತಿ. ಹಸುಗಳನ್ನು ಕಂಡರೂ ಹಾಗೆಯೇ. ಅವರು ಪ್ರತಿದಿನವೂ ಪಟ್ಟದ ಹಸುವಿಗೆ ಪೂಜೆ ಮಾಡುತ್ತಿದ್ದರು. ಪ್ರತಿದಿನವೂ ಬೆಳಗ್ಗೆ ಹತ್ತು ಘಂಟೆಯ ಹೊತ್ತಿಗೆ ಅದಕ್ಕೆ ರಸಬಾಳೆಯ ಹಣ್ಣನ್ನು ತಿನ್ನಿಸುತ್ತಿದ್ದರು.

ಆನೆಗೆ ಅಂಬಾರಿಯನ್ನು ಬಿಗಿಯುವಾಗ ಆಳುಗಳು ಆನೆಯನ್ನು ನೆಲದಮೇಲೆ ಮಲಗಿಸಿ ಅದನ್ನು ಬಿಗಿಯುತ್ತಿದ್ದರು. ಆನೆಗೆ ಆಗ ಬಹಳ ಹಿಂಸೆ. ಮಹಾಪ್ರಭುಗಳವರು ಅದನ್ನು ಗಮನಕ್ಕೆ ತಂದುಕೊಂಡು ಅಂಬಾರಿಯನ್ನು ಹಗುರ ಮಾಡಿಸಿ, "ಕ್ರೇನ್" ಎಂಬ ಯಂತ್ರ

ಸಾಧನದಿಂದ ಎತ್ತಿಸಿ ಆನೆಯು ನಿಂತಿರುವಾಗಲೇ ಅಂಬಾರಿಯನ್ನು ಬಿಗಿಸುತ್ತಿದ್ದರು. ಅಲ್ಲದೆ, ಬನ್ನಿಯ ಮಂಟಪಕ್ಕೆ ಹೋದಾಗ ಬಿಗಿದ ಅಂಬಾರಿಯು ಬಿಗಿದಂತೆಯೇ ಇರುತ್ತಿದ್ದಿತು. ಮಹಾಪ್ರಭುಗಳವರು, ಅಂಬಾರಿಯನ್ನು "ಕ್ರೇನ್" ಯಂತ್ರಸಾಧನದಿಂದ ಎತ್ತಿಹಿಡಿಸಿದ್ದು ಅರಮನೆಗೆ ಮತ್ತೆ ಹೊರಡುವ ವೇಳೆಯಲ್ಲಿ ಮಾತ್ರ ಅದನ್ನು ಪುನಃ ಆನೆಯ ಬೆನ್ನಿಗೆ ಬಿಗಿಸಬೇಕೆಂದು ಆಜ್ಞೆ ಮಾಡಿದರು.

ಮಹಾಪ್ರಭುಗಳವರು ಕುಳಿತಿದ್ದ ಮೋಟಾರು ಬಂಡಿಯು ಬಹಳ ನಿಧಾನವಾಗಿ ಸಂಚಾರ ಮಾಡುತ್ತಿದ್ದುದಕ್ಕೂ ಅವರ ಪ್ರಾಣಿದಯೆಯೇ ಕಾರಣ. ಒಂದು ಸಲ, ಸನ್ನಿಧಿಯ ಅಧಿಕಾರಿಯವರೊಬ್ಬರು ಬಹು ಶೀಘ್ರವಾಗಿ ಮೋಟಾರು ಬಂಡಿಯಲ್ಲಿ ದೂರ ಪ್ರಯಾಣ ಮಾಡಿ ಬಂದಾಗ, "ದಾರಿಯಲ್ಲಿ ಎಷ್ಟು ಕುರಿ ಕೋಳಿಗಳು ಬಲಿಯಾದುವು? ನರಬಲಿಯೂ ಆಯಿತೋ ಹೇಗೆ? ಇನ್ನುಮೇಲಾದರೂ ನಿಧಾನವಾಗಿ ಮೋಟಾರು ಬಿಟ್ಟುಕೊಂಡು ಬನ್ನಿ" ಎಂದು ಮಹಾಪ್ರಭುಗಳವರು ತಿಳಿಸಿದರು.

ಆಳಿದ ಮಹಾಸ್ವಾಮಿಯವರು, ೧೯೩೪ನೆಯ ಇಸವಿಯಲ್ಲಿ ಹುಲಿಯ ಬೇಟೆಯನ್ನು ನೋಡಲು ಮಹಾಮಾತೃಶ್ರೀ ವಾಣೀವಿಲಾಸ ಸನ್ನಿಧಾನದವರನ್ನು ಕೆಂಡಗಣ್ಣಸ್ವಾಮಿ ಗದ್ದುಗೆಯ ಬಳಿಯ ಕಾಡಿಗೆ ಕರೆದುಕೊಂಡು ಹೋಗಿದ್ದರು. ಅಲ್ಲಿಂದ ಮೈಸೂರಿಗೆ ಹೊರಟಾಗ ಮುಂದಿನ ಮೋಟಾರು ಬಂಡಿಯನ್ನು ಮಹಾಸ್ವಾಮಿಯವರೇ ನಡೆಯಿಸುತ್ತಿದ್ದರು. ತೊಲೆಗಳನ್ನು ಸಾಗಿಸುತ್ತಿದ್ದ ಎತ್ತಿನ ಬಂಡಿಯೊಂದು ಮಾರ್ಗದ ಮಧ್ಯಭಾಗದಲ್ಲಿ ಹೋಗುತ್ತಿದ್ದಿತು. ಮೋಟಾರು ಬಂಡಿಯ ತುತ್ತೂರಿಯನ್ನು ಎಷ್ಟುಸಲ ಧ್ವನಿಮಾಡಿದರೂ ಬಂಡಿಯವನು ಬಂಡಿಯನ್ನು ಒಂದು ಪಕ್ಕಕ್ಕೆ ಬಿಟ್ಟುಕೊಂಡು ದಾರಿಯನ್ನು ಕೊಡಲಿಲ್ಲ. ಮಹಾಪ್ರಭುಗಳವರು ಮೋಟಾರನ್ನು ನಿಲ್ಲಿಸಿ, ಸಾಮಾನ್ಯರಂತೆ ಕಾಣುವುದಕ್ಕಾಗಿ ರುಮಾಲನ್ನೂ ಅಂಗಿಯನ್ನೂ ತೆಗೆದಿಟ್ಟು, ಮುಂದೆ ಹೋಗಿ ಎತ್ತಿನ ಬಂಡಿಯವನನ್ನು ಕುರಿತು, "ಪಕ್ಕಕ್ಕೇಕೊ ಬಂಡಿ ಹೊಡೆದು ದಾರಿ ಬಿಡಲಿಲ್ಲ?" ಎಂದು ಕೇಳಿದರು. ಅವನು ತನ್ನೊಡನೆ ಮಾತನಾಡಿದವರು ಯಾರೆಂಬುದನ್ನರಿಯದೆ, "ನಿಮಗೇನು ಬುದ್ಧಿ, ಹೇಳಾಕೆ? ದಿಣ್ಣೆ. ಎತ್ತುಗ್ಳು ನೋಡಿ, ಮುಕ್ಕರೀತಾ ಅವೆ. ಬಂಡೀ ವಾರೇಮಾಡಿ ದಾರೀ ಕೊಡಾಕೆ, ಯಾರಾದ್ರೂ ಚಕ್ರಾಹಾಕ್ದ್ರೇ ಸಾಗೀತಾ, ಬುದ್ಧಿ? ಮೂಗು ಪರಾಣೀ ಕಷ್ಟಾನೆಲ್ಲಾ ನರಮನುಸರು, ನರಮನುಸರು ನೀವೇನು ಬಲ್ರಿ?" ಎಂದನು. ಮಹಾಪ್ರಭುಗಳವರು ಪ್ರಸನ್ನಭಾವದಿಂದ, ತಮ್ಮ ಜೊತೆಯಲ್ಲಿ ಮೋಟಾರಿನಲ್ಲಿದ್ದ

ಅಂಗರಕ್ಷಕರನ್ನು ಕರೆದು ಅವರ ಜೊತೆಯಲ್ಲಿ ತಾವೂ "ಚಕ್ರಾಹಾಕಿ" ಬಂಡಿಯನ್ನು ದಿಣ್ಣೆಯ ಮೇಲಿನವರೆಗೂ ತಳ್ಳಿಕೊಟ್ಟು, ಬಂಡಿಯು ಮಾರ್ಗದಲ್ಲಿ ಒಂದು ಪಾರ್ಶ್ವದಲ್ಲಿ ಹೋಗುವಂತೆ ಮಾಡಿದರು; ಹಿಂದಕ್ಕೆ ನಡೆದು ಮೋಟಾರು ಬಂಡಿಯನ್ನು ಮತ್ತೆ ಬಿಟ್ಟುಕೊಂಡು ಹೊರಟರು. ಸ್ವಲ್ಪ ದೂರದಲ್ಲಿ ಮುಂದೆ ಸಿಕ್ಕಿದ ಪೋಲೀಸು ಸ್ಟೇಷನ್ನಿಗೆ ಹೋಗಿ ಹತ್ತು ರೂಪಾಯಿಗಳನ್ನು ಕೊಟ್ಟು, "ಹಿಂದೆ ತೊಲೆಗಳನ್ನು ಹೇರಿಕೊಂಡು ಬಂಡಿ ಬರುತ್ತಿದೆ. ಬಂಡಿಯವನಿಗೆ ಈ ಹಣ ಕೊಡಿ" ಎಂದು ಅಲ್ಲಿದ್ದ ದಫೇದಾರರಿಗೆ ಆಜ್ಞಾಪಿಸಿ ಮುಂದಕ್ಕೆ ತೆರಳಿದರು.

ಒಂದು ಸಲ, ಮಹಾಮಾತೃಶ್ರೀಯವರು ಅರಮನೆಯ "ಪೆಟ್ಟಿಗೆ ಗಾಡಿ"ಯನ್ನು ಕಳುಹಿಸಿ ಮಹಿಳೆಯವರೊಬ್ಬರನ್ನು ಕರೆಯಿಸಿದ್ದರು. ಅವರು ಅರಮನೆಯೊಳಕ್ಕೆ ಹೋದಮೇಲೂ ಬಂಡಿಯವನು ಎತ್ತುಗಳ ಮೇಲೆ ನೊಗವನ್ನು ಹೇರಿಯೇ ನಿಲ್ಲಿಸಿದ್ದುದನ್ನು ಮಹಾಪ್ರಭುಗಳವರು ಉಪ್ಪರಿಗೆಯಿಂದ ನೋಡಿ ಕೆಳಗೆ ಬಂದರು; ಬಂದು, "ಎತ್ತುಗಳ ಕೊರಳಿನಿಂದ ನೊಗವನ್ನು ಮೊದಲು ಕೆಳಗಿಳಿಸು. ಇನ್ನುಮುಂದೆ, ಬಂಡಿಯಲ್ಲಿ ಕುಳಿತುಕೊಳ್ಳುವವರು ಬರುವವರೆಗೂ ಎತ್ತುಗಳನ್ನು ಬಂಡಿಗೆ ಹೂಡಕೂಡದು. ಜೋಕೆ" ಎಂದು ಹೇಳಿ ಎತ್ತುಗಳನ್ನು ನೊಗದಿಂದ ಬಿಚ್ಚಿಸಿಬಿಟ್ಟರು.

ಈಚೆಗೆ ೧೯೪೦ನೆಯ ಇಸವಿಯಲ್ಲಿ ಮಹಾಪ್ರಭುಗಳವರು ಕೆಮ್ಮಣ್ಣ ಗಂಡಿಗೆ ದಯಮಾಡಿದ್ದಾಗ್ಗೆ ಒಂದು ದಿನ ದೊಡ್ಡಮಳೆ ಬಂದಿತು. ಮಹಾಪ್ರಭುಗಳವರು ಕೊಡೆಯನ್ನು ಹಿಡಿದುಕೊಂಡು ಬಿಡಾರದ ಕಡೆಗೆ ಚಿತ್ತೈಸುತ್ತಿದ್ದರು. ದಾರಿಯಲ್ಲೊಂದುಕಡೆ ಒಂದು ಹೆಣ್ಣುನಾಯಿ ಮಳೆಯ ಹೊಡೆತವನ್ನು ತಡೆಯಲಾರದೆ ತನ್ನ ಪುಟ್ಟ ಮರಿಗಳೆರಡನ್ನು ಒಂದು ಬಂಡೆಯಮೇಲೆ ಬಿಟ್ಟು ತಾನು ಬಂಡೆಯ ಕೆಳಗೆ ಮಳೆಗೆ ಮರೆಯಾಗಿ ಗೂಡಿನಂತಿದ್ದ ಭಾಗವನ್ನು ಸೇರಿ ಗಟ್ಟಿಯಾಗಿ ಬೊಗಳುತ್ತಿದ್ದುದನ್ನೂ, ಬಂಡೆಯಮೇಲೆ ಎರಡು ಮರಿಗಳೂ ನಡಗುತ್ತ ತಾಯಿಯ ಬಳಿಗೆ ಹೋಗುವ ಸಾಮರ್ಥ್ಯವಿಲ್ಲದೆ ಹಿಂಸೆಪಡುತ್ತಿದ್ದುದನ್ನೂ ಅವರು ಕಂಡರು. ಕೃಪಾಳುಗಳಾದ ಮಹಾಪ್ರಭುಗಳವರು ತಮ್ಮೊಡನೆ ಇದ್ದ ಸೇವಕರಿಂದ ಆ ಮರಿಗಳನ್ನು ತೆಗೆಯಿಸಿಕೊಂಡು ದಯಮಾಡಿದರು. ದೊಡ್ಡನಾಯಿ ಸಹ ಗಟ್ಟಿಯಾಗಿ ಬೊಗಳುತ್ತ ಹಿಂಬಾಲಿಸಿತು. ಮಹಾಪ್ರಭುಗಳವರ ಅಪ್ಪಣೆಯಂತೆ ಬಿಡಾರದಲ್ಲೊಂದು ಮೂಲೆಯಲ್ಲಿ ಅವು ಮೂರಕ್ಕೂ ಗೋಣಿಯ ಪಟ್ಟಿಯ ಹಾಸೂ, ಹಾಲೂ ಅನ್ನವೂ ದೊರೆತು ಅವು ಸುಖವಾಗಿದ್ದುವು.

ಆಳಿದ ಮಹಾಸ್ವಾಮಿಯವರು ಬಾಲ್ಯದಿಂದಲೂ ಸಮಸ್ತ ಕಾರ್ಯಗಳನ್ನೂ, ಒಂದು ಶಿಸ್ತು, ಒಂದು ಓರಣ, ಒಂದು ಅಚ್ಚುಕಟ್ಟಿನಿಂದ ನಡೆಯಿಸುತ್ತಿದ್ದರು. ದೊಡ್ಡ ಕೆಲಸಗಳಿಂದ ಹಿಡಿದು ಸಾಮಾನು ಜೋಡಣೆಯ ಸಾಮಾನ್ಯವಾದ ಕೆಲಸದ ವರೆಗೂ ಶಿಸ್ತನ್ನು ಪಾಲಿಸುತ್ತಿದ್ದರು. ಕೇವಲ ಬಾಲ್ಯದಲ್ಲಿ ಕೂಡ, ಅವರು ಕುರ್ಚಿಗಳನ್ನೂ ಮೇಜುಗಳನ್ನೂ ಅವು ಇಷ್ಟಿಷ್ಟು ದೂರದ ಅಂತರಗಳಲ್ಲಿ ಹೀಗೆ ಹೀಗೆಯೇ ಇರಬೇಕೆಂದು ಓರಣವಾಗಿ ಇಡಿಸಿರುತ್ತಿದ್ದರು. ಜೊತೆಯ ಹುಡುಗರು ಅವುಗಳನ್ನು ಮುಂದಕ್ಕೋ ಹಿಂದಕ್ಕೋ ಎಳೆದು, ಆ ಬಗೆಯ ಓರಣಕ್ಕೆ ಭಂಗ ತಂದರೆ, ಅವರಿಗೆ ಬುದ್ಧಿ ಹೇಳಿ ತಾವೇ ಅವುಗಳನ್ನು ಯಥಾಪ್ರಕಾರ ಸರಿಯಾದ ಸ್ಥಳಗಳಲ್ಲಿಡುತ್ತಿದ್ದರು. ಒಂದು ಸಲ, ಕೆಲವರು ಕುರ್ಚಿಗಳಮೇಲೆ ಹತ್ತಿ ನಿಂತಾಗ, "ಕುರ್ಚಿಗಳಿರುವುದು ಕುಳಿತುಕೊಳ್ಳುವುದಕ್ಕೇ ಹೊರತು ಅವುಗಳಮೇಲೆ ಹತ್ತಿ ನಿಂತುಕೊಳ್ಳುವುದಕ್ಕಲ್ಲ" ಎಂದು ಹೇಳಿ ಹಾಸ್ಯ ಮಾಡಿದರು. ನೀಲಗಿರಿಯ ಅರಮನೆಯ ಮುಂದೆ ಕುದುರೆಯ ಸವಾರರು ಸಾಲಿಟ್ಟು ನಿಂತಿದ್ದುದನ್ನು ಕಂಡ ಸಂನ್ಯಾಸಿಗಳವರೊಬ್ಬರು ಮಹಾಪ್ರಭುಗಳವರನ್ನೇ ಕುರಿತು ಅದರ ಕಾರಣವನ್ನು ಕೇಳಿದಾಗ, "ಇವೊತ್ತು ಹುಜೂರು ಸನ್ನಿಧಾನದ ಸವಾರಿ ಚಿತ್ತೈಸುವುದರಿಂದ" ಎಂದು ಹೇಳಿದರು; ರೀಜೆಂಟರವರಾಗಿದ್ದ ಮಹಾಮಾತೃಶ್ರೀ ವಾಣೀವಿಲಾಸ ಸನ್ನಿಧಾನದವರನ್ನು ಮಹಾಸ್ವಾಮಿಯವರು "ಹುಜೂರು ಸನ್ನಿಧಾನ"ವೆಂದೇ ಇತರರೆದುರಿಗೆ ಕರೆಯುತ್ತಿದ್ದರು; ರೀಜೆಂಟರಾಗಿದ್ದ ಕಾಲದ ಮರ್ಯಾದೆಗಳೆಲ್ಲ ಅವರಿಗೆ ನಡೆಯುವಂತೆ ಕಟ್ಟುನಿಟ್ಟಾಗಿ ನೋಡಿಕೊಳ್ಳುತ್ತಿದ್ದರು.

**ಶಿಸ್ತಿನ ಪ್ರೀತಿ**

ಮಹಾಪ್ರಭುಗಳವರು ರಾಜ್ಯಭಾರ ಸೂತ್ರಗಳನ್ನು ಸ್ವೀಕರಿಸಿದ ತರುವಾಯ ಅರಸು ಬೋರ್ಡಿಂಗ್ ಸ್ಕೂಲನ್ನು ನೋಡಲು ದಯೆ ಮಾಡಿದರು. ಅಲ್ಲಿಯ ಸೂಪರಿಂಟೆಂಡೆಂಟರವರನ್ನು "ಈ ಪಾಠಶಾಲೆಯಲ್ಲಿ ಎಷ್ಟು ಮಂದಿ ಬಾಲಕರಿದ್ದಾರೆ?" ಎಂದು ಕೇಳಿದರು. ಅವರು ಭಯದಿಂದ ಅಪ್ರತಿಭರಾಗಿ, "ಇಲ್ಲಿ ಒಂದು ರೂಮಿಗೆ ಇಬ್ಬರು ಹುಡುಗರು, ಮಹಾಸ್ವಾಮಿ" ಎಂದರು. ಮಹಾಪ್ರಭುಗಳವರು ಆ ಬಳಿಕ ಅದೇ ಪ್ರಶ್ನೆಯನ್ನೇ ಮೂರು ಸಲ ಕೇಳಿದರು; ಸೂಪರಿಂಟೆಂಡೆಂಟರವರು ತಮ್ಮ ತಪ್ಪನ್ನು ತಿಳಿದುಕೊಳ್ಳದೆ ಮೂರು ಸಲವೂ ಅದೇ ಉತ್ತರವನ್ನೇ ಹೇಳಿದರು. ಅಲ್ಲಿದ್ದ ಅರಸು ಪಂಗಡದ ದೊಡ್ಡ ಮನುಷ್ಯರೊಬ್ಬರು, "ಇಲ್ಲಿ ಹದಿನಾರು ಕೊಟಡಿಗಳಿವೆ, ಮಹಾಸ್ವಾಮಿ.

ಒಂದೊಂದರಲ್ಲಿ ಇಬ್ಬರು ವಿದ್ಯಾರ್ಥಿಗಳಂತೆ ಒಟ್ಟು ಮೂವತ್ತೆರಡು ಮಂದಿ ವಿದ್ಯಾರ್ಥಿಗಳಿದ್ದಾರೆ'' ಎಂದು ಹೇಳಿದರು. ಆಗ ಮಹಾಪ್ರಭುಗಳವರು, ''ಒಬ್ಬರನ್ನು ಪ್ರಶ್ನೆ ಕೇಳಿದರೆ ಮತ್ತೊಬ್ಬರು ಉತ್ತರ ಹೇಳುವುದು ಶಿಸ್ತಿಗೆ ಊನ. ಅವರೇ ಉತ್ತರ ಹೇಳಲಿ'' ಎಂದರು. ಸೂಪರಿಂಟೆಂಡೆಂಟರವರಿಗೆ ತಮ್ಮ ತಪ್ಪು ಆಗ ಗೋಚರವಾಯಿತು. ಅವರು ಕ್ಷಮಾಪಣೆಯನ್ನು ಬೇಡಿ, ''ದಿಗಿಲಿನಿಂದ ಹೀಗೆ ತಪ್ಪು ಮಾಡಿದೆ, ಮಹಾಸ್ವಾಮಿ. ಕ್ಷಮಿಸಬೇಕು. ಇಲ್ಲಿ ಮೂವತ್ತೆರಡು ಮಂದಿಗಳಿದ್ದಾರೆ'' ಎಂದಾಗ ಮಹಾಪ್ರಭುಗಳವರು ನಗುತ್ತ ಅಲ್ಲಿಂದ ದಯಮಾಡಿದರು. ಆ ದಿನ ಸಾಯಂಕಾಲ ಅರಮನೆಯಿಂದ ಆ ಸೂಪರಿಂಟೆಂಡೆಂಟರವರಿಗೆ ಒಂದು ಪಾರಿತೋಷಿಕವೂ, ಅದರೊಡನೆ ''ಮುಂದೆ ಧೈರ್ಯದಿಂದ ಉತ್ತರ ಹೇಳಲು ಈ ಪಾರಿತೋಷಿಕ'' ಎಂಬ ಸಂದೇಶವೂ ಬಂದುವು.

೧೯೧೭ನೆಯ ಇಸವಿಯಲ್ಲಿ ಮಹಾಪ್ರಭುಗಳವರು ವಾಣೀವಿಲಾಸ ಸಾಗರವನ್ನು ನೋಡಲು ಮಹಾಮಾತೃಶ್ರೀಯವರು, ಶ್ರೀ ಮಹಾರಾಣಿ ಶ್ರೀ ಲಕ್ಷ್ಮೀವಿಲಾಸ ಸನ್ನಿಧಾನದವರು, ಮುಂತಾದವರೊಡನೆ ಹೋಗಿದ್ದರು. ಅಲ್ಲಿಯ ''ಟ್ರ್ಯಾವಲರ್ಸ್ ಬಂಗಲೆ''ಯಲ್ಲಿ ಬಿಡಾರ ಮಾಡಿದ್ದರು. ಒಂದು ದಿನ ಬೆಳಗ್ಗೆ ಸಾಮಾನ್ಯವಾದ ಉಡುಪಿನಲ್ಲಿ ಗಾಳಿ ಸವಾರಿಗಾಗಿ ಒಬ್ಬರೇ ದಯಮಾಡಿದ್ದರು. ಅವರು ಹಿಂತಿರುಗಿದಾಗ ಬೇರೆ ಪೋಲೀಸು ಜವಾನ ಕಾವಲಿದ್ದನು. ಅವರು ಯಾರೆಂಬುದನ್ನರಿಯದೆ ಅವನು ತಡೆದುಬಿಟ್ಟನು. ಒಳಗಿನಿಂದ ಬಂದ ಅಧಿಕಾರಿಗಳು ಬಂದು ಮಹಾಪ್ರಭುಗಳವರನ್ನು ಕರೆದುಕೊಂಡು ಹೋಗುವವರೆಗೂ ಅವರನ್ನು ಒಳಕ್ಕೆ ಬಿಡದೆ ತಡೆದು ನಿಲ್ಲಿಸಿದ್ದು ಆಗಲೂ ಸಹ ''ಯಾರೋ ಎಂತೋ ನಾ ಬಲ್ಲೆನಾ? ಬಂಗ್ಲೇಲಿ ಮಹಾರಾಜ್ರು ಬಂದಿರುವಾಗ ನೀವು ಯಾರೋ ಬಂದ್ರೆ ಹೆಂಗೆ ಬಿಡಾನೆ, ಬುದ್ಧಿ? ನಂನ ಡೂಟಿ ನಾ ಮಾಡ್ದೆ. ಒಳಗಿನೋರೇ ಕರೀತಾ ಬಂದವ್ರೆ. ನಂಗೇನು? ಮಾರಾಯರಾಗಿ ಈಗ ದಯಮಾಡಿ, ಬುದ್ಧಿ'' ಎಂದು ಹೇಳಿಯೋ ಮುಗಿಸಿದನು. ಮಹಾಪ್ರಭುಗಳವರು ಒಳಕ್ಕೆ ದಯಮಾಡಿದ ಸ್ವಲ್ಪ ಹೊತ್ತಿನ ಮೇಲೆ ಭಾರಿ ''ಇನಾಂ'' ಆತನಿಗೆ ಲಭಿಸಿತು.

೧೯೨೩ನೆಯ ಇಸವಿಯಲ್ಲಿ, ಆಗ್ಗೆ ವೈಸ್ರಾಯಿಯವರಾಗಿದ್ದ ಲಾರ್ಡ್ ರೀಡಿಂಗ್‌ರವರು ಮೈಸೂರು ಸಂಸ್ಥಾನಕ್ಕೆ ಬಂದು ಕಾರಾಪುರಕ್ಕೆ ದಯಮಾಡಿದ್ದರು. ಅವರನ್ನಿಳಿಸಿದ್ದ ಸ್ಥಳಕ್ಕೆ ಹೋಗಬೇಕಾಗಿದ್ದರೆ ಅದಕ್ಕಾಗಿ ಗೊತ್ತಾಗಿದ್ದ ಲೋಹದ ಬಿಲ್ಲೆಯೊಂದನ್ನು ತೋರಿಸಿದವರನ್ನು ಮಾತ್ರವೇ ಬಿಡಬೇಕೆಂಬುದು ಕಾವಲಿನ ಸಿಪಾಯಿಗಳಿಗೆ ಮಹಾಪ್ರಭುಗಳವರು

ಮಾಡಿದ್ದ ಆಜ್ಞೆ. ಅರಮನೆಯ ಬಹಳ ದೊಡ್ಡ ಅಧಿಕಾರಿಯವರೊಬ್ಬರು ಅತ್ಯಗತ್ಯವಾದ ಕೆಲಸದಮೇಲೆ ವೈಸ್ರಾಯಿಯವರನ್ನು ನೋಡಲು ರಾತ್ರಿಯವೇಳೆಯಲ್ಲಿ ಹೊರಟರು. ಅವರು ಲೋಹದ ಬಿಲ್ಲೆಯನ್ನು ತರದೆ ಮರೆತು ಬಂದಿದ್ದರು. ಕಾವಲಿನ ದಫೇದಾರರಾದ ಮೈಸೂರಿನವರಿಗೆ ಅವರಾರೆಂಬುದು ಚೆನ್ನಾಗಿ ಗೊತ್ತಿದ್ದಿತು. ಹಾಗಿದ್ದೂ ಸಹ, "ಹುಜೂರು ಆಜ್ಞೆ. ಬಿಲ್ಲೆಯನ್ನು ತರದೆ ಯಾರೇ ಬಂದರೂ ಬಿಡಕೂಡದೆಂದು ಆಗಿದೆ. ಬಿಡಲಾರೆ. ಕ್ಷಮಿಸಬೇಕು" ಎಂದು ಉರ್ದು ಭಾಷೆಯಲ್ಲಿ ಹೇಳಿದರು. ಆ ಅಧಿಕಾರಿಯವರು ಬಿಲ್ಲೆಯನ್ನು ತರಲು ದೂರದಲ್ಲಿದ್ದ ತಮ್ಮ ಡೇರೆಗೆ ತೆರಳಿದರು. ಮಹಾಪ್ರಭುಗಳವರು ತಮ್ಮ ಡೇರೆಯಿಂದ ಅದನ್ನು ನೋಡುತ್ತಿದ್ದು ಪರೀಕ್ಷೆಗಾಗಿ ತಾವೇ ಬಂದರು. ಕಾವಲು ಸಿಪಾಯಿ "ನಿಲ್ಲಬೇಕು" ("ಹಾಲ್ಟ್") ಎಂದ, ಇಂಗ್ಲಿಷ್ ಭಾಷೆಯಲ್ಲಿ. ಮಹಾಪ್ರಭುಗಳವರು ನಿಂತುಕೊಂಡರು. ಕಾವಲಿನ ದಫೇದಾರರು ಬಿಲ್ಲೆಯನ್ನು ಕೇಳಿದರು. ಆಗ ಅವರು, "ಬಿಲ್ಲೆ ತಂದಿಲ್ಲ. ನಾವು ಯಾರು ತಿಳಿಯದೆ?" ಎಂದರು, ಉರ್ದು ಭಾಷೆಯಲ್ಲಿ. ಆತ, "ತಾವು ಮಹಾರಾಜರು. ಆದರೆ ಇದು ತಾವೇ ಕೊಟ್ಟಿರುವ ಅಪ್ಪಣೆ. ನಾನು ತಮ್ಮ ಅಪ್ಪಣೆಯನ್ನು ನಡೆಯಿಸುವ ಗುಲಾಮ. ತಮ್ಮ ನೌಕರ. ಮುಂದಕ್ಕೆ ಬಿಡುವುದಿಲ್ಲ" ಎಂದು* ಹೇಳಿದರು. ಮಹಾಪ್ರಭುಗಳವರು, "ಈಗ ಅಪ್ಪಣೆ ಮಾಡುತ್ತೇವೆ, ಬಿಲ್ಲೆ ಇಲ್ಲದಿದ್ದರೂ ನಮ್ಮನ್ನು ಒಳಗೆ ಬಿಡಬಹುದೆಂದು" ಎಂದು ಆತನ ಭಾಷೆಯಲ್ಲಿ ಹೇಳಿದುದಕ್ಕೆ ಆತ, "ನಾನು ತಲೆಹರಟೆಯವನೆನ್ನದೆ ಕ್ಷಮಿಸಬೇಕು. ತಾವು ಮಾಡಿರುವ ಆಜ್ಞೆಗೆ ವಿರೋಧವಾಗಿ ತಾವೇ ಬಿಲ್ಲೆ ತರದೆ ಬಂದು ಈಗ ಬಿಡಬೇಕೆಂದರೆ ಬಿಡಲಾರೆ. ತಮ್ಮ ಡೇರೆಗೆ ದಯಮಾಡಿ ಅದೇ ಅಪ್ಪಣೆಯನ್ನು ನನ್ನ ಮೇಲಿನ ಅಧಿಕಾರಿಯವರ ಮೂಲಕ ಕಳುಹಿಸಿದರೆ ಬಿಲ್ಲೆ ಇಲ್ಲದೆಯೇ ಬಿಡುತ್ತೇನೆ. ನಾವೆಲ್ಲರೂ ತಮ್ಮ ಗುಲಾಮರೇ" ಎಂದು ಉರ್ದುವಿನಲ್ಲಿ ಉತ್ತರ ಹೇಳಿದರು. ಮಹಾಪ್ರಭುಗಳವರು ಸುಪ್ರೀತರಾಗಿ ಹಿಂದಕ್ಕೆ ತೆರಳಿದರು. ದಫೇದಾರರಿಗೆ ಮಾರನೆಯ ದಿನ ಬೆಳಗ್ಗೆ ಐವತ್ತು ರೂಪಾಯಿಗಳ ನಗದು ಬಹುಮಾನವೂ, ಸಂಬಳವನ್ನು ಹೆಚ್ಚಿಸಿದ್ದ ನಿರೂಪವೂ ಬಂದಾಗ, ಹಿಂದಿನ ರಾತ್ರಿ ತಾವು ನಿದ್ದೆಗೆಟ್ಟು ದಿಗಿಲಿನಿಂದ ಕೊರಗಿದ್ದ ಶ್ರಮವೆಲ್ಲ ಮರೆತುಹೋಯಿತು.

ಈಚೆಗೊಂದು ಸಲ, ಮಹಾಸ್ವಾಮಿಯವರು ಕುಳಿತಿದ್ದ ಮೋಟಾರು

---

* 'ಆಪ್ ಹುಜೂರ್ ಹೈ. ಲೇಕಿನ್ ಏ ಆಪ್ಕಾ ಹುಕುಂ ಹೈ. ಮೈ ಆಪ್ಕೇ ಹುಕುಂ ಚಲಾನೇಕಾ ಗುಲಾಂ; ನೌಕರ್ ಹೂ. ನೈ ಛೋಡ್ತಾ."

ಬಂಡಿಯು ರೈಲು ಕಂಬಿಗಳನ್ನು ದಾಟಿಕೊಂಡು ಹೋಗಬೇಕಾಯಿತು ಆದರೆ, ಹೆಬ್ಬಾಗಿಲುಗಳು ಮುಚ್ಚಿದ್ದುವು. ಮಹಾಪ್ರಭುಗಳವರು—ಪರೀಕ್ಷೆಗಾಗಿ — ರೈಲು ಇನ್ನೂ ಬಹು ದೂರದಲ್ಲಿದ್ದುದರಿಂದ ಹೆಬ್ಬಾಗಿಲುಗಳನ್ನು ತೆರೆಯುವಂತೆ ಅಲ್ಲಿಯ ಕಾವಲುಗಾರನಿಗೆ ಹೇಳಿದರು. ಅವನು ರೈಲು ಬಂದು ಮುಂದೆ ಸಾಗುವವರೆಗೂ ಹಾಗೆ ಮಾಡಲಾರೆನೆಂದನು. ನಿಂತಿದ್ದ ಮೋಟಾರು ಬಂಡಿಯಿಂದ ಬಂದ ಚಾಲಕನು, "ಮಹಾರಾಜರ ಮೋಟಾರ್ ಕಾರ್ ಬಂದು ನಿಂತಿದೆ. ಗೇಟ್ ತೆಗೆದು ದಾರೀ ಕೊಡು" ಎಂದಾಗ ಅವನು "ಈಗ ಮಾತ್ರ ರೈಲೇ ನಂನ ಮಹಾರಾಜ್ರು. ಆ ಮಹಾರಾಜ್ರು ಬಂದು ಹೋಗ್ಲಿ; ಹೋದಮೇಲೆ ಈ ಮಾತು" ಎಂದು ಉತ್ತರ ಕೊಟ್ಟ. ಮಹಾಪ್ರಭುಗಳವರು ಅದನ್ನು ಕೇಳಿ ನಕ್ಕು, ರೈಲು ಬಂದು ಹೋದ ಮೇಲೆ ಬೇಗ ಹೆಬ್ಬಾಗಿಲುಗಳನ್ನು ತೆಗೆದು ಓಡಿಬಂದು ಕೈಮುಗಿದ ಆ ಕಾವಲುಗಾರನಿಗೆ ಮೂವತ್ತು ರೂಪಾಯಿಗಳನ್ನು ಕೊಟ್ಟು ಮುಂದೆ ತೆರಳಿದರು.

ಹೀಗೆ, ಶಿಸ್ತಿನ ಪ್ರೇಮವನ್ನು ಪ್ರದರ್ಶಿಸಿ, ತಮಗೆ ಪ್ರತಿಕೂಲವನ್ನುಂಟುಮಾಡಿದವರ ವಿಷಯದಲ್ಲಿ ಮೆಚ್ಚಿಕೆಯನ್ನು ತೋರಿಸುತ್ತಿದ್ದುದು ಮಹಾಪ್ರಭುಗಳವರ ಅಮೋಘ ಗುಣಗಳಲ್ಲೊಂದು. ದೇವರ ಪೂಜೆ, ರಥೋತ್ಸವ, ತೆಪ್ಪೋತ್ಸವ, ದರ್ಬಾರು, ಸತ್ಕಾರಕೂಟ ಮುಂತಾದ ಸಮಸ್ತ ಕಾರ್ಯಗಳನ್ನೂ ಮಹಾಪ್ರಭುಗಳವರು ನಿಯಮಗಳಿಗನುಸಾರವಾಗಿ ನಡೆಯಿಸುತ್ತಿದ್ದರು. ದರ್ಬಾರಿನಲ್ಲಿ ಜನರು ಕೆಲವು ಕಡೆ ವಿರಳವಾಗಿ ಕೆಲವು ಕಡೆ ಒತ್ತಾಗಿ ಕುಳಿತುಕೊಳ್ಳುತ್ತಿದ್ದರು. ಸಮಾನವಾದ ಅಂತರಗಳಲ್ಲಿ ರತ್ನಕಂಬಳಿಯಮೇಲೆ ಹಸಿರು ರಟ್ಟಿನ ಬಿಲ್ಲೆಗಳನ್ನು ಕೀಲಿಸಿ ಜನರಲ್ಲಿ ಒಬ್ಬೊಬ್ಬರೂ ಒಂದೊಂದು ಹಸಿರು ಬಿಲ್ಲೆಯ ಬಳಿಯಲ್ಲಿ ಕುಳಿತುಕೊಳ್ಳುವಂತೆ ಏರ್ಪಾಡು ಮಾಡಿಸಿ, ಮಹಾಪ್ರಭುಗಳವರು ಸೆಜ್ಜೆಯ ದರ್ಬಾರಿನ ಅಂದವನ್ನೂ ಓರಣವನ್ನೂ ಹೆಚ್ಚಿಸಿದರು. ಈ ಬಗೆಯ ಎಷ್ಟು ನಿದರ್ಶನಗಳನ್ನು ಬೇಕಾದರೂ ಹೇಳಬಹುದು. ತಮಗೆ ಸಮರ್ಪಿತವಾಗಬೇಕಾದ ಹಾರತುರಾಯಿಗಳು ಕೂಡ ಹೀಗೆಯೇ ಇರಬೇಕು, ಪುರೋಹಿತರ ಉಡುಪುಗಳು ಕೂಡ ಹೀಗೆಯೇ ಇರಬೇಕು, ಎಂದು ಮುಂತಾಗಿ ಮಹಾಪ್ರಭುಗಳವರು ಗೊತ್ತುಮಾಡಿದ್ದರು. ಊಳಿಗದವರಿಗಾಗಲಿ, ಪುರೋಹಿತರಿಗಾಗಲಿ, ಋತ್ವಿಕ್ಕುಗಳಿಗಾಗಲಿ, ಹೆಚ್ಚು ಶ್ರಮವಿಲ್ಲದಂತೆ ಸರದಿಯಮೇಲೆ ಕೆಲಸ ನಡೆಯುವ ಶಿಸ್ತನ್ನು ಏರ್ಪಡಿಸಿದ್ದರು. ಕ್ಲುಪ್ತ ಕಾಲಕ್ಕೆ ಸರಿಯಾಗಿ ಕಾರ್ಯಗಳನ್ನು ನಡೆಯಿಸುತ್ತಿದ್ದುದರಲ್ಲಂತೂ ಅವರ ವರ್ತನೆಯು ಆದರ್ಶಪ್ರಾಯವಾಗಿರುತ್ತಿದ್ದಿತು.

ಆಳಿದ ಮಹಾಸ್ವಾಮಿಯವರು ಪ್ರಾಣಿ ಮಾತ್ರದಲ್ಲಿ ಕರುಣೆಯುಳ್ಳವರಾಗಿ ದಾಕ್ಷಿಣ್ಯ ಬುದ್ಧಿಯಿಂದ ವರ್ತಿಸುತ್ತಿದ್ದರು. ಅದರಿಂದ ಅವರ ಹೃದಯವು ಅಪರಂಜಿಯಾಯಿತು. ಅವರು ಎಲ್ಲೆಲ್ಲಿಯೂ ಪರಮಾತ್ಮನ ಕ್ರಿಯಾಶಕ್ತಿಯನ್ನು ಕಾಣುತ್ತಿದ್ದರು. ಸಿಮ್ಲಾ ನಗರಕ್ಕೆ ಹೋದಾಗ ಅವರು "ರಿಕ್ಷಾ" ಬಂಡಿಯಲ್ಲಿ ಕುಳಿತು ಮನುಷ್ಯ ಪಶುವಿನಿಂದ ಎಳೆಯಿಸಿಕೊಳ್ಳಲಾರದೆ ಹೋದರು. ಆದರಲ್ಲಿ ಕುಳಿತುಕೊಳ್ಳುವಂತೆ ತಮ್ಮಲ್ಲಿಗೆ ಬಂದು ಪ್ರಾರ್ಥಿಸಿ ಅದನ್ನೆಳೆಯಲು ಸಿದ್ಧನಾಗಿದ್ದ ಬಡವಾಯಿಗೆ ಅವನು ಹತ್ತಾರು ದಿನ ದುಡಿದರೂ ದೊರೆಯದಷ್ಟು ಹಣವನ್ನು ಕೊಟ್ಟು ನಡೆದುಕೊಂಡೇ ಮುಂದೆ ಹೋದರು. ಆದರೆ, ಮಹಾಸ್ವಾಮಿಯವರ ದಾಕ್ಷಿಣ್ಯ ವೃತ್ತಿಯು "ರಿಕ್ಷಾ"ಗಳನ್ನೆಳೆಯುವವರಿಗೆ ಅರ್ಥವಾಗದೆಹೋಯಿತು.

**ದಾಕ್ಷಿಣ್ಯ ಪ್ರವೃತ್ತಿ**

ಆಳಿದ ಮಹಾಸ್ವಾಮಿಯವರು, ಒಂದುಸಲ, ಕೆಮ್ಮನಗಂಡಿಯ "ಷೋಲಾ" ಗಳಲ್ಲಿ ಹುಲಿಯ "ಷಿಕಾರಿ" ಮಾಡಬೇಕೆಂದು ಬಹಳ ಜನರನ್ನು ಬರಮಾಡಿದ್ದರು. ಅಲ್ಲಿ ಜಿಗಣೆಗಳ ಕಾಟ ಬಹಳ ಹೆಚ್ಚು. ಆದಕಾರಣ, ಮಹಾಸ್ವಾಮಿಯವರು ಅವರನ್ನು ಕುರಿತು, "ಜಿಗಣೆಗಳ ಕೈಯಲ್ಲಿ ಕಚ್ಚಿಸಿಕೊಂಡು ನಿಮ್ಮ ದೇಹದ ರಕ್ತವನ್ನೇ ಅವುಗಳ ದೇಹಗಳಿಗೆ ಬಸಿದು ನೀವುಗಳು ಹುಲೀ ಅಟ್ಟ ಪಾಡುಪಡುವುದು. ನಾವು ಮಚಾನ್‌ಮೇಲೆ ಜಿಗಣೆಗಳ ಕಾಟವಿಲ್ಲದೆ ಕುಳಿತು ಹುಲಿಯನ್ನು ಹೊಡೆಯುವುದು. ಈ ಬಗೆಯ ಬೇಟೆಯೇ ಬೇಡ" ಎಂದು ಹೇಳಿ ಆ ಸಲದ ಬೇಟೆಯನ್ನೇ ನಿಲ್ಲಿಸಿ ಆ ಬಳಿಕ ಒಂದು ದಿನ ನೆಲದಮೇಲೆ ನಿಂತೇ ಸಾಹಸದಿಂದ ಹುಲಿಯನ್ನು ಹೊಡೆದರು.

ನವರಾತ್ರಿಯ ಕಾಲದಲ್ಲಿ ಅರಮನೆಯ ಎದುರಿಗೆ ಕುಸ್ತಿಗಳು ನಡೆಯುವ ಕೆಮ್ಮಣ್ಣಿನ ಅಖಾಡವು ದೊಡ್ಡ ಚೌಕದ ಜಗುಲಿಯಂತೆ ಎತ್ತರದಲ್ಲಿ ರಚಿತವಾಗಿದೆ. ಪಟ್ಟದ ಆನೆ ಪಟ್ಟದ ಕುದುರೆ ಮುಂತಾದುವು ಬರುವಾಗ ಅದು ಮಧ್ಯದಲ್ಲಿ ಎರಡು ಭಾಗಗಳಾಗಿ ಹಿಂದಕ್ಕೆ ಸರಿದು, ನಡುವೆ ಅವಕ್ಕೆ ದಾರಿ ದೊರೆಯುವಂತೆ ರಚಿತವಾಗಿದೆ. ಅದರ ತೂಕ ನಲವತ್ತು ಟನ್ನುಗಳು. ಅದು ಎರಡು ಭಾಗಗಳಾಗಿ ಮಧ್ಯದಲ್ಲಿ ದಾರಿ ದೊರೆಯುವಂತೆ ಮಾಡಬೇಕಾದಾಗ ಮತ್ತು ಆ ಎರಡು ಭಾಗಗಳೂ ಮತ್ತೆ ಒಟ್ಟುಗೂಡುವಂತೆ ಸೇರಿಸಬೇಕಾದಾಗ ಅನೇಕ ಮಂದಿ ಆಳುಗಳು ಅದರೊಳಗೆ ಕತ್ತಲಿನಲ್ಲಿ ಕುಳಿತು, ಗಾಳಿಯೂ ಸರಿಯಾಗಿ ಬಾರದ ತೊಂದರೆಗೆ ಸಿಕ್ಕಿ, ಚಕ್ರಗಳು ಉರುಳುವಂತೆ ಹಿಡಿಗಳನ್ನು ತಿರುಗಿಸಿ

ಕಷ್ಟಪಡಬೇಕಾಗಿದ್ದಿತು. ಮಹಾಪ್ರಭುಗಳವರು ಅದನ್ನು ಗಣಿತನೆಯ ಇಸವಿಯಿಂದ ತಪ್ಪಿಸಿದರು. ಅಲ್ಲಿಂದೀಚೆಗೆ ಆಳುಗಳಿಂದ ನಡೆಯುತ್ತಿದ್ದ ಕೆಲಸವು ವಿದ್ಯುಚ್ಛಕ್ತಿಯಿಂದ ನಡೆಯುತ್ತಿದೆ. ಒಂದು ಸಲ, ಸಾಯಂಕಾಲ ಐದು ಘಂಟೆಯಲ್ಲಿ ಪರೀಕ್ಷಿಸಿದಾಗ ಸರಿಯಾಗಿದ್ದ ಆ ಯಂತ್ರಸಾಧನವು, ದರ್ಬಾರು ಸಮಯದಲ್ಲಿ ಕೆಟ್ಟುಹೋಗಿ ಪಟ್ಟದ ಆನೆ ಮುಂತಾದುವುಗಳು ಎಂದಿನಂತೆ ನೇರವಾಗಿ ಬರುವುದಕ್ಕಿಲ್ಲದೆ ಅಖಾಡವನ್ನು ಬಳಸಿಕೊಂಡು ಬರಬೇಕಾಯಿತು. ಸಂಬಂಧಪಟ್ಟ ಅಧಿಕಾರಿಗಳು ಭಯಪಟ್ಟು ಮಾರನೆಯ ದಿನ ಮಹಾಪ್ರಭುಗಳವರ ಕ್ಷಮೆಯನ್ನು ಬೇಡಲು ಹೋದರು. ಅವರು ಮಾತನಾಡುವುದಕ್ಕೆ ಮುಂಚೆಯೇ ಮಹಾಪ್ರಭುಗಳವರು, "ವಿದ್ಯುಚ್ಛಕ್ತಿಯ ಸಹವಾಸವೇ ಹೀಗೆ. ಅದರಿಂದ ಅನುಕೂಲವೆಷ್ಟು ಅಧಿಕವೋ ಪ್ರತಿಕೂಲವೂ ಅಷ್ಟೇ ಹೆಚ್ಚು" ಎಂದರು. ಆ ಅಧಿಕಾರಿಗಳು ಕ್ಷಮೆಬೇಡಿ, ಇನ್ನುಮುಂದೆ, ಹಿಂದಿನಂತೆ ಆಳುಗಳೇ ಹಿಡಿಗಳನ್ನು ತಿರುಗಿಸುವಂತೆ ಏರ್ಪಾಡು ಮಾಡುವುದಾಗಿ ಅರಿಕೆ ಮಾಡಿದಾಗ ಅವರು, "ನೀವು ಈ ಯಂತ್ರದ ಏರ್ಪಾಡು ಮಾಡಿದಾಗಿನಿಂದ, ಪಾಪ, ಆಳುಗಳ ಕಷ್ಟ ತಪ್ಪಿದೆ. ಇನ್ನು ಅವರಿಗೆ ಕಷ್ಟ ಕೊಡುವ ಯೋಚನೆಯೇ ಬೇಡ. ನಿನ್ನೆಯಂತೆ ಯಂತ್ರ ಕೆಟ್ಟುಹೋದಾಗ, ನಿನ್ನೆಯಂತೆಯೇ ಆನೆ ಮುಂತಾದುವು ಬಳಸಿ ಬರುವಂತೆ ಮಾಡಿದರಾಯಿತು" ಎಂದರು.

ತಮ್ಮಿಂದ ಮತ್ತಾರಿಗೂ ತೊಂದರೆಯಾಗಕೂಡದೆಂಬ ದಾಕ್ಷಿಣ್ಯ ಪ್ರವೃತ್ತಿಯು ಆಳಿದ ಮಹಾಸ್ವಾಮಿಯವರದು. ಈಗ್ಗೆ ಸುಮಾರು ಹದಿನೇಳು ವರ್ಷಗಳಿಗೆ ಹಿಂದೆ ಅವರು ಮಾಗಡಿ ತಾಲ್ಲೂಕಿಗೆ ದಯಮಾಡಿದ್ದಾಗ ಸೋಲೂರಿನ ಬಳಿಯಲ್ಲಿ ದೊಡ್ಡದೊಂದು ಚಪ್ಪರವನ್ನು ಕಂಡು, "ರೈತರಿಗೆ ತೊಂದರೆ ಕೊಟ್ಟು ಈ ಚಪ್ಪರವನ್ನೇಕೆ ಹಾಕಿಸಿದ್ದೀರಿ?" ಎಂದು ಮುಂತಾಗಿ ಕೇಳಿದರು. ಈಚೆಗೊಂದುಸಲ ಮಹಾಪ್ರಭುಗಳವರು ತಿರುಮಕೂಡಲು ನರಸೀಪುರಕ್ಕೆ ತೀರ್ಥಸ್ನಾನಕ್ಕಾಗಿ ದಯಮಾಡಲಿಚ್ಛಿಸಿದರು. ಪಂಡಿತರತ್ನಂ ಕಾನಕಾನಹಳ್ಳಿ ನಾರಾಯಣಶಾಸ್ತ್ರಿಗಳವರೊಡನೆ ೧೦೦ ರೂಪಾಯಿಗಳನ್ನು ಕೆಲವು ದಿನಗಳ ಮೊದಲೇ ಕೊಟ್ಟು ಸ್ನಾನಕ್ಕೆ ತಕ್ಕ ಏರ್ಪಾಡು ಮಾಡಿಸಬೇಕೆಂದೂ ತಾವು ಬರುವ ಸಂಗತಿಯನ್ನು ರಹಸ್ಯವಾಗಿಡಬೇಕೆಂದೂ ಅಪ್ಪಣೆಯಾಯಿತು. ಸ್ನಾನದ ಏರ್ಪಾಡಾಗುತ್ತಿದ್ದುದನ್ನು ಕಂಡು ಅಮಲ್ದಾರರೇ ಮುಂತಾದವರು ಪ್ರಶ್ನೆ ಮಾಡಿದರೆ ತಾವೇನು ಹೇಳಬೇಕೆಂದು ಶಾಸ್ತ್ರಿಗಳವರು ಕೇಳಿದಾಗ ಮಹಾಪ್ರಭುಗಳವರು ನಕ್ಕು "ಯಾರೋ ಅರಸಿನವರು ಸ್ನಾನಕ್ಕೆ ಬರುತ್ತಾರಂತೆ

ಎಂದು ಹೇಳಿಬಿಡಿ'' ಎಂದು ಆಜ್ಞಾಪಿಸಿದರು. ಮಹಾಪ್ರಭುಗಳವರು ತೀರ್ಥಸ್ನಾನಕ್ಕೆ ಹೋಗಿ ಬಂದ ವಿಷಯವನ್ನು ಗುಟ್ಟಾಗಿಟ್ಟು ತಮಗೆ ಪ್ರಭುದರ್ಶನ ಲಾಭವನ್ನು ತಪ್ಪಿಸಿದರೆಂದು ಅನೇಕರು ಶಾಸ್ತ್ರಿಗಳವರನ್ನು ಆಕ್ಷೇಪಿಸಿದರು. ಅವರು ಅದನ್ನು ಅರಿಕೆ ಮಾಡಿದಾಗ ಮಹಾಪ್ರಭುಗಳವರು ನಕ್ಕು, ''ಶಾಸ್ತ್ರಿಗಳೇ! ನಾವು ಹೋದದ್ದು ತೀರ್ಥಸ್ನಾನಮಾಡಿ ಕೃತಾರ್ಥರಾಗುವುದಕ್ಕೆ. ಆದರೆ ಮೊದಲೇ ತಿಳಿಸಿದ್ದರೆ, ಎಷ್ಟೋ ಅಡಕೆ ಮರಗಳುರುಳಿ, ಎಷ್ಟೋ ಚಪ್ಪರಗಳಾಗಿ, ಸಭೆ ಸತ್ಕಾರಗಳಿಗಾಗಿ ಸಾವಿರಾರು ರೂಪಾಯಿಗಳು ಪ್ರಜೆಗಳಿಗೆ ನಷ್ಟವಾಗುತ್ತಿದ್ದುವು. ನಾವು ಹೋಗಿದ್ದುದು ತೀರ್ಥಸ್ನಾನಕ್ಕೆ. ರಾಜಕಾರ್ಯಕ್ಕಲ್ಲ. ನಾವು ಪ್ರಜೆಗಳಿಗೆ ಕಷ್ಟವನ್ನುಂಟುಮಾಡಿ ತೀರ್ಥಸ್ನಾನ ಮಾಡುವುದೆ?'' ಎಂದರು.

ಕೆಲಕೆಲವು ಚಟಗಳನ್ನೂ ಚಾಳಿಗಳನ್ನೂ ಇಟ್ಟುಕೊಂಡಿರತಕ್ಕವರಲ್ಲಿ ಕೂಡ, ಭಿನ್ನಭಿನ್ನವಾದ ನಡೆವಳಿಯು ಮನುಷ್ಯ ಸ್ವಭಾವವೆಂಬ ಉದಾರ ಭಾವನೆಯಿಂದ ಕೂಡಿ ಮಹಾಪ್ರಭುಗಳವರು ದಾಕ್ಷಿಣ್ಯ ಬುದ್ಧಿಯಿಂದ ನಡೆದುಕೊಳ್ಳುತ್ತಿದ್ದರು. ಒಂದು ಸಲ, ತಮ್ಮ ಅಭಿಮಾನಕ್ಕೆ ಪಾತ್ರರಾದ ಅಧಿಕಾರಿಯವರೊಬ್ಬರು ಸಿಗರೇಟ್ ಸೇದುತ್ತಿದ್ದುದನ್ನು ದೂರದಲ್ಲಿ ಕಂಡು, ತಾವು ಆ ಮಾರ್ಗವಾಗಿ ಬರುತ್ತಿದ್ದುದೇ ಅವರಿಗೆ ಗೋಚರವಾಗದಂತೆ ಮಹಾಪ್ರಭುಗಳವರು ಮರೆಯಾಗಿ ಹೊರಟುಹೋದರು. ನಾಲ್ಕೈದು ದಿನಗಳಾದ ಬಳಿಕ, ಮಹಾಪ್ರಭುಗಳವರು ಅವರಿಗೆ ಒಂದು ಚಿನ್ನದ ಸಿಗರೇಟ್ ಪೆಟ್ಟಿಗೆಯನ್ನು ತೋರಿಸಿ ಅದನ್ನು ಅವರ ಕೈಗೆ ಕೊಟ್ಟು ''ಇದು ಅಂದವಾಗಿಲ್ಲವೆ, ನೋಡಿ'' ಎಂದರು. ಅವರು ಅದನ್ನು ತಿರುಗಿಸಿ ನೋಡಿ ''ಬಹಳ ಚೆನ್ನಾಗಿದೆ, ಮಹಾಸ್ವಾಮಿ'' ಎಂದಾಗ ''ನೀವೇ ಇಟ್ಟುಕೊಳ್ಳಿ'' ಎಂದು ಅಪ್ಪಣೆಯಾಯಿತು. ಆ ಅಧಿಕಾರಿಯವರು ಅಪ್ರತಿಭರಾಗಿ ಸಂಕೋಚದಿಂದ ಕಚ್ಚಿಕಚ್ಚಿ ಮಾತನಾಡುತ್ತ, ''ನನಗೇಕೆ, ಮಹಾಸ್ವಾಮಿ? ನಾನು ಸಿಗರೇಟ್ ಸೇದುವುದಿಲ್ಲ'' ಎಂದುದಕ್ಕೆ ''ಈ ಪೆಟ್ಟಿಗೆ ನೋಡಿದರೆ ಸಿಗರೇಟ್ ಸೇದದೆ ಇರುವವರಿಗೂ ಈ ಪೆಟ್ಟಿಗೆಯಲ್ಲಿಟ್ಟ ಸಿಗರೇಟನ್ನು ಸೇದಬೇಕೆನ್ನಿಸುವ ಮಟ್ಟಿಗೆ ಇದರ ನಕಾಸು ಚೆನ್ನಾಗಿದೆ. ನಿಮ್ಮ ಉಪಯೋಗಕ್ಕಲ್ಲದಿದ್ದರೂ ಈ ಪೆಟ್ಟಿಗೆ ನಿಮ್ಮಲ್ಲಿದ್ದರೆ ಬಾಧಕವೇನು? ನಮ್ಮಲ್ಲಿದ್ದರೂ ಅದು ಉಪಯೋಗವಿಲ್ಲದೆ ಹಾಗೇ ಇರಬೇಕಲ್ಲಾ. ನಿಮ್ಮಲ್ಲೇ ಇರಲಿ'' ಎಂದರು, ಮಹಾಸ್ವಾಮಿಯವರು. ಒಂದು ಸಲ, ಆಸ್ಥಾನ ವಿದ್ವಾಂಸರಾದ........ಶಾಸ್ತ್ರಿಗಳವರು ಪುರಾಣ ಹೇಳಲು ಅರಮನೆಗೆ ಹೋಗಿ ಉಪ್ಪರಿಗೆಯ ಮೆಟ್ಟಲುಗಳನ್ನು ಹತ್ತಿದೊಡನೆಯೇ

ನಸ್ಯವನ್ನು ಚೀರಿ ಸೇದುವ ವೇಳೆಗೂ ಮಹಾಪ್ರಭುಗಳವರು ಆ ಮಾರ್ಗವಾಗಿ ಬರುವ ವೇಳೆಗೂ ಸರಿಹೋಯಿತು. ಶಾಸ್ತ್ರಿಗಳು ಬಹಳ ಸಂಕೋಚಪಟ್ಟುದನ್ನು ಕಂಡು "ನಿಧಾನವಾಗಿ ಸೇವಿಸಬೇಕು, ಶಾಸ್ತ್ರಿಗಳೇ. ಬಾಧಕವಿಲ್ಲ, ಬಾಧಕವಿಲ್ಲ. ಸಂಕೋಚವೇಕೆ?" ಎಂದು ಆದರದ ನಗೆಯಿಂದ ಅಪ್ಪಣೆ ಕೊಡಿಸಿ ಬೇರೆ ಕಡೆಗೆ ದಯಮಾಡಿದರು. ಅಲ್ಲದೆ, ತಮ್ಮ ಪೂರ್ವಜರಲ್ಲೊಬ್ಬರು ಉಪಯೋಗಿಸುತ್ತಿದ್ದ ಚಿನ್ನದ ದೊಡ್ಡ ನಸ್ಯದ ಡಬ್ಬಿಯೊಂದನ್ನು ಮಾರನೆಯ ದಿನ ಅರಮನೆಯ ಮರ್ಯಾದೆ ಸಹಿತವಾಗಿ ಶಾಸ್ತ್ರಿಗಳ ಮನೆಗೆ ಕಳುಹಿಸಿದರು. ಇನ್ನೊಂದು ಸಲ, ಅರಮನೆಯಲ್ಲಿ ಜಪಮಾಡುತ್ತಿದ್ದವರೊಬ್ಬರು ನಸ್ಯದ ಪಟ್ಟಿಯಿಂದ ನಸ್ಯವನ್ನು ತೆಗೆದು ತಲೆಗೆ ಮುಸುಕು ಹಾಕಿಕೊಂಡು ಸೇದಿದಾಗ ಅದನ್ನು ದೂರದಿಂದ ಕಂಡಿದ್ದ ಮಹಾಪ್ರಭುಗಳವರು ಮಾರನೆಯ ದಿನ ಅವರಿಗೊಂದು ಬೆಳ್ಳಿಯ ನಸ್ಯದ ಡಬ್ಬಿಯನ್ನು ಕೊಟ್ಟು, "ಇನ್ನುಮೇಲೆ ಮುಸುಕು ಹಾಕಿಕೊಳ್ಳದೆಯೇ ನಸ್ಯ ಹಾಕಿಕೊಂಡು ಆಮೇಲೆ ನೆಮ್ಮದಿಯಾಗಿ ಏಕಾಗ್ರಚಿತ್ತದಿಂದ ಜಪಮಾಡಿ. ಬಾಧಕವಿಲ್ಲ" ಎಂದರು. ಆಳಿದ ಮಹಾಸ್ವಾಮಿಯವರಲ್ಲಿದ್ದ ಈ ಬಗೆಯ ದಾಕ್ಷಿಣ್ಯಪ್ರವೃತ್ತಿಯು ಜಗತ್ಪ್ರಸಿದ್ಧನಾದ ಏಬ್ರಹಾಂ ಲಿಂಕನನ ದಾಕ್ಷಿಣ್ಯ ಪ್ರವೃತ್ತಿಯನ್ನು ಹೋಲುವಂತಹುದು.

**ಅನುಕಂಪ**

ಆಳಿದ ಮಹಾಸ್ವಾಮಿಯವರ ಅನುಕಂಪಾಮೃದುಸ್ವಭಾವವನ್ನು ಗಮನಿಸಿದರೆ ಆಶ್ಚರ್ಯವಾಗುತ್ತದೆ. ಒಂದು ದಿನ ಅವರು ಭೋಜನ ಮಾಡಲಿಲ್ಲ. ಅವರೂ, ಮಹಾಮಾತೃಶ್ರೀಯವರೂ, ಆಗಿನ ಶ್ರೀಮದ್ಯುವರಾಜ ಶ್ರೀ ಕಂಠೀರವ ನರಸಿಂಹರಾಜ ಒಡೆಯರವರೂ, ಒಟ್ಟಿಗೆ ಕುಳಿತು ಭೋಜನ ಮಾಡುತ್ತಿದ್ದುದು ವಾಡಿಕೆ. ಆದರೆ, ಅಂದು ಶ್ರೀಮದ್ಯುವರಾಜರವರು ಮೈಸೂರಿನಲ್ಲಿರಲಿಲ್ಲ. ಮಹಾಮಾತೃಶ್ರೀಯವರಿಗೆ ದೇಹಾಲಸ್ಯವಾಗಿದ್ದ ಕಾರಣ, ಅವರು ಭೋಜನಮಾಡುವಂತಿರಲಿಲ್ಲ. ತಮ್ಮ ಪುತ್ರರು ಅಂದು ಹಸಿವಿರಲಿಲ್ಲವೆಂದು ಊಳಿಗದವರಿಗೆ ತಿಳಿಸಿದ್ದರೆಂದು ಕೇಳಿ ಮಹಾಮಾತೃಶ್ರೀಯವರು ಅವರಿಗೇನಾದರೂ ಅಸಮಾಧಾನವೋ ಹೇಗೋ—ಎಂದು ಕಳವಳಪಡುತ್ತಿದ್ದರು. ಅಷ್ಟರಲ್ಲಿ ಮಹಾಪ್ರಭುಗಳವರು ಅಲ್ಲಿಗೆ ಬರಲು, "ಆರೋಗಣೆಗೆ ಎಡೆ ಸಿದ್ಧವಾಗಿದ್ದರೂ ಅದನ್ನೇಕೆ ಕಳುಹಿಸಿಬಿಟ್ಟಿರಿ, ಅಯ್ಯಾಜಿ?" ಎಂದು ಅವರು ಕೇಳಿದರು. ಮಹಾಪ್ರಭುಗಳವರು ಆಗಲೂ ನಿಜವಾದ ಕಾರಣವನ್ನು

ತಿಳಿಸದೆ, "ಹಸಿವಿರಲಿಲ್ಲ. ಭೋಜನ ಬೇಡವಾಯಿತು. ಅಮ್ಮಯ್ಯ! ಇನ್ನುಮೇಲೆ ಬಿಡದಿಯ ಅಡಿಗೆಯವರೂ ಪರಿಚಾರಕರೂ ಎಲ್ಲರೂ ಊಟ ಮಾಡಿದ ಬಳಿಕ ನಾವೆಲ್ಲರೂ ಊಟಮಾಡೋಣ. ನಮಗೆ ಅವರಂತೆ ಹಸಿವಾಗುವುದಿಲ್ಲ. ದುಡಿದು ದುಡಿದು ಅವರಿಗೆ ಹಸಿವಾಗಿರುತ್ತದೆ. ಅಡಿಗೆ ಮಾಡುವಾಗ ಸುವಾಸನೆ ಕುಡಿದು ಕುಡಿದು ಆಶೆಯೇರುತ್ತದೆ. ಅವರು ಆಶೆಯನ್ನು ತಡೆದು, ದೇಹವನ್ನು ದಂಡಿಸಿ, ಉಪವಾಸವಿದ್ದು ಬಡಿಸುವುದು ಬೇಡ" ಎಂದರು. ಮಹಾಮಾತೃಶ್ರೀಯವರು ವಾತ್ಸಲ್ಯ ಪರವಶರಾಗಿ, "ಹೀಗೆ ಹೇಳುವಷ್ಟು ಕೋಮಲವಾದ ಅಂತಃಕರಣ ವುಳ್ಳವರು ಈ ಪ್ರಪಂಚದಲ್ಲಿ ಮತ್ತೊಬ್ಬರು ಇದ್ದಾರೆಯೆ, ಅಯ್ಯಾಜಿ? ಅಗತ್ಯವಾಗಿ ಹಾಗೆ ಮಾಡೋಣ" ಎಂದು ಹೇಳಿ ಅದಕ್ಕೆ ಸಮ್ಮತಿಸಿದರು. ಆ ಬಳಿಕ ಎರಡು ತಿಂಗಳುಗಳ ಕಾಲ ಹಾಗೆ ನಡೆದು ಅದೇ ಪದ್ಧತಿ ಬಿದ್ದ ಮೇಲೆ ಅಂದು ತಾವು ಹಸಿವಿಲ್ಲವೆಂದು ಹೇಳಿ ತಾವು ಭೋಜನ ಮಾಡ ದಿದ್ದುದರ ಕಾರಣವನ್ನು ಮಹಾಪ್ರಭುಗಳವರು ಮಹಾಮಾತೃಶ್ರೀ ಯವರಿಗೆ ಅರಿಕೆಮಾಡಿದರು. ಆ ದಿನ ಭೋಜನ ಗೃಹದಲ್ಲಿ ಅಡಿಗೆಯವನು ಎಡೆಯನ್ನು ತಂದಿಟ್ಟು, ಮುಚ್ಚಿದ್ದ ಎಲೆಯನ್ನೂ ಅದರ ಮೇಲಿನ ಬಟ್ಟೆ ಯನ್ನೂ ಬೇಗ ಓರೆಮಾಡಿ ಕೆಲವು ಚಮಚಗಳಷ್ಟು ಆಹಾರವನ್ನು ಬೆಳ್ಳಿಯ ಬಟ್ಟಲುಗಳಿಂದ ಬಾಯಿಗೆಸೆದುಕೊಂಡು ಆತುರದಿಂದ ಅಗಿದು ನುಂಗಿ ಬೇಗ ಮೊದಲಿನಂತೆ ಮುಚ್ಚಿ ಹೊರಟುಹೋದುದು, ಆತನಿಗೆ ಗೊತ್ತಾಗ ದಂತೆ ತಾವು ಅದನ್ನು ಕಂಡುದು, ಆ ಎಡೆಯನ್ನು ಭುಜಿಸಲು ತಮಗೆ ಅಸಹ್ಯವಾದುದು, ಬೇರೆ ಎಡೆಯನ್ನು ತರಬೇಕೆಂದು ಅಪ್ಪಣೆಮಾಡಿದರೆ ಆ ಅಡಿಗೆಯವನಿಗೆ ಸಂದೇಹ ಹುಟ್ಟಿ ಅವನು ಪಶ್ಚಾತ್ತಾಪದಿಂದ ನೊಂದು ಕೊಂಡಾನೆಂದು ಮರುಕವುಂಟಾದುದು, ಮಹಾಮಾತೃಶ್ರೀಯವರಿಗೆ ಅಂದೇ ಅದನ್ನು ತಿಳಿಸಿದ್ದರೆ ಒಂದು ವೇಳೆ ಆ ಬಡವಾಯಿಗೆ ಶಿಕ್ಷೆಯಾದೀ ತೆಂಬ ಶಂಕೆಯುಂಟಾದುದು, ಅದರಿಂದ ತಾವು ಮೌನವಾಗಿದ್ದುದು, ಮುಂತಾದ ಸಂಗತಿಗಳನ್ನೆಲ್ಲ ಅವರು ಮಹಾಮಾತೃಶ್ರೀಯವರಿಗೆ ತಿಳಿಸಿ ದರು. ಮಹಾಪ್ರಭುಗಳವರು ಆಗಿನಿಂದಲೂ ಭೋಜನಮಾಡುತ್ತಿದ್ದುದು ಇತರರೆಲ್ಲರ ಭೋಜನವೂ ಮುಗಿದಮೇಲೆ ಮಾತ್ರವೇ. ಮೈಸೂರು ಬೆಂಗಳೂರು ನಗರಗಳಲ್ಲಿದ್ದಾಗಲೂ, ಸಂಚಾರಾರ್ಥವಾಗಿ ಇತರ ಸ್ಥಳಗಳಿಗೆ ಹೋದಾಗಲೂ ಅದೇ ಪದ್ಧತಿ.

೧೯೧೫ನೆಯ ಇಸವಿಯಲ್ಲಿ......ಗೆ ಹೋಗಿದ್ದಾಗ ಪ್ರತಿದಿನವೂ ಗಾಳಿ ಸಂಚಾರ ಹೋಗುತ್ತಿದ್ದುದನ್ನರಿತು, ಸುತ್ತಮುತ್ತಲಿನ ಗ್ರಾಮ

ಗಳಿಂದ ಬಂದ ಜನರೆಲ್ಲರೂ ಪ್ರಭುಗಳವರನ್ನು ನೋಡುವ ಆಶೆಯಿಂದ ಮಾರ್ಗದ ಇಕ್ಕೆಲಗಳಲ್ಲಿಯೂ ತುಂಬಿದ್ದರು. ಕುರುಡನಾಗಿದ್ದ ಒಬ್ಬ ಮುದುಕನು, "ಧೊರೇ ನೋಡಬೇಕು. ನಮ್ಮಪ್ಪ, ನಮ್ಮ ಧೊರೇ ಬರ್ತಾರಂತೆ. ಭಾಳಾ ಒಳ್ಳೇರಂತೆ. ನಾನೂ ನೋಡ್ಬೇಕು" ಎಂದು ನುಗ್ಗುತ್ತಿದ್ದಾಗಲೇ ಮಹಾಪ್ರಭುಗಳವರು ಅಲ್ಲಿಗೆ ದಯಮಾಡಿದರು. ಅವನು ನುಗ್ಗುತ್ತಿದ್ದಾಗ ಅಪಹಾಸ್ಯಮಾಡಿ ಇತರರು ನಗುತ್ತ, "ಕಣ್ಣಿಲ್ಲದ ಕುರ್ಡ, ನೋಡ್ತಾನಂತೆ. ನೋಡ್ತಾನೆ. ದಾರಿ ಬುಡ್ರೋ, ದಾರಿ ಬುಡ್ರೋ" ಎಂದು ಹೇಳಿ ಗಹಗಹಿಸಿ ನಕ್ಕರು. ಮಹಾಪ್ರಭುಗಳವರ ಮನಸ್ಸು ಅನುಕಂಪದಿಂದ ಕರಗಿ ಹೋಯಿತು. ಅವರು ಅವನಿದ್ದ ಸ್ಥಳಕ್ಕೇ ಹೋಗಿ, "ಪಾಪ! ಕಣ್ಣಿಲ್ಲ. ಹೇಗೆ ನೋಡುತ್ತೀಯಪ್ಪಾ?" ಎಂದರು. ಅವನು, "ಕಣ್ಣೇನೋ ದೇವರು ಕಿತ್ಕೊಂಡವನೆ. ಕೈಯೂ ಕಿತ್ಕೊಂಡವನಾ? ಕಣ್ಣಿಲ್ದೋನು, ಕೈಯಾಗೇ ಮುಟ್ಟಿ ನೋಡ್ತೀನಿ, ನಮ್ಮಪ್ಪನ್ನ, ನಮ್ಮ ಧೊರೇನ" ಎಂದನು. ಕೃಪಾಳುಗಳಾದ ಮಹಾಪ್ರಭುಗಳವರು ಕಷ್ಟದಿಂದ ಕಂಬನಿಯನ್ನು ತಡೆದು, ಆದರದಿಂದ ಅವನ ಕೈಹಿಡಿದುಕೊಂಡು, "ನೀನು ನೋಡಬಯಸುವ ಧೊರೆ ನಾವೇ ಅಪ್ಪ; ಪಾಪ! ನಿನಗೆ ದೇವರು ಕಣ್ಣು ಕೊಡಲಿಲ್ಲ" ಎಂದರು. ಅವನು, "ನೀವೇನಾ ನಮ್ಮ ಧೊರೆ! ನೀವೇನಾ ನಮ್ಮಪ್ಪ, ನಮ್ಮ ಧೊರೆ?" ಎಂದು ಹೇಳಿ, ಮೈ ಕೈ ಮುಟ್ಟಿನೋಡಿ ಅಡ್ಡಬಿದ್ದು, "ನೂರಾರು ಕಾಲ ಸುಖವಾಗಿ ಬಾಳಿ, ನನ್ನೊಡೆಯ" ಎಂದನು. ಮಹಾಪ್ರಭುಗಳವರು ಬಿಡಾರದಿಂದ ಅವನಿಗೆ ಹಣವನ್ನೂ ಹಣ್ಣುಗಳನ್ನೂ ತರಿಸಿಕೊಟ್ಟು ಅವನನ್ನು ಮೋಟಾರು ಬಂಡಿಯಲ್ಲಿ ಕುಳ್ಳಿರಿಸಿ ಅವನ ಗ್ರಾಮಕ್ಕೆ ಕರೆದುಕೊಂಡು ಹೋಗಿ ಅವನ ಜೊತೆಯವನೊಡನೆ ಅವನ ಮನೆಗೆ ಬಿಟ್ಟುಬರುವಂತೆ ಒಬ್ಬರು ಅಧಿಕಾರಿಯವರಿಗೆ ಅಪ್ಪಣೆಮಾಡಿದರು. ಅವನ ರಾಜಭಕ್ತಿ ವಿಶ್ವಾಸಗಳನ್ನು ಕಂಡು, ಅವನ ಮಾತುಗಳನ್ನು ಕೇಳಿ, ಮಹಾಪ್ರಭುಗಳವರ ಮನಸ್ಸು ಕರಗಿ ಹೋಗಿ "ಭಗವಂತ ಆತನಿಗೆ ಕಣ್ಣು ಕೊಟ್ಟಿಲ್ಲ. ಆತ ನಮ್ಮಲ್ಲಿ ತೋರಿಸಿದ ಪ್ರೀತಿಗೆ ಪ್ರತಿಯಾಗಿ ಏನನ್ನು ಕೊಟ್ಟರೆ ತಾನೆ ಅದಕ್ಕೆ ಸರಿದೂಗೀತು? ಆ ಪ್ರೀತಿಗೆ ಪ್ರತಿಯಾಗಿ ನಾವು ಏನನ್ನು ತಾನೆ ಕೊಡಬಲ್ಲೆವು?" ಎಂದು ಆಪ್ತರೊಡನೆ ಹೇಳಿದರು. ಕಣ್ಣುಗಳಿಲ್ಲದಿದ್ದ ಆತನು ಜೀವಂತನಾಗಿದ್ದವರೆಗೂ ಮಹಾಪ್ರಭುಗಳವರು ಅವನ ಯೋಗಕ್ಷೇಮವನ್ನು ವಿಚಾರಿಸಿಕೊಂಡು ಅವನಿಗೂ, ಅವನ ಕುಟುಂಬದವರಿಗೂ, ಸುಖಜೀವನವಾಗುವಷ್ಟು ಧನ ಸಹಾಯಮಾಡುತ್ತಿದ್ದರು. ಆರ್ತರಿಗೂ, ಬಡವರಿಗೂ,

ಅನಾಥರಿಗೂ ಸಹಾಯಮಾಡುವುದಕ್ಕಾಗಿಯೇ ಅವರು ಪ್ರತಿ ತಿಂಗಳೂ ಹಲವು ಸಾವಿರ ರೂಪಾಯಿಗಳನ್ನು ವೆಚ್ಚಮಾಡುತ್ತಿದ್ದರು. ಅರಮನೆಯ ಬಿಡದಿಯಲ್ಲಿ ಭೋಜನಕ್ಕೆ ಅನುಕೂಲ ಮಾಡಿಕೊಟ್ಟಿದ್ದವರಲ್ಲಿ ಕಣ್ಣಿಲ್ಲದ ಅನಾಥ ಬಾಲಕನೊಬ್ಬನನ್ನು, ಒಂದು ಸಲ, ಕರೆಯಿಸಿಕೊಂಡು ಮಹಾಪ್ರಭುಗಳವರು ಊಟವಸತಿಗಳ ಅನುಕೂಲವು ಸರಿಯಾಗಿದ್ದಿತೇ—ಎಂಬುವನ್ನು ಅವನಿಂದಲೇ ಕೇಳಿದರು; ಅನಂತರ "ನಿನಗೆ ತುಪ್ಪವನ್ನೇ ಹಾಕದೆ ಹೋದಾರು; ತುಪ್ಪ ಹಾಕುವಾಗ ಕೈಗೆ ಹಾಕಿಸಿಕೊ" ಎಂದು ಹೇಳಿದರು. ಆಗಾಗ ಅವನ ವಿಷಯವನ್ನು ವಿಚಾರಿಸಿಕೊಳ್ಳುತ್ತಿದ್ದರು. ಮಹಾಪ್ರಭುಗಳವರು ಅನುಕಂಪದಿಂದ ಕೂಡಿ ಸಹಾಯಮಾಡುತ್ತಿದ್ದುದಲ್ಲದೆ, ಸಹಾಯಮಾಡುವುದರಲ್ಲಿ ವಿಶೇಷ ಶ್ರದ್ಧೆಯನ್ನೂ ತೋರಿಸುತ್ತಿದ್ದ ಧರ್ಮಾತ್ಮರಾಗಿದ್ದರು.

ಜ್ಞಾಪಕಶಕ್ತಿ

ಆಳಿದ ಮಹಾಸ್ವಾಮಿಯವರಿಗೆ ವಿಷಯ ಗ್ರಹಣಶಕ್ತಿಯೂ, ಜ್ಞಾಪಕಶಕ್ತಿಯೂ ಅತ್ಯಧಿಕವಾಗಿದ್ದುವು. ದೊಡ್ಡ ಅಧಿಕಾರದಲ್ಲಿದ್ದು ಅವರನ್ನು ಚೆನ್ನಾಗಿ ಬಲ್ಲವರಾಗಿದ್ದ ಮಹಾಶಯರೊಬ್ಬರು ಹೇಳಿದಂತೆ, "ಈಗ್ಗೆ ಇಪ್ಪತ್ತು ವರ್ಷಗಳ ಹಿಂದೆ ವೈಸ್ರಾಯಿಯವರು ಬಂದಿದ್ದಾಗ ತಾವು ಯಾವ ಬಣ್ಣದ ಅಂಗಿಯನ್ನೂ, ಯಾವ ಬಣ್ಣದ ರುಮಾಲು ಮುಂತಾದುವುಗಳನ್ನೂ ಧರಿಸಿದ್ದರೆಂಬುದೇ ಮುಂತಾದ ಸಂಗತಿಗಳೆಲ್ಲ" ಅವರಿಗೆ ನೆನಪಿರುತ್ತಿದ್ದುವು. ಮಹಾಪ್ರಭುಗಳವರು ಒಂದು ಸಲ ಮಾರೀಕಣಿವೆಗೆ ದಯಮಾಡಿದ್ದಾಗ ಆಗಿನ ಡೆಪ್ಯುಟಿಕಮಿಾಷನರವರು ಚಿತ್ರದುರ್ಗದ ಡಿಸ್ಟ್ರಿಕ್ಟ್ ಬೋರ್ಡಿನ ಸದಸ್ಯರ ಪರಿಚಯವನ್ನು ಅರಿಕೆ ಮಾಡಿದರು. ಶ್ರೀಮಾನ್ ನಾಡಿಗ ಸಿದ್ದರಾಮಣ್ಣನವರೆಂಬ ಹೆಸರು ಕಿವಿಗೆ ಬಿದ್ದೊಡನೆಯೇ ಮಹಾಪ್ರಭುಗಳವರು ಅವರನ್ನು ಕುರಿತು, "ಈಗ್ಗೆ ಐದು ವರ್ಷಗಳ ಹಿಂದೆ ಹೊಳಲಕೆರೆಯಿಂದ ನಾವು ಚಿತ್ರದುರ್ಗಕ್ಕೆ ಹೋಗುತ್ತಿದ್ದಾಗ ಶಿವಗಂಗೆ ಗ್ರಾಮದ ಹತ್ತಿರ ನೀವು ಹಾರ ತುರಾಯಿ ಒಪ್ಪಿಸಿದ್ದಿರಿ. ಅಲ್ಲವೆ?" ಎಂದು ಕೇಳಿದರು. ೧೯೩೦ನೆಯ ಇಸವಿ ಫೆಬ್ರವರಿ ತಿಂಗಳಿನಲ್ಲಿ ಮಹಾಪ್ರಭುಗಳವರು ಶಿವಮೊಗ್ಗೆಗೆ ದಯಮಾಡಿದ್ದಾಗ ಕಿಕ್ಕಿರಿದಿದ್ದ ಜನಸಂದಣಿಯಲ್ಲಿದ್ದ ಶೇಕದಾರ್ ಶ್ರೀಮಾನ್ ಶಾಮರಾಯರೆಂಬವರೊಬ್ಬರನ್ನು ಕಂಡರು. ಬಿಡಾರಕ್ಕೆ ಹಿಂತಿರುಗಿದಮೇಲೆ ಡೆಪ್ಯುಟಿಕಮಿಾಷನರವರನ್ನು ಕುರಿತು, "ಶೇಕದಾರ್ ಶಾಮರಾಯರನ್ನು ಕಂಡೆವು. ಅವರ ಪರಿಚಯ ನಿಮಗೂ ಇದೆ. ಅವರನ್ನು ದಯೆಯಿಟ್ಟು ಇಲ್ಲಿಗೆ

ಬರಮಾಡಿ'' ಎಂದರು. ಮಹಾಪ್ರಭುಗಳವರು ರಾಜ್ಯಭಾರ ಸೂತ್ರಗಳನ್ನು ಸ್ವೀಕರಿಸಿದುದಕ್ಕೆ ಮುಂಚೆ ೧೯೦೧ನೆಯ ಇಸವಿಯಲ್ಲಿ ಜೋಗಿಗೆ ದಯಮಾಡಿದ್ದಾಗ ಶ್ರೀಮಾನ್ ಶಾಮರಾಯರವರು ಅಲ್ಲಿ ಜಲಪಾತವನ್ನು ತೋರಿಸಿ ಶುಶ್ರೂಷೆ ಮಾಡಿದ್ದರು. ಅವರು ಕೆಲಸದಿಂದ ವಿಶ್ರಾಂತರಾದ ಬಳಿಕ ಚೆನ್ನಗಿರಿಯಲ್ಲಿ ವಾಸಮಾಡುತ್ತಿದ್ದು ಪ್ರಭುದರ್ಶನಕ್ಕಾಗಿ ಶಿವಮೊಗ್ಗೆಗೆ ಬಂದು ಜನಸಂದಣಿಯಲ್ಲಿ ನಿಂತಿದ್ದರು. ಅವರನ್ನು ನೋಡಿ ಹತ್ತೊಂಬತ್ತು ವರ್ಷಗಳಾಗಿದ್ದೂ ಮಹಾಪ್ರಭುಗಳವರು ಗುರುತಿಸಿದರು.. ಅವರಿಗೆ ಶಾಲುಜೋಡಿ ಮುಂತಾದ ಖಿಲ್ಲತ್ತುಗಳನ್ನು ದಯಪಾಲಿಸಲು ತಃವಾಗಿಯೇ ಅವರನ್ನು ಬಿಡಾರಕ್ಕೆ ಬರಮಾಡಿಕೊಂಡರು. ೧೯೩೧ನೆಯ ಇಸವಿಯಲ್ಲಿ ಸಕಲೇಶಪುರಕ್ಕೆ ಹೋಗಿದ್ದಾಗ ಅಲ್ಲಿದ್ದ ಪೌರಾಣಿಕರೂ ವಿದ್ವಾಂಸರೂ ಆದ ಶ್ರೀಮಾನ್ ಸೂರ್ಯನಾರಾಯಣ ಶಾಸ್ತ್ರಿಗಳವರೆಂಬ ಎಪ್ಪತ್ತು ವರ್ಷ ವಯಸ್ಸಿನ ವೃದ್ಧರು ಪ್ರಭುದರ್ಶನಮಾಡಿ ಫಲಪುಷ್ಪಗಳನ್ನು ಸಮರ್ಪಿಸಿ ಖಿಲ್ಲತ್ತನ್ನು ಪಡೆದಿದ್ದರು; ೧೯೩೭ನೆಯ ಇಸವಿಯಲ್ಲಿ ಮಹಾಸ್ವಾಮಿಯವರ ಆಳ್ವಿಕೆಯ ರಜತ ಮಹೋತ್ಸವಕ್ಕೆ ಬರಬೇಕೆಂದು ಅವರಿಗೆ ಆಹ್ವಾನವು ಹೋಯಿತು. ರಜತ ಮಹೋತ್ಸವದ ದರ್ಬಾರಿನಿಂದ ಮಹಾಪ್ರಭುಗಳವರು ಅಂತಃಪುರಕ್ಕೆ ತೆರಳಿದ ಬಳಿಕ, "ಸಕಲೇಶಪುರದ ಸೂರ್ಯನಾರಾಯಣ ಶಾಸ್ತ್ರಿಗಳು ಬಂದಿರಲಿಲ್ಲ; ವಿಚಾರಿಸಿ'' ಎಂದು ಅಧಿಕಾರಿಗಳಿಗೆ ಆಜ್ಞಾಪಿಸಿದರು. ೧೯೩೮ನೆಯ ಇಸವಿಯಲ್ಲಿ ಕಾಡಿನ ಮಧ್ಯದಲ್ಲಿ ದೂರದಲ್ಲಿ ಕಂಡ ಒಬ್ಬ ವ್ಯಕ್ತಿಯು ಜವರನೆಂಬವನು ಹೌದೇ ಇಲ್ಲವೇ—ಎಂದು ಚರ್ಚೆಹುಟ್ಟಿತು. ಮಹಾಪ್ರಭುಗಳವರು ತಮ್ಮ ಜೊತೆಯವರೊಡನೆ, "ಅವನು ಜವರನೇ. ನೀವು ಮರೆತಿದ್ದೀರಿ. ಅವನನ್ನೇ ಕೇಳೋಣ'' ಎಂದು ಹೇಳಿ, ಅವನನ್ನು ಸಮೀಪಕ್ಕೆ ಬರಮಾಡಿ, "ನೀನು ಜವರ, ಅಲ್ಲವೇನೊ?'' ಎಂದು ಕೇಳಿದರು. ಅವನು ಹೌದೆಂದು ಅರಿಕೆಮಾಡಲು, "ನಿನ್ನ ಕಿವಿಯಲ್ಲಿ ಹತ್ತಕಡಕು ಈಗೇಕಿಲ್ಲ?'' ಎಂದು ಪ್ರಶ್ನೆಮಾಡಿದರು. ಅದು ಮುರಿದು ಹೋಗಿದ್ದುದಾಗಿ ಅವನು ಹೇಳಿದನು. ಮಹಾಪ್ರಭುಗಳವರ ಜೊತೆಯಲ್ಲಿದ್ದವರಿಗೆಲ್ಲ ಆಶ್ಚರ್ಯವಾಯಿತು. ಅವನನ್ನು ಅವರು ನೋಡಿದ್ದುದು ೧೯೧೭ನೆಯ ಇಸವಿಯಲ್ಲಿ. ಅವನನ್ನು ಆ ಬಳಿಕ ೨೧ ವರ್ಷಗಳ ಮೇಲೆ ಕಂಡಾಗಲೂ ಕೂಡ ಅವನ ಗುರುತನ್ನು ಮಾತ್ರವೇ ಅಲ್ಲದೆ ಹಿಂದೆ, ಅವನು ಕಿವಿಗಳಲ್ಲಿ ಹತ್ತಕಡಕುಗಳನ್ನಿಟ್ಟುಕೊಂಡಿದ್ದುದನ್ನು ಸಹ ನೆನಪಿನಲ್ಲಿಟ್ಟುಕೊಂಡಿದ್ದರು. ಅವರು ಒಂದೆರಡು ಸಲ ಓದಿದ ಪುಟಗಳೆಲ್ಲ ಅವರಿಗೆ ವಾಚೋವಿಧೇಯ

ವಾಗಿ ನೆನಪಿನಲ್ಲಿರುತ್ತಿದ್ದುವು. ಅವರು ವ್ಯಾಸಂಗಮಾಡಿದುದೆಲ್ಲ ಚಾಚೂ ತಪ್ಪದೆ ಜ್ಞಾಪಕವಿದ್ದಿತು.

ಆಳಿದ ಮಹಾಸ್ವಾಮಿಯವರ ಪರಿಶೀಲನ ಸಾಮರ್ಥ್ಯವೂ ಅದ್ಭುತ ವಾದುದು. ಒಂದು ಸಲ, ದರ್ಬಾರಿನಲ್ಲಿ ಒಬ್ಬರಿಗೆ ಹೂವಿನ ಹಾರ ಹಾಕಿರಲಿಲ್ಲ. ದರ್ಬಾರಿಗೆ ಬಂದಿದ್ದವರಿಗೆ ಹೂವಿನ ಹಾರಗಳನ್ನು ಹಾಕುವುದಕ್ಕೇ ನೇಮಕವಾಗಿದ್ದ ಹಲವು ಮಂದಿಗಳೂ, ಅವರ ಮೇಲಿನ ಅಧಿಕಾರಿಗಳೂ ಗಮನಿಸದಿದ್ದುದನ್ನು ಸಿಂಹಾಸನದಮೇಲೆ ಮಂಡಿಸಿದ್ದ ಮಹಾಪ್ರಭುಗಳವರು ಪರಿಶೀಲಿಸಿ ಅವರ ಕೊರಳಿಗೆ ಹಾರವನ್ನು ಹಾಕಿಸಿದರು. ಸಿಂಹಾಸನದ ಪುಷ್ಪಾಲಂಕಾರದಲ್ಲಿ ಬಿಳಿದಾವರೆಯ ಹೂವಿರುತ್ತಿದ್ದುದು ವಾಡಿಕೆಯಾಗಿದ್ದ ಸ್ಥಳದಲ್ಲಿ ಒಂದು ದಿನ ಕೆಂದಾವರೆಯ ಹೂವಿದ್ದುದನ್ನು, ಸಿಂಹಾಸನ ಪ್ರದಕ್ಷಿಣೆಮಾಡಿದಾಗ ಮಹಾಪ್ರಭುಗಳು ಕ್ಷಣಮಾತ್ರದಲ್ಲಿ ಪರಿಶೀಲಿಸಿ, ಹಾಗೇಕೆ ವ್ಯತ್ಯಾಸವಾಯಿತೆಂದು ದರ್ಬಾರು ಮುಗಿದಮೇಲೆ ವಿಚಾರಿಸಿದರು. ಒಂದು ದಿನ, ಒಬ್ಬರು ಅರಸಿನವರು ಸಿಂಹಾಸನದ ಮುಂದೆ ಬಂದು ನಜರನ್ನೊಪ್ಪಿಸಿದಾಗ ಅವರ ಹೆಜ್ಜೆಯು ಊದಿದ್ದುದನ್ನು ಮಹಾಪ್ರಭುಗಳವರು ಗಮನಿಸಿದರು. ದರ್ಬಾರು ಮುಗಿದಮೇಲೆ ಅವರು ಮನೆಗೆ ಸೇರಿದ ಸ್ವಲ್ಪ ಹೊತ್ತಿಗೇ, "ಕಾಲು ಊದಿದ್ದ ಹಾಗೆ ತೋರಿತು. ಯಾರು ಔಷಧ ಕೊಡುತ್ತಿದ್ದಾರೆಂದು ವಿಚಾರಿಸಿಕೊಂಡು ಬರಬೇಕೆಂದು ಅಪ್ಪಣೆಯಾಗಿದೆ" ಎಂದು ಅರಮನೆಯ ಅಧಿಕಾರಿಯವರೊಬ್ಬರು ಅವರಿಗೆ ತಿಳಿಸಿದರು. ದರ್ಬಾರಿನಲ್ಲಿ ನಡೆದ ವಿಚಾರಗಳು ಹಾಗಿರಲಿ. ದರ್ಬಾರು ನಡೆಯುತ್ತಿದ್ದಾಗ ಅರಮನೆಯ ಮುಂದಿನ ಬಯಲಿನಲ್ಲಿ ದೂರದಲ್ಲಿ ನಡೆಯುತ್ತಿದ್ದುದನ್ನು ಕೂಡ ಅವರು ಗಮನಿಸುತ್ತಿದ್ದರು. ಒಂದು ಸಲ, ಹೊಸದಾಗಿ ಪಳಗಿಸಿದ್ದ ಆನೆಯನ್ನು ಅರಮನೆಯ ಮುಂದೆ ನಿಲ್ಲಿಸಿದ್ದರು. ಅದನ್ನು ನೋಡಿಕೊಳ್ಳುತ್ತಿದ್ದವರೇ ಲಕ್ಷ್ಯಕೊಡದೆ ಸುಮ್ಮನಿದ್ದ ವಿಷಯವನ್ನು ಮಹಾಪ್ರಭುಗಳವರು ತಿಳಿದು, "ಇವೊತ್ತು ಹುಲ್ಲುಸುತ್ತಿ ಕೊಟ್ಟ ಬೆಲ್ಲವನ್ನೇ ಆನೆ ತಿನ್ನುತ್ತಿರಲಿಲ್ಲ. ಅದೇನು ಭಯಕ್ಕೋ ಅಜೀರ್ಣಕ್ಕೋ ವಿಚಾರಿಸಿ" ಎಂದರು. ಮತ್ತೊಂದು ಸಲ, ಸಿಂಹಾಸನದ ಮೇಲೆ ಮಂಡಿಸಿದ್ದ ಮಹಾಪ್ರಭುಗಳವರು, ಅರಮನೆಯ ಮುಂದಿದ್ದ ಆನೆಯ ವಿಚಾರವನ್ನು ಪರಿಶೀಲಿಸಿ "ಆ ಆನೆ ಕಿವಿಗಳನ್ನೇ ಅಲ್ಲಾಡಿಸುತ್ತಿಲ್ಲ. ಬಾಲವನ್ನೆತ್ತಿ ಕೊಂಡಿದೆ. ಅದಕ್ಕೇನೋ ಬಾಧೆಯಾಗಿರಬೇಕು. ವಿಚಾರಿಸಿ" ಎಂದು

**ಪರಿಶೀಲನ ಸಾಮರ್ಥ್ಯ**

ಅಪ್ಪಣೆಮಾಡಿದರು. ೧೯೩೦ನೆಯ ಇಸವಿಯಲ್ಲಿ ಮಹಾಪ್ರಭುಗಳವರು ಪ್ರವಾಸಹೋಗಿದ್ದಾಗ ಉತ್ತರ ಭಾರತದಲ್ಲಿ ಔಷಧಗಳೇ ಮುಂತಾದುವು ಗಳನ್ನು ತಯಾರಿಸುವ ಒಂದು ಕಾರ್ಖಾನೆಗೆ ದಯಮಾಡಿದರು. ಕಾರ್ಖಾನೆ ಯಿಂದ ಮಹಾಪ್ರಭುಗಳವರನ್ನು ಬೀಳ್ಕೊಳ್ಳುವಾಗ ಅಲ್ಲಿಯ ಮುಖ್ಯಾಧಿ ಕಾರಿಯವರೂ ನಿಪುಣರೂ ಆಗಿದ್ದ ಮಹಾಶಯರು, "ಕಾರ್ಖಾನೆಯ ಕೆಲಸಗಳನ್ನು ಶಾಸ್ತ್ರೀಯ ವಿಧಾನಗಳಲ್ಲಿ ಸರ್ವಸಮರ್ಪಕವಾಗಿ ನಡೆಯಿಸು ತ್ತಿದ್ದೇವೆ. ಮಹಾಸ್ವಾಮಿಯವರಿಗೂ ಅದೇ ರೀತಿ ತೋರಿಬಂದಿದ್ದರೆ ನಮ್ಮ ಸುದೈವವೆಂದು ಭಾವಿಸಿ ಹರ್ಷಿಸುತ್ತೇವೆ" ಎಂದು ಅರಿಕೆ ಮಾಡಿದರು. ಮಹಾಪ್ರಭುಗಳವರು ತಮ್ಮ ಸಂತೋಷವನ್ನು ತಿಳಿಸಿ ಕೊನೆಗೆ ಮತ್ತಾರೂ ಪರಿಶೀಲಿಸದೆಹೋಗಿದ್ದ ದೋಷವೊಂದನ್ನು ಅಧಿ ಕಾರಿಯವರ ಗಮನಕ್ಕೆ ತಂದರು. ಔಷಧಗಳನ್ನು ತುಂಬಿದ ಶೀಸೆಗಳಿಗೆ ಬಿರಡೆಯನ್ನು ಹಾಕಿ ಭದ್ರಪಡಿಸುತ್ತಿದ್ದ "ಕ್ರಾಸ್‌ಕಾರ್ಕಿಂಗ್ ಮೆಷೀನ್" ಎಂಬ ಯಂತ್ರಕ್ಕೆ "ಕಾರ್ಕ್"ಬೆಂಡನ್ನು ಒದಗಿಸುತ್ತಿದ್ದಾತನು ತನ್ನ ಕೊಳಕು ಕೈಯಿಂದ ಮುಟ್ಟಿ ಮುಟ್ಟಿ ಅದನ್ನು ತಳ್ಳುತ್ತಿದ್ದುದನ್ನು ತಿಳಿಸಿದರು. ಆ ಅಧಿಕಾರಿಯವರೂ ಮತ್ತು ಇತರರೂ ಆಶ್ಚರ್ಯಪಟ್ಟರು.

ಆಳಿದ ಮಹಾಸ್ವಾಮಿಯವರ ಸಾಹಸಪ್ರೇಮವು ಬಾಲ್ಯದಲ್ಲೇ ಎಷ್ಟು ಪ್ರಬಲವಾಗಿದ್ದಿತೆಂಬುದಕ್ಕೆ ಹಿಂದೆಯೇ ಅನೇಕ ನಿದರ್ಶನಗಳನ್ನು ತಿಳಿಸಲಾಗಿದೆ. ಅವರು ಅದನ್ನು ದಿನದಿನವೂ ವೃದ್ಧಿಮಾಡಿಕೊಂಡರು. ಅವರ ಅಸೀಮಧೈರ್ಯ ದಿಂದಲೂ, ಸ್ಥಿರನಿಶ್ಚಯದಿಂದಲೂ ಅವರ ಸಾಹಸ ಪ್ರೇಮವು ಹುರಿಮುಂಬಿ ಮತ್ತಷ್ಟು ಪರಿಸ್ಫುಟವಾಯಿತು. ಮೋಟಾರು ಬಂಡಿಯನ್ನು ನಡೆಯಿಸುವಲ್ಲಿ ಅಪಾಯಕರವಾದ ಸನ್ನಿವೇಶಗಳಲ್ಲಿ ಕೂಡ ಅವರು ನಿರ್ಭಯವಾಗಿ ನಡೆಯಿಸುತ್ತಿದ್ದರು. ಅದನ್ನು ಕಂಡು ಬೆರಗಾದ ಯೂರೋಪಿಯನ್ ದೊಡ್ಡಮನುಷ್ಯರೊಬ್ಬರು, "ಶ್ರೀಮನ್ಮಹಾ ರಾಜರವರು ಅಧಟಿನಿಂದಲೂ ಅರಿವಿನಿಂದಲೂ ಕೂಡಿ ನಡೆಯಿಸು ತ್ತಾರೆ"* ಎಂದು ಬರೆದಿದ್ದಾರೆ.

**ಸಾಹಸಪ್ರೇಮ**

ಒಂದು ಸಲ, ಮಹಾಪ್ರಭುಗಳವರು ಬಹಳ ವೇಗವಾಗಿ ಕುದುರೆ ಸವಾರಿ ಮಾಡುತ್ತಿದ್ದಾಗ, ಜೀನು ನಿಲ್ಲುವುದಕ್ಕಾಗಿ ಕುದುರೆಯ ಹೊಟ್ಟೆಗೆ ಬಿಗಿದಿದ್ದ ಪಟ್ಟೆಯು ಕಿತ್ತುಹೋಯಿತು. ಜೀನೇ ಜಾರಿದುದರಿಂದಲೂ, ಕುದುರೆಯು ವೇಗವಾಗಿ ಓಡುತ್ತಿದ್ದುದರಿಂದಲೂ ಮಹಾಪ್ರಭುಗಳವರು

* "His Highness drives with nerve and knowledge."

ಕೆಳಕ್ಕೆ ಬಿದ್ದು ಮಂಡಿಗೆ ಬಹಳ ಪೆಟ್ಟುತಗಲಿತು. ಹಿಂದೆ ಮತ್ತೊಂದು ಕುದುರೆಯನ್ನು ಓಡಿಸಿಕೊಂಡು ಬರುತ್ತಿದ್ದ ಅಂಗರಕ್ಷಕರು ಕೆಳಕ್ಕಿಳಿದು ಬರುವಷ್ಟರಲ್ಲಿ ಮಹಾಪ್ರಭುಗಳವರು ಅವರನ್ನು ನಿಷೇಧಿಸಿ ತಾವೇ ಕುಂಟಿಕೊಂಡು ಮುಂದೆಹೋಗಿ ಕುದುರೆಯನ್ನು ನಿಲ್ಲಿಸಿ ಜೀನನ್ನು ಸದ್ಯಕ್ಕೆ ಹೇಗೋ ಸರಿಪಡಿಸಿ ಮತ್ತೆ ಕುದುರೆಯನ್ನೇರಿ ಮುಂದೆ ಹೊರಟರು.

ಹೊಸ ಕುದುರೆಗಳನ್ನು ಹತೋಟಿಗೆ ತರುವಾಗಲೂ, ತುಂಟುಕುದುರೆಗಳನ್ನು ಪಳಗಿಸುವಾಗಲೂ, ಸಾಹಸಕಾರ್ಯಗಳನ್ನು ಮಾಡುವಂತೆ ಕುದುರೆಗಳಿಗೆ ಶಿಕ್ಷಣಕೊಡುವಾಗಲೂ, ಅವರು ತೋರಿಸುತ್ತಿದ್ದ ಸಾಹಸಪ್ರೇಮವೂ ಬುದ್ಧಿ ಚಾತುರ್ಯವೂ ಎಂತಹವರನ್ನೂ ವಿಸ್ಮಯಗೊಳಿಸುತ್ತಿದ್ದುವು. ಬೆನ್ನಿನಮೇಲೆ ಕುಳಿತಿರುವವನನ್ನೂ ಹೊತ್ತುಕೊಂಡೇ ಕುದುರೆಯು ಮುಂಗಾಲುಗಳೆರಡನ್ನೂ ಎತ್ತಿ ಎರಡು ಹಿಂಗಾಲುಗಳ ಮೇಲೆ ದೇಹವನ್ನು ನೆಟ್ಟಗೆ ನಿಲ್ಲಿಸುವುದು, ಕುದುರೆಯು ಬೆನ್ನಿನಮೇಲೆ ಕುಳಿತಿರುವವರೊಡನೆ ಹಾರಿ ಕೆಲವು ಕ್ಷಣಗಳ ಕಾಲ ಹಾಗೆಯೇ ದೇಹವನ್ನು ಅಂತರಾಳದಲ್ಲಿ ನಿಲ್ಲಿಸಿದ್ದು ಆ ಬಳಿಕ ನೆಲಕ್ಕೆ ಬರುವುದು ಮುಂತಾದ ಅದ್ಭುತ ಸಾಹಸಗಳನ್ನು ಕುದುರೆಗಳಿಗೆ ಕಲಿಸಿಕೊಡುವುದಕ್ಕೆ ಅವರು ಸಮರ್ಥರಾಗಿದ್ದರು. ನಾಲ್ಕು ಕುದುರೆಗಳನ್ನು ಕಟ್ಟಿದ ರಥವನ್ನಾಗಲಿ, ಐದು ಕುದುರೆಗಳನ್ನು ಕಟ್ಟಿದ ರಥವನ್ನಾಗಲಿ, ಒಂದರ ಹಿಂದೆ ಮತ್ತೊಂದರಂತೆ ನಾಲುಕುದುರೆಗಳನ್ನು ಕಟ್ಟಿರುವ "ಟ್ಯಾಂಡಂ" ರಥವನ್ನಾಗಲಿ, ಅವರು ಲೀಲಾಜಾಲವಾಗಿ ನಡೆಯಿಸುತ್ತಿದ್ದರು. ಕುದುರೆಯಮೇಲೆ ಕುಳಿತರೆಂದರೆ ಅವರ ದೇಹವನ್ನೇ ಕೀಲಿಸಿದ್ದಂತೆ— ತಜ್ಞರೊಬ್ಬರ ಮಾತುಗಳಲ್ಲಿ ಹೇಳುವುದಾದರೆ "ಕುದುರೇ ಮೈಗೇ ರಿವೆಟ್ ಆದ ಹಾಗೆ"— ಕುಳಿತು ಸವಾರಿ ಮಾಡುತ್ತಿದ್ದರು. ಆಸ್ಟ್ರಿಯಾದಿಂದ ಬಂದಿದ್ದ ಅಶ್ವಶಿಕ್ಷಣ ಪ್ರವೀಣರಾದ ಶ್ರೀಮಾನ್ ಸುರೂನ್ಸ್ಟರವರು ಅದನ್ನು ಕಂಡು ಮುಗ್ಧರಾಗಿ, "ಯೂರೋಪಿಯನರಲ್ಲಿ ಕೂಡ ಹೀಗೆ ಕುದುರೆ ಸವಾರಿ ಮಾಡುವವರು ವಿರಳ. ಭಾರತೀಯರಲ್ಲಿ ಹೀಗೆ ಕುದುರೆ ಸವಾರಿ ಮಾಡುವವರಿದ್ದಾರೆಂದರೆ ನಮ್ಮವರು ನಂಬುವುದು ಕಷ್ಟ. ಆದಕಾರಣ, ಮಹಾಪ್ರಭುಗಳವರು ಕುದುರೆ ಸವಾರಿ ಮಾಡುತ್ತಿರುವಾಗಿನ ಭಾವಚಿತ್ರಗಳನ್ನು ತೆಗೆದು ಕಳುಹಿಸಿದರೇ ನಮ್ಮವರಿಗೆ ನಂಬಿಕೆ ಹುಟ್ಟೀತು. ನಾನು ಹಾಗೆ ಮಾಡುತ್ತೇನೆ" ಎಂದರು. ಒಂದು ದಿನ, ಮಹಾಪ್ರಭುಗಳವರು ವಿಯನ್ನಾ ನಗರದಿಂದ ತರಿಸಿದ್ದ ಭಾರಿ ಕುದುರೆಯಮೇಲೆ ಕುಳಿತು ಕಲಾನೈಪುಣ್ಯದಿಂದ ಸವಾರಿ ಮಾಡುತ್ತಿದ್ದಾಗ ಭಾವಚಿತ್ರವನ್ನು ತೆಗೆಯಲು

ಅವರು ಛಾಯಾಗ್ರಹಣ ಯಂತ್ರವನ್ನು ಹಿಡಿದರು. ಕುದುರೆಯು ಬೆದರಿ ಅಂಕೆ ತಪ್ಪಿತು. ಶ್ರೀಮಾನ್ ಸುರೂಸ್ತ್ರರವರು ಇನ್ನು ಮಹಾಪ್ರಭುಗಳ ಗತಿಯೇನೆಂದು ತಲ್ಲಣಿಸುವ ಪ್ರಸಂಗವೇ ಸಂಘಟಿಸಿತು. ಇತರ ಕೆಲವ ರಂತೂ ನಡುಗಿಹೋದರು. ಮಹಾಪ್ರಭುಗಳವರು ಅಂದು ಕುದುರೆ ಯನ್ನು ಹತೋಟಿಗೆ ತಂದ ಬಗೆಯನ್ನು ಕಂಡು ಶ್ರೀಮಾನ್ ಸುರೂಸ್ತ್ರ ರವರು ಪರಮಾಶ್ಚರ್ಯದಿಂದ ಭ್ರಾಂತರಾಗಿ ನಿಂತಿದ್ದು, “ಕೆಲವು ಸನ್ನಿ ವೇಶಗಳಲ್ಲಿ ಕಣ್ಣಾರೆ ಕಂಡುದನ್ನೂ ನಿಜವೆಂದು ನಂಬಲು ಕಷ್ಟವಾಗು ತ್ತದೆ” ಎಂದರು.

ಹುಲಿಯ ಬೇಟೆಗೆ ಗೊತ್ತಾಗಿದ್ದ ಪ್ರದೇಶದಲ್ಲಿ ಹುಲಿಗಳು ಬಂದು ಮೇಲೆ ಬೀಳಬಹುದಾಗಿದ್ದ ಸನ್ನಿವೇಶಗಳಲ್ಲಿ ಕೂಡ ಮಹಾಪ್ರಭುಗಳವರು ನಿರ್ಭಯವಾಗಿ ಜೊತೆಯವರೆಲ್ಲರಿಗಿಂತ ಮುಂದೆ ನುಗ್ಗುತ್ತಿದ್ದರು. ಆರ್ಭಟಿಸುತ್ತ ಬಂದ ಹುಲಿಯನ್ನು ನೆಲದಮೇಲೆ ನಿಂತು ಗುಂಡಿನಿಂದ ಹೊಡೆದ ಸನ್ನಿವೇಶಗಳೂ ಉಂಟು. ಮಹಾಪ್ರಭುಗಳವರು ಒಂದು ಸಲ ನೀಲಗಿರಿಯಲ್ಲಿದ್ದಾಗ, ಈಜಲು ಹೋಗಿದ್ದ ಗವರ್ನರವರ ಮಗನು ಅಪಾಯಕ್ಕೆ ಗುರಿಯಾಗಿದ್ದುದನ್ನು ಕಂಡು, ತಮ್ಮ ಪ್ರಾಣಾಪಾಯವನ್ನೂ ಲಕ್ಷ್ಯಮಾಡದೆ ಆತನನ್ನು ಮೇಲಕ್ಕೆಳೆದು ತಂದರು. ಮಹಾಪ್ರಭುಗಳ ವರು ಕೈಲಾಸ ಶಿಖರ ಯಾತ್ರೆಗೆ ಹೋಗಿದ್ದಾಗ, ಕೆಳಗೆ ನೋಡಿದರೇ ತಲೆ ತಿರುಗುವಂತೆ ಸಾವಿರಾರು ಅಡಿಗಳ ಆಳದ ಕಮರಿಗಳು ಇಕ್ಕೆಲಗಳಲ್ಲಿಯೂ ಅಲ್ಲಲ್ಲಿ ಇರುತ್ತಿದ್ದ ಕಿರಿಯ ದಾರಿಗಳಲ್ಲಿ ಪ್ರಯಾಣಮಾಡಬೇಕಾಗಿದ್ದಿತು. ಇತರರು ಒಬ್ಬರ ಹಿಂದೆ ಮತ್ತೊಬ್ಬರು ಕುಳಿತು ತೆವಳಿಕೊಂಡು ಹೋಗುತ್ತಿದ್ದ ಆ ಬಗೆಯ ಸ್ಥಳಗಳಲ್ಲಿ ಮಹಾಪ್ರಭುಗಳವರು ನಡೆದು ಕೊಂಡೇ ಹೋಗುತ್ತಿದ್ದರು. ಕಾಳೀ ನದಿಯ ತೂಗು ಸೇತುವಿನಮೇಲೆ ನಡೆದುಹೋದಾಗಲಂತೂ ಹಲವರಿಗೆ ಪ್ರಾಣಭಯ. ಒಬ್ಬಿಬ್ಬರಂತೂ ತಮ್ಮ ಕೈ ಹಿಡಿದು ಕರೆದುಕೊಂಡು ಹೋಗುವಂತೆ ಕೇಳಿಕೊಂಡು, ಕಣ್ಣು ಗಳನ್ನೇ ಮುಚ್ಚಿಕೊಂಡು ಇತರರ ಅವಲಂಬನದಿಂದ ಮುಂದೆ ತೆರಳಿದರು. ಆ ಇತರರೂ ತೆವಳಿಕೊಂಡೇ ಮುಂದುವರಿದರು. ಹೀಗಿದ್ದರೂ ಸಾಹಸ ಪ್ರೇಮಿಗಳಾದ ಮಹಾಪ್ರಭುಗಳವರೂ ಮತ್ತೆ ಕೆಲವರೂ ಮಾತ್ರ ನಡೆದೇ ಹೋಗುತ್ತ, ಸಾವಿರಾರು ಅಡಿಗಳ ಕೆಳಗೆ ಭೋರ್ಗರೆಯುತ್ತ ಹರಿಯುತ್ತಿದ್ದ ಕಾಳೀ ನದಿಯ ಪೂರ್ಣಪ್ರವಾಹದ ಸೊಬಗನ್ನೂ, ಆ ತೂಗು ಸೇತುವಿನ ನಿರ್ಮಾಣ ಕೌಶಲ್ಯವನ್ನೂ ನೋಡಿ ಆನಂದಿಸಿದರು.

ಮಹಾಪ್ರಭುಗಳವರ ಸಹನ ಸಾಮರ್ಥ್ಯವೂ ಶ್ರಮಸಹಿಷ್ಣುತೆಯೂ ಅಸಾಧಾರಣವಾಗಿದ್ದುವು. ತೀರ ಬಾಲ್ಯ ವಯಸ್ಸಿನಿಂದ ಹಿಡಿದು ಮರಣ ಕಾಲದ ವರೆಗೂ ಅವರು ಆಗಾಗ್ಗೆ ರೋಗಗಳನ್ನನು

**ಸಹನ ಸಾಮರ್ಥ್ಯ**

ಭವಿಸಿದಾಗ ತೋರಿಸಿದ ಸಹನ ಸಾಮರ್ಥ್ಯವನ್ನು ಕಂಡು, ವೈದ್ಯರೂ ವಿಸ್ಮಿತರಾಗುತ್ತಿದ್ದರು. ೧೯೩೮ ನೆಯ ಇಸವಿಯಲ್ಲಿ ಸಿಡುಬಿನ ಬಾಧೆಯಿಂದ ನರಳುತ್ತಿದ್ದಾಗ ಅವರು ತೋರಿಸಿದ ಸಹನವು ವರ್ಣನಾತೀತವಾದುದು. ಇದೇ ಬಗೆಯ ಇತರ ನಿದರ್ಶನಗಳೂ ಉಂಟು. ೧೯೨೨ನೆಯ ಇಸವಿಯಲ್ಲಿ ನೀಲಗಿರಿಯಲ್ಲಿ ದ್ದಾಗ ಒಂದು ದಿನ ಮೂವತ್ತೆರಡು ಮೈಲಿಗಳ ದೂರವನ್ನು ಬೆಟ್ಟಗುಡ್ಡಗಳ ಏರಿಳಿತಗಳ ಪ್ರದೇಶವಲ್ಲಿ ಅತ್ಯಂತ ಶೀಘ್ರವಾಗಿ ಸುತ್ತಿಕೊಂಡು, ನಿರಾಹಾರದಿಂದಿದ್ದೂ ಆಯಾಸಗೊಳ್ಳದೆ ಮಹಾಪ್ರಭುಗಳವರು ಹಿಂತಿರು ಗಿದರು. ಒಂದು ಸಲ, ದಸರಾ ಮಹೋತ್ಸವ ಕಾಲದಲ್ಲಿ ಚಿನ್ನದ ಜೋಡನ್ನು ದೂರದಲ್ಲಿ ಬಿಟ್ಟು ಸಿಂಹಾಸನ ಪ್ರದಕ್ಷಿಣೆ ಮಾಡುತ್ತಿದ್ದಾಗ ಗುಂಡುಸೂಜಿಯೊಂದು ಅಂಗಾಲಿಗೆ ಪೂರ್ತಿಯಾಗಿ ಚುಚ್ಚಿಕೊಂಡಿತು. ಅವರು ದರ್ಬಾರು ಮುಗಿಯುವವರೆಗೂ ತಮಗಾಗುತ್ತಿದ್ದ ಹಿಂಸೆಯೇ ಒಬ್ಬರಿಗೂ ಅರಿವಾಗದಂತೆ ಪ್ರಸನ್ನ ಮುಖದಿಂದಿದ್ದು ನೋವನ್ನು ಸಹಿಸಿಕೊಂಡೇ ಇದ್ದರು. ಇನ್ನೊಂದು ಸಲ, ಬೆನ್ನಿನಮೇಲೆ ಎದ್ದಿದ್ದ ಕುರುವಿಗೆ ಶಸ್ತ್ರ ಚಿಕಿತ್ಸೆಯಾಗಬೇಕಾಯಿತು. ಶಸ್ತ್ರ ಚಿಕಿತ್ಸೆಯಾಗು ತ್ತಿದ್ದಷ್ಟು ಹೊತ್ತೂ ಸ್ತೋತ್ರ ಪಾಠಗಳನ್ನು ಓದಿಕೊಳ್ಳುತ್ತ ಅಲುಗಾಡದೆ ಕುಳಿತಿದ್ದರು.

ಆಳಿದ ಮಹಾಸ್ವಾಮಿಯವರು ದೊಡ್ಡ ಸಂಸ್ಥಾನದ ಮಹಾರಾಜ ಪದವಿಯನ್ನಲಂಕರಿಸಿದ್ದೂ ನಿಗರ್ವ ಶಿರೋಮಣಿಗಳಾಗಿ ತೀರ ಸರಳ ಸ್ವಭಾವದವರಾಗಿದ್ದರು. ಈಚಿನ ಮಾತೂ

**ಸರಳತೆ**

ಹಾಗಿರಲಿ. ೧೯೦೮ನೆಯ ಇಸವಿಯಲ್ಲಿ ಅವರು ಕಾಲಟಿಗೆ ಹೋಗಿದ್ದಾಗ ಅಲ್ಲಿ ಬಿಡಾರವು ಅರಮನೆಯ ವೈಭವವನ್ನು ನೆನಪಿಗೆ ತರುವಂತೆ ಶೃಂಗಾರವಾಗಿ ಸುಸಜ್ಜಿತ ವಾಗಿದ್ದಿತು. ಮಹಾಪ್ರಭುಗಳವರು ಮೈಸೂರು ಅರಮನೆಯ ಧರ್ಮಾಧಿ ಕಾರಿಯವರನ್ನು ಕುರಿತು, "ಇದೆಲ್ಲಾ ಏಕೆ?" ಎಂದು ಕೇಳಿದರು. ಧರ್ಮಾಧಿಕಾರಿಗಳಲ್ಲೊಬ್ಬರೂ ಉದ್ದಾಮ ಪಂಡಿತರೂ ಆದ ವಿದ್ಯಾ ವಿಶಾರದ ವೇ॥ ಬ್ರ॥ ಕುಣಿಗಲು ರಾಮಾಶಾಸ್ತ್ರಿಗಳವರು (ವೇ॥ ಬ್ರ॥ ಕೃಷ್ಣಶಾಸ್ತ್ರಿಗಳವರೆಂಬುದು ಜನರು ವಾಡಿಕೆಯಾಗಿ ಹೇಳುವ ಹೆಸರು)

"ಮಹಾಸ್ವಾಮಿಯವರು ಬೇಕಾದಷ್ಟನ್ನು ಮಾತ್ರವೇ ಉಪಯೋಗಿಸ ಬಹುದು. ಆದರೆ ಮಹಾರಾಜ ವೈಭವಕ್ಕೆ ತಕ್ಕಹಾಗೆ, ಇಲ್ಲಿ ಸೇರಿರುವ ನಲವತ್ತುಸಾವಿರ ಜನರ ನಿರೀಕ್ಷೆಗೆ ತಕ್ಕ ಹಾಗೆ, ಅವರೆಲ್ಲರೂ ಮೈಸೂರು ಮಹಾರಾಜರೆಂದರೆ ಬಹಳ ದೊಡ್ಡವರೆಂದು ಗೌರವ ಭಕ್ತಿಗಳನ್ನಿಟ್ಟು ಕೊಂಡಿರುವುದಕ್ಕೆ ತಕ್ಕಹಾಗೆ, ಬಿಡಾರ ವೈಭವವೂ ಇರಬೇಕೆಂದು ತೋರಿತು. ಇದನ್ನೆಲ್ಲಾ ಮಾಡಿಸಿದ್ದೇನೆ" ಎಂದರು. ಮಹಾಪ್ರಭು ಗಳವರು ನಕ್ಕು ಸುಮ್ಮನಾದರು.

ಮಹಾಪ್ರಭುಗಳವರು ಮಹಾರಾಜ ಪದವಿಯನ್ನೂ ಮರೆತು ಸಹೃದಯತೆಯಿಂದ ನಡೆದುಕೊಳ್ಳುತ್ತಿದ್ದರು. ಸರ್ ಕವಾಸ್ಜಿ ಜಹಾಂಗೀರ್ ಎಂಬ ಮಹಾಶಯರು ಒಂದು ಸಲ ಪುಣೆಯಿಂದ ಮುಂಬಯಿ ನಗರಕ್ಕೆ ಹೋಗುತ್ತಿದ್ದರು. ಅವರು ಕುಳಿತಿದ್ದ ರೈಲು ಬಂಡಿಯ ಪಕ್ಕದ ಬಂಡಿಯಲ್ಲಿದ್ದ ಮಹಾಪ್ರಭುಗಳವರು ತಮ್ಮ ಬಂಡಿಗೆ ಬರುವಂತೆ ಅವರಿಗೆ ಹೇಳಿ ಕಳುಹಿಸಿ ಅವರೊಡನೆ ಮಾತನಾಡಿಕೊಂಡು ಪ್ರಯಾಣ ಮಾಡಿದರು.

ಅನೇಕ ಸಲ, ಮಹಾಪ್ರಭುಗಳವರು ಮೂಲೆತಾಕುಗಳಲ್ಲಿದ್ದ ಹಳ್ಳಿಗಳಿಗೆ ಸಾಮಾನ್ಯರಂತೆ ಹೋಗಿ ರೈತರೊಡನೆ ಸೇರಿ ಸುತ್ತಾಡಿ, ಅವರ ಕಷ್ಟಸುಖಗಳನ್ನು ವಿಚಾರಿಸಿಕೊಂಡು ಬಂದಿರುವುದುಂಟು. ಆ ಉದ್ದೇಶ ಕ್ಕಾಗಿ ರೈತರ ಬಂಡಿಗಳಲ್ಲಿ ಕುಳಿತುಕೊಂಡು ಹೋಗಿ "ನಿಮ್ಮ ಮಹಾರಾಜರ ವಿಚಾರ ಹೇಗೆ? ನಿಮ್ಮ ಸಂಪಾದನೆ ಎಷ್ಟು? ನಿಮ್ಮ ಅಮಲ್ದಾರರ ವಿಷಯ ಹೇಗೆ?" ಎಂದು ಮುಂತಾಗಿ ಪ್ರಶ್ನೆಗಳನ್ನು ಕೇಳಿ ಉತ್ತರ ಪಡೆದು ಬಂದಿರುವುದುಂಟು. ಅನೇಕ ಸಂದರ್ಭಗಳಲ್ಲಿ ಅವಶ್ಯ ವಾದ ಸಹಾಯವನ್ನು ಮಾಡಿರುವುದೂ ಉಂಟು.

ಒಂದು ಸಲ, ಮಹಾಪ್ರಭುಗಳವರು ನೀಲಗಿರಿಗೆ ಹೋಗಿದ್ದಾಗ ಅವರ ಪರಿವಾರದವರಲ್ಲೊಬ್ಬರು ರಾಗಿಯ ಹಿಟ್ಟನ್ನೂ ಹುರುಳಿಯ ಕಾಳನ್ನೂ, ತಿನ್ನುತ್ತಿದ್ದ ಬಡವರನ್ನು ಕಟುವಾಗಿ ಅಪಹಾಸ್ಯಮಾಡಿದರು. ಅದನ್ನು ಕೇಳಿದ ಮಹಾಪ್ರಭುಗಳವರು ಎರಡು ವಾರಗಳವರೆಗೆ ತಮಗೂ ಸೇರಿ ಬಿಡಾರದಲ್ಲಿ ಸಮಸ್ತರಿಗೂ ರಾಗಿಯ ಹಿಟ್ಟು ಮತ್ತು ಹುರುಳಿ ಸಾರು ಮಾತ್ರವೇ ಆಹಾರವೆಂದು ಆಜ್ಞೆಮಾಡಿದರು. ಕಟ್ಟುನಿಟ್ಟಾಗಿ ಆ ಆಜ್ಞೆಯು ನೆರವೇರಿತು.

ಒಂದು ದಿನ, ಚಾಮುಂಡೀ ಬೆಟ್ಟದಲ್ಲಿ ಒಬ್ಬಾತನು ರಾಗಿಯ ಅಂಬಲಿ ಯನ್ನು ತೆಗೆದುಕೊಂಡು ಹೋಗುತ್ತಿದ್ದಾಗ ಮಹಾಪ್ರಭುಗಳವರು

ಅವನನ್ನು ತಾವಾಗಿಯೇ ಮಾತನಾಡಿಸಿ, ಅಂಬಲಿಯನ್ನು ಮಾಡುವ ಕ್ರಮವನ್ನು ವಿಚಾರಿಸಿದರು. ಪರಿವಾರದವರಲ್ಲಿ ಒಬ್ಬಿಬ್ಬರು ನಕ್ಕುದನ್ನು ಕಂಡು, "ಆತ ಅಂಬಲಿಯನ್ನೇ ಕುಡಿದು ಈ ಇಳಿವಯಸ್ಸಿನಲ್ಲಿ ಸಹ ಹೇಗಿದ್ದಾನೆ, ನೋಡಿ. ನೀವೂ ನಾವೂ ಹೇಗಿದ್ದೇವೆ, ನೋಡಿ" ಎಂದರು. ಅಂದಿನ ಅಪರಾಹ್ನದಮೇಲೆ ಉಪಾಹಾರಕ್ಕಾಗಿ ಸಮಸ್ತರಿಗೂ ಬಿಡದಿಯಿಂದ ಬಂದ ವಸ್ತು ರಾಗಿಯ ಅಂಬಲಿಯೊಂದೇ.

ಮಹಾಪ್ರಭುಗಳವರಿಗೆ ಅತಿಶಯೋಕ್ತಿಯ ಹೊಗಳಿಕೆಯು ಸರಿಬೀಳುತ್ತಿರಲಿಲ್ಲ. ೧೯೩೩ನೆಯ ಇಸವಿ ಜೂಲೈ ತಿಂಗಳಿನಲ್ಲಿ ಅರಮನೆಯಲ್ಲಿ ನಡೆದ ಸಂಗೀತ ಕಚೇರಿಯಲ್ಲಿ ಉತ್ತರ ಭಾರತದಿಂದ ಬಂದಿದ್ದವರೊಬ್ಬರು ಆ ಬಗೆಯ ಮಿತಿಮೀರಿದ ಹೊಗಳಿಕೆಯಿಂದ ತುಂಬಿ ಮಹಾಪ್ರಭುಗಳವರನ್ನು ಶ್ಲಾಘಿಸುವುದಾಗಿದ್ದ ಕೀರ್ತನವೊಂದನ್ನು ಹಾಡಲು ಪ್ರಾರಂಭಿಸಿದರು. ಸಂಗೀತ ಕಚೇರಿ ಬಹು ಚೆನ್ನಾಗಿದ್ದೂ—ಅದು ಪ್ರಾರಂಭವಾಗಿ ಇನ್ನೂ ಇಪ್ಪತ್ತೇ ನಿಮಿಷಗಳಾಗಿದ್ದೂ—ಮಹಾಸ್ವಾಮಿಯವರು ಎದ್ದು ದಯಮಾಡಿದರು. ಸಂಗೀತ ಕಚೇರಿಯು ಅಲ್ಲಿಗೇ ಮುಕ್ತಾಯವಾಗಬೇಕಾಯಿತು.

ಮಹಾಪ್ರಭುಗಳವರು ತಮ್ಮ ಆಪ್ತರಲ್ಲಿ ಬಹಳ ಸರಸಿಗಳಾಗಿದ್ದುದೂ ಅವರ ಸರಳತೆಯ ಪರಿಣಾಮಗಳಲ್ಲೊಂದು. ಒಂದು ಸಲ, ತಮ್ಮ ಜೊತೆಯವರಲ್ಲಿ ಒಬ್ಬಿಬ್ಬರು ಹಿಂದಿನ ತಲೆಮಾರುಗಳ ತಮ್ಮ ಹಿರಿಯರು ಗಾಳಿಪಟಗಳನ್ನು ಕಟ್ಟುತ್ತಿದ್ದ ಕೌಶಲ್ಯವನ್ನು ಮಿತಿಮೀರಿ ಕೊಂಡಾಡಿ ಈಗಿನವರು ಪ್ರಯೋಜನವಿಲ್ಲವೆಂದಾಗ ಮಹಾಪ್ರಭುಗಳವರು, "ನಿಜ, ನಿಜ. ಆ ಕಾಲದ ಗಾಳಿ ಈಗುಂಟೆ? ಆಗಿನ ಸೂರ್ಯ ಚಂದ್ರರು ಈಗುಂಟೆ? ಎಲ್ಲಾ ಪೂರ್ತಿಯಾಗಿ ಬದಲಾವಣೆಯಾಗಿಹೋಗಿದೆ. ಈಗಿನವರು ಗಾಳಿ ಪಟಗಳನ್ನು ಆ ರೀತಿ ಕಟ್ಟುವ ಬಗೆ ಹೇಗೆ?" ಎಂದು ಹೇಳಿ ನಕ್ಕರು.

ಮಹಾಪ್ರಭುಗಳವರು ತಮ್ಮ ಜೊತೆಯವರನ್ನು ಮಿತ್ರರಂತೆ ಕಾಣುತ್ತಿದ್ದರು. ೧೯೩೪ನೆಯ ಇಸವಿಯಲ್ಲಿ ಅವರು ತಮ್ಮ ಪರಿವಾರದವರೊಡನೆ ಅರಮನೆಯ ಮೋಟಾರು ಬಸ್ಸಿನಲ್ಲಿ ಕುಳಿತು ಕಡೂರು ಡಿಸ್ಟ್ರಿಕ್ಟಿನ ಕುದುರೇಮುಖ ಬೆಟ್ಟಕ್ಕೆ ದಯಮಾಡಿ ಪ್ರಕೃತಿಸೌಂದರ್ಯವನ್ನು ನೋಡಿಕೊಂಡು ಬಂದರು ಮಾರ್ಗವು ಸರಿಯಾಗಿರಲಿಲ್ಲವಾದ ಕಾರಣ, ತಾವೇ ಚಾತುರ್ಯದಿಂದ ಮೋಟಾರು ಬಸ್ಸನ್ನು ನಡೆಯಿಸಿ ಅವರೆಲ್ಲರನ್ನೂ ಸುರಕ್ಷಿತವಾಗಿ ಕರೆದುಕೊಂಡುಬಂದರು. ಮತ್ತೊಂದು

ಸಲ, ಸಮ್ಮುಖದ ಅಧಿಕಾರಿಯವರೊಬ್ಬರು ತಾವೇ ಮೋಟಾರು ಬಂಡಿಯನ್ನು ನಡೆಯಿಸುವುದಾಗಿ ಹೇಳಿ ಅದನ್ನು ವೇಗವಾಗಿ ನಡೆಯಿಸುತ್ತಿದ್ದಾಗ, ಮಹಾಪ್ರಭುಗಳವರು ತಮ್ಮೊಡನೆ ಕುಳಿತಿದ್ದವರನ್ನು ಕುರಿತು, "....ರವರು ಬಹಳ ಜೋರಾಗಿ ಬಿಡುತ್ತಿದ್ದಾರೆ. ನಾವೇನೋ ಅಪಶಕುನ ನುಡಿದೆವೆಂದು ಭಾವಿಸಬೇಡಿ. ಬಾಗಿಲಿನ ಮೇಲೇ ಕೈಯಿರಲಿ, ಧುಮುಕೋದಕ್ಕೆ. ನಾವೂ ಕಲ್ಲುಮನಸ್ಸು ಮಾಡಿ ಕುಳಿತಿದ್ದೇವೆ. ನೀವೂ ಕಲ್ಲುಮನಸ್ಸುಮಾಡಿ ಕುಳಿತುಕೊಳ್ಳಿ" ಎಂದು ಹೇಳಿ ನಕ್ಕರು. ಮೋಟಾರು ಬಂಡಿಯು ಮೂರು ನಾಲ್ಕು ಫರ್ಲಾಂಗುಗಳ ದೂರ ಹೋಗುವುದರೊಳಗಾಗಿ ಬಂಡಿಯನ್ನು ನಡೆಯಿಸುತ್ತಿದ್ದವರಿಗೆ ಅವರು ಅದನ್ನು ನಡೆಯಿಸುತ್ತಿದ್ದುದರ ಸಂಬಂಧದಲ್ಲಿ ಮಹಾಪ್ರಭುಗಳವರು ಅನೇಕ ತಪ್ಪುಗಳನ್ನು ತಿಳಿಸಿ ಅಮೂಲ್ಯ ಸಲಹೆಗಳನ್ನಿತ್ತರು.

ಒಂದು ಸಲ, ಕುಣಿಗಲಿನಿಂದ ಮೋಟಾರು ಬಂಡಿಯಲ್ಲಿ ಆಪ್ತರು ಕೆಲವರೊಡನೆ ಬೆಂಗಳೂರಿಗೆ ಬರುತ್ತಿದ್ದಾಗ ಮಹಾಪ್ರಭುಗಳವರೇ ಮೋಟಾರು ಬಂಡಿಯನ್ನು ನಡೆಯಿಸುತ್ತಿದ್ದರು. ಬೇರೆ ಕಡೆಗೆ ಅವರ ಗಮನವಿದ್ದ ಕಾರಣ, ಅವರಿಗೆ ತಮ್ಮ ಮಾತುಗಳು ಕೇಳಿಸಲಾರವೆಂದು ಭಾವಿಸಿ ಅವರ ಹಿಂದೆ ಕುಳಿತಿದ್ದವರಲ್ಲೊಬ್ಬರು ಮತ್ತೊಬ್ಬರೊಡನೆ, "ನಮಗೆ ಎಂಥಾ ಡ್ರೈವರು ದೊರೆತಿದ್ದಾರೆ! ಎಷ್ಟು ಗಂಭೀರವಾಗಿ ಕಾಣುತ್ತಾರೆ! ಎಷ್ಟು ಚೆನ್ನಾಗಿ ಬಂಡಿ ಬಿಡುತ್ತಾರೆ! ಬಿಟ್ಟಿಯಾಗಿ ಬಂಡಿ ನಡೆಸುತ್ತಾರೆ" ಎಂದರು. ಮಹಾಪ್ರಭುಗಳವರು ಆ ಮಾತುಗಳನ್ನು ಕೇಳಿಯೂ ಕೇಳದವರಂತೆ ಸುಮ್ಮನಿದ್ದರು. ನೆಲಮಂಗಲದ ಸಮೀಪದಲ್ಲಿ ಮೋಟಾರು ಬಂಡಿಯ ಚಕ್ರಕ್ಕೆ ಮಾರ್ಗದಲ್ಲಿದ್ದ ಮೊಳೆಯು ಚುಚ್ಚಿಕೊಂಡು, ಗಾಳಿಯೆಲ್ಲ ಹೊರಟುಹೋಗಿ ಮೋಟಾರು ಬಂಡಿಯು ನಿಂತುಹೋದಾಗ, "ನಿಮ್ಮ ಡ್ರೈವರಿಗೆ ಬಂಡಿ ನಡೆಯಿಸುವುದು ಮಾತ್ರವೇ ಕೆಲಸ. ಈಗ ನೀವೆಲ್ಲರೂ ಇಳಿದು ಚಕ್ರ ಸರಿಮಾಡಿ" ಎಂದು ಹೇಳಿ ನಕ್ಕರು. ಹಿಂದಿನಿಂದ ಬಂದ ಅರಮನೆ ಮೋಟಾರಿನಲ್ಲಿ ಪ್ರಯಾಣ ಬೆಳೆಯಿತು.

ಇನ್ನೊಂದು ಸಲ, ಉದಕಮಂಡಲದಿಂದ ಮಹಾಪ್ರಭುಗಳವರೇ ಮೋಟಾರು ಬಂಡಿಯನ್ನು ನಡೆಯಿಸಿಕೊಂಡು ಬರುತ್ತಿದ್ದಾಗ ಅವರ ಹಿಂದೆ ಕುಳಿತಿದ್ದ ಅಧಿಕಾರಿಯವರೊಬ್ಬರು ತಮ್ಮ ಪಕ್ಕದಲ್ಲಿ ಕುಳಿತಿದ್ದ ಮತ್ತೊಬ್ಬರೊಡನೆ, "ತಿಂಡಿಯೇನಾದರೂ ಇದೆಯೇನು? ತಂದಿದ್ದೀರಾ?" ಎಂದು ಮೆಲ್ಲಗೆ ಕೇಳಿದಾಗ ಅವರು ಇಲ್ಲವೆಂದುದಕ್ಕೆ "ಕಚ್ಚಾ ಬಂಮೋ ಬಸ್ತ್" ಎಂದು ಹೇಳಿ ವಿನೋದವಾಡಿದರು. ಮೋಟಾರು ಬಂಡಿಯು

ಗುಂಡ್ಲುಪೇಟೆಯ ಬಳಿಗೆ ಬಂದಾಗ ಮಹಾಪ್ರಭುಗಳವರು ಅವರ ಕಡೆಗೆ ತಿರುಗಿ, "ಪಕ್ಕಾ ಬಂದೋಬಸ್ತ್ ಈ ಊರು ಹೋಟಲಿನಲ್ಲಿದೆ. ಮೋಟಾರ್‌ಕಾರ್ ನಿಲ್ಲಿಸಬೇಕೇನು? ಪಕ್ಕಾ ಬಂದೋಬಸ್ತ್ ನೋಡಿ ಕೊಂಡು ಬರುತ್ತೀರೇನು?" ಎಂದು ಕೇಳಿ ನಕ್ಕರು. ಆ ಬಳಿಕ ಆ ಮೂವರೂ ಮತ್ತು ಅವರ ಜೊತೆಯಲ್ಲಿದ್ದ ಮತ್ತೊಬ್ಬರೂ ಬಹು ದೂರದವರೆಗೂ ನಗುತ್ತಲೇ ಬಂದರು.

ಮಹಾಪ್ರಭುಗಳವರ ದೇಶಾಭಿಮಾನಕ್ಕೆ ಒಟ್ಟು ಮೈಸೂರು ಸಂಸ್ಥಾನವೇ ನಿದರ್ಶನ; ಭವ್ಯವಾದೊಂದು ಶಾಶ್ವತ ಸ್ಮಾರಕ. ಅವರು ಉಜ್ಜ್ವಲವಾದ ದೇಶಾಭಿಮಾನದಿಂದ ಕೂಡಿ, ಸಂಸ್ಥಾನದ ಅಭ್ಯುದಯ ಸಾಧನೆಯು ಸರ್ವತೋ ಮುಖವಾಗಿ ನೆರವೇರುವಂತೆ ಮಾಡಿದರು; ಅದಕ್ಕಾಗಿ ಅವಿಶ್ರಾಂತರಾಗಿ ಶ್ರಮಿಸಿದರು. ಮೈಸೂರು ಸಂಸ್ಥಾನದಲ್ಲಿ ಅವರಿಗೆ ಉಜ್ಜ್ವಲವಾದ ಅಭಿಮಾನವಿದ್ದಿತಾದರೂ, ಒಟ್ಟು ಭರತಖಂಡದ ಯೋಗಕ್ಷೇಮದಲ್ಲಿ ಕೂಡ ತೀವ್ರಾಸಕ್ತಿಯಿದ್ದಿತು. ಕಾಶೀ ನಗರದ ವಿಶ್ವವಿದ್ಯಾನಿಲಯದ ಘಟಿಕೋತ್ಸವದಲ್ಲಿ ಮಾಡಿದ ಭಾಷಣದಲ್ಲಿ ಅವರು, ಭಾರತೀಯರೆಂಬ ಭಾವನೆಯನ್ನು ಮೊದಲು ಮುಂದಿಟ್ಟುಕೊಂಡು ಸಮಸ್ತರೂ ವರ್ತಿಸಬೇಕೆಂದು ಉಪದೇಶಿಸಿದರು. ಹಾಗೆ ಉಪದೇಶಿಸಿದು ದನ್ನು ಅನುಷ್ಠಾನದಲ್ಲಿ ತಂದು ತೋರಿಸಿಕೊಟ್ಟರು. ಭಾರತೀಯರಲ್ಲಿ ಶ್ರೇಷ್ಠ ವ್ಯಕ್ತಿಗಳೆಂದು ಪ್ರಸಿದ್ಧರಾಗಿದ್ದವರು ಯಾವ ಪ್ರಾಂತಕ್ಕೆ ಸೇರಿ ದವರಾಗಿದ್ದರೂ ಅವರೆಲ್ಲರನ್ನೂ ಅರಮನೆಯ ಅತಿಥಿಗಳಾಗಿ ಆಹ್ವಾನಿಸು ತ್ತಿದ್ದರು. ಭರತಖಂಡದಲ್ಲಿ ಏರ್ಪಟ್ಟ ಅನೇಕ ಸಂಸ್ಥೆಗಳಿಗೆ ಅವರು ಆದರದಿಂದ ಸಹಾಯಮಾಡುತ್ತಿದ್ದರು. ಈಗ್ಗೆ ಇಪ್ಪತ್ತೆರಡು ವರ್ಷಗಳ ಹಿಂದೆ ಹೊರ ಪ್ರಾಂತದಿಂದ ಮೈಸೂರು ಸಂಸ್ಥಾನಕ್ಕೆ ದಯಮಾಡಿದ್ದ ಕನ್ನಡಿಗರಾದ ಮಹಾಶಯರಿಬ್ಬರು ಮಹಾಪ್ರಭುಗಳವರ ಸಂದರ್ಶನವನ್ನು ಪಡೆಯಬೇಕೆಂಬ ಅಭಿಲಾಷೆಯಿಂದ ಕೂಡಿದ್ದರು. ಆದರೆ ಆ ಉದ್ದೇಶ ಸಾಧನೆಗೆ ಮಾರ್ಗವಾವುದೆಂಬುದನ್ನರಿಯದೆ, ಚಾಮುಂಡೀಬೆಟ್ಟದ ಮೇಲಿ ನಿಂದ ಬರುತ್ತಿದ್ದ ಮೋಟಾರು ಬಂಡಿಯ ಎದುರಿಗೆ ತಮ್ಮ ಧಾವಳಿಗಳನ್ನು ಹಾಸಿ ಅಡ್ಡವಾಗಿ ಮಲಗಿದರು. ಮಹಾಪ್ರಭುಗಳವರು ಮೋಟಾರು ಬಂಡಿ ಯನ್ನು ನಿಲ್ಲಿಸಿ, ಅವರು ಹಾಗೆ ಮಾಡಿದುದರ ಕಾರಣವನ್ನುಕೇಳಿ ಹರ್ಷಿಸಿ ಅವರನ್ನು ಅಲ್ಲಿಯ ಅರಮನೆಗೆ ಬರಮಾಡಿಕೊಂಡು ಆದರದಿಂದ ಮಾತನಾಡಿ, ಅವರಿಗೆ ದೇವಸ್ಥಾನದಿಂದ ಪ್ರಸಾದವನ್ನು ತರಿಸಿಕೊಟ್ಟು

ದೇಶಾಭಿಮಾನ



"ಹಾಕಿ" ಆಟಗಾರರೊಡನೆ
(ಆಳಿದ ಮಹಾಸ್ವಾಮಿಯವರು ಯೂರೋಪು ಖಂಡದ ಪ್ರವಾಸಕ್ಕಾಗಿ ಚಿತ್ತೈಸಿದಾಗ)

ಆತಿಥ್ಯಮಾಡಿಸಿ ಪ್ರೀತಿ ತೋರಿಸಿದರು. ಅವರುಗಳ ಆನಂದವನ್ನು ವರ್ಣಿಸಲಳಲವಲ್ಲ. ಮಹಾಪ್ರಭುಗಳವರಿಗೆ ನೆರೆಯ ಪ್ರಾಂತದ ಕನ್ನಡಿಗರಲ್ಲಿ ಎಷ್ಟು ಪ್ರೀತಿ ಯಿದ್ದಿತೆಂಬುದಕ್ಕೆ ಇದೊಂದು ಉತ್ತಮ ನಿದರ್ಶನ.

ಮಹಾಪ್ರಭುಗಳವರು ಯೂರೋಪು ಖಂಡಕ್ಕೆ ಹೋದ ಜಹಜಿನಲ್ಲೇ ಅಂತರರಾಷ್ಟ್ರೀಯ ಸ್ಪರ್ಧೆಗಾಗಿ ಜರ್ಮನಿ ದೇಶಕ್ಕೆ ಹೋಗುತ್ತಿದ್ದ ಭರತ ಖಂಡದ "ಹಾಕಿ" ಆಟಗಾರರೂ ಇದ್ದರು. ಅಪರಿಚಿತರಾಗಿದ್ದೂ ಮಹಾಪ್ರಭುಗಳವರೂ, ಅವರ ಸೋದರರಾದ ಶ್ರೀಮದ್ಯುವರಾಜ ಶ್ರೀ ಕಂಠೀರವ ನರಸಿಂಹರಾಜ ಒಡೆಯರವರೂ, ಆ ಆಟಗಾರರನ್ನು ಅವರು ಭಾರತೀಯರೆಂಬ ವಿಶ್ವಾಸದಿಂದ ಕೂಡಿ ಆದರದಿಂದ ಕಂಡರು ; ಜಹಜಿನಲ್ಲಿ ಅವರಿಗೆ ಲಭಿಸುವುದು ಅಸಾಧ್ಯವಾಗಿದ್ದ ನೀರುಮಜ್ಜಿಗೆ, ಭಕ್ಷ್ಯ ಭೋಜ್ಯಗಳು, ಖಾನಾ ಆರೋಗಣೆಗಾಗಿ ಸಿದ್ಧವಾಗುತ್ತಿದ್ದ ಇತರ ರುಚಿಕರವಾದ ನಾನಾ ವಸ್ತುಗಳು ಮುಂತಾದುವುಗಳೆಲ್ಲ ಮಹಾಸ್ವಾಮಿಯವರೀರ್ವರ ಆಜ್ಞೆಯಂತೆ ಅವರಿಗೆ ಲಭಿಸುತ್ತ ಬಂದುವು. ಮಾರ್ಸೇಲ್ಸ್ ನಗರದಿಂದ ಅವರನ್ನು ಬೀಳ್ಕೊಳ್ಳುವಾಗ ಮಹಾಪ್ರಭುಗಳವರು ಅವರೊಡನೆ ಭಾವ ಚಿತ್ರವನ್ನು ತೆಗೆಸಿಕೊಂಡರು. ಅವರೀರ್ವರ ಸೌಜನ್ಯವನ್ನು ಕಂಡು ಆ "ಹಾಕಿ" ಆಟಗಾರರೆಲ್ಲರೂ ಮುಗ್ಧರಾದರು. ಒಟ್ಟು ಭರತಖಂಡದಲ್ಲಿ ಅತ್ಯಂತ ಗಟ್ಟಿಗರಾಗಿದ್ದ ಆಟಗಾರರಲ್ಲಿ ನಾನಾ ಪ್ರಾಂತಗಳಿಂದಲೂ ಆರಿಸಿ ಬಂದಿದ್ದ ಅವರುಗಳು ಮಹಾಪ್ರಭುಗಳವರ ಪ್ರಜೆಗಳಾಗುವ ಭಾಗ್ಯವು ತಮ್ಮದಾಗಲಿಲ್ಲವೆಂದು ಪೇಚಾಡಿದರು. ಆ ಆಟಗಾರರು ಸ್ಪರ್ಧೆಯಲ್ಲಿ ಜಯಶೀಲರಾಗಿ ಭರತಖಂಡಕ್ಕೆ ಹಿಂತಿರುಗಿದಾಗಲೂ ಮಹಾಸ್ವಾಮಿಯವರುಗಳೀರ್ವರ ಅವ್ಯಾಜವಾತ್ಸಲ್ಯವೂ ಅದರಿಂದ ತಮ್ಮಲ್ಲಿ ಉಂಟಾದ ಅಮಿತವಾದ ಉತ್ಸಾಹವೂ ತಮ್ಮ ಜಯಕ್ಕೆ ಮುಖ್ಯ ಕಾರಣವೆಂದು ಮಹಾಪ್ರಭುಗಳವರಿಗೆ ಅರಿಕೆಮಾಡಿ ಕೊಂಡಾಡಿದರು.

ತಮ್ಮ ಪ್ರಜೆಗಳೆಲ್ಲರೂ ಸುಖ ಸಂತೋಷಗಳಿಂದಿರಬೇಕು, ವಿದ್ಯಾವಂತರಾಗಿ ಭಾಗ್ಯವಂತರಾಗಿ ಬಾಳಬೇಕು, ಅರೋಗ ದೃಢಕಾಯರಾಗಿದ್ದು ಆದಷ್ಟು ಹೆಚ್ಚಾಗಿ ಧನಾರ್ಜನೆ ಮಾಡಬೇಕು, ದ್ರವ್ಯಾರ್ಜನೆಯ ಜೊತೆಗೆ ಧರ್ಮಾರ್ಜನೆಮಾಡಿ ದೈವಭಕ್ತರಾಗಿ ಸೋದರ ಭಾವದಿಂದ ಬಾಳಬೇಕು, ಮೈಸೂರು ಸಂಸ್ಥಾನದ ಕಾರ್ಯಸಾಧನೆಯ ಕೀರ್ತಿಯು ದಿನದಿನವೂ ಹೆಚ್ಚಬೇಕು—ಎಂಬಿವೇ ಮುಂತಾದುವುಗಳು ರಾಜರ್ಷಿ ಶ್ರೇಷ್ಠರಾದ ಮಹಾಪ್ರಭುಗಳವರಿಗಿದ್ದ ತೀವ್ರಾಭಿಲಾಷೆಗಳು. ಯೂರೋಪು ಖಂಡಕ್ಕೆ ಹೋಗಿ ಬಂದಮೇಲಂತೂ ಅವರ ಆ ಅಭಿಲಾಷೆಗಳು ಮೊದಲಿಗಿಂತ

ನೂರು ಪಾಲು ಹೆಚ್ಚಿದ್ದುವು. ಅರಮನೆಯ ದರ್ಬಾರು ಮಂದಿರದ ಮೇಲ್ಭಾಗದಲ್ಲಿ ಚಿತ್ರಗಳನ್ನು ಬರೆಯಿಸುವ ಕೆಲಸವನ್ನು ಹೊರಗಿನ ಕಲಾವಿದರಿಗೆ ವಹಿಸಿದಲ್ಲದೆ ಅದು ಸಮರ್ಪಕವಾಗಿ ನೆರವೇರುವುದಿಲ್ಲವೆಂದು ಸಲಹೆಗಳು ಅರಿಕೆಯಾದುವು. ಮಹಾಪ್ರಭುಗಳವರು, "ಹೀಗಾದರೆ ನಮ್ಮವರ ಕಲೆ ಬೆಳೆಯುವುದು ಹೇಗೆ? ನಮ್ಮ ಸಂಸ್ಥಾನದ ಚಿತ್ರ ಕಲಾಕೋವಿದರಿಗೆ ಹಣ ಬರುವುದು ಹೇಗೆ?" ಎಂದು ಹೇಳಿ ಮೈಸೂರಿನವರನ್ನೇ ಆ ಕೆಲಸಕ್ಕೆ ನೇಮಕಮಾಡಿ, ತಾವೇ ಅಮೂಲ್ಯ ಸಲಹೆಗಳನ್ನಿತ್ತು ಸೊಗಸಾದ ಚಿತ್ರಗಳನ್ನು ಬರೆಯಿಸಿದರು. ಜರ್ಮನಿಯಿಂದ ಮಾತ್ರವೇ ತರಿಸಬೇಕಾಗಿದ್ದ ವಿಶೇಷ ವಿಧದ ತಾಮ್ರದ ತಗಡುಗಳು (ಹಿಂದೆಯೇ ಸೂಚಿಸಿರುವಂತೆ) ಸ್ಥಳದಲ್ಲೇ ಅಗ್ಗದ ಬೆಲೆಗೆ ಒದಗುವಂತೆ ಮಾಡಿದರು. ಭರತಖಂಡದಲ್ಲಿ ಒದಗಲಾರದ ವಸ್ತುಗಳನ್ನು ಮಾತ್ರವೇ ಹೊರಗಿನಿಂದ ತರಿಸಬೇಕೆಂಬುದು ಮಹಾಪ್ರಭುಗಳವರಿಗಿದ್ದ ಘನವಾದ ಆಶಯ. ಯೂರೋಪು ಖಂಡಕ್ಕೆ ಹೋಗಿ ಬಂದಮೇಲೆ ಒಂದು ಸಲ, ಒಂದು ಸಂಚಾರ ಮಾರ್ಗದ ಕೆಲಸವನ್ನು ಪರಿಶೀಲಿಸಿ ಮಹಾಪ್ರಭುಗಳವರು ನೊಂದುಕೊಂಡು, "ಹೀಗೆ ಪಟ್ಟಿಗಳು ಕಾಣಬಾರದು. ಮಟ್ಟವಾಗಿರಬೇಕು. ತೇಪೆ ತೇಪೆಯಾಗಿರಬಾರದು. ನಮ್ಮವರ ಕೆಲಸ ಯೂರೋಪಿಯನರು ಮಾಡುವ ಕೆಲಸಕ್ಕಿಂತಲೂ ಉತ್ತಮವಾಗಿರಬೇಕು. ಕನಿಷ್ಠಪಕ್ಷ ಅವರಮಟ್ಟಿಗಾದರೂ ನಾವು ಕೆಲಸಮಾಡಬೇಕು. ನಮ್ಮವರಲ್ಲನೇಕರು ಬಹಳ ಬುದ್ಧಿವಂತರಾಗಿದ್ದೂ ಅವರಂತೆ ಶ್ರದ್ಧೆಯಿಂದ ಕೆಲಸಮಾಡುವುದಿಲ್ಲ. ನಮ್ಮ ಜನಾಂಗಕ್ಕೇ ಅನ್ಯಾಯವಾಗಿ ಅಪಖ್ಯಾತಿಯನ್ನು ತರುತ್ತಾರೆ. ಹೀಗೆ ಮಾಡದೆ ಸರಿಯಾಗಿಯೂ ಸಮರ್ಪಕವಾಗಿಯೂ ಕೆಲಸಮಾಡಿದರಲ್ಲವೇ ನಾವೂ ಪುರೋಭಿವೃದ್ಧಿ ಹೊಂದಿ ದೇಶಭೂಷಣರಾದೇವು?" ಎಂದರು. ಮಹಾಪ್ರಭುಗಳವರು ಈಚೆಗೆ ಅನೇಕ ಸಲ ತಮ್ಮೊಡನೆ, "ನಮ್ಮ ಪ್ರಜೆಗಳಿಗೆ ಆದಷ್ಟು ಹೆಚ್ಚಿನ ಸೌಕರ್ಯಗಳನ್ನು ಕಲ್ಪಿಸಬೇಕು. ನಮ್ಮಿಂದ ಸಾಧ್ಯವಿರುವಮಟ್ಟಿಗೂ ಬೇಗ ಬೇಗ ಒಳ್ಳೆಯದನ್ನು ಮಾಡಿ ಅಭ್ಯುದಯಸಾಧನೆಮಾಡಬೇಕು. ಜೀವನವು ಕ್ಷಣಭಂಗುರವಾದುದು" ಎಂದು ಅಪ್ಪಣೆಕೊಡಿಸಿದ್ದರೆಂದು ಸಂಸ್ಥಾನದ ದೊಡ್ಡ ಅಧಿಕಾರಿಯವರೊಬ್ಬರು ಹೇಳಿ ಕಂಬನಿದುಂಬಿದರು.

ಆಳಿದ ಮಹಾಸ್ವಾಮಿಯವರ ವಿನಯ ಶೀಲತೆಯಂತೂ, ಅವರಲ್ಲಿದ್ದ ಜ್ಞಾನ ಸಂಪತ್ತುಗಳಿಗೂ ಪಾಂಡಿತ್ಯ ಪ್ರತಿಭೆಗಳಿಗೂ ಧಾರ್ಮಿಕತೆ

ಘನತೆ ಗಾಂಭೀರ್ಯಗಳು ಮುಂತಾದುವುಗಳಿಗೂ ಭೂಷಣಪ್ರಾಯ ವಾಗಿದ್ದಿತು. ಒಟ್ಟುಪ್ರಪಂಚದಲ್ಲೇ ಪ್ರಖ್ಯಾತರಾದ ಭಾರತೀಯ ರಲ್ಲಿಯೂ ಇತರರಲ್ಲಿಯೂ ಅನೇಕ ಮಹನೀಯರು

**ವಿನಯ** ಅವರ ಜ್ಞಾನ ಸಂಪತ್ತನ್ನೂ ಅದಕ್ಕೆ ಒಪ್ಪ ವಿಡುತ್ತಿದ್ದ ಅವರ ವಿನಯಶೀಲತೆಯನ್ನೂ ಕಂಡು ಬೆರಗಾಗುತ್ತಿದ್ದರು. ಕರ್ನಲ್ ಜೇಮ್ಸ್ ಎಲ್. ಸ್ಲೀಮನ್, ಸಿ.ಬಿ., ಸಿ.ಎಂ.ಜಿ., ಸಿ.ಬಿ.ಇ., ಎಂ.ವಿ.ಓ., ಎಂ.ಎ., ಜೆ.ಪಿ., ಅವರಂತಹ ಸುಪ್ರಸಿದ್ಧ ಮಹಾಶಯರು ಮಹಾಪ್ರಭುಗಳವರೊಡನೆ ಬಹಳ ಹೊತ್ತು ಸಂಭಾಷಣೆಮಾಡುವ ಮಹತ್ತರ ಗೌರವವು ತಮಗೆ ಲಭಿಸಿತೆಂದು ಹೇಳಿ, ಮಹಾಪ್ರಭುಗಳವರ ಉದಾರಭಾವನೆಗಳೇ ಮುಂತಾದುವನ್ನು ಮನವಾರೆ ಕೊಂಡಾಡಿರುವರು. ಯಾರ ದಾಕ್ಷಿಣ್ಯಕ್ಕೂ ಅತಿಶಯೋಕ್ತಿಯನ್ನಾಡದ ಅನೇಕ ಮಹನೀಯರು ಮಹಾಪ್ರಭುಗಳವರ ವಿನಯವನ್ನು ಶ್ಲಾಘಿಸಿ ದ್ದಾರೆ. ಸಂತತವಾದ ಗ್ರಂಥ ವ್ಯಾಸಂಗದಿಂದಲೂ, ಅದಕ್ಕಿಂತ ಹೆಚ್ಚಿನ ದಾಗಿದ್ದ ಆಲೋಚನಾ ಸಂಪತ್ತಿಯಿಂದಲೂ, ಜೀವನದ ಸಾರಾಸಾರ ತತ್ತ್ವಗಳ ವಿವೇಚನೆಯಿಂದಲೂ ಮಹಾಪ್ರಭುಗಳವರಿಗೆ ಅದು ಸಾಧ್ಯ ವಾಯಿತು. ಅವರ ಮರಣ ವಾರ್ತೆಯನ್ನು ಕೇಳಿದ ಲಾರ್ಡ್ ಲೋಥಿ ಯನ್‌ರವರು, ಬಹಳ ಸಂಭಾವಿತರಾಗಿ ಪೂರ್ಣವಿನೀತಾತ್ಮರಾಗಿದ್ದ ಅಂತಹ ಮಹನೀಯರನ್ನು ಇನ್ನು ಕಾಣುವುದು ದುರ್ಲಭವೆಂದು ಹೇಳಿದರು.

ಪ್ರಾಂತ ಭೇದವಿಲ್ಲದೆ, ಜನಾಂಗ ಭೇದವಿಲ್ಲದೆ, ಜಾತಿಮತ ಭೇದವಿಲ್ಲದೆ ಗುಣಗ್ರಹಣಮಾಡಿ ಮಹಾಪ್ರಭುಗಳವರು ಯಾರಲ್ಲಿ ಯೋಗ್ಯತೆಯಿದ್ದರೂ ಅವರನ್ನು ತಮ್ಮ ಬಳಿಗೆ ಬರಮಾಡಿಕೊಂಡು ಅವರಲ್ಲಿ ಆದರ ತೋರಿ ಪ್ರೋತ್ಸಾಹಿಸುತ್ತಿದ್ದರು. ಸಂನ್ಯಾಸಿಗಳು, ವಿರಕ್ತರು, ದೇಶಾಭಿಮಾನಿಗಳು, ರಾಜನೀತಿಕೋವಿದರು, ಶಿಲ್ಪಿಗಳು, ಚಿತ್ರಕಾರರು, ಸಂಗೀತಗಾರರು, ಉಪನ್ಯಾಸಕರು, ಪೌರಾಣಿಕರು, ಕುಶಲವಸ್ತುರಚನೆಯ ಕಲಾವಿದರು, ವಿಜ್ಞಾನಕೋವಿದರು, ವೈದಿಕ ವಿದ್ವಾಂಸರು, ಕೀರ್ತನ ಕಾರರು, ನಾಟ್ಯವಿದರು, ಹಾಸ್ಯಚತುರರು, ಮುಂತಾಗಿ ಜೀವನದ ನಾನಾ ಕಾರ್ಯಕ್ಷೇತ್ರಗಳಲ್ಲಿ ಕೆಲಸಮಾಡಿ ಯೋಗ್ಯತೆಯನ್ನು ಸಂಪಾದಿಸಿದ್ದ ಸಮಸ್ತರನ್ನೂ ಅವರು ಪ್ರೀತ್ಯಾದರಗಳಿಂದ ಬರಮಾಡಿಕೊಂಡು ಕೃಪೆತೋರಿ ಪುರಸ್ಕರಿಸುತ್ತಿದ್ದರು. ಅವರಿಂದಲೂ, ಅವರ ಮೇಲ್ಪಂಕ್ತಿಯನ್ನೇ ಅನುಸರಿಸುತ್ತಿದ್ದ ಶ್ರೀಮದ್ಯುವರಾಜ ಶ್ರೀ ಕಂಠೀರವ ನರಸಿಂಹರಾಜ

ಒಡೆಯರವರಿಂದಲೂ ಈ ವಿಧದಲ್ಲಿ ದೊರೆತ ಪ್ರೋತ್ಸಾಹವೂ, ಆ ಪ್ರೋತ್ಸಾಹಕ್ಕೆ ಭೂಷಣ ಪ್ರಾಯವಾಗಿ ಜನರನ್ನು ಮುಗ್ಧಗೊಳಿಸುತ್ತಿದ್ದ ವಿನಯವೂ ಅಪರಿಮಿತವಾಗಿದ್ದುವು.

ಈ ಬಗೆಯ ಅವ್ಯಾಜ ಪ್ರೇಮಿಗಳೂ ವಿನಯ ಧನರೂ ಪ್ರಜಾವತ್ಸಲರೂ ಮಹಾನುಭಾವರೂ ಆದರ್ಶಪ್ರಭುಗಳೂ ಆಗಿದ್ದವರು, ನಮ್ಮನ್ನಾಳಿದ ಮಹಾಸ್ವಾಮಿಯವರಾದ ಶ್ರೀ ಮನ್ನಾಲ್ವಡಿ ಶ್ರೀ ಕೃಷ್ಣರಾಜೇಂದ್ರ ಭೂಪಾಲರು. ಅವರ ಸದ್ಗುಣಗಳನ್ನು ನೆನೆದು ನೆನೆದು ಅವರ ಉಪಕಾರಗಳನ್ನು ಸ್ಮರಿಸದ ಪ್ರಜೆಗಳಿಲ್ಲ. ಅವರ ಧವಳ ಕೀರ್ತಿಯ ತನಿಬೆಳಕಿನಿಂದ ಮಿನುಗಿ ಹೆಮ್ಮೆಪಡದ ಹೃದಯವಿಲ್ಲ.



ಶ್ರೀಮನ್ಮಹಾರಾಜರವರ ಹುಜೂರು ಸೆಕ್ರೆಟರಿಯವರಾದ
ರಾಜಸಭಾಭೂಷಣ ಶ್ರೀಮಾನ್ ಟಿ. ತಂಬೂಚೆಟ್ಟಿ, ಬಿ.ಎ., ಓ.ಬಿ.ಇ. ಅವರು

# ಹದಿನೈದನೆಯ ಅಧ್ಯಾಯ

## ಆಳುವ ಮಹಾಸ್ವಾಮಿಯವರು

"ಆಕಾರ ಸದೃಶ ಪ್ರಜ್ಞಃ ಪ್ರಜ್ಞಯಾ ಸದೃಶಾಗಮಃ ।
ಆಗಮೈಸ್ಸದೃಶಾರಂಭಃ ಪ್ರಾರಂಭ ಸದೃಶೋದಯಃ ॥"

"ರಾಜಾ ಪ್ರಜಾನಾಂ ಪ್ರಾಣಂ ವೈ"
"ಚಿರಮಭಿವರ್ಧತಾಂ ಯದುಸಂತಾನ ಶ್ರೀಃ"

**ಖರೀತಾ ದರ್ಬಾರು**

ಶ್ರೀಮದ್ಯುವರಾಜ ಶ್ರೀ ಜಯ ಚಾಮರಾಜೇಂದ್ರ ಒಡೆಯರ್ ಬಹದ್ದೂರರವರೇ ಮೈಸೂರು ಸಂಸ್ಥಾನದ ಸಿಂಹಾಸನಾಧಿಕಾರಿಗಳಾದ ಶ್ರೀಮನ್ಮಹಾರಾಜರವರೆಂದು ಚಕ್ರವರ್ತಿ ಸಾರ್ವಭೌಮರವರು ಅಂಗೀಕರಿಸಿದರು. ಅದನ್ನು ಶೃತಪಡಿಸಿ ವೈಸ್ರಾಯಿಯವರು ಕಳುಹಿಸಿದ ಖರೀತವನ್ನು, ಬ್ರಿಟಿಷ್ ರೆಸಿಡೆಂಟರವರು ೧೯೪೦ನೆಯ ಇಸವಿ ಆಗಸ್ಟ್ ೨೯ನೆಯ ತಾರೀಖಿನ ದಿನ ಮೈಸೂರು ಅರಮನೆಯ ಅಂಬಾವಿಲಾಸದಲ್ಲಿ ನಡೆದ ಖರೀತಾ ದರ್ಬಾರಿನಲ್ಲಿ ವೈಸ್ರಾಯಿಯವರ ಖಿಲ್ಲತ್ತು ಮುತ್ತಿನ ಕಂಠಿಗಳೊಡನೆ ಮಹಾಸ್ವಾಮಿಯವರಿಗೆ ಸಮರ್ಪಿಸಿದರು. ವೈಸ್ರಾಯಿಯವರಿಗೆ ಕಳುಹಿಸುವುದಕ್ಕಾಗಿ ಮಹಾಸ್ವಾಮಿಯವರ ಖಿಲ್ಲತ್ತು ಬ್ರಿಟಿಷ್ ರೆಸಿಡೆಂಟರವರಿಗೆ ಸಮರ್ಪಿತವಾಯಿತು. ಆ ದಿನದ ದರ್ಬಾರಿಗೆ ದಿವಾನ್‌ರವರೂ, ಸಚಿವರುಗಳೀರ್ವರೂ, ಮುಖ್ಯ ನ್ಯಾಯಾಧೀಶರೂ, ಹುಜೂರು ಸೆಕ್ರೆಟರಿಯವರೂ, ಚೀಫ್‌ಸೆಕ್ರೆಟರಿಯವರು ಮುಂತಾದ ಭಾರಿ ಅಧಿಕಾರಿಗಳೂ ದಯಮಾಡಿದ್ದರು. ಬ್ರಿಟಿಷ್ ರೆಸಿಡೆಂಟರವರು ಒಂದು ಭಾಷಣವನ್ನು ಮಾಡಿ, ಆಳಿದ ಮಹಾಸ್ವಾಮಿಯವರ ಗುಣಕಥನಮಾಡಿ, ಅವರ ರಾಜ್ಯಭಾರ ಕೌಶಲ್ಯವನ್ನು ಕೊಂಡಾಡಿ, ಆಳುವ ಮಹಾಸ್ವಾಮಿಯವರ ಗುಣ ಪ್ರಶಂಸೆಮಾಡಿ, ಮಹಾಪ್ರಭುಗಳವರ ರಾಜ್ಯಭಾರವು ಯಶಸ್ವಿಯಾಗಲೆಂದು ಹಾರೈಸಿ ಶುಭವನ್ನು ಕೋರಿದರು.

ಖರೀತಾ ದರ್ಬಾರು ನಡೆದ ದಿನ ಬ್ರಿಟಿಷ್ ರೆಸಿಡೆಂಟರವರು ತಮ್ಮ ಭಾಷಣದಲ್ಲಿ ಸೂಚಿಸಿದಂತೆ ಆಳಿದ ಮಹಾಸ್ವಾಮಿಯವರನ್ನು ರಾಜಭಕ್ತಿ ವಿಶ್ವಾಸಗಳಿಂದ ಓಲೈಸುತ್ತಿದ್ದ ಸಚಿವ ಮಂಡಲವೇ ಆಳುವ ಮಹಾಸ್ವಾಮಿಯವರ ಸೇವೆಗೆ ಸಿದ್ಧವಾಗಿನಿಂತಿದೆ. ಸರ್ಕಾರಿ ಆಡಳಿತವನ್ನು ದಿವಾನ್‌ರವರಾದ ಅಮೀನ್-ಉಲ್-ಮುಲ್ಕ್ ಸರ್ ಮಿರ್ಜಾ ಎಂ. ಇಸ್ಮಾಯಿಲ್

ರವರೂ, ಪ್ರಥಮ ಸಚಿವರಾದ ರಾಜಮಂತ್ರಪ್ರವೀಣ ಶ್ರೀಮಾನ್ ಎನ್. ಮಾಧವರಾಯರವರೂ, ದ್ವಿತೀಯ ಸಚಿವರಾದ ರಾಜಮಂತ್ರ ಪ್ರವೀಣ ಶ್ರೀಮಾನ್ ಕೆ. ವಿ. ಅನಂತರಾಮನ್ ರವರೂ ನಿರ್ವಹಿಸುತ್ತಿದ್ದಾರೆ. ಅರಮನೆಯ ಆಡಳಿತವನ್ನು ಹುಜೂರು ಸೆಕ್ರೆಟರಿಯವರಾದ ರಾಜಸಭಾಭೂಷಣ ಟಿ. ತಂಬೂಚೆಟ್ಟಿ, ಓ.ಬಿ.ಇ., ಅವರು ನಿರ್ವಹಿಸುತ್ತಿದ್ದಾರೆ. ಸರ್ ಚಾರಲ್ಸ್ ಟಾಡ್‌ಹಂಟರ್, ಕೆ.ಸಿ.ಎಸ್.ಐ., ಅವರು ಆಳುವ ಮಹಾಸ್ವಾಮಿಯವರ ಪ್ರೈವೇಟ್ ಸೆಕ್ರೆಟರಿಯವರಾಗಿದ್ದಾರೆ. ಯಾವ ದೃಷ್ಟಿಯಿಂದಲೇ ನೋಡಿದರೂ, ಈ ಸಚಿವ ಮಂಡಲವು ಮೈಸೂರಿನವರು ಹೆಮ್ಮೆಪಡುವಂತಿದೆ. ಮುಂದಿನ ಜೂನ್ ತಿಂಗಳಿನಿಂದ ನೂತನ ರಾಜಕೀಯ ಸುಧಾರಣೆಗಳ ಮೇರೆಗೆ ಮತ್ತೀರ್ವರು ಸಚಿವರ ಮತ್ತು ನ್ಯಾಯವಿಧಾಯಕ ಸಭಾಧ್ಯಕ್ಷರ ಸೇವೆಯೂ ಆಳುವ ಮಹಾಸ್ವಾಮಿಯವರಿಗೆ ಒದಗುವುದಾಗಿದೆ. ಆಳುವ ಮಹಾಸ್ವಾಮಿಯವರು ಪ್ರಭು ಪದವಿಯನ್ನಲಂಕರಿಸಿ ಇನ್ನೂ ಸ್ವಲ್ಪಕಾಲವೇ ಕಳೆದಿದ್ದರೂ ಆಗಲೇ ಅವರ ನೂತನ ರಾಜ್ಯಭಾರವು ತನ್ನ ವೈಶಿಷ್ಟ್ಯದಿಂದ ಪ್ರಭಾವಶಾಲಿಯಾಗಿ ಪರಿಣಮಿಸಿದೆ. ಮಹಾಪ್ರಭುಗಳವರು ಅಮಿತವಾದ ಶಕ್ತಿಸಾಮರ್ಥ್ಯಗಳಿಂದಲೂ, ಅಪಾರವಾದ ಪ್ರತಿಭೆ ಪಾಂಡಿತ್ಯಗಳಿಂದಲೂ, ಅಸಾಧಾರಣವಾದ ಪ್ರಜಾ ವಾತ್ಸಲ್ಯದಿಂದಲೂ ಕೂಡಿ ದೇಶೋನ್ನತಿ ಸಾಧನೆಯನ್ನು ಮುಂದುವರಿಸಲು ಅವಿಶ್ರಾಂತರಾಗಿ ಶ್ರಮಿಸುತ್ತಿದ್ದಾರೆ. ಕಾರ್ಯದಕ್ಷರೂ ದೇಶಾಭಿಮಾನಿಗಳೂ ರಾಜಭಕ್ತರೂ ಆದ ಮಹನೀಯರಿಂದ ಕೂಡಿ ಪರಿಶೋಭಿಸುತ್ತಿರುವ ಸಚಿವ ಮಂಡಲದಿಂದ ಮಹಾಪ್ರಭುಗಳವರ ಉದ್ದೇಶವು ಸಂಪೂರ್ಣವಾಗಿ ನೆರವೇರಲನುಕೂಲಿಸುವಂತೆ ಉತ್ತಮ ರೀತಿಯಲ್ಲಿ ಸಂಸ್ಥಾನಕ್ಕೆ ಇನ್ನು ಮುಂದೆ ಸಪ ಸೇವೆಯು ಸಲ್ಲುತ್ತಾ ಬರಲಿ!

**ಸಚಿವ ಮಂಡಲ**

ಮಹಾಮಾತೃಶ್ರೀಯವರಾದ ಶ್ರೀ ಮಹಾರಾಣಿ ಶ್ರೀ ಲಕ್ಷ್ಮೀ ವಿಲಾಸ ಸನ್ನಿಧಾನದವರು ಇದೇ ವಿಕ್ರಮನಾಮ ಸಂವತ್ಸರ ಭಾದ್ರಪದ ಶುದ್ಧ ಸಪ್ತಮೀ (೧೯೪೦ನೆಯ ಇಸವಿ ಸೆಪ್ಟೆಂಬರು ತಿಂಗಳು ೮ನೆಯ ತಾರೀಖು) ಭಾನುವಾರದ ಶುಭ ದಿನ ತಮ್ಮ ಕುಮಾರರು ಶ್ರೀಮನ್ಮಹಾರಾಜ **ಶ್ರೀ ಜಯ ಚಾಮರಾಜೇಂದ್ರ ಒಡೆಯರ್** ಬಹದ್ದೂರರವರ ಪಟ್ಟಾಭಿಷೇಕ ಮಹೋತ್ಸವವು ನೆರವೇರಬೇಕೆಂದು

**ಪಟ್ಟಾಭಿಷೇಕ ಮಹೋತ್ಸವ**

ಅಪ್ಪಣೆಮಾಡಿ, ಲಗ್ನವನ್ನು ಕಟ್ಟಿಸಿ, ಲಗ್ನಪತ್ರಿಕೆಗಳನ್ನು ಕಳುಹಿಸಿದ್ದರು. ಅದಕ್ಕೆ ಹಿಂದಿನ ದಿನವೇ (೭-೯-೧೯೪೦) ಶ್ರೀ ಚಾಮುಂಡೇಶ್ವರೀ ಅಮ್ಮನವರ ಕಲಶವೂ, ಶ್ರೀ ಉತ್ತನಹಳ್ಳಿ ಜ್ವಾಲಾಮುಖೀ ಅಮ್ಮನವರ ಕಲಶವೂ ಸ್ಥಾಪನೆಯಾಗಿ, ತೀರ್ಥೋದಕಸ್ನಾನ, ದೀಕ್ಷಾವಸ್ತ್ರಧಾರಣ, ಕಂಕಣ ಧಾರಣ ಮುಂತಾದ ಶಾಸ್ತ್ರವಿಧಿಗಳೂ, ೯,೦೦೦ ಹೋಮ ಹವನಗಳೂ, ಪೂಜಾದಿಗಳೂ, ನೆರವೇರಿದ್ದುವು. ೧೯೪೦ನೆಯ ಇಸವಿ ಸೆಪ್ಟೆಂಬರ್ ತಿಂಗಳು ೭, ೮, ೯ ಮತ್ತು ೧೦ನೆಯ ತಾರೀಖುಗಳು ಪಟ್ಟಾಭಿಷೇಕ ಮಹೋತ್ಸವದ ಸಂತೋಷಾರ್ಥವಾದ ರಜಾದಿನಗಳೆಂಬು ದಾಗಿ ಸರ್ಕಾರಿ ಗೆಜೆಟ್ಟಿನ ವಿಶೇಷ ಪತ್ರಿಕೆಯೊಂದು ಪ್ರಕಟವಾಯಿತು.

ಪಟ್ಟಾಭಿಷೇಕ ಮಹೋತ್ಸವದ ಶುಭ ದಿನ ಒಟ್ಟು ಮೈಸೂರು ಸಂಸ್ಥಾನವೇ ಆನಂದದಿಂದ ಪುಳಕಿತವಾಯಿತು. ಮೈಸೂರು ನಗರದ ಆನಂದ ವೈಭವಗಳಂತೂ ಮತ್ತೂ ಅಧಿಕವಾಗಿದ್ದುವು. ಎಲ್ಲಿ ಯಾವ ಕಟ್ಟಡದಮೇಲೆ ನೋಡಿದರೂ ಮೈಸೂರು ಸಂಸ್ಥಾನದ ಗಂಡಭೇರುಂಡ ಧ್ವಜವು ಹಾರಾಡುತ್ತ, ಸಂಸ್ಥಾನದ ಹೆಮ್ಮೆಯನ್ನು ನೆನಪಿಗೆ ತರುತ್ತಿದ್ದಿತು. ಅರಮನೆಯ ಬಳಿಯ ಅಲಂಕಾರ ವೈಭವವೂ, ಪ್ರಜಾಸಂದಣಿಯ ಆನಂದ ಕೋಲಾಹಲವೂ, ಪೋಲೀಸಿನವರ ಮತ್ತು ಸೈನಿಕರ ವಿವಿಧ ವರ್ಣಗಳ ಉಡುಪುಗಳೂ, ಆನೆಗಳು ಕುದುರೆಗಳು ಮುಂತಾದುವುಗಳ ಶೃಂಗಾರವೂ, ಅಲ್ಲಿಯ ನೋಟವನ್ನು ಮತ್ತಷ್ಟು ಕಳೆಯೇರಿಸಿದುವು.

ಅಂದು ಅರಮನೆಯಲ್ಲಿ ಉಷಃಕಾಲದಿಂದಲೇ ಕಾರ್ಯಾರಂಭ ವಾಯಿತು. ಐದೂವರೆ ಘಂಟೆಗೆ ಸರಿಯಾಗಿ ಲಕ್ಷ್ಮೀವಿಲಾಸ ತೊಟ್ಟಿ ಯಲ್ಲಿ ಶ್ರೀಮನ್ಮಹಾರಾಜ ಶ್ರೀ ಜಯ ಚಾಮರಾಜೇಂದ್ರ ಒಡೆಯರ್ ಬಹದ್ದೂರರವರಿಗೂ ಶ್ರೀ ಮಹಾರಾಣಿ ಶ್ರೀ ಸತ್ಯಪ್ರೇಮ ದೇವಿಯ ವರಿಗೂ ಏಳುಮಂದಿ ಕಟ್ಟಲೆ ಮುತ್ತೈದೆಯರಿಂದ ಎಣ್ಣೆಯಶಾಸ್ತ್ರವಾಯಿತು. ಗಂಗಾ ಯಮುನಾ ಕಾವೇರೀ ಕಪಿಲಾ ಮುಂತಾದ ಪುಣ್ಯ ನದಿಗಳ ತೀರ್ಥೋದಕ ಸ್ನಾನವೂ, ಸುಗಂಧೋದಕ ಸ್ನಾನವೂ ನಡೆದುವು. ಮಂಗಳಸ್ನಾನವಾದಮೇಲೆ ಮಹಾರಾಜ ದಂಪತಿಗಳು ದಿವ್ಯವಸ್ತ್ರಾಭರಣ ಗಳನ್ನು ಧರಿಸಿದರು. ಬೆಳಗ್ಗೆ ಅರಮನೆಯ ಬತೇರಿಯಿಂದ ೨೧ ಕುಶಾಲು ತೋಪುಗಳು ಮೊಳಗಿದುವು. ಶ್ರೀಮನ್ಮಹಾರಾಜ ಶ್ರೀ ಜಯ ಚಾಮ ರಾಜೇಂದ್ರ ಒಡೆಯರವರು, ಬೆಳಗ್ಗೆ ಏಳೂವರೆ ಘಂಟೆಗೆ ಕ್ಷಾತ್ರ ಧರ್ಮವಾದ ಪ್ರಜಾ ರಕ್ಷಣದ ಸಂಕೇತವಾಗಿ ಬಿಲ್ಲುಬಾಣಗಳನ್ನು ಹಿಡಿದು ಕಲ್ಯಾಣ ಮಂಟಪಕ್ಕೆ ದಯಮಾಡಿ, ಇಷ್ಟದೇವತಾ ಕಲಶಗಳಿಗೆ

ಪೂಜೆಮಾಡಿ, ಯಜ್ಞೇಶ್ವರ ಪ್ರದಕ್ಷಿಣೆ ಮಾಡಿದರು. ಹೋಮಕುಂಡದ ಪೂರ್ವಕ್ಕೆ ಪೂರ್ವಶಿರಸ್ಸಾಗಿ ಹಾಕಿದ್ದ ವ್ಯಾಘ್ರಾಜಿನದಮೇಲೆ ಸ್ಥಾಪಿತವಾಗಿದ್ದ ಭದ್ರಾಸನದಮೇಲೆ ಮಂಡಿಸಿದರು. ಹಿಂದಿನ ದಿನ ಹೋಮಾದಿಗಳನ್ನು ನೆರವೇರಿಸಿದ್ದ ಹದಿನಾರು ಮಂದಿ ಬ್ರಾಹ್ಮಣರು ಚತುರ್ವೇದಗಳ ಮಂತ್ರಗಳಿಂದ ಮಾರ್ಜನ ಮಾಡಿದರು. ನವರತ್ನ ಖಚಿತವಾದ ಚಿನ್ನದ ಉಂಗುರವನ್ನು ಮಹಾಪ್ರಭುಗಳವರ ಶಿರಸ್ಸಿನ ಮೇಲೆ ಹಿಡಿದು, ಅದರ ಮೂಲಕ ಮಾರ್ಜನ ನಡೆದು ಪಟ್ಟಾಭಿಷೇಕವಾಯಿತು. ಅನಂತರ ಜೋಯಿಸರು ಮಹಾಪ್ರಭುಗಳವರಿಗೂ, ಮುತ್ತೈದೆಯರು ಪಟ್ಟಮಹಿಷಿಯವರಾದ ಶ್ರೀ ಮಹಾರಾಣಿ ಶ್ರೀ ಸತ್ಯಪ್ರೇಮ ದೇವಿಯವರಿಗೂ ಚಿನ್ನದ ಪಟ್ಟಿಯನ್ನು ಹಣೆಯ ಮೇಲ್ಭಾಗಕ್ಕೆ ಕಟ್ಟಿ, ಪಟ್ಟ ಬಂಧನವನ್ನು ನೆರವೇರಿಸಿದರು. ಗೋದಾನ, ಸುವರ್ಣದಾನ, ನಿರೀಕ್ಷಿತಾಜ್ಯದಾನ, ವಸ್ತ್ರ ಪ್ರತಿಮಾದಾನ, ಮುಂತಾದ ದಾನಗಳು ನಡೆದುವು. ಆಚಾರ್ಯ ಪೂಜೆಯೂ, ಬೃಹಸ್ಪತಿ ಪೂಜೆಯೂ ಆದ ತರುವಾಯ ಶ್ರೀಮನ್ಮಹಾರಾಜರವರ ಗೋರೋಚನಾದಿ ದ್ವಾದಶ ಮಂಗಳ ದ್ರವ್ಯ ಸ್ಪರ್ಶನ ಧಾರಣಗಳು ನಡೆದಮೇಲೆ ಅಂತಃಪುರಕ್ಕೆ ಚಿತ್ತೈಸಿ ಮಹಾಮಾತೃಶ್ರೀ ಲಕ್ಷ್ಮೀವಿಲಾಸ ಸನ್ನಿಧಾನದವರಿಗೂ, ಮಾತೃಶ್ರೀ ಶ್ರೀ ಮದ್ಯವರಾಣಿಯವರಿಗೂ ನಮಸ್ಕಾರಮಾಡಿದರು. ಅನಂತರ, ಮಹಾಸ್ವಾಮಿಯವರು ಸಿಂಹಾಸನಾರೋಹಣಕ್ಕಾಗಿ ದಿವ್ಯ ವಸ್ತ್ರಾಭರಣಗಳಿಂದ ಅಲಂಕೃತರಾಗಿ ಹತ್ತು ಘಂಟೆಯ ವೇಳೆಗೆ "ರೇಡಿಯೋ" ಭಾಷಣದ ಮೂಲಕ ಇಂಗ್ಲಿಷಿನಲ್ಲಿಯೂ ಕನ್ನಡದಲ್ಲಿಯೂ ಪ್ರಜೆಗಳಿಗೆ ಮನಮುಟ್ಟುವಂತೆ ತಮ್ಮ ಸಂದೇಶವನ್ನು ದಯಪಾಲಿಸಿದರು. ಆ ಸಂದೇಶದ ಅನೇಕ ಸಾವಿರ ಪ್ರತಿಗಳು ಅಚ್ಚಾಗಿ ಸಂಸ್ಥಾನದ ನಾನಾ ಕಚೇರಿಗಳಿಗೂ ನಾನಾ ಸಂಸ್ಥೆಗಳಿಗೂ ಹೋಗಿದ್ದುವು. ಮಹಾಪ್ರಭುಗಳವರು ಪಟ್ಟಾಭಿಷಿಕ್ತರಾಗಿ ಸಿಂಹಾಸನಾರೋಹಣಮಾಡಿದ ಪ್ರಸಿದ್ಧಿಪತ್ರಿಕೆಗಳ ಪ್ರತಿಗಳೂ ಅದೇರೀತಿ ಹೋಗಿದ್ದುವು. ಎಲ್ಲೆಲ್ಲಿಯೂ ಸಭೆಗಳು ನಡೆದು ಮಹಾಪ್ರಭುಗಳ ಗುಣಗಾನವೂ, ರಾಜಾಶೀರ್ವಾದವೂ, ಸಂದೇಶದ ಮತ್ತು ಪ್ರಸಿದ್ಧಿಪತ್ರಿಕೆಗಳ ವಾಚನವೂ ನಡೆದುವು. ಮಹಾಪ್ರಭುಗಳ ಸಂದೇಶವಾಣಿಗಳನ್ನಾಲಿಸಿ ಪ್ರಜಾಕೋಟಿಯೇ ಆನಂದಿಸಿತು. ಸಂದೇಶದ "....ನಾನು ನನ್ನ ಹಿರಿಯರ ಸಿಂಹಾಸನವನ್ನೇರುವ ಈ ವ್ರತ ಸಮಾರಂಭವನ್ನು, ನನ್ನನ್ನೂ ನನ್ನ ಜೀವಮಾನವನ್ನೂ ನನ್ನ ಸಕಲ ಸರ್ವಸ್ವವನ್ನೂ ಮೈಸೂರು ಸಂಸ್ಥಾನದ ಜನರ ಸೇವೆಗಾಗಿ ಸಮರ್ಪಣ ದೀಕ್ಷೆಯೆಂಬುದಾಗಿ ಎಣಿಸುತ್ತೇನೆ. ಇದರಲ್ಲಿ ನನ್ನೊಬ್ಬನ ಪ್ರಯತ್ನ

ವೊಂದೇ ಜಯಶಾಲಿಯಾಗಲಾರದೆಂದು ನಾನು ಚೆನ್ನಾಗಿ ಅರಿತಿದ್ದೇನೆ. ನಿಮ್ಮ ನೆರವು, ನಿಮ್ಮ ಸಹಕಾರ, ನಿಮ್ಮ ನಂಬಿಕೆ, ನಿಮ್ಮ ಪ್ರೇಮ, ನನಗೆ ಬೇಕು" ಎಂಬ ನುಡಿಗಳಂತೂ ಪ್ರಜೆಗಳನ್ನು ಕುಣಿಸಿ ತಣಿಸಿದುವು.

ಅರಮನೆಯ ಕಲ್ಯಾಣ ಮಂಟಪದಲ್ಲಿ ಸಿಂಹಾಸನಾರೋಹಣಕ್ಕೆ ಸಮಸ್ತ ಸಿದ್ಧತೆಗಳೂ ನಡೆದು, ಪೂರ್ವಶಿರಸ್ಸಾದ ವ್ಯಾಘ್ರಾಜಿನದ ಮೇಲೆ ಪೂರ್ವಾಭಿಮುಖವಾಗಿ ಸಿಂಹಾಸನವು ಸ್ಥಾಪಿತವಾಯಿತು. ಬಳಿಕ, ಆಹ್ವಾನಿತರಾಗಿದ್ದ ದರ್ಬಾರಿಗಳೆಲ್ಲರೂ ಅಲ್ಲಿಗೆ ದಯಮಾಡಿದರು. ಕಲ್ಯಾಣ ಮಂಟಪದ ಹೊರಗಡೆ ಸುಶ್ರಾವ್ಯವಾಗಿ ವಾದ್ಯಗಳು ಮೊಳಗುತ್ತಿದ್ದುವು. ಪ್ರಭುದರ್ಶನಾಕಾಂಕ್ಷಿಗಳಾಗಿ ಸಮಸ್ತರೂ ಹರ್ಷಕುತೂಹಲಗಳಿಂದ ಮಹಾಸ್ವಾಮಿಯವರ ಆಗಮನವನ್ನು ನಿರೀಕ್ಷಿಸುತ್ತಿದ್ದರು. ಅಲಂಕೃತ ಚತುರ್ಗಜ ಚತುರಶ್ವ ಚತುರ್ವೃಷಭಗಳೂ, ಮನೋಹರವಾಗಿ ಅಲಂಕೃತ ವಾಗಿದ್ದ ಪಟ್ಟದ ಆನೆ ಪಟ್ಟದ ಕುದುರೆ ಪಟ್ಟದ ಹಸು, ರಥ, ಶ್ವೇತಛತ್ರ, ಬಿರುದು ಬಾವಲಿಗಳು ಮೊದಲಾದುವೂ ಶೋಭಿಸುತ್ತಿದ್ದುವು. ಹತ್ತೂ ಕಾಲು ಘಂಟೆಗೆ ಸರಿಯಾಗಿ ಮಹಾಪ್ರಭುಗಳವರು ವಿಶ್ವೇಶ್ವರ ದರ್ಶನ ಮಾಡಿಕೊಂಡು, ಪರಾಕುಗಳಾಗುತ್ತಿರುವಲ್ಲಿ ಅಂಗರಕ್ಷಕರಿಂದೊಡಗೂಡಿ ಕಲ್ಯಾಣ ಮಂಟಪಕ್ಕೆ ದಯಮಾಡಿದರು. ನಯನ ಮನೋಹರವಾದ ಅವರ ರೂಪವು ರತ್ನಾಭರಣಗಳಿಂದ ಮತ್ತಷ್ಟು ಸೊಬಗೇರಿ ಶೋಭಿಸಿತು. ಮಹಾಪ್ರಭುಗಳವರು ಉತ್ತರಾಭಿಮುಖವಾಗಿ ಸಿಂಹಾಸನದ ಬಳಿಯಲ್ಲಿ ನಿಂತು ಕಲ್ಪೋಕ್ತ ರೀತಿಯಲ್ಲಿ ಪೂಜೆಮಾಡಿ ಪ್ರದಕ್ಷಿಣೆಯನ್ನೂ ಶಿರಬಾಗಿ ಪ್ರಾರ್ಥನೆಯನ್ನೂ ಸಲ್ಲಿಸಿ ಮಂತ್ರಘೋಷವಾಗುತ್ತಿರುವಲ್ಲಿ, ತಮ್ಮ ಸೋದರಮಾವಂದಿರಾದ ಶ್ರೀಮಾನ್ ಶ್ರೀಕಂಠ ಲಕ್ಷ್ಮೀಕಾಂತರಾಜ ಅರಸಿನವರ ಹಸ್ತಲಾಘವವನ್ನು ಸ್ವೀಕರಿಸಿ ವೈರಾಜ ಮುಹೂರ್ತದಲ್ಲಿ ರತ್ನಸಿಂಹಾಸನಾರೋಹಣಮಾಡಿದರು. ಮಂಗಳವಾದ್ಯಗಳು ಭೋರ್ಗರೆ ದುವು. ಅರಮನೆಯ ಬತೇರಿಯಿಂದ ೨೧ ಕುಶಾಲು ತೋಪುಗಳು ಮೊಳಗಿದುವು. ಹದಿನಾರು ಮಂದಿ ಬ್ರಾಹ್ಮಣರೂ ಪುರೋಹಿತರೂ ಕಲಶೋದಕದಿಂದ ಮಾರ್ಜನ ಮಾಡಿದರು. ಪಟ್ಟದ ಆನೆ, ಪಟ್ಟದ ಕುದುರೆ, ಮುಂತಾದುವುಗಳಿಗೆ ಮಂತ್ರೋದಕ ಪ್ರೋಕ್ಷಣೆಯಾಯಿತು. ಅನಂತರ, ಅಮಾತ್ಯರಾದ ಸರ್ ಮಿರ್ಜಾ ಎಂ. ಇಸ್ಮಾಯಿಲ್‌ರವರೂ, ಸೇನಾಧಿಪರಾದ ರಾಜಸೇನಾಭೂಷಣ ಶ್ರೀಮಾನ್ ಎ. ವಿ. ಸುಬ್ರಹ್ಮಣ್ಯ ರಾಜ ಅರಸಿನವರೂ, ಕೋಶಾಧ್ಯಕ್ಷರಾದ ರಾಜಸಭಾಭೂಷಣ ಶ್ರೀಮಾನ್ ಟಿ. ತಂಬೂಚೆಟ್ಟಿಯವರೂ ಮಂತ್ರೋದಕದಿಂದ ಮಹಾಸ್ವಾಮಿಯವರಿಗೆ

ಮಾರ್ಜನ ಮಾಡಿದರು. ದರ್ಬಾರು ಬಕ್ಷಿಯವರಾದ ಶ್ರೀಮಾನ್ ಎಚ್. ಎಲ್. ದೇವರಾಜ ಅರಸಿನವರು ಶ್ರೀಮನ್ಮಹಾರಾಜರವರ ವಂಶಾವಳಿಯನ್ನು ಕನ್ನಡದಲ್ಲಿ ಪಠಿಸಿ, ಖಿಲ್ಲತ್ತಿನ ಮರ್ಯಾದೆಯನ್ನು ಸ್ವೀಕರಿಸಿ, ಮಹಾಪ್ರಭುಗಳವರಿಗೆ ವಂದನೆಮಾಡಿದರು. ದಿವಾನ್‌ರವರೇ ಮುಂತಾದ ಹನ್ನೆರಡು ಮಂದಿಗಳು ನಜರನ್ನೊಪ್ಪಿಸಿದರು. ದೇವಾಲಯ ಗಳಿಂದ ಬಂದಿದ್ದ ಪ್ರಸಾದವನ್ನೂ ಮಠಗಳಿಂದ ಬಂದಿದ್ದ ಫಲಮಂತ್ರಾಕ್ಷತೆ ಗಳನ್ನೂ ಮಹಾಪ್ರಭುಗಳವರು ಭಕ್ತಿಯಿಂದ ಸ್ವೀಕರಿಸಿದರು. ದರ್ಬಾರಿ ಗಳಿಂದ ಮುಜರೆ ನಡೆಯಿತು. ಭರತನಾಟ್ಯವಾಯಿತು. ಗಾಯಕ ಶಿಖಾಮಣಿ ಶ್ರೀಮಾನ್ ಮುತ್ತಯ್ಯ ಭಾಗವತರು ಗಾಯನ ಮಾಡಿದರು. ದರ್ಬಾರಿಗಳೆಲ್ಲರಿಗೂ ಪುಷ್ಪಹಾರ ತಾಂಬೂಲಗಳಾದನಂತರ ಮಹಾಪ್ರಭು ಗಳವರು ಅಂತಃಪುರಕ್ಕೆ ತೆರಳಿ ಮಾತೃಶ್ರೀಯವರುಗಳೀರ್ವರಿಗೂ ನಮಸ್ಕಾರಮಾಡಿದರು. ಅನಂತರ ಆರತಿಯಾಯಿತು. ಆ ದಿನವೂ ಮಾರನೆಯ ಎರಡು ದಿನಗಳೂ ಸೆಜ್ಜೆಯಲ್ಲಿ ಸಿಂಹಾಸನಾರೋಹಣಮಾಡಿ ಮಹಾಪ್ರಭುಗಳವರು ದರ್ಬಾರನ್ನು ನಡೆಯಿಸಿದರು. ಎತ್ತುಗಳನ್ನು ಹೂಡಿದ್ದ ಬೆಳ್ಳಿಯ ರಥದಲ್ಲಿ ಸೋಮವಾರ ಸಾಯಂಕಾಲ ದೇವಾಲಯ ಗಳಿಗೆ ದಯಮಾಡಿದ ಮಹಾಪ್ರಭುಗಳವರನ್ನು ನೋಡಿ ಪ್ರಜೆಗಳು ನಲಿದರು.

ಶ್ರೀ ವಿಕ್ರಮನಾಮ ಸಂವತ್ಸರದ ಭಾದ್ರಪದ ಶುದ್ಧ ಸಪ್ತಮೀ ಭಾನುವಾರವು ಮೈಸೂರು ಸಂಸ್ಥಾನದ ನೂತನ ಪ್ರಭುಗಳವರಾದ

**ಈಗಿನ ಮಹಾಪ್ರಭುಗಳವರು**

ಶ್ರೀ ಜಯ ಚಾಮರಾಜೇಂದ್ರ ಒಡೆಯರ್ ಬಹದ್ದೂರರವರ ಪಟ್ಟಾಭಿಷೇಕ ಮಹೋತ್ಸವದ ಶುಭ ದಿನ. ಇದು ನಮ್ಮ ನಾಡಿನ ಇತಿಹಾಸದಲ್ಲಿ ಚಿರಕಾಲ ಬೆಳಗುವ ಶುಭೋದಯದ ಮಂಗಳ ದಿನ; ದೇಶದ ಅಭ್ಯುದಯ ಸಾಧನೆಯಲ್ಲಿ ನೂತನ ಶಕವೊಂದನ್ನು ಸಮಾರಂಭಣಗೊಳಿಸಿದ ಪವಿತ್ರದಿನ. ಮಹಾಸ್ವಾಮಿಯವರ ನಾಮ ಧೇಯವು ಜಯ ಶಬ್ದ ಸಮನ್ವಿತವಾದ ಶ್ರೀ ಜಯ ಚಾಮರಾಜೇಂದ್ರ ಒಡೆಯರ್ ಬಹದ್ದೂರರವರೆಂದು. ಪವಿತ್ರವಾದ ಈ ನಾಮಧೇಯವುಳ್ಳ ನಮ್ಮ ಪ್ರಭುವರ್ಯರಿಗೆ, ಅವರು ಹಿಡಿದ ಕಾರ್ಯಗಳಲ್ಲೆಲ್ಲ ಜಯ ಮಾಲೆಗಳೇ ಲಭಿಸುತ್ತ ಬರಲಿ!

ಮಹಾಪ್ರಭುಗಳವರಿಗೆ ಈಗ ಇಪ್ಪತ್ತೊಂದೇ ವರ್ಷ ವಯಸ್ಸು. ಈ ಚಿಕ್ಕವಯಸ್ಸಿಗೇ ಅವರು ತಮ್ಮ ವಯಸ್ಸಿಗೆ ಮೀರಿದಷ್ಟುಮಟ್ಟಿಗೆ

ಜ್ಞಾನವನ್ನೂ ಅನುಭವವನ್ನೂ ಪಡೆದಿದ್ದಾರೆ. ನಮ್ಮ ನೂತನ ಪ್ರಭುಗಳವರು ರಾಯಲ್ ಸ್ಕೂಲಿನಲ್ಲಿ ವ್ಯಾಸಂಗ ಮಾಡುತ್ತಿದ್ದಾಗಲೂ, ಆ ಬಳಿಕ ಕಾಲೇಜಿನಲ್ಲಿ ವ್ಯಾಸಂಗ ಮಾಡುತ್ತಿದ್ದಾಗಲೂ, ವಿದ್ಯಾ ಪ್ರೌಢಿಮೆಯನ್ನು ತೋರಿಸಿದ್ದರು. ಅವರ ಕಲಾಪ್ರೇಮವಂತೂ ತೀರ ಚಿಕ್ಕವಯಸ್ಸಿನಿಂದಲೇ ವಿಕಾಸಹೊಂದುತ್ತ ಬಂದಿದೆ. ಎಳೆಯ ವಯಸ್ಸಿನ ಮಗುವಾಗಿದ್ದಾಗಿನಿಂದಲೇ ಅವರಿಗೆ ಸಂಗೀತದಲ್ಲಿ ಪ್ರೇಮ. ಗ್ರಾಮೊ ಫೋನಿನಲ್ಲಿ ಸಂಗೀತವು ಪ್ರಾರಂಭವಾಯಿತೆಂದರೆ, ಕೇವಲ ಶೈಶವ ದಲ್ಲಿದ್ದ ಪುಟ್ಟಮಹಾಸ್ವಾಮಿಯವರು ಆನಂದದಿಂದ ಕೂಡಿ ಲಲ್ಲೆಯಾಡು ತ್ತಿದ್ದರು. ಯಥಾಕಾಲದಲ್ಲಿ ವಿದ್ಯಾಭ್ಯಾಸವು ಪ್ರಾರಂಭವಾದಮೇಲಂತೂ, ಅವರಲ್ಲಿ ಅವ್ಯಕ್ತವಾಗಿ ನೆಲಸಿದ್ದ ಸಂಗೀತ ಸಾಹಿತ್ಯ ಪ್ರೇಮವು ವಿಕಸಿತವಾಗಿ ದಿನ ದಿನಕ್ಕೂ ವೃದ್ಧಿಹೊಂದಿತು. ಅವರು ತಮ್ಮ ಮೇಧಾಶಕ್ತಿಯಿಂದಲೂ ತಮ್ಮ ಸದ್ಗುಣಗಳಿಂದಲೂ ತಮ್ಮ ವಿದ್ಯಾ ಗುರುಗಳೇ ಮುಂತಾದ ಸಮಸ್ತರಿಗೂ ಅಚ್ಚುಮೆಚ್ಚಾದರು. ಮಹಾ ಸ್ವಾಮಿಯವರ ಜ್ಞಾಪಕಶಕ್ತಿಯಂತೂ ಎಲ್ಲರಿಗೂ ಆಶ್ಚರ್ಯವನ್ನುಂಟು ಮಾಡುವಮಟ್ಟಿನದು. ಅದನ್ನು ಕಂಡು ಉಪಾಧ್ಯಾಯರುಗಳೇ ವಿಸ್ಮಿತರಾಗುತ್ತಿದ್ದರು. ಚಿತ್ತಾಕರ್ಷಕವಾದ ರೂಪ, ಆ ರೂಪಕ್ಕೆ ತಕ್ಕ ವರ್ಚಸ್ಸು, ಆ ವರ್ಚಸ್ಸಿಗೆ ತಕ್ಕ ಬುದ್ಧಿ, ಆ ಬುದ್ಧಿಗೆ ತಕ್ಕ ಗುಣ, ಇವುಗಳಿಂದ ಕೂಡಿರುವ ಮಹಾಸ್ವಾಮಿಯವರು ಸಮಸ್ತರಿಗೂ ಆಹ್ಲಾದ ವನ್ನುಂಟುಮಾಡುತ್ತಿದ್ದಾರೆ. ಚಿಕ್ಕವಯಸ್ಸಿನಿಂದಲೇ ಮಹಾಸ್ವಾಮಿ ಯವರು ತಮ್ಮ ದಿನಚರಿಯ ಕೆಲಸಗಳನ್ನೆಲ್ಲ ಕ್ಲುಪ್ತಕಾಲಕ್ಕೆ ಸರಿಯಾಗಿ ನೆರವೇರಿಸುತ್ತಿದ್ದಾರೆ. ಆಟಕ್ಕಾಗಲಿ ಅಥವಾ ಪಾಠಕ್ಕಾಗಲಿ ಒಂದು ದಿನವೂ ಅವರು ತಡವಾಗಿ ಹೋದವರಲ್ಲ. ಆಟವಾಡುತ್ತಿರಲಿ, ಅಥವಾ ಕಥೆಗಳನ್ನು ಕೇಳುತ್ತಿರಲಿ, ಅಥವಾ ಸಂಗಡಿಗರೊಡನೆ ಸುಖಾಲಾಪ ಮಾಡುತ್ತ ಹಿಗ್ಗುತ್ತಿರಲಿ, ಪೂಜೆಯ ವೇಳೆಯು ಸಮೀಪಿಸಿದಾಗಲೂ— ಉಪನಯನವಾದಮೇಲೆ ಸಂಧ್ಯಾವಂದನೆಯ ವೇಳೆಯು ಸಮೀಪಿಸಿ ದಾಗಲೂ— ತಟಕ್ಕನೆ ಪೂಜೆಗೆ ಹೊತ್ತಾಯಿತೆಂದೋ ಅಥವಾ ಸಂಧ್ಯಾ ವಂದನೆಗೆ ಹೊತ್ತಾಯಿತೆಂದೋ ಹೇಳಿ ಆ ಸಂತೋಷ ಮಧ್ಯದಲ್ಲಿ ಎದ್ದು ಅಲ್ಲಿಂದ ಹೊರಟೇಹೋಗುತ್ತಿದ್ದರು. ಬಾಲ್ಯ ವಯಸ್ಸಿನಲ್ಲಿ ಎಷ್ಟು ಮಂದಿಗಳಿಗೆ ಅದು ಸಾಧ್ಯ?

ಮಹಾಪ್ರಭುಗಳವರು ಐದು ವರ್ಷ ವಯಸ್ಸಿನವರಾಗಿದ್ದಾಗಲೇ ಇಂಗ್ಲಿಷ್ ಭಾಷೆಯಲ್ಲಿ ಉತ್ತಮ ರೀತಿಯಲ್ಲಿ ಮಾತನಾಡಬಲ್ಲವರಾಗಿದ್ದರು;

ಕಥೆಗಳನ್ನು ಕೇಳುವುದರಲ್ಲಿ ಅವರಿಗೆ ಬಹಳ ಆಶೆ; ಪೌರಾಣಿಕ ಕಥೆಗಳಲ್ಲಿ ಪರಮಾದರ; ಸುಲಲಿತವಾಗಿ ಕಥೆಗಳನ್ನು ಹೇಳಲು ಅವರು ಸಮರ್ಥರಾಗಿದ್ದರು; ಆ ಬಳಿಕ ಕೆಲವು ವರ್ಷಗಳಾದಮೇಲೆ ತಮ ಗಾಗಿಯೇ ರಚಿತವಾಗಿದ್ದ ಕನ್ನಡ ನಾಟಕಗಳಲ್ಲಿ ತಮ್ಮ ಸಹಪಾಠಿ ಗಳೊಡನೆಯೂ ಸೋದರಿಯರೊಡನೆಯೂ ಪಾತ್ರವಹಿಸಿ ರಾಜಕುಟುಂಬ ದವರೆಲ್ಲರನ್ನೂ ಅವರು ಆನಂದಗೊಳಿಸುತ್ತಿದ್ದರು. ಚಿಕ್ಕವಯಸ್ಸಿ ನಿಂದಲೂ ಮಹಾಸ್ವಾಮಿಯವರಿಗೆ ಉದಾರ ಭಾವನೆಗಳೇ ಇದ್ದುವು. ಹಳ್ಳಿ ಹಳ್ಳಿಗೂ ರೈಲು ಹಾಕಬೇಕೆಂದೂ, ರೈತರೆಲ್ಲರೂ ಅದರಲ್ಲಿ ಉಚಿತವಾಗಿ ಪ್ರಯಾಣ ಮಾಡಬೇಕೆಂದೂ ಅವರು ಹೇಳುತ್ತಿದ್ದುದು ಅದಕ್ಕೊಂದು ನಿದರ್ಶನ. ಒಂದು ಸಲ, "ಯಥೇಷ್ಟವಾಗಿ ಹಣವಿದ್ದಲ್ಲಿ ಏನು ಮಾಡು ವಿರಿ?" ಎಂದು ಅವರನ್ನು ಕೇಳಿದಾಗ ಅಷ್ಟು ಹಣವನ್ನೂ ಬಡವರಿಗೆ ಕೊಟ್ಟುಬಿಡುವುದಾಗಿ ಅವರು ಹೇಳಿದುದು ಮತ್ತೊಂದು ನಿದರ್ಶನ. ತಮ್ಮ ಸಹಪಾಠಿಗಳಿಗೂ ತಮಗೂ ಉಪಚಾರ ಮುಂತಾದುವುಗಳಲ್ಲಿ ಯಾವ ಭೇದವೂ ಇರಕೂಡದೆಂದು ಬಾಲ್ಯದಲ್ಲೇ ಮಹಾಪ್ರಭುಗಳವರು ಕಟ್ಟುಮಾಡಿದ್ದರು. ತಮ್ಮ ಸಹಪಾಠಿಗಳಲ್ಲಿ ಬಡವರಾದವರಿಗೆ ಯಥೇಷ್ಟ ವಾಗಿ ಹಣವನ್ನು ಕೊಡುತ್ತಿದ್ದರು. ಅವರಲ್ಲಿ ಯಾರಾದರೂ ರೋಗ ಗ್ರಸ್ತರಾದರೆ ಔಷಧೋಪಚಾರಗಳಿಗೆ ಏರ್ಪಾಡು ಮಾಡುತ್ತಿದ್ದರು. ಗಾಯವಾಗಿದ್ದ ಪ್ರಾಣಿಗಳನ್ನು ಬಂಡಿಗಳಿಗೆ ಕಟ್ಟಿದ್ದರೆ ಮರುಕದಿಂದ ಬಿಚ್ಚಿಸಿಬಿಡುತ್ತಿದ್ದರು. ಒಂದು ಸಲ, ಮಳೆಯಲ್ಲಿ ನೆನೆಯುತ್ತಿದ್ದ ತಮ್ಮ ಉಪಾಧ್ಯಾಯರೊಬ್ಬರಿಗೆ ಅವರು ಬೇಡವೆಂದರೂ ಸುಮ್ಮನಾಗದೆ ಮಹಾಪ್ರಭುಗಳವರು ತಮ್ಮ ಕೊಡೆಯನ್ನು ಕೊಟ್ಟರು. ನೀಲಗಿರಿಗೆ ಹೋಗಿದ್ದಾಗ ತಮ್ಮ ತಂಗಿಯವರನ್ನು ಕೈಗಾಡಿಯಲ್ಲಿ ಕುಳ್ಳಿರಿಸಿ ತಾವೇ ತಳ್ಳಿಕೊಂಡು ತಿರುಗಾಡಿಸುತ್ತಿದ್ದರು. ಎಂತಹ ಸರಳತೆ!

ಆಳುವ ಮಹಾಸ್ವಾಮಿಯವರು ಬಾಲ್ಯದಿಂದಲೂ ಬೆಳಗಿನ ಜಾವ ಐದು ಘಂಟೆಗೇ ಎದ್ದು, ಸಂಗೀತಪಾಠ, ಹಿಂದೀಪಾಠ, ಕುದುರೆ ಸವಾರಿ ಮುಂತಾದುವುಗಳನ್ನು ಮುಗಿಸಿ, ಇತರ ಪಾಠಗಳನ್ನು ಗಟ್ಟಿಮಾಡಿ ಪಾಠಶಾಲೆಗೆ ಹೋಗುತ್ತಿದ್ದರು. ತಮ್ಮ ತೀರ್ಥರೂಪರವರ ಮತ್ತು ತಮ್ಮ ದೊಡ್ಡಪ್ಪನವರ ವಿಶಾಲದೃಷ್ಟಿ ಸರಳತೆಗಳ ಫಲವಾಗಿ ಅವರು ಇತರ ರೊಡನೆ ಸಾಮಾನ್ಯರಂತೆಯೇ ಕಾಲೇಜಿನ ವ್ಯಾಸಂಗಕ್ಕೆ ಪ್ರಾರಂಭಿಸಿದರು. ಅಮಿತವಾದ ಶ್ರದ್ಧೆಯಿಂದ ವ್ಯಾಸಂಗಮಾಡಿ ಜ್ಞಾನ ಸಂಪಾದನೆಮಾಡಿ ದರು. ಸಂಗೀತ ವಿದ್ಯಾಭ್ಯಾಸ ಮುಂತಾದುವುಗಳಿಂದ ಕಲಾಭಿವೃದ್ಧಿ

ಮಾಡಿಕೊಂಡರು. ಪಿಯಾನೊ ಮುಂತಾದ ವಾದ್ಯಗಳನ್ನು ನುಡಿಸುವುದನ್ನು ಕಲಿತರು. ಕುದುರೆ ಸವಾರಿ; "ರ್ಯಾಕೆಟ್ಸ್", "ಟೆನ್ನಿಸ್" ಮುಂತಾದ ಆಟಗಳು ; ಕಸರತ್ತು ; ಮೊದಲಾದುವುಗಳಿಂದ ದೇಹದಾರ್ಢ್ಯವನ್ನು ವೃದ್ಧಿಮಾಡಿಕೊಂಡರು. ೧೯೦೨ನೆಯ ಇಸವಿಯಿಂದ ಸುಮಾರು ಆರು ವರ್ಷಗಳಕಾಲ ಶ್ರೀಮಾನ್ ಜೆ. ಟಿ. ಟರ್ನರ್ ಎಂಬ ಮಹಾಶಯರು ಮಹಾಸ್ವಾಮಿಯವರ ಮುಖ್ಯ ಬೋಧಕರಾಗಿದ್ದರು. ಯಾವ ಹೊಸ ಪುಸ್ತಕವು ಹೊರಬಿದ್ದರೂ ಮಹಾಪ್ರಭುಗಳವರ ಪುಸ್ತಕ ಭಂಡಾರಕ್ಕೆ ಅದರ ಪ್ರತಿಯು ಕೂಡಲೆ ಸೇರುತ್ತಿದ್ದಿತು. ಈಗಲೂ ಅದೇ ರೀತಿ ಪುಸ್ತಕಗಳನ್ನು ತರಿಸಿ ಅದಕ್ಕೆ ಸೇರಿಸುತ್ತ ಮಹಾಸ್ವಾಮಿಯವರು ಸಂತತವಾಗಿ ಅವುಗಳನ್ನು ವ್ಯಾಸಂಗಮಾಡಿ ತಮ್ಮ ಜ್ಞಾನಭಂಡಾರವನ್ನು ವೃದ್ಧಿಪಡಿಸಿಕೊಳ್ಳುತ್ತಿದ್ದಾರೆ. ಮಹಾಸ್ವಾಮಿಯವರ ಪುಸ್ತಕ ಭಂಡಾರದಲ್ಲಿ ಹತ್ತಾರು ಸಹಸ್ರ ರೂಪಾಯಿಗಳ ಉತ್ತಮೋತ್ತಮ ಗ್ರಂಥಗಳು ತುಂಬಿವೆ.

೧೯೩೮ನೆಯ ಇಸವಿಯಲ್ಲಿ ನಡೆದ ಮೈಸೂರು ವಿಶ್ವವಿದ್ಯಾನಿಲಯದ ಘಟಿಕೋತ್ಸವದಲ್ಲಿ, ಆಳುವ ಮಹಾಸ್ವಾಮಿಯವರು (ಬಿ.ಎ. ಪರೀಕ್ಷೆಯಲ್ಲಿ ಪ್ರಥಮಸ್ಥಾನವನ್ನು ಪಡೆದು ತೇರ್ಗಡೆ ಹೊಂದಿದ್ದುದರಿಂದ) ಅವರ ಐಚ್ಛಿಕ ವ್ಯಾಸಂಗ ವಿಷಯಗಳಿಗಿದ್ದ ಐದು ಸುವರ್ಣಪದಕಗಳೆಲ್ಲವನ್ನೂ ಛಾನ್ಸೆಲರವರಾಗಿದ್ದ ತಮ್ಮ ದೊಡ್ಡಪ್ಪನವರ ಅಮೃತಹಸ್ತದಿಂದ ಸ್ವೀಕರಿಸಿದರು. ಅಂದು ಸಭೆಯಲ್ಲಿದ್ದವರ ಸಂತೋಷವನ್ನು ಹೇಳತೀರದು. ಸಾಮಾನ್ಯ ವ್ಯಕ್ತಿಯೊಬ್ಬನ ಮೇಧಾಶಕ್ತಿಯಿಂದ ಆಗುವ ಪ್ರಯೋಜನಕ್ಕಿಂತ ಸಾವಿರಾರುಪಾಲು ಹೆಚ್ಚಿನ ಪ್ರಯೋಜನಗಳು ಸಿಂಹಾಸನಾಧಿಪತಿಗಳ ಮೇಧಾಶಕ್ತಿಯಿಂದ ಆಗುತ್ತವೆ. ಆಳುವ ಮಹಾಸ್ವಾಮಿಯವರು ಅಂದು ಪಡೆದ ಸುವರ್ಣಪದಕಗಳ ಸಂಖ್ಯೆಯನ್ನು ಕಂಡು ಸಭಿಕರೆಲ್ಲರೂ ಹಿಗ್ಗಿದುದಕ್ಕೆ ಅದೇ ಕಾರಣ. ಆದರೆ, ಮಹಾಸ್ವಾಮಿಯವರು ಅಂದು ಪಡೆದ ಆ ಸುವರ್ಣಪದಕಗಳಿಗಿಂತಲೂ ಜನರಿಗೆ ಹೆಚ್ಚು ಪ್ರಿಯವಾಗಿರುವುದು ನಮ್ಮ ಚಿನ್ನದ ನಾಡಿನ ಪುಣ್ಯದ ಫಲವಾಗಿ— ಅವರ ಹಿರಿಯರ ಧಾರ್ಮಿಕತೆಯ ಪ್ರಭಾವವಾಗಿ— ಜಗದೀಶ್ವರನ ಅನುಗ್ರಹದ ಮೆಚ್ಚಾಗಿ —ಅವರಲ್ಲಿ ನೆಲಸಿರುವ ಸದ್ಗುಣ ಸಮೂಹ. ಕಾಲೇಜಿನ ವ್ಯಾಸಂಗ ಕಾಲದಲ್ಲಿ ಚಂದಾಪಟ್ಟಿಗಳು ಬಂದಾಗ ಮಹಾಸ್ವಾಮಿಯವರು ತಾವೇ ಭಾರಿ ಮೊತ್ತವನ್ನು ಪಟ್ಟಿಯಲ್ಲಿ ಮೊದಲು ಕಾಣಿಸಿದರೆ, ಕೊಂಚವೇ ಹಣವನ್ನು ಹಾಕಬಲ್ಲವರಾಗಿದ್ದ ಸಹಪಾಠಿಗಳಿಗೆ ಸಂಕೋಚವಾದೀತೆಂದು

ಶಂಕಿಸಿ ಚಂದಾಪಟ್ಟಿಗಳನ್ನು ಕೊನೆಗೆ ತರಿಸಿಕೊಂಡು ಆವಶ್ಯಕವಾಗಿದ್ದಷ್ಟು ಹಣವನ್ನೂ ತಾವೇ ಮುಕ್ತಹಸ್ತದಿಂದ ಕೊಡುತ್ತಿದ್ದರು.

ಕಾಲೇಜಿನಲ್ಲಿ ವ್ಯಾಸಂಗ ಮಾಡುತ್ತಿದ್ದಾಗ ಮಹಾಸ್ವಾಮಿಯವರ ವ್ಯಾಸಂಗದ ರೀತಿಯಲ್ಲೇ ಒಂದು ದೊಡ್ಡ ವಿಶೇಷ. ಪರೀಕ್ಷೆಗೆ ಆವಶ್ಯಕ ವಾದಷ್ಟನ್ನು ಮಾತ್ರ ಓದಿ ಮುಗಿಸುವುದರಲ್ಲಿ ಅವರಿಗೆ ತೃಪ್ತಿ ಇರಲಿಲ್ಲ. ಒಂದು ವಿಷಯದಲ್ಲಿ ಪಾಠವಾಯಿತೆಂದರೆ ಆ ವಿಷಯದಲ್ಲಿ ಅದುವರೆಗೆ ರಚಿತವಾಗಿದ್ದ ಪ್ರೌಢ ಗ್ರಂಥಗಳನ್ನೆಲ್ಲ ಸಾಂಗವಾಗಿ ಓದುತ್ತಿದ್ದುದು ಅವರ ಪದ್ಧತಿ. ಅಷ್ಟೇ ಅಲ್ಲ. ಅವರ ವಿಚಾರ ಸರಣಿಯೇ ಒಂದು ಬಗೆ. ಉದಾಹರಣೆಗಾಗಿ, ಚರಿತ್ರೆಯ ಪಾಠದಲ್ಲಿ ಒಂದು ಯುದ್ಧದ ಪ್ರಸ್ತಾವವು ಬಂದರೆ, "ಆ ಯುದ್ಧವೇಕೆ ನಡೆಯಿತು? ಜನರು ಶಾಂತಿಯನ್ನೇಕೆ ಕೆಡಿಸಿಕೊಂಡರು? ಯುದ್ಧಗಳೇಕೆ ನಡೆಯಬೇಕು? ಪ್ರಪಂಚದಲ್ಲಿ ಶಾಶ್ವತ ವಾಗಿ ಶಾಂತಿಯನ್ನು ಸ್ಥಾಪಿಸುವ ಬಗೆ ಹೇಗೆ?" ಎಂಬಿವೇ ಮುಂತಾ ದುವುಗಳು ಅವರು ಕೇಳುತ್ತಿದ್ದ ಪ್ರಶ್ನೆಗಳು. ಮಹಾಸ್ವಾಮಿಯವರಿಗೆ ಬಡವರಲ್ಲಿ ಅನುಕಂಪ. ಅವರು ಬಡವರಿಗೆ ಬಹಳವಾಗಿ ಸಹಾಯ ಮಾಡುತ್ತಬಂದಿರುವುದೂ, ಅಧ್ಯಾಪಕರನ್ನು ಒಮ್ಮೆ ತಮ್ಮಲ್ಲಿಗೆ ಕರೆಯಿಸಿ ಕೊಂಡು "ನಮ್ಮ ಜನರಲ್ಲಿ ಬಡವರು ಹೇಗೆ ಜೀವನಮಾಡುತ್ತಾರೆ? ನೋಡಿ ಬರಬೇಕು. ದಯವಿಟ್ಟು ಕರೆದುಕೊಂಡುಹೋಗುತ್ತೀರಾ?" ಎಂದು ಕೇಳಿ, ಸಾಮಾನ್ಯ ವಿದ್ಯಾರ್ಥಿಗಳಂತೆ ಉಡುಪುಗಳನ್ನು ಧರಿಸಿ ಅಧ್ಯಾಪಕರೊಡನೆ ಹೋಗಿ ಬಡವರ ಸ್ಥಿತಿಯನ್ನು ಕಣ್ಣಾರೆ ನೋಡಿ, ಮನಮರುಗಿದುದೂ ಅದಕ್ಕೆ ನಿದರ್ಶನಗಳು. ಮಹಾಸ್ವಾಮಿಯವರ ಈ ಬಗೆಯ ಮನೋಧರ್ಮವು ಅವರ ಅರ್ಥಶಾಸ್ತ್ರ ಪ್ರೌಢಿಮೆಗೆ ಚಿನ್ನದ ಕಲಶವಿಟ್ಟಂತಿದೆಯೆಂದು ಧಾರಾಳವಾಗಿ ಹೇಳಬಹುದು.

ಮಹಾಸ್ವಾಮಿಯವರು ಪುಸ್ತಕದಿಂದ ಪಡೆದ ಜ್ಞಾನವು ಜಪಾನ್ ದೇಶದ ಪ್ರವಾಸದಿಂದಲೂ, ಸ್ವದೇಶ ಸಂಚಾರದಿಂದಲೂ, ಯೂರೋಪು ಖಂಡದ ಪ್ರವಾಸದಿಂದಲೂ ವೃದ್ಧಿಯಾಯಿತು. ಅವರ ದೊಡ್ಡಪ್ಪ ನವರೂ, ಅವರ ತೀರ್ಥರೂಪರವರೂ, ಕೊಟ್ಟ ಶಿಕ್ಷಣವೂ ಮತ್ತು ಸಮರ್ಥರಾದ ಇತರರಿಂದ ಕೊಡಿಸಿದ ಶಿಕ್ಷಣವೂ ಅದಕ್ಕೆ ಒಪ್ಪವಿಟ್ಟುವು. ಮಹಾಪ್ರಭುಗಳವರು ಜಪಾನ್ ಪ್ರವಾಸಕ್ಕೆ ಹೋಗಿದ್ದುದು ಬಿ.ಎ. ತರಗತಿ ಯಲ್ಲಿ ವ್ಯಾಸಂಗಮಾಡುತ್ತಿದ್ದಾಗ (ಅದರ ವಿಚಾರವನ್ನು ಹಿಂದೆಯೇ ಸೂಚಿಸಲಾಗಿದೆ). ಜಪಾನಿಗೆ ದಯಮಾಡಿದಾಗ್ಗೆ ಮಾರ್ಗ ಮಧ್ಯದಲ್ಲಿ ಸೈಗಾನ್ ನಗರದಲ್ಲಿದ್ದ ಭಾರತೀಯರೆಲ್ಲರೂ ಸೇರಿ ಮಹಾಸ್ವಾಮಿ

ಯವರಿಗೆ ಅತ್ಯಂತ ವಿಜೃಂಭಣೆಯಿಂದ ಸತ್ಕಾರಕೂಟವನ್ನೇರ್ಪಡಿಸಿದ್ದರು. ಯೂರೋಪು ಪ್ರವಾಸ ಹೋಗಿದ್ದುದು ವಿವಾಹಾನಂತರ. ಜಪಾನಿಗೆ ಹೋದಮೇಲೆ ಅಲ್ಲಿ ಮಹಾಸ್ವಾಮಿಯವರೊಡನೆ ಸಂಭಾಷಣಮಾಡಿದ ಅಮೇರಿಕಾ ಖಂಡದ ಪ್ರವಾಸಿಯವರೊಬ್ಬರು ಆ ಚಿಕ್ಕವಯಸ್ಸಿನಲ್ಲಿ ಮಹಾಪ್ರಭುಗಳವರಿಗೆ ಅನುಭವಶಾಲಿಗಳಾದ ತಮ್ಮ ದೇಶದ ಶಾಸನ ಸಭಾ ಸದಸ್ಯರನೇಕರಿಗಿಂತ ಹೆಚ್ಚಿನ ಅಂತರರಾಷ್ಟ್ರೀಯ ರಾಜಕೀಯ ವಿಚಾರಗಳ ತಿಳಿವಳಿಕೆಯೂ ಇತಿಹಾಸ ಜ್ಞಾನವೂ ಅರ್ಥಶಾಸ್ತ್ರ ಪ್ರೌಢಿಮೆಯೂ ಇದ್ದುದನ್ನು ಕಂಡು ಬೆರಗಾದರು. ಭರತಖಂಡದ ರಾಜಕುಮಾರರೆಂದರೆ ಕಿಂಕಾಪಿನ ಅಂಗಿಯನ್ನೂ ವಜ್ರದ ಆಭರಣಗಳನ್ನೂ ಧರಿಸಿ ಆನೆಯ ಮೇಲೆ ಕುಳಿತು ಓಡಾಡುವ ಅಲಸರು ಮಾತ್ರವೇ— ಎಂದು ತಮಗಿದ್ದ ಭಾವನೆಯು ಅಂದು ಮಾಯವಾಯಿತೆಂದು ಅವರು ಒಪ್ಪಿಕೊಂಡರು. ಜಪಾನಿಗೆ ಹೋದಾಗ ಮಹಾಪ್ರಭುಗಳವರು ಇಳಿದಿದ್ದ ಒಂದು ಹೋಟಲಿನಲ್ಲೇ ಗುಜರಾತಿನ ವರ್ತಕರೊಬ್ಬರೂ ಇಳಿದಿದ್ದರು. ಅವರು ಆ ಹೋಟಲಿನ "ಲಾಬಿ"ಯಲ್ಲಿ ಭೂಪಟವನ್ನು ಪರಾಂಬರಿಸುತ್ತಿದ್ದ ಮಹಾಸ್ವಾಮಿಯವರನ್ನು ಕಂಡರು. ಮಹಾಸ್ವಾಮಿಯವರ ಪರಿಚಯವು ಅವರಿಗಿರಲಿಲ್ಲ. ಮಹಾಸ್ವಾಮಿಯವರು ಮೈಸೂರು ಸಂಸ್ಥಾನದ ರಾಜಕುಮಾರರ ಕಡೆಯವರಾರೋ ಆಗಿರಬೇಕೆಂದು ಭಾವಿಸಿ ಪ್ರಾಸಂಗಿಕವಾಗಿ ಹಲವು ವಿಚಾರಗಳನ್ನು ಕುರಿತು ಮಾತನಾಡಿದ ಬಳಿಕ ಮೈಸೂರಿನ ರಾಜಕುಮಾರರನ್ನು ಕಾಣಬೇಕೆಂದು ತಮಗೆ ಆಶೆಯಿದ್ದುದನ್ನು ತಿಳಿಸಿ, "ತಾವು ರಾಜಕುಮಾರರ ಕಡೆಯವರೇನು?" ಎಂದು ಅವರು ಕೇಳಿದರು. ತಾವು ಅವರ ಕಡೆಯವರೆಂದೇ ಮಹಾಪ್ರಭುಗಳವರು ಹೇಳಲು, ರಾಜಕುಮಾರರ ಸ್ವಭಾವವೇನು, ಅವರನ್ನು ಹೇಗೆ ಮಾತನಾಡಿಸಬೇಕು, ಅವರನ್ನು ಹೇಗೆ ಯಾವ ಉಡುಪನ್ನು ಧರಿಸಿ ಕಾಣಬೇಕು — ಎಂಬಿವೇ ಮುಂತಾದ ಪ್ರಶ್ನೆಗಳನ್ನು ಹಾಕಿದರು. ಕೊನೆಗೆ ತಾವು ಅದುವರೆಗೂ ಬಹಳ ಹೊತ್ತು ಮಾತನಾಡುತ್ತಿದ್ದುದು ರಾಜಕುಮಾರರೊಡನೆಯೇ — ಎಂಬುದು ತಿಳಿದಾಗ ಅವರು ಮಹಾಸ್ವಾಮಿಯವರ ಕ್ಷಮೆಯನ್ನು ಬೇಡಿ ಆ ಅಸಾಧಾರಣ ಸರಳತೆಯನ್ನು ಕಂಡು ವಿಸ್ಮಿತರಾದರು.

ಆಳುವ ಮಹಾಸ್ವಾಮಿಯವರು ಪಟ್ಟಕ್ಕೆ ಬಂದುದಕ್ಕೆ ಮುಂಚಿನಿಂದಲೂ ಅನೇಕ ಸಂಸ್ಥೆಗಳ ಸಂಬಂಧದ ನಾನಾ ಉತ್ಸವಗಳಲ್ಲಿ ಭಾಗವಹಿಸುತ್ತ ಬಂದಿದ್ದಾರೆ. ೧೯೩೮ನೆಯ ಇಸವಿಯ ಮೇ ತಿಂಗಳು ೧೪ನೆಯ

ತಾರೀಖಿನ ದಿನ ನಡೆದ ಕನ್ನಡ ಸಾಹಿತ್ಯ ಪರಿಷತ್ತಿನ ವಸಂತಸಾಹಿತ್ಯೋತ್ಸವ ಮುಂತಾದ ನಾನಾ ಉತ್ಸವಗಳಲ್ಲಿ ಮಾಡಿದ ಅಮೋಘ ಭಾಷಣಗಳಿಂದ ಮಹಾಜನರ ಮನಸ್ಸನ್ನೇ ತಮ್ಮ ಕಡೆಗೆ ಸೆಳೆದುಕೊಂಡರು. ಸರ್ಕಾರದ ನಾನಾ ಶಾಖೆಗಳ ಮತ್ತು ಸೆಕ್ರೆಟೇರಿಯಟ್ ಕಚೇರಿಯ ಕಾರ್ಯಕಲಾಪಗಳಲ್ಲಿ ಶ್ರೀಮಾನ್ ಎಲ್ಫಿನ್‌ರವರು ಮತ್ತು ಶ್ರೀಮಾನ್ ಮ್ಯೇಕ್ರಿಯವರು ಮುಂತಾದ ಮೇಧಾವಿಗಳ ಸಹಾಯದಿಂದ ಚೆನ್ನಾಗಿ ಅನುಭವ ಪಡೆದರು; ಕೋರ್ಟುಗಳೇ ಮುಂತಾದುವುಗಳ ಕಾರ್ಯವಿಧಾನದಲ್ಲಿ ಪರಿಶ್ರಮಹೊಂದಿದರು. ಮಹಾಸ್ವಾಮಿಯವರಿಗೆ ಕನ್ನಡ ಭಾಷೆಯಲ್ಲಿಯೂ ಕನ್ನಡ ಸಾಹಿತ್ಯದಲ್ಲಿಯೂ ಎಷ್ಟು ಮಮತೆಯಿದೆಯೆಂಬುದು, ಅವರು ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷಸ್ಥಾನವನ್ನಲಂಕರಿಸಿದ್ದು ಈಗ ಮಹಾಪೋಷಕರಾಗಿ ಕೃಪೆಮಾಡಿರುವುದೇ ಮುಂತಾದ ಅನೇಕ ನಿದರ್ಶನಗಳಿಂದ ವ್ಯಕ್ತವಾಗಿದೆ. ಕನ್ನಡಿಗರೆಲ್ಲರೂ ಒಬ್ಬಳೇ ತಾಯಿಯ ಮಕ್ಕಳೆಂದು ಮನಗಂಡು ಸೋದರ ಪ್ರೇಮದಿಂದ ಕೂಡಿ ವರ್ತಿಸಬೇಕೆಂಬ ಉದಾರಭಾವನೆಯೂ, ಭಾಷಾಸಂಸ್ಕೃತಿಗಳ ದೃಷ್ಟಿಯಿಂದಲಾದರೂ ಕನ್ನಡಿಗರೆಲ್ಲ ಒಟ್ಟುಗೂಡಿ ಒಂದಾಗಬೇಕೆಂಬ ತೀವ್ರಾಭಿಲಾಷೆಯೂ ಮಹಾಸ್ವಾಮಿಯವರಿಗುಂಟು. ಮಹಾಸ್ವಾಮಿಯವರು ಬಾಲ್ಯದಿಂದಲೂ ಮೈಸೂರು ಸಂಸ್ಥಾನದವರೆಲ್ಲರ ಭಕ್ತಿವಿಶ್ವಾಸಗಳಿಗೆ ಪಾತ್ರರಾಗಿದ್ದಾರೆ. ದಿವಾನ್‌ರವರಾದ ಸರ್ ಮಿರ್ಜಾ ಎಂ. ಇಸ್ಮಾಯಿಲ್‌ರವರು, ಈಗ್ಗೆ ಕೆಲವು ತಿಂಗಳುಗಳ ಹಿಂದೆ ಮಹಾಸ್ವಾಮಿಯವರ ಸಂದರ್ಶನಾರ್ಥವಾಗಿ ನಾನಾ ಗ್ರಾಮಗಳಿಂದ ಬಂದು ಕೃಷ್ಣರಾಜನಗರದಲ್ಲಿ ಕಿಕ್ಕಿರಿದು ತುಂಬಿದ್ದ ಪ್ರಜಾಸಮೂಹದೆದುರಿಗೆ, "ಇವರೇ ನಿಮ್ಮ ಶ್ರೀಮದ್ಯುವರಾಜರವರು" ಎಂದು ಹೇಳಿ ಸಂತೋಷಿಸಿದಾಗ ಅಲ್ಲಿದ್ದ ಪ್ರಜೆಗಳೆಲ್ಲರೂ ಹಿಗ್ಗಿ ಆನಂದಘೋಷ ಮಾಡಿದರು.

ಪಟ್ಟಾಭಿಷೇಕಮಹೋತ್ಸವಾನಂತರ ೧೯೪೦ನೆಯ ಇಸವಿ ಆಕ್ಟೋಬರು ತಿಂಗಳು ನವರಾತ್ರಿಯ ಮಹೋತ್ಸವವು ನೆರವೇರಿದಮೇಲೆ ಮಹಾಸ್ವಾಮಿಯವರು ಬೆಂಗಳೂರು ನಗರ ಸಭೆಯವರ ಪ್ರಾರ್ಥನೆಯನ್ನು ಲಾಲಿಸಿ ನವೆಂಬರು ೪ನೆಯ ತಾರೀಖಿನ ದಿನ ಬೆಳಗ್ಗೆ ಬೆಂಗಳೂರಿಗೆ ದಯಮಾಡಿ ನಗರ ಸಭೆಯವರ ವಿಜ್ಞಾಪನಾ ಪತ್ರಿಕೆಯನ್ನು ಸ್ವೀಕರಿಸಿ ಪ್ರತ್ಯುತ್ತರವನ್ನು ದಯಪಾಲಿಸಿದರು. ಆ ಪ್ರತ್ಯುತ್ತರ ಭಾಷಣವನ್ನು ಪರಿಶೀಲಿಸಿದರೆ ಮಹಾಸ್ವಾಮಿಯವರಿಗೆ ಪ್ರಜೆಗಳಲ್ಲಿ ಎಷ್ಟು ಹೆಚ್ಚಿನ ವಾತ್ಸಲ್ಯವಿದೆಯೆಂಬುದು ವ್ಯಕ್ತವಾಗುತ್ತದೆ. ಅಂದು ಮಹಾಸ್ವಾಮಿ

ಯವರು ದಯಮಾಡಿದ ಮಾರ್ಗದುದ್ದಕ್ಕೂ ಬೆಂಗಳೂರು ನಗರದಲ್ಲಿ ವರ್ತಕರು ಮುಂತಾದವರೂ, ನಾನಾ ಸಂಸ್ಥೆಗಳವರೂ ನೂರಾರು ಚಪ್ಪರ ಗಳನ್ನೂ, ಮಂಟಪಗಳನ್ನೂ ರಚಿಸಿ ನಗರಾಲಂಕಾರ ಮಾಡಿದ್ದರು. ಪ್ರಜೆಗಳ ರಾಜಭಕ್ತಿ ವಿಶ್ವಾಸಗಳನ್ನು ಕಂಡು ಹರ್ಷಿಸಿದ ಮಹಾಪ್ರಭು ಗಳವರ ಕಣ್ಣುಗಳಿಂದ ಆನಂದಬಾಷ್ಪವು ಹರಿಯಿತು. ಬೆಂಗಳೂರು ನಿವಾಸಿಗಳೂ, ಸಂಸ್ಥಾನದ ಇತರ ಪ್ರದೇಶಗಳಿಂದ ಬಂದಿದ್ದ ಅಸಂಖ್ಯಾತ ಪ್ರಜೆಗಳೂ ಪ್ರಜಾವತ್ಸಲರಾದ ನೂತನ ಪ್ರಭುವರ್ಯರ ದರ್ಶನವನ್ನು ಪಡೆದು ಹರ್ಷದಿಂದ ಹಿಗ್ಗಿದರು.

ಆಳುವ ಮಹಾಸ್ವಾಮಿಯವರ ಸಾಹಸಪ್ರೇಮವೂ ಧೈರ್ಯ ಸ್ಥೈರ್ಯಗಳೂ ಅತಿಶಯವಾಗಿವೆ. ಅವರು ಹನ್ನೆರಡನೆಯ ವಯಸ್ಸಿನಲ್ಲೇ ಕುದುರೆ ಸವಾರಿಯಲ್ಲಿ ಅತ್ಯಂತ ಸಾಹಸಿಗಳಾಗಿದ್ದು ಕುದುರೆ ಸವಾರಿಯಲ್ಲಿ ಪರಿಣತರಾಗಿದ್ದ ದೊಡ್ಡವರನ್ನು ಕೂಡ ಬೆರಗು ಮಾಡುತ್ತಿದ್ದರು. ಆ ಬಳಿಕ ಕೆಲವು ವರ್ಷಗಳಲ್ಲೇ ಹುಲಿಯ ಬೇಟೆ ಯಲ್ಲಿ ತೀವ್ರಾಸಕ್ತಿ ವಹಿಸಿ ಎಳೆಯ ವಯಸ್ಸಿಗೆ ಮೀರಿದ ಧೈರ್ಯಸ್ಥೈರ್ಯ ಗಳನ್ನೂ ಸಾಹಸವನ್ನೂ ಪ್ರದರ್ಶಿಸುತ್ತ ಬಂದಿದ್ದಾರೆ. ೧೯೪೦ನೆಯ ಇಸವಿ ನವೆಂಬರು ತಿಂಗಳಿನಲ್ಲಿ ಮಹಾಸ್ವಾಮಿಯವರು ಹುಲಿಗಳನ್ನು ಬೇಟೆಯಾಡಿದುದೂ, ಕಾಡಾನೆಗಳ ಹಿಂಡಿನಿಂದ ತಪ್ಪಿಸಿಕೊಂಡು ದಾಂಧಲೆ ಮಾಡುತ್ತ ಪ್ರಜೆಗಳನ್ನು ಹಿಂಸಿಸುತ್ತಿದ್ದ ದುಷ್ಟ ಸಲಗವನ್ನು ೧೯೪೧ನೆಯ ಇಸವಿ ಜನವರಿ ತಿಂಗಳಿನಲ್ಲಿ ಗುಂಡಿನಿಂದ ಹೊಡೆದು ಕೊಂದುಹಾಕಿದುದೂ ಅದಕ್ಕೆ ಉತ್ತಮ ನಿದರ್ಶನಗಳು. ಒಂಟಿಯಾಗಿರುವ ದುಷ್ಟ ಸಲಗದ ಬೇಟೆಯು ಎಷ್ಟು ಅಪಾಯಕರವೆಂಬುದನ್ನು ಹೇಳಲಳವಲ್ಲ. ಪ್ರಜಾ ಪಾಲನಕ್ಕಾಗಿ ಸ್ವಂತಕ್ಷೇಮವನ್ನೂ ಅಲಕ್ಷ್ಯಮಾಡಿ ಆ ರೀತಿ ಅಪಾಯಕ್ಕೆದೆ ಕೊಟ್ಟು ವರ್ತಿಸಿದ ಪ್ರಭುಪುಂಗವರು, ಆಳುವ ಮಹಾಸ್ವಾಮಿಯವರು.

ಆಳುವ ಮಹಾಸ್ವಾಮಿಯವರಾದ ಶ್ರೀ ಜಯ ಚಾಮರಾಜೇಂದ್ರ ಒಡೆಯರ್ ಬಹದ್ದೂರರವರಲ್ಲಿ ನೆಲಸಿರುವ ವಂಶಾನುಗತವಾದ ಸದ್ಗುಣ ಗಳೂ ಶಕ್ತಿ ಸಾಮರ್ಥ್ಯಗಳೂ ಉತ್ತಮ ಶಿಕ್ಷಣದ ಪ್ರಭಾವದಿಂದಲೂ, ಸಂತತವಾದ ವ್ಯಾಸಂಗದಿಂದಲೂ, ದೇಶ ಸಂಚಾರದಿಂದಲೂ ವೃದ್ಧಿ ಹೊಂದಿ ಪರಿಸ್ಫುಟವಾಗಿವೆ. ಮಹಾಸ್ವಾಮಿಯವರ ವಿಚಾರವಾಗಿ ಸರ್ ಮಿರ್ಜಾ ಇಸ್ಮಾಯಿಲ್‌ರವರು "ಈಗ ಮಹಾಸ್ವಾಮಿಯವರು ನಿರ್ವಹಿಸ ಬೇಕಾಗಿ ಬಂದಿರುವ ಜವಾಬ್ದಾರಿಯ ಕಾರ್ಯಗಳು ಅವರಿಗೆ ಹೊಸವೇನೂ ಅಲ್ಲ. ಅವರು ಪ್ರೌಢ ವಿದ್ಯಾಭ್ಯಾಸಮಾಡಿ, ಉತ್ತಮ ಶಿಕ್ಷಣವನ್ನು ಪಡೆದು, ಸ್ವದೇಶ ವಿದೇಶಗಳಲ್ಲಿ ವಿಶೇಷವಾಗಿ ಸಂಚಾರಮಾಡಿ ತಮ್ಮ

ಸಂಸ್ಥಾನದ ರಾಜ್ಯಭಾರಸಂಬಂಧವಾಗಿ ಬಗೆಹರಿಸಬೇಕಾಗಿ ಬರುವ ಸಮಸ್ಯೆಗಳನ್ನೆಲ್ಲ ಇತ್ಯರ್ಥಪಡಿಸಲು ತಕ್ಕ ಜ್ಞಾನ ಸಂಪತ್ತನ್ನೂ ಸಾಮರ್ಥ್ಯವನ್ನೂ ಪಡೆದು ಸುಸಜ್ಜಿತರಾಗಿದ್ದಾರೆ. ಆದಕಾರಣ, ಈಗಿನ ಮಹಾಪ್ರಭುಗಳವರು ತಮ್ಮ ಮೇಲಿನ ಗುರುತರವಾದ ಕರ್ತವ್ಯಭಾರವನ್ನು ಶ್ರೇಷ್ಠ ರೀತಿಯಲ್ಲಿ ನಿರ್ವಹಿಸಿ, ತಮ್ಮ ಹಿಂದಿನ ಪ್ರಭುಶ್ರೇಷ್ಠರು ಯಾವ ಸಂಸ್ಥಾನದ ಅಭ್ಯುದಯ ಸಾಧನೆಗಾಗಿ ಅತ್ಯಧಿಕವಾಗಿ ಶ್ರಮಿಸಿ ಕಾರ್ಯಸಿದ್ಧಿ ಹೊಂದಿದರೋ–ಹಿಂದಿನ ಮಹಾಪ್ರಭುಗಳವರುಮಂಡಿಸಿದ್ದ ಸಿಂಹಾಸನಕ್ಕೆ ಬಂದು ವಿರಾಜಿಸುತ್ತಿರುವ ಮತ್ತು ಈಗಿನ ಇಷ್ಟು ಚಿಕ್ಕ ವಯಸ್ಸಿನಲ್ಲೇ ಸಮಸ್ತರಿಗೂ ಪ್ರೀತಿಪಾತ್ರರಾಗಿರುವ ತಮ್ಮಿಂದ ಯಾವ ಸಂಸ್ಥಾನದ ಪ್ರಜೆಗಳು ಮುಂದಿನ ಪ್ರಗತಿಯನ್ನೂ ಅಭ್ಯುದಯ ಸಾಧನೆಯನ್ನೂ ನಿರೀಕ್ಷಿಸುತ್ತಿರುವರೋ — ಆ ನಮ್ಮ ಮೈಸೂರು ಸಂಸ್ಥಾನದ ಶ್ರೇಷ್ಠ ಪ್ರಭುಗಳೆಂಬ ಹೆಸರನ್ನು ಗಳಿಸಿ ಸಫಲ ರೀತಿಯಲ್ಲಿ ರಾಜ್ಯಭಾರ ಮಾಡುವರೆಂದು ನಾವೆಲ್ಲರೂ ಪೂರ್ಣ ಭರವಸೆಯಿಂದಿದ್ದೇವೆ" ಎಂದು ಹೇಳಿದ್ದಾರೆ. ಅವರ ಮಾತುಗಳಲ್ಲಿ ಲೇಶಮಾತ್ರವೂ ಅತಿಶಯೋಕ್ತಿಯಿಲ್ಲ. ೧೯೪೦ನೆಯ ಇಸವಿ ಡಿಸೆಂಬರು ೨೬ನೆಯ ತಾರೀಖಿನ ದಿನ ಶ್ರೀಮನ್ಮಹಾರಾಜರವರು ಬೆಂಗಳೂರಿನಲ್ಲಿ ನಡೆದ "ಸ್ಕೌಟ್ ರ್‍ಯಾಲಿ"ಯ ಪ್ರಾರಂಭೋತ್ಸವನ್ನು ನೆರವೇರಿಸಿದರು. ಆಗ್ಗೆ ಮಹಾಪ್ರಭುಗಳವರು ಬಿಡಾರದ ಬಳಿಗೆ ಹೋಗಿ ಪರಸ್ಥಳಗಳಿಂದ ಬಂದಿದ್ದವರ ಯೋಗಕ್ಷೇಮವನ್ನು ವಿಚಾರಿಸಿದ ಸರಳತೆಯನ್ನು ಕಂಡು ಕೊಂಡಾಡದವರೇ ಇರಲಿಲ್ಲ. ೧೯೪೦ನೆಯ ಇಸವಿ ಡಿಸೆಂಬರು ೨೮ನೆಯ ತಾರೀಖಿನ ದಿನ ಮಹಾಪ್ರಭುಗಳವರು ಮೈಸೂರು ನಗರದಲ್ಲಿ ಅರ್ಥಶಾಸ್ತ್ರಜ್ಞರ ಮತ್ತು ರಾಜ್ಯಶಾಸ್ತ್ರಜ್ಞರ ಅಖಿಲ ಭಾರತೀಯ ಸಮ್ಮೇಳನದ ಪ್ರಾರಂಭೋತ್ಸವವನ್ನು ನೆರವೇರಿಸಿ ಅನುಗ್ರಹಿಸಿದರು. ಆಗ್ಗೆ ಮಹಾಸ್ವಾಮಿಯವರು ದಯಪಾಲಿಸಿದ ಭಾಷಣವನ್ನು ಕಂಡು ಸಭಿಕರೆಲ್ಲರೂ ಬೆರಗಾದರು. ಅರ್ಥಶಾಸ್ತ್ರ ರಾಜ್ಯಶಾಸ್ತ್ರಗಳಲ್ಲಿ ಉದ್ದಾಮ ಪಂಡಿತರೆಂದು ಪ್ರಖ್ಯಾತರಾಗಿರತಕ್ಕ ಮೇಧಾವಿ ಶ್ರೇಷ್ಠರು ಕೂಡ ಆ ಭಾಷಣದ ಪ್ರೌಢಿಮೆಯನ್ನೂ ವಿಚಾರ ಧೋರಣೆಯನ್ನೂ ವಿಮರ್ಶಾ ಕೌಶಲ್ಯವನ್ನೂ ಕಂಡು ವಿಸ್ಮಿತರಾಗಿ ಪರೋಕ್ಷವಾಗಿ ಕೂಡ ಕೊಂಡಾಡಿ ಮದು ಮೈಸೂರು ಸಂಸ್ಥಾನದವರೆಲ್ಲರೂ ಹೆಮ್ಮೆಪಡಬೇಕಾದ ವಿಷಯ.

ಆಳುವ ಮಹಾಸ್ವಾಮಿಯವರು ೧೯೪೧ನೆಯ ಇಸವಿ ಫೆಬ್ರವರಿ ೯ನೆಯ ತಾರೀಖಿನಿಂದ ೧೯ನೆಯ ತಾರೀಖಿನವರೆಗೆ ಶಿವಮೊಗ್ಗ, ಕಡೂರು ಮತ್ತು ಹಾಸನ ಡಿಸ್ಟ್ರಿಕ್ಟುಗಳಿಗೆ ಸಂಚಾರಾರ್ಥವಾಗಿ ದಯಮಾಡಿಸಿ, ತಮ್ಮ ಕೃಪಾವಾತ್ಸಲ್ಯಗಳಿಂದ ಪ್ರಜೆಗಳ ಹೃದಯ ಮಂದಿರವನ್ನೇ ಬೆಳಗಿ,

ಜನೋಪಯುಕ್ತವಾದ ಅಭಿವೃದ್ಧಿಕಾರ್ಯಗಳ ಸಂಬಂಧದಲ್ಲಿ ಅಸ್ತಿಭಾರ ಶಿಲಾಸ್ಥಾಪನಾ ಮಹೋತ್ಸವ ಮುಂತಾದುವುಗಳನ್ನು ನೆರವೇರಿಸಿ ಅನುಗ್ರಹಿಸಿದರು. ಅವರು ದೇಹಶ್ರಮವನ್ನು ಪರಿಗಣಿಸದೆ ನಾನಾ ಪ್ರದೇಶಗಳಲ್ಲಿ ಸಂಚರಿಸಿ ಪ್ರಜೆಗಳಲ್ಲಿ ಅಭಿಮಾನ ತೋರಿಸಿದರು; ಪ್ರಜೆಗಳನ್ನು ಪೀಡಿಸುತ್ತಿದ್ದ ಎರಡು ಭಾರಿ ಹುಲಿಗಳನ್ನು ಕೊಂದು ಉಪಕಾರ ಮಾಡಿದರು; ಮಲೆನಾಡಿನ ಅಭಿವೃದ್ಧಿಗೆ ಸಾಧಕವಾಗುವ ನಾನಾ ಯೋಜನೆಗಳ ವೆಚ್ಚಕ್ಕಾಗಿ ಎರಡು ಲಕ್ಷ ರೂಪಾಯಿಗಳನ್ನು ಕೃಪೆಮಾಡಿ ಸಹಾಯಮಾಡಿದರು; ಅನೇಕ ಸಂಸ್ಥೆಗಳಿಗೆ ಧನಸಹಾಯಮಾಡಿದರು; ಮಕ್ಕಳಿಗೆ ಲಾಡುಗಳನ್ನು ಹಂಚಲು ಹಣವನ್ನು ದಯಪಾಲಿಸಿದರು. ಜೋಗದ ಬಳಿಯಲ್ಲಿ ವಿದ್ಯುಚ್ಛಕ್ತಿಯನ್ನು ಉತ್ಪತ್ತಿಮಾಡಬೇಕೆಂದಿರುವ ಪ್ರದೇಶವನ್ನೂ, ಭದ್ರಾವತಿಯ ಕಾರ್ಖಾನೆಗಳನ್ನೂ, ಬೇಲೂರು ದೇವಸ್ಥಾನ ಮುಂತಾದುವುಗಳನ್ನೂ ಪರಾಂಬರಿಸಿದರು. ಹತ್ತು ಮಂದಿ ಪತ್ರಿಕಾ ಪ್ರತಿನಿಧಿಗಳಿಗೆ ಸಂದರ್ಶನವನ್ನಿತ್ತು ಅವರಲ್ಲಿ ಪ್ರತಿಯೊಬ್ಬರಿಗೂ ಒಂದೊಂದು ಗಡಿಯಾರವನ್ನು ದಯಪಾಲಿಸಿದರು. ಮಹಾಪ್ರಭುಗಳವರು ಪ್ರವಾಸ ಕಾಲದಲ್ಲಿ ದಯಪಾಲಿಸಿದ ಭಾಷಣಗಳು ಅವರ ಉಜ್ಜ್ವಲ ದೇಶಾಭಿಮಾನಕ್ಕೂ, ಪ್ರಜಾವಾತ್ಸಲ್ಯಕ್ಕೂ, ದೂರದೃಷ್ಟಿಗೂ, ಉತ್ಸಾಹಶ್ರದ್ಧೆಗಳಿಗೂ ಮತ್ತು ಉದಾತ್ತಧ್ಯೇಯಗಳಿಗೂ, ರನ್ನಗನ್ನಡಿಗಳಂತಿವೆ.

ಆದರ್ಶಪ್ರಭುಗಳವರೂ, ಯದುವಂಶ ಪ್ರದೀಪರೂ, ಸಂಗೀತ ಸಾಹಿತ್ಯ ಕಲಾ ಲೋಲರೂ, ರಾಜರ್ಷಿಗಳವರೂ ಆಗಿದ್ದು ಹಿರಿಯ ಜೀವನವನ್ನು ನಡೆಯಿಸಿದ ತಮ್ಮ ದೊಡ್ಡಪ್ಪನವರಾದ ಶ್ರೀಮನ್ನಾಲ್ವಡಿ ಶ್ರೀ ಕೃಷ್ಣರಾಜೇಂದ್ರ ಒಡೆಯರವರ ಮೇಲ್ಪಂಕ್ತಿಯನ್ನನುಸರಿಸಿ ರಾಜ್ಯಭಾರಮಾಡಿ, ನಮ್ಮ ನೂತನಪ್ರಭುಗಳವರಾದ ಶ್ರೀಮನ್ಮಹಾರಾಜ ಶ್ರೀ ಜಯ ಚಾಮರಾಜೇಂದ್ರ ಒಡೆಯರ್ ಬಹದ್ದೂರರವರೂ ಅವರಂತೆಯೇ ಪ್ರಜೆಗಳನ್ನು ಮಕ್ಕಳಂತೆ ಕಾಪಾಡಲಿ! ಮಹಾಪ್ರಭುಗಳವರೂ ಸಹ, ಆಳಿದ ಮಹಾಸ್ವಾಮಿಯವರಂತೆಯೇ ಮೈಸೂರು ಸಂಸ್ಥಾನದವರ ಹೆಮ್ಮೆಯಾಗಿ, ಕನ್ನಡಿಗರ ಕಣ್ಮಣಿಯಾಗಿ, ಭಾರತೀಯರ ಸಂಸ್ಕೃತಿ ಭಂಡಾರವಾಗಿ, ಪ್ರಪಂಚದ ಬೆಳಕಾಗಿ, ಚಿರಕಾಲ ರಾಜ್ಯಭಾರಮಾಡುವಂತೆಯೂ ಮಾದರಿ ಸಂಸ್ಥಾನವೆನಿಸಿರುವ ಮೈಸೂರು ಸಂಸ್ಥಾನದ ಕೀರ್ತಿಯು ದಿನದಿನವೂ ಹೆಚ್ಚುವಂತೆಯೂ ಶ್ರೀ ಚಾಮುಂಡೇಶ್ವರೀ ದೇವಿಯವರು ಅನುಗ್ರಹಿಸಲಿ!



# ಶುದ್ಧಾಶುದ್ಧ ಪತ್ರಿಕೆ



| ಪುಟ | ಪಙ್ಕ್ತಿ | ಅಶುದ್ಧ | ಶುದ್ಧ |
|---|---|---|---|
| xiii | ೩೨ | ಆಪಾರಾನುಗ್ರಹಗಳಿಂದ | ಆದರಾನುಗ್ರಹಗಳಿಂದ |
| ೨೬ | ೨೩ | ರಂಗಾಚಾರ್ಯರೆಂಬವರೊಬ್ಬರು | ಹಟ್ಟಿ ರಂಗ ಐಯಂಗಾರ್ಯರವರು |
| ೩೪ | ೨೭ | ಹಟ್ಟಿ ಕೃಷ್ಣ ಐಯಂಗಾರ್ಯರವರು ಭೂಗೋಳವನ್ನೂ | ಹಟ್ಟಿ ರಂಗ ಐಯಂಗಾರ್ಯರವರು ಚರಿತ್ರೆ ಭೂಗೋಳಗಳನ್ನೂ |
| ೧೧೩ | ೧೦ | ಆರ ಘಂಟೆಗೆ | ಆರು ಘಂಟೆಗೆ |
| ೧೪೩ | ೩ | ಹೇಗಿದಿತೆಂಬುದನ್ನು | ಹೇಗಿದ್ದಿತೆಂಬುದನ್ನು |
| ೧೫೩ | ೬ | ೧೮೧೭ | ೧೮೧೨ |
| ೧೬೧ | ೧೪ | ಮುಂಮುಡಿ | ಮುಂಮ್ಮುಡಿ |
| ೧೮೯ | ೬ | ಶ್ಲಾಘ್ಯತರಾದ | ಶ್ಲಾಘ್ಯತರವಾದ |
| ೨೫೮ | ೧೪ | ವೂರ್ವ ದೇಶಗಳ | ಪೂರ್ವ ದೇಶಗಳ |
| ೨೬೦ | ೨೨ | ಸಾರ್ವಭೌಮ ಸರ್ಕಾರದವರು | “ಸಾರ್ವಭೌಮ ಸರ್ಕಾರದವರು |
| ೨೮೪ | ೨೩ | ೧೩ | ೨೦ |
| ೩೧೭ | ೧೦ | ಇಲ್ಮಾಯಿಲ್‌ರವರೂ | ಇಸ್ಮಾಯಿಲ್‌ರವರೂ |
| ೩೩೫ | ೧೮ | ಇಲ್ಮಾಯಿಲ್‌ರವರು | ಇಸ್ಮಾಯಿಲ್‌ರವರು |
| ೩೪೧ | ೬ | ಕೃತಃ | ಕುತಃ |
| ೩೬೪ | ೧೮ | ವಿನೋದವಾಡಲ | ವಿನೋದವಾಡಲು |
| ೩೯೪ | ೧೯ | ಸಂಗೀತವೇ ಇಲ್ಲ | ಸಂಗೀತವೇ ಅಲ್ಲ |
| ೩೯೫ | ೨೭ | ಅವು ಹೃದಯಂಗಮವಾಗಿ ಗೋಚರವಾದಾವೆಂದು | ಅದು ಹೃದಯಂಗಮವಾಗಿ ಗೋಚರವಾದೀತೆಂದು |
| ೪೨೫ | ೨೬ | ಉಚ್ಚ್ಯರಣೆಯನ್ನೂ | ಉಚ್ಚಾರಣೆಯನ್ನೂ |